# RIG-VEDA SAMHITA

# ಋಗ್ವೇದಸಂಹಿತಾ

ಭಾಗ—೨

ಪ್ರಥಮಾಷ್ಟಕದಲ್ಲಿ ೨ನೇ ಅಧ್ಯಾಯವು

ಅನುವಾದಕ :

ಆಸ್ಥಾನ ಮಹಾವಿದ್ವಾನ್

ಹೆಚ್. ಪಿ. ವೆಂಕಟರಾವ್.

ಶ್ರೀ ಶಾರದಾ ಪ್ರೆಸ್.

ಮೈಸೂರು.



# ಋಗ್ವೇದಸಂಹಿತಾ

ಭಾಗ—೩

ಪ್ರಥಮಾಷ್ಟಕದಲ್ಲಿ ಎರಡನೆಯ ಅಧ್ಯಾಯವು

**ಪ್ರಥಮ ಮಂಡಲದ ಸೂಕ್ತಗಳು ೨೦-೩೨**

**Karnatak Sahitya Mandira.**
**Market, DHARWAR.**
**(Mysore State)**

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೩

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೩

## ಪ್ರಥಮಾಷ್ಟಕದಲ್ಲಿ ಎರಡನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು ೨೦–೩೨

*Translated with Exhaustive Critical Notes*
*by*

**Asthana Mahavidwan**
**H. P. VENKATA RAO,**
*Editor.*

***Printed at***
SREE SHARADA PRESS,
MYSORE.
1949

Published by the gracious permission of

# His Highness
# Sri Jayachamarajendra Wadiyar Bahadur

G.C.B., G.C.S.I., Maharaja of Mysore



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

---

Translator & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

---

**ಸಹಾಯಕ ವಿದ್ವನ್ಮಂಡಲಿ**

1. **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ ಲಕ್ಷ್ಮಣಾಚಾರ್ಯರು,** ವ್ಯಾಕರಣ ವಿದ್ವಾನ್.
2. **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕಭಾಷಾಪಂಡಿತರು.
3. **ಬ್ರ॥ ಶ್ರೀ॥ N. ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿ ರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು.
6. **ಬ್ರ॥ ಶ್ರೀ॥ G. N. ಚಕ್ರವರ್ತಿ, M.A.,**
   Professor of Sanskrit, St. Philomina's College, Mysore.
7. **ಬ್ರ॥ ಶ್ರೀ॥ M. S· ವೆಂಕಟರಮಣಾಚಾರ್, M.A., B.T.,** ಸಾಹಿತ್ಯವಿದ್ವಾನ್.
8. **ಬ್ರ॥ ಶ್ರೀ॥ S. ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀಭಂಡಾರ.
9. **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್,
   Govt. Oriental Research Institute, Mysore.
10. **ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು.
    Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಪೀಠಿಕೆ

ಸಾಯಣಭಾಷ್ಯ, ಮತ್ತು ಕರ್ಣಾಟಕಭಾಷಾನುವಾದಸಹಿತವಾದ ಈ ಋಗ್ವೇದದ ಎರಡನೆಯ ಭಾಗದ ಪೀಠಿಕೆಯಲ್ಲಿ—ಮೂರನೇ ಭಾಗದಿಂದ ಮುದ್ರಣಕಾರ್ಯವು ಬೇಗಬೇಗ ನಡೆಯುವುದೆಂದು ನಾವು ಹೇಳಿದಂತೆ ಈಗ ಮೂರು ಮತ್ತು ನಾಲ್ಕನೆಯ ಭಾಗಗಳ ಮುದ್ರಣಕಾರ್ಯವು ಅತ್ಯಲ್ಪಕಾಲದಲ್ಲಿಯೇ ಎಂದರೆ ಸುಮಾರು ಎರಡು ತಿಂಗಳ ಅವಧಿಯಲ್ಲಿಯೇ ಮುಗಿದು ವಾಚಕರ ಹಸ್ತಗತವಾಗಿರುವುದು ಸಂತೋಷದ ಸಂಗತಿಯಾಗಿದೆ. ಈಗ ಮುದ್ರಣ ಕಾರ್ಯವು ಎರಡು ಮೂರು ಪ್ರೆಸ್ಸುಗಳಲ್ಲಿ ಏಕಕಾಲದಲ್ಲಿ ಎಡಬಿಡದೆ ಸಾಗುತ್ತಿರುವುದರಿಂದ ಇನ್ನು ಮುಂದೆಯೂ ಈಗಿನಂತೆ ಎಂದರೆ ತಿಂಗಳಿಗೆ ಒಂದು ಭಾಗದಂತೆ ಮುದ್ರಿತವಾಗುವುದೆಂಬ ಭರವಸೆಯು ನಮಗಿದೆ.

ಗ್ರಂಥದ ವಿಷಯ ನಿರೂಪಣೆಯ ವಿಷಯವಾಗಿ ಹಿಂದಿನ ಭಾಗಗಳಲ್ಲಿ ಅನುಸರಿಸುತ್ತಿದ್ದ ಕ್ರಮವನ್ನೇ ಈ ಭಾಗದಲ್ಲಿಯೂ ಅನುಸರಿಸಲಾಗಿದೆ. ಸಮಯೋಚಿತವಾದ ಉಪಾಖ್ಯಾನಗಳನ್ನು ಅಲ್ಲಲ್ಲಿ ಸೇರಿಸಲಾಗಿದೆ. ಈ ಉಪಾ ಖ್ಯಾನಗಳಲ್ಲಿ ಶುನಶ್ಶೇಪೋಪಾಖ್ಯಾನವು ಬಹುಮುಖ್ಯವಾದುದು. ರಾಜಮಹಾರಾಜರ ಪಟ್ಟಾಭಿಷೇಕಕಾಲದಲ್ಲಿ ಈ ಉಪಾ ಖ್ಯಾನದ ವಿನಿಯೋಗವಿರುವುದಲ್ಲದೆ, ಪುತ್ರಸಂತಾನವನ್ನಪೇಕ್ಷಿಸುವ ಪ್ರತಿಯೊಬ್ಬರೂ ಈ ಉಪಾಖ್ಯಾನದ ಶ್ರವಣ ಪಠನಾದಿಗಳನ್ನು ವಿಧ್ಯುಕ್ತವಾಗಿ ಆಚರಿಸಿದಲ್ಲಿ ಅವರ ಇಷ್ಟಾರ್ಥವು ನಿಶ್ಚಯವಾಗಿ ನೆರವೇರುವುದೆಂದು ಶ್ರುತಿಪ್ರಸಿದ್ಧ ವಾಗಿರುವುದಲ್ಲದೆ, ಈಗಲೂ ಸಹ ಪುತ್ರಸಂತಾನಪ್ರಾಪ್ತಿಗಾಗಿ ಆಶೀರ್ವಾದಮಾಡುವ ಸಂದರ್ಭದಲ್ಲಿ ಐತರೇಯ ಬ್ರಾಹ್ಮಣದಲ್ಲಿರುವ ಈ ಉಪಾಖ್ಯಾನದ ಅಂತ್ಯವಾಕ್ಯವಾದ—**ಸಹಸ್ರಮಾಖ್ಯಾತ್ರೇ ದದ್ಯಾಚ್ಛತಂ ಪ್ರತಿಗರಿತ್ರ ಏತೇ ಚೈವಾಸನೇ ಶ್ವೇತಶ್ಚಾಶ್ವತರೀರಥೋ ಹೋತುಃ ಪುತ್ರಕಾಮಾ ಹಾಪ್ಯಾಖ್ಯಾಪಯೇರಲ್ಲಭಂತೇ ಹ ಪುತ್ರಾಲ್ಲ-ಭಂತೇ ಹ ಪುತ್ರಾನ್**—ಎಂಬ ವಾಕ್ಯವನ್ನು ಆಶೀರ್ವಾದಮಂತ್ರವನ್ನಾಗಿ ಉಪಯೋಗಿಸುವುದು ಈಗಲೂ ರೂಢಿ ಯಲ್ಲಿರುವುದು.

ಈ ಋಗ್ವೇದ ಗ್ರಂಥವಿಭಾಗ ಕ್ರಮದಲ್ಲಿ ಮುದ್ರಣಸೌಕರ್ಯಕ್ಕಾಗಿ ಒಂದೊಂದು ಭಾಗದಲ್ಲಿ ಒಂದೊಂದು ಅಧ್ಯಾಯದಂತೆ ಮುದ್ರಿಸಲಾಗಿರುವುದು. ಇದರಲ್ಲಿರುವ ೬೪ ಅಧ್ಯಾಯಗಳೂ ಗ್ರಂಥಪರಿಮಾಣದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಸಮನಾಗಿರುವುದರಿಂದ ಪ್ರತಿಯೊಂದು ಭಾಗವೂ ಸುಮಾರು 500 ಅಥವಾ 600 ಪುಟಗಳನ್ನೊಳ ಗೊಂಡಿರುವುದು.

ಋಗ್ವೇದದಲ್ಲಿ ಪ್ರತಿಪಾದಿತರಾದ ದೇವತೆಗಳ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಹೇಳುವುದು ಅವಶ್ಯಕ ವಾಗಿದೆ. ಋಗ್ವೇದದಲ್ಲಿ ಇಂದ್ರ, ಅಗ್ನಿ, ಅಶ್ವಿನೀದೇವತೆಗಳು, ಉಷಸ್ಸು, ವಿಶ್ವೇದೇವತೆಗಳು, ಮಿತ್ರ, ವರುಣ, ತ್ವಷ್ಟಾ, ಪೂಷ ಭಗ, ಅರ್ಯಮಾ, ಆಪಃ, ವಿಷ್ಣು, ರುದ್ರ, ಮರುದ್ದೇವತೆಗಳು, ಸವಿತೃ, ವಸುರುದ್ರಾದಿತ್ಯರು ಮುಂತಾದ ಅನೇಕ ದೇವತೆಗಳನ್ನು ಸ್ತುತಿಸಿದ್ದರೂ ಇಂದ್ರ ಮತ್ತು ಅಗ್ನಿದೇವತಾಕವಾದ ಸೂಕ್ತಗಳೇ ಹೆಚ್ಚಾಗಿರುವುದಲ್ಲದೆ ಇಂದ್ರಾಗ್ನಿ ಗಳಿಗೇ ಪ್ರಾಧಾನ್ಯತೆಯು ಹೆಚ್ಚಾಗಿರುವುದು. ಪುರಾಣಾದಿಗಳಲ್ಲಿ ಉಕ್ತನಾಗಿರುವ ಶಿವ, ಮಹಾದೇವ, ದುರ್ಗಾ, ಕಾಳಿ, ರಾಮ, ಕೃಷ್ಣ ಮುಂತಾದ ದೇವರುಗಳ ಹೆಸರುಗಳು ಸಹ ಎಲ್ಲಿಯೂ ಉಕ್ತವಾಗಿಲ್ಲ. ಶಿವ ರುದ್ರ ಎಂಬ ಎರಡು ಶಬ್ದ ಗಳೂ ಒಂದೇ ದೇವತೆಯನ್ನು ನಿರ್ದೇಶಿಸುವವು ಎಂದು ಹೇಳಿರುವುದಾದರೂ ರುದ್ರನೆಂಬ ದೇವತೆಯು ಮಾತ್ರ ಪ್ರತಿ

ಪಾದಿತವಾಗಿರುವುದರಿಂದ ಆ ದೇವತೆಯನ್ನು ಸೂಚಿಸುವ, ಶಿವ, ಶಂಕರ, ಮಹಾದೇವ ಮೊದಲಾದ ಶಬ್ದಗಳು ಪುರಾಣಾದಿಗಳಲ್ಲಿ ಮಾತ್ರ ನಿರ್ದಿಷ್ಟವಾಗಿ ಆ ಹೆಸರುಗಳು ರೂಢಿಗೆ ಬರಲು ಅನೇಕ ಉಪಾಖ್ಯಾನಗಳನ್ನು, ಇತಿಹಾಸಗಳನ್ನು ಅವುಗಳಲ್ಲಿ ವಿವರಿಸಲಾಗಿದೆ. ಅದರಂತೆ ವಿಷ್ಣುವೂ ಸಹ ಕೇವಲ ೫-೬ ಸೂಕ್ತಗಳಲ್ಲಿ ಪ್ರತಿಪಾದಿತನಾಗಿರುವುದಲ್ಲದೆ ವಿಷ್ಣುವನ್ನು ಸೂಚಿಸುವ, ನಾರಾಯಣ, ಹರಿ, ಮಾಧವ ಮೊದಲಾದ ಶಬ್ದಗಳೂ ವೇದದಲ್ಲಿಲ್ಲದೆ ಪುರಾಣಾದಿಗಳ ಮಾತ್ರ ಉಕ್ತವಾಗಿರುವುದು.

ದೇವತೆಗಳಲ್ಲಿ ಪ್ರತಿಯೊಬ್ಬರನ್ನೂ ಮುಖ್ಯರೆಂದೇ ಪರಿಗಣಿಸಿರುವುದಲ್ಲದೆ ಆಯಾ ದೇವತೆಯನ್ನು ಸ್ತೋತ್ರ ಮಾಡುವಾಗ ಅವರ ಗುಣಗಳು ಅತ್ಯುತ್ಕೃಷ್ಟವಾದವೆಂದು ವರ್ಣಿಸಿ ಅವರು ನಮಗೆ ಅವಶ್ಯಕವಾಗಿ ಬೇಕಾದ, ಅನ್ನ, ಧನ, ಗೃಹ ಮೊದಲಾದ ವಸ್ತುಗಳನ್ನು ಕೊಡಬೇಕೆಂದು ಪ್ರಾರ್ಥಿಸಲಾಗಿರುವುದು. ಆದರೂ ಮರುದ್ದೇವತೆಗಳು ರುದ್ರಪುತ್ರರೆಂದೂ, ಋಭುಗಳು ಮನುಷ್ಯರಾಗಿದ್ದು ತಮ್ಮ ಸತ್ಕರ್ಮಾನುಷ್ಠಾನದಿಂದ ದೇವತ್ವವನ್ನು ಪಡೆದರೆಂದೂ, ವರ್ಣನೆಗಳಿರುವುದರಿಂದ ದೇವತೆಗಳ ವಿಷಯದಲ್ಲಿ ಸ್ವಲ್ಪಮಟ್ಟಿಗೆ ತಾರತಮ್ಯವಿದ್ದಿತೆಂದು ಊಹಿಸಲು ಅವಕಾಶವಿದೆ. ಇದಲ್ಲದೆ **ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯಃ** (ಋ, ಸಂ. ೧-೨೭-೧೩) ಎಂಬ ಮಂತ್ರದಲ್ಲಿ ದೇವತೆಗಳಲ್ಲಿ ದೊಡ್ಡವರೆಂದೂ ಚಿಕ್ಕವರೆಂದೂ ಭೇದಭಾವವನ್ನು ಅಂಗೀಕರಿಸಿರುವುದು ವ್ಯಕ್ತವಾಗಿದೆ. ದೇವತೆಗಳಿಗೆ ಆಯಾ ಹೆಸರು ಬರಲು ಕಾರಣವೇನೆಂಬುದನ್ನು—ಎಂದರೆ ರುದ್ರನಿಗೆ ರುದ್ರನೆಂಬ ಹೆಸರು ಬರಲೂ, ವಿಷ್ಣುವಿಗೆ ಆ ಹೆಸರು ಬರಲೂ, ಅಗ್ನಿ, ಇಂದ್ರ, ಆದಿತ್ಯ ಮೊದಲಾದ ದೇವತೆಗಳಿಗೆ ಆಯಾ ಹೆಸರು ಬರಲು ಕಾರಣಗಳನ್ನು ಬ್ರಾಹ್ಮಣದಲ್ಲಿಯೂ, ನಿರುಕ್ತದಲ್ಲಿಯೂ ವಿವರಿಸಲ್ಪಟ್ಟಿರುವುದು. ಈ ವಿಧವಾದ ಅರ್ಥವಿವರಣೆಯು ಆಯಾ ದೇವತೆಗಳ ಸ್ವರೂಪವನ್ನೂ ಪ್ರಾಧಾನ್ಯತೆಯನ್ನೂ ಚೆನ್ನಾಗಿ ತಿಳಿಸುವುದು. ದೇವತಾಸಂಬಂಧವಾದ ವಿವರಣೆಯನ್ನು ಮುಂದಿನ ಭಾಗಗಳಲ್ಲಿ ವಿಸ್ತಾರವಾಗಿ ವಿವರಿಸಲಾಗುವುದು.

ವೇದವು ಸಮಸ್ತ ಶಾಸ್ತ್ರಗಳಿಗೂ, ಕಲೆಗಳಿಗೂ ಮೂಲಭೂತವಾಗಿರುವುದೆಂಬುದನ್ನು ಮತ್ತೊಮ್ಮೆ ಹೇಳಬಯಸುವೆವು. ಶಿಲ್ಪ, ವ್ಯಾಕರಣ, ಸಂಗೀತ, ಸಾಹಿತ್ಯ, ವೇದಾಂತ, ನಾಟ್ಯ ಮೊದಲಾದ ಸಮಸ್ತ ಶಾಸ್ತ್ರಗಳಿಗೂ ವೇದವೇ ತಳಹದಿಯಾಗಿರುವುದು. ಅದರಲ್ಲಿಯೂ ಶಿಲ್ಪಶಾಸ್ತ್ರದ ಸ್ವರೂಪವನ್ನು ಋಗ್ವೇದದಲ್ಲಿ ಅನೇಕಕಡೆ ಹೇಳಿರುವುದರಿಂದ ಇತರ ಎಲ್ಲಾ ಶಾಸ್ತ್ರಗಳಿಗಿಂತಲೂ ಶಿಲ್ಪಶಾಸ್ತ್ರವು ಅತಿಪ್ರಾಚೀನವೂ ಶ್ರೇಷ್ಠವೂ ಆಗಿರುವುದೆಂಬುದನ್ನು ಋಗ್ವೇದದ ಅನೇಕ ಋಕ್ಕುಗಳು ಸಮರ್ಥಿಸುವವು. ಏಕೆಂದರೆ ಯಜ್ಞಯಾಗಾದಿಗಳನ್ನು ಮಾಡುವುದಕ್ಕೆ ಅತ್ಯವಶ್ಯಕವಾದ ಯಜ್ಞವೇದಿಯ ರಚನಾಕ್ರಮ, ಸ್ಫ್ಯಃ, ಕಪಾಲ, ಶೂರ್ಪ, ಕೃಷ್ಣಾಜಿನಂ, ಶಮ್ಯಾ, ಊಲೂಖಲ, ಮುಸಲ, ದೃಷತ್, ಉಪಲಾ ಎಂಬ ದಶಯಜ್ಞಾಯುಧಗಳು, ಸ್ರುಕ್, ಸ್ರುವ, ಚಮಸ ಮೊದಲಾದ ಯಜ್ಞಸಾಧನಗಳು, ಯುದ್ಧೋಪಕರಣಗಳಾದ ರಥ, ವಜ್ರಾಯುಧ, ಕವಚ, ಬಾಣ ಬತ್ತಳಿಕೆ, ಗೃಹೋಪಕರಣಗಳು ಮೊದಲಾದ ಅನೇಕ ವಸ್ತುಗಳ ಸ್ವರೂಪವನ್ನೂ ಅವುಗಳ ನಿರ್ಮಾಣ, ಉಪಯೋಗ ಮೊದಲಾದವನ್ನು ವಿವರಿಸುವ ಋಕ್ಕುಗಳು ಬೇಕಾದಷ್ಟಿರುವುದರಿಂದ ಈ ಶಿಲ್ಪಶಾಸ್ತ್ರದ ಪ್ರಾಚೀನತೆಯು ಇದರಿಂದಲೇ ವ್ಯಕ್ತವಾಗುವುದು. ತ್ವಷ್ಟೃಪ್ರಜಾಪತಿಯ ಶಿಷ್ಯರಾದ ಋಭುಗಳು ಯಜ್ಞಾಯುಧಗಳನ್ನು ನಿರ್ಮಿಸಿ ಅದರಿಂದಲೇ ದೇವತ್ವವನ್ನು ಪಡೆದರೆಂದು ಪ್ರಥಮಮಂಡಲದ ಇಪ್ಪತ್ತನೆಯ ಸೂಕ್ತದಲ್ಲಿ ಹೇಳಿದೆ. ಮನುಷ್ಯರಾದವರು ದೇವತ್ವವನ್ನು ಪಡೆಯಬೇಕಾದರೆ ಸಾಧಾರಣ ಕರ್ಮಗಳಿಂದ ಸಾಧ್ಯವಿಲ್ಲ. ಆದುದರಿಂದ ಶಿಲ್ಪಕರ್ಮಗಳಿಂದ ಈ ಋಭುಗಳು ದೇವತ್ವವನ್ನು ಪಡೆದು ದೇವತೆಗಳಂತೆ ಪೂಜಾರ್ಹರಾಗಬೇಕಾದರೆ ಈ ಶಾಸ್ತ್ರದ ಮಹತ್ವವೆಷ್ಟೆಂಬುದು ಯಾರಿಗೂ ಗೋಚರವಾಗದಿರಲಾರದು. ತ್ವಷ್ಟೃವು ಇಂದ್ರನಿಗೆ

ವಜ್ರಾಯುಧವನ್ನು ಮಾಡಿಕೊಟ್ಟ ವಿಷಯವು **ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ** (ಋ. ಸಂ. ೧-೩೨-೨) ಮತ್ತು **ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ** (ಋ. ಸಂ. ೧೦-೪೮-೩) ಎಂಬ ಋಕ್ಕುಗಳಲ್ಲಿಯೂ ಋಭುಗಳು ಅಶ್ವಿನೀದೇವತೆಗಳಿಗೆ ರಥವನ್ನು ನಿರ್ಮಿಸಿಕೊಟ್ಟ ವಿಷಯವು **ತಕ್ಷನ್ನಾಸತ್ಯಾಭ್ಯಾಂ ಪರಿಜ್ಮಾನಂ ಸುಖಂ ರಥಂ** (ಋ. ಸಂ. ೧-೨೦-೩) ಎಂಬ ಋಕ್ಕಿನಲ್ಲಿಯೂ ವರ್ಣಿತವಾಗಿರುವುದು. **ಯುವಾನಾ ಪಿತರಾ ಪುನಃ ಸತ್ಯಮಂತ್ರಾ ಋಜೂಯವಃ** (ಋ. ಸಂ. ೧-೨೦-೪) ಎಂದರೆ ಈ ಋಭುಗಳು ತಮ್ಮ ಶಿಲ್ಪಕರ್ಮಾನುಷ್ಠಾನದಿಂದ ತಮ್ಮ ವೃದ್ಧರಾದ ತಂದೆತಾಯಿಗಳನ್ನು ಪೂರ್ವದಂತೆ ಯುವಕರನ್ನಾಗಿ ಮಾಡಿದರು ಎಂದು ಹೇಳಿರುವುದರಿಂದ ಈ ಶಾಸ್ತ್ರದ ಶ್ರೇಷ್ಠತೆಯು ಎಂತಹ ಕಾರ್ಯವನ್ನಾದರೂ ಸಾಧಿಸಬಲ್ಲದೆಂಬುದನ್ನು ಸ್ಪಷ್ಟಪಡಿಸುವುದು. ಇದರಂತೆ ಈ ಶಾಸ್ತ್ರದ ಮಹತ್ವವನ್ನು ತಿಳಿಸುವ ಋಕ್ಕುಗಳು ಋಗ್ವೇದದಲ್ಲಿ ಬೇಕಾದಷ್ಟಿವೆ.

ಸಂಗೀತಶಾಸ್ತ್ರವೂ ಸಹ ಬಹುಪುರಾತನವಾದುದೆಂದೂ ಈ ಶಾಸ್ತ್ರಕ್ಕೆ ಸಾಮವೇದವೇ ತಳಹದಿಯೆಂದೂ ಬಲ್ಲವರು ಹೇಳುವರು. ಋಗ್ವೇದದಲ್ಲಿಯೇ ಗಾನಮಾಡುವ ವಿಷಯವು ಅನೇಕ ಕಡೆ ಪ್ರಸ್ತಾಪಿಸಲ್ಪಟ್ಟಿರುವುದು. **ಗಾಯಂತಿ ತ್ವಾ ಗಾಯತ್ರಿಣಃ** (ಋ ಸಂ. ೧-೧೦-೧) **ದೇವತ್ತಂ ಬ್ರಹ್ಮ ಗಾಯತ** (ಋ. ಸಂ. ೧-೩೭-೪) ಮೊದಲಾದ ಋಕ್ಕುಗಳು ಗಾನವಿಷಯವನ್ನು ಪ್ರಸ್ತಾಪಿಸುವವು. ಸಾಮವೇದವೂ ಒಂದು ವಿಧವಾದ ಗಾನವೇ ಆಗಿರುವುದರಿಂದಲೂ—**ಅಯಜ್ಞೋ ವಾ ಏಷ ಯೋಽಸಾಮ**—ಎಂದರೆ ಸಾಮಗಾನವಿಲ್ಲದ ಯಜ್ಞವು ಯಜ್ಞವೇ ಆಗುವುದಿಲ್ಲ ಎಂದು ಮೊದಲಾದ ಶ್ರುತಿವಾಕ್ಯಗಳೂ ಸಂಗೀತಶಾಸ್ತ್ರದ ಪ್ರಾಚೀನತೆಯನ್ನೂ ಶ್ರೇಷ್ಠತ್ವವನ್ನೂ ಚೆನ್ನಾಗಿ ತಿಳಿಸುವವು.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ, ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು,
ವಿರೋಧಿನಾಮ ಸಂ॥ ಆಶ್ವಯುಜ ಶುದ್ಧ ಪೂರ್ಣಿಮಾ ಗುರುವಾರ
6-10-1949

ಅನುವಾದಕ
**ಹೆಚ್. ಪಿ. ವೆಂಕಟರಾವ್**
ಆಸ್ಥಾನ ಮಹಾವಿದ್ವಾನ್

## ಸಂಕೇತಾಕ್ಷರಗಳ ವಿವರಣೆಯು

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬಧರ್ಮಸೂತ್ರ
ಆಪ. ಪ. ಸೂ.—ಆಪಸ್ತಂಬಪರಿಭಾಷಾಸೂತ್ರ
ಆ ಸೂ. ಅಥವಾ ಆ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಸೂ.—ಜೈಮಿನೀಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ.—ಬ್ರಹ್ಮಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನುಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದಸಂಹಿತಾ ಇತ್ಯಾದಿ.

|| ಶ್ರೀ ||

# ವಿಷಯಾನುಕ್ರಮಣಿಕೆ.

## ಪ್ರಥಮಾಷ್ಟಕ ದ್ವಿತೀಯೋಧ್ಯಾಯ
## ಪ್ರಥಮ ಮಂಡಲದ ಸೂಕ್ತಗಳು ೨೦-೨೨.

ಪುಟಸಂಖ್ಯೆ

**ದ್ವಿತೀಯಾಧ್ಯಾಯದ ವಿಷಯಾನುಕ್ರಮಣಿಕೆ ಸಮಾಪ್ತವು.**

|| ಶ್ರೀ ಮಹಾಗಣಾಧಿಪತಯೇ ನಮಃ ||

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

## ಭಾಗ—೩

## ॥ ಪ್ರಥಮಾಷ್ಟಕೇ ದ್ವಿತೀಯೋಽಧ್ಯಾಯಃ ॥

## ಮೊದಲನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು

## ಇಪ್ಪತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅತ್ರ ಪ್ರಥಮಾಷ್ಟಕೇ ದ್ವಿತೀಯೋಽಧ್ಯಾಯ ಆರಭ್ಯತೇ । ತತ್ರಾಯಂ ದೇವಾಯೇತ್ಯಷ್ಟರ್ಚಂ ಸೂಕ್ತಂ । ತಸ್ಯ ಋಷಿಚ್ಛಂದಸೀ ಪೂರ್ವವತ್ । ಋಭುದೇವತಾಕತ್ವಮನುಕ್ರಮ್ಯತೇ । ಅಥಮಷ್ಟಾವಾರ್ಭವಮಿತಿ ॥ ವಿನಿಯೋಗಸ್ತು ಸೂಕ್ತಸ್ಯ ಲೈಂಗಿಕಃ ಸ್ಮಾರ್ತೋ ವಾ ದ್ರಷ್ಟವ್ಯಃ ॥ ವ್ಯೂಢಸ್ಯ ಪ್ರಥಮೇ ಛಂದೋಮೇ ವೈಶ್ವದೇವಶಸ್ತ್ರೇಽಯಂ ದೇವಾಯ ಜನ್ಮನ ಇತ್ಯಾರ್ಭವಸ್ತೃಚಃ । ಅಥ ಛಂದೋಮಾ

**ಇತಿ ಖಂಡೇ ಸೂತ್ರಿತಂ । ಅಭಿ ತ್ವಾ ದೇವ ಸವಿತಃ ಪ್ರೇತಾಂ ಯಜ್ಞಸ್ಯ ಶಂಭುವಾಯಂ ದೇವಾಯ ಜನ್ಮನ ಇತಿ ತೃಚಃ ॥ ಆ. ೮-೯ । ಇತಿ ॥**

ಅನುವಾದವು—ಪ್ರಥಮಾಷ್ಟಕದ ದ್ವಿತೀಯಾಧ್ಯಾಯದ ಮೊದಲನೆಯ ಸೂಕ್ತದಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಋಷಿಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಈ ಸೂಕ್ತಕ್ಕೆ ಋಭುಗಳೇ ದೇವತೆಗಳೆಂದು **ಅಥಮುಷ್ಟಾವಾರ್ಭವಮಿತಿ** ಎಂದು ಅನುಕ್ರಮಣಿಕೆಯಲ್ಲಿ ಹೇಳಿದೆ. ವಿನಿಯೋಗವು ಶ್ರೌತಸ್ಮಾರ್ತಗಳೆರಡರಲ್ಲಿಯೂ ಇರುವುದು. ವ್ಯೂಢ ಎಂಬ ಯಾಗದಲ್ಲಿ ಪ್ರಥಮಛಂದೋಮಾ ಎಂಬ ಮಂತ್ರಪಠನಕಾಲದಲ್ಲಿ ವೈಶ್ವದೇವಶಸ್ತ್ರಮಂತ್ರ ಪಠನಕ್ಕಾಗಿ **ಅಯಂ ದೇವಾಯ ಜನ್ಮನೇ** ಎಂಬ ಋಭುಸಂಬಂಧವಾದ ತೃಚವನ್ನು ಪಠಿಸುವರು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದಲ್ಲಿ (ಆ. ೮-೯.) **ಅಥ ಛಂದೋಮಾ** ಎಂಬ ಖಂಡದಲ್ಲಿ—**ಅಭಿತ್ವಾ ದೇವ ಸವಿತಃ** (ಋ. ಸಂ. ೧-೨೪-೩) ಎಂದು ಮೊದಲಾಗುವ ಸವಿತೃದೇವತಾಕವಾದ ತೃಚವನ್ನೂ (ಮೂರು ಋಕ್ಕುಗಳನ್ನೂ) **ಪ್ರೇತಾಂ ಯಜ್ಞಸ್ಯ ಶಂಭುವಾ** (ಋ. ಸಂ. ೨-೪೧-೧೯) ಎಂದು ಮೊದಲಾಗುವ ದ್ಯಾವಾಪೃಥಿವೀ ದೇವತಾಕವಾದ ತೃಚವನ್ನೂ, **ಅಯಂ ದೇವಾಯ ಜನ್ಮನೇ** (ಋ. ಸಂ. ೧-೨೦-೧) ಎಂದು ಮೊದಲಾಗುವ ಋಭುದೇವತಾಕವಾದ ತೃಚವನ್ನೂ ಛಂದೋಮಾ ಮಂತ್ರಗಳನ್ನಾಗಿ ಪಠಿಸಬೇಕೆಂದು ಹೇಳಿರುವುದು.

## ಸೂಕ್ತ—೨೦

॥ ಮಂಡಲ—೧ ॥ ಅನುವಾಕ—೫ ॥ ಸೂಕ್ತ—೨೦ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ—೧, ೨ ॥

॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೮** ॥

**ಋಷಿಃ—ಮೇಧಾತಿಥಿಃ ಕಾಣ್ವಃ ।**

ದೇವತಾ—ಋಭವಃ ॥

ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಅಯಂ ದೇವಾಯ ಜನ್ಮನೇ ಸ್ತೋಮೋ ವಿಪ್ರೇಭಿರಾಸಯಾ ।
ಅಕಾರಿ ರತ್ನಧಾತಮಃ ॥ ೧ ॥

|| ಪದಪಾಠಃ ||

ಅಯಂ | ದೇವಾಯ | ಜನ್ಮನೇ | ಸ್ತೋಮಃ | ವಿಪ್ರೇಭಿಃ | ಆಸಯಾ ||

ಅಕಾರಿ | ರತ್ನಽಧಾತಮಃ || ೧ ||

|| ಸಾಯಣಭಾಷ್ಯಂ ||

ಋಭವೋ ಹಿ ಮನುಷ್ಯಾಃ ಸಂತಸ್ತಪಸಾ ದೇವತ್ವಂ ಪ್ರಾಪ್ತಾಃ । ತೇ ಚಾತ್ರ ಸೂಕ್ತೇ ದೇವತಾಃ । ತತ್ಸಂಘೋ ಜಾಯಮಾನವಾಚಿನಾ ಜನ್ಮಶಬ್ದೇನೈಕವಚನಾಂತೇನಾತ್ರ ನಿರ್ದಿಶ್ಯತೇ । ಜನ್ಮನೇ ಜಾಯಮಾನಾಯ ಋಭುಸಂಘರೂಪಾಯ ದೇವಾಯ ತತ್ಪ್ರೀತ್ಯರ್ಥಮಯಂ ಸ್ತೋಮಃ ಸ್ತೋತ್ರವಿಶೇಷೋ ವಿಪ್ರೇಭಿರ್ಮೇಧಾವಿಭಿರೃತ್ವಿಗ್ಭಿರಾಸಯಾ ಸ್ವಕೀಯೇನಾಸ್ಯೇನಾಕಾರಿ । ನಿಷ್ಪಾದಿತಃ । ಕೀದೃಶಃ ಸ್ತೋಮಃ । ರತ್ನಧಾತಮೋಽತಿಶಯೇನ ರಮಣೀಯಮಣಿಮುಕ್ತಾದಿಧನಪ್ರದಃ । ಸ್ತೋತ್ರೇಣ ತುಷ್ಟಾ ಋಭವೋ ಧನಂ ಪ್ರಯಚ್ಛಂತೀತ್ಯರ್ಥಃ || ಆಸಯಾ । ಆಸ್ಯಶಬ್ದಾತ್ತೃತೀಯೈಕವಚನಸ್ಯ ಸುಪಾಂ ಸುಲುಗಿತ್ಯಾದಿನಾ ಯಾಜಾದೇಶಃ । ವ್ಯತ್ಯಯೇನ ಪ್ರಕೃತಿಯಕಾರಸ್ಯ ಲೋಪಃ । ಚಿತ ಇತ್ಯಂತೋದಾತ್ತಃ । ರತ್ನಧಾತಮಃ । ರತ್ನಾನಿ ದಧಾತೀತಿ ರತ್ನಧಾಃ । ಕೃದುತ್ತರಪದಪ್ರಕೃತಿಸ್ವರತ್ವಂ ||

|| ಪ್ರತಿಪದಾರ್ಥ ||

**ಜನ್ಮನೇ**— ಋಭುಗಳೆಂಬ ದೇವತೆಗಳಾಗಿ ಜನ್ಮತಾಳಿರುವ | **ದೇವಾಯ**— ದೇವತೆಗಾಗಿ (ದೇವತೆಗಳ ಸಂಘಕ್ಕಾಗಿ) | **ರತ್ನಧಾತಮಃ**—ರಮಣೀಯವಾದ ರತ್ನಾದಿಧನಗಳನ್ನು ಕೊಡುವ | **ಅಯಂ ಸ್ತೋಮಃ**-- ಈ ಸ್ತೋತ್ರವಿಶೇಷವು | **ವಿಪ್ರೇಭಿಃ**—ಮೇಧಾವಿಗಳಾದ ಎಂದರೆ ಬುದ್ಧಿವಂತರಾದ ಋತ್ವಿಜರಾದಿಯಾದ ಜನರಿಂದ | **ಆಸಯಾ**—(ತಮ್ಮ) ಮುಖದಿಂದ | **ಅಕಾರಿ**- ಮಾಡಲ್ಪಟ್ಟಿರುವುದು.

|| ಭಾವಾರ್ಥ ||

ಋಭುಗಳೆಂಬ ದೇವತೆಗಳು ಹಿಂದೆ ಮನುಷ್ಯರಾಗಿದ್ದು ದೇವತ್ವವನ್ನು ಪಡೆದರು. ಇಂತಹ ದೇವಜನ್ಮವನ್ನು ಪಡೆದ ದೇವತೆಗಳ ಸಮೂಹವನ್ನುದ್ದೇಶಿಸಿ ಬುದ್ಧಿವಂತರಾದ ಋತ್ವಿಜರಾದಿ ಜನರು ಈ ಸ್ತೋತ್ರವನ್ನು ತಮ್ಮ ಮುಖದಿಂದ (ಬಾಯಿಯಿಂದ) ಮಾಡಿರುವರು. ಈ ಉತ್ತಮವಾದ ಸ್ತೋತ್ರವು ಋಭುದೇವತೆಗಳ ಅನುಗ್ರಹದಿಂದ ಸ್ತೋತ್ರಮಾಡುವವರಿಗೆ ರತ್ನಾದಿದ್ರವ್ಯಗಳನ್ನು ಕೊಡುವುದಾಗಿರುವುದು.

## English Translation.

This hymn, the bestower of riches has been addressed by the sages with their own mouths to the race (of Ribhus) having divine birth.

॥ ವಿಶೇಷವಿಷಯಗಳು ॥

ಋಭುಗಳೆಂಬುವರು ಪೂರ್ವದಲ್ಲಿ ಮನುಷ್ಯರಾಗಿದ್ದು ತಮ್ಮ ಉತ್ತಮವಾದ ನಡವಳಿಕೆಗಳಿಂದಲೂ ಸತ್ಕರ್ಮಾನುಷ್ಠಾನದಿಂದಲೂ ದೇವತ್ವವನ್ನು ಪಡೆದರೆಂದು ಋಗ್ವೇದದಲ್ಲಿ ಅನೇಕಕಡೆ ಹೇಳಲ್ಪಟ್ಟಿರುವುದು. ಪೂರ್ವದಲ್ಲಿ ಅಂಗಿರಾಋಷಿಗೆ ಸೀತಿಮಂಜರಿ ಎಂಬ ಓರ್ವ ಪುತ್ರನಿದ್ದನು. ಇವನ ವಂಶದಲ್ಲಿ ಸುಧನ್ವಾ ಎಂಬ ಋಷಿಗೆ ಋಭು, ವಿಭು, ವಾಜ ಎಂಬ ಮೂವರು ಪುತ್ರರಿದ್ದರು. ಇವರು ಸತ್ಕರ್ಮಾನುಷ್ಠಾನ, ದೇವತೆಗಳಿಗೆ ಸಹಾಯಮಾಡುವುದು ಮೊದಲಾದ ಒಳ್ಳೆಯ ಕೆಲಸಗಳಿಂದ ದೇವತೆಗಳ ಜನ್ಮವನ್ನು ಪಡೆದರು ಅಥವಾ ದೇವತೆಗಳಾದರು ಎಂದು ಪ್ರತೀತಿ ಇದೆ. ಈ ಋಭು ಮೊದಲಾದ ಸುಧನ್ವನ ಮೂವರು ಪುತ್ರರಿಗೂ ಋಭುಗಳೆಂದು ಹೇಳುವ ರೂಢಿಯಿದೆ. ಹಿರಿಯವನ ಹೆಸರಿನಿಂದಲೇ ಈ ಮೂವರು ಪುತ್ರರೂ ಕರೆಯಲ್ಪಡುವರು. ಇವರು ತ್ವಷ್ಟೃವಿನ ಶಿಷ್ಯರಾದುದರಿಂದ ಇವರನ್ನು ದೇವಶಿಲ್ಪಿಗಳೆಂದೂ ಹೇಳುವರು. ಇವರು ಇಂದ್ರನೇ ಮೊದಲಾದ ದೇವತೆಗಳಿಗೆ ಬೇಕಾದ ಸಲಕರಣೆಗಳನ್ನು ಎಂದರೆ ಇಂದ್ರನ ರಥವನ್ನೂ ಅಗ್ನಿಯ ಚಮಸಪಾತ್ರೆಯನ್ನೂ ಮಾಡಿಕೊಟ್ಟರೆಂದು ಅಲ್ಲಲ್ಲಿ ಹೇಳಿದೆ. ಈ ಸೂಕ್ತದಲ್ಲಿ ಇವರು ಮಾಡಿದ ಕೆಲವು ಕೆಲಸಗಳ ವಿವರಣೆ ಇರುವುದು ಇವರಿಗೆ ಅದ್ಭುತವಾದ ಶಕ್ತಿಯಿರುವುದೆಂದೂ ಇವರು ಎಂತಹ ಕೆಲಸಗಳನ್ನಾದರೂ ಮಾಡಲು ಸಮರ್ಥರೆಂದೂ ಅಲ್ಲಲ್ಲಿ ವರ್ಣನೆಗಳಿವೆ. ದೇವತೆಗಳಿಗಿರುವ ಶಕ್ತಿಸಾಮರ್ಥ್ಯಗಳೇ ಇವರಿಗೂ ಇರುವುದರಿಂದ ಇವರನ್ನು ದೇವತೆಗಳ ಗುಂಪಿಗೆ ಸೇರಿದವರೆಂದು ಭಾವಿಸಿ ಋಷಿಗಳು ಇವರನ್ನೂ ಇವರು ಮಾಡಿರುವ ಕಾರ್ಯಗಳನ್ನೂ ವಿಧವಿಧವಾಗಿ ವರ್ಣಿಸಿರುವರು. ಇವರು ಸೂರ್ಯಮಂಡಲದಲ್ಲಿ ವಾಸವಾಗಿದ್ದು ಸೂರ್ಯರಶ್ಮಿಗಳ ಮೂಲಕ ಕಾರ್ಯಗಳನ್ನು ಮಾಡುವರೆಂದು ಪ್ರತೀತಿ ಇರುವುದು. ಇವರ ವಿಷಯವಾಗಿ ಹೆಚ್ಚು ವಿವರಗಳನ್ನು ಮುಂದೆ ಕೊಡಲಾಗುವುದು.

**ಆಸಯಾ**— ತೃತೀಯೈಕವಚನಶಬ್ದವು. ಆಸ್ಯ—ಮುಖ, ಎಂಬ ಶಬ್ದದ ರೂಪಾಂತರವು ಮುಖದಿಂದ, ಬಾಯಿಯಿಂದ ಪಠಿಸುವರು ಎಂದರ್ಥವು.

**ರತ್ನಧಾತಮಃ**— ಈ ಶಬ್ದವು ಅಗ್ನಿಮೀಳೇ ಎಂಬ ಋಗ್ವೇದದ ಮೊದಲನೆಯ ಋಕ್ಕಿನಲ್ಲಿಯೇ ಇರುವುದು. **ರತ್ನಾನಿ ದಧಾತಿ (ದದಾತಿ) ಇತಿ ರತ್ನಧಾಃ ಅತಿಶಯೇನ ಧನಪ್ರದಃ**— ರತ್ನ ಮೊದಲಾದ ಧನವನ್ನು ಅತಿಶಯವಾಗಿ ಕೊಡುವ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಆಸಯಾ**—ಆಸ್ಯ ಶಬ್ದದ ಮುಂದೆ ತೃತೀಯಾವಿಭಕ್ತಿ ಏಕವಚನ ಟಾ ಪ್ರತ್ಯಯ. ಅದಕ್ಕೆ **'ಸುಪಾಂ ಸುಲುಕ್'**—(ಪಾ. ಸೂ. ೭-೧-೩೯) ಇತ್ಯಾದಿ ಸೂತ್ರದಿಂದ ಯಾಚ್ ಆದೇಶ. 'ಆಸ್ಯ' ಎಂಬ ಪ್ರಕೃತಿಯ ಯಕಾರಕ್ಕೆ **'ವ್ಯತ್ಯಯೋ ಬಹುಲಮ್'** (ಪಾ. ಸೂ. ೩-೧-೮೫) ಎಂಬುದರಿಂದ ಲೋಪ, 'ಆಸಯಾ' ಎಂದಾಗುವುದು, ಯಾಚ್, ಎಂಬುದು ಚಕಾರೇತ್ಸಂಜ್ಞಕ, ಆದ್ದರಿಂದ **'ಚಿತಃ'** (ಪಾ. ಸೂ. ೧-೧-೬೩) ಎಂಬುದರಿಂದ ಅಂತೋದಾತ್ತ ಸ್ವರ ಬರುವುದು.

**ರತ್ನಧಾತಮಃ**—ರತ್ನಶಬ್ದವು ನಿತ್ಯನಪುಂಸಕಲಿಂಗ, ಆದ್ದರಿಂದ **‘ ನಬ್ವಿಷಯಸ್ಯಾನಿಸಂತಸ್ಯ ’** (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತ. ರತ್ನಾನಿ ದಧಾತಿ, ಎಂದು ವಿಗ್ರಹ. ರತ್ನಶಬ್ದೋಪಪದಕವಾದ ಧಾತುವಿನ ಮುಂದೆ ಕ್ವಿಪ್, ಅಥವಾ ವಿಚ್ ಪ್ರತ್ಯಯ, ಪ್ರತ್ಯಯದ ಸರ್ವವರ್ಣಗಳಿಗೂ ಲೋಪ, ಧಾತುಸ್ವರದಿಂದ ‘ ಧಾ ’ ಎಂಬುದು ಅಂತೋದಾತ್ತ, ಸಮಾಸಾನಂತರ **‘ ಗತಿಕಾರಕೋಪಪದಾತ್ಕೃತ್ ’** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರ ಬರುವುದು. ಮಿಕ್ಕ ವರ್ಣಗಳು ಶೇಷಾನುದಾತ್ತಸ್ವರದಿಂದ ಅನುದಾತ್ತಗಳು. ‘ ರತ್ನಧಾ ’ ಎಂಬಲ್ಲಿ **‘ ಸಮಾಸಸ್ಯ ’** (ಪಾ. ಸೂ. ೬-೧-೨೨೩) ಎಂಬುದರಿಂದಾದರೂ ಅಂತೋದಾತ್ತವನ್ನು ಹೇಳಬಹುದು. ತಮಪ್ ಪ್ರತ್ಯಯವು ಪಿತ್, ಆದ್ದರಿಂದ **‘ ಅನುದಾತ್ತೌ ಸುಪ್ಪಿತೌ ’** (ಪಾ. ಸೂ. ೩-೧-೪)ಎಂಬುದರಿಂದ ಅನುದಾತ್ತ, ಸ್ವರಿತಪ್ರಚಯಗಳನ್ನು ಊಹಿಸಿಕೊಳ್ಳುವುದು. ॥ ೧ ॥

॥ ಸಂಹಿತಾಪಾಠಃ ॥

ಯ ಇಂದ್ರಾಯ ವಚೋಯುಜಾ ತತಕ್ಷುರ್ಮನಸಾ ಹರೀ ।
ಶಮೀಭಿರ್ಯಜ್ಞಮಾಶತ ॥ ೨ ॥

॥ ಪದಪಾಠಃ ॥

ಯೇ । ಇಂದ್ರಾಯ । ವಚಃ ऽ ಯುಜಾ । ತತಕ್ಷುಃ । ಮನಸಾ । ಹರೀ ಇತಿ ॥
ಶಮೀಭಿಃ । ಯಜ್ಞಂ । ಆಶತ ॥ ೨ ॥

॥ ಸಾಯಣಭಾಷ್ಯಂ ॥

**ಯೇ ಋಭವ ಇಂದ್ರಾಯೇಂದ್ರಪ್ರೀತ್ಯರ್ಥಂ ವಚೋಯುಜಾ ತಾಡನಾದಿಕಂ ವಿನಾ ವಾಙ್ಮಾತ್ರೇಣ ರಥೇ ಯುಜ್ಯಮಾನೌ ಸುಶಿಕ್ಷಿತೌ ಹರೀ ಏತನ್ನಾಮಕಾವಶ್ವೌ ಮನಸಾ ತತಕ್ಷುಃ ಸಂಪಾದಿತವಂತಃ । ಋಭೂಣಾಂ ಸತ್ಯಸಂಕಲ್ಪತ್ವಾತ್ತತ್ಸಂಕಲ್ಪಮಾತ್ರೇಣೇಂದ್ರಸ್ಯಾಶ್ವೌ ಸಂಪನ್ನಾವಿತ್ಯರ್ಥಃ । ತೇ ಋಭವಃ ಶಮೀಭಿರ್ಗ್ರಹಚಮಸಾದಿನಿಷ್ಪಾದನರೂಪೈಃ ಕರ್ಮಭಿರ್ಯಜ್ಞಮಸ್ಮದೀಯಮಾಶತ । ವ್ಯಾಪ್ತವಂತಃ । ಅಪ್ನೋಽಪ್ನ ಇತ್ಯಾದಿಷು ಷಡ್ವಿಂಶತಿಸಂಖ್ಯಾಕೇಷು ಕರ್ಮನಾಮಸು ಶಮೀ ಶಿಮೀತಿ ಪಠಿತಂ ॥ ವಚೋ-ಯುಜಾ । ವಚಸಾ ಯುಂಜಾತೇ । ಸತ್ಸೂದ್ವಿಷೇತ್ಯಾದಿನಾ ಕ್ವಿಪ್ । ಸುಪಾಂ ಸುಲುಗಿತ್ಯಾದಿನಾ ವಿಭಕ್ತೇ-**

**ರಾಕಾರಃ । ಕೃದುತ್ತರಪದಪ್ರಕೃತಿಸ್ವರಃ । ತತಕ್ಷುಃ । ತಕ್ಷೂ ತ್ವಕ್ಷೂ ತನೂಕರಣೇ । ಲಿಟಿ ಝೋರುಸಾ-ದೇಶಃ । ಪಾದಾದಿತ್ವಾದನಿಘಾತಃ । ಶಮೀಭಿಃ । ಶಮಯಂತಿ ಪಾಪಾನೀತಿ ಶಮ್ಯಃ ಕರ್ಮಾಣಿ । ಔಣಾದಿಕ ಇನ್ । ಕೃದಿಕಾರಾದಕ್ತಿನಃ । ಪಾ. ೪-೧-೪೫ । ಇತಿ ಜೀಷ್ । ವೃಷಾದಿತ್ವಾದಾದ್ಯುದಾತ್ತಃ । ಆಶತ । ಅಶೂ ವ್ಯಾಪ್ತೌ । ಲಙಿ ಝಸ್ಯಾದಾದೇಶಃ । ಸ್ವಾದಿಭ್ಯಃ ಶ್ನುಃ । ತಸ್ಯ ಬಹುಲಂ ಛಂದಸೀತಿ ಲುಕ್ । ಆಡಾಗಮಃ । ತಿಙ್ಙತಿಙ ಇತಿ ನಿಘಾತಃ ॥**

॥ ಪ್ರತಿಪದಾರ್ಥ ॥

**ಯೇ (ಋಭವಃ)**—ಯಾವ ಋಭುದೇವತೆಗಳು । **ಇಂದ್ರಾಯ**—ಇಂದ್ರನ ಪ್ರೀತ್ಯರ್ಥವಾಗಿ । **ವಚೋ-ಯುಜಾ**—ಬಾಯಿಮಾತಿನಿಂದಲೇ (ರಥಕ್ಕೆ) ಹೂಡಬಹುದಾದ । **ಹರೀ**—ಹರೀ ಎಂಬ ಎರಡು ಅಶ್ವಗಳನ್ನು । **ಮನಸಾ**—ಮನಸ್ಸಂಕಲ್ಪದಿಂದಲೇ । **ತತಕ್ಷುಃ**—ಸಂಪಾದಿಸಿಕೊಟ್ಟರೋ । **(ತೇ ಋಭವಃ**—ಅಂತಹ ಋಭುಗಳು) **ಶಮೀಭಿಃ**—(ಗ್ರಹ, ಚಮಸ ಮೊದಲಾದ ಯಜ್ಞಸಾಧನೆಗಳನ್ನು ಒದಗಿಸುವ) ಕರ್ಮಗಳಿಂದ । **ಯಜ್ಞಂ**—ನಮ್ಮ ಯಜ್ಞವನ್ನು । **ಆಶತ**—ವ್ಯಾಪಿಸಿದರು.

॥ ಭಾವಾರ್ಥ ॥

ಈ ಋಭುಗಳು ಇಂದ್ರನ ರಥದ ಹರೀ ಎಂಬ ಸುಶಿಕ್ಷಿತವಾದ ಎರಡು ಅಶ್ವಗಳನ್ನು ಅವನ ಪ್ರೀತ್ಯರ್ಥವಾಗಿ ಮನಸ್ಸಂಕಲ್ಪಮಾತ್ರದಿಂದಲೇ ಸಂಪಾದಿಸಿಕೊಟ್ಟರು. ಅಂತಹ ಋಭುಗಳು ನಮ್ಮ ಯಜ್ಞಕ್ಕೂ ಗ್ರಹ, ಚಮಸಾದಿ ಯಜ್ಞಸಾಧನಗಳನ್ನು ಒದಗಿಸಲಿ.

## English Translation.

The Ribhus who created mentally for Indra his pair of tawny horses that yoke themselves at his command attained the sacrifice by their acts of skill.

॥ ವಿಶೇಷವಿಷಯಗಳು ॥

**ವಚೋಯುಜಾ—ತಾಡನಾದಿಕಂ ವಿನಾ ವಾಙ್ಮಾತ್ರೇಣ ರಥೇ ಯುಜ್ಯಮಾನೌ** ॥ ಇಂದ್ರನು ಬಾಯಿಂದ ಹೇಳಿದ ಮಾತ್ರಕ್ಕೆ ತಾಡನಾದಿ ಶಿಕ್ಷೆಗಳಿಲ್ಲದೆ ರಥಕ್ಕೆ ಹೂಡಿಕೊಳ್ಳುವ ಎಂದರ್ಥವು. ಎಂದರೆ ಇಂದ್ರನ ಆಜ್ಞೆಯಾದರೆ ಸಾಕು, ಯಾವ ವಿಧವಾದ ಸಾರಥಿಯ ಪ್ರಚೋದನೆಯೂ ಇಲ್ಲದೆ ತಾವೇ ರಥಕ್ಕೆ ಹೂಡಿಕೊಳ್ಳುವವು Harnessing themselves at Indra's word (command) ಎಂದಭಿಪ್ರಾಯವು

**ತತಕ್ಷುಃ ಮನಸಾ—ಸಂಪಾದಿತವಂತಃ, ಕೃತವಂತಃ** ॥ created. ಋಭುಗಳು ಶಿಲ್ಪಶಾಸ್ತ್ರಪ್ರವೀಣ ರಾದುದರಿಂದಲೂ ಸತ್ಯಸಂಕಲ್ಪವುಳ್ಳವರಾದುದರಿಂದಲೂ ತಮ್ಮ ಬುದ್ಧಿಸಾಮರ್ಥ್ಯದಿಂದ ಯಜ್ಞಸಾಧನಭೂತವಾದ.

ಯಜ್ಞಾಯುಧಗಳನ್ನೂ ರಥವನ್ನೂ ಇತರ ವಸ್ತುಗಳನ್ನೂ ಸೃಷ್ಟಿಸಲು ಸಮರ್ಥರು. ಈ ಋಭುದೇವತೆಗಳು ಆಧುನಿಕ ಶಿಲ್ಪಿಗಳಂತೆ ಆಯುಧಾದಿಸಾಮಗ್ರಿಗಳನ್ನು ಉಪಯೋಗಿಸಿ ವಸ್ತುನಿರ್ಮಾಣಮಾಡಬೇಕಾದ ಪ್ರಮೇಯವಿಲ್ಲ. ತಮ್ಮ ಮನಸ್ಸಂಕಲ್ಪಮಾತ್ರದಿಂದಲೇ ಯಾವ ವಸ್ತುವನ್ನು ಬೇಕಾದರೂ ನಿರ್ಮಿಸಬಲ್ಲ ಶಕ್ತಿಸಾಮರ್ಥ್ಯವುಳ್ಳವರೆಂಬ ಅಭಿಪ್ರಾಯವನ್ನು **ಮನಸಾ** ಎಂಬ ಶಬ್ದವು ಸೂಚಿಸುವುದು.

**ಹರೀ—ಹರತಃ ವಹತ ಇತಿ ಹರೀ ।** ರಥವನ್ನು ಒಯ್ಯುವುದರಿಂದ ಇಂದ್ರನ ಕುದುರೆಗಳಿಗೆ ಹರೀ ಎಂದು ಹೆಸರು. ದ್ವಿವಚನಾಂತವಾದ ಈ ಶಬ್ದವು ಋಗ್ವೇದದಲ್ಲಿ ಸಾಧಾರಣವಾಗಿ ಇಂದ್ರನ ಎರಡು ಕುದುರೆಗಳನ್ನು ಸೂಚಿಸುವಾಗ ಉಪಯೋಗಿಸಲ್ಪಡುವುದು.

**ಶಮೀಭಿಃ—ಶಮಯಂತಿ ಪಾಪಾನೀತಿ ಶಮ್ಯಃ ಕರ್ಮಾಣಿ ।** ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಶಮೀ ಅಥವಾ ಶಿಮೀ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧) ಶಮೀಭಿಃ ಎಂದರೆ ಯಜ್ಞಾದಿಕರ್ಮಗಳಿಂದ ಎಂದರ್ಥವು. ಈ ಋಕ್ಕಿನಲ್ಲಿ ಪ್ರಯುಕ್ತನಾಗಿರುವ **ಶಮೀಭಿರ್ಯಜ್ಞಮಾಶತ** ಎಂಬ ವಾಕ್ಯಕ್ಕೆ ಅನೇಕ ಅರ್ಥಗಳಾಗುವವು. ಋಭುದೇವತೆಗಳು ತಮ್ಮ ಕರ್ಮಗಳಿಂದ ಎಂದರೆ ಶಿಲ್ಪಕರ್ಮಗಳಿಂದ ಅಥವಾ ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಡುವ ಕರ್ಮಗಳಿಂದ ಯಜ್ಞವನ್ನು ವ್ಯಾಪಿಸುವರು ಎಂದರೆ ಯಜ್ಞಭೂಮಿಗೆ ಬರುವರು. ಅಥವಾ ಯಜ್ಞದಲ್ಲಿ ಯಜಮಾನನು ಋಭುದೇವತೆಗಳನ್ನುದ್ದೇಶಿಸಿಕೊಡುವ ಹವಿಃಪ್ರದಾನಾದಿ ಕರ್ಮಗಳಿಂದ ಸಂತುಷ್ಟರಾಗಿ ಹವಿಸ್ಸನ್ನು ಸ್ವೀಕರಿಸುವರು ಎಂದು ವಿಧವಿಧವಾಗಿ ಅರ್ಥವನ್ನು ಹೇಳಬಹುದು. ಮುಖ್ಯಾಭಿಪ್ರಾಯವೇನೆಂದರೆ—ಈ ಋಭುಗಳು ತಮ್ಮ ಶಿಲ್ಪಚಾತುರ್ಯದಿಂದ ಯಜ್ಞಕ್ಕೆ ಅವಶ್ಯಕವಾದ ಸಾಧನ ಸಾಮಗ್ರಿಗಳನ್ನು ನಿರ್ಮಿಸಿ ಯಜ್ಞವು ಸಾಂಗವಾಗಿ ನೆರವೇರುವಂತೆ ಮಾಡುವುದಲ್ಲದೆ ಯಜ್ಞದಲ್ಲಿ ಯಜಮಾನನು ಮಾಡುವ ಹವಿಃಪ್ರದಾನದಿಂದ ಸಂತುಷ್ಟರಾಗಿ ಯಜ್ಞಫಲವನ್ನು ಕೊಡುವರು, ಇತ್ಯಾದಿ.

॥ ವ್ಯಾಕರಣಪ್ರಕ್ರಿಯಾ ॥

**ವಚೋಯುಜಾ**—ವಚಸಾ ಯುಂಜಾತೇ ಎಂದು ವಿಗ್ರಹ. ತೃತೀಯಾ ಏಕವಚನಾಂತವಚಶ್ಶಬ್ದೋಪಪದಕವಾದ ಯುಜಿರ್ ಯೋಗೇ ಎಂಬ ಧಾತುವಿನ ಮುಂದೆ **' ಸತ್ಸೂದ್ವಿಷ-'** (ಪಾ. ಸೂ. ೩-೨-೬೧) ಇತ್ಯಾದಿ ಸೂತ್ರದಿಂದ ಕ್ವಿಪ್ ಪ್ರತ್ಯಯ, ಇದರ ಮುಂದೆ ದ್ವಿತೀಯಾ ದ್ವಿವಚನ ಔಪ್ರತ್ಯಯ, ಅದಕ್ಕೆ **' ಸುಪಾಂಸುಲುಕ್ '** (ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. ಇದು **' ಅನುದಾತ್ತೌ ಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಯುಜ್ ನ ಉಕಾರವು, **' ಧಾತೋಃ '** (ಪಾ ಸೂ. ೬-೧-೧೬೨) ಎಂಬುದರಿಂದ ಉದಾತ್ತ. ಸಮಾಸಾನಂತರವೂ, **' ಗತಿಕಾರಕೋ-'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿ ಸ್ವರವೇ ಬರುವುದರಿಂದ ಅದೇ ಸ್ವರ ನಿಲ್ಲುವುದು. **' ಉದಾತ್ತಾದನುದಾತ್ತಸ್ಯ ಸ್ವರಿತಃ '** (ಪಾ. ಸೂ. ೮-೪-೬೬) ಎಂಬುದರಿಂದ ವಿಭಕ್ತ್ಯಾದೇಶವು ಸ್ವರಿತವಾಗುವುದು.

**ತತಕ್ಷುಃ**—ತಕ್ಷೂ ತ್ವಕ್ಷೂ ತನೂಕರಣೇ ಧಾತು. ಇದರ ಮುಂದೆ ಲಿಟ್, ಪ್ರಥಮಪುರುಷ ಬಹುವಚನ ಝಿ ಆದೇಶ, ಇದಕ್ಕೆ **' ಪರಸ್ಮೈಪದಾನಾಂಣಲತುಸುಸ್-'** (ಪಾ. ಸೂ. ೩-೪-೮೨) ಎಂಬುದರಿಂದ ಉಸಾದೇಶ

ದ್ವಿತ್ವಾದಿಕಾರ್ಯಗಳು, ತತಕ್ಷುಃ ಎಂದಾಗುವುದು. ಇದು ಎರಡನೆಯ ಪಾದದ ಆದಿಯಲ್ಲಿರುವುದು. **'ಅಪಾದಾದೌ'** (ಪಾ. ಸೂ. ೮-೧-೧೮) ಎಂದು ಪ್ರತಿಷೇಧವಿರುವುದರಿಂದ **'ತಿಙ್ಙತಿಙಃ'** (ಪಾ. ಸೂ ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಶಮೀಭಿಃ**—ಶಮಯನ್ತಿ ಪಾಪಾನೀತಿ ಶಮ್ಯಃ, ಕರ್ಮಾಣಿ. ಪಾಪಗಳನ್ನು ಪರಿಹಾರಮಾಡತಕ್ಕ ಕರ್ಮಗಳು ಶಮೀ ಪದದಿಂದ ಬೋಧಿಸಲ್ಪಡುವುವು. ಶಮು ಉಪಶಮೇ. ಧಾತು **'ಸರ್ವಧಾತುಭ್ಯ ಇನ್'** (ಉ. ಸೂ. ೪-೫-೫೭) ಎಂಬುದರಿಂದ ಇನ್‌ಪ್ರತ್ಯಯ. ಸ್ತ್ರೀತ್ವ ವಿವಕ್ಷೆಯನ್ನು ಮಾಡಿದರೆ **'ಕೃದಿಕಾರಾದಕ್ತಿನಃ'** (ಪಾ. ಸೂ. ೪-೧-೪೫ ಗ) ಸ್ತ್ರೀತ್ವವನ್ನು ವಿವಕ್ಷಿಸಿದರೆ ಕೃತ್ಪ್ರತ್ಯಯ ಸಂಬಂಧಿಯಾದ ಇ ಕಾರವನ್ನು ಕೊನೆಯಲ್ಲಿ ಹೊಂದಿರುವ ಪ್ರಾತಿಪದಿಕದ ಮುಂದೆ ಙೀಷ್ ಬರುವುದು. ಆದರೆ ಕ್ತಿನ್ನಂತಪ್ರಾತಿಪದಿಕದ ಮುಂದೆ ಙೀಷ್ ಬರುವುದಿಲ್ಲವೆಂದು ಈ ಗಣ ಸೂತ್ರದ ಅರ್ಥ. ಇಲ್ಲಿ ಔಣಾದಿಕವಾದ ಇನ್‌ಪ್ರತ್ಯಯ ಕೃತ್, ಇನ್‌ಪ್ರತ್ಯಯ ಸಂಬಂಧಿಯಾದ ಇಕಾರವನ್ನು ಕೊನೆಯಲ್ಲಿ ಹೊಂದಿರುವುದರಿಂದ ಶಮಿ, ಎಂಬುದರ ಮುಂದೆ ಙೀಷ್ ಬರುವುದು. **'ಯಸ್ಯೇತಿ ಚ'** (ಪಾ. ಸೂ. ೬-೪-೧೪೮) ಎಂಬುದರಿಂದ ಕೃತ್ತಾದ ಇಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವು ಯದ್ಯಪಿ ಪ್ರಾಪ್ತವಾಗುವುದು. ಆದರೂ ಇದು ವೃಷಾದಿಯಲ್ಲಿರುವುದರಿಂದ **'ವೃಷಾದೀನಾಂ ಚ'** (ಪಾ. ಸೂ ೬ ೧-೨೦೩) ಎಂಬುದರಿಂದ ಆದ್ಯುದಾತ್ತವಾಗುವುದು.

**ಆಶತ**—ಅಶೂ ವ್ಯಾಪ್ತೌ ಧಾತು. ಇದರ ಮುಂದೆ ಲಙ್ ಆತ್ಮನೇಪದ ಪ್ರಥಮಪುರುಷ ಬಹುವಚನ ಝ ಆದೇಶ. ಇದು ಸ್ವಾದಿಗಣದ ಧಾತು. ಆದ್ದರಿಂದ **'ಸ್ವಾದಿಭ್ಯಃ ಶ್ನುಃ'** (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ ಬರುವುದು. ಅಶ್+ನು+ಝ, ವಿಕರಣಕ್ಕೆ **'ಬಹುಲಂ ಛಂದಸಿ'** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ ಬರುವುದು. **'ಆಡಜಾದೀನಾಮ್'** (ಪಾ. ಸೂ. ೬-೪-೭೨) ಎಂಬುದರಿಂದ ಆಡಾಗಮ, **'ಆಟಶ್ಚ'** (ಪಾ. ಸೂ. ೬-೧-೯೦) ಎಂಬುದರಿಂದ ವೃದ್ಧಿ. **'ಆತ್ಮನೇಪದೇಷ್ವನತಃ'** (ಪಾ. ಸೂ. ೭-೧-೫) ಎಂಬುದರಿಂದ ಝಕಾರಕ್ಕೆ ಅತ್ ಆದೇಶ. ಆಶತ ಎಂದಾಗುವುದು, **'ತಿಙ್ಙತಿಙಃ'** (ಪಾ. ಸೂ. ೮-೧-೨೮) ಎಂಬುದರಿಂದ ಇದು ಸರ್ವಾನುದಾತ್ತ ॥ ೨ ॥

॥ ಸಂಹಿತಾಪಾಠಃ ॥

ತಕ್ಷನ್ನಾಸತ್ಯಾಭ್ಯಾಂ ಪರಿಜ್ಮಾನಂ ಸುಖಂ ರಥಂ ।
ತಕ್ಷನ್ಧೇನುಂ ಸಬರ್ದುಘಾಂ ॥ ೩ ॥

॥ ಪದಪಾಠಃ ॥

**ತಕ್ಷನ್ । ನಾಸತ್ಯಾಭ್ಯಾಂ । ಪರಿ ऽ ಜ್ಮಾನಂ । ಸು ऽ ಖಂ । ರಥಂ ॥**

**ತಕ್ಷನ್ । ಧೇನುಂ । ಸಬಃ ऽ ದುಘಾಂ ॥ ೩ ॥**

॥ ಸಾಯಣಭಾಷ್ಯಂ ॥

**ನಾಸತ್ಯಾಭ್ಯಾಮಶ್ವಿದೇವಪ್ರೀತ್ಯರ್ಥಂ ರಥಂ ತಕ್ಷನ್ । ಋಭವೋ ದೇವಾಃ ಕಂಚಿದ್ರಥಮತಕ್ಷನ್ । ತಕ್ಷಣೇನ ಸಂಪಾದಿತವಂತಃ । ಕೀದೃಶಂ । ಪರಿಜ್ಮಾನಂ ಪರಿತೋ ಗಂತಾರಂ ಸುಖಂ ಉಪರ್ಯುಪವೇಶನೇ ಸುಖಕರಂ । ಕಿಂ ಚ ಧೇನುಂ ಕಾಂಚಿದ್ಗಾಂ ತಕ್ಷನ್ । ಧಾತೂನಾಮನೇಕಾರ್ಥತ್ವಾತ್ತಕ್ಷತಿರತ್ರ ಸಂಪಾದನವಾಚೀ । ಕೀದೃಶೀಂ ಧೇನುಂ । ಸಬರ್ದುಘಾಂ ಸಬರಃ ಕ್ಷೀರಸ್ಯ ದೋಗ್ಧ್ರೀಂ ॥ ತಕ್ಷನ್ । ಬಹುಲಂ ಛಂದಸೀತ್ಯಡಭಾವಃ । ನಾಸತ್ಯಾಭ್ಯಾಂ । ನ ವಿದ್ಯತೇ ಸತ್ಯಂ ಯಯೋಸ್ತಾವಸತ್ಯೌ । ನ ಅಸತ್ಯೌ ನಾಸತ್ಯೌ । ನಭ್ರಾಣ್ನಪಾದಿತ್ಯಾದಿನಾ ನಲೋಪಾಭಾವಃ । ಪರಿಜ್ಮಾನಂ । ಅಜೇಃ ಪರಿಪೂರ್ವಸ್ಯ ಶ್ವನ್ನುಕ್ಷನ್ನಿತ್ಯಾದಿನಾ । ಉ. ೧-೧೫೮ । ಮನ್ಪ್ರತ್ಯಯೋಽಕಾರಲೋಪ ಆದ್ಯುತಾತ್ತತ್ವಂ ಚ ನಿಪಾತನಾತ್ । ಸಬರ್ದುಘಾಂ । ಸಬಃ ಪಯೋ ದೋಗ್ಧೀತಿ ಸಬರ್ದುಘಾ । ದುಹಃ ಕಬ್ಘಶ್ಚ । ಪಾ. ೩-೨-೭೦ । ಇತಿ ಕಪ್ । ಸಬರಿತಿ ರೇಫಾಂತಂ ಪ್ರಾತಿಪದಕಂ ಕ್ಷೀರವಾಚೀತಿ ಸಂಪ್ರದಾಯವಿದಃ । ಕಪಃ ಪಿತ್ತ್ವಾದನುದಾತ್ತತ್ವಂ । ಧಾತುಸ್ವರ ಏವ ಶಿಷ್ಯತೇ । ಸಮಾಸೇ ತೃದುತ್ತರಪದಪ್ರಕೃತಿಸ್ವರಃ ॥**

॥ ಪ್ರತಿಪದಾರ್ಥ ॥

**ನಾಸತ್ಯಾಭ್ಯಾಂ**—ಅಶ್ವಿನೀದೇವತೆಗಳಿಗೆ । **ಪರಿಜ್ಮಾನಂ**—ಸುತ್ತಲೂ ಹೋಗುವ (ಎಲ್ಲ ದಿಕ್ಕುಗಳಲ್ಲೂ ಸಂಚಾರಮಾಡಬಲ್ಲ) । **ಸುಖಂ**—(ಕುಳಿತುಕೊಳ್ಳಲು) ಸುಖಕರವಾದ । **ರಥಂ**—ರಥವನ್ನು (ಈ ಋಭುಗಳು) । **ತಕ್ಷನ್**—ತಕ್ಷಣವೇ ಸಂಪಾದಿಸಿಕೊಟ್ಟರು । (ಮತ್ತೂ) । **ಸಬರ್ದುಘಾಂ**—ಹಾಲನ್ನು ಕೊಡುವ । **ಧೇನುಂ**—ಗೋವನ್ನೂ । **ತಕ್ಷನ್**—ಸಂಪಾದಿಸಿಕೊಟ್ಟರು.

॥ ಭಾವಾರ್ಥ ॥

ಈ ಋಭುದೇವತೆಗಳು ತಮ್ಮ ಸಾಮರ್ಥ್ಯದಿಂದ ಅಶ್ವಿನೀದೇವತೆಗಳಿಗೆ ಎಲ್ಲೆಡೆಗಳಲ್ಲಿ ಸಂಚಾರಮಾಡಬಲ್ಲ, ಸುಖಕರವಾದ, ರಥವೊಂದನ್ನೂ, ಒಳ್ಳೆಯ ಹಾಲುಕೊಡುವ ಹಸು ಒಂದನ್ನೂ ಸಂಪಾದಿಸಿಕೊಟ್ಟರು.

## English Translation.

They constructed for the Nasatyas, an easy-moving chariot which is capable of moving everywhere, and a cow that gives milk.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಹೇಳಿದಂತೆ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕುಗಳಲ್ಲಿಯೂ ಋಭುದೇವತೆಗಳು ಮಾಡಿದ ಅಸಾಧಾರಣ ಶಿಲ್ಪಕರ್ಮಗಳು ವರ್ಣಿಸಲ್ಪಡುವುವು.

**ತಕ್ಷನ್—ಅತಕ್ಷನ್.** ಛಂದಸ್ಸಿನ ಅನುಕೂಲಕ್ಕಾಗಿ **ಅತಕ್ಷನ್** ಎಂಬ ಕ್ರಿಯಾಪದದ ಅಕಾರವು ಲೋಪವಾಗಿ **ತಕ್ಷನ್** ಎಂದು ಮಾತ್ರ ಉಪಯೋಗಿಸಲ್ಪಡುವುದು. **ಅತಕ್ಷನ್** ಎಂದರೆ **ಸಂಪಾದಿತವಂತಃ, ಕೃತವಂತಃ** ನಿರ್ಮಿಸಿ

ದರು, ಮಾಡಿದರು, chipped, fabricated, fashioned, constructed, carved ಮೊದಲಾದ ಅರ್ಥಗಳನ್ನು ಹೇಳಬಹುದು. ಹಿಂದಿನ ಋಕ್ಕಿನಲ್ಲಿ ಹೇಳಿದಂತೆ ರಥವನ್ನು ಮನಸ್ಸಂಕಲ್ಪದಿಂದ ನಿರ್ಮಿಸದೆ ಆಯುಧಾದಿಗಳಿಂದ ಶಿಲ್ಪಶಾಸ್ತ್ರಾನುಸಾರವಾಗಿ ರಥವನ್ನು ಕೆತ್ತಿ ನಿರ್ಮಿಸಿದರೆಂದು ಅಭಿಪ್ರಾಯವು.

**ನಾಸತ್ಯಾಭ್ಯಾಂ—ನ ಅಸತ್ಯೌ ನಾಸತ್ಯೌ (ನಾಸತ್ಯಾ)** ಅಸತ್ಯವಾದ ವಾಕ್ಯಗಳನ್ನಾಡುವವರಲ್ಲವಾದ್ದರಿಂದ ಅಶ್ವಿನೀದೇವತೆಗಳಿಗೆ **ನಾಸತ್ಯೌ** ಅಥವಾ **ನಾಸತ್ಯಾ** ಎಂದು ಹೆಸರು ಈ ಅಶ್ವಿನೀದೇವತೆಗಳು ಇಬ್ಬರು, ಒಬ್ಬನ ಹೆಸರು **ನಾಸತ್ಯಾ** ಎಂತಲೂ ಮತ್ತೊಬ್ಬನ ಹೆಸರು **ದಸ್ರಾ** ಎಂತಲೂ ಹೇಳುವ ರೂಢಿ ಇದ್ದರೂ **ನಾಸತ್ಯಾ** ಎಂಬ ಶಬ್ದವನ್ನೇ ಇಬ್ಬರನ್ನೂ ಉದ್ದೇಶಿಸಿ ಹೇಳುವ ರೂಢಿ ಇದೆ. ಆದುದರಿಂದ ಇಲ್ಲಿ **ನಾಸತ್ಯಾಭ್ಯಾಂ** ಎಂದರೆ **ಅಶ್ವಿನೋಃ** ಅಶ್ವಿನೀದೇವತೆಗಳಿಗೆ ಎಂದರ್ಥವು. ಇಲ್ಲಿ **ನಾಸತ್ಯಾಭ್ಯಾಂ** ಎಂದು ಪಂಚಮೀವಿಭಕ್ತಿಯನ್ನು ಉಪಯೋಗಿಸಿದ್ದರೂ ಪಂಚಮೀವಿಭಕ್ತಿಯ ಅರ್ಥವನ್ನಾಗಲಿ ಅಥವಾ ಷಷ್ಠೀ ವಿಭಕ್ತಿಯ ಅರ್ಥವನ್ನಾಗಲಿ ಹೇಳಬಹುದು.

**ಪರಿಜ್ಮಾನಂ—ಪರಿತೋ ಗಂತಾರಂ** । ಎಲ್ಲೆಡೆಯಲ್ಲಿಯೂ ಸಂಚರಿಸಬಲ್ಲ ಎಂದರೆ ಭೂವ್ಯಂತರಿಕ್ಷಸಮುದ್ರಾದಿ ಪ್ರದೇಶಗಳಲ್ಲಿ ಹೋಗಬಲ್ಲ ಎಂದಭಿಪ್ರಾಯವು. ಈ ಶಬ್ದವು ರಥಂ ಎಂಬ ಶಬ್ದಕ್ಕೆ ವಿಶೇಷಣವು.

**ಸುಖಂ—**ಸುಖಕರವಾದ, easy-moving, ರಥದಲ್ಲಿ ಕುಳಿತಿರುವವರಿಗೆ ಆಯಾಸವಾಗದಂತೆ, ಕುಲುಕಾಡದಂತೆ ಸಂಚರಿಸಬಲ್ಲ ಅಥವಾ ಮೆತ್ತನೆಯ ಆಸನಾದಿಗಳನ್ನು ಹಾಕಿ ಸಿದ್ಧಪಡಿಸಿರುವ ಎಂದಭಿಪ್ರಾಯವು.

**ಧೇನುಂ—ಗಾಂ** ॥ ಹಸುವನ್ನು. ಸಾಧಾರಣವಾಗಿ ಧೇನುಶಬ್ದವು ಋಗ್ವೇದದಲ್ಲಿ ಹಾಲನ್ನು ಕೊಡುವ ಹಸುವನ್ನು ಸೂಚಿಸುವ ಅರ್ಥದಲ್ಲಿ ಉಪಯೋಗಿಸಲ್ಪಡುವುದು.

**ತಕ್ಷನ್—**ಇಲ್ಲಿಯೂ ಸಹ **ಅತಕ್ಷನ್** ಎಂದೇ ಅಭಿಪ್ರಾಯವು. ಇಲ್ಲಿ ಒಂದು ಸಂಶಯವು ತಲೆದೋರುವುದು. ತಕ್ಷನ್ ಶಬ್ದಕ್ಕೆ ಮಾಡಿದರು ರಚಿಸಿದರು ಎಂದರ್ಥವಾಗುವುದರಿಂದ **ಧೇನುಂ ತಕ್ಷನ್** ಹಸುವನ್ನು ಆಯುಧಾದಿಗಳಿಂದ ನಿರ್ಮಿಸುವುದು ಅಸಂಭವವಲ್ಲವೇ ಎಂದರೆ ಇಲ್ಲಿ ತಕ್ಷನ್ ಎಂಬ ಶಬ್ದಕ್ಕೆ **ಸಂಪಾದಿತವಂತಃ** ದೊರಕಿಸಿಕೊಟ್ಟರು ಎಂಬ ಅರ್ಥವನ್ನು ಭಾಷ್ಯಕಾರರು ಹೇಳಿರುವುದು ಸಮಂಜಸವಾಗಿರುವುದು.

**ಸಬರ್ದುಘಾಂ—**ಸಬರಃ ಕ್ಷೀರಸ್ಯ ದೋಗ್ಧ್ರೀಂ, ಅಮೃತಸ್ಯ ದೋಗ್ಧ್ರೀಂ । ಅಮೃತವೆಂದು ಹೇಳಲ್ಪಡುವ ಹಾಲನ್ನು ಕೊಡುವ ಅಥವಾ ಕರೆಯುವ ಹಸುವನ್ನೂ, the cow that yields milk or ambrosia ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ತಕ್ಷನ್—**ತಕ್ಷೂ ತ್ವಕ್ಷೂ ತನೂಕರಣೇ ಧಾತು. ಧಾತುಗಳಿಗೆ ಅನೇಕವಾದ ಅರ್ಥಗಳು ಇರುವುದರಿಂದ ಇಲ್ಲಿ ತಕ್ಷಧಾತುವಿಗೆ ಸಂಪಾದನಾರ್ಥವು ವಿವಕ್ಷಿತವು. ಇದರ ಮುಂದೆ ಲಙ್ ಪ್ರಥಮಪುರುಷ ಬಹುವಚನ ಝಿ ಆದೇಶ. ತನೂಕರಣ ಎಂಬ ಅರ್ಥವನ್ನು ವಿವಕ್ಷೆ ಮಾಡಿದ್ದರೆ ಯದ್ಯಪಿ **'ತನೂಕರಣೇ ತಕ್ಷಃ'** (ಪಾ. ಸೂ. ೩-೧-೭೬) ಕರ್ತ್ರರ್ಥದಸಾರ್ವಧಾತುಕ ಪರದಲ್ಲಿರುವಾಗ ತನೂಕರಣಾರ್ಥಕವಾದ ತಕ್ಷಧಾತುವಿನ ಮುಂದೆ 'ಶ್ನು'

ವಿಕರಣ ಬರುವುದು. ಎಂಬುದರಿಂದ 'ಶ್ನು' ವಿಕರಣವು ಪ್ರಾಪ್ತವಾಗುತ್ತಿತ್ತು. ಆದರೆ ಇಲ್ಲಿ ಸಂಪಾದನೆ ಎಂಬ ಅರ್ಥವನ್ನು ವಿವಕ್ಷಿಸಿರುವುದರಿಂದ ಭ್ವಾದಿಗಣಪಠಿತವಾದ ಈ ಧಾತುವಿನ ಮುಂದೆ 'ಶಪ್' ವಿಕರಣ ಬರುವುದು. ತಕ್ಷ್+ಅ-ಝಿ, **'ಝೋಽಂತಃ'** (ಪಾ. ಸೂ. ೭-೧-೩) ಎಂಬುದರಿಂದ ಝುಗೆ ಅನ್ತ್ ಆದೇಶ **'ಇತಶ್ಚ'** (ಪಾ. ಸೂ. ೩-೪-೧೦೦) ಎಂಬುದರಿಂದ ಇಕಾರ ಲೋಪ, **'ಸಂಯೋಗಾನ್ತಸ್ಯಲೋಪಃ'** (ಪಾ. ಸೂ. ೮-೨-೨೩) ಎಂಬುದರಿಂದ 'ನ್ತ್' ಎಂಬ ಸಂಯೋಗದ ಕೊನೆಯಲ್ಲಿರುವ ತಕಾರಕ್ಕೆ ಲೋಪ, **'ಪೂರ್ವತ್ರಾಸಿದ್ಧಮ್'** (ಪಾ. ಸೂ. ೮-೨-೧) ಎಂಬುದರಿಂದ ಸಂಯೋಗಾಂತಲೋಪವು ನಲೋಪವನ್ನು ಮಾಡುವಾಗ ಅಸಿದ್ಧವಾಗುವುದು. ಆದ್ದರಿಂದ **'ನಲೋಪಃ ಪ್ರಾತಿಪದಿಕಾಂತಸ್ಯ'** (ಪಾ. ಸೂ. ೪-೨-೭) ಎಂಬುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ. ವಿಕರಣದ ಅಕಾರ-ಪ್ರತ್ಯಯದ ಅಕಾರಗಳೆರಡಕ್ಕೂ ಪರರೂಪ. **'ಲುಙ್‌ಲಙ್‌ಲೃಙ್ಕ್ಷ್ವಡುದಾತ್ತಃ'** (ಪಾ. ಸೂ. ೬-೪-೭೧) ಎಂಬುದರಿಂದ ಅಡಾಗಮವು ಯದ್ಯಪಿ ಪ್ರಾಪ್ತವಾಗುವುದು. ಆದರೆ **'ಬಹುಲಂ ಛಂದಸ್ಯಮಾಙ್ಯೋಗೇಽಪಿ'** (ಪಾ. ಸೂ. ೬-೪-೭೫) ಛಂದಸ್ಸಿನಲ್ಲಿ ಮಾಙ್ ಯೋಗವಿದ್ದರೂ ಇಲ್ಲದಿದ್ದರೂ ಅಟ್, ಆಟ್ ಎಂಬ ಆಗಮಗಳು ಬಹುಲವಾಗಿ ಬರುವುವು ಬಹುಲಶಬ್ದಾರ್ಥವು ಹಿಂದೆಯೇ ವಿವೃತವಾಗಿದೆ. ಇದರಿಂದ ಇಲ್ಲಿ ಅಡಾಗಮವು ಬರುವುದಿಲ್ಲ, 'ತಕ್ಷನ್' ಎಂದಾಗುವುದು.

**ನಾಸತ್ಯಾಭ್ಯಾಂ**—ನ ವಿದ್ಯತೇ ಸತ್ಯಂ ಯಯೋಸ್ತೌ ಅಸತ್ಯೌ, ಯಾರಿಬ್ಬರಲ್ಲಿ ಸತ್ಯವು ಇರುವುದಿಲ್ಲವೋ ಅವರು ಅಸತ್ಯೌ ಎನ್ನಲ್ಪಡುತ್ತಾರೆ. ನ ಅಸತ್ಯೌ ಅವಿದ್ಯಮಾನವಾದ ಸತ್ಯವುಳ್ಳವರಿಗಿಂತಲೂ ಭಿನ್ನರು ಎಂದು ಅರ್ಥ. ಈ ಸಮಾಸದಲ್ಲಿ **'ನಲೋಪೋ ನಞಃ'** (ಪಾ. ಸೂ. ೬-೩-೭೩) ಎಂಬುದರಿಂದ ಯದ್ಯಪಿ ನಕಾರಕ್ಕೆ ಲೋಪವು ಪ್ರಾಪ್ತವಾಗುವುದು. ಆದರೂ **'ನ ಭ್ರಾಣ್ನಪಾನ್ನ ವೇದಾ ನಾಸತ್ಯಾ-'** (ಪಾ. ಸೂ. ೬-೩-೭೫) ಈ ಸೂತ್ರದಲ್ಲಿ ನಿರ್ದಿಷ್ಟವಾದ ಶಬ್ದಗಳ ನಞ್‌ನ, ನಕಾರವು ಪ್ರಕೃತಿಭಾವವನ್ನು ಹೊಂದುವುದು, ಎಂದು ಪ್ರಕೃತಿಭಾವವು ವಿಹಿತವಾಗಿರುವುದರಿಂದ ನಕಾರಕ್ಕೆ ಲೋಪಬರುವುದಿಲ್ಲ. ಸವರ್ಣ ದೀರ್ಘ. ನಾಸತ್ಯಾ ಎಂದಾಗುವುದು.

**ಪರಿಜ್ಮಾನಮ್**—ಅಜ ಗತಿಕ್ಷೇಪಣಯೋಃ ಧಾತು, ಪರಿ ಎಂಬ ಉಪಸರ್ಗಪೂರ್ವಕವಾದ ಈ ಧಾತುವಿನ ಮುಂದೆ **'ಶ್ವನ್ನುಕ್ಷನ್ಪೂಷನ್ಪ್ಲೀಹನ್ ಕ್ಲೇದನ್ ಸ್ನೇಹನ್ ಮೂರ್ಧನ್ಮಜ್ಜನ್ನರ್ಯಮನ್ ವಿಶ್ವಪ್ಸನ್ ಪರಿಜ್ಮನ್ಮಾತರಿಶ್ವನ್ಮಘವನ್ನಿತಿ'** (ಉ. ಸೂ. ೧-೧೫೭) ಈ ಹದಿಮೂರು ಶಬ್ದಗಳು ಕನಿ ಪ್ರತ್ಯಯಾಂತವಾಗಿ ನಿಪಾತಿಸಲ್ಪಡುವುವು, ಶ್ವ ಎಂಬುದು 'ಟು ಓ ಶ್ವಿ ಗತಿವೃದ್ಧ್ಯೋಃ' ಎಂಬ ಧಾತುವಿನ ಮುಂದೆ ಕನಿ ಪ್ರತ್ಯಯ ಬಂದು ಈ ಸೂತ್ರದಲ್ಲಿ ಇಕಾರ ಲೋಪವನ್ನು ನಿಪಾತನಮಾಡಿರುವುದರಿಂದ ಇಕಾರಕ್ಕೆ ಲೋಪ ಬಂದರೆ, ಸಿದ್ಧವಾಗುವುದು. ಉಕ್ಷನ್-ಉಕ್ಷ ಸೇಚನೇ ಎಂಬ ಧಾತುವಿನ ಮುಂದೆ ಕನಿಪ್ರತ್ಯಯ. ಪೂಷ, 'ಪೂಷ ವೃದ್ಧೌ' ಧಾತುವಿನ ಮುಂದೆ ಕನಿ ಪ್ಲೀಹ-'ಪ್ಲಿಹ ಗತೌ' ಧಾತು ಇದರ ಮುಂದೆ ಕನಿ, ಈ ಸೂತ್ರದಲ್ಲಿ ನಿಪಾತಮಾಡಿರುವುದರಿಂದ ಉಪಾಂತ್ಯದಲ್ಲಿರುವ ಇಕಾರಕ್ಕೆ ದೀರ್ಘ, ಕ್ಲೇದನ್, 'ಕ್ಲಿದೂ ಆರ್ದ್ರೀಭಾವೇ' ಧಾತು, ಕನಿಪ್ರತ್ಯಯ. **'ಪುಗಂತಲಘೂಪಧಸ್ಯ ಚ'** (ಪಾ. ಸೂ. ೭-೩-೮೬) ಎಂಬುದರಿಂದ ಉಪಾಂತ್ಯದ ಇಕಾರಕ್ಕೆ ಗುಣ ಏಕಾರ. ಸ್ನೇಹ, 'ಷ್ಣಿಹ ಪ್ರೀತೌ' ಧಾತು, ಕನಿ-ನಂತರ ಲಘೂಪಧಗುಣ. ಮೂರ್ಧ-'ಮುಹ ವೈಚಿತ್ಯೇ' ಧಾತು. ಇದರ ಮುಂದೆ ಕನಿ, ಉಪಧಾಭೂತವಾದ ಉಕಾರಕ್ಕೆ ದೀರ್ಘ,

ಹಕಾರಕ್ಕೆ ಧಕಾರ, ಊಕಾರದ ಮುಂದೆ ರೇಫಾಗಮ (ರಮಾಗಮ) ಇವು ನಿಪಾತನದಿಂದ ಬರುವುವು. ' ಮುಹ್ಯಂತಿ ಅಸ್ಮಿನ್ ಆಹತೇ ' ಎಂದು ಇಲ್ಲಿ ವಿಗ್ರಹ. ಮಜ್ಜನ್–' ಟುಮಸ್ಜೋ ಶುದ್ಧೌ ' ಧಾತು. ಇದರ ಮುಂದೆ ಕನಿ. ಮಸ್ಜ್+ಅನ್. ಸಕಾರಕ್ಕೆ **' ಸ್ತೋಃಶ್ಚುನಾಶ್ಚುಃ '** (ಪಾ. ಸೂ. ೮–೪–೪೦) ಎಂಬುದರಿಂದ ಶಕಾರ, ಇದಕ್ಕೆ **' ಝಲಾಂ ಜಶ್ ಝಶಿ '** (ಪಾ. ಸೂ. ೮–೪–೫೩) ಎಂಬುದರಿಂದ ಜಕಾರ, ' ಇಚುಯಶಾನಾಂ ತಾಲು ' ಎಂದು ಶಕಾರವೂ ತಾಲವ್ಯವಾದ್ದರಿಂದ, ಅದರ ಸ್ಥಾನದಲ್ಲಿ ತಾಲವ್ಯವಾದ ಜಶ್ ಪ್ರತ್ಯಾಹಾರ ಘಟಕವಾದ ಜಕಾರ ಬರುವುದು, ಮಜ್ಜನ್ ಎಂದಾಗುವುದು. ಇದು ನಕಾರಾಂತ, ' ಊಷ್ಮಯಾ ಸಾರ್ಧಮೂಷ್ಮಾಪಿ ಮಜ್ಜೋಽಕ್ಸ್ತ್ರೀ ಮಜ್ಜಯಾ ಸಹ ' ಎಂಬ ದ್ವಿರೂಪಕೋಶಾನುಸಾರ ಟಾಬಂತವಾಗಿಯೂ ಮಜ್ಜಾಶಬ್ದವನ್ನು ಒಪ್ಪುವರು. ಅರ್ಯಮನ್–ಅರ್ಯಶಬ್ದ ಪೂರ್ವಕವಾದ ' ಮಾಙ್ಮಾನೇ ' ಧಾತುವಿನ ಮುಂದೆ ಕನಿ, ಅರ್ಯಮಾ+ಅನ್–**' ಆತೋಲೋಪ ಇಟಿಚ '** (ಪಾ. ಸೂ. ೬–೪–೬೪) ಎಂಬುದರಿಂದ ಆಲೋಪ, ಅರ್ಯಮನ್, ಇದರ ಮುಂದೆ ಪ್ರಥಮೈಕವಚನ ಸು ವನ್ನಿಟ್ಟರೆ, **' ಸರ್ವನಾಮಸ್ಥಾನೇ ಚಾಸಂಬುದ್ಧೌ '** (ಪಾ. ಸೂ. ೬–೪–೮) ಎಂಬುದರಿಂದ ಬರುವ ಉಪಧಾದೀರ್ಘಕ್ಕೆ **' ಇನ್ಹನ್ಪೂಷಾರ್ಯಮ್ಣಾಂ ಶೌ '** (ಪಾ. ಸೂ. ೬–೪–೧೨) ಎಂಬುದರಿಂದ ನಿವೃತ್ತಿ ಬಂದರೂ **' ಸೌಚ '** (ಪಾ. ಸೂ. ೬–೪–೧೩) ಸುಪ್ರತ್ಯಯ ಪರದಲ್ಲಿರುವಾಗ ಇನ್ನಂತಶಬ್ದ, ಹನ್, ಪೂಷನ್, ಅರ್ಯಮನ್, ಇವುಗಳ ಉಪಾಂತ್ಯ ವರ್ಣಕ್ಕೆ ದೀರ್ಘ ಬರುವುದು. ಎಂಬುದರಿಂದ ಉಪಾಂತ್ಯ ವರ್ಣದೀರ್ಘ, **' ಹಲ್ಙ್ಯಾಭ್ಯಃ– '** (ಪಾ. ಸೂ. ೬–೧–೬೮) ಎಂಬುದರಿಂದ ಸುಲೋಪ **' ನಲೋಪಃಪ್ರಾ– '** (ಪಾ. ಸೂ. ೮–೨–೭) ಎಂಬುದರಿಂದ ನಲೋಪ, ಅರ್ಯಮಾ ಎಂದಾಗುವುದು. ವಿಶ್ವಪ್ಸನ್–' ಪ್ಸಾ ಭಕ್ಷಣೇ ' ಧಾತು. ವಿಶ್ವಂಪ್ಸಾತೀತಿ ವಿಶ್ವಪ್ಸಾ–ಅಗ್ನಿ ಎಂದರ್ಥ. ವಿಶ್ವಶಬ್ದೋಪ ಪದಕವಾದ ಪ್ಸಾ ಧಾತುವಿನ ಮುಂದೆ ಕನಿ. **' ಆತೋ ಲೋಪ ಇಟಿಚ '** ಎಂಬುದರಿಂದ ಆಲೋಪ ಪರಿಜ್ಮನ್– ಪರಿಜಾಯತೇ ಇತಿ ಪರಿಜ್ಮಾ. ಚಂದ್ರ, ಅಗ್ನಿ ಎಂಬ ಅರ್ಥಗಳು ಈ ಶಬ್ದದಿಂದ ಬೋಧಿಸಲ್ಪಡುವುವು. ಪರಿಪೂರ್ವಕವಾದ ' ಜನೀಪ್ರಾದುರ್ಭಾವೇ ' ಧಾತುವಿನ ಮುಂದೆ ಕನಿ, ಇಲ್ಲಿ ನಿಪಾತನದಿಂದ ಜನ್ ಧಾತುವಿನ ಅಕಾರಕ್ಕೆ ಲೋಪವೂ ನಕಾರಕ್ಕೆ ಮಕಾರಾದೇಶವೂ ಬರುವುದು. ಪರಿಜ್ ಮ್+ಅನ್–ಎಂದಾಗುವುದು. ಎಂದು ವೈಯಾಕರಣರು ಉಪಪಾದಿಸಿರುವರು. ವೇದಭಾಷ್ಯರೀತಿಯಾಗಿ ಇಲ್ಲಿ ಮತ್ತೊಂದು ವಿಧವಾಗಿ ಪ್ರಕ್ರಿಯೆಯು ಏರ್ಪಡುವುದು. ಪರಿ ಎಂಬ ಉಪಸರ್ಗಪೂರ್ವಕವಾದ ' ಅಜ ಗತಿಕ್ಷೇಪಣಯೋಃ ' ಧಾತುವಿನ ಮುಂದೆ ' ಶ್ವನ್ನುಕ್ಷನ್ '–ಸೂತ್ರದಿಂದ ಮನ್ ಪ್ರತ್ಯಯ. ಪರಿ+ಅಜ್+ಮನ್. ನಿಪಾತನದಿಂದ ಧಾತುವಿನ ಅಕಾರಕ್ಕೆ ಲೋಪ ಪರಿಜ್ಮನ್, ಎಂದಾಗುವುದು. ಮನ್ ಪ್ರತ್ಯಯವು ನಿತ್ತಲ್ಲವಾದ್ದರಿಂದ **' ಞ್ನಿತ್ಯಾದಿರ್ನಿತ್ಯಮ್ '** ಎಂಬುದರಿಂದ ಆದ್ಯುದಾತ್ತಕ್ಕೆ ಪ್ರಾಪ್ತಿ ಇಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವೇ ಪ್ರಾಪ್ತವಾಗುವುದು. ಆದರೂ ಇದೇ ಸೂತ್ರದಲ್ಲಿಯೇ ಆದ್ಯುದಾತ್ತವೂ ನಿಪಾತಿಸಲ್ಪಡುವುದು. ಆದ್ದರಿಂದ ' ಪರಿಜ್ಮನ್ ' ಎಂಬುದು, ಮನ್‌ಪ್ರತ್ಯಯಾಂತವಾದರೂ ಆದ್ಯುದಾತ್ತವೇ ಆಗುವುದು. **' ಅತಃಪರಿಜ್ಮನ್ನಾಗಹಿ '** (ಋ. ಸಂ. ಸೂ. ೬–ಋ. ೯) ರಲ್ಲಿ ವೇದಭಾಷ್ಯಕಾರರು, **' ಅನ್ಯೇಭ್ಯೋಽಪಿ ದೃಶ್ಯತೇ '** (ಪಾ. ಸೂ. ೩–೨–೭೫) ಎಂಬುದರಿಂದ ಪರಿಪೂರ್ವಕವಾದ ಅಜಗತಿಕ್ಷೇಪಣಯೋಃ ಎಂಬ ಧಾತುವಿನ ಮುಂದೆ ಮನಿನ್ ಪ್ರತ್ಯಯಬಂದು, ಛಾಂದಸವಾಗಿ ಅಕಾರಕ್ಕೆ ಲೋಪ ಬರಲು ಪರಿಜ್ಮನ್ ಎಂದಾಗುವುದು. ಇದು ನಿತ್ಸ್ವರದಿಂದ ಆದ್ಯುದಾತ್ತವಾಗುವುದು, ಎಂದು ವರ್ಣಿಸಿರುವರು. (ಪೇ. ೭೫) ಉಜ್ವಲ ದತ್ತರು ಸೂತ್ರದಲ್ಲಿ ಪರಿಜ್ವನ್ ಎಂದು ಪಾಠಮಾಡಿ, ಪರಿಪೂರ್ವಕ ಸೌತ್ರ ಜು ಧಾತುವಿನ ಮುಂದೆ ಕನಿ–ಪರಿಜು+

ಅನ್-ಯಣಾದೇಶ ಪರಿಜ್ವ್ನ, ಚಂದ್ರ ಎಂದು ಅರ್ಥ, ಎಂದು ವರ್ಣಿಸಿರುವರು. ಆದರೆ ಇಂತಹ ಲಕ್ಷ್ಯವು ತೋರೆಯುವುದಿಲ್ಲವಾದ್ದರಿಂದ ಈ ಉಪಪಾದನೆಯು ಯುಕ್ತವಲ್ಲವು. ಪರಿಜ್ಮ-ಇದರ ಮುಂದೆ ದ್ವಿತೀಯಾ ಏಕವಚನ ಅಮ್ ಪ್ರತ್ಯಯ ಬಂದರೆ **'ಸರ್ವನಾಮಸ್ಥಾನೇ-'** (ಪಾ. ಸೂ. ೬-೪-೮) ಉಪಧಾದೀರ್ಘ ಬಂದು ಪರಿಜ್ಮಾನಮ್ ಎಂದಾಗುವುದು. ಮಾತರಿಶ್ವ್ನ, ಮಾತರಿ, ಅಂತರಿಕ್ಷದಲ್ಲಿ ಶ್ವಯತಿ ಹೋಗುತ್ತದೆ. ಎಂದು ವಿಗ್ರಹ ಮಾತರಿಶ್ವಾ ಎಂದಾಗುವುದು. ಮಾತರಿ ಎಂಬ ಸಪ್ತಮ್ಯಂತವು ಉಪಪದವಾಗಿರುವಾಗ 'ಟು ಓ ಶ್ವಿ ಗತಿವೃದ್ಧ್ಯೋಃ' ಧಾತುವಿನ ಮುಂದೆ ಕನಿ, ನಿಪಾತನದಿಂದ ಧಾತುವಿನ ಇಕಾರಕ್ಕೆ ಲೋಪ, ನಿಪಾತನದಿಂದಲೇ, ಮಾತರಿ ಎಂಬಲ್ಲಿಯ ಸಪ್ತಮೀ ವಿಭಕ್ತಿಗೆ **'ಸುಪೋಧಾತು'** (ಪಾ. ಸೂ. ೨-೪-೭೧) ಎಂಬುದರಿಂದ ಪ್ರಾಪ್ತವಾಗುವ ಲುಕ್ಕು ಬರುವುದಿಲ್ಲ. ಮಾತರಿ ಶ್ವ್ನ, ಎಂದಾಗುವುದು. **'ಶ್ವಯುವ ಮಘೋನಾಮತದ್ಧಿತೇ'** (ಪಾ. ಸೂ. ೬-೪-೧೩೩) ಎಂಬ ಸೂತ್ರದಲ್ಲಿ ಶ್ವ ಪದದಿಂದ ಕುಕ್ಕುರ (ನಾಯಿ) ಎಂಬ ಅರ್ಥಕವಾದುದಕ್ಕೂ, ಕುಕ್ಕುರಾರ್ಥಕಶ್ವನ್ ಶ್ವಬ್ದಾಂತಕ್ಕೂ ಸಹ ಗ್ರಹಣವು, ಮಾತರಿಶ್ವ್ನ, ಎಂಬಲ್ಲಿಯ ಶ್ವನ್‌ಗೆ ಕುಕ್ಕುರಾರ್ಥಕತ್ವವಿಲ್ಲ, ಆದ್ದರಿಂದ ಅಜಾದಿಶಸಾದಿ ವಿಭಕ್ತಿಯನ್ನಿಟ್ಟಾಗ ಮಾತರಿಶ್ವ್ನ ಎಂಬಲ್ಲಿ ಸಂಪ್ರಸಾರಣ ಬರುವುದಿಲ್ಲ. ಮಾತರಿಶ್ವನಃ, ಮಾತರಿಶ್ವನಾ ಇತ್ಯಾದಿ ರೂಪಗಳೇ ಆಗುವುವು. ಮಘವನ್- 'ಮಹ ಪೂಜಾಯಾಂ, ಧಾತು ಇಲ್ಲಿ ಕನಿ ಪ್ರತ್ಯಯವೂ, ಹಕಾರಕ್ಕೆ ಘಕಾರಾದೇಶವೂ, ಧಾತುವಿಗೆ ಅವುಕ್ ಆಗಮವೂ ಸಹ ನಿಪಾತಿಸಲ್ಪಡುವುದು, ಮಘವನ್ ಎಂದಾಗುವುದು. ಸೂತ್ರದಲ್ಲಿ ಇತಿ ಶಬ್ದಕ್ಕೆ ಆದಿ, ಎಂದರ್ಥ. ಆದ್ದರಿಂದ ಪ್ರಯೋಗಾನುಸಾರ ಬೇರೆ ಧಾತುಗಳ ಮುಂದೆಯೂ ಕನಿ ಪ್ರತ್ಯಯವು ಬರಬಹುದು ದಶಪಾದಿಯಲ್ಲಿ ಈ ಇತಿ ಶಬ್ದವು ಪಠಿತವಾಗಿಲ್ಲ.

**ಬರ್ದುಘಾಂ**—ಸಬಃ ಹಾಲನ್ನು-ದೋಗ್ಧಿ ಕರೆಯುತ್ತದೆ ಎಂದು ವಿಗ್ರಹ. ಸಬರ್ದುಘಾ ಎಂದಾಗುತ್ತೆ. ಸಬರ್, ಎಂಬುದು ಹಾಲು ಎಂಬ ಅರ್ಥವನ್ನು ಬೋಧಿಸತಕ್ಕ ರೇಫಾಂತ ಪ್ರಾತಿಪದಕ ಎಂದು ಸಂಪ್ರದಾಯವನ್ನು ತಿಳಿದವರು ಅಭಿಪ್ರಾಯಪಡುವರು. **'ದುಹಃಕಬ್ಘಶ್ಚ'** (ಪಾ. ಸೂ. ೩-೨-೭೦) ಸುಬಂತವು ಉಪಪದವಾಗಿರುವಾಗ 'ದುಹ ಪ್ರಪೂರಣೇ' ಧಾತುವಿನ ಮುಂದೆ ಕಪ್ ಪ್ರತ್ಯಯವೂ, ಹಕಾರಕ್ಕೆ ಘಕಾರಾದೇಶವೂ ಸಹ ಬರುವುದು. ಎಂಬುದರಿಂದ, ಸಬಃ ಎಂಬ ಸುಬಂತೋಪಪದಕವಾದ ದುಹ್ ಧಾತುವಿನ ಮುಂದೆ ಕಪ್, ಪ್ರತ್ಯಯವೂ ಹಕಾರಕ್ಕೆ ಘಕಾರವೂ ಬಂದರೆ 'ಸಬರ್‌ದುಘ' ಎಂದಾಗುವುದು. ಕಪ್ ಪ್ರತ್ಯಯವು ಪಿತ್ತು. ಆದ್ದರಿಂದ **'ಅನುದಾತ್ತೌ ಸುಪ್ಪಿತೌ'** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ, **'ಧಾತೋಃ'** (ಪಾ. ಸೂ. ೬-೧-೧೬೨) ಎಂಬುದರಿಂದ ಉಕಾರ ಉದಾತ್ತ, ಸಬಃ ಎಂಬ ಸುಬಂತದೊಂದಿಗೆ **'ಉಪಪದಮತಿಙ್'** (ಪಾ. ಸೂ. ೨-೨-೧೯) ಎಂಬುದರಿಂದ ಸಮಾಸ ಬಂದನಂತರ **'ಗತಿಕಾರಕೋಪಪದಾತ್ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಧಾತುವಿನ ಉದಾತ್ತವೇ ನಿಲ್ಲುವುದು. ಸ್ತ್ರೀತ್ವ ವಿವಕ್ಷೆಮಾಡಿದರೆ **'ಅಜಾದ್ಯತಷ್ಟಾಪ್'** (ಪಾ. ಸೂ. ೪-೧-೪) ಎಂಬುದರಿಂದ ಟಾಪ್, ಟಾಪ್ ಪ್ರತ್ಯಯದೊಂದಿಗೆ ಸವರ್ಣ ದೀರ್ಘ, ಈ ಆಕಾರವು **'ಸ್ಥಾನೇಂತರತಮಃ'** (ಪಾ. ಸೂ. ೧-೧-೫೦) ಎಂಬುದರಿಂದ ಅನುದಾತ್ತ, ಇದು **'ಉದಾತ್ತಾದನುದಾತ್ತಸ್ಯಸ್ವರಿತಃ'** (ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತ, ಉದಾತ್ತವಾದ ಧಾತುವಿನ ಉಕಾರದ ಹಿಂದಿನ ವರ್ಣವು **'ಉದಾತ್ತಸ್ವರಿತಪರಸ್ಯಸನ್ನತರಃ'** (ಪಾ. ಸೂ. ೧-೨-೪೦) ಎಂಬುದರಿಂದ ಅನುದಾತ್ತ. ॥ ೩ ॥

॥ ಸಂಹಿತಾಪಾಠಃ ॥

ಯುವಾನಾ ಪಿತರಾ ಪುನಃ ಸತ್ಯಮಂತ್ರಾ ಋಜೂಯವಃ ।
ಋಭವೋ ವಿಷ್ಟ್ಯಕ್ರತ ॥ ४ ॥

॥ ಪದಪಾಠಃ ॥

ಯುವಾನಾ । ಪಿತರಾ । ಪುನರಿತಿ । ಸತ್ಯಽಮಂತ್ರಾಃ । ಋಜುಽಯವಃ ।
ಋಭವಃ । ವಿಷ್ಟೀ । ಅಕ್ರತ ॥ ४ ॥

॥ ಸಾಯಣಭಾಷ್ಯಂ ॥

ದ್ವಿತೀಯೇ ಛಂದೋಮೇ ವೈಶ್ವದೇವಶಸ್ತ್ರೇ ಯುವಾನಾ ಪಿತರಾ ಪುನರಿತ್ಯಾರ್ಭವಸ್ತೃಚಃ । ದ್ವಿತೀಯಸ್ಯಾಗ್ನಿಂ ವೋ ದೇವಮಿತಿ ಖಂಡೇ ಸೂತ್ರಿತಂ । ಮಹೀ ದ್ಯೌಃ ಪೃಥಿವೀ ಚ ನೋ ಯುವಾನಾ ಪಿತರಾ ಪುನರಿತಿ ತೃಚೌ । ಆ. ೮–೧೦ । ಇತಿ ॥

ಋಭವ ಏತನ್ನಾಮಕಾ ದೇವಾಃ ಪಿತರೌ ಸ್ವಕೀಯೌ ಮಾತಾಪಿತರೌ ಪೂರ್ವಂ ವೃದ್ಧಾವಪಿ ಪುನರ್ಯುವಾನಾ ತರುಣಾವಕ್ರತ । ಕೃತವಂತಃ । ಕೀದೃಶಾಃ । ಸತ್ಯಮಂತ್ರಾ ಅವಿತಥಮಂತ್ರ-ಸಾಮರ್ಥ್ಯೋಪೇತಾಃ । ಪುರಶ್ಚರಣಾದ್ಯನುಷ್ಠಾನೇನ ಸಿದ್ಧಮಂತ್ರತ್ವಾದ್ಯದ್ಯತ್ಫಲಮುದ್ದಿಶ್ಯ ಮಂತ್ರಾಃ ಪ್ರಯುಜ್ಯಂತೇ ತತ್ತತ್ಫಲಂ ತಥೈವ ಸಂಪದ್ಯತೇ । ತಸ್ಮಾಜ್ಜೀರ್ಣಯೋಃ ಪಿತ್ರೋರ್ಯುವತ್ವಂ ಸಂಪಾದಯಿತುಂ ಸಮರ್ಥಾ ಇತ್ಯರ್ಥಃ । ಋಜೂಯವ ಋಜುತಾಮಾತ್ಮನ ಇಚ್ಛಂತಃ । ಛಲರಹಿತಾ ಇತ್ಯರ್ಥಃ । ಅತ ಏವೈತೇಷಾಮನುಷ್ಠಿತಾ ಮಂತ್ರಾಃ ಸಿಧ್ಯಂತಿ । ವಿಷ್ಟೀ ವಿಷ್ಟಯೋ ವ್ಯಾಪ್ತಿಯುಕ್ತಾಃ । ಸರ್ವೇಷು ಕಾರ್ಯೇಷ್ವೇತದೀಯಸ್ಯ ಮಂತ್ರಸಾಮರ್ಥ್ಯಸ್ಯಾಪ್ರತಿಘಾತೋಽತ್ರ ವ್ಯಾಪ್ತಿರುಚ್ಯತೇ । ಋಭುಶಬ್ದಂ ಯಾಸ್ಕ ಏವಂ ನಿರ್ವಕ್ತಿ । ಋಭವ ಉರು ಭಾಂತೀತಿ ವರ್ತೇನ ಭಾಂತೀತಿ ವರ್ತೇನ ಭವಂತೀತಿ ವಾ । ನಿ. ೧೧–೧೫ । ಇತಿ ॥ ಯುವಾನಾ । ಯುವನ್ಶಬ್ದೇ ಯೌತೇಃ ಕನಿನಂತೋ ನಿತ್ತ್ವಾದಾದ್ಯುದಾತ್ತಃ । ಸುಪಾಂ ಸುಲುಗಿತ್ಯಾದಿನಾ ವಿಭಕ್ತೇರಾಕಾರಃ । ಪಿತರಾ । ಪೂರ್ವವದಾ-ಕಾರಃ । ಸತ್ಯಮಂತ್ರಾಃ ಬಹುವ್ರೀಹೌ ಪೂರ್ವಪದಪ್ರಕೃತಿಸರಃ । ಋಜುಶಬ್ದೋ ಭಾವಪರಃ । ಋಜುತ್ವಮಾತ್ಮನ ಇಚ್ಛಂತಿ । ಕ್ಯಚ್ । ಅಕೃತ್ಸಾರ್ವಧಾತುಕಯೋರ್ದೀರ್ಘಃ । ಪಾ. ೭–४–೨೫ । ಇತಿ ದೀರ್ಘಃ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಪ್ರತ್ಯಯಸ್ವರಃ । ವಿಷ್ಟೀ । ವಿಷ್ಲೃ ವ್ಯಾಪ್ತೌ ।

**ಕ್ತಿಚ್ ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ತಿತುತ್ರೇತ್ಯಾದಿನೇಟ್ಪ್ರತಿಬಂಧಃ । ತಸ್ಮಾಜ್ಜಸ ಇಯಾಡಿ-ಯಾಜೀಕಾರಾಣಾಮುಪಸಂಖ್ಯಾನಂ । ಪಾ. ೭-೧-೩೯-೧। ಇತಿ ತಸ್ಯೇಕಾರಾದೇಶಃ । ಸ ಚಾಲೋಽಂತ್ಯಸ್ಯ। ಪಾ. ೧-೧-೫೨ । ಇತಿ ಸಕಾರಸ್ಯ ಭವತಿ । ತತ್ರ ಆದ್ಗುಣ ಇತಿ ಗುಣೇ ಕೃತೇ ಪ್ರಥಮಯೋಃ ಪೂರ್ವ-ಸವರ್ಣಃ । ಪಾ. ೬-೧-೧೦೨ । ಇತಿ ಪೂರ್ವಸವರ್ಣದೀರ್ಘಃ । ತಂ ಬಾಧಿತ್ವಾ ಪರತ್ವಾಜ್ಜಸಿ ಚ । ಪಾ. ೭-೩-೧೦೯ । ಇತಿ ಹ್ರಸ್ವಸ್ಯ ಗುಣೇನ ಭವಿತವ್ಯಮಿತಿ ಚೇನ್ನ । ಸಂಜ್ಞಾಪೂರ್ವಕಸ್ಯ ವಿಧೇರ-ನಿತ್ಯತ್ವಾತ್ । ಅಕ್ರತ । ಕೃಞೋ ಲುಙ್ । ಆತ್ಮನೇಪದಂ । ಝುಸ್ಯಾದಾದೇಶಃ । ಮಂತ್ರೇ ಘಸೇ-ತ್ಯಾದಿನಾ । ಪಾ. ೨-೪-೮೦ । ಚ್ಲೇರ್ಲುಕ್ । ಯಣಾದೇಶಃ । ಅಡಾಗಮಃ । ನಿಘಾತಃ ॥**

॥ ಪ್ರತಿಪದಾರ್ಥ ॥

**ಸತ್ಯಮಂತ್ರಾಃ**—ಸತ್ಯವಾದ ಮಂತ್ರಗಳುಳ್ಳ । **ಋಜೂಯವಃ**—ಋಜುಮಾರ್ಗದಲ್ಲಿಯೇ ಇರಲು ಇಚ್ಛಿಸುವ । **ವಿಷ್ಟೀ**—(ಮಂತ್ರಶಕ್ತಿಯಿಂದ) ವ್ಯಾಪ್ತಿಯುಳ್ಳ । **ಋಭವಃ**—ಋಭುನಾಮಕದೇವತೆಗಳು । **ಪಿತರಾ**—(ತಮ್ಮ ವೃದ್ಧರಾದ) ತಂದೆತಾಯಿಗಳನ್ನು । **ಪುನಃ**—ಪುನಃ (ಮತ್ತೆ) । **ಯುವಾನಾ**—ತರುಣರನ್ನಾಗಿ । **ಅಕ್ರತ**—ಮಾಡಿದರು

॥ ಭಾವಾರ್ಥ ॥

ಋಭುಗಳು ಸನ್ಮಾರ್ಗದಲ್ಲಿಯೇ ಹೋಗುವವರು. ಆದುದರಿಂದಲೇ ಅವರ ಮಂತ್ರಗಳು ಯಾವಾಗಲೂ ವ್ಯರ್ಥವಾಗತಕ್ಕುವಲ್ಲ ಮತ್ತು ಸಫಲವೇ ಆಗುತ್ತವೆ. ಇಂತಹ ತಮ್ಮ ಮಂತ್ರಸಾಮರ್ಥ್ಯದಿಂದ ವೃದ್ಧಮಾತಾಪಿತೃಗಳನ್ನು ಯೌವನವಂತರನ್ನಾಗಿ (ತರುಣರನ್ನಾಗಿ) ಮಾಡಿದರು.

## English Translation.

The honest Ribhus repeating true prayers made (their) parents young again by their skilful acts encountering no opposition through their infallible mantras.

॥ ವಿಶೇಷವಿಷಯಗಳು ॥

ಈ ಮಂತ್ರವನ್ನು ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ಋಭುದೇವತೆಗಳ ಮಂತ್ರಗಳನ್ನು ಪಠಿಸುವಾಗ ದ್ವಿತೀಯಛಂದೋಮಾಮಂತ್ರವನ್ನಾಗಿ ಹೇಳುವರು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ **ದ್ವಿತೀಯಸ್ಯಾಗ್ನಿಂ ವೋ ದೇವಂ** ಎಂಬ ಖಂಡದಲ್ಲಿ **ಮಹೀದ್ಯೌಃ ಪೃಥಿವೀ ಚ ನೋ ಯುವಾನಾ ಪಿತರಾ ಪುನರಿತಿ ತೃಚೌ** ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿರುವುದು. (ಆ. ೮-೧೦).

**ಯುವಾನಾ—ಯುವಾನೌ ।** ಯೌವನವಂತರು, ತಾರುಣ್ಯದೆಶೆಯಲ್ಲಿರುವವರು, ವೃದ್ಧಾವಸ್ಥೆಯಲ್ಲಿರುವವರಲ್ಲ.

**ಪಿತರಾ—ಸ್ವಕೀಯೌ ಮಾತಾಪಿತರೌ—**ವೃದ್ಧರಾದ ತಮ್ಮ ಮಾತಾಪಿತೃಗಳನ್ನು.

**ಪುನಃ**—ಮತ್ತೆ, ಹಿಂದೆ ಅವರು ತಾರುಣ್ಯದೆಶೆಯಲ್ಲಿದ್ದಂತೆ.

**ಸತ್ಯಮಂತ್ರಾಃ :—ಅವಿತಥಮಂತ್ರಸಾಮರ್ಥ್ಯೋಪೇತಾಃ । ಪುರಶ್ಚರಣಾದ್ಯನುಷ್ಠಾನೇನ ಸಿದ್ಧಮಂತ್ರತ್ವಾದ್ಯದ್ಯತ್ಫಲಮುದ್ದಿಶ್ಯ ಮಂತ್ರಾಃ ಪ್ರಯುಜ್ಯಂತೇ ತತ್ತತ್ಫಲಂ ತಥೈವ ಸಂಪದ್ಯತೇ ॥** ಮಂತ್ರಗಳನ್ನು ಪುರಶ್ಚರಣಾದಿವಿಧಾನಗಳಿಂದ ಪಠಿಸಿ ಮಂತ್ರಸಿದ್ಧಿಯನ್ನು ಹೊಂದಿದವರು. ಇಂತಹವರು ಯಾವ ಉದ್ದಿಷ್ಟ ಫಲಪ್ರಾಪ್ತಿಗಾಗಿ ಮಂತ್ರಜಪಮಾಡಿದರೆ ಅಂತಹ ಫಲವು ತಪ್ಪದೆ ಲಭಿಸುವುದು ಎಂದಭಿಪ್ರಾಯವು.

**ಋಜೂಯವಃ—ಋಜುಕಾಮಾಃ । ಋಜುತಾಮಾತ್ಮನ ಇಚ್ಛಂತಃ**—ನ್ಯಾಯ ಅಥವಾ ಸತ್ಯಮಾರ್ಗವನ್ನವಲಂಬಿಸುವವರು. ಅಥವಾ ಸತ್ಯಮಾರ್ಗಪ್ರವರ್ತಕರಾಗಬೇಕೆಂದು ಇಚ್ಛಿಸುವವರು.

ಋಭವಃ—ಋಭುಶಬ್ದಕ್ಕೆ ಯಾಸ್ಕರು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿರುವರು—

(೧) **ಋಭವ ಉರು ಭಾಂತೀತಿ ವಾ ॥** ಉರು-ಬಹಳವಾಗಿ ಭಾಂತಿ-ಪ್ರಕಾಶಿಸುವವರು. ಆದ್ದರಿಂದ ಇವರಿಗೆ ಋಭುಗಳೆಂದು ಹೆಸರು—ಇಲ್ಲಿ ಉರು ಶಬ್ದದ ಅಂತ್ಯಾಕ್ಷರವಾದ ರುಕಾರವನ್ನೂ ಭಾಂತಿ ಶಬ್ದದ ಆದ್ಯಕ್ಷರವನ್ನೂ ಸೇರಿಸಿ ರುಭು ಅಥವಾ ಋಭು ಎಂದು ಶಬ್ದವಾಗಿರುವುದಾಗಿ ಕೆಲವರ ಅಭಿಪ್ರಾಯವು. ಅಹಃ+ರಾತ್ರಿಃ=ಹೋರಾ ಎಂಬಂತೆ

(೨) **ಋತೇನ ಭಾಂತೀತಿ ವಾ ॥** ಋತೇನ-ಎಂದರೆ ಸತ್ಯದಿಂದ ಅಥವಾ ಯಜ್ಞದಿಂದ ಪ್ರಕಾಶಿಸುವವರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು.

(೩) **ಋತೇನ ಭವಂತಿ ಇತಿ ವಾ**—ಋತೇನ ಎಂದರೆ ಸತ್ವದಿಂದ (ಸಾಮರ್ಥ್ಯದಿಂದ) ಇರುವವರಾದ್ದರಿಂದ ಎಂದರೆ ಸಾಮರ್ಥ್ಯವುಳ್ಳವರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು. ಋತೇನ ಎಂಬ ಶಬ್ದದ ಆದ್ಯಕ್ಷರವಾದ ಋಕಾರವೂ ಭವಂತಿಶಬ್ದದ ಆದ್ಯಕ್ಷರವಾದ ಭಕಾರವೂ ಸೇರಿ ಋಭುವೆಂದು ಆಗಿರುವುದೆಂದು ಕೆಲವರು ಹೇಳುವರು.

**ವಿಷ್ಟೀ—ವಿಷ್ಟ್ವೀ** । ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ವಿಷ್ಟ್ವೀಶಬ್ದವು ಪಠಿತವಾಗಿರುವುದರಿಂದ (ನಿ. ೩-೧) ಇದಕ್ಕೆ ಕರ್ಮವೆಂದರ್ಥವು. ಛಂದಸ್ಸಿನ ಅನುಕೂಲಕ್ಕಾಗಿ ವಿಷ್ಟ್ವೀಶಬ್ದದ ವಕಾರವು ಲೋಪವಾಗಿ ವಿಷ್ಟೀ ಎಂದಿರುವುದು. ಈ ಶಬ್ದಕ್ಕೆ ಭಾಷ್ಯಕಾರರು **ವ್ಯಾಪ್ತಿಯುಕ್ತಾಃ**—ವ್ಯಾಪ್ತಿಯುಳ್ಳವರು ಎಂದರ್ಥಮಾಡಿರುವರು. ವ್ಯಾಪ್ತಿಯೆಂದರೆ - **ಸರ್ವೇಷು ಕಾರ್ಯೇಷ್ವೇತದೀಯಸ್ಯ ಮಂತ್ರಸಾಮರ್ಥ್ಯಸ್ಯಾಪ್ರತಿಘಾತೋಽತ್ರ ವ್ಯಾಪ್ತಿರುಚ್ಯತೇ—**ಸಮಸ್ತಕಾರ್ಯಗಳಲ್ಲಿಯೂ ಇವರು ತಮ್ಮ ಮಂತ್ರಸಾಮರ್ಥ್ಯದಿಂದ ಅಪ್ರತಿಹತರಾದವರು ಎಂದರ್ಥವು

ಈ ಋಭುಗಳು ಹಿಂದೆ ಮನುಷ್ಯರಾಗಿದ್ದು ಅನಂತರ ದೇವತ್ವವನ್ನು ಪಡೆದ ವಿಷಯವನ್ನು ಈ ಋಕ್ಕು ವಿಶದವಾಗಿ ತಿಳಿಸುವುದು—

**ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ ।**
**ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ॥**

(ಋ. ಸಂ. ೧-೧೧೦-೪)

ಇದಕ್ಕೆ ಯಾಸ್ಕರ ನಿರುಕ್ತವು—

**ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ ವಾ ಮರ್ತಾಸಃ ಸಂತೋ ಅಮೃತತತ್ವಮಾನಶಿರೆ ಋಭವಃ ಸೂರಖ್ಯಾನಾ ವಾ ಸೂರಪ್ರಜ್ಞಾ ವಾ, ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ಕರ್ಮಭಿಃ ॥**

ಮುಖ್ಯಾಭಿಪ್ರಾಯವೇನೆಂದರೆ - ಸುಧನ್ವನ ಪುತ್ರರಾದ ಈ ಋಭುಗಳು ಹಿಂದೆ ಮನುಷ್ಯರಾಗಿದ್ದರು. ಅವರು ಸೂರ್ಯನಿಗೆ ಸಮಾನವಾದ ತಮ್ಮ ಪ್ರಜ್ಞೆ ಅಥವಾ ಬುದ್ಧಿಶಕ್ತಿಯಿಂದ ಬೇಗನೆ ಎಂದರೆ ಒಂದೇ ಸಂವತ್ಸರದಲ್ಲಿ ಸರ್ವಯಜ್ಞಗಳನ್ನೂ ಮಾಡಿ **ಅಮೃತತ್ವಂ** ಎಂದರೆ ದೇವತ್ವವನ್ನು (ಮರಣರಹಿತತ್ವವನ್ನು) ಪಡೆದರು ಎಂದು.

ಋಭುಶಬ್ದಕ್ಕೆ ಯಾಸ್ಕರು ಮತ್ತೊಂದರ್ಥವನ್ನೂ ಹೇಳಿರುವರು—

**ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ**—ಸೂರ್ಯನ ರಶ್ಮಿಗಳಿಗೂ ಋಭವಃ ಎಂದು ಹೇಳುವರು ಎಂದು. ಉದಾಹರಣೆಗಾಗಿ—

**ಉದ್ವತ್ಸಮಾ ಅಕೃಣೋತನಾ ತೃಣಂ ನಿವತ್ಸ್ವಪಃ ಸ್ವಪಸ್ಯಯಾ ನರಃ ।**
**ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥ ॥**

(ಋ. ಸಂ. ೧-೧೬೧-೧೧)

ಈ ಋಕ್ಕಿಗೆ ಯಾಸ್ಕರು—**ಅಗೋಹ್ಯ ಆದಿತ್ಯೋಽಗೂಹನೀಯಸ್ತಸ್ಯ ಯದಸ್ವಪಥ ಗೃಹೇ ಯಾವತ್ತತ್ರ ಭವಥ ನ ತಾವದಿಹ ಭವಥೇತಿ ॥** ಎಂದು ನಿರುಕ್ತವನ್ನು ಹೇಳಿರುವರು. ಭಾಷ್ಯಕಾರರೂ ಸಹ ಈ ಋಕ್ಕಿನ ಅರ್ಥವಿವರಣೆ ಮಾಡುವಾಗ ಋಭವಃ ಎಂಬ ಶಬ್ದಕ್ಕೆ—**ಋಭವಃ ಉರು ಪ್ರಭೂತಂ ಭಾಸಮಾನಾಃ ಋತೇನಾದಿತ್ಯೇನ ಭಾಸಮಾನಾ ವಾ ಋತೇನೋದಕೇನೋದಕಾರ್ಥಮುತ್ಪನ್ನಾ ವಾ**—ಎಂದು ಅರ್ಥಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಯುವಾನಾ**—' ಯು ಮಿಶ್ರಣಾಮಿಶ್ರಣಯೋಃ ' ಧಾತು, **' ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ '** (ಉ. ಸೂ. ೧-೧೫೪) ಯು ಮಿಶ್ರಣೇ, ವೃಷು ಸೇಚನೇ, ತಕ್ಷೂ ತನೂಕರಣೇ, ರಾಜೃ ದೀಪ್ತೌ, ಧನ್ವಿ ಗತೌ, ದ್ಯು ಅಭಿಗಮನೇ, ದಿವು ಕ್ರೀಡಾದೌ, ಈ ಧಾತುಗಳ ಮುಂದೆ ಕನಿನ್ ಪ್ರತ್ಯಯ ಬರುವುದು. ಎಂಬುದರಿಂದ ಯು ಧಾತುವಿನ ಮುಂದೆ ಕನಿನ್ ಪ್ರತ್ಯಯ ಬರುವುದು. ಯು+ಅನ್-**' ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ '** (ಪಾ. ಸೂ. ೬-೪-೭೭) ಎಂಬುದರಿಂದ ಉವಙಾದೇಶ, ಯುವನ್ ಎಂದಿರುವಾಗ ಇದರ ಮುಂದೆ ಬರುವ ದ್ವಿತೀಯಾ ದ್ವಿವಚನ ಔಟ್ ಪ್ರತ್ಯಯಕ್ಕೆ **' ಸುಪಾಂಸುಲುಕ್- '** (ಪಾ. ಸೂ. ೭-೧-೩೯) ಇತ್ಯಾದಿ ಸೂತ್ರದಿಂದ ಆಕಾರಾದೇಶ, ಯುವಾನಾ ಎಂದಾಗುವುದು. ನಿತ್ಸ್ವರದಿಂದ ಯುವನ್ ಶಬ್ದವು ಆದ್ಯುದಾತ್ತ.

**ಪಿತರಾ**— ಪೂರ್ವದಂತೆ ಇಲ್ಲಿಯೂ ವಿಭಕ್ತಿಗೆ ಆಕಾರಾದೇಶ.

**ಸತ್ಯಮಂತ್ರಾಃ**— ಸತ್ಯಶಬ್ದವು ಅಂತೋದಾತ್ತ, ಸತ್ಯಾಃ=ವ್ಯರ್ಥವಾಗದ, ಮನ್ತ್ರಾಃ=ಮನ್ತ್ರಸಾಮರ್ಥ್ಯಗಳು ಯೇಷಾಂ ತೇ–ಯಾರಿಗೆ ಇದೆಯೋ ಅವರು ಸತ್ಯಮನ್ತ್ರಾಃ, ಎಂದು ಬಹುವ್ರೀಹಿ, **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್'** (ಪಾ. ಸೂ. ೬–೨–೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು.

**ಋಜೂಯವಃ**— ಋಜು ಎಂಬಲ್ಲಿ ಭಾವಪ್ರಧಾನನಿರ್ದೇಶವು ವಿವಕ್ಷಿತ, ಋಜುತ್ವ ಎಂದರ್ಥ. ಋಜುತ್ವ-ಮಾತ್ಮನಃ ಇಚ್ಛಂತಿ ಎಂದು ವಿವಕ್ಷೆಮಾಡಿದರೆ **'ಸುಪ ಆತ್ಮನಃಕ್ಯಚ್'** (ಪಾ. ಸೂ ೩–೧–೮) ಇಚ್ಛಿಸುವವನ ಪ್ರಯೋಜನಕ್ಕಾಗಿ ಯಾವ ಕರ್ಮಕಾರಕವಿದೆಯೋ ಆ ಕರ್ಮವಾಚಕವಾದ ಸುಬಂತದ ಮುಂದೆ ಇಚ್ಛಿಸುತ್ತಾನೆ. ಎಂಬ ಅರ್ಥದಲ್ಲಿ ಕ್ಯಚ್ ಪ್ರತ್ಯಯವು ವಿಕಲ್ಪವಾಗಿ ಬರುವುದು. ಎಂದು ಸೂತ್ರಾರ್ಥ, ಇದರಿಂದ ಋಜು, ಎಂಬ ಕರ್ಮವಾಚಕ ಸುಬಂತದ ಮುಂದೆ ಕ್ಯಚ್ ಬರುವುದು, ಅಮ್ ಪ್ರತ್ಯಯಕ್ಕೆ **'ಸುಪೋಧಾತುಪ್ರಾತಿಪದಿಕಯೋಃ'** (ಪಾ. ಸೂ. ೨–೪–೭೧) ಎಂಬುದರಿಂದ ಲುಕ್. ಋಜುಯ, ಈಗ **'ಅಕೃತ್ಸಾರ್ವಧಾತಕಯೋರ್ದೀರ್ಘಃ'** (ಪಾ. ಸೂ. ೭–೪–೨೫) ಕೃತ್ಪ್ರತ್ಯಯ ಸಾರ್ವಧಾತುಕಪ್ರತ್ಯಯ ಭಿನ್ನವಾದ ಯಕಾರಾದಿ ಪ್ರತ್ಯಯವು ಪರದಲ್ಲಿರುವಾಗ ಅಜಂತವಾದ ಅಂಗಕ್ಕೆ ದೀರ್ಘ ಬರುವುದು. ಈಗ **'ಕ್ಯಾಚ್ಛಂದಸಿ'** (ಪಾ. ಸೂ. ೩–೨–೧೭೦) ಕ್ಯ ಎಂಬುದು ಕ್ಯಚ್–ಕ್ಯಙ್, ಕ್ಯಷ್, ಪ್ರತ್ಯಯ ಮೂರಕ್ಕೂ ಸಾಮಾನ್ಯ ಗ್ರಹಣವು. ಕ್ಯ ಪ್ರತ್ಯಯಾಂತವಾದ ಧಾತುವಿನ ಮುಂದೆ ಛಂದಸ್ಸಿನಲ್ಲಿ ತಾಚ್ಛೀಲ್ಯಾದ್ಯರ್ಥಗಳಲ್ಲಿ ಉ ಪ್ರತ್ಯಯ ಬರುವುದು, ಎಂದು ಸೂತ್ರಾರ್ಥ. ಇದರಿಂದ ಉ ಪ್ರತ್ಯಯ ಬಂದರೆ ಋಜೂಯ+ಉ, **'ಅತೋಲೋಪಃ'** (ಪಾ. ಸೂ. ೬–೪–೪೮) ಎಂಬುದರಿಂದ ಅಕಾರಕ್ಕೆ ಲೋಪ 'ಋಜೂಯು' ಎಂದಾಗುವುದು. ಪ್ರತ್ಯಯಸ್ವರ ಬರುವುದು, ಪ್ರಥಮಾ ಬಹುವಚನದಲ್ಲಿ 'ಋಜೂಯವಃ' ಎಂದಾಗುವುದು.

**ವಿಷ್ಟೀ**— ವಿಷ್ಲೃವ್ಯಾಪ್ತೌ **'ಕ್ತಿಚ್‌ಕ್ತೌ ಚ ಸಂಜ್ಞಾಯಾಮ್'** (ಪಾ. ಸೂ. ೩–೩–೧೭೪) ಆಶೀರರ್ಥದಲ್ಲಿ ಸಂಜ್ಞೆ ತೋರುವಾಗ ಧಾತುವಿನ ಮುಂದೆ ಕ್ತಿಚ್–ಕ್ತ ಎಂಬ ಪ್ರತ್ಯಯಗಳು ಬರುವುವು ಎಂಬುದರಿಂದ ಕ್ತಿಚ್ ಪ್ರತ್ಯಯ. ವಿಷ್+ತಿ, ಈಗ **'ಆರ್ಧಧಾತುಕಸ್ಯೇಡ್ವಲಾದೇಃ'** (ಪಾ. ಸೂ. ೭–೨–೩೫) ಎಂಬುದರಿಂದ ಇಡಾಗಮವು ತಿಗೆ ಪ್ರಾಪ್ತವಾಗುವುದು. ಆದರೆ **'ತಿ ತುತ್ರ, ತ, ಥ, ಸಿ, ಸು ಸರ, ಕ, ಸೇಷು ಚ'** (ಪಾ. ಸೂ. ೭–೨೯) ಈಹತ್ತು ಕೃತ್ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ, ಎಂದು ನಿಷೇಧ ಬರುವುದರಿಂದ ಇಟ್ ಬರುವುದಿಲ್ಲ. **'ಷ್ಟುನಾಷ್ಟುಃ'** (ಪಾ. ೮–೪–೪೧) ಎಂಬ ಷ್ಟುತ್ವದಿಂದ ತಕಾರಕ್ಕೆ ಟಕಾರ, ವಿಷ್ಟಿ–ಶಬ್ದದ ಮುಂದೆ ಜಸ್ ವಿಭಕ್ತಿಯನ್ನಿಡುವುದು. ಅದಕ್ಕೆ **'ಇಯಾ, ಡಿಯಾಜೀಕಾರಾಣಾಮುಪಸಂಖ್ಯಾನಂ'** (ಪಾ. ಸೂ. ೭–೧–೩೯ ವಾ. ೧) ಸುಪ್ಪಿಗೆ ಇಯಾ, ಡಿಯಾಚ್, ಈ–ಎಂಬ ಮೂರು ಆದೇಶಗಳು ಬರುವುವು ಎಂಬುದರಿಂದ ಇಲ್ಲಿ 'ಈ' ಆದೇಶ. ಇದು **'ಅಲೋಽನ್ತ್ಯಸ್ಯ'** (ಪಾ. ಸೂ. ೧–೧–೫೨) ಸ್ಥಾನ ಷಷ್ಠ್ಯಂತ ಪದವನ್ನುಚ್ಚರಿಸಿ ವಿಧಿಸಿರುವ ಕಾರ್ಯವು ಷಷ್ಠ್ಯಂತ ಪದ ಬೋಧ್ಯವಾದ ಶಬ್ದದ ಕೊನೆಯ ವರ್ಣಕ್ಕೆ ಬರುವುದು. ಎಂಬುದರಿಂದ ಜಸ್‌ನ ಕೊನೆಯ ವರ್ಣವಾದ ಸಕಾರಕ್ಕೆ ಬರುವುದು. ವಿಷ್ಟಿ+ಅ+ಈ ಎಂದಾಯ್ತು. **'ಆದ್ಗುಣಃ'** (ಪಾ. ಸೂ. ೬–೧–೮೭) ಎಂಬುದರಿಂದ ಗುಣ ವಿಷ್ಟಿ+ಏ **'ಪ್ರಥಮಯೋಃ ಪೂರ್ವಸವರ್ಣಃ'** (ಪಾ. ಸೂ. ೬–೧–೧೦೨) ಅ–ಇ–ಉ–ಋ–ಲೃಗಳ ಮುಂದೆ ಪ್ರಥಮಾ

ದ್ವಿತೀಯಾ ವಿಭಕ್ತಿಗಳ ಸ್ವರವು ಪರದಲ್ಲಿದ್ದರೆ ಪೂರ್ವ ಪರಗಳ ಸ್ಥಾನಲ್ಲಿ ಪೂರ್ವಸವರ್ಣದೀರ್ಘವು ಏಕಾದೇಶವಾಗಿ ಬರುವುದು ಎಂಬುದರಿಂದ ಇ+ಏಗಳ ಸ್ಥಾನದಲ್ಲಿ ಪೂರ್ವಸವರ್ಣದೀರ್ಘ ಬಂದರೆ, ವಿಷ್ಟೀ ಎಂದಾಗುವುದು. ಆದರೆ ಜಸ್ ಪರದಲ್ಲಿರುವಾಗ, ಪೂರ್ವಸವರ್ಣದೀರ್ಘಕ್ಕೂ '**ಜಸಿ ಚ**' (ಪಾ. ಸೂ. ೭-೩-೧೦೯) ಜಸ್ ಪರದಲ್ಲಿರುವ ಹ್ರಸ್ವ ವಾದ ಇಕ್ಕನ್ನು ಕೊನೆಯಲ್ಲಿ ಹೊಂದಿರುವ ಅಂಗದ ಮುಂದೆ ಗುಣ ಬರುವುದು ಎಂಬುದರಿಂದ ಗುಣಕ್ಕೂ ಪ್ರಾಪ್ತಿ ಇದೆ. ನ್ಯಾಯವಾಗಿ, '**ವಿಪ್ರತಿಷೇಧೇ ಪರಂ ಕಾರ್ಯಮ್**' (ಪಾ. ಸೂ. ೧-೪-೨) ಎಂಬುದರಿಂದ ಗುಣವೇ ಬರಬೇಕಾಗು ವುದು, ಆದರೂ, '**ಸಂಜ್ಞಾಪೂರ್ವಕೋ ವಿಧಿರನಿತ್ಯಃ**' (ಪರಿಭಾ. ೯೫) ಎಂಬುದರಿಂದ ಹ್ರಸ್ವ-ಗುಣ ಎಂಬ ಸಂಜ್ಞಾ ಪೂರ್ವಕವಾದ ಗುಣವಿಧಿಯು ಅನಿತ್ಯವಾದುದರಿಂದ, ಅದು ಬರುವುದಿಲ್ಲ. ಇಲ್ಲಿ ಈಕಾರದೇಶ 'ಅದ್ಗುಣಃ' ಎಂಬ ಗುಣಗಳಿಗೆ ಪ್ರವೃತ್ತಿಯನ್ನು ಉಪಪಾದಿಸದೇ ಇದ್ದರೂ, ಪೂರ್ವೋಕ್ತ ರೀತಿಯಲ್ಲಿ '**ಜಸಿಚ**' ಎಂಬ ಗುಣವಿಧಾಯಕವು ಅನಿತ್ಯವಾದ್ದರಿಂದ ಪ್ರವೃತ್ತಿಸುವುದಿಲ್ಲ. ಪೂರ್ವಸವರ್ಣದೀರ್ಘ ಬರುವುದು ಎಂದು ಹೇಳಿದರೆ ವಿಷ್ಟೀಃ, ಎಂಬ ವಿಸರ್ಗಕ್ಕೆ ಶ್ರವಣ ಬರಬೇಕಾಗುವುದು.

**ಅಕ್ರತ**—ಡುಕೃಞ್ ಕರಣೆ, ಧಾತು. ಲುಙ್-ಕೃ+ಲುಙ್, '**ಚ್ಲಿ ಲುಙಿ**' (ಪಾ. ಸೂ. ೩-೧-೪೩) ಎಂಬುದರಿಂದ ಚ್ಲಿ ಬರುವುದು. ಚಕಾರಕ್ಕೆ ಇತ್ಸಂಜ್ಞೆ, ಲೋಪ, ಲಿ, ಇರುವುದು. ಅದಕ್ಕೆ '**ಮನ್ತ್ರೇ ಘಸಹ್ವರಣ ಶವೃದಹಾದ್ವೃಚ್ಕೃಗಮಿಜನಿಭ್ಯೋಲೇಃ**' (ಪಾ. ಸೂ. ೨-೪-೮೦) ಅದ ಧಾತುವಿಗೆ ಆದೇಶವಾಗಿ ಬಂದ ಘಸ್ಲೃ, ಹ್ವೃ ಕೌಟಿಲ್ಯೇ ಎಂಬುದಕ್ಕೆ ಗುಣವನ್ನೂ ಮಾಡಿ ಉಚ್ಚಾರಣಾರ್ಥಕ ಅಕಾರವನ್ನು ಸೇರಿಸಿ ಹ್ವರ, ಎಂದು ಉಪಾತ್ತ ವಾಗಿದೆ, ಣಶ ಅದರ್ಶನೇ, ವೃ ಎಂಬ ನಿರನುಬಂಧಕ ನಿರ್ದೇಶದಿಂದ ವೃಙ್ ವರಣೆ, ವೃಞ್ ಸಂಭಕ್ತೌ ಎರಡಕ್ಕೂ ಗ್ರಹಣವು. ದಹ ಭಸ್ಮೀಕರಣೇ ಆತ್ ಎಂಬುದರಿಂದ ಪ್ರಾ ಪೂರಣೇ ಮೊದಲಾದ ಆಕಾರಾಂತ ಧಾತುಗಳು ಉಪಾತ್ತ ವಾಗಿವೆ. ವೃಜೀ ವರ್ಜನೇ, ಡುಕೃಞ್ ಕರಣೇ, ಗಮ್ಲೃ ಗತೌ, ಜನೀ ಪ್ರಾದುರ್ಭಾವೇ, ಇವುಗಳ ಮುಂದೆ ಇರುವ ಲಿಗೆ ಮಂತ್ರದಲ್ಲಿ ಲುಕ್ ಬರುವುದು. ಎಂಬುದರಿಂದ ಲುಕ್ ಬರುವುದು. ಕೃ+ಲುಙ್ ಲುಙ್ಙಗೆ ಆತ್ಮನೇ ಪದ ಪ್ರಥಮಪುರುಷ ಝ ಆದೇಶ. ಕೃ+ಝ, '**ಆತ್ಮನೇಪದೇಷ್ವನತಃ**' (ಪಾ. ಸೂ. ೭-೧-೫) ಎಂಬುದರಿಂದ ಝ್‌ಗೆ ಅತ್, ಆದೇಶ. ಕೃ+ಅತ, '**ಇಕೋ ಯಣಚಿ**' (ಪಾ. ಸೂ. ೬-೧-೭೭) ಎಂಬುದರಿಂದ ಯಣಾದೇಶ, '**ಲುಙ್ ಲಙ್ಲೃಙ್ಕ್ಷ್ವಡುದಾತ್ತಃ**' (ಪಾ. ಸೂ. ೬-೪-೭೧) ಎಂಬುದರಿಂದ ಅಡಾಗಮ. ಅಕ್ರತ ಎಂದಾಗುವುದು. '**ತಿಙ್ಙತಿಙಃ**' (ಪಾ. ಸೂ. ೮ ೧-೨೮) ಎಂಬುದರಿಂದ ಸರ್ವಾನುದಾತ್ತ. ॥ ೪ ॥

॥ **ಸಂಹಿತಾಪಾಠಃ** ॥

## ಸಂ ವೋ ಮದಾಸೋ ಅಗ್ಮತೇಂದ್ರೇಣ ಚ ಮರುತ್ವತಾ । ಆದಿತ್ಯೇಭಿಶ್ಚ ರಾಜಭಿಃ ॥ ೫ ॥

॥ ಪದಪಾಠಃ ॥

## ಸಂ । ವಃ । ಮದಾಸಃ । ಅಗ್ಮತ । ಇಂದ್ರೇಣ । ಚ । ಮರುತ್ವತಾ ॥
## ಆದಿತ್ಯೇಭಿಃ । ಚ । ರಾಜಽಭಿಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಋಭವೋ ವೋ ಯುಷ್ಮಾಕಂ ಸಂಬಂಧಿನೋ ಮದಾಸೋ ಮದಹೇತವಃ ಸೋಮಾ ಇಂದ್ರೇಣ ಚಾದಿತ್ಯೇಭಿರಾದಿತ್ಯೈಶ್ಚ ಸಮಗ್ಮತ । ಸಂಗತಾಃ । ಋಭೂಣಾಮಿಂದ್ರಾದಿತ್ಯೈಃ ಸಹ ಸೋಮಪಾನಂ ತೃತೀಯಸವನೇಽಸ್ತಿ । ಅತ ಏವಾವಾಹನನಿಗದ ಆಶ್ವಲಾಯನೇನೈವಂ ಪಠಿತಃ । ಇಂದ್ರಮಾದಿತ್ಯವಂತಮೃಭುಮಂತಂ ವಿಭುಮಂತಂ ವಾಜವಂತಂ ಬೃಹಸ್ಪತಿಮಂತಂ ವಿಶ್ವದೇವ್ಯಾವಂತ-ಮಾವಹೇತಿ । ಆ. ೫-೩ । ಕೀದೃಶೇನೇಂದ್ರೇಣ । ಮರುತ್ವತಾ ಮರುದ್ಭಿರ್ಯುಕ್ತೇನ । ಅತ ಏವ ಮಂತ್ರಾಂತರಮೇವಮಾಮ್ನಾಯತೇ । ಮರುದ್ಭಿರಿಂದ್ರ ಸಖ್ಯಂ ತೇ ಅಸ್ತು । ಋಗ್ವೇ ೮-೯೬-೭ । ಇತಿ । ಕೀದೃಶೈರಾದಿತ್ಯೇಭಿಃ । ರಾಜಭಿರ್ದೀಪ್ಯಮಾನೈಃ ॥ ಮದಾಸಃ । ಮಾದ್ಯಂತ್ಯೇಭಿರಿತಿ ಮದಾಃ ಸೋಮಾಃ । ಮದೋಽನುಪಸರ್ಗೇ । ಪಾ. ೩-೩-೬೭ । ಇತ್ಯಪ್ । ತಸ್ಯ ಪಿತ್ತ್ವಾದನುದಾತ್ತತ್ವಂ । ಧಾತುಸ್ವರ ಏವ ಶಿಷ್ಯತೇ । ಆಜ್ಜಸೇರಸುಗಿತಿ ಜಸೋಽಸುಗಾಗಮಃ । ಅಗ್ಮತ । ಗಮೇಃ ಸಂಪೂರ್ವಾಲ್ಲುಙ್ । ಸಮೋ ಗಮ್ಯೃಚ್ಛೀತ್ಯಾದಿನಾ । ಪಾ. ೧-೩-೨೯ । ಆತ್ಮನೇಪದಂ । ಝಸ್ಯಾದಾದೇಶಃ । ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ಗಮಹನೇತ್ಯಾದಿನಾ । ಪಾ. ೬-೪-೯೮ । ಉಪಧಾಲೋಪಃ । ವ್ಯವಹಿತಾಶ್ಚೇತಿ ಸಮೋ ವ್ಯವಹಿತಪ್ರಯೋಗಃ । ನಿಘಾತಃ । ಮರುತ್ವತಾ । ಮರುತೋಽಸ್ಯ ಸಂತೀತಿ ಮರುತ್ವಾನ್ । ತಸೌ ಮತ್ವರ್ಥ ಇತಿ ಭಸಂಜ್ಞಯಾ ಪದಸಂಜ್ಞಾಯಾ ಬಾಧಿತತ್ವಾಜ್ಜಶ್ತ್ವಾಭಾವಃ । ಝಯಃ । ಪಾ. ೮-೨-೧೦ । ಇತಿ ಮತುಪೋ ವತ್ವಂ । ಆದಿತ್ಯೇಭಿಃ । ಬಹುಲಂ ಛಂದಸೀತಿ ಭಿಸ ಐಸಾದೇಶಾಭಾವೇ ಬಹುವಚನೇ ಝಲ್ಯೇದಿತ್ಯೇವಂ । ರಾಜಭಿಃ । ರಾಜನ್ಶಬ್ದಸ್ಯ ಕನಿನಂತತ್ವೇನ ನಿತ್ತ್ವಾದಾದ್ಯುದಾತ್ತತ್ವಂ ॥ ೧ ॥

॥ ಪ್ರತಿಪದಾರ್ಥ ॥

(**ಹೇ ಋಭವಃ**—ಎಲೈ ಋಭುಗಳೇ) । **ಮರುತ್ವತಾ**—ಮರುತರೆಂಬ ದೇವತೆಗಳಿಂದ ಯುಕ್ತನಾದ । **ಇಂದ್ರೇಣ ಚ**—ಇಂದ್ರನಿಂದಲೂ । **ರಾಜಭಿಃ**—ಪ್ರಕಾಶಮಾನರಾದ । **ಆದಿತ್ಯೇಭಿಃ ಚ**—ಆದಿತ್ಯರಿಂದಲೂ (ಯುಕ್ತರಾದ) । **ವಃ**—ನಿಮ್ಮ (ಸಂಬಂಧವಾದ) । **ಮದಾಸಃ**—ಮದವನ್ನುಂಟುಮಾಡುವ (ಸೋಮರಸಗಳು) । **ಸಂ ಅಗ್ಮತ**—ಸೇರಿಸಲ್ಪಟ್ಟಿವೆ.

॥ ಭಾವಾರ್ಥ ॥

ಎಲೈ ಋಭುದೇವತೆಗಳೇ, ಮರುತ್ತುಗಳು, ಇಂದ್ರ, ಜಾಜ್ವಲ್ಯಮಾನರಾದ ಆದಿತ್ಯರು, ಇವರುಗಳಿಂದ ಯುಕ್ತರಾದ ನಿಮಗಾಗಿ, ಮದವನ್ನುಂಟುಮಾಡುವ ಸೋಮರಸವು ಸಿದ್ಧಪಡಿಸಲ್ಪಟ್ಟಿದೆ.

## English Translation.

O Ribhus, the exhilerating Soma juices are ready to be offered to you along with Indra accompanied by the Maruths and along with the brilliant Adityas.

॥ ವಿಶೇಷವಿಷಯಗಳು ॥

ತೃತೀಯಸವನವೆಂಬ ಸಾಯಂಕಾಲದಲ್ಲಿ ಸೋಮರಸವನ್ನು ಹಿಂಡಿ ಋಭುಗಳಿಗೆ ಅರ್ಪಿಸುವ ಕಾಲದಲ್ಲಿ ಆದಿತ್ಯಸಹಿತನಾದ ಇಂದ್ರ, ಋಭುಗಳಾದ ಋಭು, ವಿಭು, ವಾಜ, ಬೃಹಸ್ಪತಿ, ವಿಶ್ವೇದೇವತೆಗಳು ಇವರನ್ನುದ್ದೇಶಿಸಿ ಸೋಮರಸವನ್ನು ಅರ್ಪಿಸುವರು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದಲ್ಲಿ—ಇಂದ್ರಮಾದಿತ್ಯವಂತಮೃಭುಮಂತಂ ವಿಭುಮಂತಂ ವಾಜವಂತಂ ಬೃಹಸ್ಪತಿಮಂತಂ ವಿಶ್ವೇದೇವ್ಯಾವಂತಮಾವಹೇತಿ (ಆ. ೫-೩) ಎಂದು ಹೇಳಲ್ಪಟ್ಟಿರುವುದು.

**ಸಂ ಆಗ್ಮತ**—ಸ್ಕಂದಸ್ವಾಮಿಯು ಈ ಶಬ್ದಗಳಿಗೆ ಸಂಗಚ್ಛಧ್ವಂ ಎಂದರೆ ಸೋಮಪಾನಕ್ಕಾಗಿ ಬನ್ನಿ ಎಂದು ಅರ್ಥಮಾಡಿರುವರು.

**ಮದಾಸಃ—ಮಾದ್ಯಂತ್ಯೇಭಿರಿತಿ ಮದಾಃ ಮದಹೇತವಃ ಸೋಮಾಃ ।** ಸೋಮಪಾನವು ಮದವನ್ನುಂಟುಮಾಡುವುದರಿಂದ ಸೋಮರಸಕ್ಕೆ ಮದಾಸಃ ಎಂದು ಹೇಳುವರು.

**ಮರುತ್ವತಾ—ಮರುತೋಽಸ್ಯ ಸಂತೀತಿ ಮರುತ್ವಾನ್ । ಮರುದ್ಭಿರ್ಯುಕ್ತೇನ ।** ಮರುದ್ದೇವತೆಗಳಿಂದ ಸಹಿತನಾದ (ಇಂದ್ರನೊಡನೆ)

**ಆದಿತ್ಯೇಭಿಃ**—ಆದಿತ್ಯಶಬ್ದಕ್ಕೆ ಯಾಸ್ಕರು ಈ ರೀತಿ ನಿರ್ವಚನವನ್ನೂ ಹೇಳಿರುವರು (ನಿ. ೨-೧೩)—

(೧) **ಆದಿತ್ಯಃ ಕಸ್ಮಾದಾದತ್ತೇ ರಸಾನಾದತ್ತೇ ಭಾಸಂ ಜ್ಯೋತಿಷಾಮಾದೀಪ್ತೋ ಭಾಸೇತಿ ವಾದಿತೇಃ ಪುತ್ರ ಇತಿ ವಾ ॥** ಎಂದರೆ ಆದತ್ತ ಇತಿ ಆದಿತ್ಯಃ ಸ್ವೀಕರಿಸುವವನು ಗ್ರಹಿಸುವವನು ಅಥವಾ ಆಕರ್ಷಿಸುವವನು ಎಂದು ಆದಿತ್ಯಶಬ್ದಕ್ಕೆ ಅರ್ಥವು. ಏನನ್ನು ಗ್ರಹಿಸುವನು ಎಂದರೆ **ರಸಾನ್** ಎಂದರೆ ಉದಕವನ್ನು ರಶ್ಮಿಗಳ ಮೂಲಕ ಆಕರ್ಷಿಸುವವನು. ಹೀಗೆ ಆಕರ್ಷಿಸಲ್ಪಟ್ಟ ಉದಕವು ಮೇಘರೂಪದಿಂದ ವೃಷ್ಟಿಯನ್ನುಂಟುಮಾಡುವುದು. ಆದುದರಿಂದ ಸಮುದ್ರಾದಿ ಜಲಾಶಯಗಳಿಂದ ರಶ್ಮಿಗಳ ಮೂಲಕ ಉದಕವನ್ನು ಆಕರ್ಷಿಸುವುದರಿಂದ ಆದಿತ್ಯನೆಂದು ಹೆಸರು.

(೨) **ಅಥವಾ—ಆದತ್ತೇ ಭಾಸಂ ಜ್ಯೋತಿಷಾಂ—**ಸೂರ್ಯನು ಉದಯಿಸುವುದರಿಂದ ಸೂರ್ಯನ ಪ್ರಕಾಶವು ಇತರ (ಚಂದ್ರಾದಿಗಳೇ ಮೊದಲಾದ) ಎಲ್ಲಾ ವಸ್ತುಗಳ ಪ್ರಕಾಶವನ್ನು ತಗ್ಗಿಸಿ ಆ ಪ್ರಕಾಶವನ್ನು ಆಕರ್ಷಿಸುವುದರಿಂದ ಆದಿತ್ಯನೆಂದು ಹೆಸರು.

(೩) **ಅಥವಾ—ಆದೀಪ್ತೋ ಭಾಸೇತಿ ವಾ—**ಎಲ್ಲಾ ಸ್ಥಳಗಳಲ್ಲಿಯೂ ಅಥವಾ ಸುತ್ತಲೂ ಆವರಿಸಿ ಪ್ರಕಾಶಿಸುವುದರಿಂದ ಆದಿತ್ಯನೆಂದು ಹೆಸರು.

(೪) **ಅಥವಾ—ಅದಿತೇಃ ಪುತ್ರ ಇತಿ ವಾ—**ದೇವಮಾತೆಯಾದ ಅದಿತಿದೇವಿಯ ಪುತ್ರನಾದುದರಿಂದ ಆದಿತ್ಯನೆಂದು ಹೆಸರು.

**ರಾಜಭಿಃ—ದೀಪ್ಯಮಾನೈಃ** । ಪ್ರಕಾಶಮಾನವಾದ, brilliant, shining &c.

॥ ವ್ಯಾಕರಣಪ್ರಕ್ರಿಯಾ ॥

**ಮದಾಸಃ—**ಮಾದ್ಯತಿ ಏಭಿರಿತಿ ಮದಾಸ್ಸೋಮಾಃ, ಈ ಸೋಮಗಳಿಂದ ಹರ್ಷವನ್ನು ಹೊಂದುತ್ತಾನೆ. ಆದ್ದರಿಂದ ಮದಾಃ ಎಂದು ಸೋಮನಾಮಧೇಯವಾಗುವುದು, 'ಮದೀ ಹರ್ಷೇ' ಧಾತು, ಇದರ ಮುಂದೆ **'ಮದೋಽನುಪಸರ್ಗೇ'** (ಪಾ. ಸೂ. ೩-೩-೬೭) ಉಪಸರ್ಗ ಭಿನ್ನವಾದ ಸುಬಂತವು ಉಪಪದವಾಗಿರುವಾಗ ಮದ ಧಾತುವಿನ ಮುಂದೆ ಅಪ್ ಪ್ರತ್ಯಯ ಬರುವುದು ಎಂಬುದರಿಂದ ಅಪ್ ಬಂದರೆ ಮದ್+ಅ. ಪ್ರತ್ಯಯವು ಪಕಾರೇತ್ಸಂಜ್ಞಕವಾದ್ದರಿಂದ ಅನುದಾತ್ತ. ಧಾತುಸ್ವರವೇ ಉಳಿಯುವುದು. ಮದ ಶಬ್ದದ ಮುಂದೆ ಪ್ರಥಮಾವಿಭಕ್ತಿ ಜಸ್ಸನ್ನಿಟ್ಟರೆ ಮದ+ಜಸ್, ಎಂದಿರುವಾಗ **'ಆಜ್ಜಸೇರಸುಕ್'** (ಪಾ. ಸೂ. ೭-೧-೫೦) ಹ್ರಸ್ವ ಅವರ್ಣಾಂತವಾದ ಅಂಗದ ಮುಂದೆ ಇರುವ ಜಸ್ಸಿಗೆ ಅಸುಕ್ ಆಗಮ ಬರುವುದು. ಎಂಬುದರಿಂದ ಜಸ್ಸಿಗೆ ಅಸುಕ್ ಆಗಮ. ಅದು ಕಿತ್ತಾದ್ದರಿಂದ **'ಆದ್ಯಂತೌ ಟಕಿತೌ'** (ಪಾ. ಸೂ. ೧-೧-೪೬) ಎಂಬ ಪರಿಭಾಷಾನುಸಾರ, ಜಸ್ಸಿಗೆ ಅಂತಾವಯವಾಗಿ ಬರುವುದು. ಮದ+ಅಸಸ್, ಪೂರ್ವಸವರ್ಣದೀರ್ಘ. ರುತ್ವ ವಿಸರ್ಗಗಳು. ಮದಾಃ ಎಂದಾಗುವುದು.

**ಅಗ್ಮತ—**ಸಂ ಎಂಬ ಉಪಸರ್ಗಪೂರ್ವಕವಾದ 'ಗಮ್ಲೃ ಗತೌ' ಧಾತುವಿನ ಮುಂದೆ ಲುಙ್. ಗಮ್+ಲುಙ್ **'ಸಮೋಗಮ್ಯೃಚ್ಛಿಭ್ಯಾಮ್'** (ಪಾ. ಸೂ. ೧-೩-೨೯) ಇಲ್ಲಿ **'ಅಕರ್ಮಕಾಚ್ಚ'** (ಪಾ. ಸೂ. ೧-೩-೨೬) ಎಂಬುದೂ, **'ಅನುದಾತ್ತಙಿತ ಆತ್ಮನೇಪದಂ'** (ಪಾ. ಸೂ. ೧-೩-೧೨) ಎಂಬುದರಿಂದ ಆತ್ಮನೇಪದಂ ಎಂಬುದೂ ಅನುವೃತ್ತವಾಗುವುದು. ಸಂ ಎಂಬ ಉಪಸರ್ಗಪೂರ್ವಕಗಳಾದ ಮತ್ತು ಅಕರ್ಮಕಗಳಾದ ಗಮ್ ಧಾತು, ಋ ಧಾತುಗಳ ಮುಂದೆ ಇರುವ ಲಕಾರದ ಸ್ಥಾನದಲ್ಲಿ ಆತ್ಮನೇಪದ ಬರುವುದು ಎಂಬುದರಿಂದ ಲುಙ್ ಸ್ಥಾನದಲ್ಲಿ ಪ್ರಥಮ ಪುರುಷ ಬಹುವಚನವನ್ನು ವಿವಕ್ಷೆಮಾಡಿದಾಗ ಆತ್ಮನೇಪದ ಸಂಜ್ಞಕವಾದ ಝ ಆದೇಶ ಬರುವುದು. ಗಮ್+ಚ್ಲಿ+ಝ, **'ಆತ್ಮನೇಪದೇಷ್ವನತಃ'** (ಪಾ. ಸೂ ೭-೧-೫) ಎಂಬುದರಿಂದ ಝ್‌ಗೆ ಅತ್ ಆದೇಶ **'ಮನ್ತ್ರೇಘಸ ಹ್ವರಣ-'** (ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್, ಗಮ್+ಅತ, ಈಗ-**'ಗಮ ಹನ ಜನ ಖನ ಘಸಾಂ ಲೋಪಃ ಕ್ಙಿತ್ಯನಙಿ'** (ಪಾ. ಸೂ. ೬-೪-೯೮) ಅಜಾದಿಯಾಗಿ ಕಿತ್ತು ಅಥವಾ ಙಿತ್ತು ಆದ ಪ್ರತ್ಯಯವು ಪರದಲ್ಲಿರುವಾಗ ಗಮಾದಿ ಧಾತುಗಳ ಉಪಾಂತ್ಯ ವರ್ಣಕ್ಕೆ ಲೋಪ ಬರುವುದು. ಆದರೆ ಅಙ್ ಪ್ರತ್ಯಯ ಪರದಲ್ಲಿರು

ವಾಗ ಈ ಲೋಪ ಬರುವುದಿಲ್ಲ ಎಂಬುದರಿಂದ, ಗಮ್ ಧಾತುವಿನ ಅಕಾರಕ್ಕೆ ಲೋಪ, ಅಡಾಗಮ, 'ಅಗ್ಮತ' ಎಂದಾಗುವುದು, **'ತೇ ಪ್ರಾಗ್ಧಾತೋಃ'** (ಪಾ. ಸೂ. ೧-೪-೮೦) ಗತ್ಯುಪಸರ್ಗಗಳು ಧಾತುವಿಗೆ ಅವ್ಯವಹಿತ ಪೂರ್ವದಲ್ಲಿ ಪ್ರಯೋಗಿಸಲ್ಪಡಬೇಕು ಎಂಬುದರಿಂದ ಸಂ ಎಂಬುದಕ್ಕೆ ಅವ್ಯವಹಿತವಾಗಿ ಪ್ರಯೋಗವು ಯದ್ಯಪಿ ಇರಬೇಕು. ಆದರೂ **'ಛಂದಸಿ ಪರೇಽಪಿ'** (ಪಾ. ಸೂ. ೧-೪-೮೧) **'ವ್ಯವಹಿತಾಶ್ಚ'** (ಪಾ. ಸೂ. ೧-೪-೮೨) ವೇದದಲ್ಲಿ ಗತ್ಯುಪಸರ್ಗಗಳು ಪರದಲ್ಲಿಯೂ ವ್ಯವಹಿತವಾಗಿಯೂ ಬರುವುವು ಎಂಬುದರಿಂದ ಸಂ ಎಂಬುದಕ್ಕೆ ಇಲ್ಲಿ ವ್ಯವಹಿತವಾದ ಪ್ರಯೋಗ ಬಂದಿರುವುದು. 'ತಿಙ್ಙತಿಙಃ' ಎಂಬುದರಿಂದ ಸರ್ವಾನುದಾತ್ತ.

**ಮರುತ್ವತಾ**—ಮರುತಃ ಅಸ್ಯ ಸನ್ತೀತಿ ಮರುತ್ವಾನ್-**'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್'** (ಪಾ. ಸೂ. ೫-೨-೯೪) ಎಂಬುದರಿಂದ ಮರುತಃ ಎಂಬುದರ ಮುಂದೆ ಮತುಪ್ ಪ್ರತ್ಯಯ. ಪ್ರಾತಿಪದಿಕಾವಯವವಾದ ಜಸ್ಸಿಗೆ ಲುಕ್. ಲುಪ್ತ ಪ್ರತ್ಯಯವನ್ನು ನಿಮಿತ್ತಮಾಡಿಕೊಂಡು ಪದಸಂಜ್ಞೆ ಇರುವುದರಿಂದ **'ಝಲಾಂ ಜಶೋಽನ್ತೇ'** (ಪಾ. ಸೂ. ೮-೨-೩೯) ಎಂಬುದರಿಂದ ಜಶ್ತ್ವವು ಪ್ರಾಪ್ತವಾಗುವುದು. ಆದರೆ **'ತಸೌ ಮತ್ವರ್ಥೇ'** (ಪಾ. ಸೂ. ೧-೪-೧೯) ಮತ್ವರ್ಥ ಪ್ರತ್ಯಯ ಪರದಲ್ಲಿರುವಾಗ ತಕಾರಾಂತ ಸಕಾರಾಂತ ಪದಗಳು ಭ ಸಂಜ್ಞೆಯನ್ನು ಹೊಂದುವುವು. ಎಂಬುದರಿಂದ ಭಸಂಜ್ಞೆ ಬರುವುದರಿಂದ ಈ ಭಸಂಜ್ಞೆಯಿಂದ ಪದ ಸಂಜ್ಞೆಯು ಬಾಧಿತವಾಗುವುದು. ಆದ್ದರಿಂದ ಮರುತ್ ಎಂಬುದು ಪದವಾಗುವುದಿಲ್ಲ. ಆದಕಾರಣ ಜಶ್ತ್ವ ಬರುವುದಿಲ್ಲ. **'ಝಯಃ'** (ಪಾ. ಸೂ. ೮-೨-೧೦) ಝಯ್ ಪ್ರತ್ಯಾಹಾರದಲ್ಲಿ ಸೇರಿರುವ ವರ್ಣಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದದ ಮುಂದೆ ಇರುವ ಮತುಪ್ಪಿನ ಮಕಾರಕ್ಕೆ ವಕಾರ, ತೃತೀಯಾ ಏಕವಚನ ಟಾ ಪ್ರತ್ಯಯ, ಮರುತ್ವತಾ ಎಂದಾಗುವುದು.

**ಆದಿತ್ಯೇಭಿಃ**—**'ಬಹುಲಂ ಛಂದಸಿ'** (ಪಾ. ಸೂ. ೭-೧-೧೦) ಎಂಬುದರಿಂದ ಭಿಸ್ಸಿಗೆ ಐಸಾದೇಶ ಬರುವುದಿಲ್ಲ. **'ಬಹುವಚನೇ ಝಲ್ಯೇತ್'** (ಪಾ. ಸೂ. ೭-೩-೧೦೩) ಎಂಬುದರಿಂದ ಏತ್ವ ಬರುವುದು.

**ರಾಜಭಿಃ**—ರಾಜೃ ದೀಪ್ತೌ ಧಾತು. **'ಕನಿನ್ಯುವೃಷಿ ತಕ್ಷಿರಾಜಿ ಧನ್ವಿದ್ಯುಪ್ರತಿ ದಿವಃ'** (ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯವು ನಿತ್, ಆದ್ದರಿಂದ ನಿತ್ಸ್ವರದಿಂದ ರಾಜನ್ ಎಂಬುದು ಆದ್ಯುದಾತ್ತ. ಇದರ ಮುಂದೆ ತೃತೀಯಾಬಹುವಚನ ಭಿಸ್, **'ಸ್ವಾದಿಷ್ವಸರ್ವನಾಮಸ್ಥಾನೇ'** (ಪಾ. ಸೂ. ೧-೪-೧೭) ಎಂಬುದರಿಂದ ಪದ ಸಂಜ್ಞೆ 'ನ ಲೋಪಃ ಪ್ರಾತಿಪದಿಕಾನ್ತಸ್ಯ' ಎಂಬುದರಿಂದ ನಕಾರಕ್ಕೆ ಲೋಪ, ರುತ್ವ ವಿಸರ್ಗಗಳು ರಾಜಭಿಃ ಎಂದಾಗುವುದು. ॥ ೫ ॥

॥ ಸಂಹಿತಾಪಾಠಃ ॥

## ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ ।
## ಅಕರ್ತ ಚತುರಃ ಪುನಃ ॥ ೬ ॥

॥ ಪದಪಾಠಃ ॥

ಉತ । ತ್ಯಂ । ಚಮಸಂ । ನವಂ । ತ್ವಷ್ಟುಃ । ದೇವಸ್ಯ । ನಿಃ ऽ ಕೃತಂ ॥
ಅಕರ್ತ । ಚತುರಃ । ಪುನರಿತಿ ॥ ೬ ॥

॥ ಸಾಯಣಭಾಷ್ಯಂ ॥

ಉತಾಪಿ ಚ ತ್ವಷ್ಟುರೇತನ್ನಾಮಕಸ್ಯ ದೇವಸ್ಯ ಸಂಬಂಧೀ ತಕ್ಷಣವ್ಯಾಪಾರಃ । ನವಂ ನೂತನಂ ತ್ಯಂ ಚಮಸಂ ತಂ ಸೋಮಧಾರಣಕ್ಷಮಂ ಕಾಷ್ಠಪಾತ್ರವಿಶೇಷಂ ನಿಷ್ಕೃತಂ ನಿಃಶೇಷೇಣ ಸಂಪಾದಿತಮಕರೋದಿತಿ ಶೇಷಃ । ತಕ್ಷಣವ್ಯಾಪಾರಕುಶಲಸ್ಯ ತ್ವಷ್ಟುಃ ಶಿಷ್ಯಾ ಋಭವಸ್ತೇನ ನಿರ್ಮಿತಂ ತಮೇಕಂ ಚಮಸಂ ಪುನರಪಿ ಚತುರೋಽಕರ್ತ । ಚತುರ್ಧಾ ವಿಭಕ್ತಾಂಶ್ಚಮಸಾನ್ಕೃತವಂತಃ । ಏಕಸ್ಯ ಚತುರ್ವಿಧತ್ವಕರಣರೂಪೋಽಯಮರ್ಥೋ ಮಂತ್ರಾಂತರೇಽಪಿ ವಿಸ್ಪಷ್ಟಃ । ಏಕಂ ಚಮಸಂ ಚತುರಸ್ಕೃಣೋತನ । ಋಗ್ವೇ. ೧-೧೬೧-೨ । ಇತಿ ॥ ನವಂ । ಣು ಸ್ತುತೌ । ನೂಯತ ಇತಿ ನವಂ । ಕರ್ಮಣಿ ಅಪ್ಪ್ರತ್ಯಯಃ । ಸ ಹಿ ಘಞೋಽಪವಾದತ್ವಾದ್ಘಞರ್ಥೇ ಸರ್ವತ್ರ ಭವತಿ । ಘಞ್ಪ್ರತ್ಯಯಶ್ಚಾಕರ್ತರಿ ಚ ಕಾರಕೇ ಸಂಜ್ಞಾಯಾಂ । ಪಾ. ೩-೩-೧೯ । ಇತಿ ಕರ್ತೃವ್ಯತಿರಿಕ್ತೇ ಸರ್ವತ್ರ ಕಾರಕೇ ಭವತಿ । ಯದ್ಯಪಿ ತತ್ರ ಸಂಜ್ಞಾಯಾಮಿತ್ಯುಕ್ತಂ ತಥಾಪಿ ಚಕಾರಸ್ಯ ಸಂಜ್ಞಾವ್ಯಭಿಚಾರಾರ್ಥತ್ವಾದಸಂಜ್ಞಾಯಾಮಪಿ ಭವತ್ಯೇವ । ಸಂಬಧ್ಯತ ಇತಿ ಸಂಬಂಧಃ । ಕರ್ಮಣಿ ಘಞಿತ್ಯುಕ್ತಂ । ತ್ವಷ್ಟುಃ । ತಕ್ಷೂ ತ್ವಕ್ಷೂ ತನೂಕರಣೇ । ಔಣಾದಿಕಸ್ತೃನ್ । ಊದಿತ್ವಾತ್ಪಕ್ಷ ಇಡಭಾವಃ । ಪಾ. ೭-೨-೪೪ । ಸ್ಕೋಃ ಸಂಯೋಗಾದ್ಯೋರಂತೇ ಚ । ಪಾ. ೮-೨-೨೯ । ಇತಿ ಕಕಾರಲೋಪಃ । ನಿಷ್ಕೃತಂ । ಕೃಞೋ ನಿರುಪಸೃಷ್ಟಾತ್ಕರ್ಮಣಿ ಕ್ತಃ । ಪ್ರಾದಿಸಮಾಸೇ ನಿತ್ಯಂ ಸಮಾಸೇಽನುತ್ತರಪದಸ್ಥಸ್ಯ । ಪಾ. ೮-೩-೪೫ । ಇತಿ ಷತ್ವಂ । ಅತ್ರ ಕರ್ತೃಕರ್ಮಣೋಃ ಕೃತಿ । ಪಾ. ೨-೩-೬೫ । ಇತಿ ಪ್ರಾಪ್ತಾ ಷಷ್ಠೀ ಯದ್ಯಪಿ ನ ಲೋಕಾವ್ಯಯೇತಿ ನಿಷಿದ್ಧಾ । ಪಾ. ೨-೩-೬೯ । ತಥಾಪಿ ಕರ್ತುಃ ಶೇಷತ್ವೇನ ವಿವಕ್ಷಿತತ್ವಾತ್ಕರ್ತೃಕರಣಯೋಸ್ತೃತೀಯಾ । ಪಾ. ೨-೩-೧೮ । ಇತ್ಯೇತಸ್ಯಾಃ ಪ್ರಾಪ್ತೇಃ ಶೈಷಿಕೀ ಷಷ್ಠೀ । ಯಥಾ ಕರ್ಮಣಿ ಶೇಷತ್ವೇನ ವಿವಕ್ಷಿತೇ । ಪಾ. ೨-೩-೫೦ । ಮಾಷಾಣಾಮಶ್ನೀಯಾದಿತಿ । ಗತಿರನಂತರ ಇತಿ ನಿಸ ಉದಾತ್ತತ್ವಂ । ಅಕರ್ತ । ಅಕೃಷತ । ಕೃಞೋ ಲುಙಿ ಝಸ್ಯ ವ್ಯತ್ಯಯೇನ ತಾದೇಶಃ । ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ಛಂದಸ್ಯುಭಯಥೇತಿ ತಿಙ ಆರ್ಧಧಾತುಕತ್ವಾದ್ಙಿತ್ವಾಭಾವೇನ ಗುಣಃ । ಚತುರಃ । ಚತುರಃ ಶಸಿ । ಪಾ. ೬-೧-೧೬೭ । ಇತ್ಯುಕಾರ ಉದಾತ್ತಃ । ಪುನಃ । ಸ್ವರಾದಿಷ್ವಾದ್ಯುದಾತ್ತಃ । ಪಠಿತಃ ॥

॥ ಪ್ರತಿಪದಾರ್ಥ ॥

ಉತ—ಮತ್ತೂ । ತ್ವಷ್ಟುಃ—ತ್ವಷ್ಟೃ ಎಂಬ । ದೇವಸ್ಯ—ದೇವಶಿಲ್ಪಿಯು ನಿರ್ಮಿಸಿದ । ನವಂ—ನೂತನವಾದ । ತ್ಯಂ—ಆ (ಸೋಮರಸವನ್ನು ತುಂಬಲರ್ಹವಾದ) । ಚಮಸಂ—ಚಮಸವೆಂಬ ಕಾಷ್ಠ-

ಪಾತ್ರೆಯು । **ನಿಷ್ಕೃತಂ**—ಚೆನ್ನಾಗಿ ರಚಿಸಲ್ಪಟ್ಟಿತು । (ಅದನ್ನು ಋಭುಗಳು) । **ಪುನಃ**—ಮತ್ತೆ । **ಚತುರಃ**—ನಾಲ್ಕು ಚಮಸಗಳಾಗಿ । **ಅಕರ್ತ**—ಮಾಡಿದರು.

॥ ಭಾವಾರ್ಥ ॥

ತ್ವಷ್ಟೃದೇವತೆಯು ಚಮಸವೆಂಬ ಒಂದು ಕಾಷ್ಠಪಾತ್ರೆಯನ್ನು ಮಾತ್ರ ನಿರ್ಮಿಸಿದನು. ಅದನ್ನು ಋಭುಗಳು ತಮ್ಮ ಸಾಮರ್ಥ್ಯದಿಂದ ನಾಲ್ಕಾಗಿ ಮಾಡಿ ಅನುಕೂಲಮಾಡಿಕೊಟ್ಟರು.

## English Translation.

Besides, the Ribhus again made into four that new ladle, the work of the divine Twastri.

॥ ವಿಶೇಷವಿಷಯಗಳು ॥

ತ್ವಷ್ಟುವು ದೇವತೆಗಳ ಬಡಗಿಯೆಂದು ಪ್ರಸಿದ್ಧಿಯು (Twashtri is the carpenter or artisan of the gods) ಯಜ್ಞಯಾಗಾದಿಕರ್ಮಗಳಲ್ಲಿ ಉಪಯೋಗಿಸುವ ಯಜ್ಞಸಾಧನಭೂತವಾದ ಯಜ್ಞಾಯುಧಗಳು ಅತ್ಯವಶ್ಯಕವಾದುದರಿಂದ ಅವುಗಳನ್ನು ನಿರ್ಮಿಸುವ ತ್ವಷ್ಟುವಿಗೆ ದೇವತೆಗಳಲ್ಲಿ ಒಂದು ಶ್ರೇಷ್ಠವಾದ ಸ್ಥಾನವಿದೆ. ಋಭುಗಳು ದೇವಶಿಲ್ಪಿಯಾದ ಈ ತ್ವಷ್ಟುವಿಗೆ ಶಿಷ್ಯರು. ಇವರು ತಮ್ಮ ಗುರುವು ನಿರ್ಮಿಸಿದ ಚಮಸವೆಂಬ ಯಜ್ಞಪಾತ್ರೆಯು ಒಂದು ಇದ್ದುದನ್ನು ನಾಲ್ಕನ್ನಾಗಿ ಮಾಡಿದರೆಂದು ಈ ಋಭುಗಳ ಸಾಮರ್ಥ್ಯವು ಈ ಋಕ್ಕಿನಲ್ಲಿ ಪ್ರಶಂಸಿಸಲ್ಪಟ್ಟಿರುವುದು.

**ಉತ**—ಮತ್ತು, ಇದಲ್ಲದೆ, ಎಂದರೆ ಹಿಂದೆ ಹೇಳಿದ ವಿಷಯವಲ್ಲದೆ, ಮತ್ತೊಂದು ವಿಷಯವೇನೆಂದರೆ.

**ತ್ಯಂ**—**ತಂ** । ಆ

**ಚಮಸಂ**—ಯಜ್ಞದಲ್ಲಿ ಸೋಮಪಾನಮಾಡುವುದಕ್ಕಾಗಿ ಉಪಯೋಗಿಸುವ ಸೌಟಿನಂತಿರುವ ಒಂದು ಮರದ ಪಾತ್ರೆ.

॥ ವ್ಯಾಕರಣಪ್ರಕ್ರಿಯಾ ॥

**ನವಂ**—'**ಣು ಸ್ತುತೌ**' ಧಾತು '**ಣೋನಃ**' (ಪಾ. ಸೂ. ೬–೧–೬೫) ಧಾತುವಿನ ಆದಿಯಲ್ಲಿರುವ ಣಕಾರಕ್ಕೆ ನಕಾರ ಬರುವುದು ಎಂಬುದರಿಂದ ಣಕಾರಕ್ಕೆ ನಕಾರ, '**ಋದೋರಪ್**' (ಪಾ. ಸೂ. ೩–೩–೫೭) ಋಚ್ಚ ಉಚ್ಚ ಅನಯೋಸ್ಸಮಾಹಾರಃ ಋದುಃ, ಸಮಾಹಾರದ್ವಂದಸಮಾಸವನ್ನು ಮಾಡಿದರೆ ಸಮಾಹಾರ-(ಸಮೂಹ) ವು ಒಂದಾದುದರಿಂದ ಏಕವಚನವೇ ಬರುವುದು. ಆದರೆ '**ಸ ನಪುಂಸಕಮ್**' (ಪಾ. ಸೂ. ೨-೪-೧೭) ಸಮಾಹಾರಸಮಾಮಾಸದಲ್ಲಿ ದ್ವಿಗುವೂ, ದ್ವಂದ್ವವೂ ಸಹ ನಪುಂಸಕಲಿಂಗವನ್ನು ಹೊಂದುವುದು ಎಂಬುದರಿಂದ, ಇಲ್ಲಿ ನಪುಂಸಕಲಿಂಗವು ನ್ಯಾಯವಾಗಿ ಬರಬೇಕು. ಆದರೂ ಸೂತ್ರವಾದುದರಿಂದ ಈ ನಿಯಮವನ್ನತಿಕ್ರಮಿಸಿ ಪುಲ್ಲಿಂಗ ಬಂದಿದೆ. ಷಷ್ಠೀ ಏಕವಚನದಲ್ಲಿ ಋದೋಃ, ಎಂದಾಗುವುದು. ಇಲ್ಲಿ ಪಂಚಮ್ಯರ್ಥದಲ್ಲಿ ಷಷ್ಠೀವಿಭಕ್ತಿ ಬಂದಿರುವುದು, ಅಥವಾ ಇದು ಪಂಚಮ್ಯಂತ, ತಥಾಚ, ಋಕಾರಾಂತವಾದ ಧಾತುಗಳ ಮುಂದೆಯೂ ಉಕಾರಾಂತ

ವಾದ ಧಾತುಗಳ ಮುಂದೆಯೂ ಸಹ ಭಾವಾರ್ಥದಲ್ಲಿಯೂ ಕರ್ತೃವ್ಯತಿರಿಕ್ತಕಾರಕಾರ್ಥದಲ್ಲಿಯೂ ಅಪ್ ಪ್ರತ್ಯಯ ಬರುವುದು ಎಂದು ಸೂತ್ರಾರ್ಥ. ಇದರಿಂದ ನು ಧಾತುವು ಉಕಾರಾಂತವಾದ್ದರಿಂದ ಅದರ ಮುಂದೆ ಕರ್ಮರೂಪವಾದ ಕಾರಕಾರ್ಥದಲ್ಲಿ ಅಪ್ ಪ್ರತ್ಯಯ ಬರುವುದು, '**ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ**' (ಪಾ. ಸೂ ೩-೩-೧೮) ಎಂಬ ಘಞ್ ವಿಧಾಯಕ ಸೂತ್ರಕ್ಕೆ ಋದೋರಪ್ ಎಂಬುದು ಅಪವಾದ. ಆದ್ದರಿಂದ ಘಞ್ ಪ್ರತ್ಯಯವು ಯಾವ ಯಾವ ಅರ್ಥಗಳಲ್ಲಿ ಬರುವುದೋ ಆಯಾ ಅರ್ಥಗಳಲ್ಲಿ ಅಪ್ ಪ್ರತ್ಯಯ ಬರುವುದರಿಂದ ಭಾವಕರ್ತೃವ್ಯತಿರಿಕ್ತಕಾರಕಾರ್ಥಗಳಲ್ಲಿ ಇದಕ್ಕೆ ಪ್ರವೃತ್ತಿಯು ಸಿದ್ಧವಾಗುವುದು. ಇದೇ ರೀತಿಯಲ್ಲಿ ಘಞ್ ವಿಧಾಯಕ ಸೂತ್ರದಲ್ಲಿ ಸಂಜ್ಞಾಯಾಂ ಎಂದಿರುವುದರಿಂದ ಘಞ್ ಪ್ರತ್ಯಯವು ಸಂಜ್ಞೆ ತೋರುವಾಗಲೇ ಬರುವುದರಿಂದ ಅಪವಾದವಾದ ಅಪ್ ಪ್ರತ್ಯಯವೂ ಸಂಜ್ಞೆ ಇರುವಾಗಲೇ ಬರುವುದು ಉಚಿತವೆಂದು ತೋರುವುದು ಸಹಜ, ಆದರೆ ಘಞ್ ವಿಧಿಯಲ್ಲಿ '**ಅಕರ್ತರಿ ಚ**' ಎಂಬಲ್ಲಿರುವ ಚಕಾರವು, '**ಸಂಜ್ಞಾಯಾಂ ಚ**' ಎಂದು ಸಂಬಂಧಿಸುವುದು, ಏವಂಚ ಸಂಜ್ಞೆ ತೋರುವಾಗಲೂ, ಚಕಾರದಿಂದ ಸಂಜ್ಞೆ ತೋರದೇ ಇರುವಾಗಲೂ, ಘಞ್ ಬರುವುದು, ಎಂದು ಏರ್ಪಡುವುದು, ಆದ್ದರಿಂದ ಅಪವಾದವಾದ ಅಪ್ಪೂ ಸಂಜ್ಞೆ ತೋರುವಾಗಲೂ, ತೋರದೇ ಇರುವಾಗಲೂ ಬರಲು ತಡೆ ಇಲ್ಲ. ಇದೇ ಅಂಶವು, '**ಚಕಾರಸ್ಯ ಸಂಜ್ಞಾವ್ಯಭಿಚಾರಾರ್ಥತ್ವಾದಸಂಜ್ಞಾಯಾಮಪಿ ಭವತ್ಯೇವ**' ಎಂದು ವೇದಭಾಷ್ಯದಲ್ಲಿ ಉಪಪಾದಿತವಾಗಿದೆ. ಆದುದರಿಂದಲೇ ಸಂಬಧ್ಯತೇ ಇತಿ ಸಂಬಂಧಃ ಎಂಬಲ್ಲಿ ಸಂಪೂರ್ವಕವಾದ ಬನ್ಧ ಧಾತುವಿನ ಮುಂದೆ ಕರ್ಮಾರ್ಥದಲ್ಲಿ ಘಞ್ ಪ್ರತ್ಯಯವನ್ನು ಪ್ರಾಮಾಣಿಕರು ವರ್ಣಿಸಿರುವರು. ನು+ಅ ಎಂದಿರುವಾಗ '**ಸಾರ್ವಧಾತುಕಾರ್ಧಧಾತುಕಯೋಃ**' (ಪಾ. ಸೂ. ೭-೩-೮೪) ಎಂದು ಗುಣ. ಓಕಾರ, ಅವಾದೇಶ, ದ್ವಿತೀಯೈಕವಚನ ಅಮ್ಮನ್ನಿಟ್ಟರೆ, '**ಅಮಿ ಪೂರ್ವಃ**' (ಪಾ. ಸೂ. ೬-೧-೧೦೭) ಎಂದು ಪೂರ್ವರೂಪ ಬಂದು ನವಮ್ ಎಂದಾಗುವುದು.

**ತ್ವಷ್ಟುಃ**—'ತಕ್ಷೂ ತ್ವಕ್ಷೂ ತನೂಕರಣೇ' ಧಾತು, ಇದರ ಮುಂದೆ. '**ತೃನ್‌ತೃಚೌ ಶಂಸಿಕ್ಷದಾದಿಭ್ಯಸ್ಸಂಜ್ಞಾಯಾಂತೌಚಾನಿಟೌ**' (ಉ. ಸೂ. ೨-೨೫೧) ಎಂಬುದರಿಂದ ಔಣಾದಿಕವಾದ ತೃನ್ ಪ್ರತ್ಯಯ ಬರುವುದು. ತ್ವಕ್ಷ್+ತೃ-, ಅಥವಾ '**ಬಹುಲಮನ್ಯತ್ರಾಪಿ**' (ಉ. ಸೂ. ೨-೨ ೫೨) ಎಂಬುದರಿಂದ ತೃನ್-ಈ ಪಕ್ಷದಲ್ಲಿ ಧಾತುವು ಊದಿತ್ತಾದ್ದರಿಂದ, ಇದರ ಮುಂದಿರುವ ಆರ್ಧಧಾತುಕಕ್ಕೆ '**ಸ್ವರತಿಸೂತಿಸೂಯತಿಧೂಞೂದಿತೋವಾ**' (ಪಾ. ಸೂ. ೭-೨-೪೪) ಎಂಬುದರಿಂದ ಇಡಾಗಮವು ವಿಕಲ್ಪಿತವಾಗಿರುವುದರಿಂದ ಪಾಕ್ಷಿಕವಾದ ಇಡಾಗಮವು ಇಲ್ಲಿ ಬರುವುದಿಲ್ಲ. '**ಸ್ಕೋಃಸ್ಸಂಯೋಗಾದ್ಯೋರನ್ತೇ ಚ**' (ಪಾ. ಸೂ. ೨-೨-೨೯) ಪದಾಂತ ವಿಷಯದಲ್ಲಿಯೂ ಸಂಯೋಗ ಪರದಲ್ಲಿರುವಾಗಲೂ ಸಂಯೋಗದ ಆದಿಯಲ್ಲಿರುವ ಸಕಾರ ಕವರ್ಗಗಳಿಗೆ ಲೋಪ ಬರುವುದು ಎಂಬುದರಿಂದ ಕಕಾರಕ್ಕೆ ಲೋಪ ತ್ವಷ್+ತೃ '**ಷ್ಟುನಾಷ್ಟುಃ**' (ಪಾ. ಸೂ. ೮-೪-೪೧) ಎಂಬುದರಿಂದ ಷ್ಟುತ್ವ ತ್ವಷ್ಟೃ-ಎಂದಾಗುವುದು. ಷಷ್ಠೀ ವಿಭಕ್ತಿ ಏಕವಚನ ಙಸ್ ಪ್ರತ್ಯಯವನ್ನಿಟ್ಟರೆ, ತ್ವಷ್ಟೃ+ಅಸ್, '**ಋತ ಉತ್**' (ಪಾ. ಸೂ. ೬-೧-೧೧೧) ಋದಂತವಾದ ಶಬ್ದದ ಮುಂದೆ ಙಸಿ ಙಸ್‌ಗಳು ಪರದಲ್ಲಿದ್ದರೆ ಪೂರ್ವ ಪರಸ್ಥಾನಗಳಲ್ಲಿ ಏಕಾದೇಶವಾಗಿ ಉತ್-ಎಂದರೆ ಹ್ರಸ್ವವಾದ ಉಕಾರವು ಬರುವುದು ಎಂಬುದರಿಂದ ಉಕಾರಾದೇಶ, ಅದು '**ಉರಣ್ರಪರಃ**' (ಪಾ. ಸೂ. ೧-೧-೫೧) ಎಂಬುದರಿಂದ ರಪರವಾಗಿ ಬರುವುದು, '**ರಾತ್ಸಸ್ಯ**' (ಪಾ. ಸೂ. ೮-೨-೨೪) ರೇಫದ ಮುಂದೆ ಇರುವ ಸಂಯೋಗದ ಕೊನೆಯಲ್ಲಿರುವ ಸಕಾರಕ್ಕೆ ಮಾತ್ರ ಲೋಪ ಬರುವುದು ಎಂಬುದರಿಂದ ಸಕಾರಕ್ಕೆ ಲೋಪ, ತ್ವಷ್ಟುರ್, ವಿಸರ್ಗ, ತ್ವಷ್ಟುಃ ಎಂದಾಗುವುದು.

**ನಿಷ್ಕೃತಮ್**—ನಿಸ್ ಉಪಸರ್ಗಪೂರ್ವಕವಾದ ಡುಕೃಞ್ ಕರಣೇ ಧಾತುವಿನ ಮುಂದೆ ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ, '**ಕುಗತಿಪ್ರಾದಯಃ**' (ಪಾ. ಸೂ. ೨-೨-೧೮) ಎಂಬುದರಿಂದ ನಿಸ್+ಕೃತಮ್ ಎಂಬ ಎರಡಕ್ಕೂ ಪ್ರಾದಿ ಸಮಾಸ. ಸಕಾರಕ್ಕೆ '**ಸಸಜುಷೋರುಃ**' (ಪಾ. ಸೂ. ೮-೨-೬೬) ಎಂಬುದರಿಂದ ರುತ್ವ. '**ಖರವಸಾನಯೋರ್ವಿಸರ್ಜನೀಯಃ**' (ಪಾ. ಸೂ, ೮-೩-೧೫) ಎಂಬುದರಿಂದ ಖರ್ ಪರದಲ್ಲಿರುವಾಗ ರೇಫಕ್ಕೆ ವಿಸರ್ಗ, ನಿಃಕೃತಂ, ಈಗ '**ನಿತ್ಯಂ ಸಮಾಸೇಽನುತ್ತರಪದಸ್ಥಸ್ಯ**' (ಪಾ. ಸೂ. ೮-೩-೪೫) ಕವರ್ಗಪವರ್ಗಗಳು ಪರದಲ್ಲಿರುವಾಗ ಉತ್ತರಪದದಲ್ಲಿಲ್ಲದ ಇಸ್ ಉಸ್‌ಗಳ ಸಂಬಂಧಿಯಾದ ವಿಸರ್ಗಕ್ಕೆ ಷಕಾರ ಬರುವುದು ಎಂಬುದರಿಂದ ಷಕಾರ ನಿಷ್ಕೃತಮ್ ಎಂದಾಗುವುದು. '**ನಿತ್ಯಂ ಸಮಾಸೇ**' ಎಂಬ ಸೂತ್ರಾರಂಭವು, '**ಪ್ರತಿಷೇಧಾರ್ಥಸ್ತು ಯತ್ನೋಽಯಮ್**' (ಪಾ ಸೂ. ೮-೩-೪೫, ಶ್ಲೋವಾ. ೪) ಎಂಬ ಭಾಷ್ಯಶ್ಲೋಕವಾರ್ತಿಕಾನುಸಾರ, ಸಮಾಸದಲ್ಲಿ ಉತ್ತರಪದದಲ್ಲಿರುವ ಇಸ್ ಉಸ್‌ಗಳ ವಿಸರ್ಗಕ್ಕೆ ಷತ್ವ ನಿಷೇಧಕ್ಕಾಗಿ ಬಂದಿರುವುದು ಎಂದು ಏರ್ಪಡುವುದು. ಏವಂಚ '**ಇಸುಸೋಸ್ಸಾಮರ್ಥ್ಯೇ**' (ಪಾ. ಸೂ. ೮-೪-೪೪) ಎಂಬ ಸೂತ್ರದಲ್ಲಿ '**ನಾನಾ ಪದಾರ್ಥಯೋರ್ವರ್ತಮಾನಯೋಃ ಖ್ಯಾಯತೇ ಯದಾಯೋಗಃ ತಸ್ಮಿನ್ ಷತ್ವಂ ಕಾರ್ಯಂ ತದ್ಯುಕ್ತಂ ತಚ್ಚಮೇನೇಹ**' (ಪಾ. ಸೂ. ೮-೩-೪೫, ವಾ. ೧) ನಾನಾ ವಿಧವಾದ ಪದಾರ್ಥ ಪ್ರತಿಪಾದಕಗಳಾದ ಯಾವ ಶಬ್ದಗಳಿವೆಯೋ ಅವುಗಳಿಗೆ ಪರಸ್ಪರ ಸಂಬಂಧರೂಪವಾದ ವ್ಯಪೇಕ್ಷಾ ರೂಪವಾದ ಸಾಮರ್ಥ್ಯವು ಇಲ್ಲಿ ಸೇರಿಸಲ್ಪಡಬೇಕೆಂದು ತಿಳಿದುಬರುವುದು. ಇದೇ ಲಕ್ಷ್ಯಾನುಸಾರವಾಗಿ ಯುಕ್ತವಾಗಿರುವುದು, ಪರಮುಸರ್ಪಿಷ್ಕುಂಡಿಕಾ ಎಂಬ ಸಮಾಸದಲ್ಲಿ ಇಂತಹ ವ್ಯಪೇಕ್ಷಾ ಸಾಮರ್ಥ್ಯವಿಲ್ಲದ ಕಾರಣ ಇಲ್ಲಿ '**ಇಸುಸೋಃ**' ಇತ್ಯಾದಿ ಸೂತ್ರದಿಂದ ವೈಕಲ್ಪಿಕವಾದ ಷತ್ವ ಬರುವುದಿಲ್ಲವೆಂದು ವಾರ್ತಿಕಾರ್ಥವು. ಇದರಿಂದ ವ್ಯಪೇಕ್ಷಾ ಸಾಮರ್ಥ್ಯವೇ ವಿವಕ್ಷಿತವು, ಆದ್ದರಿಂದ ನಿಷ್ಕೃತಂ ಎಂಬ ಸಮಾಸದಲ್ಲಿ ವ್ಯಪೇಕ್ಷಾಸಾಮರ್ಥ್ಯವಿಲ್ಲದ ಕಾರಣ '**ಇಸುಸೋಃ**' ಎಂಬುದರಿಂದ ವೈಕಲ್ಪಿಕ ಷತ್ವ ಬರಲಾರದು '**ಇದುದುಪಧಸ್ಯ ಚಾಪ್ರತ್ಯಯಸ್ಯ**' (ಪಾ. ಸೂ. ೮-೩-೪೧) ಕವರ್ಗಪವರ್ಗಗಳು ಪರದಲ್ಲಿರುವಾಗ ಇಕಾರೋಕಾರೋಪಧಕವೂ, ಪ್ರತ್ಯಯಸಂಬಂಧಿ ಭಿನ್ನವೂ ಆದ ವಿಸರ್ಗಕ್ಕೆ ಷತ್ವ ಬರುವುದು ಎಂಬುದರಿಂದಲೇ ಷತ್ವ ಬರುವುದು. ಆದುದರಿಂದಲೇ '**ನಿಷ್ಪ್ರತ್ಯೂಹಮ್**' ಇತ್ಯಾದಿ ಕಡೆಗಳಲ್ಲಿ ಇದು '**ಇದುದುಪಧಸ್ಯ**' ಎಂಬುದರಿಂದಲೇ ಷತ್ವವು ಉಪಪಾದಿತವಾಗಿರುವುದು. ಕೆಲವರು '**ನಿತ್ಯಂ ಸಮಾಸೇ**' ಎಂಬ ಸೂತ್ರವನ್ನು '**ನಿತ್ಯಂ ಸಮಾಸೇ**' ಎಂದು ಒಂದು ಸೂತ್ರ, '**ಅನುತ್ತರಪದಸ್ಥಸ್ಯ**' ಎಂದು ಎರಡನೆಯ ಸೂತ್ರ, ಎಂಬುದಾಗಿ ಎರಡಾಗಿ ವಿಭಾಗಮಾಡುವರು. ವಿಭಕ್ತವಾದ ಎರಡನೇ ಸೂತ್ರದಲ್ಲಿ ಸಮಾಸೇ ಎಂಬ ಪದವು ಸಂಬಂಧಿಸಿಕೊಳ್ಳುವುದು. ಏವಂಚ ಸಮಾಸದಲ್ಲಿ ಉತ್ತರಪದದಲ್ಲಿರುವ ವಿಸರ್ಗಕ್ಕೆ ಷತ್ವ ಬರುವುದಿಲ್ಲ ಎಂದು ಅರ್ಥವನ್ನು ವರ್ಣಿಸಿ, ಎಲ್ಲಾ ಷತ್ವಪ್ರಾಪ್ತಿಯೂ ಉತ್ತರಪದದಲ್ಲಿರುವ ವಿಸರ್ಗಕ್ಕೆ ಪ್ರತಿಷೇಧಿಸಲ್ಪಡುವುದು, ಏವಂಚ '**ಇಸುಸೋಸ್ಸಾಮರ್ಥ್ಯೇ**' ಎಂಬಲ್ಲಿ ಏಕಾರ್ಥೀಭಾವವ್ಯಪೇಕ್ಷಾ ಸಾಮರ್ಥ್ಯಗಳೆರಡನ್ನೂ ವಿವಕ್ಷೆಮಾಡಿದರೂ, ಪರಮುಸರ್ಪಿಷ್ಕುಂಡಿಕಾ ಎಂಬಲ್ಲಿ, '**ಅನುತ್ತರ ಪದಸ್ಥಸ್ಯ**' ಎಂಬ ಪ್ರತಿಷೇಧ ಬರುವುದರಿಂದ ವೈಕಲ್ಪಿಕ ಷತ್ವ ಬರುವುದಿಲ್ಲವಾದ್ದರಿಂದ ಯಾವ ದೋಷವು ಇರುವುದಿಲ್ಲ ಎಂದು ವರ್ಣಿಸುವರು. ಇವರ ಮತದಲ್ಲಿ '**ನಿಷ್ಕೃತಂ**' ಎಂಬಲ್ಲಿ '**ಇದುದುಪಧಸ್ಯ**' ಎಂಬುದನ್ನು ಬಾಧಿಸಿ, '**ಇಸುಸೋ**' ಎಂಬುದರಿಂದ ವೈಕಲ್ಪಿಕ ಷತ್ವವು ಪ್ರಾಪ್ತವಾದರೆ, ತದ್ವಾರಣಕ್ಕಾಗಿ '**ನಿತ್ಯಂ ಸಮಾಸೇ**' ಎಂಬುದರಿಂದ ಇಲ್ಲಿ ಷತ್ವವನ್ನು ಉಪಪಾದಿಸಬೇಕು. ಆದರೆ, ಇದು ಮಹಾಭಾಷ್ಯಸಮ್ಮತವಲ್ಲ. ಆದ್ದರಿಂದ ಇಲ್ಲಿ

**'ಇದುದುಪಧಸ್ಯ'** ಎಂಬುದರಿಂದ ಷತ್ವ ವರ್ಣನೆಯು ಯುಕ್ತವಾಗಿರುವುದು. 'ದೇವಸ್ಯ ನಿಷ್ಕೃತಂ' ಎಂಬಲ್ಲಿ ದೇವಶಬ್ದವು **'ಕರ್ತೃಕರ್ಮಣೋಃಕೃತಿ'** (ಪಾ. ಸೂ. ೨-೩-೬೫) ಕೃದಂತ ಶಬ್ದದ ಯೋಗವಿರುವಾಗ ಕೃತ್ಪ್ರಕೃತ್ಯರ್ಥ ಕ್ರಿಯಾನಿರೂಪಿತವಾದ ಕರ್ತೃಕರ್ಮಾನ್ಯತರವಾಚಕ ಪ್ರಾತಿಪದಿಕದ ಮುಂದೆ ಷಷ್ಠೀವಿಭಕ್ತಿಬರುವುದು ಎಂಬುದರಿಂದ, ಕರ್ಮಣಿಕ್ತ ಪ್ರತ್ಯಯಪ್ರಕೃತಿಯಾದ ಕೃಧಾತುನಿರೂಪಿತಕರ್ತೃವಾಚಕವಾದುದರಿಂದ ಇದರ ಮುಂದೆ ಷಷ್ಠೀವಿಭಕ್ತಿಯು ಪ್ರಾಪ್ತವಾಗುವುದು ಆದರೆ ಇದಕ್ಕೆ **'ನಲೋಕಾವ್ಯಯನಿಷ್ಠಾಖಲರ್ಥತೃನಾಮ್'** (ಪಾ. ಸೂ. ೨-೩-೬೯) ಲ. ಎಂದು ಲಡಾದಿ ಸರ್ವಲಕಾರಗಳಿಗೂ ಸಾಮಾನ್ಯ ಗ್ರಹಣ. ಆದರೆ ಲಡಾದಿಗಳಿಗೆ ಸಾಕ್ಷಾತ್ ಪ್ರಯೋಗವಿಲ್ಲದಕಾರಣ ಲ, ಎಂಬುದರಿಂದ ಲಾದೇಶವು ಗ್ರಹಿಸಲ್ಪಡುವುದು. ಲಾದೇಶಗಳು, ಉಕಾರಾಂತವಾದ ಕೃತ್ಪ್ರತ್ಯಯ. ಉ ಎಂಬುದು **'ಕೃತಃ'** ಎಂಬುದಕ್ಕೆ ವಿಶೇಷಣವಾದ್ದರಿಂದ **'ಯೇನವಿಧಿಸ್ತದಂತಸ್ಯ'** (ಪಾ. ಸೂ. ೧-೧-೭೨) ಎಂಬುದರಿಂದ ತದಂತಲಾಭಬರುವುದು, ಕೇವಲ ಉ ಪ್ರತ್ಯಯಕ್ಕೆ ಗ್ರಹಣವೆಂದು ವ್ಯಾಖ್ಯಾನ ಮಾಡಿದರೆ, ಹರಿಂ ಅಲಂಕರಿಷ್ಣುಃ ಇತ್ಯಾದಿ ಕಡೆಗಳಲ್ಲಿ ಇಷ್ಣುಚ್ ಪ್ರತ್ಯಯಾದಿಗಳಿಗೆ ಗ್ರಹಣ ಬರದೇ ಹೋಗುವುದು, ಕೇವಲ ಉ ಪ್ರತ್ಯಯವೇ ಬಂದ ಸ್ಥಳಗಳಲ್ಲಿ ವ್ಯಪದೇಶಿವದ್ಭಾವದಿಂದ ಅದು ಕೃದಂತವಾಗುವುದು. ಉಕ, ಅವ್ಯಯಗಳು, ಕ್ತ ಕ್ತವತುಪ್ರತ್ಯಯ ರೂಪವಾದ ನಿಷ್ಠೆ, ಖಲರ್ಥಕ ಪ್ರತ್ಯಯಗಳು, ತೃನ್–**'ಲಟಶ್ಶತೃಶಾನಚಾ–'** (ಪಾ. ಸೂ. ೩-೨-೧೨೪) ಎಂಬಲ್ಲಿರುವ ತೃ ಶಬ್ದವನ್ನಾರಂಭಿಸಿ 'ತೃನ್' ಎಂಬಲ್ಲಿರುವ ನಕಾರದೊಂದಿಗೆ ಪ್ರತ್ಯಾಹಾರವು, ಇವುಗಳಿಗೆ ಪ್ರಯೋಗವಿರುವಾಗ ಷಷ್ಠೀ ವಿಭಕ್ತಿ ಬರುವುದಿಲ್ಲ ಎಂದು ನಿಷೇಧವಿರುವುದರಿಂದ ಯದ್ಯಪಿ ಇಲ್ಲಿ ಷಷ್ಠೀವಿಭಕ್ತಿಯು ಪ್ರಾಪ್ತವಾಗುವುದಿಲ್ಲ. ಆದರೂ ಇಲ್ಲಿ ಕರ್ತೃವನ್ನು ಶೇಷತ್ವೇನ ವಿವಕ್ಷೆಮಾಡುವೆವು. ಶೇಷವೆಂದರೆ **'ಉಕ್ತಾದನ್ಯಶ್ಶೇಷಃ'** ಕಾರಕ ಪ್ರಾತಿಪದಿಕಾರ್ಥ ಗಳನ್ನುಳಿದ ಸ್ವಸ್ವಾಮಿಭಾವಾದಿ ಸಂಬಂಧಗಳು ಎಂದರ್ಥ. ಕರ್ತ್ರಾದಿಕಾರಕಗಳೂ, ಪ್ರಾತಿಪದಿಕಾರ್ಥವೂ **'ಷಷ್ಠೀ ಶೇಷೇ'** (ಪಾ. ಸೂ. ೨-೩-೫೦) ಎಂಬ ಸೂತ್ರಾರಂಭಕ್ಕಿಂತಲೂ ಮುಂಚೆಯೇ ಉಕ್ತವಾಗಿರುವುವು. ಸ್ವಸ್ವಾಮಿ ಭಾವಾದಿಸಂಬಂಧಗಳು ಉಕ್ತವಾಗಿಲ್ಲ. ಆದ್ದರಿಂದ ಸ್ವಸ್ವಾಮಿಭಾವಾದಿಸಂಬಂಧಗಳು ಉಕ್ತಾದನ್ಯಗಳು ಅಂದರೆ ಹಿಂದೆ ಹೇಳಿದ್ದಕ್ಕಿಂತಲೂ ಬೇರೆಯಾದುವುಗಳು ಆಗುವುವು. ಇಂತ ಶೇಷರೂಪವಾದ ಅರ್ಥದಲ್ಲಿ ಷಷ್ಠೀವಿಭಕ್ತಿಬರುವುದು ಎಂದು **'ಷಷ್ಠೀ ಶೇಷೇ'** ಎಂಬ ಸೂತ್ರಕ್ಕೆ ಅರ್ಥವು. ಪ್ರಕೃತದಲ್ಲಿ ಕರ್ತೃತ್ವೇನ ವಿವಕ್ಷೆಮಾಡಿದರೆ **'ನಲೋಕಾವ್ಯಯ'** ಎಂದು ನಿಷೇಧ ಬರುವುದರಿಂದ **'ಕರ್ತೃಕರ್ಮಣೋಃ'** ಎಂಬುದರಿಂದ ಕರ್ತರಿ ಷಷ್ಠಿಯು ಬರುವುದಿಲ್ಲ ಅಂದಮೇಲೆ, **'ಕರ್ತೃ ಕರಣಯೋಸ್ತೃತೀಯಾ'** (ಪಾ. ಸೂ. ೨-೩-೧೮) ತಿಙ್ಕೃತ್ತದ್ಧಿತಸಮಾಸಗಳಿಂದ ಅನಭಿಹಿತವಾದ ಕರ್ತೃಕರ್ಮಾನ್ಯತರವಾಚಕವಾದ ಪ್ರಾತಿಪದಿಕದ ಮುಂದೆ ತೃತೀಯಾವಿಭಕ್ತಿ ಬರುವುದು, ಎಂಬುದರಿಂದ ತೃತೀಯಾವಿಭಕ್ತಿ ಬರಬೇಕಾಗುವುದು, ಕರ್ತೃತ್ವೇನ ವಿವಕ್ಷೆಮಾಡದೆ ಶೇಷತ್ವೇನ ವಿವಕ್ಷೆಮಾಡಿದರೆ ಕರ್ತೃವಾಚಕತ್ವೇನ ವಿವಕ್ಷೆ ಇಲ್ಲದುದರಿಂದ ಕರ್ತರಿ ತೃತೀಯಾವಿಭಕ್ತಿ ಬರುವುದಿಲ್ಲ ಶೇಷತ್ವೇನ ವಿವಕ್ಷೆ ಇರುವುದರಿಂದ **'ಷಷ್ಠೀ ಶೇಷೇ'** ಎಂಬುದರಿಂದ ಷಷ್ಠೀವಿಭಕ್ತಿಯೇ ಬರುವುದು. ಈ ಅಂಶದಲ್ಲಿ ಸಂಪ್ರತಿಪನ್ನವಾದ ಒಂದು ಉದಾಹರಣೆಯನ್ನು ಕೊಡುವೆವು. ಮಾಷಾ**ನ**ಶ್ನೀಯಾತ್, ಉದ್ದನ್ನು ತಿನ್ನಬೇಕು ಎಂದರ್ಥ. ಇಲ್ಲಿ ಮಾಷಕ್ಕೆ **'ಕರ್ತುರೀಪ್ಸಿತತಮಂಕರ್ಮ'** (ಪಾ. ಸೂ. ೧-೪-೪೯) ಪ್ರಕೃತಧಾತೂಪಸ್ಥಾಪ್ಯ ಪ್ರಧಾನೀಭೂತವ್ಯಾಪಾರಪ್ರಯೋಜ್ಯವ್ಯಾಪಾರವ್ಯಧಿಕರಣ ಫಲ ಸಂಬಂಧಿತ್ವ ಪ್ರಕಾರಕಾತಿಶಯೇಚ್ಛಾನಿರೂಪಿತ ವಿಶೇಷ್ಯತಾಶ್ರಯಃ ಕರ್ಮಸಂಜ್ಞಕೋ ಭವತಿ, ಎಂಬುದರಿಂದ ಕರ್ಮಸಂಜ್ಞೆ ಇರುವುದು. ಹೇಗೆಂದರೆ, ಪ್ರಕೃತಧಾತು ಅಶ್ ಧಾತು, ಅದಕ್ಕೆ ಗಳಬಿಲಾಧಸ್ಸಂಯೋಗಾನುಕೂಲವ್ಯಾಪಾರ ಎಂದರ್ಥ.

ಈ ವ್ಯಾಪಾರದಿಂದ ಮಾಷಕ್ಕೆ ಗಳಬಿಲಾಧಸ್ಸಂಯೋಗರೂಪವಾದ ಫಲವು ಉಂಟಾಗುವುದು. ಮಾಷದಲ್ಲಿ ಸಿರುಕ್ತ. ಸಂಯೋಗಾನುಕೂಲವ್ಯಾಪಾರವಿಲ್ಲದ ಕಾರಣ ಅದರಲ್ಲಿರುವ ಸಂಯೋಗರೂಪ ಫಲವು ವ್ಯಾಪಾರ ವ್ಯಧಿಕರಣವಾಗುವುದು. ಏವಂಚ ಪ್ರಕೃತೋ ಯೋ ಧಾತುಃ, ಅಶಧಾತುಃ, ತದುಪಸ್ಥಾಪ್ಯಪ್ರಧಾನೀ ಭೂತೋ ಯೋ ವ್ಯಾಪಾರಃ, ಗಳ ಬಿಲಾಧಸ್ಸಂಯೋಗಾನುಕೂಲವ್ಯಾಪಾರಃ, ತಾದೃಶವ್ಯಾಪಾರಪ್ರಯೋಜ್ಯಂ, ವ್ಯಾಪಾರವ್ಯಧಿಕರಣಂ ಚ ಯತ್ಫಲಂ, ಗಳ ಬಿಲಾಧಸ್ಸಂಯೋಗರೂಪಂ ಫಲಂ, ತತ್ಸಂಬಂಧಿತ್ವಪ್ರಕಾರಿಕಾ ಯಾ ಅತಿಶಯೇಚ್ಛಾ **'ಮಾಷಾಃ ಮದ್ಗಳ ಬಿಲಾಧಸ್ಸಂಯುಕ್ತಾ ಭವಂತು'** ಇತ್ಯಾಕಾರಿಕಾ ಇಚ್ಛಾ, ತಾದೃಶೇಚ್ಛಾ ನಿರೂಪಿತ ವಿಶೇಷ್ಯತಾತ್ರಯತ್ವವು ಮಾಷಗಳಿಗೆ ಇರುವುದರಿಂದ ಅದಕ್ಕೆ ಕರ್ಮಸಂಜ್ಞೆ ಇರುವುದು. ಆದ್ದರಿಂದ **'ಕರ್ಮಣಿ ದ್ವಿತೀಯಾ'** (ಪಾ. ಸೂ. ೨-೩-೨) ತಿಙಾದ್ಯನಭಿಹಿತ ಕರ್ಮವಾಚಕವಾದ ಪ್ರಾತಿಪದಿಕದ ಮುಂದೆ ದ್ವಿತೀಯಾವಿಭಕ್ತಿ ಬರುವುದು ಎಂಬುದರಿಂದ ದ್ವಿತೀಯಾ ವಿಭಕ್ತಿಯು ಬಂದು ಮಾಷಾ ಅಶ್ನೀಯಾತ್ ಎಂದಾಗುವುದು, ಕರ್ಮವನ್ನು ಶೇಷತ್ವೇನ ವಿವಕ್ಷೆಮಾಡಿದರೆ, **'ಷಷ್ಠೀ ಶೇಷೇ'** ಎಂಬುದರಿಂದ ಷಷ್ಠೀವಿಭಕ್ತಿಯು ಬಂದು ಮಾಷಾನ್ ಅಶ್ನೀಯಾತ್ ಎಂದಾಗುವುದು. ಇದೇ ರೀತಿಯಲ್ಲಿ ಇಲ್ಲಿಯೂ ಕರ್ತೃವನ್ನು ಶೇಷತ್ವೇನ ವಿವಕ್ಷೆಮಾಡಿದರೆ ಷಷ್ಠೀವಿಭಕ್ತಿಯು ಹಿಂದೆ ಹೇಳಿದ ರೀತಿಯಲ್ಲಿ ಬರಲು ಅಡ್ಡಿ ಇರುವುದಿಲ್ಲ, **'ವಿವಕ್ಷಾತಃ ಕಾರಕಾಣಿ ಭವನ್ತಿ'** ಕಾರಕಗಳು ವಿವಕ್ಷಾನುಗುಣವಾಗಿ ಬರುವುವು ಎಂಬುದರಿಂದ, ಲಕ್ಷ್ಯಾನುಗುಣವಾಗಿ ವಿವಕ್ಷೆಮಾಡಬಹುದು. ಇಲ್ಲಿ ಕರ್ತೃತ್ವ ವಿವಕ್ಷೆಮಾಡಿದರೆ ತೃತೀಯಾವಿಭಕ್ತಿ ಬರಬೇಕಾಗುವುದು. ಆದ್ದರಿಂದ ಕರ್ತೃವನ್ನು ಶೇಷತ್ವೇನ ವಿವಕ್ಷೆಮಾಡುತ್ತೇವೆ. ಏವಂಚ ಷಷ್ಠೀವಿಭಕ್ತಿಯು ಉಪಪನ್ನವಾಗುವುದು. **'ಗತಿರನಂತರಃ'** (ಪಾ. ಸೂ. ೬-೨-೪೯) ಕರ್ಮಾರ್ಥಕ ಕ್ತಪ್ರತ್ಯಯಾಂತವು ಪರದಲ್ಲಿರು ವಾಗ ಅವ್ಯವಹಿತವಾದ ಗತಿಸಂಜ್ಞಕಶಬ್ದವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ನಿಸ್, ಪ್ರಕೃತಿಸ್ವರ ಉದಾತ್ತವೇ ಸಮಾಸಾನಂತರವೂ ನಿಲ್ಲುವುದು, **'ಉಪಸರ್ಗಾಶ್ಚಾಭಿವರ್ಜಂ'** (ಫಿ. ಸೂ. ೮೧) ಎಂಬುದರಿಂದ ನಿಸ್ ಆದ್ಯುದಾತ್ತ.

**ಅಕರ್ತ—**ಅಕೃಷತ ಎಂದು ಅರ್ಥ. **'ಡುಕೃಞ್ ಕರಣೇ'** ಧಾತು, ಇದರ ಮುಂದೆ ಲುಙ್ ಆತ್ಮನೇ ಪದ ಪ್ರಥಮಪುರುಷ ಬಹುವಚನ ಝ ಆದೇಶ. ಝಕಾರಕ್ಕೆ **'ಆತ್ಮನೇಪದೇಷ್ವನತಃ'** (ಪಾ. ಸೂ. ೭-೧-೫) ಎಂಬುದರಿಂದ ಯದ್ಯಪಿ ಅತ್ ಆದೇಶ ಪ್ರಾಪ್ತವಾಗುವುದು. ಆದರೂ ಇಲ್ಲಿ **'ವ್ಯತ್ಯಯೋ ಬಹುಲಮ್'** (ಪಾ. ಸೂ. ೩-೧-೮೫) ಎಂಬುದರಿಂದ ತಕಾರಾದೇಶ ಬರುವುದು **'ಚ್ಲಿ ಲುಙಿ'** (ಪಾ. ಸೂ. ೩-೧-೪೩) ಎಂಬುದ ರಿಂದ ಬಂದ ಚ್ಲಿಗೆ **'ಮಂತ್ರೇಘಸಹ್ವರಣ ಶವೃದಹಾದ್ವೃಚ್ಕೃಗಮಿ ಜನಿಭ್ಯೋಲೇಃ'** (ಪಾ. ಸೂ ೨-೪-೮೦) ಎಂಬುದರಿಂದ ಲುಕ್, ಅಡಾಗಮ. ಅಕೃ+ತ. **'ತಿಙ್‌ಶಿತ್ಸಾರ್ವಧಾತುಕಮ್'** (ಪಾ. ಸೂ. ೩-೪-೧೧೩) ಧಾತ್ವಧಿಕಾರದಲ್ಲಿ ಉಕ್ತಗಳಾದ ತಿಪ್ ತಸ್, ಮೊದಲಾದ ಹದಿನೆಂಟು ಪ್ರತ್ಯಯಗಳೂ, ಶಕಾರೇತ್ಸಂಜ್ಞಕ ಪ್ರತ್ಯಯವೂ ಸಹ ಸಾರ್ವಧಾತುಕಸಂಜ್ಞಕವಾಗುವುದು, ಎಂಬುದರಿಂದ, ತಗೆ ಸಾರ್ವಧಾತುಕಸಂಜ್ಞೆ ಇದೆ, ಅದು ಪಿತ್ತಲ್ಲ. ಆದ್ದರಿಂದ, **'ಸಾರ್ವಧಾತುಕಮಪಿತ್'** (ಪಾ. ಸೂ. ೧-೨-೪) ಎಂಬುದರಿಂದ ಙಿತ್ವ ಬರುವುದು. ಏವಂಚ **'ಕ್ಙಿತಿಚ'** (ಪಾ. ಸೂ. ೧-೧-೫) ಎಂಬುದರಿಂದ ಇಗ್ಲಕ್ಷಣಗುಣಕ್ಕೆ ನಿಷೇಧ ಬರುವುದರಿಂದ ಇಲ್ಲಿ ಹೇಗೆ ಗುಣ ಬರುವುದು ಎಂದು ವಿಚಾರ ಬರದೇ ಇರದು. ಆದರೂ **'ಛಂದಸ್ಯುಭಯಥಾ'** (ಪಾ. ಸೂ. ೩-೪-೧೧೭) ಧಾತ್ವಧಿಕಾರದಲ್ಲಿ ವಿಹಿತವಾದ ಪ್ರತ್ಯಯಗಳು ಛಂದಸ್ಸಿನಲ್ಲಿ ಸಾರ್ವಧಾತುಕ, ಆರ್ಧಧಾತುಕ, ಎಂಬ ಎರಡು ಸಂಜ್ಞೆಯನ್ನೂ

ಹೊಂದುವುವು, ಎಂಬುದರಿಂದ ಇಲ್ಲಿ ತಗೆ ಆರ್ಧಧಾತುಕ ಸಂಜ್ಞೆ ಬರುವುದು, ಸಾರ್ವಧಾತುಕ ಸಂಜ್ಞೆ ಬರುವುದಿಲ್ಲ ಆದ್ದರಿಂದ '**ಸಾರ್ವಧಾತುಕಮಪಿತ್**' ಎಂಬುದರಿಂದ ಙಿತ್ವ ಬರುವುದಿಲ್ಲ. ಆದಕಾರಣ ಗುಣನಿಷೇಧ ಬರುವುದಿಲ್ಲ. ಏವಂಚ '**ಸಾರ್ವಧಾತುಕಾರ್ಧಧಾತುಕಯೋಃ**' (ಪಾ. ಸೂ ೭-೩-೮೪) ಎಂಬುದರಿಂದ ಗುಣ ಬರುವುದು. ಆದು ಋಕಾರ ಸ್ಥಾನದಲ್ಲಿ ಬರುವುದರಿಂದ ರಪರವಾಗಿ ಬರುವುದು. ಅಕರ್ತ ಎಂದಾಗುವುದು.

**ಚತುರಃ**—'**ಚತೇರುರನ್**' (ಉ. ಸೂ. ೫-೭೩೬) ಚತೇ-ಯಾಚನೇ ಈ ಧಾತುವಿನ ಮುಂದೆ ಉರನ್ ಪ್ರತ್ಯಯ ಬರುವುದು ಎಂಬುದರಿಂದ ಚತ್ ಧಾತುವಿನ ಮುಂದೆ ಉರನ್, ಪ್ರತ್ಯಯಲ್ಲಿ ಅಕಾರ ಉಚ್ಚಾರಣಾರ್ಥಕ, ಚತುರ್, ಇದು ನಿತ್ಸ್ವರದಿಂದ ಆದ್ಯುದಾತ್ತ, ಇದರ ಮುಂದೆ ದ್ವಿತೀಯಾ ಬಹುವಚನ ಶಸ್ ಪ್ರತ್ಯಯವನ್ನಿಟ್ಟರೆ '**ಚತುರಶ್ಯಸಿ**' (ಪಾ. ಸೂ. ೬-೧-೧೬೭) ಶಸ್ ವಿಭಕ್ತಿಯು ಪರದಲ್ಲಿರುವಾಗ ಚತುರ್ ಶಬ್ದದ ಅಂತವು ಉದಾತ್ತ ವಾಗುವುದು ಎಂಬುದರಿಂದ ಉಕಾರವು ಉದಾತ್ತ.

**ಪುನಃ**—ಸ್ವರಾದಿಗಣದಲ್ಲಿ ಇದನ್ನು ಆದ್ಯುದಾತ್ತವಾಗಿ ಪಾಠಮಾಡಿರುವರು. ॥ ೬ ॥

॥ ಸಂಹಿತಾಪಾಠಃ ॥

ತೇ ನೋ ರತ್ನಾನಿ ಧತ್ತನ ತ್ರಿರಾ ಸಾಪ್ತಾನಿ ಸುನ್ವತೇ ।
ಏಕಮೇಕಂ ಸುಶಸ್ತಿಭಿಃ ॥ ೭ ॥

॥ ಪದಪಾಠಃ ॥

ತೇ । ನಃ । ರತ್ನಾನಿ । ಧತ್ತನ । ತ್ರಿಃ । ಆ । ಸಾಪ್ತಾನಿ । ಸುನ್ವತೇ ।
ಏಕಂಽಏಕಂ । ಸುಶಸ್ತಿಽಭಿಃ ॥ ೭ ॥

॥ ಸಾಯಣಭಾಷ್ಯಂ ॥

**ತೃತೀಯೇ ಛಂದೋಮೇ ವೈಶ್ವದೇವಶಸ್ತ್ರೇ ತೇ ನೋ ರತ್ನಾನಿ ಧತ್ತನೇತಿ ದ್ವೇ ಋಚಾವಾಭರ್ಗವ್ಯೌ । ತೃತೀಯಸ್ಯಾಗನ್ಮ ಮಹೇತಿ ಖಂಡೇ ಸೂತ್ರಿತಂ । ಇಂದ್ರ ಇಷೇ ದದಾತು ನಸ್ತೇ ನೋ ರತ್ನಾನಿ ಧತ್ತನೇತ್ಯೇಕಾ ದ್ವೇ ಚ । ಅ. ೮-೧೧ । ಇತಿ ॥**

ಪೂರ್ವಾಸ್ಸೃಕ್ಷು ಯೇ ಪ್ರತಿಪಾದಿತಾ ಋಭವಸ್ತೇ ಯೂಯಂ ಸುಶಸ್ತಿಭಿಃ ಶೋಭನೈರಸ್ಮದೀಯ ಶಂಸನೈರ್ಯುಕ್ತಾಃ ಸಂತೋ ನೋಽಸ್ಮಾಕಂ ಸಂಬಂಧಿನೇ ಸುನ್ವತೇ ಸೋಮಾಭಿಷವಂ ಕುರ್ವತೇ ಯಜಮಾನಾಯ ರತ್ನಾನಿ ರಮಣೀಯಾನಿ ಸುವರ್ಣಮಣಿಮುಕ್ತಾದೀನಿ ಧನಾನ್ಯೇಕಮೇಕಂ ಕ್ರಮೇಣ ಪ್ರತ್ಯೇಕಂ ಧತ್ತನ । ಪ್ರಯಚ್ಛತ । ಸುವರ್ಣಾದೀನಾಂ ಮಧ್ಯೇ ಪ್ರತಿದ್ರವ್ಯಂ ಯಾವದಪೇಕ್ಷಿತಂ ತಾವದಿತಿ ವಿವಕ್ಷಯೈಕಮೇಕಮಿತ್ಯುಕ್ತಂ । ಕೀದೃಶಾನಿ ರತ್ನಾನಿ । ತ್ರಿರಾ ತ್ರಿವಾರಮಾವೃತ್ತಾನಿ । ಉತ್ತಮಾನಿ ಮಧ್ಯಮಾನ್ಯಧಮಾನಿ ಚೇತ್ಯೇವಂ ರತ್ನಾನಾಂ ತ್ರಿರಾವೃತ್ತಿಃ । ಕಿಂ ಚ ಸಾಪ್ತಾನಿ ಸಪ್ತಸಂಖ್ಯಾನಿಷ್ಪನ್ನವರ್ಗರೂಪಾಣಿ ಕರ್ಮಾಣಿ ಚ ಧತ್ತನ । ಸಂಪಾದಯತ । ಕೀದೃಶಾನಿ ಸಾಪ್ತಾನಿ । ತ್ರಿರಾ ತ್ರಿವಾರಮಾವೃತ್ತಾನಿ । ಅಗ್ನ್ಯಾಧೇಯದರ್ಶಪೂರ್ಣಮಾಸಾದೀನಾಂ ಸಪ್ತಾನಾಂ ಹವಿರ್ಯಜ್ಞಾನಾಮೇಕೋ ವರ್ಗಃ । ಔಪಾಸನಹೋಮೋ ವೈಶ್ವದೇವಮಿತ್ಯಾದೀನಾಂ ಸಪ್ತಾನಾಂ ಪಾಕಯಜ್ಞಾನಾಂ ವರ್ಗೋ ದ್ವಿತೀಯಃ । ಅಗ್ನಿಷ್ಟೋಮೋಽತ್ಯಗ್ನಿಷ್ಟೋಮ ಇತ್ಯಾದೀನಾಂ ಸಪ್ತಾನಾಂ ಸೋಮಸಂಖ್ಯಾನಾಂ ವರ್ಗಸ್ತೃತೀಯಃ ॥ ರತ್ನಾನಿ । ರಮು ಕ್ರೀಡಾಯಾಂ । ನಿದಿತ್ಯನುವೃತ್ತೌ ರಮೇಸ್ತ ಚ । ಉ. ೩. ೧೪ । ಇತಿ ನಪ್ರತ್ಯಯಃ । ತತ್ಸನ್ನಿಯೋಗೇನ ಮಕಾರಸ್ಯ ತಕಾರಃ । ನಿತ್ತ್ವಾದಾದ್ಯುದಾತ್ತಃ । ಧತ್ತನ । ಧತ್ತ । ತಪ್ತನಪ್ತನಥನಾಶ್ಚೇತಿ ತಶಬ್ದಸ್ಯ ತನಾದೇಶಃ । ಸಪ್ತಾನಾಂ ವರ್ಗಃ ಸಾಪ್ತಂ । ಸಪ್ತನೋಽಞ್ ಛಂದಸಿ । ಪಾ. ೫-೧-೬೧ । ಇತಿ ವರ್ಗೇಽಞ್ಪ್ರತ್ಯಯಃ । ನಸ್ತದ್ಧಿತೇ । ಪಾ. ೬-೪-೧೪೪ । ಇತಿ ಟಿಲೋಪಃ । ಞಿತ್ತ್ವಾದಾದಿವೃದ್ಧಿರಾದ್ಯುದಾತ್ತತ್ವಂ ಚ । ಅತ್ರ ವರ್ಗವಚನೇನಾನೇನ ವರ್ಗಿಣೋ ಲಕ್ಷ್ಯಂತೇ । ತೇನ ಬಹುವಚನಂ । ಅನ್ಯಥಾ ಹ್ಯೇಕ ಏವ ವರ್ಗಸ್ತ್ರಿರಾವೃತ್ತ ಇತ್ಯೇಕವಚನಮೇವ ಸ್ಯಾತ್ । ಸುನ್ವತೇ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಏಕಮೇಕಂ । ನಿತ್ಯವೀಪ್ಸಯೋರಿತಿ ವೀಪ್ಸಾಯಾಂ ದ್ವಿರ್ಭಾವಃ । ಏಕಶಬ್ದ ಇಣಃ ಕನಂತೋ ನಿತ್ತ್ವಾದಾದ್ಯುದಾತ್ತಃ । ದ್ವಿತೀಯಸ್ಯೈಕಶಬ್ದಸ್ಯ ತಸ್ಯ ಪರಮಾಮ್ರೇಡಿತಮಿತ್ಯಾಮ್ರೇಡಿತಸಂಜ್ಞಾಯಾಮನುದಾತ್ತಂ ಚೇತ್ಯನುದಾತ್ತತ್ವಂ । ಸುಶಸ್ತಿಭಿಃ ಶಸ್ಯತ ಆಭಿರಿತಿ ಶಸ್ತಯ ಋಚಃ । ಶನ್ಸು ಸ್ತುತೌ । ಕರಣೇ ಕ್ತಿನ್ । ತಸ್ಯ ಕಿತ್ತ್ವಾನ್ನಲೋಪಃ । ಶೋಭನಾಃ ಶಸ್ತಯ ಇತಿ ಪ್ರಾದಿಸಮಾಸೇ ಯದ್ಯಪಿ ಚ ಕ್ತಿನೋ ನಿತ್ತ್ವಾದಾದ್ಯುದಾತ್ತತ್ವೇನ ಕೃದುತ್ತರಪದಪ್ರಕೃತಿಸ್ವರತ್ವೇನ ತದೇವ ಪ್ರಾಪ್ತಂ ತತ್ತು ಪರೇಣ ಮನ್‌ಕ್ತಿನ್ವ್ಯಾಖ್ಯಾನೇತ್ಯಾದಿನೋತ್ತರಪದಾಂತೋದಾತ್ತತ್ವೇನ ಬಾಧ್ಯತೇ । ಪಾ. ೬-೨-೧೫೧ ॥

॥ ಪ್ರತಿಪದಾರ್ಥ ॥

**ತೇ**—ಹಿಂದೆ ಪ್ರತಿಪಾದಿತರಾದ ನೀವು (ಋಭುಗಳು) । **ಸುಶಸ್ತಿಭಿಃ**—(ನಮ್ಮ) ಮಂಗಳಕರವಾದ ಸ್ತುತಿಗಳಿಂದ । **ನಃ**—ನಮ್ಮ । **ಸುನ್ವತೇ**—ಸೋಮವನ್ನು ಸಿದ್ಧಪಡಿಸುವ (ಯಜಮಾನನಿಗೆ) । **ತ್ರಿರಾ**—(ಉತ್ತಮ, ಮಧ್ಯಮ, ಅಧಮಗಳೆಂದು) ಮೂರು ವಿಧವಾದ । **ರತ್ನಾನಿ**—ಅನರ್ಘರತ್ನಾದಿಗಳನ್ನೂ । **ತ್ರಿರಾ**—ತ್ರಿವರ್ಗರೂಪವಾದ । **ಸಾಪ್ತಾನಿ**—ಸಪ್ತಸಂಖ್ಯಾಕಸೋಮಸಂಸ್ಥೆಗಳೆಂಬ ಕರ್ಮಗಳನ್ನೂ । **ಧತ್ತನ**—ಅನುಗ್ರಹಿಸಿ.

॥ ಭಾವಾರ್ಥ ॥

ನಮ್ಮ ಸ್ತೋತ್ರಗಳಿಂದ ತೃಪ್ತರಾದ ಋಭುಗಳು ಸೋಮರಸವನ್ನು ಸಿದ್ಧಪಡಿಸಿ ಕೊಡುವ ಯಜಮಾನನಿಗೆ ಉತ್ತಮ, ಮಧ್ಯಮ ಮತ್ತು ಅಧಮಗಳೆಂದು ಮೂರು ವಿಧವಾದ ರತ್ನಗಳನ್ನೂ, ಒಂದೊಂದರಲ್ಲಿಯೂ ಏಳೇಳು ಕರ್ಮಗಳುಳ್ಳ ತ್ರಿವರ್ಗಗಳನ್ನೂ ಒಂದೊಂದನ್ನಾಗಿ ಅನುಗ್ರಹಿಸಲಿ.

English Translation.

Confer, therefore, Ribhus, moved by our praises, the three-fold riches upon our sacrificer, one by one ; accomplish the thrice seven-fold works (Sacrifices).

॥ ವಿಶೇಷವಿಷಯಗಳು ॥

ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ಮೂರನೆಯ ಛಂದೋಮಾಮಂತ್ರಕ್ಕಾಗಿ ಈ ಋಕ್ಕನ್ನೂ ಮುಂದಿನ ಋಕ್ಕನ್ನೂ ಪಠಿಸುವರು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ **ತೃತೀಯಸ್ಯಾಗನ್ಮ ಮಹ** ಎಂಬ ಖಂಡದಲ್ಲಿ **ಇಂದ್ರ ಇಷೇ ದದಾತುನ** (ಋ. ಸಂ. ೮-೯೩-೩೪) **ಸ್ತೇನೋ ರತ್ನಾನಿ ಧತ್ತನೇತ್ಯೇಕಾ ದ್ವೇ ಚ** ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿದೆ. (ಆ. ೮-೧೧)

ಈ ಋಕ್ಕಿನಲ್ಲಿ ಋಭುದೇವತೆಗಳ ಶಕ್ತಿಸಾಮರ್ಥ್ಯಗಳನ್ನು ವರ್ಣಿಸಿಲ್ಲ, ಯಜ್ಞವನ್ನು ಮಾಡುವ ಯಜಮಾನನಿಗೆ ರತ್ನಾದಿಧನಗಳನ್ನೂ ಯಜ್ಞಯಾಗಾದಿಕರ್ಮಗಳ ಫಲಗಳನ್ನೂ ಅನುಗ್ರಹಿಸಬೇಕೆಂದು ಪ್ರಾರ್ಥಿಸಲಾಗಿದೆ.

**ತ್ರಿರಾ ಸಾಪ್ತಾನಿ**—ಮೂರು ಏಳು ಎಂದರೆ ಮೂರಾವರ್ತಿ ಏಳು ಅಥವಾ ಇಪ್ಪತ್ತೊಂದು ಎಂದರ್ಥವು. ಯಜ್ಞಕ್ರಮಗಳಲ್ಲಿ ಮುಖ್ಯವಾಗಿ ಇಪ್ಪತ್ತೊಂದು ವಿಧವಾದ ಯಜ್ಞಗಳಿರುವವು. ಅವುಗಳನ್ನು ಮೂರು ವಿಧವಾಗಿ ವಿಂಗಡಿಸಿರುವರು.

**(೧) ಅಗ್ನ್ಯಾಧೇಯದರ್ಶಪೂರ್ಣಮಾಸಾದೀನಾಂ ಸಾಪ್ತಾನಾಂ ಹವಿರ್ಯಜ್ಞಾನಾಮೇಕೋ ವರ್ಗಃ ॥** ಅಗ್ನ್ಯಾಧೇಯ, ದರ್ಶಪೂರ್ಣಮಾಸ ಮೊದಲಾದ ಏಳು ಯಜ್ಞಗಳ ಒಂದು ವರ್ಗಕ್ಕೆ ಹವಿರ್ಯಜ್ಞವೆಂದು ಹೆಸರು. ಈ ಯಜ್ಞಗಳಲ್ಲಿ ದೇವತೆಗಳಿಗೆ ಮುಖ್ಯವಾಗಿ ಅರ್ಪಿಸುವ ವಸ್ತುವು ಹವಿಸ್ಸಾದ್ದರಿಂದ ಇವುಗಳಿಗೆ ಹವಿರ್ಯಜ್ಞಗಳೆಂದು ಹೆಸರು. **ಅಗ್ನ್ಯಾಧೇಯ, ಅಗ್ನಿಹೋತ್ರ, ದರ್ಶಪೂರ್ಣಮಾಸ, ಆಗ್ರಯಣ, ಚಾತುರ್ಮಾಸ್ಯ, ದಾಕ್ಷಾಯಣಯಜ್ಞ, ಸೌತ್ರಾಮಣಿ** ಎಂಬ ಈ ಏಳು ಯಜ್ಞಗಳೂ ಈ ವರ್ಗಕ್ಕೆ ಸೇರಿದವುಗಳು (ಐ. ಬ್ರಾ. ಭಾ. ೫-೭).

**(೨) ಔಪಾಸನಹೋಮೋ ವೈಶ್ವದೇವಮಿತ್ಯಾದೀನಾಂ ಸಪ್ತಾನಾಂ ಪಾಕಯಜ್ಞಾನಾಂ ವರ್ಗೋ ದ್ವಿತೀಯಃ ॥** ಔಪಾಸನ, ವೈಶ್ವದೇವ ಮೊದಲಾದ ಏಳು ಯಜ್ಞಗಳ ವರ್ಗಕ್ಕೆ ಪಾಕಯಜ್ಞವೆಂದು ಹೆಸರು. ಇವುಗಳನ್ನು ಗೃಹ್ಯಯಜ್ಞಗಳೆಂದೂ ಹೇಳುವರು. ಇವುಗಳಲ್ಲಿ ಮುಖ್ಯವಾಗಿ ದೇವತೆಗಳಿಗೆ ಅರ್ಪಿಸುವ ವಸ್ತುವು

ಧಾನ್ಯವು. **ಔಪಾಸನ, ವೈಶ್ವದೇವ, ಪಾರ್ವಣ, ಅಷ್ಟಕ, ಮಾಸಿಶ್ರಾದ್ಧ, ಸರ್ಪಬಲಿ, ಈಶಾನಬಲಿ** ಎಂಬ ಈ ಏಳೂ ಈ ವರ್ಗಕ್ಕೆ ಸೇರಿದವುಗಳು. (ಆಪಸ್ತಂಬಪರಿಭಾಷಾಸೂತ್ರದ ಧೂರ್ತಸ್ವಾಮಿಯ ವ್ಯಾಖ್ಯಾನದ ಪ್ರಕಾರ).

(೩) **ಅಗ್ನಿಷ್ಟೋಮೋಽತ್ಯಗ್ನಿಷ್ಟೋಮ ಇತ್ಯಾದೀನಾಂ ಸಪ್ತಾನಾಂ ಸೋಮಸಂಸ್ಥಾನಾಂ ವರ್ಗಸ್ತೃತೀಯಃ ॥** ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ ಮೊದಲಾದ ಸೋಮಸಂಸ್ಥೆಗಳನ್ನೊಳಗೊಂಡ ಏಳು ಸೋಮ ಯಜ್ಞಗಳು ಮೂರನೆಯ ವರ್ಗವು. ಇವುಗಳಿಗೆ ಸೋಮಯಜ್ಞಗಳೆಂದು ಹೆಸರು. ಇವುಗಳಲ್ಲಿ ದೇವತೆಗಳಿಗೆ ಅರ್ಪಿಸುವ ವಸ್ತುವು ಸೋಮರಸವು. **ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶಿನ್, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ** ಎಂಬ ಈ ಏಳು ಸೋಮಯಜ್ಞಗಳು ಅಥವಾ ಸೋಮಸಂಸ್ಥೆಗಳು.

ಈ ಮೂರುವಿಧವಾದ ವರ್ಗಗಳ ವಿವರಣೆಯನ್ನು ನಾವು ಋಗ್ವೇದ ಸಂಹಿತಾ ಭಾಗ ೧, ೪೧೬-೪೧೭ ಮತ್ತು ೪೩೨-೪೩೩ ನೇ ಪುಟಗಳಲ್ಲಿ ಕೊಟ್ಟಿದೇವೆ.

**ಏಕಮೇಕಂ—ಕ್ರಮೇಣ ಪ್ರತ್ಯೇಕಂ ॥** ಧನ, ಧಾನ್ಯ, ಪಶು ಮೊದಲಾದ ನಮಗೆ ಇಷ್ಟವಾದ ವಸ್ತುಗಳಲ್ಲಿ ಒಂದನ್ನಾಗಲಿ ಅಥವಾ ಎಲ್ಲವನ್ನೂ ಒಂದೊಂದನ್ನಾಗಿಯಾಗಲಿ ಕೊಡಬೇಕೆಂದಭಿಪ್ರಾಯವು.

**ಸುಶಸ್ತಿಭಿಃ—ಶಸ್ಯತೆ ಆಭಿರಿತಿ ಶಸ್ತಯ ಋಚಃ ॥** ಋಕ್ಕುಗಳಿಂದ ದೇವತೆಗಳನ್ನು ಸ್ತೋತ್ರಮಾಡುವುದರಿಂದ ಇವುಗಳಿಗೆ ಶಸ್ತಯಃ ಎಂದು ಹೆಸರು. ಸುಶಸ್ತಯಃ ಎಂದರೆ ಉತ್ತಮವಾದ ಋಕ್ಕುಗಳು ಅಥವಾ ಸ್ತೋತ್ರಗಳು.

॥ ವ್ಯಾಕರಣಪ್ರಕ್ರಿಯಾ ॥

ರತ್ನಾನಿ—**'ರಮು ಕ್ರೀಡಾಯಾಂ'** ಧಾತು. **'ರಮೇಸ್ತ ಚ'** (ಉ. ಸೂ. ೩-೨೯೪) **'ಕೃವೃಜೃಸಿದ್ರುಪನ್ಯನಿಸ್ವಪಿಭ್ಯೋ ನಿತ್'** (ಉ ಸೂ. ೩-೨೯೦) ಎಂಬ ಸೂತ್ರದಿಂದ **'ನಿತ್'** ಎಂಬ ಪದವು ಅನುವೃತ್ತವಾಗುವುದು. ರಮೇಃ ಎಂದು ಣ್ಯಂತನಿರ್ದೇಶ. ಣಿಜಂತವಾದ ರಮ್ ಧಾತುವಿನ ಮುಂದೆ ನಪ್ರತ್ಯಯ ಬರುವುದು. ಅದು ನಿತ್ತಾಗುವುದು, ರಮ್ ಧಾತುವಿಗೆ ತಕಾರವೂ ಅಂತಾದೇಶವಾಗಿ ಬರುವುದು ಎಂದು ಸೂತ್ರಾರ್ಥ. ಇಲ್ಲಿ **'ಧಾಪೃವಸ್ಯಜ್ಯತಿಭ್ಯೋ ನಃ'** (ಉ. ಸೂ. ೩-೨೮೬) ಎಂಬುದರಿಂದ **'ನಃ'** ಎಂಬುದಕ್ಕೆ ಅನುವೃತ್ತಿ. ಈ ಸೂತ್ರದಿಂದ ಣ್ಯಂತರಮ್ ಧಾತುವಿನ ಮುಂದೆ **'ನ'** ಪ್ರತ್ಯಯ ಬಂದರೆ ಮಕಾರಕ್ಕೆ ತಕಾರಾದೇಶವೂ ಬಂದು ರತ್+ಇ+ನ. ಎಂದಿರುವುದು. ರಮ್ ಧಾತುವಿನ ಮುಂದೆ ಣಿಚ್ ಪ್ರತ್ಯಯವನ್ನು ಮಾಡಿದರೆ ರಮ್+ಇ ಎಂದಿರುವಾಗ **'ಅತ ಉಪಧಾಯಾಃ'** (ಪಾ. ಸೂ ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ರಾಮ್+ಇ+ನ, **'ಜನೀಜೄಷ್ಕ್ನಸುರಞ್ಜೋಽಮನ್ತಾಶ್ಚ'** (ಘ. ಗ. ೨) ಜನೀ ಪ್ರಾದುರ್ಭಾವೇ, ಜೄಷ್ ವಯೋಹಾನೌ, ಕ್ನಸು ಹ್ವರಣದೀಪ್ತ್ಯೋಃ, ರಞ್ಜ ರಾಗೇ ದೈವಾದಿಕ ಭೌವಾದಿಕಗಳೆರಡಕ್ಕೂ ಗ್ರಹಣ. ಅಮ್ ಎಂಬುದನ್ನು ಕೊನೆಯಲ್ಲಿ ಹೊಂದಿರತಕ್ಕವು ಇವುಗಳು ಮಿತ್ತಾಗುವುವು, ಎಂಬುದರಿಂದ ಮಿತ್ತ್ವಬರುವುದು **'ಮಿತಾಂ ಹ್ರಸ್ವಃ'** (ಪಾ. ಸೂ ೬-೪-೯೨) ಣಿ, ಪರದಲ್ಲಿರುವಾಗ ಮಿತ್ಸಂಜ್ಞಕದ ಉಪಾಂತ್ಯವರ್ಣಕ್ಕೆ ಹ್ರಸ್ವಬರುವುದು ಎಂಬುದರಿಂದ ಹ್ರಸ್ವ-ಈಗ ನಪ್ರತ್ಯಯ ತಕಾರಾದೇಶಗಳು ಬಂದರೆ ರತ್+ಇ+ನ, **'ಣೇರನಿಟಿ'** (ಪಾ. ಸೂ. ೬-೪-೫೧) ಇಡಾದಿಯಲ್ಲಿ ಅರ್ಧಧಾತುಕ ಪರದಲ್ಲಿ

ರುವಾಗ ಣಿಗೆ ಲೋಪಬರುವುದು ಎಂಬುದರಿಂದ ಣಿಗೆ **ಲೋಪ**, '**ರತ್ನ**' ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ '**ಞ್ನಿತ್ಯಾದಿರ್ನಿತ್ಯಂ**' (ಪಾ. ಸೂ. ೬–೧–೧೯೭) ಎಂಬುದರಿಂದ ಆದ್ಯುದಾತ್ತ. ರತ್ನಶಬ್ದ–ದ್ವಿತೀಯಾವಿಭಕ್ತಿ ಬಹು ವಚನದಲ್ಲಿ ರತ್ನಾನಿ, ಎಂದಾಗುವುದು.

**ಧತ್ತನ**–ಧತ್ತ ಎಂದು ಅರ್ಥ. 'ಡುಧಾಞ್ ಧಾರಣಪೋಷಣಯೋಃ' ಧಾತು. ಇದರ ಮುಂದೆ **ಲೋಟ್** ಮಧ್ಯಮಪುರುಷನ ಬಹುವಚ ಥಪ್ರತ್ಯಯ, ಧಾ+ಥ '**ಕರ್ತರಿ ಶಪ್**' (ಪಾ. ಸೂ. ೩–೧–೬೮) ಎಂಬುದರಿಂದ ಶಪ್ ವಿಕರಣ. ಅದಕ್ಕೆ **ಜುಹೋತ್ಯಾದಿಭ್ಯಃ ಶ್ಲುಃ**' (ಪಾ. ಸೂ. ೨–೪–೭೫) ಎಂಬುದರಿಂದ ಶ್ಲು (**ಲೋಪ**) '**ಶ್ಲೌ**' (ಪಾ. ಸೂ. ೬–೧–೧೦) ಶ್ಲು ಶಬ್ದವನ್ನುಚ್ಚರಿಸಿ ಲೋಪ ಬಂದಿರುವ ಸ್ಥಳಗಳಲ್ಲಿ ಧಾತುವಿಗೆ ದ್ವಿತ್ವ ಬರುವುದು ಎಂಬುದರಿಂದ ದ್ವಿತ್ವ. ಧಾಧಾ+ಥ '**ಹ್ರಸ್ವಃ**' (ಪಾ. ಸೂ. ೭–೪–೫೯) ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ, '**ಅಭ್ಯಾಸೇ ಚರ್ಚ**' (ಪಾ. ಸೂ. ೮–೪–೫೪) ಎಂಬುದರಿಂದ ಧಕಾರಕ್ಕೆ ಜಶ್ತ್ವ ದಕಾರ ದಧಾ+ಥ–'**ಈ ಹಲ್ಯಘೋಃ**' (ಪಾ. ಸೂ. ೬–೪–೧೧೩) ಹಲಾದಿಯಾದ ಕಿತ್ತು ಅಥವಾ ಙಿತ್ತು ಆದ ಸಾರ್ವಧಾತುಕಪ್ರತ್ಯಯ ಪರದಲ್ಲಿರುವಾಗ ಶ್ನಾಪ್ರತ್ಯಯ ಘುಸಂಜ್ಞೆಯನ್ನು ಹೊಂದದ ಅಭ್ಯಸ್ತಗಳು ಇವುಗಳ ಆಕಾರಕ್ಕೆ ಈಕಾರಾದೇಶ ಬರುವುದು ಎಂಬುದರಿಂದ ಇಲ್ಲಿ ಈಕಾರಾದೇಶ ಬರುವುದಿಲ್ಲ. ಏಕೆಂದರೆ '**ದಾಧಾಘ್ವದಾಪ್**' (ಪಾ. ಸೂ. ೧–೧–೨೦) ದಾ ರೂಪ ಧಾ ರೂಪ ಗಳಾದ ಧಾತುಗಳು ದೈಪ್ ದಾಪ್ ಧಾತುಗಳನ್ನುಳಿದು ಘುಸಂಜ್ಞೆಯನ್ನು ಹೊಂದುವುವು ಎಂಬುದರಿಂದ, ಧಾ ಧಾತು ವಿಗೆ ಘುಸಂಜ್ಞೆ ಇರುವುದು, 'ಈ ಹಲ್ಯಘೋಃ' ಎಂಬಲ್ಲಿ ಅಘೋಃ ಎಂದು ಪ್ರತಿಷೇಧವಿರುವುದು. ಆದ್ದರಿಂದ ಈತ್ವ ಬರುವುದಿಲ್ಲ. '**ಶ್ನಾಭ್ಯಸ್ತಯೋರಾತಃ**' (ಪಾ. ಸೂ. ೬–೪–೧೧೨) ಕಿತ್ತುಙಿತ್ತಾದ ಸಾರ್ವಧಾತುಕಪ್ರತ್ಯಯವು ಪರದಲ್ಲಿರುವಾಗ ಶ್ನಾಪ್ರತ್ಯಯ ಅಭ್ಯಸ್ತ ಇವುಗಳ ಆಕಾರಕ್ಕೆ ಲೋಪಬರುವುದು ಎಂಬುದರಿಂದ **ಲೋಪ**, ದಧ್+ಥ '**ಲೋಟೋಲಙ್ವತ್**' (ಪಾ. ಸೂ. ೩–೪–೮೫) ಲೊಟ್ಟಿಗೆ ಲಙಿಗೆ ಕಾರ್ಯಬರುವಂತೆ ಕಾರ್ಯಬರುವುದು ಎಂದು ಲಙ್ವದ್ಭಾವಬರುವುದು '**ತಸ್ಥಸ್ಥಮಿಪಾಂತಾಂತಂತಾಮಃ**' (ಪಾ. ಸೂ. ೩–೪–೧೦೧) ಙಿತ್ತಾದ ಲಕಾರದ ಸ್ಥಾನ ದಲ್ಲಿ ಬಂದ ತಸ್–ಥಸ್, ಥ, ಮಿಪ್ ಇವುಗಳಿಗೆ ಕ್ರಮವಾಗಿ ತಾಮ್, ತಮ್, ತ, ಅಮ್ ಈ ಆದೇಶಗಳು ಬರುವುವು ಎಂಬುದರಿಂದ ಥಗೆ ತ ಆದೇಶ ದಧ್+ತ '**ದಧಸ್ತಥೋಶ್ಚ**' (ಪಾ. ಸೂ. ೮–೨–೩೮) ದ್ವಿತ್ವವನ್ನು ಹೊಂದಿ ಝಷಂತವಾಗಿರುವ ಧಾಞ್ ಧಾತುವಿನ ಬಶ್ ವರ್ಣಗಳಿಗೆ ಭಷ್ ವರ್ಣಗಳು ತಕಾರ ಥಕಾರ ಸಕಾರ ಧ್ವ ಶಬ್ದಗಳು ಪರದಲ್ಲಿರುವಾಗ ಬರುವುವು ಎಂಬುದರಿಂದ ಮೊದಲನೆಯ ದಕಾರಕ್ಕೆ ಧಕಾರ ಧಧ್+ತ, ಇಲ್ಲಿ ಭಷ್ಭಾವವನ್ನು ಮಾಡುವಾಗ ಆ ಲೋಪಕ್ಕೆ '**ಅಚಃ ಪರಸ್ಮಿನ್ಪೂರ್ವವಿಧೌ**' (ಪಾ. ಸೂ. ೧–೧–೫೭) ಎಂಬುದರಿಂದ ಸ್ಥಾನಿವದ್ಭಾವ ಬಂದರೆ, ಆಕಾರಾಂತಬುದ್ಧಿ ಬರುವುದರಿಂದ ಝಷಂತ ದ್ವಿರುಕ್ತ ಧಾ ಧಾತು ಇಲ್ಲವಾದ್ದರಿಂದ ಭಷ್ಭಾವ ಹೇಗೆ ಬರುವುದು ಎಂದು ಶಂಕೆ ಬರುವುದು. ಇಲ್ಲಿ ವಾಮನ ಮಾಧವಾಚಾರ್ಯರುಗಳು ಭಷ್ಭಾವ ವಿಧಾನಸಾಮರ್ಥ್ಯ ದಿಂದ ಸ್ಥಾನಿವದ್ಭಾವ ಬರುವುದಿಲ್ಲ ಎಂದು ಹೇಳುವರು, ಮತ್ತೆ ಕೆಲವರು '**ಪೂರ್ವತ್ರಾಸಿದ್ಧೀಯೇನ ಸ್ಥಾನಿವತ್**' **ಪೂರ್ವತ್ರಾಸಿದ್ಧಮ್** (ಪಾ. ಸೂ ೮–೨–೧) ಎಂಬ ಅಧಿಕಾರದಲ್ಲಿರುವ ಶಾಸ್ತ್ರಗಳನ್ನು ಮಾಡುವಾಗ ಸ್ಥಾನಿವದ್ಭಾವ ಬರುವುದಿಲ್ಲ ಎಂಬುದರಿಂದ ತ್ರೈಪಾದಿಕವಾದ ಭಷ್ಭಾವವನ್ನು ಮಾಡುವಾಗ ಸ್ಥಾನಿವದ್ಭಾವಕ್ಕೆ ಪ್ರತಿಷೇಧ ಬರುವುದು ಆದ್ದರಿಂದ ಸ್ಥಾನಿವದ್ಭಾವವು ಬರುವುದಿಲ್ಲ. ಏವಂಚ ದ್ವಿರುಕ್ತಝಷಂತ ಧಾಧಾತು ಸಿಗುವುದರಿಂದ 'ದಧಸ್ತಥೋಶ್ಚ' ಎಂಬುದರಿಂದ ಭಷ್ಭಾವ ಬರಲು ಯಾವ ತಡೆಯೂ ಇರುವುದಿಲ್ಲ. ಧಧ್+ತ ಎಂದಿರುವಾಗ

**‘ ಖರಿ ಚ ’** (ಪಾ. ಸೂ. ೮-೪-೫೫) ಖರ್ ವರ್ಣ ಪರದಲ್ಲಿರುವಾಗ ಝಲ್ ವರ್ಣಗಳಿಗೆ ಚರ್ ವರ್ಣಗಳು ಬರುವುವು ಎಂಬುದರಿಂದ ಚರ್ತ್ವ ಬಂದರೆ ಧತ್ತ ಎಂದಾಗುವುದು. ಈಗ **‘ ತಪ್ತನಪ್ತನಥನಾಶ್ಚ ’** (ಪಾ. ಸೂ. ೭-೧-೪೫) ಲೋಟ್ ಮಧ್ಯಮಪುರುಷ ಬಹುವಚನಕ್ಕೆ ಆದೇಶವಾಗಿಬಂದ ತ ಕಾರಕ್ಕೆ ತಪ್, ತನಪ್, ತನ, ಥನ ಈ ಆದೇಶಗಳು ಬರುವುವು ಎಂಬುದರಿಂದ ತಗೆ ತನ ಆದೇಶ, ಧತ್ತನ ಎಂದಾಗುವುದು. **‘ ತಿಙ್ಙತಿಙಃ ’** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ.

**ಸಾಪ್ತಾನಿ—‘ ಸಪ್ತನೋಽಞ್ ಛಂದಸಿ ’** (ಪಾ. ಸೂ. ೫-೧-೬೧) ಸಪ್ತನ್ ಎಂಬ ಪ್ರಾತಿಪದಿಕ ಪ್ರಕೃತಿಕವಾದ ಪ್ರಥಮಾಂತಸಮರ್ಥದ ಮುಂದೆ ‘ ತತ್‌ಪರಿಮಾಣಮಸ್ಯ ವರ್ಗಸ್ಯ ’ ಎಂಬ ಅರ್ಥದಲ್ಲಿ ಅಞ್ ಪ್ರತ್ಯಯು ಬರುವುದು, ಎಂಬುದರಿಂದ ಸಪ್ತಪರಿಮಾಣಮಸ್ಯ ವರ್ಗಸ್ಯ ಎಂದು ವಿವಕ್ಷಿಸಿದಾಗ ಸಪ್ತನ್+ಸು ಎಂಬುದರ ಮುಂದೆ ಅಞ್ ಪ್ರತ್ಯಯ ಬರುವುದು. ತದ್ಧಿತಾಂತವಾದ್ದರಿಂದ ಪ್ರಾತಿಪದಿಕಸಂಜ್ಞೆ ಬರಲು ಪ್ರಾತಿಪದಿಕಾವಯವವಾದ ಸುಪ್‌ಗೆ **‘ ಸುಪೋಧಾತುಪ್ರಾತಿಪದಿಕಯೋಃ ’** (ಪಾ. ಸೂ ೨-೪-೭೧) ಎಂಬುದರಿಂದ ಲುಕ್ ಸಪ್ತನ್+ಅ ಈಗ **‘ ನಸ್ತದ್ಧಿತೇ ’** (ಪಾ. ಸೂ. ೬-೪-೧೪೪) ತದ್ಧಿತಪ್ರತ್ಯಯ ಪರದಲ್ಲಿರುವಾಗ ನಕಾರಾಂತ ಭಸಂಜ್ಞಕಾಂಗಾವಯವವಾದ ಟಿ ಗೆ ಲೋಪಬರುವುದು ಎಂಬುದರಿಂದ ಅನ್‌ಗೆ ಲೋಪ, ಸಪ್ತ್+ಅ; ಸ್ವರಾಂತವಾದ ಶಬ್ದಗಳಲ್ಲಿ ಕೊನೆಯ ಸ್ವರಕ್ಕೂ ವ್ಯಂಜನಾಂತ ಶಬ್ದಗಳಲ್ಲಿ ಕೊನೆಯ ವ್ಯಂಜನದಿಂದ ಕೂಡಿದ ಉಪಾಂತ್ಯಸ್ವರಕ್ಕೂ ಟಿ ಎಂದು ಹೆಸರು ಈ ಅರ್ಥವು **‘ ಅಚೋಽನ್ತ್ಯಾದಿ ಟಿ ’** (ಪಾ. ಸೂ. ೧-೧-೬೪) ಎಂಬುದರಿಂದ ಉಕ್ತವಾಗಿರುವುದು. **‘ ಯಚಿ ಭಮ್ ’** (ಪಾ. ಸೂ ೧-೪-೧೮) ಕಪ್ರತ್ಯಯಾವಧಿಕಾಸರ್ವನಾಮಯಾದ್ಯಾಜಾದ್ಯನ್ಯತರ ಸ್ವಾದಿ ಪ್ರತ್ಯಯಗಳಿಗೆ ಅವ್ಯವಹಿತ ಪೂರ್ವದಲ್ಲಿರುವುದಕ್ಕೆ ಭ ಎಂದು ಹೆಸರು, **‘ ಯಸ್ಮಾತ್ಪ್ರತ್ಯಯವಿಧಿಸ್ತದಾದಿ ಪ್ರತ್ಯಯೇಽಙ್ಗಮ್ ’** ಯಾವ ಪ್ರಕೃತಿ ವಿಶೇಷದ ಮುಂದೆ ಯಾವ ಪ್ರತ್ಯಯವು ವಿಧಿಸಲ್ಪಡುವುದೋ ಆ ಪ್ರತ್ಯಯವು ಪರದಲ್ಲಿರುವಾಗ ಆ ಪ್ರಕೃತಿವಿಶೇಷಾದ್ಯವಯವಕವಾದ ಶಬ್ದವು ಅಂಗಸಂಜ್ಞೆಯನ್ನು ಹೊಂದುವುದು ಎಂದು ಅಂಗಸಂಜ್ಞೆಯು ವಿಹಿತವಾಗಿರುವುದು. ಪ್ರತ್ಯಯವು ಞಕಾರೇತ್ಸಂಜ್ಞಕವಾಗಿರುವುದು. ಆದ್ದರಿಂದ, ಆದಿವೃದ್ಧಿಯೂ, ಆದ್ಯುದಾತ್ತ ಸ್ವರವೂ ಬರುವುದು. ಆದಿವೃದ್ಧಿಯು, **‘ ತದ್ಧಿತೇಷ್ವಚಾಮಾದೇಃ ’** (ಪಾ. ಸೂ. ೭-೨-೧೧೭) ಞಿತ್ತು ಅಥವಾ ಣಿತ್ತು ಆದ ತದ್ಧಿತಪ್ರತ್ಯಯ ಪರದಲ್ಲಿರುವಾಗ ಆ ಶಬ್ದದ ಅಚ್ ಸಮುದಾಯದ ಮಧ್ಯದಲ್ಲಿ ಮೊದಲನೆಯ ಅಚ್ಚಿಗೆ ವೃದ್ಧಿ ಬರುವುದು ಎಂದು ವಿಹಿತವಾಗಿದೆ. ಇಲ್ಲಿ ಸಕಾರೋತ್ತರವರ್ತಿಯಾದ ಅಕಾರಕ್ಕೆ ಆಕಾರರೂಪವಾದ ವೃದ್ಧಿಯು ಬರುವುದು. ಸಾಪ್+ಅ=ಸಾಪ್ತ ಎಂದಾಗುವುದು. **‘ ಞ್ನಿತ್ಯಾದಿರ್ನಿತ್ಯಂ ’** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವು ವಿಹಿತವಾಗಿರುವುದು, ಸಾಪ್ತ ಎಂಬುದಕ್ಕೆ ಸಪ್ತಸಂಖ್ಯಾಪರಿಮಿತವಾದ ವರ್ಗವೆಂದರ್ಥವು ಸ್ವರಸವಾಗಿರುವುದು ಆದರೆ ಇಲ್ಲಿ ಲಕ್ಷಣೆಯಿಂದ ಸಪ್ತಸಂಖ್ಯಾಪರಿಮಿತವಾದ ವರ್ಗಕ್ಕೆ ಸೇರಿದವು ಎಂಬ ಅರ್ಥವು ವಿವಕ್ಷಿತವು. ಆದ್ದರಿಂದ ಬಹುವಚನವು ಉಪಪನ್ನವಾಗುವುದು. ಇಲ್ಲದಿದ್ದರೆ ಒಂದೇ ವರ್ಗ ಮೂರುಸಲ ಆವೃತ್ತವಾಗಿರುವುದು. ಆದ್ದರಿಂದ ವರ್ಗವು ಒಂದಾದ್ದರಿಂದ ಏಕವಚನವೇ ಬರಬೇಕಾಗುವುದು, ಸಾಪ್ತ ಎಂಬುದರ ಮುಂದೆ ದ್ವಿತೀಯಾಬಹುವಚನ ಶಸ್, ಸಾಪ್ತ+ಶಸ್, **‘ ಜಶ್ಶಸೋಶ್ಶಿಃ ’** (ಪಾ. ಸೂ. ೭-೧-೨೦) ಎಂಬುದರಿಂದ ಶಸ್ ಗೆ ಶಿ ಆದೇಶ, **‘ ಶಿ ಸರ್ವನಾಮಸ್ಥಾನಮ್ ’** (ಪಾ. ಸೂ. ೧-೧-೪೨) ಶಿ ಎಂಬುದು ಸರ್ವನಾಮಸ್ಥಾನ ಸಂಜ್ಞೆಯನ್ನು ಹೊಂದು

ವುದು ಎಂಬುದರಿಂದ ಶಿಗೆ ಸರ್ವನಾಮಸಂಜ್ಞೆ ಇದೆ. ಆದ್ದರಿಂದ **'ನಪುಂಸಕಸ್ಯ ಝಲಚಃ'** (ಪಾ. ಸೂ. ೭-೧-೭೨) ಸರ್ವನಾಮಸ್ಥಾನಪರದಲ್ಲಿರುವಾಗ ಝಲಂತ ಅಥವಾ ಅಜಂತವಾದ ನಪುಂಸಕಲಿಂಗದ ಶಬ್ದಕ್ಕೆ ನುಮ್ ಆಗಮಬರುವುದು ಎಂಬುದರಿಂದ ನುಮಾಗಮ. ಸಾಪ್ತರ್+ಇ-**'ಸರ್ವನಾಮಸ್ಥಾನೇಚಾಸಂಬುದ್ಧೌ'** (ಪಾ. ಸೂ. ೬-೪-೮) ಎಂಬುದರಿಂದ ದೀರ್ಘ, ಸಾಪ್ತಾನಿ ಎಂದಾಗುವುದು.

**ಸುನ್ವತೇ**—ಷುಞ್ ಅಭಿಷವೇ ಧಾತು, **'ಧಾತ್ವಾದೇಃ ಷಃ ಸಃ'** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ ಲಟ್, **'ಲಟಶ್ಶತೃ**-(ಪಾ. ಸೂ. ೩-೨-೧೨೪) ಎಂಬುದರಿಂದ ಶತೃಪ್ರತ್ಯಯ, **ಸ್ವಾದಿಭ್ಯಃಶ್ನುಃ'** (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ ಸು+ನು+ಅತ್-**'ಹುಶ್ನುವೋಸ್ಸಾರ್ವಧಾತುಕೇ'** ಎಂಬುದರಿಂದ ಯಣಾದೇಶ ಸುನ್ವತ್-ಇದರ ಮುಂದೆ ಚತುರ್ಥೀ ಏಕವಚನಙೇಪ್ರತ್ಯಯ, ಸುನ್ವತ್+ಏ. ಇಲ್ಲಿ ಶತೃಪ್ರತ್ಯಯವು ಯದ್ಯಪಿ **'ಸಾರ್ವಧಾತುಕಮಪಿತ್'** (ಪಾ. ಸೂ ೧-೨-೪) ಎಂಬ ಅತಿದೇಶದಿಂದ ಙಿತ್ತಾದ ಶ್ನು ಪ್ರತ್ಯಯದ ಮುಂದೆ ಇರುವುದು. ಆದ್ದರಿಂದ **'ತಾಸ್ಯನುದಾತ್ತೇನ್ಙಿದದುಪದೇಶಾತ್'** (ಪಾ. ಸೂ. ೬-೧-೧೮೬) ಎಂಬುದರಿಂದ ಶತೃವಿಗೆ ಅನುದಾತ್ತಬರಲಿ ಎನ್ನಬಹುದು ಆದರೆ- **'ತಾಸ್ಯನುದಾತ್ತೇತ್'** ಎಂಬ ಸೂತ್ರದಲ್ಲಿ ಙಿತ್ ಎಂಬುದರಿಂದ ಔಪದೇಶಿಕವಾದ ಙಿತ್ತೇವಿವಕ್ಷಿತವು, ಶ್ನುವು ಔಪದೇಶಿಕ ಙಿತ್ತಾಗುವುದಿಲ್ಲ. ಆದಕಾರಣ ಶತೃವಿಗೆ ಅನುದಾತ್ತಬರುವುದಿಲ್ಲ. ಪ್ರತ್ಯಯಸ್ವರದಿಂದ ಆದ್ಯುದಾತ್ತವೇ ಬರುವುದು. ಇತ್ಥಂಚ **'ಶತುರನುಮೋ ನದ್ಯಜಾದೀ'** (ಪಾ. ಸೂ. ೬-೧-೧೭೩) ನುಮಾಗಮವನ್ನು ಹೊಂದದ ಯಾವ ಶತೃಪ್ರತ್ಯಯ ವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರತಕ್ಕದ್ದಾಗಿಯೂ ಅಂತೋದಾತ್ತವಾಗಿಯೂ ಇರುವ ಶಬ್ದದ ಮುಂದೆ ಇರುವ ನದೀಸಂಜ್ಞಕವೂ, ಅಜಾದಿಯಾದ ಶಸಾದಿವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ, ಙೇಪ್ರತ್ಯಯಕ್ಕೆ ಉದಾತ್ತಸ್ವರ ಬರುವುದು.

**ಏಕಮೇಕಮ್**—**'ನಿತ್ಯವೀಪ್ಸಯೋಃ'** (ಪಾ. ಸೂ. ೮-೧-೪) ತದ್ಯ ಆಭೀಕ್ಷ್ಣ್ಯೇವರ್ತತೇ ತಸ್ಯೇದಂ ಗ್ರಹಣಮ್) ಎಂಬ ಈ ಸೂತ್ರ ಮಹಾಭಾಷ್ಯದಿಂದ ನಿತ್ಯಶಬ್ದಕ್ಕೆ ಆಭೀಕ್ಷ್ಣ್ಯ-ಎಂದರೆ ಪೌನಃಪುನ್ಯವೆಂದು ಅರ್ಥವು ವಿವಕ್ಷಿತವು, ವೀಪ್ಸಾ-ಎಂದರೆ ವ್ಯಾಪ್ತೀಚ್ಛೆ. ಇದು ಯೋಗರೂಢವಾದಶಬ್ದ, ಶಬ್ದಪ್ರಯೋಗಮಾಡುವವನು ಯಾವಾಗ ಇತರೇತರಯೋಗವನ್ನು ಅಂದರೆ ಸಾಹಿತ್ಯವನ್ನು ಹೊಂದದೇ ಇರುವುದರಿಂದಲೇ ಪೃಥಕ್ಸಂಖ್ಯಾಯುಕ್ತಗಳಾದ ಪದಾರ್ಥಗಳನ್ನು, ಕ್ರಿಯೆಯಿಂದಲೋ, ಗುಣದಿಂದಲೋ, ಒಟ್ಟಿಗೆ ವ್ಯಾಪ್ತಿಯನ್ನು ಬೋಧಿಸುವ ವಾಕ್ಯವನ್ನು ಪ್ರಯೋಗ ಮಾಡುವನೋ ಆಗ ಆ ಪ್ರಯೋಕ್ತೃಗತವಾದ ಇಚ್ಛಾವಿಶೇಷವು ದ್ವಿತ್ವದಿಂದ ದ್ಯೋತಿತವಾಗುವುದು, ಈ ಅಂಶವು **'ವೀಪ್ಸಾಕ್ಯೇತ್ಕರ್ತಾ ಭವತಿ'** ಎಂಬ ಭಾಷ್ಯವನ್ನು ವಿವರಿಸುವಾಗ **'ಅತ್ರ ಪ್ರಯೋಕ್ತಾ ಕರ್ತಾ ವಿವಕ್ಷಿತಃ'** ಯದಾ ಪೃಥಕ್ಸಂಖ್ಯಾಯುಕ್ತಾನಿತರೇತರಯೋಗಮಪ್ರಾಪ್ತಾನ್ಸರ್ವಾನರ್ಥಾನ್ ಕ್ರಿಯಯಾ ಗುಣೇನ ವಾ ಯುಗ ಪದ್ವ್ಯಾಪ್ತುಮ ವಾಕ್ಯಂ ವಕ್ತಿ ತದಾ ಸ ವಕ್ತೃಸ್ಥ ಇಚ್ಛಾವಿಶೇಷೋ ದ್ವಿರ್ವಚನೇನ ದ್ಯೋತ್ಯಃ, ಎಂದು ಕೈಯಟದಲ್ಲಿ ಸ್ಪಷ್ಟವಾಗಿರು ವುದು, ಏವಂಚ ವ್ಯಾಪ್ತೀಚ್ಛಾರೂಪವಾದ ಅರ್ಥವನ್ನು ವಿವಕ್ಷಿಸಿದರೆ **'ಚಿಕೀಷತಿ'** ಇತ್ಯಾದಿ ಸ್ಥಳಗಳಲ್ಲಿ ಕರೋತ್ಯಾದಿ ಕ್ರಿಯೆಗಳಿಂದ ಕಟಾದಿಗಳ ವ್ಯಾಪ್ತೀಚ್ಛೆಯು ಯಾವುದಿರುವುದೋ ಅದನ್ನು **'ಚಿಕೀರ್ಷತಿ'** ಎಂಬುದು ಬೋಧಿಸು ವುದರಿಂದ, ಇದಕ್ಕೂ ದ್ವಿತ್ವ ಬರಲಿ ಎಂಬ ಆಶಂಕೆಗೆ ಅವಕಾಶವಿಲ್ಲ. ಏಕೆಂದರೆ ಇಲ್ಲಿ **'ಚಿಕೀರ್ಷತಿ'** ಎಂಬ ವ್ಯಾಪ್ತೀಚ್ಛಾವಾಚಕವಾದರೂ ಈ ಇಚ್ಛೆಯು ಪೂರ್ವದಲ್ಲಿ ನಿರುಕ್ತವಾದ ಪ್ರಯೋಕ್ತೃಗತವಾದ ಇಚ್ಛಾವಿಶೇಷವಲ್ಲ.

ಆದುದರಿಂದ '**ಚಿಕೀರ್ಷತಿ**' ಇತ್ಯಾದಿಸ್ಥಳಗಳಲ್ಲಿ ದ್ವಿತ್ವಕ್ಕೆ ಅವಕಾಶವಿಲ್ಲ '**ಸರ್ವಸ್ಯದ್ವೇ**' (ಪಾ. ಸೂ. ೮-೧-೧) ಎಂಬುದು ಇಲ್ಲಿ ಅಧಿಕೃತವಾಗುವುದು, '**ಪದಸ್ಯ**' (ಪಾ. ಸೂ. ೮-೧-೧೬) ಎಂಬುದು ಇಲ್ಲಿ ಅಪಕೃಷ್ಟವಾಗುವುದು, ಏವಂಚ ಸೂತ್ರಕ್ಕೆ, ಪೌನಃಪುನ್ಯ ವೀಪ್ಸೆ ಇವು ದ್ಯೋತಿತವಾಗುವಾಗ ಸರ್ವಸ್ಯ ಪದಸ್ಯ ಸ್ಥಾನೇ ದ್ವಿರ್ವಚನಂ ಭವತಿ ಎಂದು ಅರ್ಥವಾಗುವುದು, ಏಕಮೇಕಂ ಎಂಬಲ್ಲಿ ಪೂರ್ವೋಕ್ತಸೂತ್ರದಿಂದ ವ್ಯಾಪ್ತಿ ತೋರುವಾಗ ದ್ವಿತ್ವ ಬರುವುದು ಇದರಿಂದ ಪ್ರಕೃತವಾದ ಧತ್ತನಪದೋಪಸ್ಥಾಪ್ಯದಾನರೂಪಕ್ರಿಯೆಗೆ ಪ್ರತ್ಯೇಕವ್ಯಕ್ತಿಯಲ್ಲಿ ಅನ್ವಯವು ಏರ್ಪಡುವುದು. '**ಇಣ್ ಗತೌ**' ಧಾತುವಿನ ಮುಂದೆ '**ಇಣ್ಭೀಕಾಪಾಶಲ್ಯತಿಮರ್ಚಿಭ್ಯಃಕನ್**' (ಉ. ಸೂ. ೩ ३.೨३) ಇಣ್ ಗತೌ, ಞಿಭೀ ಭಯೇ, ಕೈ ಶಬ್ದೇ, ಪಾ ಪಾನೇ, ಶಲ ಗತೌ, ಅತ ಸಾತತ್ಯಗಮನೇ, ಮರ್ಚ ಶಬ್ದೇ, ಈ ಧಾತುಗಳ ಮುಂದೆ ಕನ್‌ಪ್ರತ್ಯಯ ಬರುವುದು ಎಂಬುದರಿಂದ ಕನ್. ಇ+ಕ-ಗುಣ ಏಕ ಎಂದಾಗುತ್ತೆ, ಪ್ರತ್ಯಯವು ನಿತ್ತಾದ್ದರಿಂದ ಏಕ ಎಂಬುದು '**ಞ್ನಿತ್ಯಾದಿರ್ನಿತ್ಯಮ್**' ಎಂಬ ನಿತ್ಸ್ವರದಿಂದ ಆದ್ಯುದಾತ್ತ, ಎರಡನೆಯ ಏಕಶಬ್ದಕ್ಕೆ '**ತಸ್ಯ ಪರಮಾಮ್ರೇಡಿತಮ್**' (ಪಾ. ಸೂ. ೮-೧-೨) ದ್ವಿರುಕ್ತಶಬ್ದದ ಎರಡನೆಯದು ಆಮ್ರೇಡಿತಸಂಜ್ಞೆ ಇದೆ. ಆದ್ದರಿಂದ '**ಅನುದಾತ್ತಂಚ**' (ಪಾ. ಸೂ. ೮-೧-೩) ಆಮ್ರೇಡಿತವು ಅನುದಾತ್ತಸ್ವರವನ್ನು ಹೊಂದುವುದು ಎಂಬುದರಿಂದ ಸರ್ವಾನುದಾತ್ತ ಬರುವುದು.

**ಸುಶಸ್ತಿಭಿಃ**—' ಶಸ್ಯತೇ ಆಭಿರಿತಿ ಶಸ್ತಯಃ ಋಚಃ' ಸ್ತೋತ್ರಕರಣಭೂತವಾದ ಋಕ್ಕುಗಳು ಶಸ್ತಯಃ ಎಂಬುದರಿಂದ ಬೋಧಿಸಲ್ಪಡುವವು. ' ಶಂಸು ಸ್ತುತೌ ' ಧಾತು. ಇದರ ಮುಂದೆ '**ಸ್ತ್ರಿಯಾಂಕ್ತಿನ್**' (ಪಾ. ಸೂ. ३-३-೯४) ಸ್ತ್ರೀಲಿಂಗದಲ್ಲಿ ಭಾವಾರ್ಥದಲ್ಲಿಯೂ, ಕರ್ತೃವ್ಯತಿರಿಕ್ತಕಾರಕಾರ್ಥದಲ್ಲಿಯೂ ಧಾತುವಿನ ಮುಂದೆ ಕ್ತಿನ್ ಪ್ರತ್ಯಯ ಬರುವುದು ಎಂಬುದರಿಂದ ಕ್ತಿ-ಶಂಸ್+ಕ್ತಿನ್. ಕ್‌ನ್‌ಗಳಿಗೆ ಇತ್ಸಂಜ್ಞೆ ಲೋಪ ಶಂಸ್+ತಿ-'**ಅನಿದಿತಾಂ ಹಲ ಉಪಧಾಯಾಃ ಕ್ಙಿತಿ**' (ಪಾ. ಸೂ. ೬-೪-೨೪) ಕಕಾರೇತ್ಸಂಜ್ಞಕ ಅಥವಾ ಙಕಾರೇತ್ಸಂಜ್ಞಕ ಪ್ರತ್ಯಯ ಪರದಲ್ಲಿರುವಾಗ ಹಲಂತವೂ ಇಕಾರೇತ್ಸಂಜ್ಞೆಯನ್ನು ಹೊಂದದೇ ಇರುವುದೂ ಆದ ಅಂಗದ ಉಪಾಂತ್ಯನಕಾರಕ್ಕೆ ಲೋಪಬರುವುದು ಎಂಬುದರಿಂದ ಕಿತ್ತಾದಪ್ರತ್ಯಯಪರದಲ್ಲಿರುವುದರಿಂದ ಉಪಾಂತ್ಯನಕಾರಕ್ಕೆ ಲೋಪಬರುವುದು. ಯದ್ಯಪಿ ಉಪಾಂತ್ಯವು ಅನುಸ್ವಾರ, ನಕಾರವಲ್ಲ ಎಂದು ತೋರುವುದು. ಆದರೂ ಈ ನಲೋಪವನ್ನು ಮಾಡುವಾಗ ಅನುಸ್ವಾರವು ಅಸಿದ್ಧವಾಗುವುದರಿಂದ ಉಪಾಂತ್ಯದಲ್ಲಿ ನಕಾರವು ಇರುವುದು ಆದ್ದರಿಂದ ಅದಕ್ಕೆ ಲೋಪಬರುವುದು ಶಸ್ತಿ ಎಂದಾಗುವುದು, ಶೋಭನಾಃ ಶಸ್ತಯಃ ಸುಶಸ್ತಯಃ '**ಕುಗತಿಪ್ರಾದಯಃ**' (ಪಾ. ಸೂ. ೨-೨-೧೮) ಎಂಬುದರಿಂದ ಪ್ರಾದಿಸಮಾಸ, ಶಸ್ತಿ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ, ಸಮಾಸಾನಂತರ '**ಗತಿಕಾರಕೋಪಪದಾ-ತ್ಕೃತ್**' (ಪಾ. ಸೂ. ೬-೨-೧೩೯) ಎಂಬುದರಿಂದ ಉತ್ತರಪದ ಪ್ರಕೃತಿಸ್ವರ ಬಂದರೆ ಆದೇಸ್ವರ ನಿಲ್ಲಬೇಕಾಗುವುದು, ಏವಂಚ ಸು ಅನುದಾತ್ತತರ-ಶ-ಉದಾತ್ತ ಸ್ತಿ ಸ್ವವಿಷಯ ಪ್ರಚಯ ಸುಶಸ್ತಯಃ ಎಂದು ಆಗಬೇಕಾಗುವುದು ಎಂದು ಪ್ರಾಪ್ತವಾಗುವುದು ಆದರೆ ' ಗತಿಕಾರಕ—' ಎಂಬ ಕೃದುತ್ತರಪದ ಪ್ರಕೃತಿಸ್ವರವು '**ಮರ್ಕ್ತಿನ್ವ್ಯಾಖ್ಯಾನ-ಶಯನಾಸನಸ್ಥಾನಯಾಜಕಾದಿಕ್ರೀತಾಃ**' (ಪಾ. ಸೂ. ೬-೨-೧೫೧) ಎಂದು ವಿಹಿತವಾದ ಪರಭೂತವಾದ ಉತ್ತರಪದಾಂತ ಸ್ವರದಿಂದ ಬಾಧಿತವಾಗುವುದು, ಆದ್ದರಿಂದ ಶಸ್ತಿ ಎಂಬಲ್ಲಿಯ ಸ್ತಿ ಎಂಬುದು ಉದಾತ್ತವಾಗುವುದು ಇದರ ಮುಂದೆ ತೃತೀಯಾ ಬಹುವಚನ ಭಿಸ್-ಸುಶಸ್ತಿ+ಭಿಸ್, ಭಿಸ್ ಸುಪ್ಪಾದ್ದರಿಂದ ಅನುದಾತ್ತ, '**ಉದಾತ್ತಾ-ದನುದಾತ್ತಸ್ಯಸ್ವರಿತಃ**' ಎಂಬುದರಿಂದ, ಸ್ವರಿತ, ಸ್‌ಗೆ ರುತ್ವ ವಿಸರ್ಗಗಳು ಸುಶಸ್ತಿಭಿಃ ಎಂದಾಗುವುದು. ॥ ೬ ॥

॥ ಸಂಹಿತಾಪಾಠಃ ॥

ಅಧಾರಯಂತ ವಹ್ನಯೋಽಭಜಂತ ಸುಕೃತ್ಯಯಾ ।
ಭಾಗಂ ದೇವೇಷು ಯಜ್ಞಿಯಂ ॥ ೮ ॥

॥ ಪದಪಾಠಃ ॥

ಅಧಾರಯಂತ । ವಹ್ನಯಃ । ಅಭಜಂತ । ಸುಽಕೃತ್ಯಯಾ ॥
ಭಾಗಂ । ದೇವೇಷು । ಯಜ್ಞಿಯಂ ॥ ೮ ॥

॥ ಸಾಯಣಭಾಷ್ಯಂ ॥

ವಹ್ನಯಶ್ಚಮಸಾದಿಸಾಧನನಿಷ್ಪಾದನೇನ ಯಜ್ಞಸ್ಯ ವೋಢಾರ ಋಭವೋಽಧಾರಯಂತ । ಪೂರ್ವಂ ಮನುಷ್ಯತ್ವೇನ ಮರಣಯೋಗ್ಯಾ ಅಪ್ಯಮೃತತ್ವಲಾಭೇನ ಪ್ರಾಣಾನ್ಧಾರಿತವಂತಃ । ತಥಾ ಚ ಮಂತ್ರಾಂತರಮಾಮ್ನಾಯತೇ । ಮರ್ತಾಸಃ ಸಂತೋ ಅಮೃತತ್ವಮಾನಶುಃ । ಋಗ್ವೇ. ೧-೧೧೦-೪. । ಇತಿ । ಕಿಂಚೈತೇ ಸುಕೃತ್ಯಯಾ ಯಜ್ಞಸಾಧನದ್ರವ್ಯಸಂಪಾದನರೂಪೇಣ ಶೋಭನವ್ಯಾಪಾರೇಣ ದೇವೇಷು ಮಧ್ಯೇ ಸ್ಥಿತಾ ಯಜ್ಞಿಯಂ ಯಜ್ಞಾರ್ಹಂ ಭಾಗಂ ಹವಿರ್ಲಕ್ಷಣಮಭಜಂತ । ಸೇವಿತವಂತಃ । ಅಯುಮರ್ಥಃ ಸೌಧನ್ವನಾ ಯಜ್ಞಿಯಂ ಭಾಗಮಾನಶ । ಋಗ್ವೇ. ೩-೬೦-೧ । ಇತ್ಯಾದಿಮಂತ್ರಾಂತರೇ ವಿಸ್ಪಷ್ಟಃ । ಬ್ರಾಹ್ಮಣೇಽಪ್ಯೃಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯನ್ । ಐ. ಬ್ರಾ. ೩-೩೦ । ಇತ್ಯಾದ್ಯುಪಾಖ್ಯಾನಂ ವಿಸ್ಪಷ್ಟಂ ॥ ವಹ್ನಯಃ । ನಿದಿತ್ಯನುವೃತ್ತೌ ವಹಿಶ್ರೀತ್ಯಾದಿನಾ ನಿಪ್ರತ್ಯಯಃ । ಅಭಜಂತ । ಪಾದಾದಿತ್ವಾದನಿಘಾತಃ । ಸುಕೃತ್ಯಯಾ । ವಿಭಾಷಾ ಕೃವೃಷೋಃ । ಪಾ. ೩-೧-೧೨೦। ಇತಿ ಕೃಞಃ ಕರ್ಮಣಿ ಕ್ಯಪ್ । ಶೋಭನಂ ಕೃತ್ಯಂ ಯಸ್ಯಾ ಭಜನಕ್ರಿಯಾಯಾಃ ಸಾ ಸುಕೃತ್ಯಾ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ಬಾಧಿತ್ವಾ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ನನು ಕೃತ್ಯಶಬ್ದೇ ಕ್ಯಪಃ ಪಿತ್ತ್ವೇನಾನುದಾತ್ತತ್ವಾದ್ಧಾತುಸ್ವರೇಣಾದಿರುದಾತ್ತಃ । ತತಶ್ಚಾದ್ಯುದಾತ್ತಂ ದ್ವ್ಯಚ್ಛಂದಸೀತ್ಯನೇನಾದ್ಯುದಾತ್ತತ್ವೇನ ಭವಿತವ್ಯಂ । ತೇನ ಹಿ ಪುರಸ್ತಾದಪವಾದೇನ ಪರಮಪಿ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ಬಾಧ್ಯತ ಇತ್ಯುಕ್ತಂ । ಏವಂ ತರ್ಹಿ ಕೃಞಃ ಶ ಚ । ಪಾ. ೩-೩-೧೦೦ । ಇತಿ ಸ್ತ್ರಿಯಾಂ ಭಾವೇ ಕ್ಯಪ್ಪ್ರತ್ಯಯಾಂತಃ ಕೃತ್ಯಾಶಬ್ದಃ । ಕ್ಯಪಃ ಪಿತ್ತ್ವೇಽಪಿ ವ್ಯತ್ಯಯೇನೋದಾತ್ತತ್ವಂ । ಪ್ರಾದಿಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ । ಭಾಗಂ । ಕರ್ಷಾತ್ವತಃ । ಪಾ. ೬-೧-೧೫೯ । ಇತ್ಯಂತೋದಾತ್ತಃ । ಯಜ್ಞಿಯಂ । ಯಜ್ಞಮರ್ಹತೀತ್ಯರ್ಥೇ ಯಜ್ಞರ್ತ್ವಿಗ್ಭ್ಯಾಂ ಘಖಞೌ । ಪಾ. ೫-೧-೭೧ । ಇತಿ ಘಃ । ತಸ್ಯ ಇಯಾದೇಶಃ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

**ವಹ್ನಯಃ**—ಚಮಸಾದಿಯಜ್ಞಸಾಧನಗಳನ್ನು ನಿರ್ಮಿಸಿ ಯಜ್ಞವನ್ನು ನೆರವೇರಿಸುವ ಈ ಋಭುಗಳು । **ಅಧಾರಯಂತ**—(ಅಮೃತತ್ವವನ್ನು ಪಡೆದರು) । **ಸುಕೃತ್ಯಯಾ**—ಒಳ್ಳೆಯ ಕೆಲಸದಿಂದ । **ದೇವೇಷು**—ದೇವತೆಗಳ ಮಧ್ಯದಲ್ಲಿ । **ಯಜ್ಞಿಯಂ**—ಯಜ್ಞಸಂಬಂಧವಾದ । **ಭಾಗಂ**—ಹವಿಸ್ಸಿನ ಭಾಗವನ್ನೂ । **ಅಭಜಂತ**—ಸಂಪಾದಿಸಿದರು.

॥ ಭಾವಾರ್ಥ ॥

ಈ ಋಭುಗಳು ಯಜ್ಞಸಾಧನಗಳನ್ನು ನಿರ್ಮಿಸಿ ಆ ಮೂಲಕ ಯಜ್ಞಾನುಷ್ಠಾನಕ್ಕೆ ಸಹಾಯಕರಾಗಿ ಅಮೃತತ್ವವನ್ನು ಪಡೆದರು. ಯಜ್ಞಸಂಬಂಧವಾದ ಸತ್ಕರ್ಮಗಳನ್ನು ಮಾಡಿ ದೇವತೆಗಳೊಡನೆ ಹವಿರ್ಭಾಗವನ್ನು ಪಡೆದರು.

## English Translation.

Ribhus by their skill in fashioning sacrificial utensils and their pious acts lived for ever or became immortal ; they even obtained a share of the sacrifice along with the Gods.

॥ ವಿಶೇಷವಿಷಯಗಳು ॥

ಈ ಋಭುಗಳು ತಮ್ಮ ಶಿಲ್ಪಚಾತುರ್ಯದಿಂದ ಯಜ್ಞಕ್ಕೆ ಅವಶ್ಯಕವಾಗಿ ಬೇಕಾದ ಚಮಸಾದಿಸಾಧನಗಳನ್ನು ನಿರ್ಮಿಸಿರುವರು. ಒಂದು ಸಂವತ್ಸರದಲ್ಲಿಯೇ ಎಲ್ಲಾ ಯಜ್ಞಗಳನ್ನು ಮಾಡಿ ದೇವತೆಗಳ ಅನುಗ್ರಹಕ್ಕೆ ಪಾತ್ರರಾಗಿರುವರು. ಇಂತಹ ಒಳ್ಳೆಯ ಕೆಲಸಗಳಿಂದ ಈ ಋಭುಗಳು ತಮ್ಮ ಪ್ರಾಣಗಳನ್ನು ಯಾವಾಗಲೂ ಧರಿಸಲು ಸಮರ್ಥರಾದರು. ದೇವತೆಗಳಂತೆ ಅಮರತ್ವವನ್ನು (ಮರಣವಿಲ್ಲದಿರುವಿಕೆ) ಪಡೆದರು. ಮತ್ತು ದೇವತೆಗಳಂತೆ ತಾವೂ ಯಜ್ಞಭಾಗವನ್ನು ಎಂದರೆ ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವ ಹವಿಸ್ಸನ್ನು ಪಡೆಯುವ ಅರ್ಹತೆಯನ್ನೂ ಸಂಪಾದಿಸಿರುವರು.

**ಅಧಾರಯಂತ**—ಧರಿಸಿದರು ಎಂದು ಈ ಶಬ್ದದ ಅರ್ಥವು. ಏನನ್ನು ಧರಿಸಿದರು ಎಂದರೆ ಪ್ರಾಣಗಳನ್ನು ಧರಿಸಿದರು. ಅಥವಾ ಅಮರತ್ವವನ್ನು ಪಡೆದರು ಎಂದು ಭಾಷ್ಯಕಾರರು ಅರ್ಥವಿವರಣೆಯನ್ನು ಮಾಡಿರುವರು. ಈ ಋಕ್ಕಿನಲ್ಲಿ ಅಮರತ್ವವನ್ನು ಪಡೆದರು ಎಂಬ ಅರ್ಥವನ್ನು ವಿವರಿಸುವ ಶಬ್ದಗಳು ಇಲ್ಲದಿದ್ದರೂ, ಈ ಋಭುಗಳು ಮನುಷ್ಯರಾಗಿದ್ದು ತಮ್ಮ ಒಳ್ಳೆಯ ಕೆಲಸಗಳಿಂದ ದೇವತ್ವವನ್ನು ಪಡೆದರು ಎಂದು ಅನೇಕ ಋಕ್ಕುಗಳಲ್ಲಿ ಹೇಳಿರುವುದರಿಂದ ಇಲ್ಲಿಯೂ ಆ ಅಭಿಪ್ರಾಯವನ್ನೇ ಗ್ರಹಿಸಿ ಅಧಾರಯಂತ ಎಂಬ ಶಬ್ದಕ್ಕೆ ಮೇಲೆ ಹೇಳಿದಂತೆ ಭಾಷ್ಯಕಾರರು ಅರ್ಥವಿವರಣೆಯನ್ನು ಮಾಡಿರುವುದು ಯುಕ್ತವೆಂದು ತೋರುವುದು. ಈ ವಿಷಯದಲ್ಲಿ—

**ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ ॥**

(ಋ. ಸಂ. ೧-೧೧೦-೪)

ಎಂಬ ಋಕ್ಕು ಈ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿರುವುದು.

**ವಹ್ನಯಃ—ಚಮಸಾದಿಸಾಧನನಿಷ್ಪಾದನೇನ ಯಜ್ಞಸ್ಯ ವೋಢಾರ ಋಭವಃ ॥** ಚಮಸ ಮೊದಲಾದ ಯಜ್ಞಸಾಧನಗಳನ್ನು ನಿರ್ಮಿಸಿ ಯಜ್ಞಕ್ಕೆ ಸಹಾಯಭೂತರಾದುದರಿಂದ ಈ ಋಭುಗಳು ವಹ್ನಯಃ ಅಥವಾ ವೋಢಾರಃ ಎಂದರೆ ಯಜ್ಞಕರ್ಮವನ್ನು ನಿರ್ವಹಿಸುವವರು ಎಂದು ಹೇಳಲ್ಪಡುವರು.

**ಯಜ್ಞಿಯಂ—ಯಜ್ಞಾರ್ಹಂ ಭಾಗಂ ॥** ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವ ಹವಿರ್ಭಾಗವು. ಯಜ್ಞಾರ್ಹವಾದ ಭಾಗವನ್ನು ಪಡೆಯಬೇಕಾದರೆ ದೇವತೆಗಳಿಗೆ ಇರುವ ಸ್ಥಾನಮಾನಗಳು ಇರಬೇಕು. ಅಂತಹ ಗೌರವವನ್ನು ಋಭುಗಳು ಪಡೆದರು ಎಂದಭಿಪ್ರಾಯವು. ಈ ವಿಷಯವು--

**ಇಹೇಹ ವೋ ಮನಸಾ ಬಂಧುತಾ ನರ ಉಶಿಜೋ ಜಗ್ಮುರಭಿ ತಾನಿ ವೇದಸಾ ।**
**ಯಾಭಿರ್ಮಾಯಾಭಿಃ ಪ್ರತಿಜೂತಿವರ್ಪಸಃ ಸೌಧನ್ವನಾ ಯಜ್ಞಿಯಂ ಭಾಗಮಾನಶ ॥**

(ಋ. ಸಂ. ೩-೬೦-೧)

ಎಂಬ ಋಕ್ಕಿನಲ್ಲಿಯೂ—**ಬ್ರಾಹ್ಮಣೇsಸ್ಯೃಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯನ್** (ಐ. ಬ್ರಾ. ೩-೩೦) ಎಂಬ ಐತರೇಯಬ್ರಾಹ್ಮಣವಾಕ್ಯದಲ್ಲಿಯೂ ಸಮರ್ಥಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ವಹ್ನಯಃ**—**'ವಹಿಶ್ರಿಶ್ರುಯುಗ್ಲಾಹಾತ್ವರಿಭ್ಯೋ ನಿತ್'** (ಉ. ಸೂ. ೪-೫೧) ಇಲ್ಲಿ **'ವೀಜ್ಯಾಜ್ವರಿಭ್ಯೋ ನಿಃ'** (ಉ. ಸೂ. ೪-೪೮) ಎಂಬುದರಿಂದ **'ನಿಃ'** ಎಂದು ಅನುವೃತ್ತವಾಗುವುದು. ಏವಂಚ ವಹ ಪ್ರಾಪಣೇ ಮೊದಲಾದ ಧಾತುಗಳ ಮುಂದೆ ನಿಪ್ರತ್ಯಯ ಬರುವುದು. ಅದು ನಿತ್ ಆಗುವುದು ಎಂದು ಸೂತ್ರಕ್ಕೆ ಅರ್ಥವಾಗುವುದು (ಋ. ಸಂ. ೩-ಋ. ೯) ರಲ್ಲಿ ಇದೇರೀತಿ ವ್ಯಾಖ್ಯಾನವು ಭಾಷ್ಯದಲ್ಲಿರುವುದು. ನಿತ್ ಎಂಬ ಪದವು ಉಣಾದಿಸೂತ್ರಗಳಲ್ಲಿ ಹಿಂದೆ ಇರುವ ಸೂತ್ರಗಳಲ್ಲಿ ಕಾಣಿಸುವುದಿಲ್ಲ. ಆದ್ದರಿಂದ **'ನಿತ್ ಇತ್ಯನುವೃತ್ತೌ'** ಎಂಬುದು ಇಲ್ಲಿ ಶೋಧಕಾದಿಗಳ ಪ್ರಮಾದದಿಂದ ಬಂದಿದೆ. ಏವಂಚ ವಹ್ ಧಾತುವಿನ ಮುಂದೆ ನಿಪ್ರತ್ಯಯ ಬಂದರೆ **'ವಹ್ನಿ'** ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು.

**ಅಭಜನ್ತ**—ಇದು ಪಾದದ ಆದಿಯಲ್ಲಿರುವುದು, ಆದ್ದರಿಂದ **'ಅನುದಾತ್ತಂ ಸರ್ವಮಪಾದಾದೌ'** ಎಂಬುದರಿಂದ ಪ್ರತಿಷೇಧ ಬರುವುದು. ಆದ್ದರಿಂದ **'ತಿಙ್ಙತಿಙಃ'** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಸುಕೃತ್ಯಯಾ—'ವಿಭಾಷಾಕೃವೃಷೋಃ'** (ಪಾ. ಸೂ. ೩-೧-೧೨೦) ಕೃ, ವೃಷ್ ಈ ಧಾತುಗಳ ಮುಂದೆ ಕ್ಯಪ್‌ಪ್ರತ್ಯಯ ಬರುವುದು ಎಂಬುದರಿಂದ ಕರ್ಮಣಿ ಕ್ಯಪ್ ಪ್ರತ್ಯಯ ಕೃಧಾತುವಿನ ಮುಂದೆ ಬರುವುದು ಕೃ+ಯ **'ಹ್ರಸ್ವಸ್ಯಪಿತಿಕೃತಿ ತುಕ್'** (ಪಾ. ಸೂ.೬-೧-೭೧) ಪಕಾರೇತ್ಸಂಜ್ಞಿತವಾದ ಕೃತ್ ಪ್ರತ್ಯಯ ಪರದಲ್ಲಿರುವಾಗ ಹ್ರಸ್ವಾಂತವಾದ ಅಂಗಕ್ಕೆ ತುಕ್ ಆಗಮ ಬರುವುದು. ಎಂಬುದರಿಂದ ತುಗಾಗಮ, ಪ್ರತ್ಯಯವು ಕಿತ್ತಾದ್ದರಿಂದ ಗುಣನಿಷೇಧ ಬರುವುದು. **'ಕೃತ್ಯ'** ಎಂದಾಯ್ತು. ಶೊ.ಭನಂ=ಒಳ್ಳೆಯ, ಕೃತ್ಯಂ=ಕೆಲಸವು-ಯಸ್ಯಾಸ್ಸಾ=ಯಾವ ಭಜನಕ್ರಿಯೆಗೆ ಇದೆಯೋ ಆ ಭಜನಕ್ರಿಯೆಗೆ ಸುಕೃತ್ಯಾ ಎಂದು ಹೇಳುವರು. ಇದು ಹೀಗೆ ಬಹುವ್ರೀಹಿಸಮಾಸ.

ಆದ್ದರಿಂದ **ಬಹುವ್ರೀಹೌ ಪ್ರಕೃತ್ಯಾಪೂರ್ವ**-(ಪಾ. ಸೂ. ೬-೨-೧) ಬಹುವ್ರೀಹಿ ಸಮಾಸದಲ್ಲಿ ಪೂರ್ವ ಪದವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಪ್ರಾಪ್ತವಾಗುವುದು. ಪೂರ್ವಪದವಾದ '**ಸು**' ವು '**ಉಪಸರ್ಗಾಶ್ಚಾಭಿವರ್ಜಮ್**' (ಫಿ. ಸೂ. ೮೧) ಎಂಬುದರಿಂದ ಉದಾತ್ತ, ಆದ್ದರಿಂದ ಪೂರ್ವಪದಪ್ರಕೃತಿಸ್ವರ ಬಂದರೆ ಸುವು ಆದ್ಯುದಾತ್ತವಾಗಿ ಮಿಕ್ಕವು ಶೇಷನಿಘಾತದಿಂದ ಅನುದಾತ್ತಗಳಾಗ ಬೇಕಾಗುವುದು ಆದರೆ, '**ನಞ್ಸುಭ್ಯಾಮ್**' (ಪಾ. ಸೂ. ೬-೨-೧೭೨) ಬಹುವ್ರೀಹಿಸಮಾಸದಲ್ಲಿ ನಞ್ ಸು ಇವುಗಳ ಮುಂದೆ ಇರುವ ಉತ್ತರಪದವು ಅಂತೋದಾತ್ತವಾಗುವುದು, ಎಂದು ವಿಹಿತವಾದ ಉತ್ತರಪದಾಂತೋದಾತ್ತವು, '**ಬಹುವ್ರೀಹೌ**' ಎಂದು ವಿಹಿತವಾದ ಪೂರ್ವಪದಪ್ರಕೃತಿಸ್ವರವನ್ನು ಬಾಧಿಸುವುದು. ಆದ್ದರಿಂದ '**ಸುಕೃತ್ಯ**' ಎಂಬಲ್ಲಿ ಕೊನೆಯ ವರ್ಣವು ಉದಾತ್ತವಾಗುವುದು, ಮಿಕ್ಕವು ಶೇಷನಿಘಾತವನ್ನು ಹೊಂದುವುವು. ಆದರೆ ಇಲ್ಲೊಂದು ವಿಚಾರವಿದೆ. ಕ್ಯಪ್ ಪ್ರತ್ಯಯ ಪಿತ್, ಆದ್ದರಿಂದ '**ಅನುದಾತ್ತೌಸುಪ್ಪಿತೌ**' (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಏವಂಚ ಕೃತ್ಯ-ಎಂಬಲ್ಲಿ '**ಧಾತೋಃ**' (ಪಾ. ಸೂ ೬-೧-೧೬) ಎಂಬ ಆದ್ಯುದಾತ್ತಸ್ವರದಿಂದ ಕೃವು ಉದಾತ್ತ, ಈ ರೀತಿಯಲ್ಲಿ '**ಕೃತ್ಯ**' ಎಂಬುದು ಆದ್ಯುದಾತ್ತ, ಅಂದಮೇಲೆ '**ಆದ್ಯುದಾತ್ತಂ ದ್ವ್ಯಚ್ ಛಂದಸಿ**' (ಪಾ. ಸೂ. ೬-೨-೧೧೯) ಬಹುವ್ರೀಹಿಸಮಾಸದಲ್ಲಿ ಸು ಎಂಬುದರ ಮುಂದೆ ಇರುವ ಆದ್ಯುದಾತ್ತವಾಗಿ ಎರಡು ಸ್ವರಗಳನ್ನು ಹೊಂದಿರುವ ಶಬ್ದವು ಛಂದಸ್ಸಿನಲ್ಲಿ ಆದ್ಯುದಾತ್ತವನ್ನು ಹೊಂದುವುದು, ಎಂದು ವಿಹಿತವಾಗಿರುವುದರಿಂದ ಈ ಸೂತ್ರದಿಂದ ಕೃತ್ಯ ಎಂಬ ಉತ್ತರಪದಕ್ಕೆ ಆದ್ಯುದಾತ್ತ ಬರಬೇಕಾಗುವುದು. ಯದ್ಯಪಿ '**ನಞ್ಸುಭ್ಯಾಮ್**' ಎಂಬ ಶಾಸ್ತ್ರವು '**ಆದ್ಯುದಾತ್ತಂ ದ್ವ್ಯಚ್**' ಎಂಬ ಶಾಸ್ತ್ರಕ್ಕಿಂತಲೂ ಅಷ್ಟಾಧ್ಯಾಯಿಯಲ್ಲಿ ಪರದಲ್ಲಿ ಪಠಿತವಾಗಿರುವುದು. ಆದರೂ '**ವಿಪ್ರತಿಷೇಧೇಪರಂ ಕಾರ್ಯಮ್**' (ಪಾ. ಸೂ. ೧-೪-೨) ಎಂಬುದರ ಪ್ರಕಾರ '**ನಞ್ಸುಭ್ಯಾಂ**' ಎಂಬುವುದು ಬರುವುದಿಲ್ಲ. ಏಕೆಂದರೆ '**ಆದ್ಯುದಾತ್ತಂ ದ್ವ್ಯಚ್**' ಎಂಬುದು ಪೂರ್ವದಲ್ಲಿ ಪಠಿತವಾದಾಗ್ಯೂ **ನಞ್ಸುಭ್ಯಾಂ** ಎಂಬುದಕ್ಕೆ ಅಪವಾದವಾಗುವುದು. ಅಂದರೆ '**ನಞ್ಸುಭ್ಯಾಂ**' ಎಂಬುದಕ್ಕೆ ಪ್ರಾಪ್ತಿ ಇಲ್ಲದ ಲಕ್ಷ್ಯದಲ್ಲಿ '**ಆದ್ಯುದಾತ್ತಂ ದ್ವ್ಯಚ್**' ಎಂಬುದು ಪ್ರವರ್ತಿಸುವುದಿಲ್ಲ, ಆದ್ದರಿಂದ '**ಅನ್ಯತ್ರಚರಿತಾರ್ಥಯೋಃ ಶಾಸ್ತ್ರಯೋಃ ಏಕತ್ರ ಯುಗಪತ್ಸಮಾವೇಶಃ ವಿಪ್ರತಿಷೇಧಃ**' ಎಂಬ ವಿಪ್ರತಿಷೇಧಲಕ್ಷಣವಿಲ್ಲದಿರುವುದರಿಂದ '**ವಿಪ್ರತಿಷೇಧೇ ಪರಂ**' ಎಂಬುದು ಬರುವುದಿಲ್ಲ. '**ಯೇನ ನಾಪ್ರಾಪ್ತೇ ಯೋ ವಿಧಿರಾರಭ್ಯತೇ ಸ ತಸ್ಯ ಬಾಧಕೋ ಭವತಿ**' (ಪಾರಿಭಾ. ೫೮) ಎಂಬುದರಿಂದ '**ಆದ್ಯುದಾತ್ತಂ ದ್ವ್ಯಚ್**' ಎಂಬುದೇ ಬರುವುದು ಯುಕ್ತವೆಂದು ತೋರುವುದು ಸಹಜ, ಹೀಗಾದಪಕ್ಷದಲ್ಲಿ '**ಕೃಞಶ್ಚ**' (ಪಾ. ಸೂ. ೩-೩-೧೦೦) ಶ, ಎಂಬುದು ಲುಪ್ತಪ್ರಥಮಾಂತಪದ, ಕೃಞ್ ಧಾತುವಿನ ಮುಂದೆ ಭಾವಾದ್ಯರ್ಥಗಳಲ್ಲಿ ಶಪ್ರತ್ಯಯವೂ ಚಗ್ರಹಣದಿಂದ ಕ್ಯಪ್ ಪ್ರತ್ಯಯವೂ ಬರುವುದೆಂದು ಸೂತ್ರಾರ್ಥವು ಏರ್ಪಡುವುದು, ಹೀಗಾದ ಪಕ್ಷದಲ್ಲಿ ಕೃತ್ಯಾ, ಕ್ರಿಯಾ, ಎಂಬ ಎರಡು ರೂಪಗಳು ಸಿದ್ಧವಾದರೂ ಕೃತಿಃ ಎಂಬುದು ಸಿದ್ಧವಾಗುವುದಿಲ್ಲ. ಏಕೆಂದರೆ '**ಸ್ತ್ರಿಯಾಂಕ್ತಿನ್**' (ಪಾ. ಸೂ. ೩-೩-೯೪) ಎಂಬ ಕ್ತಿಪ್ರತ್ಯಯವಿಧಾಯಕವು ಸ್ತ್ರ್ಯಧಿಕಾರದಲ್ಲಿರುವುದು. ಆದ್ದರಿಂದ '**ಅಸ್ತ್ರಿಯಾಂ**' ಎಂದು ಪ್ರತಿಷೇಧವಿರುವುದರಿಂದ '**ವಾಸರೂಪೋಽಸ್ತ್ರಿಯಾಮ್**' (ಪಾ. ಸೂ. ೩-೧-೯೪) '**ಧಾತೋಃ**' (ಪಾ. ೩-೧-೯೧) ಈ ಧಾತ್ವಧಿಕಾರದಲ್ಲಿ ವಿಹಿತವಾದ ವಿಭಿನ್ನಾನುಪೂರ್ವೀಕವೂ, ಸ್ತ್ರ್ಯಧಿಕಾರವಿಹಿತಪ್ರತ್ಯಯಭಿನ್ನವೂ ಆದ ಅಪವಾದ ಪ್ರತ್ಯಯವು ಉತ್ಸರ್ಗಶಾಸ್ತ್ರಕ್ಕೆ ವಿಕಲ್ಪವಾಗಿ ಬಾಧಕವಾಗುವುದು, ಎಂಬುದು ಇಲ್ಲಿ ಬರುವುದಿಲ್ಲ, ಏಕೆಂದರೆ ಇಲ್ಲಿ '**ಸ್ತ್ರಿಯಾಂಕ್ತಿಕ್**' (ಪಾ. ಸೂ. ೩-೩-೯೪) ಎಂಬ ಉತ್ಸರ್ಗವೂ, '**ಕೃಞಃ ಶ ಚ**' ಎಂಬ ಅಪವಾದವೂ ಸಹ

ಸ್ತ್ರ್ಯಧಿಕಾರದಲ್ಲಿರುವುದು, ಆದ್ದರಿಂದ ಅಸ್ತ್ರಿಯಾಂ ಎಂದು ಪ್ರತಿಷೇಧಬರುವುದರಿಂದ ಅಪವಾದಶಾಸ್ತ್ರವಿಕಲ್ಪವಾಗಿ ಬಾಧಕವಾಗುವುದಿಲ್ಲ ಅಂದ ಮೇಲೆ ಕೃತಿಃ ಎಂಬ ರೂಪವೇ ಇಲ್ಲದೇ ಹೋಗುವುದು. ಆದ್ದರಿಂದ **'ಕೃಞಃಶ್ಚ'** ಎಂಬುದನ್ನು **'ಕೃಞಃ ಶಚ'** ಎಂದು ಎರಡಾಗಿ ವಿಭಾಗಮಾಡುವುದು **'ಕೃಞಃ'** ಎಂಬ ಮೊದಲನೆಯ ಪದಕ್ಕೆ ಸ್ತ್ರೀಲಿಂಗದಲ್ಲಿ ಕೃಞ್ ಧಾತುವಿನ ಮುಂದೆ ಭಾವಾದ್ಯರ್ಥಗಳಲ್ಲಿ ಕ್ಯಪ್ ಬರುವುದು ಎಂದರ್ಥ. ಇದರಿಂದ ಕೃತ್ಯಾ ಎಂಬುದು ಸಿದ್ಧವಾಗುವುದು, **'ಶಚ'** ಎಂಬುದಕ್ಕೆ, ಸ್ತ್ರೀಲಿಂಗದಲ್ಲಿ ಕೃಞ್ ಧಾತುವಿನ ಮುಂದೆ ಭಾವಾದ್ಯರ್ಥಗಳಲ್ಲಿ ಶ ಪ್ರತ್ಯಯವೂ ಚಕಾರದಿಂದ ಕ್ತಿನ್‌ಪ್ರತ್ಯಯವೂ ಬರುವುದು ಎಂದರ್ಥ, ಪೂರ್ವಖಂಡದಿಂದ ಕ್ಯಪ್ ಸಿದ್ಧವಾಗಿರುವುದರಿಂದ, ಚಕಾರವು ಕ್ಯಪ್‌ಗೆ ಸಮುಚ್ಚಾಯಕವಲ್ಲ ಕ್ತಿನ್‌ಗೆ ಸಮುಚ್ಚಾಯಕ, ಏವಂಚ, ಕ್ರಿಯಾ, ಕೃತಿಃ ಎಂಬ ರೂಪಗಳು ಸಿದ್ಧವಾಗುವುವು. ಪ್ರಕೃತದಲ್ಲಿ **'ಕೃಞಃ'** ಎಂಬ ವಿಭಕ್ತಪ್ರಥಮಸೂತ್ರದಿಂದ ಭಾವಾರ್ಥದಲ್ಲಿ ಕ್ಯಪ್ ಬರುವುದು, ಏವಂಚ ಕೃತ್ಯಾ ಎಂಬುದು ಅಂತೋದಾತ್ತ, ಶೋಭನಾ ಚ ಸಾ ಕೃತ್ಯಾ ಚ ಎಂದು **'ಕುಗತಿ-ಪ್ರಾದಯಃ'** (ಪಾ. ಸೂ. ೨-೨-೧೮) ಎಂಬುದರಿಂದ ಪ್ರಾದಿಸಮಾಸ ಮಾಡಿದರೆ **'ಗತಿಕಾರಕೋಪಪದಾತ್ಕೃತ್'** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುವುದು, ಏವಂಚ ಸುಕೃತ್ಯ ಎಂಬಲ್ಲಿ ಇದೇ ಸ್ವರ ಉಳಿಯು ವುದು, ಸ್ತ್ರೀಲಿಂಗ ತೋರುವುದರಿಂದ **'ಅಜಾದ್ಯತಷ್ಟಾಪ್'** (ಪಾ. ಸೂ. ೪-೧-೪) ಎಂಬುದರಿಂದ ಟಾಪ್ ಸುಕೃತ್ಯ+ಆ, ಟಾಪ್ ಪಿತ್ತಾದ್ದರಿಂದ ಅನುದಾತ್ತ, ಇದಕ್ಕೆ ಪೂರ್ವದ ಅಕಾರದೊಂದಿಗೆ ಸವರ್ಣದೀರ್ಘ 'ಏಕಾದೇಶ ಉದಾತ್ತೇನೋದಾತ್ತಃ' ಎಂಬುದರಿಂದ ಏಕಾದೇಶವು ಉದಾತ್ತ, ಇದರ ಮುಂದೆ ಬರುವ ತೃತೀಯಾವಿಭಕ್ತಿ ಏಕವಚನ ಟಾ ಪ್ರತ್ಯಯಕ್ಕೆ, **'ಅನುದಾತ್ತೌಸುಪ್ಪಿತೌ'**. ಎಂಬುದರಿಂದ ಅನುದಾತ್ತ. ಸುಕೃತ್ಯ+ಆ ಎಂದಿರುವಾಗ **'ಆಙಿಚಾಪಃ'** (ಪಾ. ಸೂ. ೭-೩-೧೦೫) ಆಙ್ (ತೃತೀಯಾ ಏಕವಚನ) ಓಸ್ ಇವುಗಳ ಹಿಂದೆ ಇರುವ ಆಬಂತ ವಾದ ಅಂಗಕ್ಕೆ ಏಕಾರಾದೇಶ ಬರುವುದು, ಎಂಬುದರಿಂದ ಸುಕೃತ್ಯ ಎಂಬಲ್ಲಿಯ ಅಕಾರಕ್ಕೆ ಏಕಾರಾದೇಶ, ಅಯಾದೇಶ, 'ಉದಾತ್ತಾದನುದಾತ್ತಸ್ಯ ಎಂಬುದರಿಂದ ವಿಭಕ್ತಿಗೆ ಸ್ವರಿತ, ಸುಕೃತ್ಯಯಾ, ಎಂದಾಗುವುದು.

**ಭಾಗಮ್**—ಭಜ ಸೇವಾಯಾಂ ಧಾತು, **'ಹಲಶ್ಚ'** (ಪಾ ಸೂ. ೩-೩-೧೨೧) ಹಲಂತವಾದ ಧಾತುವಿನ ಮುಂದೆ ಘಞ್ ಪ್ರತ್ಯಯಬರುವುದು ಎಂಬುದರಿಂದ ಘಞ್, **'ಚಜೋಃ ಕು ಘಿಣ್ಯತೋಃ'** (ಪಾ. ಸೂ. ೭-೩-೫೨) ಘಿತ್ತಾದಪ್ರತ್ಯಯ ಣ್ಯತ್‌ಪ್ರತ್ಯಯ ಇವು ಪರದಲ್ಲಿರುವಾಗ ಚಕಾರ ಜಕಾರಗಳಿಗೆ ಕುತ್ವ ಬರುವುದು ಎಂಬುದ ರಿಂದ ಜಕಾರಕ್ಕೆ ಕಕಾರ, **'ಅತ ಉಪಧಾಯಾಃ'** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ, ಭಾಗ ಎಂದಾಗುವುದು. ಈಗ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಪ್ರಾಪ್ತವಾದರೆ ಅದಕ್ಕೆ ಅಪವಾದವಾದ **'ಕರ್ಷಾತ್ವತೋಘಞೋಂತ ಉದಾತ್ತಃ'** (ಪಾ. ಸೂ. ೬-೧-೧೫೯) ಕರ್ಷತಿ ಧಾತು, ಆಕಾರ ವನ್ನು ಹೊಂದಿರುವ ಧಾತು ಇವುಗಳ ಮುಂದೆ ಯಾವ ಘಞ್ ಪ್ರತ್ಯಯವಿದೆಯೋ ಅವುಗಳ ಕೊನೆಯಲ್ಲಿ ಹೊಂದಿರುವ ಶಬ್ದದ ಅಂತವು ಉದಾತ್ತವಾಗುವುದು ಎಂಬುದರಿಂದ ಭಾಗ ಎಂಬುದು ಅಂತೋದಾತ್ತ.

**ಯಜ್ಞಿಯಂ**—ಯಜ್ಞಂ ಅರ್ಹತಿ, ಎಂದು ವಿಗ್ರಹ, **'ಯಜ್ಞರ್ತ್ವಿಗ್ಭ್ಯಾಂ ಘಖಞೌ'** (ಪಾ. ಸೂ. ೫-೧-೭೧) ದ್ವಿತೀಯಾ ವಿಭಕ್ತ್ಯಂತಗಳಾದ ಯಜ್ಞ ಋತ್ವಿಕ್ ಶಬ್ದಗಳ ಮುಂದೆ ಅರ್ಹತಿ ಎಂಬ ಅರ್ಥದಲ್ಲಿ ಕ್ರಮವಾಗಿ

ಘ-ಖಞ್-ಈ ಪ್ರತ್ಯಯಗಳು ಬರುವುವು ಎಂಬುದರಿಂದ ಯಜ್ಞಂ ಎಂಬುದರ ಮುಂದೆ ಘ ಪ್ರತ್ಯಯ, ಪ್ರಾತಿಪದಿಕಾವಯವದ ಸುಪ್‌ಗೆ ಲುಕ್, **'ಆಯನೇಯೀನೀಯಿಯಃ ಫ ಢ ಖ ಛಘಾಂ ಪ್ರತ್ಯಯಾದೀನಾಂ'** (ಪಾ. ಸೂ. ೭-೧-೨) ಎಂಬುದರಿಂದ ಘಗೆ ಇಯ್ ಆದೇಶ, **'ಯಸ್ಯೇತಿ ಚ'** (ಪಾ. ಸೂ. ೬-೪-೧೪೮) ಎಂಬುದರಿಂದ ಪ್ರತ್ಯಯದ ಹಿಂದಿನ ಅಕಾರಕ್ಕೆ ಲೋಪ, ಯಜ್ಞಿಯ ಎಂದಾಗುವುದು. ಪ್ರತ್ಯಯಸ್ವರ ಬರುವುದು ಯಜ್ಞಿಯಂ ದ್ವಿತೀಯಾ ಏಕವಚನಾಂತ || ೮ ||

|| ಶ್ರೀಃ ||

# ಇಪ್ಪತ್ತೊಂದನೆಯ ಸೂಕ್ತವು

|| ಸಾಯಣಭಾಷ್ಯಂ ||

**ಇಹೇಂದ್ರಾಗ್ನೀ ಇತ್ಯಾದಿಕಂ ಷಡೃಚಂ ಚತುರ್ಥಂ ಸೂಕ್ತಂ। ತಸ್ಯ ಋಷಿಚ್ಛಂದಸೀ ಪೂರ್ವವತ್। ದೇವತಾ ತ್ವನುಕ್ರಮ್ಯತೇ। ಇಹ ಷಳೈಂದ್ರಾಗ್ನಮಿತಿ॥ ವಿನಿಯೋಗಸ್ತು। ಅಗ್ನಿಷ್ಟೋಮೇಽಚ್ಛಾವಾಕಶಸ್ತ್ರ ಇಹೇಂದ್ರಾಗ್ನೀ ಉಪ ಹ್ವಯ ಇತಿ ಸೂಕ್ತಂ। ಸ್ತೋತ್ರಮಗ್ನೇ ಶಸ್ತ್ರಾದಿಶಿ ಖಂಡ ಇಹೇಂದ್ರಾಗ್ನೀ ಉಪೇಯಂ ವಾಮಸ್ಯ ಮನ್ಮನ ಇತಿ ನವ। ಆ. ೫-೧೦। ಇತಿ ಸೂತ್ರಿತತ್ವಾತ್॥ ತಥಾಭಿಪ್ಲವಷಡಹೇ ಪ್ರಾತಃಸವನೇಽಚ್ಛಾವಾಕಶಸ್ತ್ರೇ ಸ್ತೋಮಾತಿಶಂಸನಾರ್ಥಮೇತದೇವ ಸೂಕ್ತಂ। ತಥಾ ಚ ಸೂತ್ರಿತಂ। ಅಭಿಪ್ಲವಪೃಷ್ಠ್ಯಾಹಾನೀತ್ಯುಪಕ್ರಮ್ಯೇಹೇಂದ್ರಾಗ್ನೀ ಇಂದ್ರಾಗ್ನೀ ಆ ಗತಂ। ಆ. ೭-೫। ಇತಿ॥**

ಅನುವಾದವು—**ಇಹೇಂದ್ರಾಗ್ನೀ** ಎಂಬ ಸೂಕ್ತವು ಐದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿವೆ. ಈ ಸೂಕ್ತದ ಋಷಿಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—**ಇಹ ಷಳೈಂದ್ರಾಗ್ನಮಿತಿ**—ಇಹೇಂದ್ರಾಗ್ನೀ ಎಂಬ ಆರು ಋಕ್ಕುಗಳ ಸೂಕ್ತವು ಇಂದ್ರ ಮತ್ತು ಅಗ್ನಿ ದೇವತಾಕವಾದುದು ಎಂದು ಹೇಳಲ್ಪಟ್ಟಿದೆ. ವಿನಿಯೋಗವು—ಅಗ್ನಿಷ್ಟೋಮಯಾಗದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಶಸ್ತ್ರಮಂತ್ರವನ್ನು ಪಠಿಸುವಾಗ **ಇಹೇಂದ್ರಾಗ್ನೀ ಉಪಹ್ವಯೇ** ಎಂಬ ಸೂಕ್ತವನ್ನು ಪಠಿಸಬೇಕು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಸ್ತೋತ್ರಮಗ್ನೇ ಶಸ್ತ್ರಾತ್** ಎಂಬ ಖಂಡದಲ್ಲಿ—**ಇಹೇಂದ್ರಾಗ್ನೀ ಉಪೇಯಂ ವಾಮಸ್ಯ ಮನ್ಮನ ಇತಿ ನವ** ಎಂಬ ಸೂತ್ರದಿಂದ ಹೇಳಲ್ಪಟ್ಟಿದೆ (ಆ. ೫-೧೦). ಮತ್ತು ಅಭಿಪ್ಲವ ಷಡಹವೆಂಬ ಯಾಗದಲ್ಲಿ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕಋತ್ವಿಜನು ಸ್ತೋಮಾತಿಶಂಸನಾರ್ಥವಾಗಿ ಈ ಸೂಕ್ತವನ್ನು ಪಠಿಸುವನು. ಈ ವಿಷಯದಲ್ಲಿ **ಅಭಿಪ್ಲವಪೃಷ್ಠ್ಯಾಹಾನೀತ್ಯುಪಕ್ರಮ್ಯೇಹೇಂದ್ರಾಗ್ನೀ ಇಂದ್ರಾಗ್ನೀ ಆ ಗತಂ** ಎಂದು ಆಶ್ವಲಾಯನಶ್ರೌತಸೂತ್ರದಲ್ಲಿ ಹೇಳಿರುವುದು. (ಆ. ೭-೫)

## ಸೂಕ್ತ—೨೧

॥ ಮಂಡಲ—೧ ॥ ಅನುವಾಕ—೫ ॥ ಸೂಕ್ತ—೨೧ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ—೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧—೬ ॥

ಋಷಿಃ—ಮೇಧಾತಿಥಿಃ ಕಾಣ್ವಃ ।

ದೇವತಾ—ಇಂದ್ರಾಗ್ನೀ ॥

ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಇಹೇಂದ್ರಾಗ್ನೀ ಉಪ ಹ್ವಯೇ ತಯೋರಿತ್ಸ್ತೋಮಮುಶ್ಮಸಿ ।
ತಾ ಸೋಮಂ ಸೋಮಪಾತಮಾ ॥ ೧ ॥

॥ ಪದಪಾಠಃ ॥

ಇಹ । ಇಂದ್ರಾಗ್ನೀ ಇತಿ । ಉಪ । ಹ್ವಯೇ । ತಯೋಃ । ಇತ್ । ಸ್ತೋಮಂ ॥
ಉಶ್ಮಸಿ ।
ತಾ । ಸೋಮಂ । ಸೋಮಽಪಾತಮಾ ॥ ೧ ॥

॥ ಸಾಯಣಭಾಷ್ಯಂ ॥

ಇಹಾಸ್ಮಿನ್ಕರ್ಮಣೀಂದ್ರಾಗ್ನೀ ದೇವಾವುಪ ಹ್ವಯೇ । ಆಹ್ವಯಾಮಿ । ತಯೋರಿಂದ್ರಾಗ್ನ್ಯೋರೇವ ಸ್ತೋಮಂ ಸ್ತೋತ್ರಮುಶ್ಮಸಿ । ಕಾಮಯಾಮಹೇ । ಸೋಮಪಾತಮಾತಿಶಯೇನ ಸೋಮಂ ಪಾತುಂ ಕ್ಷಮೌ ತೌ ದ್ವೌ ದೇವೌ ಸೋಮಂ ಪಿಬತಾಮಿತಿ ಶೇಷಃ॥ ಇಂದ್ರಾಗ್ನೀ । ಅತ್ರ ದೇವತಾದ್ವಂದ್ವೇಽಪಿ ಪೂರ್ವಪದಸ್ಯಾನಙ್ ನ ಭವತಿ । ತತ್ರ ಹಿ ದ್ವಂದ್ವ ಇತ್ಯನುವೃತ್ತೌ ಪುನರ್ದ್ವಂದ್ವಗ್ರಹಣಾಲ್ಲೋಕಪ್ರಸಿದ್ಧಸಾಹಚರ್ಯಾಣಾಮೇವ ದ್ವಂದ್ವ ಆನಙಿತ್ಯುಕ್ತಂ । ಪಾ. ೬-೩-೨೬ । ತಸ್ಮಾದತ್ರಾವಗ್ರಹೇ ಹ್ರಸ್ವ ಇಂದ್ರಶಬ್ದಃ । ಸಮಾಸಸ್ಯೇತ್ಯಂತೋದಾತ್ತತ್ವಂ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿ-

**ಸ್ವರತ್ವಂ ತು ನ ಭವತಿ । ಅಗ್ನಿಶಬ್ದಸ್ಯಾನುದಾತ್ತಾದಿತ್ವೇನ ಸೋತ್ತರಪದೇಽನುದಾತ್ತಾದೌ । ಪಾ. ೬-೨-೧೪೨ । ಇತಿ ಪ್ರತಿಷೇಧಾತ್ । ಉಶ್ಮಸಿ । ವಶ ಕಾಂತೌ । ಲಟೋ ಮಸ್ । ಇದಂತೋ ಮಸಿಃ । ಪಾ. ೭-೧-೪೬ । ಇತೀಕಾರೋಪಜನಃ । ಅದಾದಿತ್ವಾಚ್ಛಪೋ ಲುಕ್ । ಮಸೇರ್ಜಿತ್ತ್ವಾದ್ಗ್ರಹಿಜ್ಯೇತ್ಯಾದಿನಾ ಸಂಪ್ರಸಾರಣಂ । ತಾ ಸೋಮಪಾತಮಾ । ಉಭಯತ್ರ ಸುಪಾಂ ಸುಲುಗಿತ್ಯಾಕಾರಃ॥**

॥ ಪ್ರತಿಪದಾರ್ಥ ॥

**ಇಹ**—ಈ ಕರ್ಮದಲ್ಲಿ । **ಇಂದ್ರಾಗ್ನೀ**—ಇಂದ್ರ ಮತ್ತು ಅಗ್ನಿಗಳನ್ನು । **ಉಪ ಹ್ವಯೇ**—ಆಹ್ವಾನಿಸುತ್ತೇನೆ । **ತಯೋರಿತ್**—ಅವರಿಬ್ಬರ ಉದ್ದಿಶ್ಯವಾಗಿಯೇ । **ಸ್ತೋಮಂ**—(ಸ್ತುತಿಯನ್ನು ಮಾಡಲು) । **ಉಶ್ಮಸಿ**—ಅಪೇಕ್ಷಿಸುತ್ತೇವೆ । **ಸೋಮಪಾತಮಾ**—ಸೋಮಪಾನಮಾಡುವುದರಲ್ಲಿ ಸಮರ್ಥರಾದ । **ತಾ**—ಅವರಿಬ್ಬರು । **ಸೋಮಂ**—(ನಾವು ಸಿದ್ಧಪಡಿಸಿರುವ) ಸೋಮರಸವನ್ನು (ಪಾನಮಾಡಲಿ).

॥ ಭಾವಾರ್ಥ ॥

ಇಲ್ಲಿ (ಈ ಕರ್ಮಕ್ಕೆ) ಇಂದ್ರ ಮತ್ತು ಅಗ್ನಿ ದೇವತೆಗಳನ್ನು ಆಹ್ವಾನಿಸಿ, ಸ್ತೋತ್ರಮಾಡುತ್ತೇವೆ. ಅವರಿಬ್ಬರೂ ವಿಶೇಷವಾಗಿ ಸೋಮಪಾನಮಾಡತಕ್ಕವರು : ನಾವು ಸಿದ್ಧಪಡಿಸಿರುವ ಸೋಮರಸವನ್ನು ಪಾನಮಾಡಲಿ.

## English Translation.

I invoke hither, Indra and Agni ; we desire to present our praise to them ; let them who are both greatest drinkers of Soma juice, drink our Soma.

॥ ವಿಶೇಷವಿಷಯಗಳು ॥

**ಉಶ್ಮಸಿ—ವಶ ಕಾಂತೌ । ಕಾಮಯಾಮಹೇ ।** ಅಪೇಕ್ಷಿಸುತ್ತೇವೆ.

**ಸೋಮಪಾತಮಾ—ಸೋಮಸ್ಯ ಅತಿಶಯೇನ ಪಾತಾರೌ ।** ಬಹಳ ಹೆಚ್ಚಾಗಿ ಸೋಮಪಾನ ಮಾಡುವವರು.

ಈ ಸೂಕ್ತದಲ್ಲಿ ಇಂದ್ರ ಮತ್ತು ಅಗ್ನಿ ಎಂಬ ದೇವತೆಗಳನ್ನೂ ಒಟ್ಟಿಗೆ ಸ್ತೋತ್ರಮಾಡಲಾಗಿದೆ. ಈ ರೀತಿ ಇಬ್ಬರು ದೇವತೆಗಳನ್ನು ಒಟ್ಟು ಸೇರಿಸಿ ಸ್ತೋತ್ರಮಾಡುವುದು ಋಗ್ವೇದದಲ್ಲಿ ವಿಶೇಷವಾಗಿದೆ. ದೇವತಾದ್ವಂದ್ವವನ್ನು ಪ್ರತಿಪಾದಿಸುವ ಮಂತ್ರಗಳಿಗೆ ಸಂಸ್ತವಿಕಮಂತ್ರವೆಂದು ಹೆಸರು (ನಿ. ೭-೮) ಈ ವಿಷಯದಲ್ಲಿ ನಾವು ಹಿಂದೆಯೇ (ಋಗ್ವೇದಸಂಹಿತಾ. ಭಾಗ ೨. ಪೇಜು, 710–712) ವಿವರಣೆಯನ್ನು ಬರೆದಿದೇವೆ.

॥ ವ್ಯಾಕರಣಪ್ರಕ್ರಿಯಾ ॥

ಇನ್ದ್ರಾಗ್ನೀ—ಇಂದ್ರಶ್ಚ-ಅಗ್ನಿಶ್ಚ ಇನ್ದ್ರಾಗ್ನೀ ಎಂದು ದ್ವಂದ್ವ ಸಮಾಸ. **'ದೇವತಾದ್ವಂದ್ವೇಚ'** (ಪಾ. ಸೂ. ೬-೩-೨೬) ದೇವತಾವಾಚಕ ದ್ವಂದ್ವ ಸಮಾಸದ ಉತ್ತರಪದದ ಹಿಂದೆ ಇರುವ ಪದಕ್ಕೆ ಆನಙ್ ಆದೇಶ ಬರುವುದು ಎಂಬ ಸೂತ್ರದಿಂದ, ಇಂದ್ರಾಗ್ನೀ ಎಂಬುದು ದೇವತಾವಾಚಕ ದ್ವಂದ್ವವಾದರೂ ಆನಙ್ ಆದೇಶ ಬರುವುದಿಲ್ಲ. ಏಕೆಂದರೆ **'ಆನಙ್ ಋತೋ ದ್ವಂದ್ವೇ'** (ಪಾ. ಸೂ. ೬-೩-೨೫) ಎಂಬ ಹಿಂದಿನ ಸೂತ್ರದಿಂದ ದ್ವಂದ್ವೇ ಎಂಬುದಕ್ಕೆ ಅನುವೃತ್ತಿ ಬಂದು, ವಾಕ್ಯಾರ್ಥವು ಏರ್ಪಡುವಾಗ ಪುನಃ 'ದೇವತಾದ್ವಂದ್ವೇ ಚ' ಎಂಬಲ್ಲಿ 'ದ್ವಂದ್ವೇ' ಎಂಬ ಪದವನ್ನು ಪಾಣಿನ್ಯಾಚಾರ್ಯರು ನಿವೇಶಮಾಡಿರುವರು, ಅವರ ಆಶಯವೇನೆಂದರೆ ಪೂರ್ವಸೂತ್ರದ ಪದವನ್ನು ಅನುವೃತ್ತಿಮಾಡಿಕೊಂಡು ಇಲ್ಲಿ ಆ ಪದವನ್ನು ಸೇರಿಸದೆ ಇದ್ದರೆ, ಪೂರ್ವದಲ್ಲಿ ದ್ವಂದ್ವಪದದಿಂದ ಪ್ರಸಿದ್ಧಾಪ್ರಸಿದ್ಧ ದ್ವಂಗಳೆಲ್ಲಕ್ಕೂ ಗ್ರಹಣವಿರುವುದರಿಂದ ಇಲ್ಲಿಯೂ, ಎಲ್ಲಾ ದ್ವಂದ್ವಗಳಿಗೂ ಗ್ರಹಣವು ಬರಬೇಕಾಗುವುದು. ಏವಂಚ 'ಬ್ರಹ್ಮ ಪ್ರಜಾಪತೀ' ಎಂಬಲ್ಲಿಯೂ ಆನಙಾದೇಶ ಬರಬೇಕಾಗುವುದು. ಪುನಃ ದ್ವಂದ್ವಪದೋಪಾದಾನಸಾಮರ್ಥ್ಯದಿಂದ ಪ್ರಸಿದ್ಧಸಾಹಚರ್ಯವಾಚಕವಾದ ದ್ವಂದ್ವಗಳಿಗೆ ಮಾತ್ರ 'ದೇವತಾದ್ವಂದ್ವೇಚ' ಎಂಬಲ್ಲಿ ಗ್ರಹಣವು ಬರುವುದು ಎಂದು ಏರ್ಪಡುವುದು. 'ಬ್ರಹ್ಮ ಪ್ರಜಾಪತೀ' ಎಂಬುದು ಪ್ರಸಿದ್ಧಸಾಹಚರ್ಯವಾಚಕವಾದ ದ್ವಂದ್ವವಲ್ಲ. ಆದ್ದರಿಂದ ಇಲ್ಲಿ ಆನಙ್ ಬರುವುದಿಲ್ಲ. ಮಹಾಭಾಷ್ಯದಲ್ಲಿ 'ಬ್ರಹ್ಮಪ್ರಜಾಪತೀ' ಎಂಬಲ್ಲಿ ಆನಙ್ ಆದೇಶವಾರಣೆಗಾಗಿ ಆರಬ್ಧವಾದ **'ಬ್ರಹ್ಮಪ್ರಜಾಪತ್ಯಾದೀನಾಂ ಚ'** (ಪಾ. ಸೂ. ೬-೩-೨೬-೨) ಎಂಬ ವಾರ್ತಿಕ ಪ್ರಾತ್ಯಾಖ್ಯಾನ ಕಾಲದಲ್ಲಿ 'ಸ ತರ್ಹಿವಕ್ತವ್ಯಃ? ನ ವಕ್ತವ್ಯಃ! ದ್ವಂದ್ವ ಇತಿ ವರ್ತಮಾನೇ ಪುನರ್ದ್ವಂದ್ವಗ್ರಹಣಸ್ಯೈತತ್ಪ್ರಯೋಜನಂ ಲೋಕವೇದಯೋರ್ಯೋ ದ್ವಂದ್ವಸ್ತತ್ರ ಯಥಾ ಸ್ಯಾತ್ । ಕಶ್ಚ ಲೋಕವೇದಯೋರ್ದ್ವಂದ್ವಃ? । ವೇದೇಯೇ ಸಹನಿರ್ವಾಪನಿರ್ದಿಷ್ಟಾಃ । ನ ಚೈತೇ ವೇದೇ ಸಹನಿರ್ವಾಪನಿರ್ದಿಷ್ಟಾಃ' ಎಂದು ವರ್ಣಿತವಾಗಿದೆ. ಸಹನಿರ್ವಾಪ-ಎಂದರೆ ಸಹದಾನವೆಂದರ್ಥ. ಇಲ್ಲಿ ಮೊದಲು 'ಇಂದ್ರಾವರುಣಾಭ್ಯಾಂ ಜುಷ್ಟಂ ನಿರ್ವಪಾಮಿ' ಎಂಬಂತೆ ಮಾನಸಿಕವಾದ ಹವಿರ್ದಾನಸಂಕಲ್ಪವೂ, ನಂತರ 'ಸ್ವಾಹಾ' ಮೊದಲಾದ ಶಬ್ದಗಳನ್ನುಚ್ಚರಿಸಿ ಹವಿಸ್ಸನ್ನು ಅಗ್ನಿಯಲ್ಲಿ ಪ್ರಕ್ಷೇಪ ಮಾಡುವುದರಿಂದ ಸ್ವಸ್ವತ್ವನಿವೃತ್ತಿಪರ್ಯಂತವಾದ ದಾನವು ನಿರ್ವಾಪ ಎಂಬುದರಿಂದ ವಿವಕ್ಷಿತವು, ಲೋಕಶಬ್ದದಿಂದ ಕಲ್ಪಸೂತ್ರವು ವಿವಕ್ಷಿತವು, ಇಂದ್ರಾಗ್ನೀಪದಸಾಹಚರ್ಯವು ಈ ರೀತಿಯಲ್ಲಿ ಲೋಕವೇದಗಳಲ್ಲಿ ಪ್ರಸಿದ್ಧವಾಗಿಲ್ಲ. ಆದ್ದರಿಂದ ಇಲ್ಲಿ ಆನಙ್ ಆದೇಶ ಬರುವುದಿಲ್ಲ. ಕಾಶಿಕೆಯಲ್ಲೂ 'ದ್ವಂದ್ವ ಇತ್ಯನುವೃತ್ತೌ ಪುನರ್ದ್ವಂದ್ವಗ್ರಹಣಾತ್ ಲೋಕಪ್ರಸಿದ್ಧಸಾಹಚರ್ಯಾಣಾಮೇವ ದ್ವಂದ್ವೇ **'ಆನಙ್'** (ಕಾ. ೩-೬-೨೬) ಎಂದು ಹೇಳಿರುವರು. ಯದ್ಯಪಿ ಆನಙ್ ಆದೇಶಬಂದರೂ ಬರದೇ ಇದ್ದರೂ ಇಂದ್ರಾಗ್ನೀ ಎಂದೇ ರೂಪವಾಗುವುದು, ಹಾಗಾದರೆ ಇಲ್ಲಿ ಆನಙಾದೇಶವಾರಣೆಗೆ ಫಲವೇನು? ಎಂದರೆ ಆನಙಾದೇಶ ಬಂದರೆ ವೇಷ್ಟನೆಯಲ್ಲಿ (ಅವಗ್ರಹದಲ್ಲಿ) ಇಂದ್ರಾಗ್ನೀ ಇತೀನ್ದ್ರಾ ಅಗ್ನೀ ಎಂದು ಹೇಳಬೇಕಾಗುವುದು. ಆನಙ್ ಬರದೇ ಇದ್ದರೆ ಇನ್ದ್ರಾಗ್ನೀ ಇತೀನ್ದ್ರ ಅಗ್ನೀ ಎಂದಾಗುವುದು, ಈ ವಿಶೇಷಕ್ಕಾಗಿ ಇಲ್ಲಿ ಆನಙನ್ನು ಒಪ್ಪಕೂಡದು. ಆದರೆ, ಉತ್ತರಪದೇ ಎಂದು ಸಪ್ತಮೀ ನಿರ್ದೇಶವಿರುವುದರಿಂದ, **'ತಸ್ಮಿನ್ನಿತಿನಿರ್ದಿಷ್ಟೇ ಪೂರ್ವಸ್ಯ'** (ಪಾ. ಸೂ. ೧-೧-೬೬) ಎಂಬುದರಿಂದ ಅವ್ಯವಹಿತಪೂರ್ವಸ್ಯ ಎಂದು ಅರ್ಥವು ಏರ್ಪಡುವುದು, ಏವಂಚ ದೇವತಾವಾಚಕದ್ವಂದ್ವಘಟಕೋತ್ತರಪದಾವ್ಯವಹಿತಪೂರ್ವಸ್ಯ ಆನಙ್ ಭವತಿ, ಎಂದು ಸೂತ್ರಾರ್ಥವೇಷ್ಟನೆಯಲ್ಲಿ ಇನ್ದ್ರಾಗ್ನಿ ಇತೀಂದ್ರಾ-ಅಗ್ನೀ ಎಂದು ವರ್ಣಾಕೃತವ್ಯವಧಾನವಿಲ್ಲದಿದ್ದರೂ

ಕಾಲಕರ್ತವ್ಯವಧಾನವಿರುವುದು. ಏವಂಚ ವೇಷ್ಟನೆಯಲ್ಲಿ ಅನಙ್ ಹೇಗೆ ಬರುವುದು, ಎಂದರೆ ' ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ ' ಎಂಬುದು ವರ್ಣಕೃತವ್ಯವಧಾನವನ್ನು ಮಾತ್ರ ನಿಷೇಧಿಸುವುದು. ಕಾಲಕೃತವಾದ ವ್ಯವಧಾನವನ್ನು ನಿಷೇಧಿಸುವುದಿಲ್ಲ. ಆದುದರಿಂದ **' ಸಂಹಿತಾಯಾಂ '** ಎಂಬ ಅಧಿಕಾರಸೂತ್ರಾರಂಭವು ಸಫಲವಾಗುವುದು. ಇಲ್ಲದಿದ್ದರೆ **' ಇಕೋ ಯಣಚಿ '** (ಪಾ. ಸೂ. ೬-೧-೭೭) ಇತ್ಯಾದಿ ಸೂತ್ರಗಳಲ್ಲಿ **' ತಸ್ಮಿನ್ನಿತಿ '** ಎಂಬಲ್ಲಿ ನಿರ್ದಿಷ್ಟ ಗ್ರಹಣವಿರುವುದರಿಂದಲೇ ಕಾಲಕೃತ ವರ್ಣಕೃತ ವ್ಯವಧಾನವು ಇರುವಾಗ ಯಣಾದಿಗಳು ಬರುವುದಿಲ್ಲ. ಅಂದಮೇಲೆ ಸಂಹಿತಾಧಿಕಾರವು ವ್ಯರ್ಥವಾಗುವುದು. ಆದ್ದರಿಂದ ಸಂಹಿತಾಧಿಕಾರಾರಂಭ ಜ್ಞಾಪಕದಿಂದ **'ತಸ್ಮಿನ್ನಿತಿ'** ಪರಿಭಾಷೆಯು ಕಾಲಕೃತವ್ಯವಧಾನವನ್ನು ಪ್ರತಿಷೇಧಿಸುವುದಿಲ್ಲ. ಈ ಅವಗ್ರಹದಲ್ಲಿ ವರ್ಣಕೃತವ್ಯವಧಾನವಿಲ್ಲದೇ ಇರುವುದರಿಂದ ಅನಙ್ ಬರಬೇಕಾಗುವುದು. **' ಏವಂಚ ಇನ್ದ್ರಾಗ್ನೀ ಇತೀನ್ದ್ರಾ ಅಗ್ನೀ '** ಎಂದಾಗಬೇಕಾಗುವುದು, ಹ್ರಸ್ವವಾದ ಇನ್ದ್ರಶಬ್ದವು ಅವಗ್ರಹದಲ್ಲಿ ಇರುವುದು ಯುಕ್ತವು. ಆದ್ದರಿಂದ ಇಲ್ಲಿ ಅನಙ್ ಆದೇಶ ಮಾಡಕೂಡದು. ಇನ್ದ್ರಾಗ್ನೀ ಎಂಬುದು **' ಸಮಾಸಸ್ಯ '** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತ, ಅಗ್ನಿಶಬ್ದವು ನಿಪ್ರತ್ಯಯಾಂತ, ಪ್ರತ್ಯಯಸ್ವರದಿಂದ ಅಂತೋದಾತ್ತ, ಶೇಷನಿಘಾತದಿಂದ ಅಕಾರಕ್ಕೆ ಅನುದಾತ್ತ ಬರುವುಗು ಎಂದು ಅಗ್ನಿಮಾಳೇ ಎಂಬಲ್ಲಿ ನಿರೂಪಿತವಾಗಿದೆ. ಅಂತು ಅಗ್ನಿಶಬ್ದವು ಅನುದಾತ್ತಾದಿ ಎಂದು ಏರ್ಪಟ್ಟಿದೆ, ಆದ್ದರಿಂದ **' ನೋತ್ತರ-ಪದೇಽನುದಾತ್ತಾದಾವಪೃಥಿವೀರುದ್ರಪೂಷಮನ್ಥಿಷು '** (ಪಾ. ಸೂ. ೬-೨-೧೪೨) ಪೃಥಿವೀ ಮೊದಲಾದ ಶಬ್ದಗಳನ್ನುಳಿದ ಅನುದಾತ್ತಾದಿಯಾದ ಉತ್ತರಪದಪರದಲ್ಲಿರುವಾಗ ಪೂರ್ವೋಕ್ತವಾದ ಉಭಯಪದ ಪ್ರಕೃತಿಸ್ವರ ಬರುವುದಿಲ್ಲವೆಂದು ನಿಷೇಧವಿರುವುದರಿಂದ **' ದೇವತಾದ್ವಂದ್ವೇಚ '** (ಪಾ. ಸೂ ೬-೨-೧೪೧) ದೇವತಾದ್ವಂದ್ವದಲ್ಲಿ ಪೂರ್ವೋತ್ತರ ಪದಗಳು ಒಟ್ಟಿಗೆ ಪ್ರಕೃತಿಸ್ವರವನ್ನು ಹೊಂದುವುವು ಎಂದು ವಿಹಿತವಾದ ಉಭಯಪದಪ್ರಕೃತಿ ಸ್ವರವು ಬರುವುದಿಲ್ಲ.

**ಉಶ್ಮಸಿ**—**' ವಶ ಕಾನ್ತೌ '** ಧಾತು, ಲಟ್-ಉತ್ತಮ ಪುರುಷ ಬಹುವಚನ ಮಸ್-ವಶ್+ಮಸ್, **' ಇದನ್ತೋ ಮಸಿ '** (ಪಾ. ಸೂ. ೭-೧-೪೬) ಮಸಿ ಎಂದು ಅವಿಭಕ್ತಿಕನಿರ್ದೇಶ-ಇಕಾರವು ಉಚ್ಚಾರಣಾರ್ಥವಾಗಿರುವುದು, ಇದಂತಃ :ಎಂಬಲ್ಲಿ, ಅಂತಶಬ್ದಕ್ಕೆ ಅವಯವ ಎಂದರ್ಥ, ಇತ್-ಇಕಾರವು ಅಂತಃ=ಅವಯವವು-ಯಸ್ಯ ಸಃ ಯಾವುದಕ್ಕೋ ಅದು ಎಂದು ವಿಗ್ರಹ-ಇತ್ ಎಂಬಲ್ಲಿ ತ್ ಎಂಬುದು ಇಲ್ಲದಿದ್ದರೆ ಯಣಾದೇಶ ಬಂದು **' ಯಂತ '** ಎಂದಾಗಬೇಕಾಗುವುದು, ಸೂತ್ರದಲ್ಲಿ ಇಕಾರವು ನಿರ್ದಿಷ್ಟವಾಗಿರುವುದೋ ಯಕಾರವು ನಿರ್ದಿಷ್ಟವಾಗಿರುವುದೋ ಎಂಬ ಸಂಶಯವು ಬರುವುದು. ಈ ಸಂಶಯ ಬರದೇ ಇರುವುದಕ್ಕಾಗಿ, ಇತ್ ಎಂಬಲ್ಲಿ ತಪರಕರಣವಿರುವುದು. ಏವಂಚ ಮಸ್ ಎಂಬ ಸಕಾರಾಂತವಾದ ಶಬ್ದವು ಇಕಾರಾಂತಾವಯವಕವಾಗುವುದು ಎಂದು ಸೂತ್ರಕ್ಕೆ ಅರ್ಥವಾಗುವುದು, ಇಕಾರವು ಆದೇಶ ಎಂದು ವಿವಕ್ಷಿತವಾಗಿದ್ದರೆ ಲಾಘವಾರ್ಥಕ್ಕಾಗಿ **' ಮಸ್ ಇತ್ '** ಎಂದು ಸೂತ್ರವಿನ್ಯಾಸವಿರಬೇಕು, ಆದ್ದರಿಂದ ಟಿತ್ಕಿತ್ವಾದಿರೂಪವಾದ ಆಗಮಲಿಂಗಗಳು ಇಲ್ಲದಿದ್ದರೂ ಇಕಾರವು ಆಗಮವೇ ಆಗುವುದು ಏವಂಚ **' ಮಸ ಇಕ್ '** ಎಂದು ಸೂತ್ರಕರಣವಾದರೆ ಯಾವ ಅರ್ಥವೋ ಅದೇ ಅರ್ಥವೇ ಫಲಿತವು, ಹಾಗಾದರೆ ಹೀಗೆಯೇ ಏಕೆ ವಿನ್ಯಾಸಮಾಡಬಾರದು ಎಂದರೆ ಹೀಗೆ ವಿನ್ಯಾಸ ಮಾಡಿದರೆ ಇಕ್ ಎಂಬುದು ಪ್ರತ್ಯಾಹಾರವಿರಬಹುದು ಎಂಬ ಸಂಶಯುಬರುವುದು. ಈ ಸಂಶಯಪರಿಹಾರಕ್ಕಾಗಿ ಈ ರೀತಿ ವಿನ್ಯಾಸಮಾಡಿಲ್ಲ. ಪ್ರಕೃತ ಮಸ್ **' ಇದನ್ತೋ ಮಸಿ '** ಎಂಬುದರಿಂದ ಇಕಾರಾಗಮ ಬರುವುದು. ವಶ್+ಮಸಿ, ವಶಧಾತು ಅದಾದಿ. ಆದ್ದರಿಂದ ಇದರ ಮುಂದೆ ಬರುವ

ಶಪ್ ವಿಕರಣಕ್ಕೆ '**ಅದಿಪ್ರಭೃತಿಭ್ಯಃ ಶಪಃ**' (ಪಾ. ಸೂ. ೨-೪-೭೨) ಎಂಬುದರಿಂದ ಲುಕ್, '**ಸಾರ್ವಧಾತುಕಮಪಿತ್**' (ಪಾ. ಸೂ. ೧-೨-೪) ಎಂಬುದರಿಂದ '**ಮಸಿ**' ಎಂಬುದು ಙಿತ್ತು. ಆದ್ದರಿಂದ '**ಗ್ರಹಿಜ್ಯಾವಯಿವ್ಯಧಿವಷ್ಟಿ ವಿಚತಿವೃಶ್ಚತಿ ಪೃಚ್ಛತಿ ಭೃಜ್ಜತೀನಾಂ ಙಿತಿಚ**' (ಪಾ. ಸೂ. ೬-೧-೧೬) ಕಿತ್ತು ಅಥವಾ ಙಿತ್ತು ಆದ ಪ್ರತ್ಯಯಗಳು ಪರದಲ್ಲಿರುವಾಗ ಗ್ರಹ್ ಮೊದಲಾದ ಧಾತುಗಳಿಗೆ ಸಂಪ್ರಸಾರಣ ಬರುವುದು ಎಂಬುದರಿಂದ ಸಂಪ್ರಸಾರಣ. ವಕಾರಕ್ಕೆ ಉಕಾರ ಬರುತ್ತೆ. ಪೂರ್ವರೂಪ, ಉಶ್ಮಸಿ ಎಂದಾಗುವುದು.

**ತಾ-ತೌ**—ಎಂದರ್ಥ.

**ಸೋಮಪಾತಮಾ**—ಸೋಮಂ ಪಿಬತಿ ಇತಿ ಸೋಮಪೌ, ಅತಿಶಯೇನ ಸೋಮಪೌ, ಸೋಮಪಾತಮೌ ತಾ, ಸೋಮಪಾತಮಾ, ಎಂಬ ಎರಡು ಕಡೆಯಲ್ಲಿಯೂ ಪ್ರಥಮಾ ದ್ವಿವಚನ ಔ ಪ್ರತ್ಯಯಕ್ಕೆ '**ಸುಪಾಂ ಸುಲುಕ್**' (ಪಾ. ಸೂ. ೭-೧-೩೯) ಇತ್ಯಾದಿ ಸೂತ್ರದಿಂದ ಆಕಾರಾದೇಶ ಬರುತ್ತೆ ॥ ೧ ॥

॥ ಸಂಹಿತಾಪಾಠಃ ॥

ತಾ ಯಜ್ಞೇಷು ಪ್ರ ಶಂಸತೇಂದ್ರಾಗ್ನೀ ಶುಂಭತಾ ನರಃ ।
ತಾ ಗಾಯತ್ರೇಷು ಗಾಯತ ॥ ೨ ॥

॥ ಪದಪಾಠಃ ॥

ತಾ । ಯಜ್ಞೇಷು । ಪ್ರ । ಶಂಸತ । ಇಂದ್ರಾಗ್ನೀ ಇತಿ । ಶುಂಭತ । ನರಃ ॥
ತಾ । ಗಾಯತ್ರೇಷು । ಗಾಯತ ॥ ೨ ॥

॥ ಸಾಯಣಭಾಷ್ಯಂ ॥

**ಹೇ ನರೋ ಮನುಷ್ಯಾ ಋತ್ವಿಜಃ ತಾ ಪೂರ್ವೋಕ್ತೌ ತಾವಿಂದ್ರಾಗ್ನೀ ಯಜ್ಞೇಷ್ವನುಷ್ಠೀಯಮಾನಕರ್ಮಸು ಪ್ರ ಶಂಸತ ಶಸ್ತ್ರೈಃ । ತಥಾ ಶುಂಭತ । ನಾನಾವಿಧೈರಲಂಕಾರೈಃ ಶೋಭಿತೌ ಕುರುತ । ತಥಾ ತಾ ಪೂರ್ವೋಕ್ತೌ ತಾವಿಂದ್ರಾಗ್ನೀ ಗಾಯತ್ರೇಷು ಗಾಯತ್ರೀಚ್ಛಂದಸ್ಕೇಷು ಮಂತ್ರೇಷು ಸಾಮರೂಪೇಣ ಗಾಯತ ॥ ತಾ । ಸುಪಾಂ ಸುಲುಗಿತ್ಯಾಕಾರಃ । ಶುಂಭತ । ಅಸ್ಯ ಸಂಹಿತಾಯಾಮನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ ॥**

॥ ಪ್ರತಿಪದಾರ್ಥ ॥

**ಹೇ ನರಃ**—ಎಲೈ ಮನುಷ್ಯರೇ, (ಋತ್ವಿಜರೇ) । **ತಾ**—ಹಿಂದೆ ಹೇಳಿದ ಇಂದ್ರಾಗ್ನಿಗಳನ್ನು । **ಯಜ್ಞೇಷು**—ಯಜ್ಞಗಳಲ್ಲಿ । **ಪ್ರ ಶಂಸತ**—ಚೆನ್ನಾಗಿ ಸ್ತೋತ್ರಮಾಡಿ । **ಶುಂಭತ**—(ನಾನಾವಿಧ ಅಲಂಕಾರ ಗಳಿಂದ) ಅಲಂಕರಿಸಿ । **ತಾ**—ಅವರಿಬ್ಬರನ್ನೂ । **ಗಾಯತ್ರೇಷು**—ಗಾಯತ್ರೀ ಛಂದಸ್ಸಿನ ಋಕ್ಕುಗಳಿಂದ । **ಗಾಯತ**—ಗಾನಮಾಡಿ. (ಸ್ತುತಿಸಿ)

॥ ಭಾವಾರ್ಥ ॥

ಎಲೈ ಋತ್ವಿಜರೇ, ಹಿಂದೆ ಪ್ರತಿಪಾದಿತರಾದ ಇಂದ್ರ ಮತ್ತು ಅಗ್ನಿಗಳನ್ನು ಚೆನ್ನಾಗಿ ಸ್ತುತಿಸಿ, ಅಲಂಕಾರ ಗಳಿಂದ ಅಲಂಕರಿಸಿ, ಗಾಯತ್ರೀ ಛಂದಸ್ಸಿನ ಋಕ್ಕುಗಳಿಂದ ಸಾಮಗಾನರೀತಿಯಿಂದ ಗಾನಮಾಡಿ.

## English Translation.

O men, praise Indra and Agni in Sacrifices, decorate them with ornaments and sing them with hymns of Gayatri metres.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಋಷಿಯು ಜನರನ್ನು ಎಂದರೆ ಯಜ್ಞಾನುಷ್ಠಾನದಲ್ಲಿ ಪ್ರವೃತ್ತರಾಗಿರುವ ಋತ್ವಿಜರನ್ನು ಸಂಬೋಧನೆಮಾಡಿರುವನು.

**ಶುಂಭತ**—ಅಲಂಕಾರಮಾಡಿರಿ, decorate. ಇಲ್ಲಿ ದೇವತೆಗಳನ್ನು ಅಲಂಕಾರಮಾಡುವುದೆಂದರೇನು, ಅಪ್ರತ್ಯಕ್ಷರಾದ ಅವರಿಗೆ ಅಲಂಕಾರಮಾಡುವುದು ಹೇಗೆ ? ಈ ವಿಷಯವು ಸ್ಪಷ್ಟವಾಗಿಲ್ಲ.

**ಗಾಯತ್ರೇಷು**—ಗಾಯತ್ರೀ ಛಂದಸ್ಸಿನ ಋಕ್ಕುಗಳಿಂದ ಅಥವಾ ಸಾಮವೇದದಲ್ಲಿರುವ ಗಾಯತ್ರವೆಂಬ ಸಾಮಮಂತ್ರದಿಂದ. ಪ್ರಾತಸ್ಸವನಾದಿ ಮೂರು ಸವನಗಳಲ್ಲಿಯೂ ಗಾಯತ್ರೀ ಮೊದಲಾದ ಏಳು ವಿಧ ಛಂದಸ್ಸಿನಿಂದ ಕೂಡಿದ ಅನೇಕ ಋಕ್ಕುಗಳನ್ನು ಪಠಿಸಬೇಕೆಂದು ನಿಯಮವಿರುವುದರಿಂದಲೂ ಮೊದಲು ಗಾಯತ್ರೀ ಛಂದಸ್ಸಿನಿಂದಲೇ ಸ್ತೋತ್ರಮಾಡುವುದರಿಂದಲೂ ಇಲ್ಲಿ ಗಾಯತ್ರೇಷು ಎಂದು ಹೇಳಿರುವುದಕ್ಕೆ ಗಾಯತ್ರೀ ಛಂದಸ್ಸಿನ ಋಕ್ಕುಗಳಿಂದ ಸ್ತೋತ್ರಮಾಡಿರೆಂದು ಋಷಿಯು ಋತ್ವಿಗ್ಜನರನ್ನು ಸಂಬೋಧಿಸಿ ಹೇಳಿರುವನು.

॥ ವ್ಯಾಕರಣಪ್ರಕ್ರಿಯಾ ॥

**ತಾ**—ಇಲ್ಲಿಯೂ '**ಸುಪಾಂ ಸುಲುಕ್**' ಇತ್ಯಾದಿ ಸೂತ್ರದಿಂದ ವಿಭಕ್ತಿಗೆ ಆಕಾರದೇಶ.

**ಶುಮ್ಭತ**—ಇದಕ್ಕೆ ಸಂಹಿತಾಕಾಲದಲ್ಲಿ '**ಅನ್ಯೇಷಾಮಪಿ ದೃಶ್ಯತೇ**' (ಪಾ. ಸೂ. ೬-೩-೧೩೭) ಸಂಹಿತಾಕಾಲದಲ್ಲಿ ದೀರ್ಘವಿಧಿಯಲ್ಲಿ ಹೇಳಿದವುಗಳಿಗಿಂತ ಬೇರೆಯವುಗಳಿಗೂ ದೀರ್ಘ ಬರುವುದು ಎಂಬುದರಿಂದ ದೀರ್ಘ. ॥ ೨ ॥

॥ ಸಂಹಿತಾಪಾಠಃ ॥

ತಾ ಮಿತ್ರಸ್ಯ ಪ್ರಶಸ್ತಯ ಇಂದ್ರಾಗ್ನೀ ತಾ ಹವಾಮಹೇ ।
ಸೋಮಪಾ ಸೋಮಪೀತಯೇ ॥ ೩ ॥

॥ ಪದಪಾಠಃ ॥

ತಾ । ಮಿತ್ರಸ್ಯ । ಪ್ರಽಶಸ್ತಯೇ । ಇಂದ್ರಾಗ್ನೀ ಇತಿ । ತಾ । ಹವಾಮಹೇ ॥
ಸೋಮಽಪಾ । ಸೋಮಽಪೀತಯೇ ॥ ೩ ॥

॥ ಸಾಯಣಭಾಷ್ಯಂ ॥

ಮಿತ್ರಸ್ಯ ಸ್ನೇಹವಿಷಯಸ್ಯ ಮಮಾನುಷ್ಠಾತುಃ ಪ್ರಶಸ್ತಯೇ ತಾ ಪೂರ್ವೋಕ್ತೌ ದೇವೌ ಸಂಪದ್ಯೇತಾಮಿತಿ ಶೇಷಃ । ಯದ್ವಾ । ಮಿತ್ರಸ್ಯ ಮಮ ಸಂಬಂಧಿನೌ ತಾವಿಂದ್ರಾಗ್ನೀ ಪ್ರಶಸ್ತಯೇ ಪ್ರಶಂಸಿತುಮಿಚ್ಛಾಮ ಇತಿ ಶೇಷಃ । ಸೋಮಪಾ ಸೋಮಪಾನಕ್ಷಮೌ ತಾ ಪೂರ್ವೋಕ್ತಾವಿಂದ್ರಾಗ್ನೀ ಸೋಮಪೀತಯೇ ಸೋಮಪಾನಾರ್ಥಂ ಹವಾಮಹೇ । ಆಹ್ವಯಾಮಃ ॥ ಪ್ರಶಸ್ತಯೇ । ತುಮರ್ಥಾಚ್ಚ ಭಾವವಚನಾತ್ । ಪಾ– ೨-೩-೧೫ । ಇತಿ ಚತುರ್ಥೀ । ಕೃದುತ್ತರಪದಪ್ರಕೃತಿಸ್ವರತ್ವಂ ಬಾಧಿತ್ವಾ ತಾದೌ ಚ ನಿತಿ ಕೃತ್ಯತೌ । ಪಾ-೬-೨-೫೦ । ಇತಿ ಗತೇಃ ಪ್ರಕೃತಿಸ್ವರತ್ವಂ । ಸೋಮಪೀತಯೇ । ಸೋಮಸ್ಯ ಪೀತಿರ್ಯಸ್ಮಿನ್ಕರ್ಮಣಿ ತಸ್ಮೈ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸೋಮಸ್ಯ ಪೀತಿರಿತಿ ತತ್ಪುರುಷೇ ವಾ ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ತಾ**—ಆ ಇಂದ್ರಾಗ್ನಿಗಳನ್ನು । **ಮಿತ್ರಸ್ಯ**—ಸ್ನೇಹಪಾತ್ರನಾದ (ಯಜಮಾನನ)ವನ । **ಪ್ರಶಸ್ತಯೇ**—ಪ್ರಶಂಸೆಗೆ (ಪ್ರಯೋಜನಕ್ಕಾಗಿ) ಸ್ತೋತ್ರಮಾಡುತ್ತೇವೆ । **ಸೋಮಪಾ**—ಸೋಮಪಾನಮಾಡುವ । **ತಾ ಇಂದ್ರಾಗ್ನೀ**–ಆ ಇಂದ್ರಾದಿಗಳನ್ನು । **ಸೋಮಪೀತಯೇ**–ಸೋಮಪಾನಮಾಡುವುದಕ್ಕಾಗಿ । **ಹವಾಮಹೇ**–ಆಹ್ವಾನಿಸುತ್ತೇವೆ.

॥ ಭಾವಾರ್ಥ ॥

ಸೋಮಪಾನಮಾಡುವ ಇಂದ್ರಾಗ್ನಿಗಳನ್ನು ಸೋಮಪಾನಮಾಡುವುದಕ್ಕಾಗಿ ಆಹ್ವಾನಿಸುತ್ತೇವೆ. ಅವರು ಸೋಮಪಾನಮಾಡಿ, ತೃಪ್ತರಾಗಿ, ನಮ್ಮ ಮಿತ್ರನಾದ ಯಜಮಾನನ ಪ್ರಶಂಸೆಗೆ ಕಾರಣರಾಗಲಿ.

## English Translation.

For the benefit of our friend (worshipper) we invoke Indra and Agni, drinkers of Soma juice, to drink the Soma libation.

॥ ವಿಶೇಷವಿಷಯಗಳು ॥

**ತಾ ಮಿತ್ರಸ್ಯ ಪ್ರಶಸ್ತಯೇ**— ಈ ವಾಕ್ಯದಲ್ಲಿ ಕ್ರಿಯಾಪದವಿಲ್ಲದ್ದರಿಂದ ಹಿಂದಿನ ಋಕ್ಕಿನಲ್ಲಿರುವ **ಗಾಯತ** ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕೆಂದು ಭಾಷ್ಯಕಾರರು ಹೇಳಿರುವರು. ಅದರಂತೆ ಈ ವಾಕ್ಯಕ್ಕೆ-ಆ ಇಂದ್ರಾಗ್ನಿಗಳನ್ನು ನಮ್ಮ (ನಿಮ್ಮ) ಸ್ನೇಹಿತನಾದ ಯಜಮಾನನ ಅಭಿವೃದ್ಧಿಗಾಗಿ (ಪ್ರಯೋಜನಕ್ಕಾಗಿ) ಪ್ರಶಂಸೆ ಮಾಡಿರಿ ಎಂದರೆ ಸ್ತೋತ್ರಮಾಡಿರಿ ಎಂದು ಅರ್ಥವು.

ಈ ಋಕ್ಕಿನಲ್ಲಿ ತಾ ಎಂಬ ಶಬ್ದವು ಎರಡಾವರ್ತಿ ಪಠಿತವಾಗಿದೆ. ಮತ್ತು **ಸೋಮಪಾ ಸೋಮಪೀತಯೇ** ಎಂಬಲ್ಲಿಯೂ ಸಹ ಸೋಮಪಾನವಿಷಯವು ದ್ವಿರುಕ್ತಿಯಿಂದ ಕೂಡಿದೆ. ಇಂತಹ ಪ್ರಯೋಗಗಳು ಋಗ್ವೇದದಲ್ಲಿ ಅಲ್ಲಲ್ಲಿ ವಿಶೇಷವಾಗಿ ಕಂಡುಬರುವುದು. ಛಂದಸ್ಸಿನ ಅನುಕೂಲಕ್ಕಾಗಿಯೋ ಅಥವಾ ಆ ಕಾಲದಲ್ಲಿ ಭಾಷಾಸಂಪ್ರದಾಯವನ್ನನುಸರಿಸಿಯೋ ಇಂತಹ ದ್ವಿರುಕ್ತಿಪ್ರಯೋಗಗಳು ರೂಢಿಯಲ್ಲಿದ್ದಿರಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಪ್ರಶಸ್ತಯೇ**—ಪ್ರ ಉಪಸರ್ಗಪೂರ್ವಕವಾದ '**ಶಂಸು ಸ್ತುತೌ**' ಧಾತು ೧ನೇ ಗಣ, ಇದರ ಮುಂದೆ '**ಭಾವೇ**' (ಪಾ. ಸೂ. ೩-೩-೧೮) ಅಧಿಕಾರದಲ್ಲಿ '**ಸ್ತ್ರಿಯಾಂ ಕ್ತಿನ್**' (ಪಾ. ಸೂ. ೩-೩-೯೪) ಎಂದು ವಿಹಿತವಾಗಿರುವುದರಿಂದ ಕ್ರಿಯಾರ್ಥಕ್ರಿಯೆಯು ಉಪಪದವಾಗಿರುವಾಗ '**ಭಾವವಚನಾಚ್ಚ**' (ಪಾ. ಸೂ. ೩-೩-೧೧) ಎಂಬ ಸೂತ್ರದಿಂದ ಕ್ತಿನ್ ಪ್ರತ್ಯಯ '**ತಿತುತ್ರತಥಸಿಸುಸರಕಸೇಷು ಚ**' (ಪಾ. ಸೂ. ೭-೨-೯) ಎಂದು ನಿಷೇಧವಿರುವುದರಿಂದ ಇಡಾಗಮ ಬರುವುದಿಲ್ಲ, '**ಅನಿದಿತಾಂ ಹಲ ಉಪಧಾಯಾಃ ಕ್ಙಿತಿ**' (ಪಾ. ಸೂ. ೬-೪-೨೪) ಎಂಬುದರಿಂದ ಉಪಧಾ, ನಕಾರಕ್ಕೆ ಲೋಪ-'**ನಕಾರಜಾವನುಸ್ವಾರಪಂಚಮೌ**' ಝಲಿ ಧಾತುಷು ಎಂಬ ವಚನಾನುಸಾರ ನಕಾರಸ್ಥಾನದಲ್ಲಿ '**ನಶ್ಚಾಪದಾಂತಸ್ಯ ಝಲಿ**' (ಪಾ. ಸೂ. ೮-೩-೨೪) ಎಂಬುದರಿಂದ ಅನುಸ್ವಾರ ಬಂದು '**ಶಂಸ್**' ಎಂದಾಗಿರುವುದು ಎಂದು ಸ್ಥಿತಿ, ಈ ಅನುಸ್ವಾರವು ಉಪಧಾ ನಲೋಪವನ್ನು ಮಾಡುವಾಗ '**ಪೂರ್ವತ್ರಾಸಿದ್ಧಮ್**' (ಪಾ. ಸೂ. ೮-೨-೧) ಎಂಬುದರಿಂದ ಅಸಿದ್ಧವಾಗುವುದು, ಆದ್ದರಿಂದ ನಕಾರವಿರುವುದು ಅದಕ್ಕೆ ಲೋಪವೂ ಪೂರ್ವೋಕ್ತರೀತಿಯಲ್ಲಿ ಬರುವುದು. '**ಕುಗತಿಪ್ರಾದಯಃ**' (ಪಾ. ಸೂ. ೨-೨-೧೮) ಎಂಬುದರಿಂದ ಪ್ರಶಬ್ದದೊಂದಿಗೆ ಸಮಾಸ ಪ್ರಶಸ್ತಿ ಎಂದಾಗುತ್ತೆ. ಇದರ ಮುಂದೆ '**ತುಮರ್ಥಾಚ್ಚ ಭಾವವಚನಾತ್**' (ಪಾ. ಸೂ. ೨-೩-೧೫) ಎಂಬುದರಿಂದ ಚತುರ್ಥೀವಿಭಕ್ತಿ ಬರುವುದು. '**ತುಮುನ್ ಣ್ವುಲೌ ಕ್ರಿಯಾಯಾಂ ಕ್ರಿಯಾರ್ಥಾಯಾಂ**' (ಪಾ. ಸೂ. ೩-೩-೧೦) ಕ್ರಿಯಾರ್ಥವಾದ ಕ್ರಿಯೆಯು ಉಪಪದವಾಗಿರುವಾಗ ಧಾತುವಿನ ಮುಂದೆ ಭವಿಷ್ಯತ್ಕಾಲದಲ್ಲಿ ತುಮುನ್ ಣ್ವುಲ್ ಎಂಬ ಪ್ರತ್ಯಯಗಳು ಬರುವುವು. ಉದಾಹರಣೆ–ಭೋಕ್ತುಂ ವ್ರಜತಿ, ಭೋಜಕೋ ವ್ರಜತಿ, ಈ ಎರಡು ಉದಾಹರಣೆಗಳಲ್ಲೂ ಭವಿಷ್ಯತ್ಕಾಲಿಕಭೋಜನಕ್ರಿಯಾರ್ಥವಾದ, ವ್ರಜತಿ-

ಕ್ರಿಯೆಯು ಉಪಪದವಾಗಿರುವುದು ಆದ್ದರಿಂದ ಪರ್ಯಾಯವಾಗಿ ಭುಜ್ ಧಾತುವಿನ ಮುಂದೆ ತುಮುನ್, ಣ್ವುಲ್‌ಗಳು ಬಂದಿವೆ, ತುಮರ್ಥಾತ್, ಎಂಬಲ್ಲಿ ತುಮುಃ **'ತುಮುಃ ಅರ್ಥ ಇವ ಅರ್ಥೋ ಯಸ್ಯ ಸಃ'** ಎಂದು ವಿಗ್ರಹವು ತುಮುನ್ ಪ್ರತ್ಯಯಕ್ಕೆ ಯಾವ ಅರ್ಥವಿದೆಯೋ ಆ ಅರ್ಥವನ್ನು ಪ್ರತಿಪಾದಿಸುವ, ಎಂದು ಶಬ್ದಾರ್ಥ, ಭಾವಃ ಕ್ರಿಯಾ, ಉಚ್ಯತೇ ಅನೇನ ಇತಿ ವಚನಃ, ಭಾವಸ್ಯ ವಚನಃ, ತಸ್ಮಾತ್ ಎಂದು ವಿಗ್ರಹವಾದರೆ ಕ್ರಿಯಾವಾಚಕವಾದ (ಕ್ರಿಯಾವಾಚಿನಃ) ಎಂದು ಅರ್ಥವಾಗುವುದು. **'ಪ್ರತ್ಯಯಾತ್'** ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು, ವಿವಕ್ಷಿತವಾಕ್ಯಾರ್ಥಪೂರಕಪದಾನುಸಂಧಾನಂ ಅಧ್ಯಾಹಾರಃ, ಇಲ್ಲಿ **'ಅವ್ಯಯಕೃತೋ ಭಾವೇ'** ಎಂಬ ಅನುಶಾಸನದಿಂದ ತುಮುನ್ ಪ್ರತ್ಯಯವು ಭಾವಾರ್ಥದಲ್ಲಿಯೇ ವಿಹಿತವಾಗಿರುವುದು, ಏವಂಚ **'ತುಮರ್ಥಾತ್'** ಎಂಬುದರಿಂದಲೇ ಭಾವಾರ್ಥಕತ್ವವು ಸಿದ್ಧವಾಗುವುದು. ಆದ್ದರಿಂದ ಪುನಃ ಭಾವವಚನಪದೋಪಾದಾನವು ಸೂತ್ರವಿಶೇಷಸಂಗ್ರಹಕ್ಕಾಗಿಯೇ ಇರುವುದು, ಏವಂಚ ಭಾವವಚನಾತ್ ಎಂಬುದಕ್ಕೆ **'ಭಾವವಚನಾಶ್ಚ'** (ಪಾ. ಸೂ. ೩–೩–೧೧) ಎಂಬ ಸೂತ್ರವಿಹಿತವಾದ ಎಂದು ಅರ್ಥವು ವಿವಕ್ಷಿತವು, **'ಭಾವವಚನಾಶ್ಚ'** ಎಂಬುದಕ್ಕೆ **'ಭಾವೇ'** (ಪಾ. ಸೂ. ೩–೩.೧೮) ಎಂಬುದನ್ನು ಅಧಿಕಾರಮಾಡಿಕೊಂಡು ಯಾವ ಘಞ್ ಮೊದಲಾದ ಪ್ರತ್ಯಯಗಳು ವಿಹಿತವಾಗಿವೆಯೋ ಅವು ಕ್ರಿಯಾರ್ಥಕ್ರಿಯೆಯು ಉಪಪದವಾಗಿರುವಾಗಲೂ ಭವಿಷ್ಯದರ್ಥದಲ್ಲಿ ಬರುವುದು ಎಂದರ್ಥ, ಇದಕ್ಕೆ **'ಯಾಗಾಯ ಯಾತಿ'** ಎಂದು ಉದಾಹರಣೆ. ಪ್ರತ್ಯಯಾತ್ ಎಂಬಲ್ಲಿ ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಲಾಭ. ತಥಾ ಚಾಯಂ ಸೂತ್ರಾರ್ಥಃ ತುಮುನ್ ಪ್ರತ್ಯಯಾರ್ಥಸಮಾನಾರ್ಥಕವೂ, **'ಭಾವವಚನಾಶ್ಚ'** ಎಂಬ ಸೂತ್ರವಿಹಿತವೂ ಆದ ಯಾವ ಪ್ರತ್ಯಯಗಳು ಇರುವುವೋ ತದಂತಪ್ರಾತಿಪದಿಕಗಳ ಮುಂದೆ ಚತುರ್ಥೀವಿಭಕ್ತಿಬರುವುದು, ಇತಿ, ತುಮರ್ಥಾತ್, ಎಂಬ ಪದವಿಲ್ಲದಿದ್ದರೆ, ಭಾವವಚನಾತ್ ಎಂಬುದಕ್ಕೆ ಭಾವಾರ್ಥಕಾತ್ ಎಂದರ್ಥವಾಗುವುದು. ಪಾಕಃ, ತ್ಯಾಗಃ ಇತ್ಯಾದಿ ಸ್ಥಳಗಳಲ್ಲಿ **'ಭಾವೇ'** ಎಂಬುದರಿಂದ ಘಞ್ ಬಂದಿರುವುದರಿಂದ ಭಾವಾರ್ಥಕತ್ವವಿರುವುದರಿಂದ, ಇಲ್ಲಿಯೂ ಚತುರ್ಥಿಯು ಬರಬೇಕಾಗುವುದು, ತುಮರ್ಥಾತ್–ಎಂದರೆ ಕ್ರಿಯಾರ್ಥಕ್ರಿಯೆಯು ಉಪಪದವಾಗಿರುವಾಗ ಎಂದು ಸಿದ್ಧವಾಗುವುದು, ಇಲ್ಲಿ ಕ್ರಿಯಾರ್ಥವಾದ ಮತ್ತೊಂದು ಕ್ರಿಯೆಯು ಇಲ್ಲದೇ ಇರುವುದರಿಂದ ಚತುರ್ಥಿಯು ಬರುವುದಿಲ್ಲ. ಭಾವವಚನಾಶ್ಚ ಎಂಬುದು ಇಲ್ಲದೇ ಇದ್ದರೆ, ಪಾಚಕೋ ವ್ರಜತಿ, ಎಂಬಲ್ಲಿ ಣ್ವುಲ್ ಪ್ರತ್ಯಯಾಂತವಾದ ಪಾಚಕಪದವು ತುಮುನ್ ಪ್ರತ್ಯಯಾರ್ಥಸಮಾನಾರ್ಥಕಪ್ರತ್ಯಯಾಂತವಾದ್ದರಿಂದ ಚತುರ್ಥಿಯು ಬರಬೇಕಾಗುವುದು, ಆದ್ದರಿಂದ ಭಾವವಚನಾತ್ ಎಂಬುದು ಆವಶ್ಯಕವು. ಅದು ಇದ್ದರೆ **'ಭಾವೇ'** ಎಂಬ ಅಧಿಕಾರದಲ್ಲಿ ಣ್ವುಲ್ ವಿಹಿತವಾಗಿಲ್ಲವಾದ್ದರಿಂದ ಪಾಕಃ ಎಂಬುದು ಭಾವವಚನಾಶ್ಚೇತಿ ಸೂತ್ರವಿಹಿತಪ್ರತ್ಯಯಚರಮಾವಯವಕವಾಗುವುದಿಲ್ಲವಾದ್ದರಿಂದ ಚತುರ್ಥಿಯು ಬರುವುದಿಲ್ಲ, ಏವಂಚ ತುಮರ್ಥಾತ್, ಭಾವವಚನಾತ್ ಎಂಬುದಕ್ಕೆ ನಿರುಕ್ತಾರ್ಥ ಲಾಭಕ್ಕಾಗಿರುವುದು ಎಂದು ಏರ್ಪಡುವುದು. ಪ್ರಕೃತದಲ್ಲಿ, **'ತೌ ಮಿತ್ರಸ್ಯ ಪ್ರಶಸ್ತಯೇ ಸಂಪದ್ಯೇತಾಂ'** ಎಂಬ ವ್ಯಾಖ್ಯಾನದಲ್ಲಿ ಸಂಪದ್ಯೇತಾಂ ಎಂಬುದು ಕ್ರಿಯಾರ್ಥವಾದ ಕ್ರಿಯೆಯು, ಹೇಗೆಂದರೆ ಪೂರ್ವೋಕ್ತ ಇಂದ್ರಾಗ್ನಿದೇವತೆಗಳು ಬಂದನಂತರವೇ ಪ್ರಶಸ್ತಿಯು ಅನುಷ್ಠಾತೃವಿಗೆ ಏರ್ಪಡುವುದು ಎಂದು ಸ್ಥಿತಿ, ಏವಂಚ ಸಂಪತ್ತಿಯು ಪ್ರಶಂಸಾರೂಪಕ್ರಿಯಾರ್ಥವಾಗುವುದು, ಆದ್ದರಿಂದ ಪ್ರಶಂಸಾರೂಪಕ್ರಿಯಾರ್ಥಸಂಪತ್ತಿರೂಪಕ್ರಿಯೆಯು ಉಪಪದವಾಗಿರುವಾಗ **'ಭಾವವಚನಾಶ್ಚ'** ಎಂಬುದರಿಂದ ಕ್ತಿನ್. ದ್ವಿತೀಯ ವ್ಯಾಖ್ಯಾನದಲ್ಲಿ ಇಚ್ಛಾರೂಪಕ್ರಿಯೆಯು ಉಪಪದವಾದ

ಪ್ರಶಂಸ್ ಎಂಬುದರ ಮುಂದೆ ಕ್ತಿ್, ಏವಂಚ ಪ್ರಶಸ್ತಿ ಎಂಬುದು ತುಮರ್ಥ ಪ್ರತ್ಯಯಾರ್ಥಸಮಾನಾರ್ಥಕವೂ, ಭಾವ ವಚನಾಶ್ಚೇತಿ ಸೂತ್ರವಿಹಿತವೂ ಆದ ಕ್ತಿನ್ ಪ್ರತ್ಯಯಾಂತವಾದುದರಿಂದ ಅದರ ಮುಂದೆ **'ತುಮರ್ಥಾತ್'** ಇತ್ಯಾದಿ ಸೂತ್ರದಿಂದ ಚತುರ್ಥೀವಿಭಕ್ತಿಯು ಬರುವುದು. **'ಗತಿಕಾರಕೋಪಪದಾತ್ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರಪ್ರಾಪ್ತವಾದರೆ ಅದನ್ನು ಬಾಧಿಸಿ **'ತಾದೌ ಚ ನಿತಿ ಕೃತ್ಯತೌ'** (ಪಾ. ಸೂ. ೬-೨-೫೦) ತುಶಬ್ದಭಿನ್ನವೂ, ತಕಾರಾದಿಯಾಗಿ ನಕಾರೇತ್ಸಂಜ್ಞಕವೂ ಆದ ಕೃತ್ಪ್ರತ್ಯಯಾಂತವು ಪರದಲ್ಲಿ ದ್ದರೆ ಅನಂತರವಾದ ಗತಿಯು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು, **'ಉಪಸರ್ಗಾಶ್ಚಾಭಿವರ್ಜಂ'** ಎಂಬುದರಿಂದ ಪ್ರವು ಆದ್ಯುದಾತ್ತ.

**ಸೋಮಪೀತಯೇ**—ಸೋಮಸ್ಯ ಪೀತಿರ್ಯಸ್ಮಿನ್ ಕರ್ಮಣಿ ತಸ್ಮೈ ಎಂದು ಬಹುವ್ರೀಹಿ, **'ಬಹುವ್ರೀಹೌಪ್ರಕೃತ್ಯಾ ಪೂರ್ವಪದಂ'** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು. ಸೋಮಸ್ಯ ಪೀತಿಃ, ಎಂದು ತತ್ಪುರುಷ ಸಮಾಸವನ್ನು ಮಾಡಿದರೂ **'ಕುರು ಗಾರ್ಹಪತ ರಿಕ್ತಗುರ್ವಸೂತಜರತ್ಯಶ್ಲೀಲ ದೃಢರೂಪಾ ಪಾರೇವಡವಾ ತೈತಿಲಕದ್ರೂಃ ಪಣ್ಯಕಮ್ಬಲೋ ದಾಸೀಭಾರಾಣಾಂ ಚ'** (ಪಾ. ಸೂ. ೬-೨-೪೨) ಈ ಏಳು ಸಮಾಸಗಳ ಮತ್ತು ದಾಸೀಭಾರಾದಿಗಣಪಠಿತವಾದ ಶಬ್ದಗಳ ಪೂರ್ವಪದವು ಪ್ರಕೃತಿಸ್ವರವನ್ನು ಹೊಂದು ವುದು ಎಂಬುದರಿಂದ ಪೂರ್ವಪದ ಪ್ರಕೃತಿಸ್ವರಬರುವುದು. ॥ ೩ ॥

॥ ಸಂಹಿತಾಪಾಠಃ ॥

ಉಗ್ರಾ ಸಂತಾ ಹವಾಮಹ ಉಪೇದಂ ಸವನಂ ಸುತಂ ।
ಇಂದ್ರಾಗ್ನೀ ಏಹ ಗಚ್ಛತಾಮ್ ॥ ೪ ॥

॥ ಪದಪಾಠಃ ॥

ಉಗ್ರಾ । ಸಂತಾ । ಹವಾಮಹೇ । ಉಪ । ಇದಂ । ಸವನಂ । ಸುತಂ ॥
ಇಂದ್ರಾಗ್ನೀ ಇತಿ । ಆ । ಇಹ । ಗಚ್ಛತಾಮ್ ॥ ೪ ॥

॥ ಸಾಯಣಭಾಷ್ಯಂ ॥

**ಸುತಮಭಿಷವೋಪೇತಮಿದಮನುಷ್ಠೀಯಮಾನಂ ಸವನಂ ಪ್ರಾತಃಸವನಾದಿರೂಪಂ ಕರ್ಮೋಪ ಸಾಮೀಪ್ಯೇನ ಪ್ರಾಪ್ತುಮುಗ್ರಾ ಸಂತಾ ವೈರಿವಧಾದಿಷು ಕ್ರೂರೌ ಸಂತೌ ದೇವೌ ಹವಾಮಹೇ । ಆಹ್ವಯಾಮಃ । ಇಂದ್ರಾಗ್ನೀ ದೇವಾವಿಹ ಕರ್ಮಣ್ಯಾ ಗಚ್ಛತಾಂ ॥ ಸಂತಾ । ಅಸ್ತೇಃ ಶತರಿ ಶ್ನಸೋರಲ್ಲೋಪಃ । ಸವನಂ ಸುತಮಿತಿ ದ್ವಯಂ ಸೇಮಂ ನಃ ಸ್ತೋಮಮಾ ಗಹಿ । ಋಗ್ವೇ-೧-೧೬-೫ । ಇತ್ಯತ್ರೋಕ್ತಂ ॥**

॥ ಪ್ರತಿಪದಾರ್ಥ ॥

**ಸುತಂ**—ಸಿದ್ಧವಾದ ಸೋಮರಸವುಳ್ಳ । **ಇದಂ ಸವನಂ**—ಈಗ ಮಾಡಲ್ಪಡುತ್ತಿರುವ ಪ್ರಾತಃಸವನಾದಿ ಕರ್ಮಗಳನ್ನು । **ಉಪ**—ಸಮೀಪಿಸಲು । **ಉಗ್ರಾ ಸಂತಾ**—(ವೈರಿಗಳಿಗೆ) ಕ್ರೂರರಾದ ದೇವತೆಗಳನ್ನು । **ಹವಾಮಹೇ**—ಆಹ್ವಾನಿಸುತ್ತೇವೆ । **ಇಂದ್ರಾಗ್ನೀ**—ಎಲೈ ಇಂದ್ರ ಮತ್ತು ಅಗ್ನಿಗಳೇ । **ಇಹ**—ಇಲ್ಲಿಗೆ । **ಆ ಗಚ್ಛತಂ**—ಬನ್ನಿ.

॥ ಭಾವಾರ್ಥ ॥

ಸೋಮರಸವನ್ನು ಸಿದ್ಧಪಡಿಸುತ್ತಿರುವ ಪ್ರಾತಃಸವನಾದಿಕರ್ಮಗಳು ನಡೆಯುವ ಸ್ಥಳಕ್ಕೆ ಶತ್ರುಗಳಿಗೆ ಭಯಂಕರವಾದ ಇಂದ್ರಾಗ್ನಿಗಳನ್ನು ಆಹ್ವಾನಿಸುತ್ತೇವೆ. ಎಲೈ ಇಂದ್ರಾಗ್ನಿಗಳೇ, ಇಲ್ಲಿಗೆ ಬನ್ನಿ.

English Translation.

We invoke the two (Gods) who are fierce (to their enemies) to come to this Sacrifice where the Soma is prepared; Indra and Agni, come hither.

॥ ವಿಶೇಷವಿಷಯಗಳು ॥

**ಉಗ್ರಾ—ವೈರಿವಧಾದಿಷು ಕ್ರೂರೌ ।** ಇಂದ್ರಾಗ್ನಿಗಳು ಸ್ತೋತ್ರಮಾಡುವವರ ವಿಷಯದಲ್ಲಿ ಉದಾರ ಭಾವದಿಂದ ವರ್ತಿಸುವವರಾದರೂ ಶತ್ರುಗಳ ವಿಷಯದಲ್ಲಿ ಕ್ರೂರರಾಗಿರುವವರೆಂದಭಿಪ್ರಾಯವು.

**ಉಪೇದಂ ಸವನಂ ಸುತಂ**—ಈಗ ನಾವು ಮಾಡುತ್ತಿರುವ ಯಜ್ಞದಲ್ಲಿ ಸಿದ್ಧಪಡಿಸಲ್ಪಟ್ಟಿರುವ ಸೋಮ ಪಾನಾರ್ಥವಾಗಿ ಸಮೀಪಕ್ಕೆ ಬನ್ನಿ.

॥ ವ್ಯಾಕರಣಪ್ರಕ್ರಿಯಾ ॥

**ಸನ್ತಾ**—'**ಅಸ ಭುವಿ**' ಧಾತು, ಲಟ್, '**ಲಟಶ್ಶತೃಶಾನಚೌ**–' (ಪಾ. ಸೂ ೩-೨-೧೨೪) ಎಂಬುದರಿಂದ ಶತೃ ಆದೇಶ. '**ಅದಿಪ್ರಭೃತಿಭ್ಯಶ್ಶಪಃ**' ಎಂಬುದರಿಂದ ಶಪ್ ವಿಕರಣಕ್ಕೆ ಲುಕ್, '**ಸಾರ್ವಧಾತುಕ-ಮಪಿತ್**' (ಪಾ. ಸೂ. ೧-೨-೪) ಎಂಬುದರಿಂದ, ಶತೃಪ್ರತ್ಯಯ. ಙಿತ್ '**ಶ್ನಸೋರಲ್ಲೋಪಃ**' (ಪಾ. ಸೂ. ೬-೪-೧೧೧) ಕಿತ್ ವಾ ಙಿತ್ ಆದ ಸಾರ್ವಧಾತುಕಪ್ರತ್ಯಯ ಪರದಲ್ಲಿರುವಾಗ '**ಶ್ನ**' ಪ್ರತ್ಯಯ, ಅಸ್ ಧಾತು ಇವುಗಳ ಅಕಾರಕ್ಕೆ ಲೋಪಬರುವುದು. ಎಂಬುದರಿಂದ ಧಾತ್ವಕಾರಕ್ಕೆ ಲೋಪ, ಸ್+ಅತ್=ಸತ್ ಇದರ ಮುಂದೆ ಔಟ್, ಶತೃ, ಉಗಿತ್, ಆದ್ದರಿಂದ '**ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ**' (ಪಾ. ಸೂ. ೭-೧-೭೦) ಉಕ್ ಇತ್ ಯೇಷಾಂತೇ ಉಗಿತಃ ಅಧಾತೋಃ ಎಂಬುದು ಉಗಿತಃ ಎಂಬಲ್ಲಿ ವಿಶೇಷಣವು ಅಚ್, ಎಂಬಲ್ಲಿ ಸಂಭವಿಸದ

ಕಾರಣ ವಿಶೇಷಣವಿಲ್ಲ ಲುಪ್ತನಕಾರಕವಾದ ಅಞ್ಚ್ (ಗತಿಪೂಜನಯೋಃ) ಧಾತುವಿಗೆ ಅಚ್ ಎಂಬುದರಿಂದ ಗ್ರಹಣವು ಉಗಿತಶ್ಚ ಅಚ್‌ಚ ಉಗಿದಚಃ ತೇಷಾಂ ಉಗಿದಚಾಂ ಎಂದು ವಿಗ್ರಹ **'ಇದಿತೋನುಮ್ ಧಾತೋಃ'** (ಪಾ. ಸೂ. ೭-೧-೫೮) ಎಂಬುದರಿಂದ ನುಮ್ ಅನುವೃತ್ತವಾಗುವುದು ಏವಂಚ ಸರ್ವನಾಮಸ್ಥಾನಪ್ರತ್ಯಯ ಪರದಲ್ಲಿರುವಾಗ ಧಾತುಭಿನ್ನವಾಗಿತ್ತು, ನಕಾರಲೋಪವನ್ನು ಹೊಂದಿರುವ ಅಞ್ಚ್‌ಧಾತು ಇವುಗಳಿಗೆ ನುಮ್ ಆಗಮಬರುವುದು ಎಂಬುದರಿಂದ ನುಮಾಗಮ ವಿಭಕ್ತಿಗೆ **'ಸುಪಾಂ ಸುಲುಕ್'** ಎಂಬುದರಿಂದ ಆಕಾರಾದೇಶ, ಅನುಸ್ವಾರಪರಸವರ್ಣಗಳು. ಸನ್ತಾ ಎಂದಾಗುವುದು.

**ಸವನಂ, ಸುತಂ**—ಎಂಬ ಎರಡು ಪದಗಳಿಗೂ **'ಸೋಮಂ ನಃ ಸ್ತೋಮಮಾಗಹ್ಯುಪೇದಂ ಸವನಂ ಸುತಮ್'** (ಋ ಸಂ. ೧-೧೬-೫) ಎಂಬಲ್ಲಿ ಪ್ರಕ್ರಿಯೆಯು ವಿವೃತವಾಗಿರುವುದು. ॥ ೪ ॥

॥ ಸಂಹಿತಾಪಾಠಃ ॥

ತಾ ಮಹಾಂತಾ ಸದಸ್ಪತೀ ಇನ್ದ್ರಾಗ್ನೀ ರಕ್ಷ ಉಬ್ಜತಂ ।
ಅಪ್ರಜಾಃ ಸನ್ತ್ವತ್ರಿಣಃ ॥ ೫ ॥

॥ ಪದಪಾಠಃ ॥

ತಾ । ಮಹಾನ್ತಾ । ಸದಸ್ಪತೀ ಇತಿ । ಇಂದ್ರಾಗ್ನೀ ಇತಿ । ರಕ್ಷಃ । ಉಬ್ಜತಂ ॥
ಅಪ್ರಜಾಃ । ಸನ್ತು । ಅತ್ರಿಣಃ ॥ ೫ ॥

॥ ಸಾಯಣಭಾಷ್ಯಂ ॥

**ತೌ ಪೂರ್ವೋಕ್ತಾವಿಂದ್ರಾಗ್ನೀ ರಕ್ಷೋ ರಾಕ್ಷಸಜಾತಿಮುಬ್ಜತಂ । ಋಜುಕುರುತಂ । ಕ್ರೌರ್ಯಂ ಪರಿತ್ಯಾಜಯತಮಿತ್ಯರ್ಥಃ। ಕೀದೃಶೌ । ಮಹಾಂತಾ ಮಹಾಂತೌ ಗುಣೈರಧಿಕೌ ಸದಸ್ಪತೀ ಸಭಾಪಾಲಕೌ। ತಯೋಃ ಪ್ರಸಾದಾದತ್ರಿಣೋ ಭಕ್ಷಕಾ ರಾಕ್ಷಸಾ ಅಪ್ರಜಾ ಅನುತ್ಪನ್ನಾಃ ಸಂತು ॥ ಮಹಾಂತಾ । ಸಾಂತಮಹತಃ ಸಂಯೋಗಸ್ಯ । ಪಾ. ೬-೪-೧೦ । ಇತಿ ದೀರ್ಘಃ । ಸದಸ್ಪತೀ । ಸದಸಸ್ಪತೀ ಇತಿ ಸಮಾಸೇ ಷಷ್ಠ್ಯಾ ಲುಕಿ ಪ್ರಾತಿಪದಿಕಸಕಾರಸ್ಯ ರುತ್ವಾಭಾವಶ್ಛಾಂದಸಃ । ಉಭೇ ವನಸ್ಪತ್ಯಾದಿಷು ಯುಗಪದಿತ್ಯು-ಭಯಪದಪ್ರಕೃತಿಸ್ವರತ್ವಂ । ಇಂದ್ರಾಗ್ನೀ । ಆಮಂತ್ರಿತಾದ್ಯುದಾತ್ತತ್ವಂ । ಅಪ್ರಜಾಃ । ಪ್ರಜಾಯಂತ ಇತಿ ಪ್ರಜಾಃ । ಅನ್ಯೇಷ್ವಪಿ ದೃಶ್ಯತೇ । ಪಾ. ೩-೨-೧೦೧ । ಇತಿ ಜನೇರ್ಡಪ್ರತ್ಯಯಃ । ನ ಪ್ರಜಾಃ ಅಪ್ರಜಾಃ । ಪ್ರಜಾಶಬ್ದಸ್ಯ ಬಹುವ್ರೀಹೌ ಹಿ ನಿತ್ಯಮಸಿಚ್ ಪ್ರಜಾಮೇಧಯೋಃ । ಪಾ. ೫-೪-೧೨೨ । ಇತ್ಯಸಿಜಾದೇಶಃ ಸ್ಯಾತ್ । ಅವ್ಯಯಪೂರ್ವಪದಪ್ರಕೃತಿಸ್ವರಃ । ಅತ್ರಿಣಃ । ತೃಜಂತಸ್ಯಾತ್ತೃಶಬ್ದಸ್ಯ ಜಸಶ್ಛಾಂದಸ ಇನುಡಾಗಮಃ । ಚಿತ ಇತಿ ಋಕಾರ ಉದಾತ್ತಃ । ತಸ್ಯ ಯಣಾದೇಶ ಉದಾತ್ತಯಣೋ ಹಲ್ಪೂರ್ವಾದಿತೀಕಾರ ಉದಾತ್ತಃ ॥**

॥ ಪ್ರತಿಪದಾರ್ಥ ॥

**ತಾ**—ಹಿಂದೆ ಹೇಳಿದ । **ಮಹಾಂತಾ**—ಮಹಾತ್ಮರಾದ । **ಸದಸ್ಪತೀ**—ಸಭೆಯನ್ನು ಪಾಲಿಸುವ । **ಇಂದ್ರಾಗ್ನೀ**—ಇಂದ್ರಾಗ್ನಿಗಳು । **ರಕ್ಷಃ**—ರಾಕ್ಷಸ ಜಾತಿಯನ್ನು ! **ಉಬ್ಜತಂ**—ತಮ್ಮ ಕ್ರೌರ್ಯ ಬಿಡುವಂತೆ ಮಾಡಲಿ । **ಅತ್ರಿಣಃ**—(ನರ) ಭಕ್ಷಕರಾದ ಆ ರಾಕ್ಷಸರು । **ಅಪ್ರಜಾಃ**—ಪ್ರಜಾರಹಿತರಾಗಿ (ನಿರ್ವಂಶರಾಗಿ) । **ಸಂತು**—ಆಗಲಿ.

॥ ಭಾವಾರ್ಥ ॥

ಮಹಾತ್ಮರೂ, ಸಭಾರಕ್ಷಕರೂ, ಆದ ಇಂದ್ರಾಗ್ನಿಗಳು ರಾಕ್ಷಸರು ತಮ್ಮ ಕ್ರೌರ್ಯವನ್ನು ಬಿಟ್ಟು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಲಿ. ಮತ್ತು ಇಂದ್ರಾಗ್ನಿಗಳ ಪ್ರಸಾದದಿಂದ ನರಭಕ್ಷಕರಾದ ರಾಕ್ಷಸರು ನಿರ್ವಂಶರಾಗಲಿ.

## English Translation.

Indra and Agni, great protectors of Sacrificial house, supress the Rakshas (demons). and may the devourers of men (demons) be destitute of progeny.

॥ ವಿಶೇಷವಿಷಯಗಳು ॥

**ಮಹಾಂತಾ**—ಮಹಾಮಹಿಮೆಯುಳ್ಳ, ದೊಡ್ಡವರಾದ, great, mighty &c.

**ಸದಸ್ಪತೀ—ಸದಃ ಪ್ರಸಿದ್ಧಂ ಯಜ್ಞಗೃಹಂ ತಸ್ಯಸ್ವಾಮಿನೌ ಇಂದ್ರಾಗ್ನೀ । ಸಭಾಪಾಲಕೌ ವಾ ॥** ಈ ಶಬ್ದಕ್ಕೆ ಭಾಷ್ಯಕಾರರು ಅರ್ಥವಿವರಣೆಮಾಡುವಾಗ ಸದ=ಎಂದರೆ ಸದಸ್ಸು, ಸಭೆ ಎಂದು ವಿವರಿಸಿ ಸದಸ್ಪತೀ ಎಂದರೆ ಸಭಾಪಾಲಕೌ—ಸಭೆಯನ್ನು ಸಂರಕ್ಷಿಸತಕ್ಕವರು ಎಂದು ಹೇಳಿರುವರು. ಸ್ಕಂದಸ್ವಾಮಿಯು ಸದಃ ಎಂದರೆ ಯಜ್ಞಗೃಹವೆಂದು ಹೇಳಿ ಸದಸ್ಪತೀ ಎಂದರೆ ಈಗ ನಾವು ಮಾಡುತ್ತಿರುವ ಯಜ್ಞಗೃಹವನ್ನು ರಾಕ್ಷಸಾದಿಗಳಿಂದ ಸಂರಕ್ಷಿಸಬೇಕೆಂಬ ಅರ್ಥವನ್ನು ಹೇಳಿರುವು. ಸ್ಕಂದಸ್ವಾಮಿಯ ಅರ್ಥ ವಿವರಣೆಯೇ ಪ್ರಶಸ್ತವಾಗಿರುವುದು.

**ರಕ್ಷಃ**—ರಾಕ್ಷಸರು, ಕ್ರೂರಸ್ವಭಾವದವರು, evil spirits ಇತ್ಯಾದಿ. ರಕ್ಷಾಂಸಿ—ಕ್ರೂರಕರ್ಮಿಣಃ ಎಂದು ಯಾಸ್ಕರು ಅರ್ಥವಿವರಣೆಮಾಡಿರುವರು. (ನಿ. ೧೦-೧೨)

**ಉಬ್ಜತಂ-ಕ್ರೌರ್ಯಂ ಪರಿತ್ಯಾಜಯತಂ ।** ತಮ್ಮ ಕ್ರೂರಸ್ವಭಾವವನ್ನು ಬಿಡುವಂತೆ ಮಾಡಿ. ಸ್ಕಂದಸ್ವಾಮಿಯು ಈ ಶಬ್ದಕ್ಕೆ-ಉಬ್ಜತಿರತ್ರ ಸಾಮರ್ಥ್ಯಾತ್ ವದಾರ್ಥಃ ನ್ಯಗ್ಭಾವಾರ್ಥೋ ವಾ ರಕ್ಷಾಂಸಿ ಹತಂ, ನ್ಯಗ್ಭೂತಾನಿ ವಾಸ್ಮಾಕಂ ಕುರುತಂ-ನಿಮ್ಮ ಸಾಮರ್ಥ್ಯದಿಂದ ರಾಕ್ಷಸರನ್ನು ಸಂಹರಿಸಿ ಅಥವಾ ತಿರಸ್ಕರಿಸಿ ಎಂದರೆ ಓಡಿಹೋಗುವಂತೆ ಮಾಡಿ ಎಂದಭಿಪ್ರಾಯ ಬರುವಂತೆ ಅರ್ಥವಿವರಣೆ ಮಾಡಿರುವರು.

**ಅಪ್ರಜಾಃ—ಪ್ರಜಾಯಂತೆ ಇತಿ ಪ್ರಜಾಃ ನ ಪ್ರಜಾಃ ಅಪ್ರಜಾಃ ।** ಪ್ರಜಾರಹಿತರು ಎಂದರೆ ಪುತ್ರಪೌತ್ರರು ಮೊದಲಾದ ಸಂತತಿರಹಿತರು.

**ಅತ್ರಿಣಃ—ಅದ ಭಕ್ಷಣೇ । ಭಕ್ಷಯಿತಾರಃ ಹಿಂಸಿತಾರೋಽಸ್ಮಾಕಂ ।** ಭಕ್ಷಿಸುವವರು ಎಂದರೆ ನಮ್ಮನ್ನು ಹಿಂಸೆಮಾಡುವವರು.

॥ ವ್ಯಾಕರಣಪ್ರಕ್ರಿಯಾ ॥

**ಮಹಾನ್ತಾ—**ಮಹತ್ ಶಬ್ದದ ಮುಂದೆ ಔ ಪ್ರತ್ಯಯ, '**ವರ್ತಮಾನೇ ಪೃಷದ್ಬೃಹನ್ಮಹಜ್ಜಗಚ್ಛತೃವಚ್ಚ**' (ಉ. ಸೂ. ೨-೨-೪೨) ಎಂಬುದರಿಂದ ಶತೃವದ್ಭಾವ ಬರುವುದರಿಂದ '**ಉಗಿದಚಾಂ-**' (ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ—ಮಹನ್+ತ್+ಔ, ಔಗೆ '**ಸುಪಾಂಸುಲುಕ್-**' ಎಂಬುದರಿಂದ ಆಕಾರಾದೇಶ, '**ಸಾನ್ತಮಹತಸ್ಸಂಯೋಗಸ್ಯ**' (ಪಾ. ಸೂ. ೬-೪-೧೦) ಸಂಬುದ್ಧಿಭಿನ್ನವಾದ ಸರ್ವನಾಮಸ್ಥಾನಪ್ರತ್ಯಯ ಪರದಲ್ಲಿರುವಾಗ ಸಕಾರಾಂತವಾದ ಸಂಯೋಗ, ಮಹಚ್ಛಬ್ದ ಇವುಗಳ ಸಂಬಂಧಿಯಾದ ಯಾವ ನಕಾರವಿದೆಯೋ ಅದರ ಉಪಧಾಭೂತವಾದ ವರ್ಣಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಬರುವುದು 'ಮಹಾನ್ತಾ' ಎಂದಾಗುವುದು.

**ಸದಸ್ಪತೀ—**ಸದಸಃ ಪತೀ ಎಂದು ಷಷ್ಠೀತತ್ಪುರುಷಸಮಾಸ, '**ಕೃತ್ತದ್ಧಿತಸಮಾಸಾಶ್ಚ**' (ಪಾ. ಸೂ. ೧-೨-೪೬) ಎಂಬುದರಿಂದ ಪ್ರಾತಿಪದಿಕಸಂಜ್ಞೆ ಇದೆ. ಪ್ರಾತಿಪದಿಕಾವಯವವಾದ ಷಷ್ಠೀ ಮತ್ತು ಔ ವಿಭಕ್ತಿಗಳಿಗೆ '**ಸುಪೋಧಾತುಪ್ರಾತಿಪದಿಕಯೋಃ**' (ಪಾ. ಸೂ. ೨-೪-೭) ಎಂಬುದರಿಂದ ಲುಕ್ (ಲೋಪ) ಲುಪ್ತ ಪ್ರತ್ಯಯವನ್ನು ನಿಮಿತ್ತಮಾಡಿಕೊಂಡು ಸದಸ್ ಎಂಬುದಕ್ಕೆ '**ಸುಪ್ತಿಙಂತಂ ಪದಂ**' (ಪಾ. ಸೂ. ೧-೪-೧೪) ಸುಬಂತ ಮತ್ತು ತಿಙಂತಗಳು ಪದಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಪದಸಂಜ್ಞೆ ಇದೆ. ಆದ್ದರಿಂದ '**ಸಸಜುಷೋರುಃ**' (ಪಾ. ಸೂ. ೮-೨-೬೬) ಎಂಬುದರಿಂದ ಯದ್ಯಪಿ ಸ್ ಗೆ ರು ಆದೇಶ ಪ್ರಾಪ್ತವಾಗುವುದು. ಆದರೂ ಛಾಂದಸವಾಗಿ ಅದು ಇಲ್ಲಿ ಬರುವುದಿಲ್ಲ. ಸದಃ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ, ಪತಿಶಬ್ದವು '**ಪಾತೇರ್ಡತಿಃ**' (ಉ. ಸೂ. ೪-೪-೯೭) ಎಂದು ವಿಹಿತವಾದ ಡತಿ ಪ್ರತ್ಯಯಾಂತ. ಪ್ರತ್ಯಯಸ್ವರದಿಂದ ಆದ್ಯುದಾತ್ತ. ಇವೆರಡಕ್ಕೂ ಸಮಾಸಾನಂತರ '**ಉಭೇವನಸ್ಪತ್ಯಾದಿಷು ಯುಗಪತ್**' (ಪಾ. ಸೂ. ೬-೨-೧೪೦) ವನಸ್ಪತ್ಯಾದಿಗಣಪಠಿತವಾದ ಶಬ್ದಗಳಲ್ಲಿ ಪೂರ್ವಪದ, ಉತ್ತರಪದ ಇವೆರಡೂ ಒಟ್ಟಿಗೆ ಪ್ರಕೃತಿಸ್ವರವನ್ನು ಹೊಂದುವುವು ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುವುದು. ವನಸ್ಪತ್ಯಾದಿ ಗಣದಲ್ಲಿ ೧ ವನಸ್ಪತಿಃ, ೨ ಬೃಹಸ್ಪತಿಃ, ೩ ಶಚೀಪತಿಃ, ೪ ತನೂನಪಾತ್, ೫ ನರಾಶಂಸಃ, ೬ ಶುನಃಶೇಫಃ, ೭ ಶಣ್ಡಾಮರ್ಕೌ, ೮ ತೃಷ್ಣಾವರೂಥೀ, ೯ ಲಮ್ಬಾವಿಶ್ವವಯಸೌ, ೧೦ ಮೃತ್ಯುರ್ಮೃತ್ಯುಃ, ಎಂಬ ಹತ್ತು ಶಬ್ದಗಳು ಮಾತ್ರ ಪಠಿತವಾಗಿವೆ. ಇದು ಆಕೃತಿಗಣವೂ ಅಲ್ಲ, ಆದ್ದರಿಂದ ವನಸ್ಪತ್ಯಾದಿತ್ವೇನ ಇಲ್ಲಿ ಉಭಯಪದ ಪ್ರಕೃತಿಸ್ವರವು ಹೇಗೆ ಬರುವುದೆಂದು ಚಿಂತಿಸಬೇಕು.

**ಇನ್ದ್ರಾಗ್ನೀ—'ಆಮನ್ತ್ರಿತಸ್ಯ ಚ'** (ಪಾ. ಸೂ. ೬-೧-೧೯೮) ಎಂಬ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತ ಬರುವುದು. ತೌ=ಪೂರ್ವೋಕ್ತೌ, ಹೇ ಇನ್ದ್ರಾಗ್ನೀ ಯುವಾಂ ರಕ್ಷಃ ಉಬ್ಜತಮ್ ಎಂದು ಅನ್ವಯವು.

**ಅಪ್ರಜಾಃ—**ಪ್ರಜಾಯನ್ತೇ ಇತಿ ಪ್ರಜಾಃ '**ಅನ್ಯೇಷ್ವಪಿ ದೃಶ್ಯತೇ**' (ಪಾ. ಸೂ. ೩-೨-೧೦೧) '**ಸಪ್ತಮ್ಯಾಂ ಜನೇರ್ಡಃ**' (ಪಾ. ಸೂ. ೩-೨-೯೭) ಇತ್ಯಾದಿ ಸೂತ್ರಗಳಿಂದ ಸಪ್ತಮ್ಯಂತ, ಪಂಚಮ್ಯಂತ, ಉಪಸರ್ಗ,

ದ್ವಿತೀಯಾಂತಗಳು ಉಪಪದವಾಗಿರುವಾಗ ಜನ್‌ಧಾತುವಿನ ಮುಂದೆ ಡಪ್ರತ್ಯಯವು ವಿಹಿತವಾಗಿದೆ. ಈ ಸೂತ್ರದಿಂದ ಪೂರ್ವೋಪಾತ್ತ ಉಪಪದಗಳಿಗಿಂತಲೂ ಬೇರೆಯಾದ ಉಪಪದವಿದ್ದರೂ ಜನಧಾತುವಿನ ಮುಂಗೆ ಡಪ್ರತ್ಯಯ ಬರುವುದು ಎಂದು ಬೋಧಿತವಾಗುವುದು. ಇದರಿಂದ ಇಲ್ಲಿ ಡಪ್ರತ್ಯಯ ಬರುವುದು. ಯದ್ಯಪಿ ಇಲ್ಲಿ **'ಉಪಸರ್ಗೇ ಚ ಸಂಜ್ಞಾಯಾಮ್'** (ಪಾ. ಸೂ. ೩-೨-೯೯) ಸಮುದಾಯದಿಂದ ಸಂಜ್ಞೆತೋರುವಾಗ ಉಪಸರ್ಗವು ಉಪಪದವಾಗಿದ್ದರೆ ಜನ್‌ಧಾತುವಿನ ಮುಂದೆ ಡಪ್ರತ್ಯಯ ಬರುವುದು ಎಂಬುದರಿಂದ ಡಪ್ರತ್ಯಯವನ್ನು ಉಪಪಾದಿಸಬಹುದು. ಆದರೂ ಇಲ್ಲಿ ಅಪ್ರಜಾಃ ಎಂಬುದಕ್ಕೆ ಅನುತ್ಪನ್ನಾಃ, ಎಂದು ಅರ್ಥವನ್ನು ವರ್ಣಿಸಿರುವುದರಿಂದ ಸಂಜ್ಞೆಯನ್ನು ವಿವಕ್ಷಿಸಿಲ್ಲ. ಆದ್ದರಿಂದ **'ಅನ್ಯೇಷ್ವಪಿ ದೃಶ್ಯತೇ'** ಎಂಬುದರಿಂದ ಡಪ್ರತ್ಯಯವು ಉಪಪಾದಿತವಾಗಿದೆ. **'ನ ಪ್ರಜಾಃ'** ಅಪ್ರಜಾಃ ಎಂದು ನಞ್ ತತ್ಪುರುಷ, **'ನಲೋಪೋ ನಞಃ'** (ಪಾ. ಸೂ. ೬-೩-೭೩) ಎಂಬುದರಿಂದ ನಞ್ ನಕಾರಕ್ಕೆ ಲೋಪ. **'ಅವಿದ್ಯಮಾನಾಃ ಪ್ರಜಾಃ ಯೇಷಾಂ ತೇ'** ಎಂದು ಬಹುವ್ರೀಹಿಸಮಾಸವನ್ನು ಮಾಡಿದರೆ **'ನಿತ್ಯಮಸಿಚ್ ಪ್ರಜಾಮೇಧಯೋಃ'** (ಪಾ. ಸೂ. ೫-೪-೧೨೨) ಇಲ್ಲಿ **'ನಞ್‌ದುಃಸುಭ್ಯೋ-ಹಲಿಸಕ್ಥ್ಯೋರನ್ಯತರಸ್ಯಾಂ'** (ಪಾ. ಸೂ. ೫-೪-೧೨೧) ಎಂಬುದರಿಂದ ನಞ್‌ದುಃಸುಭ್ಯಃ, ಎಂದು ಅನುವೃತ್ತವಾಗುವುದು, **'ಬಹುವ್ರೀಹೌಸಕ್ಥ್ಯಕ್ಷ್ಣೋಃ ಸ್ವಾಂಗಾತ್‌ಷಚ್'** (ಪಾ. ಸೂ. ೫-೪-೧೧೩) ಎಂಬುದರಿಂದ ಬಹುವ್ರೀಹೌ ಎಂಬುದನ್ನು ಅನುವೃತ್ತಿಮಾಡಿಕೊಂಡು ಪಂಚಮ್ಯಂತವಾಗಿ ಅದನ್ನು ಬದಲಾಯಿಸಿಕೊಳ್ಳುವುದು. ಏವಂಚ ನಞ್ ದುಸ್‌ಸು ಇವುಗಳ ಮುಂದಿರುವ ಯಾವ ಪ್ರಜಾ, ಮೇಧಾ ಎಂಬ ಶಬ್ದಗಳಿವೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಬಹುವ್ರೀಹಿ ಸಮಾಸದ ಮುಂದೆ ಅಸಿಚ್‌ಪ್ರತ್ಯಯ ಬರುವುದು ಅದು ಸಮಾಸಾಂತವಾಗುವುದು ಎಂದು ಸೂತ್ರಾರ್ಥವು ಏರ್ಪಡುವುದು. ಇದರಿಂದ ಅಚ್‌ಪ್ರತ್ಯಯ ಬರಬೇಕಾಗುವುದು, ಬಂದರೆ ಅಪ್ರಜಾಸ್ ಎಂದಾಗುವುದು ಇದರ ಮುಂದೆ ಪ್ರಥಮಾಬಹುವಚನ ಜಸ್‌ಪ್ರತ್ಯಯ ಬಂದರೆ **'ಯಸ್ಯೇತಿ ಚ'** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಕ್ಕೆ ಲೋಪಬಂದು ಅಪ್ರಜಸಃ ಎಂದಿರಬೇಕಾಗುವುದು. ಇಲ್ಲಿ ಅಪ್ರಜಾಃ ಎಂಬುದು ಬಹುವಚನಾಂತ, ಬಹುವ್ರೀಹೌ-ಪ್ರಥಮಾಬಹುವಚನದಲ್ಲಿ ಸಿದ್ಧಿಸದೇ ಹೋಗುವುದರಿಂದ ಇಲ್ಲಿ ತತ್ಪುರುಷಸಮಾಸವನ್ನೇ ಅಂಗೀಕರಿಸಬೇಕು. **'ತತ್ಪುರುಷೇತುಲ್ಯಾರ್ಥ'** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುವುದು.

**ಅತ್ರಿಣಃ**—**'ಅದ ಭಕ್ಷಣೇ'** ಧಾತು, **'ಣ್ವುಲ್‌ತೃಚ್–'** ಎಂಬುದರಿಂದ ತೃಚ್, ಅತ್ತೃ-ಎಂಬುದರ ಮುಂದೆ ಜಸ್, ಇದಕ್ಕೆ ಛಾಂದಸವಾಗಿ ಇನುಟ್ ಆಗಮಬರುವುದು, ಅತ್ತೃ+ಇನಸ್, ತೃಚ್‌ಪ್ರತ್ಯಯಸಂಬಂಧಿಯಾದ ಋಕಾರವು **'ಚಿತಃ'** (ಪಾ. ಸೂ. ೬-೧-೧೬೩) ಎಂಬುದರಿಂದ ಉದಾತ್ತ, ಈ ಋಕಾರದ ಸ್ಥಾನದಲ್ಲಿ **'ಇಕೋ ಯಣಚಿ'** ಎಂಬುದರಿಂದ ಯಣಾದೇಶದಿಂದ ರೇಫಬರುವುದು ಈಗ **'ಉದಾತ್ತಯಣೋ ಹಲ್ಪೂ-ರ್ವಾತ್'** (ಪಾ. ಸೂ. ೬-೧-೧೭೪) ವ್ಯಂಜನಪೂರ್ವಕವೂ ಉದಾತ್ತದಸ್ಥಾನದಲ್ಲಿ ಬಂದುದೂ ಆದ ಯಣ್ಣಿನ ಮುಂದೆ ಇರುವ ನದೀಸಂಜ್ಞಕವೂ, ಅಜಾದಿಯಾದ ಶಸಾದಿವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ ಇಕಾರವು ಉದಾತ್ತವಾಗುವುದು. ಆದ್ದರಿಂದಲೇ ಇಲ್ಲಿ **'ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ'** (ಪಾ ಸೂ. ೮-೨-೪) ಎಂಬುದು ಉತ್ಸರ್ಗಶಾಸ್ತ್ರದಿಂದ ಇಲ್ಲಿ ಸ್ವರಿತವು ಬರುವುದಿಲ್ಲ, ಅಪವಾದವಾದ, **'ಉದಾತ್ತಯಣ–'** ಎಂಬುದರಿಂದ ಉದಾತ್ತವೇ ಬರುವುದು. ॥ ೫ ॥

॥ ಸಂಹಿತಾಪಾಠಃ ॥

ತೇನ ಸತ್ಯೇನ ಜಾಗೃತಮಧಿ ಪ್ರಚೇತುನೇ ಪದೇ ।
ಇನ್ದ್ರಾಗ್ನೀ ಶರ್ಮ ಯಚ್ಛತಮ್ ॥ ೬ ॥

॥ ಪದಪಾಠಃ ॥

ತೇನ । ಸತ್ಯೇನ । ಜಾಗೃತಂ । ಅಧಿ । ಪ್ರಽಚೇತುನೇ । ಪದೇ ॥
ಇನ್ದ್ರಾಗ್ನೀ ಇತಿ । ಶರ್ಮ । ಯಚ್ಛತಮ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಸತ್ಯೇನಾವಶ್ಯಫಲಪ್ರದಾನಾದವಿತಥೇನ ತೇನಾಸ್ಮಾಭಿರನುಷ್ಠಿತೇನ ಕರ್ಮಣಾ ಪ್ರಚೇತುನೇ ಪ್ರಕರ್ಷೇಣ ಫಲಭೋಗಜ್ಞಾಪಕೇ ಪದೇ ಸ್ವರ್ಗಲೋಕಾದಿಸ್ಥಾನೇಽಧಿ ಜಾಗೃತಂ । ಆಧಿಕ್ಯೇನ ಸಾವಧಾನೌ ಭವತಂ । ತತೋಽಸ್ಮಭ್ಯಂ ಶರ್ಮ ಯಚ್ಛತಂ । ಸುಖಂ ಗೃಹಂ ವಾ । ದತ್ತಂ । ಗಯಃ ಕೃದರ ಇತ್ಯಾದಿಷು ದ್ವಾವಿಂಶತಿಸಂಖ್ಯಾಕೇಷು ಗೃಹನಾಮಸು ಶರ್ಮ ವರ್ಮೇತ್ಯುಕ್ತಂ ॥ ಜಾಗೃತಂ । ಜಾಗೃ ನಿದ್ರಾಕ್ಷಯೇ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ತಿಙ್ಙತಿಙ ಇತಿ ನಿಘಾತಃ। ಪ್ರಚೇತುನೇ । ಚಿತೀ ಸಂಜ್ಞಾನ ಇತ್ಯಸ್ಮಾಣ್ಯಂತಾದ್ಬಾಹುಲಕಾದೌಣಾದಿಕ ಉನಪ್ರತ್ಯಯಃ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಇಂದ್ರಾಗ್ನೀ । ಇಹೇಂದ್ರಾಗ್ನೀ ಇತ್ಯತ್ರೋಕ್ತಂ । ಆಮಂತ್ರಿತತ್ವಾದಾದ್ಯುದಾತ್ತತ್ವಮತ್ರ ವಿಶೇಷಃ । ಶೃಣಾತಿ ಹಿನಸ್ತಿ ದುಃಖಮಿತಿ ಶರ್ಮ । ಶೄ ಹಿಂಸಾಯಾಂ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಯಚ್ಛತಂ । ಇಷುಗಮಿಯಮಾಂ ಛ ಇತಿ ಛಃ ॥ ೩ ॥

॥ ಪ್ರತಿಪದಾರ್ಥ ॥

**ಹೇ ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಸತ್ಯೇನ**—ನಿಷ್ಫಲವಲ್ಲದ । **ತೇನ**—ನಾವು ಮಾಡುವ ಕರ್ಮದಿಂದ । **ಪ್ರಚೇತುನೇ**—(ಯಜ್ಞಫಲರೂಪವಾದ ಭೋಗವನ್ನು) ಜ್ಞಾಪಿಸುವ । **ಪದೇ**—ಸ್ವರ್ಗಾದಿ ಸ್ಥಾನದಲ್ಲಿ । **ಅಧಿ ಜಾಗೃತಂ**—ವಿಶೇಷ ಜಾಗರೂಕರಾಗಿರಿ । **ಶರ್ಮ**—ಸುಖವನ್ನು ಅಥವಾ ಸುಖಕರವಾದ ಸ್ಥಾನವನ್ನು । **ಯಚ್ಛತಂ**—(ನಮಗೆ) ಕೊಡಿ.

॥ ಭಾವಾರ್ಥ ॥

ಇಂದ್ರಾಗ್ನಿಗಳೇ, ನಾವು ಮಾಡುವ ಕರ್ಮಗಳು ಫಲಕೊಡುವುದರಲ್ಲಿ ಸಂದೇಹವಿಲ್ಲ. ನಿಮ್ಮ ವಾಸಸ್ಥಾನಗಳಾದ ಸ್ವರ್ಗಾದಿಗಳು ಇದಕ್ಕೆ ಜ್ಞಾಪಕವಾಗಿದೆ. ನೀವು ಆ ಸ್ಥಾನಗಳಲ್ಲಿ ನಮ್ಮ ವಿಷಯದಲ್ಲಿ ಜಾಗರೂಕರಾಗಿದ್ದು, ನಮಗೆ ಸುಖವನ್ನುಂಟುಮಾಡಿ.

## English Translation.

O Indra and Agni, by this unfailing Sacrifice be vigilant in the place which affords knowledge and bestow upon us happiness.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. **ತೇನ ಸತ್ಯೇನ ಜಾಗ್ರತ** ಮತ್ತು **ಪ್ರಚೇತುನೇ ಪದೇ** ಎಂಬ ಶಬ್ದಗಳ ಅರ್ಥವು ಸ್ಪಷ್ಟವಾಗಿಲ್ಲ. ಭಾಷ್ಯಕಾರರು ಇವುಗಳಿಗೆ ಒಂದು ವಿಧವಾಗಿ ಅಭಿಪ್ರಾಯ ಬರುವಂತೆ ಅರ್ಥ ವಿವರಣೆ ಮಾಡಿದ್ದರೂ ಋಷಿಯ ಆಶಯವೇನೆಂಬುದು ಸ್ಪಷ್ಟವಾಗಿಲ್ಲ. ನಾವು ಮಾಡುವ ಸ್ತೋತ್ರಗಳಿಂದಲೂ ಯಜ್ಞಾನುಷ್ಠಾನಾದಿಗಳಿಂದಲೂ ಸಂತೃಪ್ತರಾಗಿ ನಮ್ಮ ವಿಷಯದಲ್ಲಿ ಜಾಗರೂಕರಾಗಿ ಇದ್ದುಕೊಂಡು ನಮಗೆ ಸುಖವನ್ನುಂಟುಮಾಡಿ ಎಂದು ಮುಖ್ಯಾಭಿಪ್ರಾಯವಿರಬಹುದು.

**ಪ್ರಚೇತುನೇ ಪದೇ—ಪ್ರಜ್ಞಾಪಕೇ ಸ್ಥಲೇ । ಫಲಭೋಗಜ್ಞಾಪಕೇ ಪದೇ ।** ಜ್ಞಾಪಕವನ್ನುಂಟು ಮಾಡುವ ಸ್ಥಳ.

**ಶರ್ಮ—ಸುಖಂ ಗೃಹಂ ವಾ ।** ಸುಖವನ್ನು ಅಥವಾ ಗೃಹವನ್ನು. ಗಯ, ಕೃದರ ಮೊದಲಾದ ಇಪ್ಪತ್ತೆರಡು ಗೃಹನಾಮಗಳ ಮಧ್ಯದಲ್ಲಿ ಶರ್ಮಶಬ್ದವು ಪಠಿತವಾಗಿರುವುದರಿಂದ ಶರ್ಮಶಬ್ದಕ್ಕೆ ಗೃಹ, ವಾಸಸ್ಥಾನವೆಂದೂ ಅರ್ಥವಾಗುವುದು. (ನಿ. ೩-೧೩)

॥ ವ್ಯಾಕರಣಪ್ರಕ್ರಿಯಾ ॥

**ಜಾಗೃತಂ**—'**ಜಾಗೃ ನಿದ್ರಾಕ್ಷಯೇ**' ಲೋಟ್-ಮಧ್ಯಮಪುರುಷ ದ್ವಿವಚನ ಥಸ್, '**ಲೋಟೋ ಲಙ್ವತ್**' (ಪಾ. ಸೂ. ೩-೪-೮೫) ಎಂದು ಲಙ್ವದ್ಭಾವ '**ತಸ್ಥಸ್ಥಮಿಪಾಂ ತಾಂತಂ ತಾಮಃ**' (ಪಾ. ಸೂ. ೩-೪-೧೦೧) ಎಂಬುದರಿಂದ ತಮ್ ಆದೇಶ '**ಅದಿಪ್ರಭೃತಿಭ್ಯಃ ಶಪಃ**' (ಪಾ. ಸೂ. ೨-೪-೭೨) ಎಂಬುದರಿಂದ ಶಪ್‌ವಿಕರಣಕ್ಕೆ ಲುಕ್. (**ಲೋಪ**) ತಮ್, ಎಂಬುದು '**ಸಾರ್ವಧಾತುಕಮಪಿತ್**' (ಪಾ. ಸೂ. ೧-೨-೪) ಎಂಬುದರಿಂದ ಙಿತ್ತು ಆದ್ದರಿಂದ '**ಕ್ಙಿತಿಚ**' (ಪಾ. ಸೂ. ೧-೧-೫) ಎಂಬುದರಿಂದ ಗುಣನಿಷೇಧ, '**ತಿಙ್ಙತಿಙಃ**' (ಪಾ. ಸೂ. ೮-೧-೨೮) ತಿಙಂತವಲ್ಲದ ಪದದ ಮುಂದೆ ಇರುವ ತಿಙಂತವು ಅನುದಾತ್ತವಾಗುವುದು ಎಂಬುದರಿಂದ ಸರ್ವಾನುದಾತ್ತ ಬರುವುದು.

**ಪ್ರಚೇತುನೇ**—'**ಚಿತೀ ಸಂಜ್ಞಾನೇ**' ಧಾತು. ಇದರ ಮುಂದೆ ಣಿಚ್ '**ಪುಗಂತಲಘೂಪಧಸ್ಯ ಚ**' (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ '**ಚೇತಿ**' ಎಂದಾಯ್ತು. ಇದರ ಮುಂದೆ '**ಉಣಾದಯೋ-ಬಹುಲಮ್**' (ಪಾ. ಸೂ. ೩-೩-೧) ಎಂಬಲ್ಲಿ ಬಹುಲಗ್ರಹಣದಿಂದ ಔಣಾದಿಕವಾದ '**ಉನ**' ಪ್ರತ್ಯಯ '**ಣೇರನಿಟಿ**' (ಪಾ. ಸೂ. ೬-೪-೫) ಎಂಬುದರಿಂದ ಣಿಗೆ ಲೋಪ, ಸಪ್ತಮ್ಯೇಕವಚನದಲ್ಲಿ ಚೇತುನೇ, ಪ್ರಶಬ್ದ ದೊಂದಿಗೆ ಸಮಾಸ ಬಂದ ನಂತರ '**ಗತಿಕಾರಕೋಪಪದಾತ್ಕೃತ್**' (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುವುದು ಚೇತುನ ಎಂಬ ಉತ್ತರಪದವು ಪ್ರತ್ಯಯಸ್ವರದಿಂದ ಮಧ್ಯೋದಾತ್ತ.

**ಇನ್ದ್ರಾಗ್ನೀ**—'**ಇಹೇನ್ದ್ರಾಗ್ನೀ**' ಎಂಬ ಈ ಸೂಕ್ತದ ಪ್ರಥಮಮಂತ್ರದಲ್ಲಿ ಇದರ ಪ್ರಕ್ರಿಯೆಯು ವಿವೃತವಾಗಿದೆ. ಇಲ್ಲಿ ಇನ್ದ್ರಾಗ್ನೀ ಎಂಬುದು ಸಂಬೋಧನಪ್ರಥಮಾನ್ತವಾದ್ದರಿಂದ ಆಮನ್ತ್ರಿತ. ಆದ್ದರಿಂದ '**ಆಮನ್ತ್ರಿತಸ್ಯ ಚ**' (ಪಾ. ಸೂ. ೮-೧-೧೯) ಎಂಬುದರಿಂದ ಆದ್ಯುದಾತ್ತಸ್ವರ ಬರುವುದು ಮಾತ್ರ ಪೂರ್ವಕ್ಕಿಂತಲೂ ಇಲ್ಲಿ ವಿಶೇಷವು.

**ಶರ್ಮ**—ಶೃಣಾತಿ=ಹಿನಸ್ತಿ ದುಃಖಮ್ ಇತಿ ಶರ್ಮ— '**ಶ್ೃ ಹಿಂಸಾಯಾಂ**' ಧಾತು. ಇದರ ಮುಂದೆ '**ಅನ್ಯೇ-ಭ್ಯೋಽಪಿ ದೃಶ್ಯನ್ತೇ**' (ಪಾ. ಸೂ. ೩-೨-೭೫) ಮನಿನ್-ಕ್ವನಿಪ್-ವನಿಪ್-ವಿಚ್ ಈ ಪ್ರತ್ಯಯಗಳು ಧಾತುವಿನ ಮುಂದೆ ಬರುವುವು, ಎಂಬುದರಿಂದ ಮನಿನ್ ಪ್ರತ್ಯಯ. ಶ್ೃ+ಮ್ನ, '**ಸಾರ್ವಧಾತುಕಾರ್ಧಧಾತುಕಯೋಃ**' (ಪಾ. ಸೂ. ೭-೩-೮೪) ಎಂಬುದರಿಂದ ಗುಣ ರಪರವಾಗಿ ಬರುವುದರಿಂದ ಶರ್ಮ ಎಂದಾಗುವುದು.

**ಯಚ್ಛತಮ್**—'ಯಮ ಉಪರಮೇ' ಎಂದು ಭ್ವಾದಿಯಲ್ಲಿರುವುದು. ಇದರ ಮುಂದೆ ಲೋಟ್ ಮಧ್ಯಮ ಪುರುಷ ದ್ವಿವಚನ ಥಸ್, ಅದಕ್ಕೆ ತಮ್ ಆದೇಶ. '**ಕರ್ತರಿ ಶಪ್**' (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣ. ಯಮ್+ಅ+ತಮ್ ಈಗ '**ಇಷುಗಮಿಯಮಾಂ ಛಃ**' (ಪಾ. ಸೂ. ೭-೩-೭೭) ಇಷು ಇಚ್ಛಾಯಾಂ, ಗಮ್ಲೃ ಗತೌ, ಯಮ ಉಪರಮೇ, ಈ ಧಾತುಗಳ ಮುಂದೆ ಶಕಾರೇತ್ಸಂಜ್ಞಕವಾದ ಪ್ರತ್ಯಯ ಪರದಲ್ಲಿರುವಾಗ ಛಕಾರಾದೇಶ ಬರುವುದು ಎಂಬುದರಿಂದ ಮಕಾರಕ್ಕೆ ಛಕಾರ '**ಛೇಚ**' (ಪಾ. ಸೂ. ೬-೧-೭೩) ಛಕಾರ ಪರದಲ್ಲಿದ್ದ ಹ್ರಸ್ವಕ್ಕೆ ತುಕ್ ಆಗಮ ಬರುವುದು ಎಂಬುದರಿಂದ ತುಕ್, '**ಸ್ತೋಃಶ್ಚುನಾಶ್ಚುಃ**' (ಪಾ. ಸೂ. ೮-೪-೪೦) ಎಂಬುದರಿಂದ ಶ್ಚುತ್ವ=ತಕಾರಕ್ಕೆ ಚಕಾರ. ಯಚ್ಛತಂ ಎಂದಾಗುವುದು. 'ಇಷ ಗತೌ' ಎಂದು ದಿವಾದಿಯಲ್ಲಿರುವುದು 'ಇಷ್ಯತಿ' ಎಂದು ಆಗುತ್ತೆ. 'ಇಷ ಇಚ್ಛಾಯಾಂ' ತುದಾದಿ ಇಚ್ಛತಿ, ಇಷ ಆಭೀಕ್ಷ್ಣ್ಯೇ ಕ್ರ್ಯಾದಿ, ಇಷ್ಣಾತಿ, ಎಂದು ಮೂರು ಇಷ ಧಾತುಗಳು ಇವೆ; ಇಲ್ಲಿ ತುದಾದಿ ಧಾತು ಮಾತ್ರಕ್ಕೇ ಛತ್ವವು ಬರುವುದಕ್ಕಾಗಿ ತುದಾದಿಯಲ್ಲಿ ಇಷು ಎಂದು ಎಂದು ಪಾಠಮಾಡಿ, ಛತ್ವವಿಧಾಯಕ ಸೂತ್ರದಲ್ಲಿಯೂ ಇಷು ಎಂದು ಪಾಠವನ್ನು ಕೆಲವರು ಮಾಡುವರು, ಮತ್ತೆ ಹಲವರು '**ಆಚಿರಿಯತಃ**' (ಪಾ. ಸೂ. ೭-೨-೧೦೦) ಎಂಬುದರಿಂದ ಮಂಡೂಕಪ್ಲುತಿಯಿಂದ ಆಚಿ ಎಂದು ಅನುವೃತ್ತವಾಗುವುದು. ಅದು 'ಶಿತಿ' ಎಂಬುದಕ್ಕೆ ವಿಶೇಷಣ. ಏವಂಚ ಅಜಾದಿಯಾದ ಶಕಾರೇತ್ಸಂಜ್ಞಕ ಪ್ರತ್ಯಯ ಪರದಲ್ಲಿರುವಾಗ ಇಷ್ ಮೊದಲಾದ ಧಾತುಗಳಿಗೆ ಛ ಆದೇಶ ಬರುವುದು ಎಂದು ಅರ್ಥವು ಏರ್ಪಡುವುದು. ದಿವಾದಿಯಲ್ಲಿ ಶ್ಯನ್, ಕ್ರ್ಯಾದಿಯಲ್ಲಿ ಶ್ನಾ ವಿಕರಣ ಬರುವುದರಿಂದ ಅವು ಶಿತ್ತಾದರೂ, ಅಜಾದಿಯಾದ ಶಕಾರೇತ್ಸಂಜ್ಞಕವಾಗುವುದಿಲ್ಲವಾದ್ದರಿಂದ ಅವಕ್ಕೆ ಛಕಾರಾದೇಶ ಬರುವುದಿಲ್ಲ. ಆದ್ದರಿಂದ ತುದಾದಿಯಲ್ಲೂ, 'ಇಷುಗಮಿ' ಎಂಬ ಸೂತ್ರದಲ್ಲೂ

ಇಷು ಎಂದು ಉದಿತ್ತಾಗಿ ಪಾಠಮಾಡುವುದು ಅನಾರ್ಷವೆಂದು ಅಭಿಪ್ರಾಯಪಡುವರು. ಈ ಪರಿಯಲ್ಲಿ 'ಯಮು ಉಪರಮೇ' ಧಾತುವಿನಲ್ಲಿ ಯಚ್ಛತಂ ಎಂಬ ರೂಪವು ಸಿದ್ಧಿಸಿದರೂ ಅದು, 'ಯಚ್ಛತಂ=ದತ್ತಂ' ಎಂಬ ಭಾಷ್ಯ ವರ್ಣಿತವಾದ ಅರ್ಥಕ್ಕೆ ಅನುಗುಣವಾಗುವುದಿಲ್ಲ. 'ದಾಣ್ ದಾನೇ' ಧಾತುವಿನ ಮುಂದೆ ಲೋಟ್ ಮಧ್ಯಮ ಪುರುಷ ದ್ವಿವಚನ ಥಸ್ ತಮ್ ಆದೇಶ ಬರುವುದು. ದಾಣ್+ಅ+ತಂ ಈಗ **ಪಾ, ಘ್ರಾ, ಧ್ಮಾ, ಸ್ಥಾ, ಮ್ನಾ, ದಾಣ್, ದೃ, ಶ್ಯರ್ತಿ, ಸರ್ತಿ, ಶದ, ಸದಾಂ—ಪಿಬ, ಜಿಘ್ರ, ಧಮ, ತಿಷ್ಠ, ಮನ, ಯಚ್ಛ, ಪಶ್ಯ, ಚ್ಛರ್, ಧೌ, ಶೀಯ, ಸೀದಾಃ,** (ಪಾ. ಸೂ. ೭-೩-೭೮) ಇತ್ಸಂಜ್ಞಕ ಶಕಾರಾದಿ ಪ್ರತ್ಯಯ ಪರದಲ್ಲಿರುವಾಗ ಪಾದಿ ಧಾತುಗಳಿಗೆ ಪಿಬಾದ್ಯಾದೇಶಗಳು ಬರುವುವು, ಎಂಬುದರಿಂದ ೬ ನೆಯ ಧಾಣ್‌ಗೆ ೬ ನೆಯ ಯಚ್ಛ್ ಆದೇಶ. ಯಚ್ಛ ತಮ್ ಎಂದು ಆಗುವುದು. ಈ ದಾಣ್ ಧಾತುವಿನ ರೂಪವನ್ನು ಇಟ್ಟುಕೊಂಡರೆ ಅದು ಭಾಷ್ಯವಿವೃತವಾದ ಅರ್ಥಕ್ಕೆ ಅನುಗುಣವಾಗುವುದು. ॥ ೬ ॥

॥ ಶ್ರೀಃ ॥

# ಇಪ್ಪತ್ತೆರಡನೆಯ ಸೂಕ್ತವು

**ಪ್ರಾತರ್ಯುಜೇತ್ಯಾದಿಕಮೇಕವಿಂಶತ್ಯೃಚಂ ಪಂಚಮಂ ಸೂಕ್ತಂ । ತಸ್ಯ ಋಷಿಚ್ಛಂದಸೀ ಪೂರ್ವವತ್ । ದೇವತಾವಿಶೇಷಸ್ತ್ವನುಕ್ರಮ್ಯತೇ । ಪ್ರಾತರ್ಯುಜಾ ಸೈಕಾ ಚತಸ್ರ ಆಶ್ವಿನ್ಯಸ್ತಥಾ ಸಾವಿತ್ರ್ಯ ಆಗ್ನೇಯ್ಯೌ ದ್ವೇ ದೇವೀನಾಮೇಕೈಕೇಂದ್ರಾಣೀ ವರುಣಾನ್ಯಗ್ನಾಯೀನಾಂ ದ್ಯಾವಾಪೃಥಿವ್ಯೇ ಪಾರ್ಥಿವೀ ಷಡ್ವೈಷ್ಣವ್ಯೋಽತೋ ದೇವಾ ದೈವೀ ವೇತಿ । ಸೂಕ್ತಸಂಖ್ಯಾನುವರ್ತತ ಇತ್ಯಸ್ಮಿನ್ಖಂಡೇಽನಿರುಕ್ತಾ ಸಂಖ್ಯಾ ವಿಂಶತಿಃ । ಅನು. ೧೨-೪ । ಇತಿ ಪರಿಭಾಷಿತತ್ವಾತ್ ಪ್ರಾತರ್ಯುಜೇತಿ ಸೂಕ್ತೇ ಸಂಖ್ಯಾವಿಶೇಷಸ್ಯಾನಿರುಕ್ತಾ ಸಂಖ್ಯಾ ವಿಂಶತಿಸಂಖ್ಯಾ ದ್ರಷ್ಟವ್ಯಾ । ಸಾ ಚ ವಿಂಶತಿರೇಕಯಾಧಿಕಯಾ ಸಹ ವರ್ತತ ಇತಿ ಸೈಕಾ । ತತ್ರಾದೌ ಚತಸ್ರ ಋಚೋಽಶ್ವಿದೇವತಾಕಾಃ । ಪಂಚಮೀಮಾರಭ್ಯಾಷ್ಟಮ್ಯಂತಾಶ್ಚತಸ್ರಃ ಸವಿತೃದೇವತಾಕಾಃ । ನವಮೀ ದಶಮೀ ಚೋಭೇ ಅಗ್ನಿದೇವತಾಕೇ । ಏಕಾದಶ್ಯಾ ಋಚೋ**

**ದೇವಸಂಬಂಧಿನ್ಯೋ ದೇವ್ಯೋ ದೇವತಾಃ । ದ್ವಾದಶ್ಯಾ ಇಂದ್ರವರುಣಾಗ್ನಿಪತ್ನ್ಯ ಇಂದ್ರಾಣೀವರುಣಾನ್ಯಗ್ನಾಯ್ಯೋ ದೇವತಾಃ । ತ್ರಯೋದಶೀಚತುರ್ದಶ್ಯೌ ದ್ಯಾವಾಪೃಥಿವೀದೇವತಾಕೇ । ಪಂಚದಶೀ ಪಾರ್ಥಿವೀ । ಷೋಡಶ್ಯಾದ್ಯಾಃ ಷಡ್ವಿಷ್ಣುದೇವತ್ಯಾಃ । ಷೋಡಶೀ ಕೃತ್ಸ್ನದೇವತ್ಯಾ ವಾ ॥ ಅತ್ರ ಸೂಕ್ತವಿನಿಯೋಗೋ ಲೈಂಗಿಕಃ ॥ ಪ್ರಾತರನುವಾಕ ಆಶ್ವಿನೇ ಕ್ರತೌ ಪ್ರಾತರ್ಯುಜಾ ವಿಬೋಧಯೇತಿ ಚತಸ್ರ ಋಚಃ । ಸೂತ್ರಿತಂ ಚ । ಅಥಾಶ್ವಿನ ಏಷೋ ಉಷಾಃ ಪ್ರಾತರ್ಯುಜೇತಿ ಚತಸ್ರಃ । ಆ. ೪-೧೫ । ಇತಿ ॥ ಆಶ್ವಿನಗ್ರಹಸ್ಯ ಪ್ರಾತರ್ಯುಜೇತ್ಯೇಕಾ ಪುರೋನುವಾಕ್ಯಾ ದ್ವಿದೇವತ್ಯೈಶ್ಚರಂತೀತಿ ಖಂಡೇ ಸೂತ್ರಿತಂ । ಆಶ್ವಿನಸ್ಯ ಪ್ರಾತರ್ಯುಜಾ ವಿ ಬೋಧಯ । ಆ. ೫-೫ । ಇತಿ ॥**

ಅನುವಾದವು — **ಪ್ರಾತರ್ಯುಜಾ** ಎಂದು ಪ್ರಾರಂಭವಾಗುವ ಸೂಕ್ತವು ಐದನೆಯ ಅನುವಾಕದಲ್ಲಿ ಐದನೆಯ ಸೂಕ್ತವು–ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು. ಈ ಸೂಕ್ತದ ಋಷಿಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ದೇವತೆಗಳ ವಿಷಯವಾಗಿ—**ಪ್ರಾತರ್ಯುಜಾ ಸೈಕಾ ಚತಸ್ರ ಆಶ್ವಿನ್ಯಸ್ತಥಾ ಸಾವಿತ್ರ್ಯ ಆಗ್ನೇಯ್ಯೌ ದ್ವೇ ದೇವೀನಾಮೇಕೈಕೇಂದ್ರಾಣೀವರುಣಾನ್ಯಗ್ನಾಯೀನಾಂ ದ್ಯಾವಾಪೃಥಿವ್ಯೇ ಪಾರ್ಥಿವೀ ಷಡ್ವೈಷ್ಣವ್ಯೋಽತೋ ದೇವಾ ದೈವೀ ವೇತಿ**— ಎಂದು ಅನುಕ್ರಮಣಿಕೆಯು **ಸೂತ್ರಸಂಖ್ಯಾನುವರ್ತತೇ** ಎಂಬಖಂಡದಲ್ಲಿ ಹೇಳಿರುವುದು. (ಅನು. ೧೨-೪) ಈ ಅನುಕ್ರಮಣಿಕೆಯಲ್ಲಿ ಹೇಳಿರುವಂತೆ ಈ ಮಂತ್ರಸಂಖ್ಯೆ ಇಪ್ಪತ್ತು ಆದರೆ ಮತ್ತೊಂದು ಸ್ಥಳದಲ್ಲಿ ಈ ಸೂಕ್ತದ ಮಂತ್ರಸಂಖ್ಯೆಯು ಇಪ್ಪತ್ತೊಂದು ಎಂದು ಹೇಳಿರುವುದು. ಈ ಸೂಕ್ತದ ಮೊದಲನೇ ನಾಲ್ಕು ಋಕ್ಕುಗಳು ಅಶ್ವಿನೀದೇವತಾಪರವಾದವು ; ಐದರಿಂದ ಎಂಟರವರೆಗಿನ ಋಕ್ಕುಗಳು ಸವಿತೃದೇವತಾಕವು ; ಒಂಭತ್ತು ಮತ್ತು ಹತ್ತನೆಯ ಋಕ್ಕುಗಳು ಅಗ್ನಿದೇವತಾಕವು ; ಹನ್ನೊಂದನೆಯ ಋಕ್ಕಿಗೆ ದೇವತೆಗಳ ಸಂಬಂಧಿಗಳಾದ ಎಂದರೆ ದೇವಪತ್ನಿಯರಾದ ದೇವಿಯರು ದೇವತೆಗಳು ; ಹನ್ನೆರಡನೇ ಋಕ್ಕಿಗೆ ಇಂದ್ರ ವರುಣ ಅಗ್ನಿ ದೇವತೆಗಳ ಪತ್ನಿಯರಾದ ಇಂದ್ರಾಣೀ, ವರುಣಾನೀ, ಅಗ್ನಾಯೀ ಎಂಬುವರು ದೇವತೆಗಳು ; ಹದಿಮೂರು ಹದಿನಾಲ್ಕನೆಯ ಋಕ್ಕುಗಳು ದ್ಯಾವಾಪೃಥಿವೀದೇವತಾಕವು : ಹದಿನೈದನೆಯದು ಪೃಥಿವೀದೇವತಾಕವು ; ಹದಿನಾರರಿಂದ ಮುಂದಿನ ಆರು ಋಕ್ಕುಗಳು ವಿಷ್ಣುದೇವತಾಕವು ; ಅಥವಾ ಹದಿನಾರನೆಯ ಋಕ್ಕು ಕೃತ್ಸ್ನ ಎಂದರೆ ಸರ್ವದೇವತಾಕವು. ಒಟ್ಟು ಸೂಕ್ತದ ವಿನಿಯೋಗವು ಲೈಂಗಿಕವು. ಪ್ರಾತರನುವಾಕಮಂತ್ರಪಠನಕಾಲದಲ್ಲಿ **ಪ್ರಾತರ್ಯುಜಾ ವಿ ಬೋಧಯ** ಎಂಬ ನಾಲ್ಕು ಋಕ್ಕುಗಳನ್ನು ಆಶ್ವಿನಕ್ರತುಮಂತ್ರಗಳನ್ನಾಗಿ ಪಠಿಸಬೇಕು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಅಥಾಶ್ವಿನ ಏಷೋ ಉಷಾಃ ಪ್ರಾತರ್ಯುಜೇತಿ ಚತಸ್ರಃ** ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿರುವುದು (ಆ. ೪-೧೫). ಮತ್ತು ಆಶ್ವಿನಗ್ರಹವೆಂಬ ಹೋಮವಿಶೇಷದಲ್ಲಿ **ಪ್ರಾತರ್ಯುಜಾ** ಎಂಬ ಒಂದು ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು **ದ್ವಿದೇವತ್ಯೈಶ್ಚರಂತಿ** ಎಂಬ ಖಂಡದಲ್ಲಿ **ಆಶ್ವಿನಸ್ಯ ಪ್ರಾತರ್ಯುಜಾ ವಿ ಬೋಧಯ** ಎಂಬ ಸೂತ್ರದಲ್ಲಿ (ಆ. ೫-೫). ಹೇಳಲ್ಪಟ್ಟಿರುವುದು.

## ಸೂಕ್ತ—೨೨

॥ ಮಂಡಲ—೧ ॥ ಅನುವಾಕ—೫ ॥ ಸೂಕ್ತ—೨೨ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ, ೪-೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧—೨೧ ॥

॥ ಋಷಿಃ—ಮೇಧಾತಿಥಿಃ ಕಾಣ್ವಃ ।

॥ ದೇವತಾ—೧-೪ ಅಶ್ವಿನೌ । ೫-೮ ಸವಿತಾ । ೯, ೧೦ ಅಗ್ನಿಃ । ೧೧ ದೇವ್ಯಃ । ೧೨ ಇಂದ್ರಾಣೀ-ವರುಣಾನ್ಯಗ್ನಾಯ್ಯಃ । ೧೩, ೧೪ ದ್ಯಾವಾಪೃಥಿವ್ಯೌ । ೧೫ ಪೃಥಿವೀ । ೧೬. ವಿಷ್ಣು-ರ್ದೇವಾ ವಾ । ೧೭-೨೧ ವಿಷ್ಣುಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಪ್ರಾ॒ತ॒ರ್ಯುಜಾ॒ ವಿ ಬೋ॑ಧಯಾ॒ಶ್ವಿನಾ॒ವೇಹ ಗ॑ಚ್ಛತಾಮ್ ।
ಅ॒ಸ್ಯ ಸೋಮ॑ಸ್ಯ ಪೀ॒ತಯೇ॑ ॥ ೧ ॥

॥ ಪದಪಾಠಃ ॥

ಪ್ರಾ॒ತಃ॒ಽಯುಜಾ॑ । ವಿ । ಬೋ॒ಧ॒ಯ॒ । ಅ॒ಶ್ವಿನೌ॑ । ಆ । ಇ॒ಹ । ಗ॒ಚ್ಛ॒ತಾ॒ಮ್ ॥
ಅ॒ಸ್ಯ । ಸೋಮ॑ಸ್ಯ । ಪೀ॒ತಯೇ॑ ॥ ೧ ॥

॥ ಸಾಯಣಭಾಷ್ಯಂ ॥

ಅತ್ರ ಹೋತಾಧ್ವರ್ಯುಮುದ್ದಿಶ್ಯ ಬ್ರೂತೇ । ಹೇ ಅಧ್ವರ್ಯೋ ಪ್ರಾತರ್ಯುಜಾ ಪ್ರಾತಃ-ಸವನಗ್ರಹೇಣ ಸಂಯುಕ್ತಾವಶ್ವಿನೌ ದೇವೌ ವಿ ಬೋಧಯ । ವಿಶೇಷೇಣ ಪ್ರಬುದ್ಧೌ ಕುರು । ಅಶ್ವಿನೌ ಪ್ರಬುದ್ಧೌ ಚಾಶ್ವಿನೌ ದೇವಾವಸ್ಯಾಭಿಷವಸಂಸ್ಕಾರಯುಕ್ತಸ್ಯ ಸೋಮಸ್ಯ ಪೀತಯೇ ಪಾನಾಯೇಹ ಕರ್ಮಣ್ಯಾ ಗಚ್ಛತಾಂ ॥ ಪ್ರಾತರ್ಯುಂಜಾತೇ ಗೃಹ್ಯಮಾಣೇನ ಗ್ರಹೇಣ ಸಹೇತಿ ಪ್ರಾತರ್ಯುಜಾ । ಸತ್ಸೂದ್ವಿಷೇತ್ಯಾದಿನಾ ಕ್ವಿಪ್ । ಸುಪಾಂ ಸುಲುಗಿತ್ಯಾಕಾರಃ । ಕೃದುತ್ತರಪದಪ್ರಕೃತಿಸ್ವರತ್ವಂ । ಅಸ್ಯ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಪೀತಯೇ । ವ್ಯತ್ಯಯೇನ ಕ್ತಿನ ಉದಾತ್ತತ್ವಂ ॥

॥ ಪ್ರತಿಪದಾರ್ಥ ॥

(**ಹೇ ಅಧ್ವರ್ಯೋ**—ಎಲೈ ಅಧ್ವರ್ಯುವೇ) । **ಪ್ರಾತರ್ಯುಜಾ**—ಪ್ರಾತಃಸವನಗ್ರಹಣಯುಕ್ತರಾದ । **ಅಶ್ವಿನೌ**—ಅಶ್ವಿನೀದೇವತೆಗಳನ್ನು । **ವಿ ಬೋಧಯ**—ಪ್ರಬುದ್ಧರನ್ನಾಗಿ ಮಾಡು (ಎಚ್ಚರಗೊಳಿಸು) (**ಅಶ್ವಿನೌ**—ಪ್ರಬುದ್ಧರಾದ ಅಶ್ವಿನೀದೇವತೆಗಳೇ) । **ಅಸ್ಯ**—(ಸಂಸ್ಕಾರಯುಕ್ತವಾದ) ಈ । **ಸೋಮಸ್ಯ**—ಸೋಮರಸದ । **ಪೀತಯೇ**—ಪಾನಕ್ಕೋಸ್ಕರ । **ಇಹ**—ಇಲ್ಲಿಗೆ । **ಆ ಗಚ್ಛತಾಂ**—ಬನ್ನಿ.

॥ ಭಾವಾರ್ಥ ॥

ಪ್ರಾತಃಸವನಕ್ಕೆ ಅವಶ್ಯಕರಾದ ಅಶ್ವಿನೀದೇವತೆಗಳನ್ನು, ಎಲೈ ಅಧ್ವರ್ಯುವೇ, ಪ್ರಬುದ್ಧರನ್ನಾಗಿ ಮಾಡು. (ಎಬ್ಬಿಸು) ಪ್ರಬುದ್ಧರಾಗಿ ಅವರು ಇಲ್ಲಿಗೆ ಬಂದು, ಸಂಸ್ಕಾರಮಾಡಿರುವ ಸೋಮರಸವನ್ನು ಪಾನಮಾಡಲಿ.

English Translation.

Awaken the Aswins for the morning Sacrifice; let them both come hither to drink of this Soma-juice.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧವು ಅಧ್ವರ್ಯುವೆಂಬ ಋತ್ವಿಕ್ಕನ್ನು ಉದ್ದೇಶಿಸಿ ಹೇಳಿರುವುದು.

**ಪ್ರಾತರ್ಯುಜಾ—ಪ್ರಾತಃಸವನಗ್ರಹೇಣ ಸಂಯುಕ್ತೌ** ॥ ಪ್ರಾತಸ್ಸವನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಸೋಮಪಾನಗ್ರಹಣಾರ್ಥವಾಗಿ ಸಿದ್ಧರಾಗುವಂತೆ ಎಂಬರ್ಥವನ್ನು ಭಾಷ್ಯಕಾರರು ಹೇಳಿರುವರು. ಸ್ಕಂದಸ್ವಾಮಿಯ ಅಭಿಪ್ರಾಯವೂ ಇದೇ ರೀತಿ ಇರುವುದು. ಆದರೆ ವೇದಾರ್ಥಯತ್ನಕಾರರು ಪ್ರಾತರ್ಯುಜಾ-ಪ್ರಾತಃಕಾಲೇ ಅಶ್ವೌ ರಥೇ ಯೋಜಯಂತೌ— ಪ್ರಾತಃಕಾಲದಲ್ಲಿ ಯಜ್ಞವೇದಿಕೆಗೆ ಬರುವುದಕ್ಕಾಗಿ ತಮ್ಮ ಅಶ್ವಗಳನ್ನು ರಥಕ್ಕೆ ಕಟ್ಟಿ ಸಿದ್ಧಪಡಿಸುತ್ತಿರುವ ಎಂಬರ್ಥವನ್ನು ಹೇಳಿರುವರು. ಇಲ್ಲಿ ರಥವೆಂಬ ಶಬ್ದವಾಗಲಿ, ಅಶ್ವಶಬ್ದವಾಗಲೀ ಇಲ್ಲದಿರುವುದರಿಂದಲೂ ವಿಬೋಧಯ—ಎಚ್ಚರಗೊಳಿಸು ಎಂಬ ಶಬ್ದವಿರುವುದರಿಂದಲೂ, ಶಯ್ಯಾದಿಗಳಿಂದ ಎದ್ದು ರಥಕ್ಕೆ ಕುದುರೆಗಳನ್ನು ಕಟ್ಟುತ್ತಿರುವವರನ್ನು ಮತ್ತೆ ಎಚ್ಚರಗೊಳಿಸುವುದು ಎಂಬುವುದು ಅಸಂಭವವಾದ್ದರಿಂದ ಈ ಅರ್ಥವು ಸ್ವೀಕಾರಾರ್ಹವಲ್ಲ. ಸಾಯಣರ ಮತ್ತು ಸ್ಕಂದಸ್ವಾಮಿಯ ಅರ್ಥವೇ ಸಮಂಜಸವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಪ್ರಾತರ್ಯುಜಾ**—ಪ್ರಾತಃ ಯುಂಜ್ಞಾತೇ ಇತಿ ಪ್ರಾತರ್ಯುಜಾ ಎಂದು ವಿಗ್ರಹ, ಪ್ರಾತಃ=ಪ್ರಾತಸ್ಸವನದಲ್ಲಿ ಯುಂಜಾತೇ-ಗೃಹ್ಯಮಾಣ ಗ್ರಹದೊಂದಿಗೆ ಸೇರುತ್ತಾರೆ ಎಂದು ಅವಯವಾರ್ಥ. '**ಸತ್ಸೂದ್ವಿಷದ್ರುಹದುಹಯುಜವಿದಭಿದಚ್ಛಿದಜಿನೀರಾಜಾಮುಪಸರ್ಗೇಽಪಿ ಕ್ವಿಪ್**' (ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ, '**ಸುಪಾಂಸುಲುಕ್**—' ಎಂಬುದರಿಂದ ಔಟ್ ಪ್ರತ್ಯಯಕ್ಕೆ ಆಕಾರಾದೇಶ, ಯುಜ್ ನ ಉಕಾರಧಾತು

ಸ್ವರದಿಂದ ಉದಾತ್ತ, ಉಪಪದಸಮಾಸ, **'ಗತಿಕಾರಕೋಪಪದಾತ್ಕೃತ್'** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ.

**ಅಸ್ಯ**—ಇದಮ್ ಶಬ್ದದ ಮುಂದೆ ಷಷ್ಠೀ ಏಕವಚನ ಙಸ್, **'ತ್ಯದಾದೀನಾಮಃ'** (ಪಾ. ಸೂ. ೭-೨-೧೦೨) ಎಂಬುದರಿಂದ ಮಕಾರಕ್ಕೆ ಅಕಾರ, **'ಅತೋಗುಣೇ'** (ಪಾ. ಸೂ. ೬-೧-೧೭) ಎಂಬುದರಿಂದ ಪರರೂಪ **'ಟಾಙಸಿಙಸಾಮಿನಾತ್ಸ್ಯಾಃ'** (ಪಾ. ಸೂ. ೭-೧-೧೨) ಎಂಬುದರಿಂದ **'ಸ್ಯ'** ಆದೇಶ **'ಹಲಿ ಲೋಪಃ'** (ಪಾ. ಸೂ. ೭-೨-೧೧೩) ಎಂಬುದರಿಂದ ಇದ್‌ಗೆ ಲೋಪ, ಅನ್ವಾದೇಶ ವಿಷಯವಾಗುವುದಿಲ್ಲವಾದ್ದರಿಂದ **'ಇದಮೋಽನ್ವಾದೇಶೇಶನುದಾತ್ತಸ್ತೃತೀಯಾದೌ'** (ಪಾ. ಸೂ. ೮-೩-೪೧) ಎಂಬುದರಿಂದ ಅನುದಾತ್ತವಾದ ಅಶ್ ಆದೇಶ ಬರುವುದಿಲ್ಲ. ಪ್ರಾತಿಪದಿಕಸ್ವರದಿಂದ ಅಕಾರ ಉದಾತ್ತ **'ಅನುದಾತ್ತೌ ಸುಪ್ಪಿತೌ'** (ಪಾ. ಸೂ. ೩-೧-೪) ಎಂಬುದರಿಂದ ವಿಭಕ್ತಿಯು ಅನುದಾತ್ತ ಇದು ಪ್ರಾಪ್ತವಾದರೆ ಇದಮ್ ಶಬ್ದದ ಮುಂದೆ ಇರುವುದರಿಂದ **'ಊಡಿದಂಪದಾದ್ಯಪ್ಪು ಮ್ರೈದ್ಯುಭ್ಯಃ'** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುವುದು.

**ಪೀತಯೇ**—ಕ್ತಿನ್ ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಬಂದು ಪೀತಿ ಶಬ್ದವು ನ್ಯಾಯವಾಗಿ ಆದ್ಯುದಾತ್ತವಾಗಬೇಕು. ಅಂದರೆ ಶೇಷನಿಘಾತದಿಂದ ಕ್ತಿ ಅನುದಾತ್ತವಾಗಬೇಕು, ಆದರೂ ಇಲ್ಲಿ ವ್ಯತ್ಯಯದಿಂದ ಕ್ತಿ ಪ್ರತ್ಯಯವು ಉದಾತ್ತವಾಗುವುದು ॥ ೧ ॥

॥ ಸಂಹಿತಾಪಾಠಃ ॥

ಯಾ ಸುರಥಾ ರಥೀತಮೋಭಾ ದೇವಾ ದಿವಿಸ್ಪೃಶಾ ॥
ಅಶ್ವಿನಾ ತಾ ಹವಾಮಹೇ ॥ ೨ ॥

॥ ಪದಪಾಠಃ ॥

ಯಾ । ಸುಽರಥಾ । ರಥಿಽತಮಾ । ಉಭಾ । ದೇವಾ । ದಿವಿಽಸ್ಪೃಶಾ ॥
ಅಶ್ವಿನಾ । ತಾ । ಹವಾಮಹೇ ॥ ೨ ॥

॥ ಸಾಯಣಭಾಷ್ಯಂ ॥

**ಯೋಭಾಶ್ವಿನಾ ದೇವಾ ಯಾವುಭಾವಶ್ವಿನೌ ದೇವೌ ಸುರಥಾ ಶೋಭನರಥಯುಕ್ತೌ ರಥೀತಮಾ ರಥಿನಾಂ ಮಧ್ಯೇಽತಿಶಯೇನ ರಥಿನೌ ದಿವಿಸ್ಪೃಶಾ ದ್ಯುಲೋಕನಿವಾಸಿನೌ ತಾ ಹವಾಮಹೇ । ತಾದೃ-**

**ಶಾವಶ್ವಿನಾವಾಹ್ವಯಾಮಹೇ ॥ ಯೇತ್ಯಾದಿಷ್ವಷ್ವಸು ಪದೇಷು ಸುಪಾಂ ಸುಲುಗಿತಿ ದ್ವಿವಚನಸ್ಯಾಕಾರಃ । ಸುರಥಾ । ಶೋಭನೋ ರಥೋ ಯಯೋಸ್ತೌ ಸುರಥೌ । ಸಮಾಸಾಂತೋದಾತ್ತತ್ವಾಪವಾದಂ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಂ ಬಾಧಿತ್ವಾ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವೇ ಪ್ರಾಪ್ತೆ ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ರಥೀತಮಾ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಮಿಕಾರಸ್ಯ ದೀರ್ಘತ್ವಂ । ದಿವಿಸ್ಪೃಶಾ । ದಿವಿ ಸ್ಪೃಶತ ಇತಿ ದಿವಿಸ್ಪೃಶೌ । ಕ್ವಿಪ್ಚೇತಿ ಕ್ವಿಪ್ । ತತ್ಪುರುಷೇ ಕೃತಿ ಬಹುಲಮಿತ್ಯಲುಕ್ । ಗತಿಕಾರಕೋಪಪದಾತ್ಕೃದಿತಿ ಕೃದುತ್ತರಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಯಾ ಉಭಾ ಅಶ್ವಿನಾ ದೇವಾ**—ಯಾವ ಅಶ್ವಿನೀದೇವತೆಗಳಿಬ್ಬರೂ । **ಸುರಥಾ**—ಒಳ್ಳೆಯ ರಥವುಳ್ಳವರೋ । **ರಥೀತಮಾ**—ರಥಿಕರಲ್ಲಿ ಉತ್ತಮರೋ । **ದಿವಿಸ್ಪೃಶಾ**—ದೇವಲೋಕವಾಸಿಗಳೋ । **ತಾ**—(ಅಂತಹ) ಅವರಿಬ್ಬರನ್ನೂ । **ಹವಾಮಹೇ**—ಆಹ್ವಾನಿಸುತ್ತೇವೆ.

॥ ಭಾವಾರ್ಥ ॥

ಅಶ್ವಿನೀದೇವತೆಗಳು ಒಳ್ಳೆಯ ರಥವುಳ್ಳವರು, ರಥ ನಡೆಸುವುದರಲ್ಲಿ ಅತ್ಯಂತ ಸಮರ್ಥರು ಮತ್ತು ದೇವಲೋಕವಾಸಿಗಳು. ಅಂತಹ ಇಬ್ಬರನ್ನೂ ನಾವು ಯಜ್ಞಕ್ಕೆ ಆಹ್ವಾನಿಸುತ್ತೇವೆ.

## English Translation.

We invoke the two Aswins who are both divine, the best of charioteers, dwellers in heaven, riding in an excellant car.

॥ ವಿಶೇಷವಿಷಯಗಳು ॥

**ಸುರಥಾ—ಶೋಭನರಥಯುಕ್ತೌ ।** ಒಳ್ಳೆಯ ರಥವುಳ್ಳವರು.

**ರಥೀತಮಾ**—ರಥಿಕರಲ್ಲಿ ಶ್ರೇಷ್ಠರು. ರಥಿಕರೆಂದರೆ ರಥದಲ್ಲಿ ಕುಳಿತು ಯುದ್ಧಮಾಡುವವರು. ಸ್ಕಂದಸ್ವಾಮಿಯು—**ರಥೀತಮಾ-ಸಾರಥಿರತ್ರ ರಥ್ಯುಚ್ಯತೇ । ಅತಿಶಯೇನ ಸಾರಥೀ**-ಎಂದರೆ ಇಲ್ಲಿ ರಥೀ ಎಂದರೆ ಸಾರಥಿ ಎಂದರ್ಥವು, ರಥೀತಮಾ-ಸಾರಥಿಗಳಲ್ಲಿ ಶ್ರೇಷ್ಠರು ಅಥವಾ ರಥವನ್ನು ನಡೆಸುವುದರಲ್ಲಿ ಕುಶಲರು ಎಂದು ಅರ್ಥ ವಿವರಣೆಮಾಡಿರುವರು.

**ದಿವಿಸ್ಪೃಶಾ—ದಿವಿ ಸ್ಪೃಶತ ಇತಿ ದಿವಿಸ್ಪೃಶೌ । ದಿವಿ ಸ್ಪ್ರಷ್ಟಾರೌ ಗಂತಾರಾವಿತ್ಯರ್ಥಃ ॥** ಸ್ವರ್ಗವನ್ನು ಸ್ಪರ್ಶಿಸುವವರು ಅಥವಾ ಮುಟ್ಟುವವರು ಎಂದರೆ ಸ್ವರ್ಗಲೋಕಕ್ಕೆ ಹೋಗುವವರು, ಸ್ವರ್ಗನಿವಾಸಿಗಳು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಯಾ**—ಮೊದಲಾದ ಎಂಟು ಪದಗಳಲ್ಲಿಯೂ ದ್ವಿತೀಯಾ ದ್ವಿವಚನ ಔಟ್ ಪ್ರತ್ಯಯಕ್ಕೆ **'ಸುಪಾಂ ಸುಲುಕ್–'** (ಪಾ. ಸೂ ೭-೧-೩೯) ಎಂಬುದರಿಂದ ಆಕಾರಾದೇಶ, **'ಶೋಭನೌ ರಥೌ ಯಯೋಸ್ತೌ ಸುರಥೌ'** ಇಲ್ಲಿ **'ಸಮಾಸಸ್ಯ'** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾದರೆ, ಇದನ್ನು ಬಾಧಿಸಿ ಇದು ಬಹುವ್ರೀಹಿಯಾದ್ದರಿಂದ **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್'** (ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾಗುವುದು. ಇದನ್ನೂ ಬಾಧಿಸಿ ಉತ್ತರಪದವು ಸು ಶಬ್ದದ ಮುಂದೆ ಇರುವುದರಿಂದ **'ನಞ್ಸುಭ್ಯಾಮ್'** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರವು ಪ್ರಾಪ್ತವಾಗುವುದು. ರಥಶಬ್ದವು ಆದ್ಯುದಾತ್ತವಾದ್ದರಿಂದ **'ನಞ್ಸುಭ್ಯಾಂ'** ಎಂಬುದಕ್ಕೆ ಅಪವಾದವಾದ **'ಆದ್ಯುದಾತ್ತಂ ದ್ವ್ಯಚ್ ಛಂದಸಿ'** (ಪಾ. ಸೂ. ೬-೨-೧೧೯) ಬಹುವ್ರೀಹಿಯಲ್ಲಿ ಸು ಶಬ್ದದ ಮುಂದೆ ಇರತಕ್ಕದ್ದೂ ಎರಡು ಸ್ವರಗಳುಳ್ಳದ್ದೂ ಆದ್ಯುದಾತ್ತವೂ ಆದ ಪದವು ಆದ್ಯುದಾತ್ತವೇ ಆಗುವುದು ಎಂಬುದರಿಂದ ಉತ್ತರಪದಕ್ಕೆ ಆದ್ಯುದಾತ್ತವೇ ಬರುವುದು. **'ರಮು ಕ್ರೀಡಾಯಾಂ'** ಧಾತುವಿನ ಮುಂದೆ **'ಹನಿಕುಷಿನೀರಮಿ ಕಾಶಿಭ್ಯಃಕ್ಥನ್'** (ಉ. ಸೂ. ೨-೧೫೫) ಎಂಬುದರಿಂದ ಕ್ಥನ್ ಪ್ರತ್ಯಯು ಬರಲು **'ಅನುದಾತ್ತೋಪದೇಶ–'** (ಪಾ. ಸೂ. ೬-೪-೩೭) ಎಂಬುದರಿಂದ ಮಕಾರಕ್ಕೆ ಲೋಪ ಬಂದರೆ ರಥ ಎಂದಾಗುತ್ತೆ ಇದು **'ಞ್ನಿತ್ಯಾದಿರ್ನಿತ್ಯಮ್'** ಎಂಬ ನಿತ್ಸ್ವರದಿಂದ ಆದ್ಯುದಾತ್ತ.

**ರಥೀತಮಾ**—ರಥಃ ಅನಯೋರಸ್ತೀತಿ ರಥಿನೌ, **'ಅತಇನಿಠನೌ'** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿಪ್ರತ್ಯಯ. ಅತಿಶಯೇನ ರಥಿನೌ ಎಂದು ವಿಗ್ರಹವಾದಾಗ **'ಅತಿಶಾಯನೇತಮಬಿಷ್ಠನೌ'** (ಪಾ. ಸೂ. ೫-೩-೫೫) ಎಂಬುದರಿಂದ ಅತಿಶಯಾರ್ಥದಲ್ಲಿ ತಮಪ್, ಅಂತರ್ವರ್ತಿ ವಿಭಕ್ತಿಯನ್ನು ನಿಮಿತ್ತಮಾಡಿಕೊಂಡು ರಥಿ ಎಂಬುದು ಪದವು, **'ನಲೋಪಃ ಪ್ರಾತಿಪದಿಕಾಂತಸ್ಯ'** (ಪಾ. ಸೂ. ೮-೨-೭) ಎಂಬುದರಿಂದ ನಕಾರಲೋಪ. ಸಂಹಿತಾಕಾಲದಲ್ಲಿ **'ಅನ್ಯೇಷಾಮಪಿ ದೃಶ್ಯತೇ'** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದದ ಇಕಾರಕ್ಕೆ ದೀರ್ಘ.

**ದಿವಿಸ್ಪೃಶಾ**—ದಿವಿ ಸ್ಪೃಶತ ಇತಿ ದಿವಿಸ್ಪೃಶೌ **'ಕ್ವಿಪ್ ಚ'** (ಪಾ. ಸೂ. ೩-೨-೭೬) ಸೋಪಪದಗಳಾದರೂ ಸರಿಯೆ, ನಿರುಪಪದಗಳಾದರೂ ಸರಿಯೆ ಎಲ್ಲಾ ಧಾತುಗಳ ಮುಂದೆಯೂ ಲೋಕದಲ್ಲಿಯೂ ವೇದದಲ್ಲಿಯೂ ಸಹ ಕ್ವಿಪ್ ಪ್ರತ್ಯಯವು ಕಾಣಲ್ಪಡುವುದು ಎಂಬುದರಿಂದ ಕ್ವಿಪ್ ಪ್ರತ್ಯಯ, **'ಸತ್ಸೂದ್ವಿಷ–'** ಎಂಬುದು ಇದರ ವಿವರಣವು. ದಿವಿಸ್ಪೃಶ್ ಎಂಬಲ್ಲಿ **'ಉಪಪದಮತಿಙ್'** (ಪಾ. ಸೂ. ೨-೨-೧೯) ಎಂಬುದರಿಂದ ತತ್ಪುರುಷಸಮಾಸ, **'ತತ್ಪುರುಷೇಕೃತಿ ಬಹುಲಮ್'** (ಪಾ. ಸೂ. ೬-೩-೧೪) ತತ್ಪುರುಷ ಸಮಾಸದಲ್ಲಿ ಕೃದಂತವಾದ ಉತ್ತರಪದವು ಪರದಲ್ಲಿದ್ದರೆ ಸಂಜ್ಞೆ ತೋರುವಾಗ ಸಪ್ತಮೀವಿಭಕ್ತಿಗೆ ಬಹುಲವಾಗಿ ಅಲುಕ್ ಬರುವುದು ಎಂಬುದರಿಂದ ದಿವಿ ಎಂಬಲ್ಲಿಯ ಸಪ್ತಮಿಗೆ ಅಲುಕ್, ಬಹುಲಗ್ರಹಣದಿಂದ ಸಂಜ್ಞೆ ತೋರದೇ ಇದ್ದರೂ ಅಲುಕ್ ಇಲ್ಲಿ ಬರುವುದೆಂದು ಅಭಿಪ್ರಾಯವು. **'ಗತಿಕಾರಕೋಪಪದಾತ್ಕೃತ್'** (ಪಾ. ಸೂ. ೬-೨-೧೩೯) ತತ್ಪುರುಷಸಮಾಸದಲ್ಲಿ ಗತಿ, ಕಾರಕ ಉಪಪದ ಇವುಗಳ ಮುಂದೆ ಇರುವ ಕೃದಂತವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುವುದು. ಸ್ಪೃಶ್ ಎಂಬುದು ಧಾತುಸ್ವರದಿಂದ ಅಂತೋದಾತ್ತ. ಸ್ಪೃಶ ಸಂಸ್ಪರ್ಶನೇ, ಧಾತು ॥ ೨ ॥

॥ ಸಂಹಿತಾಪಾಠಃ ॥

ಯಾ ವಾಂ ಕಶಾ ಮಧುಮತ್ಯಶ್ವಿನಾ ಸೂನೃತಾವತೀ ।
ತಯಾ ಯಜ್ಞಂ ಮಿಮಿಕ್ಷತಂ ॥ ೩ ॥

॥ ಪದಪಾಠಃ ॥

ಯಾ । ವಾಂ । ಕಶಾ । ಮಧುಽಮತೀ । ಅಶ್ವಿನಾ । ಸೂನೃತಾಽವತೀ ॥
ತಯಾ । ಯಜ್ಞಂ । ಮಿಮಿಕ್ಷತಂ ॥ ೩ ॥

॥ ಸಾಯಣಭಾಷ್ಯಂ ॥

ಅಶ್ವಿನಾ ಹೇ ಅಶ್ವಿನೌ ದೇವೌ ವಾಂ ಯುವಯೋಃ ಸಂಬಂಧಿನೀ ಯಾ ಕಶಾಶ್ವತಾಡಿನೀ ವಿದ್ಯತೇ ತಯಾ ಸಹಾಗತ್ಯ ಯಜ್ಞಮಸ್ಮದೀಯಂ ಮಿಮಿಕ್ಷತಂ । ಸೋಮರಸೇನ ಸೇಕ್ತುಮಿಚ್ಛತಂ । ಕಶಯಾಶ್ವಾನ್ಪೃಥಂ ತಾಡಯಿತ್ವಾ ಸಹಸಾ ಸಮಾಗತ್ಯ ಭವದ್ವಿಷಯಾಂ ಸೋಮರಸಾಹುತಿಂ ನಿಷ್ಪಾದಯಿತುಮುದ್ಯುಕ್ತೌ ಭವತಮಿತ್ಯರ್ಥಃ । ಕೀದೃಶೀ ಕಶಾ । ಮಧುಮತೀ । ಅರ್ಣಃ ಕ್ಷೋದ ಇತ್ಯಾದಿಷ್ವೇಕಶತಸಂಖ್ಯಾಕೇಷೂದಕನಾಮಸು ಮಧು ಪುರೀಷಮಿತಿ ಪಠಿತಂ । ತಸ್ಮಾದುದಕವತೀತ್ಯುಕ್ತಂ ಭವತಿ । ಅಶ್ವಸ್ಯ ಶೀಘ್ರಗತ್ಯಾ ಯತ್ಸ್ವೇದೋದಕಂ ಸ್ರವತಿ ತೇನೇಯಂ ಕಶಾಕ್ಲಿನ್ನೇತ್ಯರ್ಥಃ । ಸೂನೃತಾವತೀ ಪ್ರಿಯಸತ್ಯವಾಗ್ಯುಕ್ತಾ । ತೀವ್ರೇಣ ಕಶಾತಾಡನೇನ ಯೋ ಧ್ವನಿರ್ನಿಷ್ಪದ್ಯತೇ ತಾಡನವೇಲಾಯಾಮಶ್ವಾರೂಢೇನ ಚ ಯ ಆಕ್ರೋಶಃ ಕ್ರಿಯತೇ ತದುಭಯಂ ಶೀಘ್ರಗಮನಹೇತುತ್ವೇನ ಯಜಮಾನಸ್ಯ ಪ್ರಿಯಂ । ಯದ್ವಾ । ಶ್ಲೋಕೋ ಧಾರೇತ್ಯಾದಿಷು ಸಪ್ತಪಂಚಾಶದ್ವಾಙ್ನಾಮಸು ಕಶಾ ಧಿಷಣೇತಿ ಪಠಿತಂ । ಅಶ್ವಿನೋರ್ಯಾ ವಾಕ್ ಮಧುಮತೀ ಮಾಧುರ್ಯೋಪೇತಾ ಪಾರುಷ್ಯರಹಿತಾ ಸೂನೃತಾವತೀ ಪ್ರಿಯತ್ವಸತ್ಯತ್ವೋಪೇತಾ । ಫಲಪ್ರದಾನವಿಷಯೇತ್ಯರ್ಥಃ । ತಯಾ ವಾಚಾ ಯುಕ್ತೌ ಯಜ್ಞಂ ಮಿಮಿಕ್ಷತಮಿತಿ ಯೋಜನೀಯಂ ॥ ಕಶಾ । ಕಶ ಗತಿಶಾತನಯೋಃ । ಪಚಾದ್ಯಚ್ । ವೃಷಾದಿತ್ವಾದಾದ್ಯುದಾತ್ತಃ । ಸೂನೃತಾವತೀ । ಊನ ಪರಿಹಾಣೇ । ಸುಷ್ಠೂನಯತ್ಯಪ್ರಿಯಮಿತಿ ಸೂನ್ । ತಥಾವಿಧಮೃತಂ ಸತ್ಯಂ ಯಸ್ಯಾಂ ವಾಚಿ ಸಾ ಸೂನೃತಾ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ಬಾಧಿತ್ವಾ ಪರಾದಿಶ್ಛಂದಸಿ ಬಹುಲಮಿತಿ ಋಕಾರ ಉದಾತ್ತಃ । ಸಾ ಯಸ್ಯಾ ಅಸ್ತಿ ಸಾ ಕಶಾ ಸೂನೃತಾವತೀತಿ ಕಶಾಯಾಃ ಸಂಜ್ಞಾ । ಏವಂನಾಮಾ ಯಾ ಕಶೇತ್ಯರ್ಥಃ । ಸಂಜ್ಞಾಯಾಂ । ಪಾ. ೮-೨-೧೧ । ಇತಿ ಮತುಪೋ ವತ್ವಂ । ಮಿಮಿಕ್ಷತಂ । ಮಿಹೇಃ ಸನ್ । ಹಲಂತಾಚ್ಚ । ಪಾ. ೧-೨-೧೦ । ಇತಿ ಕಿತ್ತ್ವಾದ್ಗುಣಾಭಾವಃ ॥ ಢತ್ವಕತ್ವಷತ್ವಾನಿ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ। **ವಾಂ**—ನಿಮ್ಮ । **ಮಧುಮತೀ**—ಅಶ್ವಗಳ ಸ್ವೇದದಿಂದ ತೊಯ್ದಿರುವ **ಸೂನೃತಾವತೀ**—(ಕಶೆಯನ್ನು ಉಪಯೋಗಿಸುವ ಯಜಮಾನನಿಗೆ) ಪ್ರಿಯವಾದ ಮತ್ತು ಸತ್ಯವಾದ ಧ್ವನಿಯಿಂದ ಯುಕ್ತವಾದ । **ಯಾ ಕಶಾ**—ಯಾವ ಕಶೆ(ಚಾವಟಿಯು) ಯುಂಟೋ । **ತಯಾ**—ಅದರೊಡನೆ (ಎಂದರೆ ಅದನ್ನು ಕುದುರೆಗಳ ಮೇಲೆ ಉಪಯೋಗಿಸಿ ಶೀಘ್ರವಾಗಿ ಬಂದು) । **ಯಜ್ಞಂ**—ನಮ್ಮ ಯಜ್ಞವನ್ನು **ಮಿಮಿಕ್ಷತಂ**—ಸೋಮರಸಯುಕ್ತವನ್ನಾಗಿ ಮಾಡಲು ಇಚ್ಛಿಸಿ (ಸೋಮಪಾನಮಾಡಿರಿ) । ಅಥವಾ **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ । **ಮಧುಮತೀ**—ಮಾಧುರ್ಯಯುಕ್ತವಾದ ಅಥವಾ ಮೃದುವಾದ । **ಸೂನೃತಾವತೀ**—ಪ್ರಿಯವಾದ ಮತ್ತು ಸತ್ಯವಾದ । **ಯಾ ಕಶಾ**—ಯಾವವಾಕ್ಕುಂಟೋ । **ತಯಾ**—ಅದರಿಂದ (ಯುಕ್ತರಾಗಿ ಎಂದರೆ ಒಳ್ಳೆಯಮಾತುಗಳನ್ನಾಡುತ್ತಾ) **ಯಜ್ಞಂ**—(ನಮ್ಮ) ಯಜ್ಞವನ್ನು । **ಮಿಮಿಕ್ಷತಂ**—ಸೋಮರಸಾಹುತಿಯುಕ್ತವನ್ನಾಗಿ ಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಕುದುರೆಗಳನ್ನು ಕಶಾಪ್ರಯೋಗದಿಂದ ಓಡಿಸುವಾಗ ಅವುಗಳು ಬೆವರಿನಿಂದ ನೆನೆಯುವಂತೆ, ಮಾಡುತ್ತಾ ಶೀಘ್ರವಾಗಿ ಓಡಿಸುವ ಶಬ್ದಗಳ ಪ್ರಯೋಗದಿಂದ ಕುದುರೆಗಳನ್ನು ಓಡಿಸಿಕೊಂಡು ವೇಗವಾಗಿ ಬಂದು, (ಅಥವಾ ನಿಮ್ಮ ಮೃದುವಾದ ಮತ್ತು ವರಪ್ರದಾನ ವಿಷಯದಲ್ಲಿ ಪ್ರಿಯ ಮತ್ತು ಸತ್ಯವಾದ ಮಾತಿನಿಂದ) ನಮ್ಮ ಯಜ್ಞಕ್ಕೆ ಬಂದು ಸೋಮರಸಾಹುತಿಯಲ್ಲಿ ಉದ್ಯುಕ್ತರಾಗಿರಿ (ಸೋಮಪಾನಮಾಡಿರಿ),

## English Translation.

Aswanis sprinkle the sacrifice with your whip which is full of sweet juice (honey); lash (your horses) loudly.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು— ಎಲೈ ಅಶ್ವಿನೀದೇವತೆಗಳೇ, ನೀವು ನಿಮ್ಮ ಚಾವಟಿಯಿಂದ ನಿಮ್ಮ ರಥದ ಕುದುರೆಗಳನ್ನು ಚೆನ್ನಾಗಿ ತಾಡನಮಾಡುತ್ತಾ, ಘಟ್ಟಿಯಾಗಿ ಉಚ್ಚರಿಸುವ ಶಬ್ದಗಳಿಂದ ಕುದುರೆಗಳನ್ನು ವೇಗವಾಗಿ ಚಲಿಸುವಂತೆ ಪ್ರಚೋದನೆಮಾಡುತ್ತಾ ಈ ನಮ್ಮ ಯಜ್ಞಭೂಮಿಗೆ ಬೇಗನೆ ಬಂದು ಸಿಹಿಯಾದ ಸೋಮರಸಪಾನದಿಂದ ಸಂತೋಷಗೊಂಡು ನಿಮ್ಮ ಪ್ರಿಯವಾಕ್ಯಗಳಿಂದ ನಮಗೂ ಸಂತೋಷವನ್ನುಂಟುಮಾಡಿ ಎಂದು ಮುಖ್ಯಾಭಿಪ್ರಾಯವು.

**ಕಶಾ—ಪ್ರತೋದಃ ।** ಕುದುರೆಯನ್ನು ವೇಗವಾಗಿ ಚಲಿಸುವಂತೆ ಪ್ರಚೋದನೆಮಾಡುವ ಚಾವಟಿ, whip or horsewhip.

**ಮಧುಮತೀ**—ಮಾಧುರ್ಯಯುಕ್ತವಾದ, ಕೇಳುವುದಕ್ಕೆ ಇಂಪಾದ (ಧ್ವನಿ)

**ಸೂನೃತಾವತೀ**—ಪ್ರಿಯವಾದ, ಸತ್ಯವಾದ. ಈ ಋಕ್ಕಿನಲ್ಲಿ ಮಧುಮತೀ, ಸೂನೃತಾವತೀ, ಎಂಬ ಶಬ್ದಗಳು ಕಶಾಶಬ್ದಕ್ಕೆ ವಿಶೇಷಣಪದಗಳಾಗಿದ್ದರೂ ಇವುಗಳಿಗೆ ಪ್ರತ್ಯೇಕವಾದ ಒಂದು ನಿರ್ದಿಷ್ಟಾರ್ಥವನ್ನು ಹೇಳುವುದೇ ಸಮಂಜಸವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಕಶಾ**—'ಕಶ ಗತಿಶಾತನಯೋಃ' ಧಾತು. ಇದರ ಮುಂದೆ **'ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ'** (ಪಾ. ಸೂ. ೩-೧-೧೩೪, ಎಂಬುದರಿಂದ ಪಚಾದಿಲಕ್ಷಣವಾದ ಅಚ್ ಪ್ರತ್ಯಯ ಬರುವುದು. **'ವೃಷಾದೀನಾಂ ಚ'** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತ.

**ಸೂನೃತಾವತೀ**—'ಊನ ಪರಿಹಾಣೇ' ಧಾತು ೧೦ ನೇ ಗಣ. **'ಅಪ್ರಿಯಂ ಸುಷ್ಠು ಊನಯತಿ'** ಅಪ್ರಿಯವನ್ನು ಚೆನ್ನಾಗಿ ಪರಿಹರಿಸತಕ್ಕದ್ದು ಎಂದು ವಿಗ್ರಹ ಮಾಡಿದರೆ 'ಸೂನೃ' ಎಂದಾಗುತ್ತೆ. **'ಸೂನ್-ಋತಂ= ಸತ್ಯಂ ಯಸ್ಯಾಂ ವಾಚಿ ಸಾ, ಸೂನೃತಾ'** ಎಂದು ಬಹುವ್ರೀಹಿ. ಯಾವ ಮಾತಿನಲ್ಲಿ ಅಪ್ರಿಯವನ್ನು ಚನ್ನಾಗಿ ಪರಿಹರಿಸತಕ್ಕ ಸತ್ಯವಿದೆಯೋ ಅಂತಹ ಮಾತು ಸೂನೃತಾ ಪದದಿಂದ ಬೋಧ್ಯವಾಗುವುದು. ಸೂನೃತಾ ಅಸ್ಯಾ ಅಸ್ತೀತಿ ಸೂನೃತಾ, ಕಶಾ, **'ತದಸ್ಯಾಸ್ತ್ಯಸ್ಮಿನ್ನಿತಿಮತುಪ್'** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯು, ಸೂನೃತಾ+ಮತ್ ಎಂದಿರುವಾಗ **'ಸಂಜ್ಞಾಯಾಂ'** (ಪಾ. ಸೂ. ೮-೨-೧೧) ಸಂಜ್ಞೆ ತೋರುವಾಗ ಮತುಪ್ಪಿನ ಮಕಾರಕ್ಕೆ ವಕಾರ ಬರುವುದು ಎಂಬುದರಿಂದ ಮಕಾರಕ್ಕೆ ವಕಾರ **'ಉಗಿತಶ್ಚ'** (ಪಾ. ಸೂ. ೬-೩-೪೫) ಎಂಬುದರಿಂದ ಙೀಪ್. ಸೂನೃತಾವತೀ. ಈ ಸಂಜ್ಞೆ ಇರುವ ಯಾವ ಕಶಾ ಎಂದರೆ ವಾಕ್ ಇದೆಯೋ ಎಂದು ಅರ್ಥ.

**ಮಿಮಿಕ್ಷತಮ್**—'ಮಿಹ ಸೇಚನೇ' ಧಾತು ಇದರ ಮುಂದೆ **'ಧಾತೋಃ ಕರ್ಮಣಃ-'** (ಪಾ. ಸೂ. ೩-೧-೭) ಎಂಬುದರಿಂದ ಸನ್, **'ಸನ್ಯಙೋಃ'** (ಪಾ. ಸೂ. ೬-೧-೯) ಎಂಬುದರಿಂದ ದ್ವಿತ್ವ **'ಹಲಾದಿಃ ಶೇಷಃ'** (ಪಾ. ಸೂ. ೭-೪-೬೦) ಎಂಬುದರಿಂದ ಹಕಾರಕ್ಕೆ ನಿವೃತ್ತಿ. ಮಿ ಮಿಹ್+ಸ **'ಹಲಂತಾಚ್ಚ'** (ಪಾ. ಸೂ. ೧-೨-೧೦) ಇ ಉ ಋ ಇವುಗಳ ಸಮೀಪದಲ್ಲಿರುವ ವ್ಯಂಜನದ ಮುಂದೆ ಇರುವ ಝಲಾದಿಯಾದ ಸನ್ ಪ್ರತ್ಯಯವು ಕಿತ್ತಾಗುವುದು ಎಂಬುದರಿಂದ ಸ ಕಿತ್ **'ವಸತಿರ್ದಹ್‌ದಿಹಿದುಹೋ ನಹ್ ಮಿಹ್ ರುಹ್ ಲಿಹ್ ವಹಿಸ್ತಥಾ'** (ಪಾ. ಸೂ. ೨-೭-೧೦೨ ಕಾ. ೬) ಎಂದು ಅನಿಟ್‌ಕಾರಿಕೆಯಲ್ಲಿ ಪಾಠವಿರುವುದರಿಂದ ಸನ್ನಿಗೆ ಇಡಾಗಮ ಬರುವುದಿಲ್ಲ. ಆದ್ದರಿಂದ ಸ ಝಲಾದಿಯಾಗುತ್ತೆ. ಹೀಗೆ ಸ ಪ್ರತ್ಯಯವು ಕಿತ್ತಾದ್ದರಿಂದ **'ಕ್ಙಿತಿಚ'** ಎಂದು ಗುಣ ನಿಷೇಧ ಬರುವ ಕಾರಣ **'ಪುಗಂತಲಘೂಪಧಸ್ಯಚ'** (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧ ಗುಣಬರುವುದಿಲ್ಲ. ಮಿ ಮಿಹ್+ಸ ಈಗ **'ಹೋಢಃ'** (ಪಾ. ಸೂ. ೮-೨-೩೧) ಪದಾಂತ ವಿಷಯದಲ್ಲೂ ಝಲ್ ವರ್ಣಪರದಲ್ಲಿರುವಾಗಲೂ ಹಕಾರಕ್ಕೆ ಢಕಾರ ಬರುವುದು ಎಂಬುದರಿಂದ ಹಕಾರಕ್ಕೆ ಢಕಾರ **'ಷಢೋಃಕಸ್ಸಿ'** (ಪಾ. ಸೂ. ೮-೨-೪೧) ಸಕಾರಪರದಲ್ಲಿರುವಾಗ ಷಕಾರ ಢಕಾರಗಳಿಗೆ ಕಕಾರಬರುವುದು ಎಂಬುದರಿಂದ ಢಕಾರಕ್ಕೆ ಕಕಾರ, ಮಿ ಮಿಕ್+ಸ **'ಆದೇಶಪ್ರತ್ಯಯಯೋಃ'** (ಪಾ. ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷಕಾರ, ಮಿ ಮಿಕ್ಷ. ಇದಕ್ಕೆ **'ಸನಾದ್ಯನ್ತಾಧಾತವಃ'** (ಪಾ. ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆ ಇದೆ. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಗೆ ತಮ್ ಆದೇಶ ಬಂದರೆ ಮಿಮಿಕ್ಷತಂ ಎಂದಾಗುವುದು ॥ ೩ ॥

॥ ಸಂಹಿತಾಪಾಠಃ ॥

ಹಿರಣ್ಯಪಾಣಿಮೂತಯೇ ಸವಿತಾರಮುಪ ಹ್ವಯೇ ।
ಸ ಚೇತ್ತಾ ದೇವತಾ ಪದಂ ॥ ೫ ॥

॥ ಪದಪಾಠಃ ॥

ಹಿರಣ್ಯಽಪಾಣಿಂ । ಊತಯೇ । ಸವಿತಾರಂ । ಉಪ । ಹ್ವಯೇ ।
ಸಃ । ಚೇತ್ತಾ । ದೇವತಾ । ಪದಂ ॥ ೫ ॥

॥ ಸಾಯಣಭಾಷ್ಯಂ ॥

ವ್ಯೂಢಸ್ಯ ದ್ವಿತೀಯೇ ಛಂದೋಮೇ ವೈಶ್ವದೇವಶಸ್ತ್ರೇ ಹಿರಣ್ಯಪಾಣಿಮೂತಯ ಇತಿ ಸಾವಿತ್ರ್ಯಶ್ಚತಸ್ರಃ । ದ್ವಿತೀಯಸ್ಯೇತಿ ಖಂಡೇ ಸೂತ್ರಿತಂ । ಹಿರಣ್ಯಪಾಣಿಮೂತಯ ಇತಿ ಚತಸ್ರೋ ಮಹೀ ದ್ಯೌಃ ಪೃಥಿವೀ ಚ ನಃ । ಆ. ೮-೧೦ । ಇತಿ ॥

ಊತಯೇಽಸ್ಮದ್ರಕ್ಷಣಾರ್ಥಂ ಸವಿತಾರಂ ದೇವಮುಪ ಹ್ವಯೇ । ಆಹ್ವಯಾಮಿ । ಸ ಚ ಸವಿತಾ ದೇವ ಏತನ್ಮಂತ್ರಪ್ರತಿಪಾದ್ಯದೇವತಾ ಭೂತ್ವಾ ಪದಂ ಯಜಮಾನೇನ ಪ್ರಾಪ್ಯಂ ಸ್ಥಾನಂ ಚೇತ್ತಾ । ಜ್ಞಾಪಯಿತಾ ಭವತಿ । ಕೀದೃಶಂ ಸವಿತಾರಂ । ಹಿರಣ್ಯಪಾಣಿಂ ಯಜಮಾನಾಯ ದಾತುಂ ಹಸ್ತೇ ಸುವರ್ಣಧಾರಿಣಂ । ಯದ್ವಾ । ದೇವಕರ್ತೃಕೇ ಯಾಗೇ ಸವಿತಾ ಸ್ವಯಮೃತ್ವಿಗ್ಭೂತ್ವಾ ಬ್ರಹ್ಮತ್ವೇನಾವಸ್ಥಿತಃ । ತದಾನೀಂ ಕಸ್ಯಾಂಚಿದಿಷ್ಟಾವಧ್ವರ್ಯವಸ್ತಸ್ಮೈ ಸವಿತ್ರೇ ಬ್ರಹ್ಮಣೇ ಪ್ರಾಶಿತ್ರನಾಮಕಂ ಪುರೋಡಾಶಭಾಗಂ ದತ್ತವಂತಃ । ತಚ್ಚ ಪ್ರಾಶಿತ್ರಂ ಹಸ್ತೇ ಸವಿತ್ರಾ ಗೃಹೀತಂ ಸತ್ತದೀಯಪಾಣಿಂ ಚಿಚ್ಛೇದ । ತತಃ ಪ್ರಾಶಿತ್ರಸ್ಯ ದಾತಾರೋಽಧ್ವರ್ಯವಃ ಸುವರ್ಣಮಯಂ ಪಾಣಿಂ ನಿರ್ಮಾಯ ಪ್ರಕ್ಷಿಪ್ತವಂತಃ । ಸೋಽಯಮರ್ಥಃ ಕೌಷೀತಕಿಬ್ರಾಹ್ಮಣೇ ಸಮಾಮ್ನಾತಃ । ಸವಿತ್ರೇ ಪ್ರಾಶಿತ್ರಂ ಪ್ರತಿಜಹ್ರುಸ್ತತ್ತಸ್ಯ ಪಾಣೀ ಪ್ರಚಿಚ್ಛೇದ ತಸ್ಮೈ ಹಿರಣ್ಮಯೌ ಪ್ರತಿದಧುಸ್ತಸ್ಮಾದ್ಧಿರಣ್ಯಪಾಣಿರಿತಿ ಸ್ತುತ ಇತಿ । ಹಿರಣ್ಯಶಬ್ದಂ ಪಾಣಿಶಬ್ದಂ ಚ ಯಾಸ್ಕ ಏವಂ ನಿರ್ವಕ್ತಿ । ಹಿರಣ್ಯಂ ಕಸ್ಮಾದ್ಧ್ರಿಯತ ಆಯಮ್ಯಮಾನಮಿತಿ ವಾ ಹ್ರಿಯತೇ ಜನಾಜ್ಜನಮಿತಿ ವಾ ಹಿತರಮಣಂ ಭವತೀತಿ ವಾ ಹರ್ಯತೇರ್ವಾ ಸ್ಯಾತ್ಪ್ರೇಪ್ಸಾಕರ್ಮಣಃ । ನಿ. ೨-೧೦ । ಇತಿ । ತಥಾ ಪಾಣಿಃ । ಪಣಾಯತೇಃ ಪೂಜಾಕರ್ಮಣಃ । ನಿ. ೨-೨೬ । ಇತಿ ॥ ಹಿರಣ್ಯಶಬ್ದೋ ನಬ್ವಿಷಯತ್ವಾದಾದ್ಯುದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಊತಯೇ । ಉದಾತ್ತ ಇತ್ಯನುವೃತ್ತಾವೂತಿಯೂತಿಜೂತಿಸಾತೀತ್ಯಾದಿನಾ ಕ್ತಿನಂತೋಽಂತೋದಾತ್ತೋ ನಿಪಾತಿತಃ ।

**ಸವಿತಾರಂ । ತೃಚಶ್ಛಿತ್ವಾತ್ಸ್ವದಂತೋದಾತ್ತತ್ವಂ । ಚೇತ್ತಾ । ಚಿತೀ ಸಂಜ್ಞಾನೇ । ಅಸ್ಮಾದಂತರ್ಭಾವಿತ-ಣ್ಯರ್ಥಾತ್ತಾಚ್ಛೀಲ್ಯೇ ತೃನ್ । ಅನಿತ್ಯಮಾಗಮಶಾಸನಮಿತೀಡಭಾವಃ । ನಿತ್ವಾತ್ಸ್ವದಾದ್ಯುದಾತ್ತಃ । ದೇವತಾ । ದೇವಾತ್ತಲ್ । ಪಾ. ೫-೪-೨೭ । ಇತಿ ಸ್ವಾರ್ಥೇ ತಲ್ । ಲಿತೀತಿ ಪ್ರತ್ಯಯಾತ್ಪೂರ್ವಮುದಾ-ತ್ತತ್ವಂ । ಪದಶಬ್ದಃ ಪಚಾದ್ಯಜಂತಃ । ಚಿತ ಇತ್ಯಂತೋದಾತ್ತಃ ॥ ೪ ॥**

॥ ಪ್ರತಿಪದಾರ್ಥ ॥

**ಊತಯೇ**—(ನಮ್ಮ) ರಕ್ಷಣೆಗೋಸ್ಕರ । **ಹಿರಣ್ಯಪಾಣಿಂ**—(ಯಜಮಾನನಿಗೋಸ್ಕರ) ಕೈಯಲ್ಲಿ ಹಿರಣ್ಯವನ್ನು ಹಿಡಿದಿರುವ ಅಥವಾ ಹಿರಣ್ಯಮಯವಾದ ಕೈಯುಳ್ಳ । **ಸವಿತಾರಂ**—ಸವಿತೃನಾಮಕ ದೇವತೆಯನ್ನು (ಸೂರ್ಯನನ್ನು) । **ಉಪ ಹ್ವಯೇ**—ಆಹ್ವಾನಿಸುತ್ತೇನೆ । **ಸಃ**—ಆ ಸವಿತೃವು । **ದೇವತಾ**—(ಮಂತ್ರ ಪ್ರತಿಪಾದ್ಯ) ದೇವತೆಯಾಗಿ । **ಪದಂ**—(ಯಜಮಾನನಿಂದ ಪ್ರಾಪ್ಯವಾದ) ಸ್ಥಾನವನ್ನು । **ಚೇತ್ತಾ**—ಜ್ಞಾಪಿಸುತ್ತಾನೆ, (ತಿಳಿಸುತ್ತಾನೆ).

॥ ಭಾವಾರ್ಥ ॥

ಯಜಮಾನನಿಗೆ ಕೊಡುವುದಕ್ಕೋಸ್ಕರ ಹಿರಣ್ಯವನ್ನು ಕೈಯಲ್ಲಿ ಹಿಡಿದಿರುವ ಸವಿತೃದೇವತೆಯು ನಮ್ಮನ್ನು ರಕ್ಷಿಸಲಿ. ನಮ್ಮಿಂದ ಆಹೂತನಾಗಿ ಬಂದು ಯಜಮಾನನಿಂದ ಪ್ರಾಪ್ಯವಾದ ಸ್ಥಾನವನ್ನು ತಿಳಿಸಲಿ.

English Translation.

I invoke Savitri, the golden-handed (or with gold in his hand) to protect me; among gods he is the one who appoints the place of the worshipper.

॥ ವಿಶೇಷವಿಷಯಗಳು ॥

**ಹಿರಣ್ಯಪಾಣಿಂ—ಯಜಮಾನಾಯ ದಾತುಂ ಹಸ್ತೇ ಸುವರ್ಣಧಾರಿಣಂ ।** ಯಜಮಾನನಿಗೆ ಕೊಡುವುದಕ್ಕಾಗಿ ಕೈಯಲ್ಲಿ ಹಿರಣ್ಯವನ್ನು (ಚಿನ್ನ) ಹಿಡಿದಿರುವುದರಿಂದ ಹಿರಣ್ಯಪಾಣಿ ಎಂದು ಹೆಸರು. ಅಥವಾ **ಹಿರಣ್ಯ-ಮಯೌ ಪಾಣೀ ಯಸ್ಯ ಸಃ**—ಸುವರ್ಣಮಯವಾದ ಕೈಗಳುಳ್ಳವನಾದುದರಿಂದ ಹಿರಣ್ಯಪಾಣಿ ಎಂದು ಹೆಸರು. ಈ ವಿಷಯದಲ್ಲಿ ಕೌಷೀತಕೀಬ್ರಾಹ್ಮಣದಲ್ಲಿ ಒಂದು ಉಪಾಖ್ಯಾನವಿರುವುದೆಂದು ಭಾಷ್ಯಕಾರರು ಹೇಳಿರುವರು.

> **ದೇವಕರ್ತೃಕೇ ಯಾಗೇ ಸವಿತಾ ಸ್ವಯಮೃತ್ವಿಗ್ಭೂತ್ವಾ ಬ್ರಹ್ಮತ್ವೇನಾವಸ್ಥಿತಃ । ತದಾನೀಂ ಕಸ್ಯಾಂಚಿದಿಷ್ಟಾವಧ್ವರ್ಯವಸ್ತಸ್ಮೈ ಸವಿತ್ರೇ ಬ್ರಹ್ಮಣೇ ಪ್ರಾಶಿತ್ರನಾಮಕಂ ಪುರೋಡಾಶ-ಭಾಗಂ ದತ್ತವಂತಃ । ತಚ್ಚ ಪ್ರಾಶಿತ್ರಂ ಹಸ್ತೇ ಸವಿತ್ರಾ ಗೃಹೀತಂ ಸತ್ತದೀಯಪಾಣಿಂ ಚಿಚ್ಛೇದ । ತತಃ ಪ್ರಾಶಿತ್ರಸ್ಯ ದಾತಾರೋಽಧ್ವರ್ಯವಃ ಸುವರ್ಣಮಯಂ ಪಾಣಿಂ ನಿರ್ಮಾಯ ಪ್ರಕ್ಷಿಪ್ತವಂತಃ ॥ ಸವಿತ್ರೇ ಪ್ರಾಶಿತ್ರಂ ಪ್ರತಿಜಹ್ರುಸ್ತತ್ತಸ್ಯ ಪಾಣೀ ಪ್ರಚಿಚ್ಛೇದ ತಸ್ಮೈ ಹಿರಣ್ಮಯೌ ಪ್ರತಿದಧುಸ್ತಸ್ಮಾದ್ಧಿರಣ್ಯಪಾಣಿರಿತಿ ಸ್ತುತ ಇತಿ ॥**

ದೇವತೆಗಳು ಯಜ್ಞಮಾಡುತ್ತಿದ್ದಾಗ ಸವಿತೃವು ತಾನೂ ಋತ್ವಿಕ್ಕುಗಳಲ್ಲಿ ಒಬ್ಬನಾಗಿದ್ದನು. ಆದರೆ ಋತ್ವಿಕ್ಕಿನ ಕರ್ತವ್ಯವನ್ನು ನಿರ್ವಹಿಸುವುದಕ್ಕೆ ಬದಲಾಗಿ ಬ್ರಹ್ಮನ ಸ್ಥಾನದಲ್ಲಿ ಕುಳಿತಿದ್ದನು. ಆಗ ಆ ಯಜ್ಞದಲ್ಲಿದ್ದ ಅಧ್ವರ್ಯುಗಳೆಂಬ ಋತ್ವಿಕ್ಕುಗಳು ಬ್ರಹ್ಮನ ಸ್ಥಾನದಲ್ಲಿ ಕುಳಿತಿರುವ ಈ ಸವಿತೃವೇ ಬ್ರಹ್ಮನೆಂದು ತಿಳಿದು ಬ್ರಹ್ಮನಿಗೆ ಕೊಡಬೇಕಾದ ಪ್ರಾಶಿತ್ರವೆಂಬ ಪುರೋಡಾಶಭಾಗವನ್ನು ತಿಳಿಯದೆ ಕೊಟ್ಟರು. ಆದರೆ ಕೂಡಲೆ ಆ ಪ್ರಮಾದವು ತಿಳಿದದ್ದರಿಂದ ಸವಿತೃವು ಪುರೋಡಾಶವನ್ನು ಭಕ್ಷಿಸುವುದಕ್ಕೆ ಮೊದಲೇ ಪುರೋಡಾಶವನ್ನು ಹಿಡಿದಿದ್ದ ಅವನ ಹಸ್ತಗಳನ್ನು ಕತ್ತರಿಸಿದರು. ಸವಿತೃವಿಗೆ ಕೈಯಿಗಳಿಲ್ಲದೇ ಹೋಗಲು ಅಧ್ವರ್ಯುಗಳು ಸುವರ್ಣಮಯವಾದ ಹಸ್ತಗಳನ್ನು ನಿರ್ಮಿಸಿ ಸವಿತೃವಿಗೆ ಅದನ್ನು ಜೋಡಿಸಿದರು. ಈ ರೀತಿಯಾಗಿ ಸವಿತೃವಿನ ಕೈಗಳು ಸುವರ್ಣದಿಂದ ನಿರ್ಮಿತವಾದ್ದರಿಂದ ಸವಿತೃವು ಹಿರಣ್ಯಪಾಣಿಯೆಂದು ಸ್ತುತಿಸಲ್ಪಡುತ್ತಾನೆ ಎಂದು ಈ ಉಪಾಖ್ಯಾನದ ಮುಖ್ಯಾಭಿಪ್ರಾಯವು.

ಹಿರಣ್ಯಶಬ್ದದ ಮತ್ತು ಪಾಣಿಶಬ್ದದ ನಿರ್ವಚನವನ್ನು ಯಾಸ್ಕರು ಈ ರೀತಿ ವಿವರಿಸಿರುವರು—

**ಹಿರಣ್ಯಂ ಕಸ್ಮಾದ್ಧ್ರಿಯತ ಆಯಮ್ಯಮಾನಮಿತಿ ವಾ ।**
**ಹ್ರಿಯತೇ ಜನಾಜ್ಜನಮಿತಿ ವಾ ।**
**ಹಿತರಮಣಂ ಭವತೀತಿ ವಾ ।**
**ಹರ್ಯತೇರ್ವಾ ಸ್ಯಾತ್ಪ್ರೇಪ್ಸಾಕರ್ಮಣಃ ॥** (ನಿ. ೨-೧೦).

ಚಿನ್ನಕ್ಕೆ ಹಿರಣ್ಯವೆಂದು ಹೆಸರು ಬರುವುದಕ್ಕೆ ಅನೇಕ ಕಾರಣಗಳಿರುವವು. ಶಿಲ್ಪಿ ಮೊದಲಾದವರು ಕಟಕಾದ್ಯಾಭರಣಗಳನ್ನು ಮಾಡಿ ಅದರ ಪ್ರಾಶಸ್ತ್ಯವನ್ನು ವಿಸ್ತರಿಸುವರು ಆದುದರಿಂದ ಇದಕ್ಕೆ ಹಿರಣ್ಯವೆಂದು ಹೆಸರು; ವ್ಯಾಪಾರಾದಿ ವ್ಯವಹಾರಗಳಲ್ಲಿ ಜನರು ಇದನ್ನು ಉಪಯೋಗಿಸುವುದರಿಂದ ಇದಕ್ಕೆ ಹಿರಣ್ಯವೆಂದು ಹೆಸರು; ಇದು ಯಾರಲ್ಲಿರುವುದೋ ಅವರಿಗೆ ಕಷ್ಟಕಾಲಗಳಲ್ಲಿ ಸಹಾಯವಾಗಿ ಒದಗಿ ಹಿತವನ್ನುಂಟುಮಾಡುವುದರಿಂದ ಇದಕ್ಕೆ ಹಿರಣ್ಯವೆಂದು ಹೆಸರು; ಇದು ಮನಸ್ಸಿಗೆ ಸಂತೋಷವನ್ನುಂಟುಮಾಡುವುದರಿಂದ ಹಿರಣ್ಯವೆಂದು ಹೆಸರು. ಇದನ್ನು ಎಲ್ಲರೂ ಬಯಸುವುದರಿಂದಲೂ ಸಮಸ್ತಕಾರ್ಯಗಳಿಗೂ ಇದು (ಧನರೂಪದಲ್ಲಿ) ಪ್ರಚೋದಕವಾದುದರಿಂದ ಇದಕ್ಕೆ ಹಿರಣ್ಯವೆಂದು ಹೆಸರು.

ಪಾಣಿಶಬ್ದದ ನಿರ್ವಚನವು—

**ಪಾಣಿಃ ಪಣಾಯತೇಃ ಪೂಜಾ ಕರ್ಮಣಃ ಪ್ರಗೃಹ್ಯ ಪಾಣೀ ದೇವಾನ್ ಪೂಜಯಂತಿ ॥** (ನಿ. ೨-೨೬).

ದೇವತೆಗಳನ್ನು ಪೂಜೆಮಾಡುವುದಕ್ಕಾಗಿ ಇವುಗಳನ್ನು ಜೋಡಿಸಿ ಮತ್ತು ಅಗಲವಾಗಿ ಮಾಡಿ ಪೂಜೆಮಾಡುವುದರಿಂದ ಪಾಣಿ ಎಂದು ಹೆಸರು. ಹಿರಣ್ಯಪಾಣಿ ಎಂದರೆ ಕೈಯಲ್ಲಿ ಹಿರಣ್ಯವಿರುವವನು ಅಥವಾ ಹಿರಣ್ಯಮಯವಾದ (ಹಿರಣ್ಯದಿಂದ ನಿರ್ಮಿಸಿದ) ಕೈಗಳುಳ್ಳವನು ಎಂದರ್ಥವು.

**ಸವಿತಾರಂ**— ಸವಿತೃವನ್ನು. ಸವಿತೃಶಬ್ದಕ್ಕೆ ಯಾಸ್ಕರು—

**ಸವಿತಾ ಸರ್ವಸ್ಯ ಪ್ರಸವಿತಾ** ॥ (ನಿ. ೧೦-೩೧).
**ಆದಿತ್ಯೋಽಪಿ ಸವಿತೋಚ್ಯತೇ** ॥ (ನಿ. ೧೦-೩೨).

ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ಜನರಿಗೆ ಬೇಕಾದ ಸಮಸ್ತ ಇಷ್ಟಾರ್ಥಗಳನ್ನು ಉಂಟುಮಾಡುವುದರಿಂದ ಎಂದರೆ ಕೊಡುವುದರಿಂದ ಈ ದೇವತೆಗೆ ಸವಿತೃವೆಂದು ಹೆಸರು. ಆದಿತ್ಯನಿಗೂ ಸವಿತೃ (ಸೂರ್ಯ) ವೆಂದು ಹೆಸರು ಎಂದು.

**ಸ ಚೇತ್ತಾ ದೇವತಾ ಪದಂ—ಸ ಚ ಸವಿತಾ ಯಜಮಾನೇನ ಪ್ರಾಪ್ಯಸ್ಥಾನಂ ಜ್ಞಾಪಯಿತಾ ಭವತಿ**—ಈ ಸವಿತೃವು ಯಜಮಾನನು ಪಡೆಯಲರ್ಹವಾದ ಸ್ಥಾನವನ್ನು ಜ್ಞಾಪಿಸುವನು ಎಂದು ಭಾಷ್ಯಕಾರರು ಈ ವಾಕ್ಯಕ್ಕೆ ಅರ್ಥವಿವರಣೆಮಾಡಿರುವರು. ಆದರೂ ಅರ್ಥವು ಸರಿಯಾಗಿ ಹೊಂದುವುದಿಲ್ಲ. ಋಷಿಯ ಆಶಯ ವೇನೆಂಬುದು ಸ್ಪಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಹಿರಣ್ಯಪಾಣಿಂ**—ಹಿರಣ್ಯಶಬ್ದವು ನಿತ್ಯನಪುಂಸಕಲಿಂಗ, **'ನಬ್ವಿಷಯಸ್ಯಾನಿ ಸಂತಸ್ಯ'** (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತ ಅಥವಾ **'ಇನ್ದ್ರೋ ವಜ್ರೀ ಹಿರಣ್ಯಯಃ'** (ಋ. ಸಂ ೧-೭-೨) ರಲ್ಲಿ ವರ್ಣಿಸಿರುವಂತೆ **'ಹರ್ಯತೇಃ ಕನ್ಯನ್ ಹಿರಚ್'** (ಉ. ಸೂ. ೫-೭೨೨) ಎಂಬುದರಿಂದ ಕನ್ಯನ್‌ಪ್ರತ್ಯಯಾಂತವಾದ್ದರಿಂದ ನಿತ್ಸ್ವರದಿಂದ ಆದ್ಯುದಾತ್ತ. **'ಹಿರಣ್ಯಂ ಪಾಣೌ ಯಸ್ಯ ಸಃ'** ಎಂದು ಬಹುವ್ರೀಹಿ. **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್'** (ಪಾ. ಸೂ. ೬-೧-೭) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು.

**ಊತಯೇ**—**'ಉದಾತ್ತಃ'** (ಪಾ. ಸೂ. ೩-೩-೯೬) ಎಂಬ ಪದವು ಅನುವೃತ್ತವಾಗಲು **'ಊತಿಯೂತಿ ಜೂತಿಸಾತಿಹೇತಿ ಕೀರ್ತಯಶ್ಚ'** (ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್‌ಪ್ರತ್ಯಯಾಂತವಾಗಿಯೂ ಅಂತೋದಾತ್ತವಾಗಿಯೂ ನಿಪಾತಿತವಾಗಿರುವುದು.

**ಸವಿತಾರಮ್**—**'ಷೂ ಪ್ರೇರಣೇ'** ಧಾತು. **'ಧಾತ್ವಾದೇಃ ಷಃ ಸಃ'** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ, **'ಣ್ವುಲ್‌ತೃಚೌ'** (ಪಾ. ಸೂ. ೩-೧-೧೩೩) ಎಂಬುದರಿಂದ ತೃಚ್—ಸೂ+ತೃ-ಇಡಾಗಮ-ಗುಣ-ಅವಾದೇಶ-ಸವಿತೃ. ದ್ವಿತಿಯಾ ಏಕವಚನದಲ್ಲಿ ಸವಿತಾರಮ್ ಎಂದಾಗುತ್ತೆ. ತೃಚ್ ಪ್ರತ್ಯಯವು ಚಕಾರೇತ್ಸಂಜ್ಞಿಕ, ಆದ್ದರಿಂದ **'ಚಿತಃ'** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರಬರುವುದು.

**ಚೇತ್ತಾ**—**'ಚಿತೀ ಸಂಜ್ಞಾನೇ'** ಧಾತು ಇದರ ಮುಂದೆ **'ತೃನ್'** (ಪಾ. ಸೂ. ೩-೨-೧೩೫) ತಚ್ಛೀಲ, ತದ್ಧರ್ಮ, ತತ್ಸಾಧುಕಾರಿಗಳು ಕರ್ತೃಗಳಾಗಿದ್ದಾಗ ಧಾತುವಿನ ಮುಂದೆ ತೃನ್‌ಪ್ರತ್ಯಯ ಬರುವುದು ಎಂಬುದರಿಂದ ತೃನ್ ಪ್ರತ್ಯಯ, **'ಅನಿತ್ಯಮಾಗಮಶಾಸನಮ್'** (ಪರಿಭಾ. ೬೬) ಎಂಬುದರಿಂದ ಇಡಾಗಮವಿಧಾಯಕವಾದ ಶಾಸ್ತ್ರವೂ ಅನಿತ್ಯವಾದ್ದರಿಂದ ಇಲ್ಲಿ ಇಡಾಗಮ ಬರುವುದಿಲ್ಲ. **'ಪುಗಂತಲಘೂಪಧಸ್ಯ ಚ'** (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ. ಪ್ರಥಮೈಕವಚನ ಸುಪ್ರತ್ಯಯ ಚೇತ್ತೃ-ಸು **'ಋದುಶನಸ್ಪುರುದಂಸೋಽನೇಹಸಾಂ ಚ'** (ಪಾ. ಸೂ. ೭-೧-೯೪) ಸಂಬುದ್ಧಿಯಲ್ಲದ ಸುಪ್ರತ್ಯಯಪರದಲ್ಲಿರುವಾಗ ಋಕಾರಾಂತ ಶಬ್ದಗಳಿಗೂ,

ಉಶನಸಾದಿ ಶಬ್ದಗಳಿಗೂ ಸಹ ಅನಙ್ ಆದೇಶ ಬರುವುದು ಎಂಬುದರಿಂದ ಅನಙ್ ಆದೇಶ. ಚೇತನ್+ಸ್ **'ಅಪ್ತೃನ್ತೃಚ್ ಸ್ವಸೃ ನಪ್ತೃನೇಷ್ಟೃ ತ್ವಷ್ಟೃ ಕ್ಷತ್ತೃ ಹೋತೃ ಪೋತೃಪ್ರಶಾಸ್ತೄಣಾಂ-'** (ಪಾ. ಸೂ. ೬-೪-೧೧) ಸಂಬುದ್ಧಿಯನ್ನುಳಿದ ಸರ್ವನಾಮಸ್ಥಾನ ಪರದಲ್ಲಿರುವಾಗ ಅಬಾದಿಗಳ ಉಪಾಂತ್ಯವರ್ಣಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘ, **'ಹಲ್ಙ್ಯಾಬ್ಭ್ಯಃ'** (ಪಾ. ಸೂ. ೬-೧-೬೮) ಎಂಬುದರಿಂದ ಸುಲೋಪ, **ನಲೋಪಃಪ್ರಾತಿಪದಿಕಾಂತಸ್ಯ'** (ಪಾ. ಸೂ. ೮-೨-೭) ಎಂಬುದರಿಂದ ನಕಾರ ಲೋಪ, ಚೇತ್ತಾ ಎಂದಾಗುವುದು ಪ್ರತ್ಯಯು ನಿತ್, **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಬರುವುದು.

**ದೇವತಾ-'ದೇವಾತ್ತಲ್'** (ಪಾ. ಸೂ. ೫-೪-೨೭) ದೇವಶಬ್ದದ ಮುಂದೆ ಸ್ವಾರ್ಥದಲ್ಲಿ ತಲ್‌ಪ್ರತ್ಯಯು-ಬರುವುದು ಎಂಬುದರಿಂದ ತಲ್ ಪ್ರತ್ಯಯು, **'ಲಿತಿ'** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಹಿಂದೆ-ಇರುವ ವಕಾರವು ಉದಾತ್ತ.

**ಪದಂ—'ಪದ ಗತೌ'** ಧಾತು. **'ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ'** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯು, **'ಚಿತಃ'**:ಎಂಬುದರಿಂದ ಅಂತೋದಾತ್ತ. ॥ ೫ ॥

॥ ಸಂಹಿತಾಪಾಠಃ ॥

ಅಪಾಂ ನಪಾತಮವಸೇ ಸವಿತಾರಮುಪ ಸ್ತುಹಿ ।
ತಸ್ಯ ವ್ರತಾನ್ಯುಶ್ಮಸಿ ॥ ೬ ॥

॥ ಪದಪಾಠಃ ॥

ಅಪಾಂ । ನಪಾತಂ । ಅವಸೇ । ಸವಿತಾರಂ । ಉಪ । ಸ್ತುಹಿ ।
ತಸ್ಯ । ವ್ರತಾನಿ । ಉಶ್ಮಸಿ ॥ ೬ ॥

॥ ಸಾಯಣಭಾಷ್ಯಂ ॥

**ಅತ್ರ ಹೋತಾ ಸಾಮುಗಮೃತ್ವಿಜಮನ್ಯಂ ವಾ ಶಸ್ತ್ರಿಣಂ ಬ್ರೂತೇ । ಅವಸೇಽಸ್ಮಾನ್ರಕ್ಷಿತುಂ ಸವಿ-ತಾರಮುಪ ಸ್ತುಹಿ । ತಸ್ಯ ಸವಿತುಃ ಸಂಬಂಧೀನಿ ವ್ರತಾನಿ ಕರ್ಮಾಣಿ ಸೋಮಯಾಗಾದಿರೂಪಾಣ್ಯು-ಶ್ಮಸಿ । ಕಾಮಯಾಮಹೇ । ಕೀದೃಶಂ ಸವಿತಾರಂ । ಅಪಾಂ ನಪಾತಂ ಜಲಸ್ಯ ನ ಪಾಲಕಂ । ಸಂತಾಪೇನ**

ಶೋಷಕ ಮಿತ್ಯರ್ಥಃ ॥ ಅಪಾಂ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ನಪಾತಂ । ಪಾ ರಕ್ಷಣೇ । ಅಸ್ಯ ಶತ್ರಂತಃ ಪಾಚ್ಛಬ್ದಃ । ತಸ್ಯ ನಞಾ ಸಮಾಸೇ ನಭ್ರಾಣ್ನಪಾದಿತ್ಯಾದಿನಾ ನಲೋಪಪ್ರತಿಷೇಧ ಇತಿ ವೃತ್ತಿಕಾರಃ । ಅಗ್ನಿರ್ಹ್ಯರ್ಥೋ ನ ಪಾತಿ ತಚ್ಛೋಷಕತ್ವಾತ್ । ತರ್ಹಿ ಕಥಮಪಾಮಿತಿ ಷಷ್ಠೀ । ನ ಲೋಕಾವ್ಯಯನಿಷ್ಠಾಖಲರ್ಥೇತಿ । ಪಾ. ೨-೩-೬೯ । ಕರ್ಮಣಿ ಷಷ್ಠ್ಯಾಃ ಪ್ರತಿಷೇಧಾದಿತಿ ಚೇತ್ । ತರ್ಹ್ಯೇಷಾ ಶೇಷಲಕ್ಷಣಾಸ್ತು । ಅಗ್ನ್ಯಾದಿತ್ಯಾವಪಾಂ ಕಾರಣತಯಾ ಸಂಬಂಧಿನಾವಗ್ನೇರಾಪ ಇತಿ ಶ್ರುತೇಃ । ಆದಿತ್ಯಾಜ್ಜಾಯತೇ ವೃಷ್ಟಿಃ । ಮನು. ೩-೭೬ । ಇತಿ ಸ್ಮೃತೇಶ್ಚ । ಅಸ್ಮಿನ್ಪಕ್ಷೇ ಉಗಿದಚಾಮಿತಿ ನುಮಭಾವೋಽಪಿ ನಿಪಾತನಾದೇವೇತಿ ಮಂತವ್ಯಂ । ಪಾತೇಃ ಕ್ವಿಬಂತಸ್ಯ ತುಗ್ವಾ ನಿಪಾತನಾದ್ದ್ರಷ್ಟವ್ಯಃ। ಅಥವಾ ನ ಪಾತಯತೀತಿ ನಪಾತ್ । ಪಚ್ಲ್ಯ ಗತಾವಿತಿ ಧಾತೋರ್ಣ್ಯಂತಾತ್ಕ್ವಿಪ್ । ಅಗ್ನ್ಯಾದಿತ್ಯೌ ಹ್ಯಪಾಂ ನ ಪ್ರಾಪಕೌ ಪ್ರತ್ಯುತ ತಚ್ಛೋಷಕೌ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅವಸೇ । ತುಮರ್ಥೇ ಸೇಸೇನಿತ್ಯಾದಿನಾ ಅಸೇನ್ । ನಿತ್ತ್ವಾದಾದ್ಯುದಾತ್ತಃ । ಉಶ್ಮಸಿ । ವಶ ಕಾಂತೌ । ಅದಿಪ್ರಭೃತಿಭ್ಯ ಇತಿ ಶಪೋ ಲುಕ್ । ಇದಂತೋ ಮಸಿರಿತೀಕಾರೋಪಜನಃ ॥

॥ ಪ್ರತಿಪದಾರ್ಥ ॥

**ಅಪಾಂ**—ಜಲದ । **ನಪಾತಂ**—ರಕ್ಷಕನಲ್ಲದ (ಶೋಷಿಸುವ) । **ಸವಿತಾರಂ**—ಸವಿತೃವನ್ನು । **ಅವಸೇ**—ನಮ್ಮ ರಕ್ಷಣೆಗಾಗಿ । **ಉಪ ಸ್ತುಹಿ**—ಸ್ತುತಿಸು । **ತಸ್ಯ**—ಅವನ ಸಂಬಂಧವಾದ । **ವ್ರತಾನಿ**—ಸೋಮಯಾಗಾದಿ ಕರ್ಮಗಳನ್ನು । **ಉಶ್ಮಸಿ**—(ಮಾಡಲು) ಇಚ್ಛಿಸುತ್ತೇವೆ.

॥ ಭಾವಾರ್ಥ ॥

ಸವಿತೃವಿನ ಸಂಬಂಧವಾದ ಸೋಮಯಾಗಾದಿಕರ್ಮಗಳನ್ನು ಮಾಡಲು ನಾವು ಅಪೇಕ್ಷಿಸುತ್ತೇವೆ. ಆದುದರಿಂದ, ತನ್ನ ತಾಪದಿಂದ ನೀರನ್ನು ಶೋಷಿಸುವ ಸವಿತೃವನ್ನು ಸ್ತುತಿಸು.

## English Translation.

Praise Savitri, who is no friend of water for our protection; we desire to perform his worship.

॥ ವಿಶೇಷವಿಷಯಗಳು ॥

ಈ ಋಕ್ಕನ್ನು ಹೋತೃವು ಸಾಮಗಾನಮಾಡುವ ಉದ್ಗಾತೃವನ್ನಾಗಲಿ, ಅಥವಾ ಶಸ್ತ್ರಮಂತ್ರ ಪಠಿಸುವ ಬೇರೊಬ್ಬ ಋತ್ವಿಜನನ್ನಾಗಲಿ ಉದ್ದೇಶಿಸಿ ಹೇಳಿರುವನೆಂದು ಭಾಷ್ಯಕಾರರು ವಿವರಿಸಿರುವರು.

**ಅಪಾಂ ನಪಾತಂ—ಜಲಸ್ಯ ನ ಪಾಲಕಂ । ಜಲಸ್ಯ ಶೋಷಕಂ** ಜಲಕ್ಕೆ ವಿರೋಧಿಯಾದ, ಜಲವನ್ನು ಒಣಗಿಸುವವನಾದುದರಿಂದ ಸೂರ್ಯನಿಗೆ ಅಪಾಂನಪಾತ್ ಎಂದು ಹೆಸರು ಎಂಬರ್ಥವನ್ನು ಭಾಷ್ಯಕಾರರು ಇಲ್ಲಿ

ಹೇಳಿರುವರು. ಆದರೆ ಯಾಸ್ಕರು ಅಪಾಂನಪಾತ್ ಎಂಬ ಶಬ್ದವೂ ತನೂನಪಾತ್ ಎಂಬ ಶಬ್ದವೂ ಒಂದೇ ಅರ್ಥವುಳ್ಳ ಶಬ್ದಗಳೆಂದು ಹೇಳಿ ತನೂನಪಾತ್ ಶಬ್ದಕ್ಕೆ ಆಜ್ಯ (ಕರಗಿಸಿದ ತುಪ್ಪ) ವೆಂದೂ, ಅಗ್ನಿಯೆಂದೂ ಎರಡು ವಿಧವಾದ ಅರ್ಥವನ್ನು ಹೇಳಿರುವರು. (ನಿ. ೧೦-೧೮ ಮತ್ತು ೮-೫) ಆದರೆ ಇಲ್ಲಿ ಭಾಷ್ಯಕಾರರು ಹೇಳಿರುವ ಅರ್ಥವೇ ಸಮಂಜಸವಾಗಿರುವುದು.

**ವ್ರತಾನಿ—ಸೋಮಯಾಗಾದಿರೂಪಾಣಿ ಕರ್ಮಾಣಿ ।** ವ್ರತವೆಂದರೆ ನಿಯಮದಿಂದ ಮಾಡಲ್ಪಡುವ ಕರ್ಮವು. ಇಲ್ಲಿ ಸೋಮಯಾಗಾದಿ ಕರ್ಮಗಳೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಉಶ್ಮಸಿ—ಕಾಮಯಾಮಾಹೇ ।** ಅಪೇಕ್ಷಿಸುತ್ತೇವೆ. ಪವಿತ್ರವನ್ನುದ್ದೇಶಿಸಿ ಸೋಮಯಾಗಾದಿಗಳನ್ನು ಮಾಡಲಪೇಕ್ಷಿಸುತ್ತೇವೆ ಎಂದಭಿಪ್ರಾಯವು.

**ಅಪಾಂ-' ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ '** (ಪಾ. ಸೂ. ೬-೧-೧೭೧) ಎಂಬುದರಿಂದ ಅಪ್ ಶಬ್ದದ ಮುಂದೆ ಇರುವ ಆಮ್ ವಿಭಕ್ತಿಯು ಉದಾತ್ತ.

**ನಪಾತಮ್—** ' ಪಾ ರಕ್ಷಣೇ ' ಧಾತು ಲಟ್, **'ಲಟಶ್ಶತೃಶಾನಚೌ—'** ಎಂಬುದರಿಂದ ಲಟ್ಟಿಗೆ ಶತೃ ಆದೇಶ. ಪಾ+ಅತ್, ಶಪ್ ವಿಕರಣ ಪರರೂಪ, ಸವರ್ಣದೀರ್ಘ-ಪಾತ್,-ನ+ಪಾತ್-ನಪಾತ್, ಎಂದು **' ನಞ್ '** (ಪಾ. ಸೂ. ೨-೨-೬) ನಞ್ನ್ನು ಸಮರ್ಥವಾದ ಸುಬಂತದೊಂದಿಗೆ ಸಮಾಸವನ್ನು ಹೊಂದುವುದು. ಅದು ತತ್ಪುರುಷ ವಾಗುವುದು ಎಂಬುದರಿಂದ ನಞ್ ತತ್ಪುರುಷ ಸಮಾಸ. **'ನಲೋಪೋ ನಞಃ '** (ಪಾ. ಸೂ ೬-೩-೭೩) ಉತ್ತರ ಪದ ಪರದಲ್ಲಿರುವಾಗ ನಞ್‌ನ ನಕಾರಕ್ಕೆ ಲೋಪ ಬರುವುದು, ಎಂಬುದರಿಂದ ನಞ್‌ನ ನಕಾರಕ್ಕೆ ಲೋಪವು ಪ್ರಾಪ್ತವಾಗುವುದು. ಆದರೆ, **'ನಭ್ರಾಣ್ನಪಾನ್ನವೇದಾ ನಾಸತ್ಯಾ ನಮುಚಿ ನಕುಲ ನಖ ನಪುಂಸಕ ನಕ್ಷತ್ರ ನಾಕೇಷು ಪ್ರಕೃತ್ಯಾ'** (ಪಾ. ಸೂ. ೬-೩-೭೫) ಈ ಸೂತ್ರದಲ್ಲಿರುವ ನಞ್ ಸಮಾಸಗಳ ನಕಾರವು ಪ್ರಕೃತಿಯಿಂದ ಇರುವುದು ಅಂದರೆ ಲೋಪವನ್ನು ಹೊಂದುವುದಿಲ್ಲ ಎಂಬುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ. ಈ ಅಂಶವನ್ನು ವೃತ್ತಿಕಾರರು ಹೇಳಿರುವರು. ಈ ಅಂಶವು ಯುಕ್ತವೂ ಆಗಿದೆ. ಅಪಾನ್ನಪಾತ್ ಎಂದರೆ ಅಗ್ನಿ ಎಂದರ್ಥ. ಅಪಾ = ನೀರನ್ನು, ನಪಾತ್=ಕಾಪಾಡತಕ್ಕವನಲ್ಲ ಎಂದು ವಿಗ್ರಹಾರ್ಥ. ಅಗ್ನಿಯು, ನೀರನ್ನು ಶೋಷಣೆಮಾಡುವುದೆ ವಿನಾ, ರಕ್ಷಿಸುವುದಿಲ್ಲ. ಆದ್ದರಿಂದ ಅಪಾಂನಪಾತ್ ಎಂಬುದು ಅಗ್ನಿಯನ್ನು ಬೋಧಿಸುವುದು ಯುಕ್ತವು. ಆದರೆ ಅಪಾಂನ ಪಾತ್ ಎಂಬಲ್ಲಿ, **' ಕರ್ತೃಕರ್ಮಣೋಃ ಕೃತಿ '**(ಪಾ ಸೂ ೨-೩-೬೫) ಎಂಬುದರಿಂದ ಕರ್ಮಣಿ ಷಷ್ಠಿಯನ್ನು ಹೇಳಬೇಕು. ಅದಕ್ಕೆ ಲಾದೇಶವಾದ ಶತೃಪ್ರತ್ಯಯದ ಪ್ರಯೋಗವಿರುವಾಗ **' ನಲೋಕಾವ್ಯಯನಿಷ್ಠಾಖಲರ್ಥತೃನಾಮ್ '** (ಪಾ. ಸೂ. ೨-೬-೬೯) ಎಂಬುದರಿಂದ ಷಷ್ಠೀ ವಿಭಕ್ತಿಗೆ ನಿಷೇಧವಿರುವುದು. ಆದ್ದರಿಂದ ಅಪಾಂನಪಾತ್ ಎಂಬಲ್ಲಿ ಕರ್ಮಷಷ್ಠಿಯು ಹೇಗೆ ಉಪಪನ್ನವಾಗುವುದು ಎಂದರೆ, ಹೀಗಾದರೆ ಇಲ್ಲಿ ಕರ್ಮಷಷ್ಠಿಯನ್ನು ಒಪ್ಪುವುದೇ ಇಲ್ಲ. **'ಷಷ್ಠೀ ಶೇಷೇ '** (ಪಾ. ಸೂ. ೨-೩-೫೦) ಎಂಬುದರಿಂದ ಶೇಷಷಷ್ಠಿಯನ್ನೇ ಒಪ್ಪುವೆವು, ಕರ್ಮಕಾರಕವಾದ ಅಪ್ಪನ್ನು ಸಂಬಂಧಿತ್ವೇನ ವಿವಕ್ಷೆ ಮಾಡುವೆವು. ಅಗ್ನಿ ಆದಿತ್ಯರಿಬ್ಬರೂ ನೀರಿಗೆ ಕಾರಣಭೂತರಾದ್ದರಿಂದ ಅಪ್ ಸಂಬಂಧವುಳ್ಳ

ವರು, **'ಅಗ್ನೇರಾಪಃ'** (ತೈ. ಆ. ೮-೨) ಜಲವು ಅಗ್ನಿಯಿಂದ ಉಂಟಾಯಿತು, ಎಂಬ ಶ್ರುತಿಯು ಅಪ್ಪಿಗೆ ಅಗ್ನಿಯು ಕಾರಣವೆಂದು ಬೋಧಿಸುವುದು. **'ಆದಿತ್ಯಾಜ್ಜಾಯತೇ ವೃಷ್ಟಿಃ'** (ಮನು. ೩-೭೬) ಸೂರ್ಯನಿಂದ ಮಳೆಯು ಉಂಟಾಗುವುದು ಎಂಬ ಮನುಸ್ಮೃತಿಯು ಅಪ್ಪಿಗೆ ಆದಿತ್ಯನು ಕಾರಣನೆಂದು ಬೋಧಿಸುವುದು. ಆದ್ದರಿಂದ ಈ ಜನ್ಯಜನಕಭಾವ ಸಂಬಂಧದಲ್ಲಿ ಇಲ್ಲಿ ಷಷ್ಠೀವಿಭಕ್ತಿ ಬರುವುದು. ಏವಂಚ ಷಷ್ಠೀ ವಿಭಕ್ತಿಗೆ ಯಾವ ಅನುಪ ಪತ್ತಿಯೂ ಇರುವುದಿಲ್ಲ ಇಲ್ಲಿ ಮತ್ತೊಂದು ಶಂಕೆ ಬರುವುದು. ನಪಾತ್, ನಪಾತಂ, ಇತ್ಯಾದಿ ಕಡೆಗಳಲ್ಲಿ ಸರ್ವನಾಮ ಸ್ಥಾನ ಪ್ರತ್ಯಯ ಪರದಲ್ಲಿರುವಾಗ ಶತೃವು ಉಗಿತ್ತಾದ್ದರಿಂದ **'ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ'** (ಪಾ. ಸೂ. ೭-೧-೭೦) ಸರ್ವನಾಮಸ್ಥಾನ ಪ್ರತ್ಯಯ ಪರದಲ್ಲಿರುವಾಗ ಧಾತುಸಂಬಂಧಿಯಲ್ಲದ ಉಗಿತ್ತಿಗೂ, ನ ಲೋಪವನ್ನು ಹೊಂದಿರುವ ಅಂಚು ಧಾತುವಿಗೂ ನುಮಾಗಮ ಬರುವುದು ಎಂಬುದರಿಂದ ನುಮಾಗಮ ಬರಲಿ ಎನ್ನ ಬಹುದು. ಈ ಪಕ್ಷದಲ್ಲಿ **'ನ ಭ್ರಾಣ್ಣಪಾತ್'** ಎಂಬ ಸೂತ್ರದಲ್ಲಿ ನಪಾತ್ ಎಂದು ನುಮಾಗಮಾಭಾವವನ್ನು ನಿಪಾತನೆ ಮಾಡಿರುವುದರಿಂದ ನುಮಾಗಮ ಬರುವುದಿಲ್ಲವೆಂದು ಹೇಳಬೇಕು. ಅಥವಾ **'ಪಾ'** ಧಾತುವಿನ ಮುಂದೆ **'ಕ್ವಿಪ್ ಚ'** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಕ್ವಿಪ್‌ನಲ್ಲಿ ಎಲ್ಲ ವರ್ಣಗಳಿಗೂ ಲೋಪನಿಪಾತನ ದಿಂದ ಪಾಗೆ ತುಗಾಗಮ, ಪಾತ್, ಎಂದಾಗುವುದು. ಈ ಪಕ್ಷದಲ್ಲಿ ಲಾದೇಶಾದಿಪ್ರಯೋಗವಿಲ್ಲದುದರಿಂದ **'ನಲೋಕಾವ್ಯಯ—'** ಇತ್ಯಾದಿ ನಿಷೇಧ ಬರುವುದಿಲ್ಲ. ಆದ್ದರಿಂದ **'ಕರ್ತೃಕರ್ಮಣೋಃಕೃತಿ'**. ಎಂಬುದರಿಂದ ಕರ್ಮಣಿ ಷಷ್ಠಿಯೇ ಬರಬಹುದಾದ್ದರಿಂದ ಶೇಷಷಷ್ಠ್ಯಾಶ್ರಯಣಪರಿಕ್ಲೇಶವಿಲ್ಲ. **'ಉಭೇವನಸ್ಪತ್ಯಾದಿಷು ಯುಗ- ಪತ್'** (ಪಾ. ಸೂ. ೬-೨-೧೪೦) ಎಂಬಲ್ಲಿ ವೃತ್ತಿಕಾರರು ಈ ಪಕ್ಷವನ್ನು ಪಾತೇಃ ಕ್ವಿಪಿ ನಿಪಾತನಾತ್ತುಕ್ ಎಂದು ಹೇಳಿರುವರು. ಅಥವಾ, ನಪಾತಯತಿ, ನಪ್ರಾಪಯತೀತಿ ನಪಾತ್ **'ಪತ್ಲೃ ಗತೌ'** ಧಾತುವಿನ ಮುಂದೆ ಣಿಚ್, **'ಅತ ಉಪಧಾಯಾಃ'** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಪಾತ್। ಇ- ಇದರ ಮುಂದೆ ಕ್ವಿಪ್ ಪ್ರತ್ಯಯ **'ಣೇರನಿಟಿ'** (ಪಾ. ಸೂ. ೫-೪-೫೧) ಇಡಾದಿಯಾಗಿಲ್ಲದ ಆರ್ಧಧಾತುಕ ಪರದಲ್ಲಿ ರುವಾಗ ಣಿಗೆ ಲೋಪ ಬರುವುದು ಎಂಬುದರಿಂದ ಣಿಚ್‌ಗೆ ಲೋಪ. ಅಗ್ನಿ ಆದಿತ್ಯರಿಬ್ಬರೂ ನೀರನ್ನು ಶೋಷಣೆಮಾಡ ತಕ್ಕವರು (ಒಣಗಿಸುವರು) ಎಂಬುದು ಪ್ರಸಿದ್ಧ. ಆದ್ದರಿಂದ ಅವರು ನೀರನ್ನು ಹೊಂದಿಸತಕ್ಕವರಲ್ಲ, ಪ್ರತ್ಯುತ ಶೋಷಣೆ ಮಾಡುವವರೇ. ಈ ಪಕ್ಷದಲ್ಲಿ ನಿಪಾತವನ್ನು ಆಶ್ರಯಿಸಬೇಕಾದ್ದಿಲ್ಲ. ಕರ್ಮಣಿಷಷ್ಠಿಯೂ ಉಪಪನ್ನವಾಗು ವುದು. ಪ್ರಥಮ ಪಕ್ಷದಲ್ಲಿ, 'ಪಾ' ಧಾತು ಸ್ವರದಿಂದ ಉದಾತ್ತ. ಶಪ್ ಪಿತ್ತಾದ್ದರಿಂದಲೂ, ಶತೃವು ಅದುಪದೇಶಾ ತ್ಪರದಲ್ಲಿರುವ ಲಸ್ಥಾನಿಕ ಸಾರ್ವಧಾತುಕವಾದ್ದರಿಂದಲೂ ಅನುದಾತ್ತ **'ಏಕಾದೇಶ ಉದಾತ್ತೇನೋದಾತ್ತಃ'** ಎಂಬುದರಿಂದ 'ಪಾ' ಎಂಬಲ್ಲಿಯ ಅಕಾರ ಉದಾತ್ತ. ಕೊನೆಯ ಎರಡು ಪಕ್ಷದಲ್ಲೂ 'ಪಾ' ಎಂಬಲ್ಲಿ ಧಾತುಸ್ವರ ಮಾತ್ರ ಬರುವುದು. ಸಮಾಸಾನಂತರ **'ಗತಿಕಾರಕೋಪಪದಾತ್ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು.

**ಅವಸೇ—**'ಅವ ರಕ್ಷಣೇ' ಧಾತು **'ತುಮರ್ಥೇಸೇಸೇನಸೇಅಸೇನ್—**(ಪಾ. ಸೂ. ೩-೪-೯) ಎಂಬುದ ರಿಂದ ತುಮುನ್ ಪ್ರತ್ಯಯಾರ್ಥದಲ್ಲಿ, ಅಂದರೆ **'ಅವ್ಯಯಕೃತೋ ಭಾವೇ'** ಎಂಬ ಅನುಶಾಸನದಿಂದ ಭಾವಾರ್ಥದಲ್ಲಿ ಅಸೇನ್ ಪ್ರತ್ಯಯ ಬರುವುದು. ಪ್ರತ್ಯಯವು ನಿತ್. ಆದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು.

**ಉಶ್ಮಸಿ**—'ವಶ ಕಾಂತೌ' ಧಾತು-ಲಟ್-ಉತ್ತಮ ಬಹುವಚನ ಮಸ್, **'ಅದಿಪ್ರಭೃತಿಭ್ಯಃ ಶಪಃ'** (ಪಾ. ಸೂ. ೨-೪-೭೨) ಎಂಬುದರಿಂದ ಶಪ್ ಗೆ ಲುಕ್, **'ಇದಂತೋಮಸಿ'** (ಪಾ. ಸೂ. ೭-೧-೪೬) ಎಂಬುದರಿಂದ ಅಂತಾವಯವವಾಗಿ ಇಕಾರಾಗಮ, **'ಸಾರ್ವಧಾತುಕಮಪಿತ್'** (ಪಾ. ಸೂ. ೧-೨-೪) ಎಂಬುದರಿಂದ ಮಸ್ ಙಿತ್ **'ಗ್ರಹಿಜ್ಯಾವಯಿವ್ಯಧಿವಷ್ಟಿ'** (ಪಾ. ಸೂ. ೬-೧-೧೬) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ ಉಕಾರ ಪೂರ್ವರೂಪ. ॥ ೬ ॥

॥ ಸಂಹಿತಾಪಾಠಃ ॥

ವಿಭಕ್ತಾರಂ ಹವಾಮಹೇ ವಸೋಶ್ಚಿತ್ರಸ್ಯ ರಾಧಸಃ ।
ಸವಿತಾರಂ ನೃಚಕ್ಷಸಂ ॥ ೭ ॥

॥ ಪದಪಾಠಃ ॥

ವಿಽಭಕ್ತಾರಂ । ಹವಾಮಹೇ । ವಸೋಃ । ಚಿತ್ರಸ್ಯ । ರಾಧಸಃ ॥
ಸವಿತಾರಂ । ನೃಽಚಕ್ಷಸಂ ॥ ೭ ॥

॥ ಸಾಯಣಭಾಷ್ಯಂ ॥

ವಸೋರ್ನಿವಾಸಹೇತೋಶ್ಚಿತ್ರಸ್ಯ ಸುವರ್ಣರಜತಾದಿರೂಪೇಣ ಬಹುವಿಧಸ್ಯ ರಾಧಸೋ ಧನಸ್ಯ ವಿಭಕ್ತಾರಂ ಅಸ್ಯ ಯಜಮಾನಸ್ಯೈತಾವದ್ಧನದಾನಮುಚಿತಮಿತಿ ವಿಭಾಗಕಾರಿಣಂ ನೃಚಕ್ಷಸಂ ಮನುಷ್ಯಾಣಾಂ ಪ್ರಕಾಶಕಾರಿಣಂ ಸವಿತಾರಂ ಹವಾಮಹೇ । ಕೌಷೀತಕಿನ ಏತಸ್ಯಾ ಋಚೋ ವ್ಯಾಖ್ಯಾನರೂಪೇ ಬ್ರಾಹ್ಮಣೇ ಸವಿತುರ್ವಿಭಾಗಹೇತುತ್ವಮೇವ ಸಮಾಮನಂತಿ । ಯದೇತದ್ವಸೋಶ್ಚಿತ್ರಂ ರಾಧಸ್ತದೇಷ ಸವಿತಾ ವಿಭಕ್ತಾಭ್ಯಃ ಪ್ರಜಾಭ್ಯೋ ವಿಭಜತೀತಿ ॥ ವಿಭಕ್ತಾರಂ । ತೃಚಶ್ಚಿತ್ತ್ವಾದಂತೋದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ । ಹವಾಮಹೇ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣಂ । ವಸೋಃ । ವಸ ನಿವಾಸೇ । ಶೄಸ್ವೃಸ್ನಿಹೀತ್ಯಾದಿನಾ ಉಃ । ನಿದಿತ್ಯನುವೃತ್ತೇರ್ನಿತ್ತ್ವಾದಾದ್ಯುದಾತ್ತಃ । ರಾಧಸಃ । ಅಸುನಂತೋ ನಿತ್ತ್ವಾದಾದ್ಯುದಾತ್ತಃ । ನೃಚಕ್ಷಸಂ । ನ್ರ್ಯಂಶ್ಚಷ್ಟೇ ಇತಿ ನೃಚಕ್ಷಾಃ । ತಂ ನೃಚಕ್ಷಸಂ । ಚಕ್ಷೇರ್ಬಹುಲಂ ಶಿಚ್ಚ । ಉ. ೪-೨೩೨ । ಇತ್ಯಸುನ್ । ಶಿತ್ತ್ವಾದನಾರ್ಧಧಾತುಕತ್ವೇನ ಖ್ಯಾಞಾದೇಶಾಭಾವಃ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ವಸೋಃ**—ಗೃಹಸಂಬಂಧವಾದ | **ಚಿತ್ರಸ್ಯ**—ನಾನಾವಿಧವಾದ | **ರಾಧಸಃ**—ಧನದ | **ವಿಭಕ್ತಾರಂ**—ವಿಭಾಗಕರ್ತೃವಾದ | **ನೃಚಕ್ಷಸಂ**—ಮನುಷ್ಯರಿಗೆ ಪ್ರಕಾಶವನ್ನು ಕೊಡುವ (ಜ್ಞಾನವನ್ನು ಕೊಡುವ) | **ಸವಿತಾರಂ**—ಸವಿತೃವನ್ನು | **ಹವಾಮಹೇ**—ಆಹ್ವಾನಿಸುತ್ತೇವೆ.

॥ ಭಾವಾರ್ಥ ॥

ಗೃಹಾದಿಗಳಿಗೆ ಸಂಬಂಧಿಸಿದ (ಗೃಹಾದಿಗಳಿಂದ ಸಹಿತವಾದ) ಸುವರ್ಣರಜತಾದಿಧನವನ್ನು ಅವರವರ ಯೋಗ್ಯತಾನುಸಾರ ಹಂಚಿಕೊಡುವವನೂ, ಪ್ರಕಾಶವನ್ನು ಕೊಡುವವನೂ ಆದ ಸವಿತೃವನ್ನು ಆಹ್ವಾನಿಸುತ್ತೇವೆ.

## English Translation.

We invoke Savitri, the distributor of various kinds of wealth including the house and the enlighter of men.

॥ ವಿಶೇಷವಿಷಯಗಳು ॥

ಈ ಋಕ್ಕಿನ ಮುಖ್ಯಾಭಿಪ್ರಾಯವು— ಸವಿತೃದೇವತೆಯು ನಾನಾ ವಿಧವಾದ ಧನಾದಿಗಳನ್ನು ಕೊಡುವವನು, ವಾಸಸ್ಥಾನವಾದ ಗೃಹಾದಿಗಳನ್ನು ಕೊಡುವವನು ಮತ್ತು ಜನರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಜ್ಞಾನಪ್ರದನಾಗಿಯೂ ಇರುವನು. ಇಂತಹ ಸವಿತೃವನ್ನು ಆಹ್ವಾನಿಸುತ್ತೇವೆ.

**ವಿಭಕ್ತಾರಂ—ವಿಭಾಗಕಾರಿಣಂ** | ಅವರವರ ಯೋಗ್ಯತೆಗೆ ತಕ್ಕಂತೆ ಹಂಚಿಕೊಡುವ ಅಥವಾ ಅವರವರ ಯಜ್ಞಾನುಷ್ಠಾನಾದಿ ಕರ್ಮಗಳಿಗನುಸಾರವಾಗಿ ಧನಾದಿಗಳನ್ನು ಕೊಡುವ ಎಂದರ್ಥವು.

**ವಸೋಶ್ಚಿತ್ರಸ್ಯ ರಾಧಸಃ**—ವಾಸಸ್ಥಾನವಾದ ಗೃಹಾದಿಗಳಿಂದ ಯುಕ್ತವಾದ ನಾನಾವಿಧ ಧನಾದ್ಯೈಶ್ವರ್ಯಗಳ.

**ನೃಕ್ಷಸಂ—ನ್ಯಂಶ್ಚಷ್ಟೆ ಇತಿ ನೃಚಕ್ಷಾಃ | ತಂ ನೃಚಕ್ಷಸಂ | ಮನುಷ್ಯಾಣಾಂ ಪ್ರಕಾಶಕಾರಿಣಂ ||** ಮನುಷ್ಯರಿಗೆ ಜ್ಞಾನವನ್ನು ಕೊಡುವ, ಬುದ್ಧಿಯನ್ನು ಪ್ರೇರಿಸುವ ಎಂದರ್ಥವು. ಈ ವಿಷಯದಲ್ಲಿ ಪ್ರಸಿದ್ಧವಾದ ಗಾಯತ್ರೀಮಂತ್ರವು **ಧಿಯೋ ಯೋ ನಃ ಪ್ರಚೋದಯಾತ್** ಸವಿತೃವು ನಮ್ಮ ಬುದ್ಧಿಯನ್ನು ಪ್ರೇರಿಸುವನು ಎಂದು ಸ್ಪಷ್ಟವಾಗಿ ತಿಳಿಸುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ವಿಭಕ್ತಾರಮ್**—ವಿಪೂರ್ವಕ ಭಜ ಧಾತುವಿನ ಮುಂದೆ ತೃಚ್ ಪ್ರತ್ಯಯ. ಪ್ರತ್ಯಯವು ಚಿತ್, ಆದ್ದರಿಂದ ಚಿತ್ಸ್ವರ ಬರುವುದು. ವಿಶಬ್ದದೊಂದಿಗೆ ಸಮಾಸ ಬಂದನಂತರ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು. **ಹವಾಮಹೇ**–**'ಹ್ವೇಞ್ ಸಂಪ್ರಸಾರಣೇ'** ಧಾತು. **'ಹ್ವಃ ಸಂಪ್ರಸಾರಣಮ್'** ಎಂದು ಅನುವೃತ್ತವಾಗಲು, **'ಬಹುಲಂ ಛಂದಸಿ'** (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ ವಕಾರಕ್ಕೆ ಉಕಾರ,

**'ಸಂಪ್ರಸಾರಣಾಚ್ಚ'** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ-ಲಟ್-ಮಹಿಙ್, **'ಟಿತ ಆತ್ಮನೇ ಪದಾನಾಂ ಟೇರೇ'** (ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ-ಶಪ್-ಗುಣ ಅವಾದೇಶ, **'ಅತೋ ದೀರ್ಘೋ ಯಞಿ'** (ಪಾ. ಸೂ. ೭-೩-೧೦೧) ಎಂಬುದರಿಂದ ಅದಂತವಾದ ಅಂಗಕ್ಕೆ ದೀರ್ಘ.

**ವಸೋಃ**— 'ವಸ ನಿವಾಸೇ' ಧಾತು. **'ಶೃಸ್ವೃಸ್ನಿಹಿತ್ರಪ್ಯಸಿ ವಸಿ ಹನಿಕ್ಲಿದಿ ಬನ್ಧಿಮನಿಭ್ಯಶ್ಚ'** (ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ **'ಧಾನ್ಯೇ ನಿತ್'** ಎಂಬ ಹಿಂದಿನ ಸೂತ್ರದಿಂದ ನಿತ್ ಪದವು ಈ ಸೂತ್ರಕ್ಕೆ ಅನುವೃತ್ತವಾಗುವುದು. ಆದ್ದರಿಂದ ಪ್ರತ್ಯಯವು ನಿತ್ತಾಗುವಕಾರಣ ನಿತ್ಸ್ವರ ಬರುವುದು.

**ರಾಧಸಃ**—'ರಾಧ ಸಾಧ ಸಂಸಿದ್ಧೌ' **'ಸರ್ವಧಾತುಭ್ಯೋಽಸುನ್'** (ಉ. ಸೂ. ೪-೬-೨೮) ಎಂಬುದರಿಂದ ಅಸುನ್ ಪ್ರತ್ಯಯ. ಪ್ರತ್ಯಯವು ನಿತ್ತಾದ್ದರಿಂದ 'ರಾಧಸಃ' ಎಂಬುದು ಆದ್ಯುದಾತ್ತ.

**ನೃಚಕ್ಷಸಂ**— ನೄನ್ ಚಷ್ಟೇ ಇತಿ. (ಮನುಷ್ಯರಿಗೆ ಪ್ರಕಾಶವನ್ನು ಮಾಡುವವನು) ಎಂದು ವಿಗ್ರಹ ನೃಚಕ್ಷಾಃ-ಎಂದಾಗುವುದು. ದ್ವಿತೀಯಾ ಏಕವಚನದಲ್ಲಿ ನೃಚಕ್ಷಸಮ್ ಎಂದಾಗುವುದು. **'ಚಕ್ಷೇರ್ಬಹುಲಂ ಶಿಚ್ಚ'** (ಉ ಸೂ. ೪-೬-೭೨) ಚಕ್ಷಿಙ್ ವ್ಯಕ್ತಾಯಾಂ ವಾಚಿ ಎಂಬ ಧಾತುವಿನ ಮುಂದೆ ಅಸುನ್ ಪ್ರತ್ಯಯ ಬರುವುದು. ಅದು ಬಹುಲವಾಗಿ ಶಿತ್ತಾಗುವುದು ಎಂಬುದರಿಂದ ಅಸುನ್ ಪ್ರತ್ಯಯ. ಪ್ರತ್ಯಯವು ಶಿತ್ತಾದ್ದರಿಂದ **'ತಿಙ್‌ಶಿತ್ಸಾರ್ವಧಾತುಕಮ್'** ಎಂಬುದರಿಂದ ಸಾರ್ವಧಾತುಕಸಂಜ್ಞೆ. ಆದ್ದರಿಂದ **'ಚಕ್ಷಿಙಃಖ್ಯಾಞ್'** (ಪಾ. ಸೂ. ೨-೪-೫೪) ಆರ್ಧಧಾತುಕಪ್ರತ್ಯಯ ಪರದಲ್ಲಿರುವಾಗ ಚಕ್ಷಿಙ್ ಧಾತುವಿನ ಸ್ಥಾನದಲ್ಲಿ ಖ್ಯಾಞ್ ಆದೇಶ ಬರುವುದಿಲ್ಲ. ನಿತ್ಸ್ವರದಿಂದ ಚಕ್ಷಿಸ್ ಎಂಬುದು ಆದ್ಯುದಾತ್ತ. ಸಮಾಸಾನಂತರ ಕೃದುತ್ತರಪದ ಪ್ರಕೃತಿಸ್ವರ ಬರುವುದು. ಇಲ್ಲಿ **'ಮಿಥುನೇಽಸಿಃ ಪೂರ್ವವಚ್ಚ ಸರ್ವಮ್'** (ಉ. ಸೂ. ೪-೬-೬೨) ಎಂಬುದರಿಂದ ಅಸಿಃ ಎಂಬುದು ಅನುವೃತ್ತವಾಗುವುದು. ಜ್ಞಾನೇನ್ದ್ರಸರಸ್ವತೀಪ್ರಭೃತಿಗಳು ಇದೇರೀತಿಯಾಗಿ ವ್ಯಾಖ್ಯಾನ ಮಾಡಿರುವರು; ಆದರೂ ವೇದಭಾಷ್ಯಕಾರರು ಸ್ವರಸಿದ್ಧ್ಯನುಗುಣವಾಗಿ ಮಂಡೂಕಾನುವೃತ್ತಿಯಿಂದ ಅಸುನ್ ಎಂಬುದನ್ನು ಇಲ್ಲಿ ಅನುವೃತ್ತಿ ಮಾಡಿರುವರು. ॥ ೭ ॥

॥ ಸಂಹಿತಾಪಾಠಃ ॥

ಸಖಾಯ ಆ ನಿ ಷೀದತ ಸವಿತಾ ಸ್ತೋಮ್ಯೋ ನು ನಃ ।

ದಾತಾ ರಾಧಾಂಸಿ ಶುಂಭತಿ ॥ ೮ ॥

॥ ಪದಪಾಠಃ ॥

ಸಖಾಯಃ । ಆ । ನಿ । ಸೀದತ । ಸವಿತಾ । ಸ್ತೋಮ್ಯಃ । ನು । ನಃ ॥

ದಾತಾ । ರಾಧಾಂಸಿ । ಶುಮ್ಭತಿ ॥ ೮ ॥

॥ ಸಾಯಣಭಾಷ್ಯಂ ॥

**ಸಖಿಭೂತಾ ಹೇ ಋತ್ವಿಜ ಆ ನಿ ಷೀದತ । ಸರ್ವತ್ರೋಪವಿಶತ । ನೋಽಸ್ಮಾಕಮಯಂ ಸವಿತಾ ನು ಕ್ಷಿಪ್ರಂ ಸ್ತೋತವ್ಯಃ ಸ್ತುತಿಯೋಗ್ಯೋ ರಾಧಾಂಸಿ ಧನಾನಿ ದಾತಾ ಪ್ರದಾತುಮುದ್ಯುಕ್ತಃ । ಏಷ ಸವಿತಾ ಶುಂಭತಿ । ಶೋಭತೇ ॥ ಸಮಾನಾಃ ಸಂತಃ ಖ್ಯಾಂತಿ ಪ್ರಕಾಶಂತ ಇತಿ ಸಖಾಯಃ । ಖ್ಯಾ ಪ್ರಕಥನೇ । ಸಮಾನೇ ಖ್ಯಾಶ್ಚೋದಾತ್ತಃ । ಉ. ೪-೧೩೬ । ಇತೀಣ್ಪ್ರತ್ಯಯಃ । ತತ್ಸನ್ನಿಯೋಗೇನ ಡಿತ್ವಂ ಯಲೋಪಶ್ಚ । ಡಿತ್ತ್ವಾದಾಕಾರಲೋಪಃ । ಸಮಾನಸ್ಯ ಛಂದಸೀತ್ಯಾದಿನಾ । ಪಾ. ೬-೩-೮೪ । ಸಮಾನ ಶಬ್ದಸ್ಯ ಸಾದೇಶಃ । ಇಣ್ಸಂನಿಯೋಗೇನೋದಾತ್ತತ್ವಂ । ಜಸಿ ಸಖ್ಯುರಸಂಬುದ್ಧೌ । ಪಾ. ೭-೧-೯೨ । ಇತಿ ಣಿತ್ತ್ವಾದ್ವೃದ್ಧಿರಾಯಾದೇಶಶ್ಚ । ನಿ ಷೀದತ । ಸದೇರಪ್ರತೇಃ । ಪಾ. ೮-೩-೬೬ । ಇತಿ ಷತ್ವಂ । ಸ್ತೋಮೇಷು ಪ್ರತಿಪಾದ್ಯತ್ವೇನ ಭವಃ ಸ್ತೋಮ್ಯಃ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ದಾತಾ ದಾನಶೀಲಃ । ತಾಚ್ಛೀಲ್ಯೇ ತೃನ್ । ನಿತ್ತ್ವಾದಾದ್ಯುದಾತ್ತಃ । ರಾಧಾಂಸಿ । ಗತಂ । ಕರ್ತೃಕರ್ಮಣೋಃ ಕೃತೀತಿ ಪ್ರಾಪ್ತಾಯಾಃ ಷಷ್ಠ್ಯಾ ನ ಲೋಕಾವ್ಯಯೇತಿ ಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**ಸಖಾಯಃ**—ಸ್ನೇಹಿತರೇ, (ಸ್ನೇಹಿತರಾದ ಋತ್ವಿಜರೇ) । **ಆ ನಿ ಷೀದತ**—ಸುತ್ತಲೂ ಕುಳಿತುಕೊಳ್ಳಿ । **ಸವಿತಾ**—(ಈ) ಸವಿತೃವು । **ನಃ**—ನಮಗೆ । **ನು**—ಕೂಡಲೇ । **ಸ್ತೋಮ್ಯಃ**—ಸ್ತುತಿಗೆ ಪಾತ್ರನು । **ರಾಧಾಂಸಿ**—ದ್ರವ್ಯಗಳನ್ನು । **ದಾತಾ**—ಕೊಡುವವನಾಗಿ । **ಶುಂಭತಿ**—ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಎಲೈ ಋತ್ವಿಜರೇ, ಈ ಸವಿತೃವು ನಮ್ಮೆಲ್ಲರಿಗೂ ಧನಾದಿಗಳನ್ನು ಕೊಡಲು ಉದ್ಯುಕ್ತನಾಗಿ ಪ್ರಕಾಶಿಸುತ್ತಿದ್ದಾನೆ. ನಾವು ಈಗಲೇ ಈತನನ್ನು ಸ್ತುತಿಸಬೇಕಾಗಿದೆ. ಆದ್ದರಿಂದ, ಮಿತ್ರರೇ, ಎಲ್ಲರೂ ಸುತ್ತಲೂ ಕುಳಿತುಕೊಳ್ಳಿ.

## English Translation.

Friends, come and sit down; Savitri is now to be praised by us, for he is the bestower of riches and shining brightly.

॥ ವಿಶೇಷವಿಷಯಗಳು ॥

**ಸಖಾಯಃ—ಸಖಿಭೂತಾ ಋತ್ವಿಜಃ ।** ಯಜಮಾನನು ಇಲ್ಲಿ ಋತ್ವಿಜರನ್ನು ತನ್ನ ಸ್ನೇಹಿತರೆಂದು ಸಂಬೋಧನೆಮಾಡಿರುವನು. ‘ **ಋತ್ವಿಜೋ ವಾ ಅಸ್ಯ ಸಖಾಯಃ**–’ ಋತ್ವಿಗ್ಜನರು ಯಜಮಾನನ ಸ್ನೇಹಿತರು ಎಂದು ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ (ತೈ. ಸಂ. ೬-೧) ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸಖಾಯಃ—ಸಮಾನಾಃ ಸನ್ತಃ ಖ್ಯಾನ್ತಿ ಪ್ರಕಾಶನ್ತೇ ಇತಿ ಸಖಾಯಃ**—ಅಂದರೆ ಸಮಾನವಾದ ದರ್ಜೆಯುಳ್ಳವರಾಗಿ ಪ್ರಕಾಶಿಸುವರು ಎಂದರ್ಥ. ಖ್ಯಾ ಪ್ರಕಥನೇ ಧಾತು-**'ಸಮಾನೇ ಖ್ಯಃಸ್ಚೋದಾತ್ತಃ'** (ಉ. ಸೂ. ೪-೫೭೬) ಸಮಾನಶಬ್ದವು ಉಪಪದವಾಗಿರುವ ಖ್ಯಾಧಾತುವಿನ ಮುಂದೆ ಇಣ್‌ಪ್ರತ್ಯಯ ಬರುವುದು ಅದು ಡಿತ್ತಾಗುವುದು, ಯಕಾರಕ್ಕೆಲೋಪಬರುವುದು, ಉಪಪದವು ಉದಾತ್ತವಾಗುವುದು, ಎಂದು ವೇದಭಾಷ್ಯಾನುಸಾರವಾಗಿ ಸೂತ್ರಾರ್ಥ. ಇಲ್ಲಿ ಈ ಸೂತ್ರದಿಂದ ಇಣ್‌ಪ್ರತ್ಯಯ ಬಂದರೆ ಖ್ಯಾ+ಇ-ಪ್ರತ್ಯಯವು ಡಿತ್ತಾದ್ದರಿಂದ ಟಿಆದ ಆಕಾರಕ್ಕೆ ಲೋಪ, ಯಲೋಪ ಬರುವುದು, **'ಸಮಾನಸ್ಯ ಛಂದಸ್ಯಮೂರ್ಧಪ್ರಭೃತ್ಯುದರ್ಕೇಷು'**-(ಪಾ.ಸೂ. ೬-೩-೮೪) ಮೂರ್ಧನ್, ಪ್ರಭೃತಿ, ಉದರ್ಕ ಈ ಶಬ್ದಗಳು ಪರವಾಗಿಲ್ಲದೇ ಇದ್ದು ಉತ್ತರಪದಪರದಲ್ಲಿರುವಾಗ ಸಮಾನಶಬ್ದಕ್ಕೆ ಸ ಆದೇಶ ಬರುವುದು ಎಂಬುದರಿಂದ ಸಮಾನಶಬ್ದಕ್ಕೆ ಸ ಆದೇಶ ಸಖಿ ಎಂದಾಗುವುದು. ಸ್ವರಮಂಜರೀಕಾರರೇ ಮೊದಲಾದವರು ಇದೇ ರೀತಿಯಲ್ಲಿ ವರ್ಣಿಸಿರುವರು. ಹೀಗೆ ವ್ಯಾಖ್ಯಾನಮಾಡಿ ಲೋಕದಲ್ಲಿ ಸಖಿಶಬ್ದ ಪ್ರಯೋಗವಿಲ್ಲದೇ ಹೋಗುವುದು. ಆದ್ದರಿಂದ ಈಗ ಉಣಾದಿಯಲ್ಲಿ ಉಪಲಬ್ಧವಾಗುವ **'ಸಮಾನೇಖ್ಯಸ್ಸಚೋದಾತ್ತಃ'** ಎಂದು ಪಾಠವನ್ನು ಇಟ್ಟುಕೊಂಡು ಇದೇ ಸೂತ್ರದಿಂದ ಸಾದೇಶ ಬರುವುದು ಎಂದು ವ್ಯಾಖ್ಯಾನಮಾಡುವುದು ಯುಕ್ತವು. (ಋ. ಸೂ. ೧-೪-೪) ರಲ್ಲಿ ಇದರ ವಿವರಣೆಯನ್ನು ನೋಡಿ. ಸಖಿಶಬ್ದದ ಮುಂದೆ ಜಸ್ **'ಸಖ್ಯುರಸಂಬುದ್ಧೌ'** (ಪಾ. ಸೂ. ೭-೧-೯೨) ಸಖಿಶಬ್ದ ರೂಪವಾದ ಅಂಗದ ಮುಂದೆ ಇರುವ ಸಂಬುದ್ಧಿಭಿನ್ನವಾದ ಸರ್ವನಾಮಸ್ಥಾನವು **ಣಿದ್ವತ್** ಆಗುವುದು ಎಂಬುದರಿಂದ ಜಸ್ ಣಿತ್ತಿನಂತೆ ಆಗುವುದು ಆದ್ದರಿಂದ **'ಅಚೋಞ್ಣಿತಿ'** (ಪಾ. ಸೂ, ೭-೨-೧೧೫) ಎಂಬುದರಿಂದ ವೃದ್ಧಿ **'ಏಚೋಽಯವಾಯಾವಃ'** (ಪಾ. ಸೂ. ೬-೧-೭೮) ಎಂಬುದರಿಂದ ಆಯ್ ಆದೇಶ. ಸ್+ಗೆ ರುತ್ವವಿಸರ್ಗಗಳು ಸಖಾಯಃ ಎಂದಾಗುವುದು.

**ನಿಷೀದತ**—' ಷದ್ಲೃ ವಿಶರಣಾದೌ ' ಧಾತು **'ಧಾತ್ವಾದೇಃ ಷಃ ಸಃ'** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ ಲೋಟ್. ಮಧ್ಯಮ ಥ ಪ್ರತ್ಯಯ **'ಲೋಟೋ ಲಙ್ವತ್'** (ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ, **'ತಸ್ಥಸ್ಥಮಿಪಾಂತಾಂತಂತಾಮಃ'** (ಪಾ. ಸೂ. ೩-೪-೧೦೧) ಎಂಬುದರಿಂದ ತ ಆದೇಶ-ಶಪ್ **'ಪಾಘ್ರಾಧ್ಮಾ-'** (ಪಾ. ಸೂ. ೭-೩-೭೮) ಎಂಬುದರಿಂದ ಸೀದಾದೇಶ ಸೀದತ ಎಂದಾಯಿತು, ನಿ ಎಂಬ ಉಪಸರ್ಗದ ಮುಂದೆ ಇರುವಾಗ **'ಸದಿರಪ್ರತೇಃ'** (ಪಾ. ಸೂ. ೮-೩-೬೬) ಪ್ರತಿ ಎಂಬುದನ್ನುಳಿದ ಉಪ ಸರ್ಗ ವೃತ್ತಿಯಾದ ಇಣ್ ನ ಮುಂದೆ ಇರುವ ಸದ್ ಧಾತುವಿನ ಸಕಾರಕ್ಕೆ ಷಕಾರ ಬರುವುದು ಎಂಬುದರಿಂದ ಷಕಾರ, ನಿಷೀದತ ಎಂದಾಗುವುದು.

**ಸ್ತೋಮ್ಯಃ**—ಸ್ತೋಮೇಷು ಪ್ರತಿಪಾದ್ಯತ್ವೇನ ಭವಃ, ಎಂದು ಭವಾರ್ಥವನ್ನು ವಿವಕ್ಷಿಸಿದಾಗ **'ಭವೇ ಛಂದಸಿ'** (ಪಾ. ಸೂ. ೪-೪೭-೧೧೦) ಸಪ್ತಮ್ಯಂತವಾದ ಸಮರ್ಥದಮುಂದೆ ಭವಾರ್ಥದಲ್ಲಿ ಯತ್ ಪ್ರತ್ಯಯ ಬರು ವುದು ಎಂಬುದರಿಂದ ಯತ್ ಪ್ರತ್ಯಯ, **'ಯತೋಽನಾವಃ'** (ಪಾ. ಸೂ. ೬-೧-೨೧೩) ನೌಶಬ್ದ ಭಿನ್ನವಾದ ಶಬ್ದದ ಮುಂದೆ ವಿಹಿತವಾದ ಯಾವ ಯತ್ ಇದೆಯೋ ತದಂತವಾದ ಶಬ್ದವು ದ್ವಚ್ಕ (ಎರಡು ಅಚ್ಚುಗಳುಳ್ಳದ್ದು) ವಾಗಿದ್ದರೆ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ ಬರುವುದು.

**ದಾತಾ**—ದಾನಶೀಲ, ಎಂದರ್ಥ. **' ತೃನ್ '** (ಪಾ. ಸೂ. ೩-೩-೧೩೫) ಎಂಬುದರಿಂದ ತಾಚ್ಛೀಲ್ಯದಲ್ಲಿ ಧಾಞ್‌ಧಾತುವಿನ ಮುಂದೆ ತೃನ್‌ಪ್ರತ್ಯಯ ನಿತ್ಸ್ವರ ಆದ್ಯುದಾತ್ತ ಬರುವುದು.

**ರಾಧಾಂಸಿ**—ಏಳನೇ ಮಂತ್ರದಲ್ಲಿ ವ್ಯಾಖ್ಯಾತ. ರಾಧಸ್ ಎಂಬುದು ತೃನ್ ಎಂಬ ಕೃತ್ಪ್ರತ್ಯಯಪ್ರಕೃತಿಯಾದ ದಾ ಧಾತುವಿನ ಕ್ರಿಯೆಯಲ್ಲಿ ಕರ್ಮವಾಚಕವಾಗಿರುವುದು. ಆದ್ದರಿಂದ **'ಕರ್ತೃಕರ್ಮಣೋಃ ಕೃತಿ '** (ಪಾ. ಸೂ. ೨-೩-೬೫) ಕೃತ್ಪ್ರತ್ಯಯ ಪ್ರಕೃತಿಯಾದ ಕ್ರಿಯೆಯ ಕರ್ತೃಕರ್ಮಾನ್ಯತರವಾಚಕದ ಮುಂದೆ ಷಷ್ಠೀ ಬರುವುದು ಎಂಬುದರಿಂದ ಯದ್ಯಪಿ ಕರ್ಮಣಿಷಷ್ಠೀವಿಭಕ್ತಿಯು ಪ್ರಾಪ್ತವಾಗುವುದು. ಆದರೆ ತೃನ್‌ಗೆ ಪ್ರಯೋಗವಿರುವುದರಿಂದ **' ನ ಲೋಕಾವ್ಯಯನಿಷ್ಠಾಖಲರ್ಥತೃನಾಮ್ '** (ಪಾ. ಸೂ. ೨-೩-೬೯) ಎಂಬುದರಿಂದ ನಿಷೇಧ ಬರುವುದರಿಂದ ಕರ್ಮಣಿಷಷ್ಠಿಯು ಬರುವುದಿಲ್ಲ. **' ಕರ್ಮಣಿದ್ವಿತೀಯಾ '** (ಪಾ ಸೂ. ೨-೩-೨) ತಿಙಾದ್ಯನಭಿಹಿತಕರ್ಮವಾಚಕವಾದ ಪ್ರಾತಿಪದಿಕದ ಮುಂದೆ ದ್ವಿತೀಯಾ ವಿಭಕ್ತಿ ಬರುವುದು ಎಂಬುದರಿಂದ ದ್ವಿತೀಯಾವಿಭಕ್ತಿ ಬರುವುದು. ॥ ೮ ॥

॥ ಸಂಹಿತಾಪಾಠಃ ॥

ಅಗ್ನೇ ಪತ್ನೀರಿಹಾ ವಹ ದೇವಾನಾಮುಶತೀರುಪ ।
ತ್ವಷ್ಟಾರಂ ಸೋಮಪೀತಯೇ ॥ ೯ ॥

॥ ಪದಪಾಠಃ ॥

ಅಗ್ನೇ । ಪತ್ನೀಃ । ಇಹ । ಆ । ವಹ । ದೇವಾನಾಂ । ಉಶತೀಃ । ಉಪ ॥
ತ್ವಷ್ಟಾರಂ । ಸೋಮಽಪೀತಯೇ ॥ ೯ ॥

॥ ಸಾಯಣಭಾಷ್ಯಂ ॥

ಅಗ್ನಿಷ್ಟೋಮೇ ಪ್ರಾತಃಸವನೇಽಗ್ನೇ ಪತ್ನೀರಿಹಾ ವಹೇತಿ ನೇಷ್ಟುಃ ಪ್ರಸ್ಥಿತಯಾಜ್ಯಾ । ಪ್ರಶಾಸ್ತಾ ಬ್ರಾಹ್ಮಣಾಚ್ಛಂಸೀತಿ ಖಂಡೇ ಸೂತ್ರಿತಂ । ಅಗ್ನೇ ಪತ್ನೀರಿಹಾ ವಹೋಕ್ಷಾನ್ನಾಯ ವಶಾನ್ನಾಯ । ಆ. ೫_೫ । ಇತಿ ॥

ಹೇ ಅಗ್ನೇಃ ಉಶತೀಃ ಕಾಮಯಮಾನಾ ದೇವಾನಾಂ ಪತ್ನೀರಿಂದ್ರಾಣ್ಯಾದ್ಯಾ ಇಹ ದೇವಯಜನದೇಶ ಆ ವಹ । ತಥಾ ತ್ವಷ್ಟಾರಂ ದೇವಂ ಸೋಮಪೀತಯೇ ಸೋಮಪಾನಾರ್ಥಮುಪ ಸಮೀಪ ಆ ವಹ ॥ ಪತ್ನೀಃ । ಪತ್ಯಂತಃ ಪತಿಶಬ್ದ ಆದ್ಯುದಾತ್ತಃ । ಪತ್ಯುರ್ನೋ ಯಜ್ಞಸಂಯೋಗೇ ।

**ಪಾ. ೪–೧–೩೩ । ಇತಿ ಙೀಪ್ । ತತ್ಸಂನಿಯೋಗೇನ ನಕಾರಶ್ಚ ಙೀಪಃ ಪಿತ್ವಾತ್ತ್ವದ್ನುತಿಸ್ಸರ ಏವ । ಉಶತೀಃ । ವಶ ಕಾಂತೌ । ಲಟಃ ಶತೃ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಶತುರ್ಙಿತ್ತ್ವಾದ್ಗ್ರಹಿಜ್ಯಾದಿನಾ ಸಂಪ್ರಸಾರಣಂ । ಉಗಿತಶ್ಚೇತಿ ಙೀಪ್ । ಶತುರನುಮ ಇತಿ ಙೀಬುದಾತ್ತಃ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಉಶತೀಃ**—ಪ್ರೇಮಯುಕ್ತರಾದ ! **ದೇವಾನಾಂ**—ದೇವತೆಗಳ । **ಪತ್ನೀಃ**—ಸ್ತ್ರೀಯರನ್ನು । **ಇಹ**—ಇಲ್ಲಿಗೆ । **ಆ ವಹ**—ಕರೆದುಕೊಂಡು ಬಾ । **ತ್ವಷ್ಟಾರಂ**—ತಷ್ಟೃವನ್ನೂ । **ಸೋಮಪೀತಯೇ**—ಸೋಮಪಾನಮಾಡುವುದಕ್ಕೋಸ್ಕರ । **ಉಪ**—ಸಮೀಪಕ್ಕೆ (ಕರೆದುಕೊಂಡು ಬಾ).

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳ ಪ್ರೀತಿಪಾತ್ರರಾದ ಪತ್ನಿಯರನ್ನೂ, ತ್ವಷ್ಟೃವನ್ನೂ, ಸೋಮಪಾನಮಾಡಲು ಇಲ್ಲಿಗೆ ಕರೆದುಕೊಂಡು ಬಾ.

## English Translation.

Agni, bring hither, the anxious wives of the gods and the god Twashtri to drink our Soma

॥ ವಿಶೇಷವಿಷಯಗಳು ॥

ಅಗ್ನಿಷ್ಟೋಮಯಾಗದಲ್ಲಿ ಪ್ರಾತಸ್ಸವನವೆಂಬ ಪ್ರಾತಃಕಾಲದ ಸೋಮಾಭಿಷವಕರ್ಮಗದಲ್ಲಿ **ಅಗ್ನೇ ಪತ್ನೀ** ಎಂಬ ಋಕ್ಕನ್ನು ನೇಷ್ಟೃವೆಂಬ ಋತ್ವಿಜನು ಯಜ್ಯಾಮಂತ್ರವನ್ನಾಗಿ ಉಪಯೋಗಿಸುವನು. ಈ ವಿಷಯದಲ್ಲಿ ಆಶ್ವಲಾಯನ ಶ್ರೌತ ಸೂತ್ರದಲ್ಲಿ (ಆ. ೫–೫) **ಪ್ರಶಾಸ್ತಾ ಬ್ರಾಹ್ಮಣಾಚ್ಛಂಸೀ** ಎಂಬ ಖಂಡದಲ್ಲಿ **ಅಗ್ನೇ ಪತೀರಿಹಾ ವಹ** (ಋ. ಸಂ. ೧–೨೨–೯) **ಉಕ್ಷಾನ್ನಾಯ ವಶಾನ್ನಾಯ** (ಋ. ಸಂ. ೮–೪೩–೧೧) ಎಂಬ ಸೂತ್ರವಿರುವುದು.

ಈ ಋಕ್ಕಿನಲ್ಲಿಯೂ ಮುಂದಿನ ಮೂರು ಋಕ್ಕುಗಳಲ್ಲಿಯೂ ದೇವತೆಗಳ ಪತ್ನಿಯರನ್ನು ಪ್ರತಿಪಾದಿಸಲಾಗಿದೆ. ಈ ಋಕ್ಕಿನಲ್ಲಿ ನಿರ್ದಿಷ್ಟವಾದ ಯಾವ ದೇವಪತ್ನಿಯರ ಹೆಸರೂ ಸೂಚಿತವಾಗಿಲ್ಲ. ಸಾಮಾನ್ಯವಾಗಿ ದೇವಪತ್ನಿಯರೆಂದು ಮಾತ್ರ ಹೇಳಿರುವುದು.

**ಉಶತೀಃ—ವಶ ಕಾಂತೌ । ಕಾಮಯಮಾನಾಃ ॥** ದೇವತೆಗಳಿಗೆ ಪ್ರಿಯರಾದ, ತೇಜಸ್ವಿಗಳಾದ, loving, anxious & c.

**ತ್ವಷ್ಟಾರಂ**—ತ್ವಷ್ಟೃವನ್ನು; ದೇವಪತ್ನಿಯರ ಜತೆಯಲ್ಲಿ ತ್ವಷ್ಟೃವನ್ನು ಋಷಿಯು ಏತಕ್ಕಾಗಿ ಆಹ್ವಾನ ಮಾಡಿರುವನೆಂಬುದು ವಿಶದವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಪತ್ನೀಃ**—' ಪಾ ರಕ್ಷಣೇ ' ಧಾತು, **' ಪಾತೇರ್ಡತಿಃ '** (ಉ. ಸೂ. ೩-೪೯೭) ಎಂಬುದರಿಂದ ಪಾ ರಕ್ಷಣೇ ಧಾತುವಿನ ಮುಂದೆ ಡತಿಪ್ರತ್ಯಯ ಬರುವುದು, ಡಿತ್ಕರಣಸಾಮರ್ಥ್ಯದಿಂದ ಭ ಸಂಜ್ಞೆ ಇಲ್ಲದಿದ್ದರೂ **' ಟೇಃ '** (ಪಾ. ಸೂ. ೬-೪-೧೪೩) ಎಂಬುದರಿಂದ ಟಿ ಲೋಪ. ಪ್ರತ್ಯಯ ಸ್ವರದಿಂದ ಆದ್ಯುದಾತ್ತ ಪತಿಶಬ್ದ. **' ಪ್ರತ್ಯುರ್ನೋ ಯಜ್ಞಸಂಯೋಗೇ '** (ಪಾ. ಸೂ. ೪-೧-೩೩) ಯಜ್ಞಫಲಭೋಕ್ತೃತ್ವರೂಪವಾದ ಯಜ್ಞ ಸಂಬಂಧತೋರುವಾಗ ಸ್ತ್ರೀಲಿಂಗದಲ್ಲಿ ಪತಿಶಬ್ದದ ಮುಂದೆ ಙೀಪ್ ಬರುವುದು. ಪತಿಶಬ್ದದ ತಕಾರಕ್ಕೆ ನಕಾರದೇಶವೂ ಬರುವುದು ಎಂಬುದರಿಂದ ಙೀಪ್ ನಕಾರಾದೇಶಗಳು ಬಂದರೆ ಪತ್ನೀ ಎಂದಾಗುವುದು, ಇಲ್ಲಿ ಸೂತ್ರಕ್ಕೆ ನಕಾರಾದೇಶ ಮಾತ್ರ ವಿಧಾಯಕತ್ವವನ್ನು ವರ್ಣಿಸಿದರೆ **' ಋನ್ನೇಭ್ಯೋ ಙೀಪ್ '** (ಪಾ. ಸೂ. ೪-೧-೫) ಎಂಬುದರಿಂದ ನಾಂತಲಕ್ಷಣವಾದ ಙೀಪ್ ಬರುವುದು. ಙೀಪ್ ಪಿತ್. ಆದ್ದರಿಂದ **' ಅನುದಾತ್ತೌ ಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ, ಏವಂಚ ಡತಿಪ್ರತ್ಯಯ ಸ್ವರವೇ ನಿಲ್ಲುವುದು.

**ಉಶತೀಃ**—ವಶ ಕಾನ್ತೌ, ಧಾತು ಲಟ್ **' ಲಟಶ್ಶತೃಶಾನಚಾವಪ್ರಥಮಾ ಸಮಾನಾಧಿಕರಣೇ '** (ಪಾ. ಸೂ. ೨-೨-೧೨೪) ಎಂಬುದರಿಂದ ಶತೃ ಆದೇಶ ಶಪ್ ವಿಕರಣ. ಅದಕ್ಕೆ **' ಅದಿಪ್ರಭೃತಿಭ್ಯಃ ಶಪಃ '** (ಪಾ. ಸೂ ೨-೪-೭೨) ಎಂಬುದರಿಂದ ಲುಕ್, **' ಸಾರ್ವಧಾತುಕಮಪಿತ್ '** ಎಂಬುದರಿಂದ ಶತೃವು ಙಿತ್ ಆದ್ದರಿಂದ **' ಗ್ರಹಿಜ್ಯಾವಯಿವ್ಯಧಿವಷ್ಟಿ '** (ಪಾ. ಸೂ. ೬-೧-೧೬) ಎಂಬುದರಿಂದ ಸಂಪ್ರಸಾರಣ ವಕಾರಕ್ಕೆ ಉಕಾರ, ಪೂರ್ವರೂಪ ಉಶತ್ **' ಉಗಿತಶ್ಚ '** (ಪಾ. ಸೂ. ೪-೧-೬) ಸ್ತ್ರೀಲಿಂಗದ ಉಗಿದಂತವಾದ ಪ್ರಾತಿಪದಿಕದ ಮುಂದೆ ಙೀಪ್ ಬರುವುದು ಎಂಬುದರಿಂದ ಙೀಪ್ **' ಶತುರನುಮೋನದ್ಯಜಾದೀ '** (ಪಾ. ಸೂ. ೬-೧-೧೭೩) ನುಮಾಗಮುವನ್ನು ಹೊಂದದ ಯಾವ ಶತೃ ಇದೆಯೋ ಅದನ್ನು ಕೊನೆಯಲ್ಲಿ ಹೊಂದಿ ಅಂತೋದಾತ್ತವಾಗಿರುವ ಶಬ್ದದ ಮುಂದೆ ಇರುವ ನದೀಸಂಜ್ಞಕಗಳೂ ಅಜಾದಿಯಾದ ಶಸಾದಿವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ ಙೀಪ್ ಉದಾತ್ತ ॥ ೯ ॥

॥ ಸಂಹಿತಾಪಾಠಃ ॥

ಆ ಗ್ನಾ ಅಗ್ನ ಇಹಾವಸೇ ಹೋತ್ರಾಂ ಯವಿಷ್ಠ ಭಾರತೀಂ ।
ವರೂತ್ರೀಂ ಧಿಷಣಾಂ ವಹ ॥ ೧೦ ॥

॥ ಪದಪಾಠಃ ॥

**ಆ । ಗ್ನಾಃ । ಅಗ್ನೇ । ಇಹ । ಅವಸೇ । ಹೋತ್ರಾಂ । ಯವಿಷ್ಠ । ಭಾರತೀಂ ॥**

**ವರೂತ್ರೀಂ । ಧಿಷಣಾಂ । ವಹ ॥ ೧೦ ॥**

॥ ಸಾಯಣಭಾಷ್ಯಂ ॥

ಹೇ ಅಗ್ನೇ ಅವಸೇಽಸ್ಮಾನವಿತುಂ ಗ್ನಾ ದೇವಪತ್ನೀರಿಹಾ ವಹ । ತಥಾ ಹೇ ಯವಿಷ್ಠ ಯುವತ-ಮಾಗ್ನೇ ಹೋತ್ರಾಂ ಹೋಮನಿಷ್ಪಾದಕಾಗ್ನಿಪತ್ನೀಂ ಭಾರತೀಂ ಭರತನಾಮಕಸ್ಯಾದಿತ್ಯಸ್ಯ ಪತ್ನೀಂ ವರೂತ್ರೀಂ ವರಣೀಯಾಂ ಧಿಷಣಾಂ ವಾಗ್ದೇವೀಂ ಚಾ ವಹ । ವಾಗ್ವೈ ಧಿಷಣೇತಿ ವಾಜಸನೇಯಕಂ । ಭರತ ಆದಿತ್ಯಃ । ನಿ. ೮-೧೩ । ಇತಿ ಯಾಸ್ಕೇನೋಕ್ತತ್ವಾತ್ತಸ್ಯ ಪತ್ನೀ ಭಾರತೀತ್ಯುಚ್ಯತೇ ॥ ಗಮ್ಯಂತ ಇತಿ ಗ್ನಾಃ । ಗಮ್ಲೃ ಸೃಪ್ಲೃ ಗತೌ । ಔಣಾದಿಕೋ ಙ್ನಪ್ರತ್ಯಯಃ । ಡಿತ್ವಾಟ್ಟಿಲೋಪಃ । ಪ್ರತ್ಯಯ-ಸ್ವರಃ । ಹೋತ್ರಾಂ । ಹುಯಾಮಾಶ್ರುಭಸಿಭ್ಯಸ್ತ್ರನ್ । ಉ. ೪-೧೬೭ । ಇತಿ ತ್ರನಂತೋ ನಿತ್ತ್ವಾದಾದ್ಯು-ದಾತ್ತಃ । ಅತಿಶಯೇನ ಯುವಾ ಯವಿಷ್ಠಃ । ಅತಿಶಾಯನೇ ತಮಬಿಷ್ಠನೌ । ಸ್ಥೂಲದೂರೇತ್ಯಾದಿನಾ । ಪಾ. ೬-೪-೧೫೬ । ಯಣಾದಿಪರಸ್ಯ ಲೋಪಃ ಪೂರ್ವಸ್ಯ ಚ ಗುಣಃ । ಭಾರತೀಂ । ಶಾರ್ಙ್ಗರವಾದೇರ-ವೃತ್ಕೃತತ್ವಾತ್ ಙೀನಂತೋ ನಿತ್ತ್ವಾದಾದ್ಯುದಾತ್ತಃ । ವರೂತ್ರೀಂ । ಗ್ರಸಿತಸ್ಕಭಿತೇತ್ಯಾದೌ । ಪಾ. ೭-೨-೩೪ । ಯದ್ಯಪಿ ವರೂತೃಶಬ್ದಸ್ತೃಜಂತ ಇತ್ಯುಕ್ತಂ ತಥಾಪ್ಯಂತ ಇತಿಕರಣಸ್ಯ ಪ್ರದರ್ಶನಾ-ರ್ಥತ್ವಾದ್ವರೂತೃಶಬ್ದಸ್ತೃನಂತೋಽಪಿ ದ್ರಷ್ಟವ್ಯಃ । ತೇನ ನಿತ್ತ್ವಾದಾದ್ಯುದಾತ್ತತ್ವಂ । ಶೇಷನಿಘಾತೇನ ಋಕಾರಸ್ಯಾನುದಾತ್ತತ್ವಾದುದಾತ್ತಯಣೋ ಹಲ್ಪೂರ್ವಾದಿತ್ಯಪಿ ನ ಙೀಪ ಉದಾತ್ತತ್ವಂ । ಧಿಷಣಾಂ । ಕ್ಯುಪ್ರತ್ಯಯಾನುವೃತ್ತೌ ಧೃಷೇರ್ಧಿಷ ಚ ಸಂಜ್ಞಾಯಾಂ । ಉ. ೨-೮೨ । ಇತಿ ಕ್ಯುಃ ॥ ೫ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಅವಸೇ**—ನಮ್ಮನ್ನು ಕಾಪಾಡಲು । **ಗ್ನಾಃ**—ದೇವಪತ್ನಿಯರನ್ನು । **ಇಹ**—ಇಲ್ಲಿಗೆ । **ಆ ವಹ**—ಕರೆದುಕೊಂಡು ಬಾ । **ಯವಿಷ್ಠ**—ಯುವಕರಲ್ಲಿ ಶ್ರೇಷ್ಠನಾದ ಅಗ್ನಿಯೇ । **ಹೋತ್ರಾಂ**—ದೇವತೆಗಳಿಗೆ ಹವಿಸ್ಸನ್ನು ಒಯ್ಯುವ ಅಗ್ನಿಪತ್ನಿಯನ್ನೂ । **ಭಾರತೀಂ**—(ಭರತನಾಮಕ ಆದಿತ್ಯ ಪತ್ನಿ) ಭಾರತಿಯನ್ನೂ । **ವರೂತ್ರೀಂ**—ಪೂಜ್ಯಳಾದ ಅಥವಾ ಅಪೇಕ್ಷ್ಯಳಾದ । **ಧಿಷಣಾಂ**—ವಾಗ್ದೇವತೆಯನ್ನೂ **ಆವಹ**—ಕರೆದುಕೊಂಡು ಬಾ.

॥ ಭಾವಾರ್ಥ ॥

ಎಲೈ ಯುವಕನಾದ ಅಗ್ನಿಯೇ, ಹೋತ್ರಾ, ಭಾರತೀ, ಪೂಜ್ಯಳೂ ಅಪೇಕ್ಷಣೀಯಳೂ ಆದ ವಾಗ್ದೇವತೆ, ಇವರೇ ಆದಿಯಾದ ದೇವಪತ್ನಿಯರನ್ನು ನಮ್ಮ ರಕ್ಷಣಾರ್ಥವಾಗಿ ಕರೆದುಕೊಂಡು ಬಾ.

## English Translation.

O youthful Agni, bring hither for our protection the goddesses, Hotra, Bharathi, Varutri, and Dhishana.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ದೇವಪತ್ನಿಯರಾದ ಹೋತ್ರಾ, ಭಾರತೀ, ವರೂತ್ರೀ ಧಿಷಣಾ ಎಂಬ ಸ್ತ್ರೀಯರನ್ನು ಆಹ್ವಾನಿಸಲಾಗಿದೆ. ಇವರೆಲ್ಲ ಬೇರೆ ಬೇರೆ ದೇವತೆಗಳಾದರೂ ಈ ಶಬ್ದಗಳೆಲ್ಲಾ ಎಂದರೆ ಹೋತ್ರಾ (ನಿ. ೨-೨೩), ಭಾರತೀ (ನಿ. ೨-೨೩-) ಧಿಷಣಾ (೨-೨೩) ಎಂಬ ಶಬ್ದಗಳು ವಾಙ್ನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದಲೂ ವರೂತ್ರಿಶಬ್ದವು ವರಣೀಯಾರ್ಥದಲ್ಲಿ ಧಿಷಣಾಶಬ್ದಕ್ಕೆ ವಿಶೇಷಣಪದವಾಗಿಯೂ ಇರುವುದರಿಂದಲೂ ಇವರೆಲ್ಲರೂ ಬೇರೆ ಬೇರೆ ದೇವತೆಗಳೇ ಅಥವಾ ವಾಗ್ದೇವಿಯ ಬೇರೆ ಬೇರೆ ಹೆಸರುಗಳೇ ಎಂಬ ವಿಚಾರದಲ್ಲಿ ಸಂಶಯಕ್ಕೆ ಆಸ್ಪದವಿದೆ. ಭಾಷ್ಯಕಾರರ ಅರ್ಥವಿವರಣೆಯ ಪ್ರಕಾರ ಹೋತ್ರಾ ಎಂದರೆ ಹೋಮನಿಷ್ಪಾದಕನಾದ ಅಗ್ನಿಯ ಪತ್ನಿಯೆಂದೂ (ನಿ. ೩-೧೯ ರಲ್ಲಿ ಹೋತ್ರಾ ಎಂಬ ಶಬ್ದವು ಯಜ್ಞನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಯಜ್ಞೇಶ್ವರನಾದ ಅಗ್ನಿಯ ಪತ್ನಿಯೆಂದು ಹೇಳಬಹುದು) ಭಾರತೀಂ ಎಂದರೆ ಭರತನಾಮಕ ಆದಿತ್ಯನ (ನಿ. ೮-೧೩) ಪತ್ನಿಯೆಂದೂ, ಧಿಷಣಾಂ ಎಂದರೆ ವಾಗ್ದೇವತೆಯೆಂದೂ ಹೇಳಬೇಕು.

**ಗ್ನಾಃ—ಗ್ನಾ ಇತಿ ಸ್ತ್ರೀನಾಮ। ದೇವಪತ್ನೀಃ।** ಗ್ನಾಃ ಎಂಬ ಶಬ್ದವು ವಾಙ್ನಾಮಗಳಲ್ಲಿಯೂ (ನಿ. ೨-೨೩) ಪಠಿತವಾಗಿರುವುದು. ಆದರೆ—ಮೇನಾ ಗ್ನಾ ಇತಿ ಸ್ತ್ರೀಣಾಂ (ನಿ. ೩-೨೧) ಮೇನಾಃ ಗ್ನಾಃ ಏತೇ ಸ್ತ್ರೀಣಾಂ ನಾಮನೀ ಎಂದೂ ನಿರುಕ್ತವಚನವಿರುವುದು. ಗ್ನಾಃ ಎಂಬ ಶಬ್ದಕ್ಕೆ ನಿರುಕ್ತವ್ಯಾಖ್ಯಾನಕಾರರು **ಗ್ನಾಃ-ಗಚ್ಛಂತಿ ಹಿ ಏನಾಃ ಮೈಥುನೇನ ಧರ್ಮೇಣ**—ಸಂಭೋಗಕ್ಕಾಗಿ ಪುರುಷರು ಸ್ತ್ರೀಯರ ಸಮೀಪಕ್ಕೆ ಹೋಗುವುದರಿಂದ ಸ್ತ್ರೀಯರಿಗೆ ಗ್ನಾಃ ಎಂದು ಹೆಸರು ಎಂದು ಹೇಳಿರುವರು. ಈ ಋಕ್ಕಿನಲ್ಲಿ ಗ್ನಾಃ—ಸ್ತ್ರೀಯರು ಎಂದರೆ ಹಿಂದಿನ ಋಕ್ಕಿನಲ್ಲಿ ಹೇಳಿದಂತೆ ದೇವಪತ್ನಿಯರು ಎಂದಭಿಪ್ರಾಯವು. ಗ್ನಾಃ ಎಂಬ ಶಬ್ದವು ಋಗ್ವೇದದಲ್ಲಿ ಋ. ಸಂ. ೧-೨೨-೧೦; ೧-೬೧-೮; ೪-೯-೪; ೫-೪೩-೧೩; ೫-೪೬-೨; ೫-೪೬-೮; ೬-೫೦-೧೫; ೬-೬೮-೪; ೧೦-೯೫-೭ ಎಂಬ ಋಕ್ಕುಗಳಲ್ಲಿ ಪಠಿತವಾಗಿದೆ.

**ಯವಿಷ್ಠ—ಅತಿಶಯೇನ ಯುವಾ ಯವಿಷ್ಠಃ।** ಯುವಕ, ತರುಣ ಯೌವನಪುರುಷ.

॥ ವ್ಯಾಕರಣಪ್ರಕ್ರಿಯಾ ॥

**ಗ್ನಾಃ—ಗಮ್ಯಂತೇ ಇತಿ ಗ್ನಾಃ-' ಗಮ್ಲೃಸೃಪ್ಲೃಗತೌ '** ಧಾತು ಇದರ ಮುಂದೆ ಔಣಾದಿಕ ಙ್ನ ಪ್ರತ್ಯಯ ಙಿತ್ಕರಣ ಸಾಮರ್ಥ್ಯದಿಂದ ಭಸಂಜ್ಞೆ ಇಲ್ಲದಿದ್ದರೂ **' ಟೇಃ '** (ಪಾ. ಸೂ. ೬-೪-೧೫೫) ಎಂಬುದರಿಂದ ಧಾತುವಿನ ಟಿಯಾದ ಅಮ್‌ಗೆ ಲೋಪ ಗ್+ನ=ಗ್ನ. ದ್ವಿತೀಯಾ ಬಹುವಚನದಲ್ಲಿ ಗ್ನಾಃ ಎಂದಾಗುತ್ತೆ. ' ಗ್ನ ' ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತ.

**ಹೋತ್ರಾಂ—' ಹು ಯಾ ಮಾ ಶ್ರು ಭಸಿಭ್ಯಸ್ತ್ರನ್ '** (ಉ.ಸೂ. ೪-೬೦೭) ಹು ದಾನಾದನಯೋಃ, ಯಾ ಪ್ರಾಪಣೇ, ಮಾ ಮಾನೇ, ಶ್ರು ಶ್ರವಣೇ, ಭಸ ಭರ್ತ್ಸನದೀಪ್ತ್ಯೋಃ, ಈ ಧಾತುಗಳ ಮುಂದೆ ತ್ರನ್ ಪ್ರತ್ಯಯ

ಬರುವುದು ಎಂಬುದರಿಂದ ತ್ರನ್, ಪ್ರತ್ಯಯವು ನಿತ್ತಾದ್ದರಿಂದ ಆದ್ಯುದಾತ್ತ ಬರುವುದು. ಹು+ತ್ರ. **'ಸಾರ್ವಧಾತುಕಾರ್ಧಧಾತುಕಯೋಃ'** (ಪಾ. ಸೂ. ೭-೩-೮೪) ಎಂಬುದರಿಂದ ಗುಣ, ಹೋತ್ರ. ಸ್ತ್ರೀಲಿಂಗದಲ್ಲಿ ಹೋತ್ರಾ ಎಂದಾಗುವುದು, ದ್ವಿತೀಯಾ ಏಕವಚನಾಂತ.

**ಯವಿಷ್ಠ**—ಅತಿಶಯೇನ ಯುವಾ ಎಂದು ವಿಗ್ರಹ **'ಅತಿಶಾಯನೇ ತಮಬಿಷ್ಠನೌ'** (ಪಾ. ಸೂ. ೫-೩-೫೫) ಅತಿಪೂರ್ವಕವಾದ ಶೀಙ್ ಸ್ವಪ್ನೇ ಧಾತುವಿನ ಮುಂದೆ ಕರ್ತರಿ ಲ್ಯುಟ್ ಪ್ರತ್ಯಯ ಬಂದರೆ ಅತಿಶಯನ ಎಂದಾಗುವುದು. ಅತಿಶಯನಮೇವ ಅತಿಶಾಯನಮ್ **'ಅತಿಶಾಯನೇ'** ಎಂಬ ಸೂತ್ರದಲ್ಲಿ ನಿಪಾತ ಮಾಡಿರುವುದರಿಂದ ಶಕಾರಕ್ಕೆ ದೀರ್ಘ ಬಂದು ಅತಿಶಾಯನೇ ಎಂದಾಗುವುದು. ಏವಂಚ ಲೋಕದಲ್ಲಿಯೂ ಅತಿಶಾಯನ ಎಂಬ ಪ್ರಯೋಗವು ಸಾಧುವಾಗುವುದು. **'ಅಬಾಧಕಾನ್ಯಪಿ ನಿಪಾನನಾನಿ ಭವನ್ತಿ'** ಎಂಬುವುದರಿಂದ ಅತಿಶಯನ, ಎಂದು ಹ್ರಸ್ವ ಶ ಘಟಿತವೂ ಸಾಧುವೇ, ಕೇವಲ ಶೀಙ್ ಧಾತುವು ಸ್ವಪ್ನಾರ್ಥಕವಾದರೂ ಅತಿ ಎಂಬ ಉಪಸರ್ಗಪೂರ್ವಕವಾದ ಶೀಙ್ ಧಾತುವು ಉಪಸರ್ಗಬಲದಿಂದ ಪ್ರಕರ್ಷ ಎಂಬ ಅರ್ಥವನ್ನು ಹೇಳುವುದು, ಪ್ರಕರ್ಷ ಎಂದರೆ ಅಧಿಕ ಎಂದು ಅರ್ಥವಲ್ಲ. ಇದಕ್ಕೆ ನ್ಯೂನೀಕರಣರೂಪವಾದ ಅಭಿಭವ ಎಂದರ್ಥ. ಇಂತಹ ಅತಿಶಯವಿಶಿಷ್ಟಾರ್ಥವಾಚವಾದ ಪ್ರಾತಿಪದಕದ ಮುಂದೆ ಸ್ವಾರ್ಥದಲ್ಲಿ ತಮಪ್ ಇಷ್ಠನ್ ಪ್ರತ್ಯಯಗಳು ಬರುವುವು ಎಂದು ಸೂತ್ರಾರ್ಥ. ಅತಿಶಾಯನ ಎಂಬಲ್ಲಿ ಭಾವಲ್ಯುಡಂತವನ್ನು ಆಶ್ರಯಿಸಿ ಅತಿಶಾಯನೇ ಅರ್ಥೇ ತಮಬಿಷ್ಠನೌ ಭವತಃ, ಎಂದು ಸೂತ್ರಾರ್ಥವರ್ಣನೆ ಮಾಡಿದರೆ, ಪ್ರತ್ಯಯಾರ್ಥಕ್ಕೆ ಧಾನ್ಯ ಬರಬೇಕಾಗುವುದು ಏವಂಚ ಲಘೋರತಿಶಯನಂ, ಲಘುತಮಂ ಎಂದೇ ಆಗಬೇಕಾಗುವುದು. ಲಘುತಮಃ, ಲಘುತಮಾ ಇತ್ಯಾದಿ ಪುಲ್ಲಿಂಗ ಸ್ತ್ರೀಲಿಂಗರೂಪಗಳ ಸಿದ್ಧಿಸವು, ಅತಿಶಾಯನೇ ವರ್ತಮಾನಾತ್ಪ್ರಾತಿಪದಿಕಾತ್. ಸ್ವಾರ್ಥೇ ತಮಬಿಷ್ಠನೌ ಭವತಃ ಎಂದು ಅರ್ಥವಂ ಬಣ್ಣಿಸಿದರೆ, ಅತಿಶಯ, ಪ್ರಕರ್ಷ, ಮೊದಲಾದ ಶಬ್ದಗಳ ಮುಂದೆ ಮಾತ್ರ ತಮಬಿಷ್ಠನ್‌ಗಳು ಬರುವುವು ಪಟು, ಆಢ್ಯ ಮೊದಲಾದ ಶಬ್ದಗಳು ಅತಿಶಯಾರ್ಥಕವಲ್ಲದುದರಿಂದ ಅವುಗಳ ಮುಂದೆ ಈ ಪ್ರತ್ಯಯಗಳು ಬರಲಾರವು. ಆದ್ದರಿಂದ ಅತಿಶಾಯನೇ ಎಂಬುದು ಪ್ರಕೃತ್ಯರ್ಥಕ್ಕೆ ವಿಶೇಷಣವು, ಎಂದು ಇಟ್ಟುಕೊಳ್ಳಬೇಕು ಏವಂಚ ಪೂರ್ವನಿರುಕ್ತಾರ್ಥವು ಏರ್ಪಡುವುದರಿಂದ ಯಾವ ದೋಷವೂ ಬರುವುದಿಲ್ಲ, ಇಲ್ಲಿ ಯುವನ್ ಶಬ್ದದ ಮುಂದೆ ಇಷ್ಠನ್ ಬಂದರೆ ಯುವನ್+ಇಷ್ಠನ್, ಎಂದಿದ್ದರೆ **'ಸ್ಥೂಲ ದೂರ ಯುವ ಹ್ರಸ್ವ ಕ್ಷಿಪ್ರ ಕ್ಷುದ್ರಾಣಾಂ ಯಣಾದಿ ಪರಂ ಪೂರ್ವಸ್ಯ ಚ ಗುಣಃ'** (ಪಾ. ಸೂ. ೬-೪-೧೫೬) ಇಲ್ಲಿ **'ತುರಿಷ್ಠೇಮೇಯಸ್ಸು'** (ಪಾ. ಸೂ. ೬-೪-೧೫೪) ಎಂಬುದರಿಂದ ಇಷ್ಠೇಮೇಯಸ್ಸು ಎಂದು ಅನುವೃತ್ತವಾಗುವುದು ಇದಕ್ಕೆ ಇಷ್ಠನ್ ಇಮನಿಚ್, ಈಯಸುನ್‌ಗಳು ಪರದಲ್ಲಿರುವಾಗ ಎಂದರ್ಥ, **'ಅಲ್ಲೋಪೋಽನಃ'** (ಪಾ. ಸೂ. ೬-೪-೧೩೪) ಎಂಬುದರಿಂದ **ಲೋಪಃ** ಎಂಬುದು ಅನುವೃತ್ತವಾಗುವುದು. ಲುಪ್ಯತೇ ಇತಿ ಲೋಪಃ ಭಾವೇ ಘಞ್‌ಂತ ಲೋಪ ಶಬ್ದ ಯಣ್ ಆದಿಃ ಯಸ್ಯ ತತ್ ಯಣಾದಿ ಎಂಬುದು ಲುಪ್ತಷಷ್ಠ್ಯಂತ ಪರಂ ಷಷ್ಠ್ಯರ್ಥೇ ಪ್ರಥಮಾ **'ಇಕೋ ಗುಣವೃದ್ಧೀ'** (ಪಾ. ಸೂ. ೧-೧-೩) ಗುಣ ವೃದ್ಧಿ ಶಬ್ದಗಳನ್ನುಚ್ಚರಿಸಿ ಎಲ್ಲಿ ಗುಣವೃದ್ಧಿಗಳು ವಿಹಿತವಾಗುವುವೋ ಅಲ್ಲಿ ಇಕಃ ಎಂಬ ಷಷ್ಠ್ಯಂತ ಪದವು ಉಪಸ್ಥಿತವಾಗುವುದು ಎಂಬುದರಿಂದ **'ಇಕಃ'** ಎಂಬುದು ಲಬ್ಧವಾಗುತ್ತೆ. ಪೂರ್ವಸ್ಯ ಎಂಬಲ್ಲಿ ಯಾವುದಕ್ಕಿಂತಲೂ ಪೂರ್ವಸ್ಯ ಎಂದರೆ, ಯಣಾದಿ, ಪರಂ ಎಂದು ಇದರ ಹಿಂದೆ ಇರುವುದರಿಂದ ಪರಭೂತಯಣಾದ್ಯಪೇಕ್ಷಯಾ ಪೂರ್ವಕ್ಕೆ ಎಂದು ವಿಕ್ಷಿತವು. ಯುವನ್ ಶಬ್ದವು ಗುಣವಾಚಕವಲ್ಲ ಎಂಬ ಪಕ್ಷದಲ್ಲಿ **'ಅಜಾದೀಗುಣವಾಚನಾದೇವ'**

ಎಂಬ ನಿಯಮದಿಂದ ಇಷ್ಠನ್ ಈಯಸುನ್‌ಗಳು ಯದ್ಯಪಿ ಬರಲಾರವು ಆದರೂ, ಈ ಪ್ರಕೃತ ಸೂತ್ರದಲ್ಲಿ ಇಷ್ಠನಾದಿಗಳು ಪರದಲ್ಲಿರುವಾಗ ಲೋಪ ಗುಣವಿಧಾನಜ್ಞಾಪಕದಿಂದಲೇ ಯುವನ್ ಶಬ್ದದ ಮುಂದೆ ಇಷ್ಠನ್ ಈಯಸುನ್‌ಗಳು ಬರುವುವು. ವಸ್ತುತಃ **'ಆಕಡಾರಾದೇಕಾ ಸಂಜ್ಞಾ'** (ಪಾ. ಸೂ. ೧-೪-೧) **'ಜಾತೇರಸ್ತ್ರೀ ವಿಷಯಾದಯೋಪಧಾತ್'** (ಪಾ. ಸೂ. ೪-೧-೬೩) ಈ ಸೂತ್ರಗಳ ಮಹಾಭಾಷ್ಯವನ್ನು ಪರಾಮರ್ಶಿಸಿದರೆ ಯುವನ್ ಶಬ್ದವು ಗುಣವಾಚಕವೂ ಇರುವುದು ಎಂದು ಏರ್ಪಡುವುದು. ಏವಂಚ ಸ್ಥೂಲ, ದೂರ, ಯುವನ್, ಹ್ರಸ್ವ, ಕ್ಷಿಪ್ರ, ಕ್ಷುದ್ರ, ಈ ಆರು ಶಬ್ದಗಳ ಪರ ಭೂತ ಯಣಾದಿಗೆ ಲೋಪ ಬರುವುದು ಪೂರ್ವದ ಇಕ್ಕಿಗೆ ಗುಣಬರುವುದು ಎಂದು ಸೂತ್ರಾರ್ಥವು ಏರ್ಪಡುವುದು. ಕರ್ಮಣಿ ಘಞಂತ ಲೋಪಶಬ್ದ ಎಂದು ಇಟ್ಟುಕೊಂಡು, ಯಣಾದಿ ಎಂಬುದು ಲುಪ್ತಷಷ್ಠ್ಯಂತ ಎಂದು ವರ್ಣಿಸಬೇಕಾಗಿಲ್ಲ. ಅದು ಪ್ರಥಮಾಂತವೇ. ಈ ಪಕ್ಷದಲ್ಲಿ ಈ ಆರು ಶಬ್ದಗಳ ಪರಭೂತವಾದ ಯಣಾದಿಯು ಲುಪ್ತವಾಗುವುದು, ಪೂರ್ವದ ಇಕ್ಕಿಗೆ ಗುಣ ಬರುವುದು ಎಂದು ಸೂತ್ರಾರ್ಥ. ಯುವನ್, ಹ್ರಸ್ವ, ಎಂಬ ಪದಗಳಲ್ಲಿ ಮೊದಲನೆಯದರಲ್ಲಿ ಯಕಾರ, ವಕಾರಗಳೆರಡೂ ಎರಡನೇಯದರಲ್ಲಿ ರೇಫವಕಾರಗಳೆರಡೂ ಯಣ್ ಪ್ರತ್ಯಾಹಾರಕ್ಕೆ ಸೇರಿದ ವರ್ಣಗಳು, ಪರಂ ಶಬ್ದವು ಸೂತ್ರದಲ್ಲಿಲ್ಲದಿದ್ದರೆ, ಈ ಎರಡು ಶಬ್ದಗಳಲ್ಲಿ ಮೊದಲನೆಯ ಯಣ್‌ಗೂ ಲೋಪ ಬರಬೇಕಾಗುವುದು. ಯುವನ್+ಇಷ್ಠನ್ ಎಂಬಲ್ಲಿ ಈ ಸೂತ್ರದಿಂದ 'ವನ್' ಗೆ ಲೋಪ, ಉಕಾರಕ್ಕೆ ಗುಣವೂ ಬಂದರೆ-ಯೋ+ಇಷ್ಠ-ಅವಾದೇಶ ಯವಿಷ್ಠ ಎಂದಾಗುತ್ತೆ. **'ಆಮನ್ತ್ರಿತಸ್ಯಚ'** (ಪಾ ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ.

**ಭಾರತೀಮ್**— **'ಭೃ ಮೃ ದೃಶಿ ಯಜಿ ಪರ್ವಿ ಪಚ್ಯಮಿ ತಮಿ ನಮಿ ಹರ್ಯಿಭ್ಯೋಽತಚ್'** (ಉ. ಸೂ. ೩-೩೯೦) ಭೃಞ್ ಭರಣೇ, ಮೃಙ್ ಪ್ರಾಣತ್ಯಾಗೇ, ದೃಶಿರ್ ಪ್ರೇಕ್ಷಣೇ, ಯಜ ದೇವಪೂಜಾದೌ, ಪರ್ವ ಪೂರಣೇ, ಡುಪಚಷ್ ಪಾಕೇ, ಅಮ ಗತೌ, ತಮು ಕಾಂಕ್ಷಾಯಾಂ, ಣಮ ಪ್ರಹ್ವತ್ವೇ ಶಬ್ದೇಚ, ಹರ್ಯ ಗತಿಕಾಂತ್ಯೋಃ, ಈ ಹತ್ತು ಧಾತುಗಳ ಮುಂದೆ ಅತಚ್‌ಪ್ರತ್ಯಯು ಬರುವುದು ಎಂಬುದರಿಂದ ಭೃ ಧಾತುವಿನ ಮುಂದೆ, ಅತಚ್ ಪ್ರತ್ಯಯು ಬಂದರೆ ಗುಣಬಂದು ಭರತ ಎಂದಾಗುತ್ತೆ **'ಪ್ರಜ್ಞಾದಿಭ್ಯಶ್ಚ'** (ಪಾ. ಸೂ. ೫-೪-೩೮) ಪ್ರಜ್ಞಾದಿಗಣ ಪಠಿತಶಬ್ದಗಳ ಮುಂದೆ ಸ್ವಾರ್ಥದಲ್ಲಿ ಅಣ್‌ಪ್ರತ್ಯಯು ಬರುವುದು. ಎಂಬುದರಿಂದ ಅಣ್‌ಪ್ರತ್ಯಯು **'ತದ್ಧಿತೇಷ್ವಚಾಮಾದೇಃ'** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ-ಭಾರತ ಎಂದು ಆಯಿತು ಇದು ಆದಿತ್ಯ (ಸೂರ್ಯ) ನಿಗೆ ಸಂಜ್ಞೆ, ಭಾರತಸ್ಯ ಸ್ತ್ರೀ, ಎಂದು ವಿವಕ್ಷಿಸಿದಾಗ, ಇದು ಅಣ್‌ಪ್ರತ್ಯಯಾಂತವಾದ್ದರಿಂದ **'ಟಿಡ್ಢಾಣಞ್'** (ಪಾ. ಸೂ. ೪-೧-೧೫) ಎಂಬುದರಿಂದ ಯದ್ಯಪಿ ಙೀಪ್ ಪ್ರಾಪ್ತವಾದುದು, ಆದರೂ ಶಾರ್ಙ್ಗರವಾದಿಗಣದಲ್ಲಿ ಗಣವು ಮುಗಿಯಿತೆಂಬುದನ್ನು ಸೂಚಿಸುವ ವೃತ್ ಎಂಬುದು ಇಲ್ಲದುದರಿಂದ ಶಾರ್ಙ್ಗರವಾದಿಗಣವು ಆಕೃತಿಗಣವೆಂದು ಸಿದ್ಧವಾಗುವುದರಿಂದ **'ಶಾರ್ಙ್ಗರವಾದ್ಯಞೋಙೀನ್'** (ಪಾ. ಸೂ. ೪-೧-೭೩) ಶಾರ್ಙರವಾದಿ ಎಂಬುದು ಲುಪ್ತಪಂಚಮ್ಯಂತಪದ, **'ಅಜಾದ್ಯತಃ-'** (ಪಾ. ಸೂ. ೪-೧೪) ಅತಃ ಎಂಬ ಪದವೂ **'ಜಾತೇರಸ್ತ್ರೀವಿಷಯಾತ್-'** (ಪಾ. ಸೂ. ೪-೧-೬೩) ಎಂಬುದರಿಂದ ಜಾತೇ ಎಂದು ಅನುವೃತ್ತವಾಗುತ್ತೆ ಅತಃ ಎಂಬುದು ಜಾತೇ ಎಂಬುದಕ್ಕೆ ವಿಶೇಷಣವಾದ್ದರಿಂದ **'ಯೇನವಿಧಿಸ್ತದನ್ತಸ್ಯ'** (ಪಾ. ಸೂ. ೧-೧-೭೨) ಎಂಬುದರಿಂದ ತದಂತಲಾಭ. ಏವಂಚ ಸ್ತ್ರೀಲಿಂಗದಲ್ಲಿ ಶಾರ್ಙ್ಗರವಾದಿಗಣ ಪಠಿತ ಶಬ್ದಗಳ ಮುಂದೆಯೂ ಅಞ್ ಪ್ರತ್ಯಯದ ಅಕಾರವನ್ನು ಕೊನೆಯಲ್ಲಿ ಹೊಂದಿರುವ ಜಾತಿವಾಚಕದ ಮುಂದೆಯೂ ಙೀನ್ ಬರುವುದು ಎಂಬುದರಿಂದ ಙೀನ್

ಪ್ರತ್ಯಯು ಬರುವುದು **' ಯಸ್ಯೇತಿ ಚ '** (ಪಾ. ಸೂ. ೬-೪-೧೪೮) ಎಂಬುದರಿಂದ ಪ್ರತ್ಯಯದ ಹಿಂದಿನ ಅಕಾರಕ್ಕೆ ಲೋಪ, ಜ್‌ನ್ ನಿತ್-ಆದ್ದರಿಂದ **' ಞ್ನಿತ್ಯಾದಿರ್ನಿತ್ಯಂ '** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಬರುವುದು. ಶಾರ್ಙ್ಗರವಾದಿಯಲ್ಲಿ ಈ ಶಬ್ದವನ್ನು ಸೇರಿಸದೇ ಇದ್ದರೆ ಟಿಡ್ಢಾಣಞ್-ಎಂಬುದರಿಂದ ಅಣಂತ ಲಕ್ಷಣವಾದ ಙೀಪ್ ಬರಬೇಕಾಗುವುದು. ತಥಾಚ ಅದು ಪಿತ್ತಾದ್ದರಿಂದ ಅನುದಾತ್ತಪ್ರತ್ಯಯ ಸ್ವರದಿಂದ ಅಣ್‌ನ ಅಕಾರವು ಉದಾತ್ತವಾಗಿ ಭಾರತೀ ಎಂಬುದು ಮಧ್ಯೋದಾತ್ತವಾಗಬೇಕಾಗುವುದು.

**ವರೂತ್ರೀಮ್-' ಗ್ರಸಿತ, ಸ್ಕಭಿತ, ಸ್ತಭಿತ, ಸ್ತಭಿತೋ, ತ್ತಭಿತ, ಚತ್ತ, ವಿಕಸ್ತಾ, ವಿಶಸ್ತೃ-ಶಂಸ್ತೃ, ಶಾಸ್ತೃ, ತರುತೃ-ತರೂತೃ-ವರುತೃ-ವರೂತೃ-ವರೂತ್ರೀ-ರುಜ್ವಲಿತಿ-ಕ್ಷರಿತಿ, ವಮಿ, ತ್ಯಮಿತೀತಿಚ '** (ಪಾ. ಸೂ ೭-೨-೩೪) ಈ ೧೮ ಶಬ್ದಗಳು ನಿಪಾತಿಸಲ್ಪಡುವುವು. ಎಂದರ್ಥ ಇಲ್ಲಿ, ಗ್ರಸು ಅದನೇ, ಸ್ಕಂಭು, ಸ್ತಂಭು- ಈ ಎರಡೂ ರೋದನಾರ್ಥಕವಾದ ಸೌತ್ರಧಾತುಗಳು ಇವುಗಳ ಮುಂದೆ ಕ್ತ ಪ್ರತ್ಯಯವನ್ನಿಟ್ಟಾಗ ಈ ಧಾತುಗಳು. ಉದಿತ್ತಾದ್ದರಿಂದ **' ಉದಿತೋ ವಾ '** (ಪಾ. ಸೂ. ೭-೨-೫) ಎಂದು ಇಡ್ವವಿಕಲ್ಪವಿರುವುದರಿಂದ **' ಯಸ್ಯ-ವಿಭಾಷಾ '** ಎಂಬುದರಿಂದ ಇಣ್ನಿಷೇಧಪ್ರಾಪ್ತವಾದರೆ ಇಡಾಗಮವು ನಿಪಾತಿಸಲ್ಪಡುವುದು. ಸ್ತಭಿತಗ್ರಹಣ ಮಾತ್ರದಿಂದಲೇ ಉತ್ತಭಿತ ಎಂಬಲ್ಲಿಯೂ ರೂಪಸಿದ್ಧಿಯಾಗುವುದು. ಹೀಗಿದ್ದರೂ ಪುನಃ ಉತ್ತಭಿತಗ್ರಹಣ ವಿರುವುದರಿಂದ ಉತ್ ಎಂಬುದನ್ನುಳಿದ ಉಪಸರ್ಗದ ಮುಂದೆ ಸ್ತಂಭಧಾತುವಿದ್ದರೆ ಅದರ ಮುಂದಿನ ಕ್ತ ಪ್ರತ್ಯಯಕ್ಕೆ ಇಡಾಗಮ ನಿಪಾತನವಿಲ್ಲವೆಂದು ಸಿದ್ಧವಾಗುವುದು. ಉತ್+ಸ್ತಭಿತ, ಎಂಬಲ್ಲಿ **' ಉದಃ ಸ್ಥಾಸ್ತಂಭ್ವೋಃಪೂರ್ವಸ್ಯ '** (ಪಾ. ಸೂ. ೮-೪-೬೦) ಎಂಬುದರಿಂದ ಪೂರ್ವಸವರ್ಣ, ಚತೇ ಯಾಚನೇ, ಕಸ ಗತೌ, ಇವುಗಳ ಮುಂದಿರುವ ಕ್ತ ಪ್ರತ್ಯಯಕ್ಕೆ ಇಡಭಾವವು ನಿಪಾತಿತವಾಗುವುದು, ಶಸು ಹಿಂಸಾಯಾಂ, ಶಂಸು ಸ್ತುತೌ, ಶಾಸು ಅನುಶಿಷ್ಟೌ, ಈ ಧಾತುಗಳ ಮುಂದಿರುವ ತೃಚ್ ಪ್ರತ್ಯಯಕ್ಕೆ ಇಡಭಾವವು ನಿಪಾತಿಸಲ್ಪಡುವುದು. ತೄ ಪ್ಲವನತರಣಯೋಃ, ವೃಙ್ ಸಂಭಕ್ತೌ, ವೃಞ್ ವರಣೇ ಈ ಧಾತುಗಳ ಮುಂದಿರುವ ತೃಚ್ ಪ್ರತ್ಯಯಕ್ಕೆ ಉಟ್ ಊಟ್ ಎಂಬ ಆಗಮುಗಳು ನಿಪಾತಿಸಲ್ಪಡುವುವು. ವರೂತೃ ಶಬ್ದ ನಿಪಾತನದಿಂದಲೇ ಸ್ತ್ರೀ ಲಿಂಗದಲ್ಲಿ **' ಋನ್ನೇಭ್ಯೋ ಙೀಪ್ '** (ಪಾ. ಸೂ. ೪-೧-೫) ಎಂದು ಋದಂತ ಲಕ್ಷಣವಾದ ಙೀಪ್ ಬಂದರೆ ವರೂತ್ರೀ ಎಂದು ಸಿದ್ಧವಾಗುವುದರಿಂದ ಪುನಃ ವರೂತ್ರೀ ಗ್ರಹಣವು ಪ್ರಪಂಚಕ್ಕಾಗಿ (ವಿವರಣೆಗಾಗಿ) ಜ್ವಲ ದೀಪ್ತೌ, ಕ್ಷರ ಸಂಚಲನೇ ಟುವಮ್ ಉದ್ಗಿರಣೇ, ಅಮ ಗತ್ಯಾದಿಷು ಈ ನಾಲ್ಕು ಧಾತುಗಳ ಮುಂದಿರುವ ಶಪ್ ಗೆ ಇಕಾರಾದೇಶವು ನಿಪಾತಿತವಾಗಿದೆ. ಸೂತ್ರದಲ್ಲಿ ಕ್ಷರಿತಿ ಎಂಬುದರ ಮುಂದೆ ಕ್ಷಮಿತಿ ಎಂದು ಕೆಲವರು ಪಠಿಸುವರು. ಈ ಪಕ್ಷದಲ್ಲಿ ಕ್ಷಮೂಷ್ ಸಹನೇ ಧಾತುವಿನ ಮುಂದಿನ ಶಪ್‌ಗೆ ಇಕಾರಾದೇಶ ನಿಪಾತವಾಗುವುದೆಂದು ತಿಳಿಯಬೇಕು. ಈ ಸೂತ್ರದಿಂದ ಪೂರ್ವದಲ್ಲಿ ಹೇಳಿದಂತೆ ವರೂತ್ರೀ ಎಂಬುದು ವೃಞ್ ಧಾತುವಿನ ಮುಂದೆ ತೃಚ್ ಬಂದಾಗ ಊಟಾಗಮ ಬರಲು, ಗುಣ ಙೀಪ್‌ಯಣಾದೇಶಗಳು ಬಂದು ವರೂತ್ರೀ ಎಂದಾಗುವುದು. ಈ ವರೂತೃ ಶಬ್ದವನ್ನಿಟ್ಟುಕೊಂಡರೆ ತೃಚ್‌ನ ಋಕಾರವು, ಚಿತ್ಸ್ವರದಿಂದಉದಾತ್ತವಾಗಬೇಕಾಗುವುದು. ತೃನಂತಕ್ಕೂ ಇಲ್ಲಿ ಯದ್ಯಪಿ ನಿಪಾತವಿಲ್ಲವೆಂದೇ ಹೇಳಬೇಕು. ಆದರೂ, ಈ ಸೂತ್ರದ ಕೊನೆಯಲ್ಲಿ ಇತಿ ಶಬ್ದವಿರುವುದರಿಂದಲೂ, ಅದು ವೇದದಲ್ಲಿ ಯಾವ ರೀತಿ ಲಕ್ಷ್ಯಗಳಿವೆಯೋ ಅದನ್ನು ಪ್ರದರ್ಶನ ಮಾಡುವ ಉದ್ದಿಶ್ಯದಿಂದ ಉಪಾತ್ತವಾಗಿರುವುದರಿಂದಲೂ ತೃನ್ನಂತ ವರೂತೃ ಶಬ್ದವೂ ಈ ಸೂತ್ರದಿಂದ ನಿಪಾತಿ

ಸಲ್ಪಡುವುದೆಂದು ಇಟ್ಟುಕೊಳ್ಳಬೇಕು. ಏವಂಚ ನಿತ್ಸ್ವರದಿಂದ ವರೂತ್ರ ಎಂಬುದು ಆದ್ಯುದಾತ್ತ, '**ಅನುದಾತ್ತಂ ಪದಮೇಕವರ್ಜಂ**' (ಪಾ. ಸೂ. ೬-೧-೧೫೮) ಎಂಬುದರಿಂದ ಊಕಾರ ಋಕಾರಗಳು ಅನುದಾತ್ತಗಳು ಎಂದು ಏರ್ಪಡುವುದು. ಈ ಋಕಾರಕ್ಕೆ ಜೋಸ್ಪಿನ ಈಕಾರವನ್ನು ನಿಮಿತ್ತ ಮಾಡಿಕೊಂಡು ಯಣಾದೇಶದಿಂದ ರೇಫಬಂದರೂ ಅದು ಉದಾತ್ತ ಸ್ಥಾನದಲ್ಲಿ ಬಂದ ಯಣ್ ಆಗುವುದಿಲ್ಲ, ಅನುದಾತ್ತ ಸ್ಥಾನದಲ್ಲಿ ಬಂದ ಯಣ್ ಆಗುವುದು. ಆದ್ದರಿಂದ '**ಉದಾತ್ತಯಣೋ ಹಲ್ಪೂರ್ವಾತ್**' (ಪಾ. ಸೂ. ೬-೧-೧೭೪) ಎಂಬುದರಿಂದಲೂ ಜೋಪ್‌ಗೆ ಉದಾತ್ತಸ್ವರ ಬರುವುದಿಲ್ಲ.

**ಧಿಷಣಾವ್**—'**ಧೃಷೇರ್ಧಿಷ್ ಚ ಸಂಜ್ಞಾಯಾಂ**' (ಉ. ಸೂ. ೨-೨-೮೧) '**ಕೃಪೃವೃಜಿಮನ್ದಿ ನಿಧಾಞ್ಭ್ಯಃ ಕ್ಯುಃ**' (ಉ. ಸೂ. ೨-೨೮೦) ಎಂಬುದರಿಂದ **ಕ್ಯುಃ** ಎಂಬುದು ಅನುವೃತ್ತವಾಗುವುದು. ಸಂಜ್ಞೆತೋರು ವಾಗ '**ಞಿಧೃಷಾ ಪ್ರಾಗಲ್ಭ್ಯೇ**' ಧಾತುವಿನ ಮುಂದೆ ಕ್ಯು ಪ್ರತ್ಯಯವೂ ಧಾತುವಿಗೆ ಧಿಷ್ ಆದೇಶವೂ ಬರುವುದು ಎಂಬುದರಿಂದ ಧೃಷ್‌ಧಾತುವಿನ ಮುಂದೆ ಕ್ಯು ಪ್ರತ್ಯಯವೂ ಧಾತುವಿಗೆ ಧಿಷ್ ಆದೇಶವೂ ಬಂದರೆ ಧಿಷ್+ಯು, ಪ್ರತ್ಯಯವು ಕಿತ್ತಾದ್ದರಿಂದ ಲಘೂಪಧಗುಣ ಬರುವುದಿಲ್ಲ. '**ಯುವೋರನಾಕೌ**' (ಪಾ. ಸೂ. ೭-೧-೧) ಎಂಬುದ ರಿಂದ ಯುಗೆ ಅನ ಆದೇಶ, ಸ್ತ್ರೀತ್ವ ತೋರುವಾಗ ಟಾಪ್, ನಕಾರಕ್ಕೆ ಣ, ಧಿಷಣಾ ಎಂದಾಗುವುದು. ॥೧೦॥

॥ ಪದಪಾಠಃ ॥

ಅಭಿ ನೋ ದೇವೀರವಸಾ ಮಹಃ ಶರ್ಮಣಾ ನೃಪತ್ನೀಃ ।
ಅಚ್ಛಿನ್ನಪತ್ರಾಃ ಸಚಂತಾಂ ॥ ೧೧ ॥

॥ ಸಂಹಿತಾಪಾಠಃ ॥

ಅಭಿ । ನಃ । ದೇವೀಃ । ಅವಸಾ । ಮಹಃ । ಶರ್ಮಣಾ । ನೃಽಪತ್ನೀಃ ॥
ಅಚ್ಛಿನ್ನಽಪತ್ರಾಃ । ಸಚಂತಾಂ ॥ ೧೧ ॥

॥ ಸಾಯಣಭಾಷ್ಯಂ ॥

**ದೇವೀರ್ದೇವ್ಯೋ ದೇವಪತ್ನ್ಯೋಽವಸಾ ರಕ್ಷಣೇನ ಮಹೋ ಮಹತಾ ಶರ್ಮಣಾ ಚ ಸುಖೇನ ಚ ಸಹ ನೋಽಸ್ಮಾನಭಿ ಸಚಂತಾಂ । ಅಭಿಮುಖ್ಯೇನ ಸೇವಂತಾಂ । ಕೀದೃಶ್ಯೋ ದೇವ್ಯಃ । ನೃಪತ್ನೀ-**

ರ್ಮನುಷ್ಯಾಣಾಂ ಪಾಲಯಿತ್ರ್ಯಃ ಅಚ್ಛಿನ್ನಪತ್ರಾ ಅಚ್ಛಿನ್ನಪಕ್ಷಾಃ। ನ ಹಿ ಪಕ್ಷಿರೂಪಾಣಾಂ ದೇವಪತ್ನೀ-ನಾಂ ಪಕ್ಷಾಃ ಕೇನಚಿಚ್ಛಿದ್ಯಂತೇ ॥ ದೇವೀಃ। ಪುಂಯೋಗಾದಾಖ್ಯಾಯಾಂ। ಪಾ. ೪-೧-೪೮। ಇತಿ ಙೀಷಂತಃ। ಪ್ರತ್ಯಯಸ್ವರೇಣಾಂತೋದಾತ್ತಃ। ದೀರ್ಘಾಜ್ಜಸಿ ಚೇತಿ ಪ್ರತಿಷೇಧಸ್ಯ ವಾ ಛಂದಸೀತಿ ಪಾಕ್ಷಿಕಸ್ಯೋಕ್ತೇಃ ಪೂರ್ವಸವರ್ಣದೀರ್ಘತ್ವಂ। ಅವಸಾ। ಅವ ರಕ್ಷಣೇ। ಅಸುನ್। ನಿತ್ತ್ವಾದಾದ್ಯು-ದಾತ್ತಃ। ಮಹಃ। ಮಹ ಪೂಜಾಯಾಂ। ಕ್ವಿಪ್। ಸುಪಾಂ ಸುಪೋ ಭವಂತಿ। ಮ ೭-೧-೩೯। ಇತಿ ತೃತೀಯೈಕವಚನಸ್ಯ ಙಸಾದೇಶಃ। ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ। ನೃಪತ್ನೀಃ। ಸಮಾ-ಸಾಂತೋದಾತ್ತತ್ವೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ। ಅಚ್ಛಿನ್ನಪತ್ರಾಃ। ನ ಛಿನ್ನಾನ್ಯಚ್ಛಿನ್ನಾನಿ। ಅವ್ಯಯಪೂರ್ವಪದಪ್ರಕೃತಿಸ್ವರತ್ವಂ। ಅಚ್ಛಿನ್ನಾನಿ ಪತ್ರಾಣಿ ಯಾಸಾಂ ತಾಃ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ನೃಪತ್ನೀಃ**—ಮನುಷ್ಯರನ್ನು ರಕ್ಷಿಸುವ। **ಅಚ್ಛಿನ್ನಪತ್ರಾಃ**—ಕತ್ತರಿಸಲ್ಪಡದೇ ಇರುವ ಪಕ್ಷ(ರೆಕ್ಕೆ) ಗಳುಳ್ಳ। **ದೇವೀಃ**—ದೇವಪತ್ನಿಯರು। **ಅವಸಾ**—ರಕ್ಷಣೆಯಿಂದಲೂ। **ಮಹಃ**—ಹೆಚ್ಚಾದ। **ಶರ್ಮಣಾ**—ಸುಖದಿಂದಲೂ। **ನಃ**—ನಮ್ಮನ್ನು। **ಅಭಿ ಸಚಂತಾಂ**—ಮುಖ್ಯವಾಗಿ ಸೇವಿಸಲಿ (ಅನುಗ್ರಹಿಸಲಿ).

॥ ಭಾವಾರ್ಥ ॥

ದೇವಸ್ತ್ರೀಯರು ಮನುಷ್ಯರನ್ನು ರಕ್ಷಿಸತಕ್ಕವರು. ಅಚ್ಛಿನ್ನವಾದ ಪಕ್ಷಗಳುಳ್ಳವರು. ಇಂಥವರು ನಮ್ಮನ್ನು ರಕ್ಷಿಸಿ, ಹೆಚ್ಚಾದ ಸುಖವನ್ನು ಕೊಟ್ಟು ಅನುಗ್ರಹಿಸಲಿ.

## English Translation.

May the goddesses, the protectresses of men whose wrings are uncut come hither with their protection and support.

॥ ವಿಶೇಷವಿಷಯಗಳು ॥

**ಅಭಿ—ಅಭಿಮುಖ್ಯೇನ**। ವಿಶೇಷವಾಗಿ, ಮುಖ್ಯವಾಗಿ, ತಪ್ಪದೆ ಇತ್ಯಾದಿ.

**ಮಹಃ—ಮಹತಾ। ತೃತೀಯಾರ್ಥೇ ಷಷ್ಠೀ ॥** ಈ ಶಬ್ದವು ತೃತೀಯಾಂತವಾದ ಶರ್ಮಣಾ ಎಂಬ ಶಬ್ದಕ್ಕೆ ವಿಶೇಷಣವಾಗಿದ್ದರೂ ಇಲ್ಲಿ ಷಷ್ಠೀವಿಭಕ್ತಿಯ ಪ್ರಯೋಗವಿರುವುದು. ಹೆಚ್ಚಾದ, ಬಹಳವಾದ ಎಂದರ್ಥವು.

**ನೃಪತ್ನೀಃ—ಮನುಷ್ಯಾಣಾಂ ಪಾಲಯಿತ್ರ್ಯಃ।** ಮನುಷ್ಯರನ್ನು ಸಂರಕ್ಷಿಸತಕ್ಕ (ದೇವಪತ್ನಿಯರು) ಹಿಂದಿನ ಋಕ್ಕಿನಲ್ಲಿ ಹೇಳಿದ ಅಗ್ನಿಪತ್ನಿಯಾದ ಹೋತ್ರಾ, ಭರತನ (ಆದಿತ್ಯನ) ಪತ್ನಿಯಾದ ಭಾರತೀ, ವಾಗ್ದೇವತೆಯಾದ ಧಿಷಣಾ ಎಂಬ ದೇವಿಯರು ಎಂದರೆ ದೇವಪತ್ನಿಯರು ಎಂದಭಿಪ್ರಾಯವು.

**ಅಚ್ಛಿನ್ನಪತ್ರಾಃ—ನ ಹಿ ಪಕ್ಷಿರೂಪಾಣಾಂ ದೇವಪತ್ನೀನಾಂ ಪಕ್ಷಾಃ ಕೇನ ಚಿಚ್ಛಿದ್ಯಂತೇ।** ಪಕ್ಷಿರೂಪವನ್ನು ಧರಿಸಿರುವ ದೇವಪತ್ನಿಯರ ರೆಕ್ಕೆಗಳನ್ನು ಯಾರೂ ಕತ್ತರಿಸುವುದಿಲ್ಲವಾದ್ದರಿಂದ ಇವರನ್ನು ಅಚ್ಛಿನ್ನಪತ್ರಾಃ ಎಂದು ಹೆಸರೆಂದು ಭಾಷ್ಯಕಾರರು ಈ ಶಬ್ದಕ್ಕೆ ಅರ್ಥವಿವರಣೆಮಾಡಿರುವರು ಈ ಶಬ್ದಪ್ರಯೋಗವು ಈ ಋಕ್ಕಿನಲ್ಲಿಲ್ಲದೆ ಋಗ್ವೇದದಲ್ಲಿ ಇನ್ನೆಲ್ಲಿಯೂ ಇಲ್ಲ. ಈ ಶಬ್ದವನ್ನು ಉಪಯೋಗಿಸಿರುವುದರಲ್ಲಿ ಋಷಿಯು ಆಶಯವೇನೆಂಬದು ಸ್ಪಷ್ಟವಾಗಿ ತಿಳಿಯುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ದೇವೀಃ**—'ದಿವು ಕ್ರೀಡಾದೌ' ಧಾತುವಿನ ಮುಂದೆ **'ನನ್ದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ'** (ಪಾ. ಸೂ. ೩-೧-೧೩೪) ಎಂಬುದರಿಂದ ಪಚಾದಿಲಕ್ಷಣ ಅಚ್ ಪ್ರತ್ಯಯ ಲಘೂಪಧಗುಣ ದೇವ ಎಂದಾಯ್ತು. ಈಗ ದೇವಸ್ಯ ಸ್ತ್ರಿಯಃ ದೇವ್ಯಃ, ಎಂದು ವಿಗ್ರಹ. **'ಪುಂಯೋಗಾದಾಖ್ಯಾಯಾಮ್'** (ಪಾ. ಸೂ. ೪-೧-೪೮) ಪುಂಯೋಗಾತ್, ಆಖ್ಯಾಯಾಂ, ಎಂದು ಪದಚ್ಛೇದ. **'ಅಜಾದ್ಯತಷ್ಟಾಪ್'** (ಪಾ. ಸೂ. ೪-೧-೪) ಎಂಬುದರಿಂದ ಅತಃ ಎಂದು ಅನುವೃತ್ತವಾಗುತ್ತೆ. ಪುಂಸಾ ಯೋಗಃ ಪುಂಯೋಗಃ ತಸ್ಮಾತ್, ಪುಂಯೋಗಾತ್, ಹೇತುಪಂಚಮ್ಯಂತ, **'ಸ್ತ್ರಿಯಾಂ'** (ಪಾ. ಸೂ. ೪-೧-೩) ಎಂದು ಅಧಿಕಾರ ಬರುತ್ತೆ. ಪುಂಯೋಗಾತ್, ಎಂಬುದು ಸ್ತ್ರಿಯಾಂ, ಎಂಬಲ್ಲಿ ಅನ್ವಯಿಸುತ್ತೆ. ಏವಂಚ ಪುಂಯೋಗಾದ್ಧೇತೋಃ, ಸ್ತ್ರಿಯಾಂ ವರ್ತಮಾನಾತ್, ಎಂದು ಅರ್ಥವಾಯಿತು. ಆಖ್ಯಾಯಾಂ ಎಂಬಲ್ಲಿ ಪಂಚಮೀ ವಿಭಕ್ತಿಗೆ **'ಸುಪಾಂಸುಪೋ ಭವನ್ತಿ'** (ಪಾ. ಮ. ೭-೧-೩೯) ಎಂಬುದರಿಂದ ಸಪ್ತಮೀ ವಿಭಕ್ತ್ಯಾದೇಶ. ಆಖ್ಯಾ ಶಬ್ದಕ್ಕೆ ವಾಚಕ ಎಂದರ್ಥ. ಕಸ್ಯ ವಾಚಕಃ, ಎಂದರೆ ಪುಂಯೋಗಾತ್ ಎಂದು ಉಪಸ್ಥಿತವಾಗಿರುವುದರಿಂದ ಪುಂಸಃ ವಾಚಕಾತ್ ಎಂದು ಏರ್ಪಡುವುದು. ಪುಂಸ್, ಯೋಗಾತ್, ಸ್ತ್ರಿಯಾಂ, ಎಂಬ ಮೂರು ಪದಗಳೂ ಉಪಸ್ಥಿತವಾಗಿವೆ. ಪುಂಸಾ, ಎಂಬುದು ಅಪ್ರಧಾನವಾಗಿ ಸಮಾಸ ಘಟಕವಾದ ಯೋಗ ಎಂಬ ಉತ್ತರ ಪದಕ್ಕೆ ವಿಶೇಷಣವಾಗಿ ಉಪಸ್ಥಿತವಾಗಿದೆ. ಕಸ್ಯ ವಾಚಕಃ, ಪುಂಯೋಗಸ್ಯ ವಾಚಕಃ, ಎಂದಾಗಲೀ ಸ್ತ್ರಿಯಾಂ ಆಖ್ಯಾಯಾಂ, ಎಂದರೆ ಸ್ತ್ರೀವಾಚಕಾತ್ ಎಂದಾಗಲೀ ಏಕೆ ಅರ್ಥವಾಗಬಾರದು ಎಂದರೆ; ಮೊದಲನೆಯ ಪಕ್ಷದಲ್ಲಿ ಗಣಕಾದಿ ಪದಗಳು ಪುಂಯೋಗದಿಂದ ಸ್ತ್ರೀಲಿಂಗದಲ್ಲಿರುವುವಾದಾಗ್ಯೂ ಪುಂಯೋಗವಾಚಕಗಳಾಗುವುದಿಲ್ಲ. ಆದ್ದರಿಂದ ಅಲ್ಲಿ ಙೀಷ್ ಬರದೇಹೋಗಬೇಕಾಗುವುದು. ಎರಡನೆಯ ಪಕ್ಷದಲ್ಲಿ ಪುಂಯೋಗಕ್ಕಿಂತಲೂ ಮೊದಲು ಸ್ತ್ರೀವಾಚಕಾತ್, ಎಂದು ಅರ್ಥವಾದರೆ—ಪುಂಯೋಗವಿಲ್ಲದೇ ಇದ್ದರೆ ಸ್ತ್ರೀವಾಚಕತ್ವವು ಸಂಭವಿಸುವುದಿಲ್ಲವಾದ್ದರಿಂದ ಅಸಂಭವವೇ ಬರುವುದು. ಪುಂಯೋಗಾನಂತರ ಸ್ತ್ರೀವಾಚಕಾತ್ ಎಂದು ಅರ್ಥವಾದರೆ ಪುಂಯೋಗವನ್ನು ನಿಮಿತ್ತಮಾಡಿಕೊಂಡು ಸ್ತ್ರೀಲಿಂಗದಲ್ಲಿರುವ ಶಬ್ದಗಳು ನಿಯಮೇನ ಸ್ತ್ರೀವಾಚಕಗಳೇ ಆಗುವುವು. ಆದ್ದರಿಂದ ಇತರವ್ಯಾವೃತ್ತಿ ಬರುವುದೇ ಇಲ್ಲ. ಏವಂಚ **'ಸಂಭವವ್ಯಭಿಚಾರಾಭ್ಯಾಂ ಸ್ಯಾದ್ವಿಶೇಷಣಮರ್ಥವತ್'** ಸಂಭವಃ, ಯೋಗ್ಯತೆ, ವ್ಯಭಿಚಾರಃ, ಇತರವ್ಯಾವೃತ್ತಿ ಎಂಬ ನಿಯಮದಿಂದ ಪ್ರಥಮ ಪಕ್ಷದಲ್ಲಿ ಸಂಭವಿಸದೇ ಇರುವುದರಿಂದಲೂ, ದ್ವಿತೀಯ ಪಕ್ಷದಲ್ಲಿ ಇತರವ್ಯಾವೃತ್ತಿ ಇಲ್ಲದೇ ಇರುವುದರಿಂದಲೂ ಸ್ತ್ರಿಯಾಂ ಆಖ್ಯಾಯಾಂ ಎಂದು ಹೇಳಲಾಗುವುದಿಲ್ಲ. ಆದ್ದರಿಂದ ಪುಂಸಾ ಎಂಬುದು ಅಪ್ರಧಾನವಾಗಿದ್ದರೂ ಅದೇ ಆಖ್ಯಾಯಾಂ ಎಂಬಲ್ಲಿ ಅನ್ವಯಿಸುವುದು ಪುಂಸಃ ಆಖ್ಯಾಯಾಮ್ ಎಂದರೆ ಪುಮರ್ಥವಾಚಕಾತ್ ಎಂದು ಅರ್ಥವು ಏರ್ಪಡುವುದು. ಈ ವಿಶೇಷಣದಿಂದ ಪ್ರಸೂತಾ, ಪ್ರಜಾತಾದಿ ಶಬ್ದಗಳಲ್ಲಿ ಙೀಷ್ ಬರುವುದಿಲ್ಲ. ಪ್ರಸೂತಾದಿ ಶಬ್ದಗಳು ಪುಂಯೋಗಹೇತುಕ ಗರ್ಭಾಧಾನೋತ್ತರಕಾಲಿಕ ತನ್ನಿ

ಸ್ಸರಣರೂಪ ಪ್ರವೃತ್ತಿನಿಮಿತ್ತಕಗಳಾದ್ದರಿಂದ ಪುಂಯೋಗವನ್ನು ನಿಮಿತ್ತ ಮಾಡಿಕೊಂಡು ಸ್ತ್ರೀಲಿಂಗದಲ್ಲಿರುವುವು ಪುಮರ್ಥಪ್ರತಿಪಾದಕಗಳಾಗುವುದಿಲ್ಲ. ಆದ್ದರಿಂದ ಈ ಸೂತ್ರದಿಂದ ಙೀಷ್ ವಾರಣೆಗಾಗಿ ಪುಂವಿಶೇಷಣವು ಸಾರ್ಥಕವು. **'ಅನ್ಯತೋ ಙೀಷ್'** (ಪಾ. ಸೂ. ೪-೧-೪೧) ಎಂಬುದರಿಂದ ಙೀಷ್ ಎಂಬುದು ಅನುವೃತ್ತವಾಗುವುದು. ಪ್ರಾತಿಪದಿಕಾತ್ ಇತ್ಯಧಿಕ್ರಿಯತೇ ಅತಃ ಪ್ರಾತಿಪದಿಕಾತ್ ಎಂಬುದಕ್ಕೆ ವಿಶೇಷಣ. ತದಂತಲಾಭ, ಏವಂಚ ಪುಂಯೋಗವನ್ನು ನಿಮಿತ್ತಮಾಡಿಕೊಂಡು (ಲಕ್ಷಣಯಿಂದ) ಸ್ತ್ರ್ಯರ್ಥವಾಚಕವೂ ಪುಂವಾಚಕತ್ವೇನ ಪ್ರಸಿದ್ಧವೂ ಆದ ಹ್ರಸ್ವಾಕಾರಾಂತವಾದ ಪ್ರಾತಿಪದಿಕದ ಮುಂದೆ ಙೀಷ್ ಬರುವುದು ಎಂದು ಸೂತ್ರಾರ್ಥವು ಏರ್ಪಡುವುದು. ಇಲ್ಲಿ ಪುಂಯೋಗ ಎಂದರೆ ಪುಂಸಂಬಂಧ ಎಂದು ಅರ್ಥ. ವಿಶೇಷಗ್ರಾಹಕಪ್ರಾಮಾಣ್ಯವಿಲ್ಲದೇ ಇರುವುದರಿಂದ, ಜನ್ಯಜನಕಭಾವರೂಪ ಪುಂಸಂಬಂಧವೂ, ದಾಂಪತ್ಯರೂಪವಾದ ಪುಂಸಂಬಂಧವೂ ವಿವಕ್ಷಿತವೆಂದು ಕೆಲವರು ಅಭಿಪ್ರಾಯಪಡುವರು. ಇವರ ಮತದಲ್ಲಿ ಕೇಕಯಸ್ಯ ದುಹಿತಾ ಎಂದು ವಿವಕ್ಷಿಸಿದಾಗಲೂ ಙೀಷ್ ಬಂದು ಕೇಕಯೀ ಎಂದು ಸಿದ್ಧವಾಗುವುದು. ಮತ್ತೆ ಕೆಲವರು **'ಯಥೈವ ಹ್ಯಸಾವಕುರ್ವತೀ ಕಿಂಚಿತ್ಪಾಪಂ ಭರ್ತೃಕೃತಾನ್ಸಂಬಂಧನಾದಿಕ್ಲೇಶಾಲ್ಲಭತೇ ಏವಂ ಪ್ರಷ್ಠಶಬ್ದಮಪಿ ಲಭತೇ'** (ವ್ಯಾ. ಮ. ಭಾಷ್ಯ. ೪-೧-೪೮) ಎಂಬ ಭಾಷ್ಯಪರಿಶೀಲನೆಯಿಂದ ದಾಂಪತ್ಯರೂಪ ಪುಂಸಂಬಂಧಮಾತ್ರದಲ್ಲಿ ಈ ಸೂತ್ರ ಪ್ರವರ್ತಿಸುವುದು ಜನ್ಯಜನಕಭಾವರೂಪ ಪುಂಸಂಬಂಧದಲ್ಲಿ ಪ್ರವೃತ್ತಿಸುವುದಿಲ್ಲ. ಕೇಕಯೀ ಇತ್ಯಾದಿ ಸ್ಥಳಗಳಲ್ಲಿ **'ಷಿದ್ಗೌರಾದಿಭ್ಯಶ್ಚ'** (ಪಾ ಸೂ. ೪-೧-೪೧) ಎಂಬುದರಿಂದ ಗೌರಾದಿ ಲಕ್ಷಣವಾದ ಙೀಷ್ ಬರುವುದು ಎಂದು ಅಭಿಪ್ರಾಯಪಡುವರು. ಪುಂಯೋಗಾತ್, ಎಂಬಲ್ಲಿ ಪುಮ್, ಯೋಗಾತ್, ಆಖ್ಯಾಯಾಂ ಎಂದು ಮೂರುಪದಗಳನ್ನಾಗಿ ಕೆಲವರು ವಿಭಾಗ ಮಾಡುವರು. ಪುಮ್ ಎಂಬುದು ಲುಪ್ತಷಷ್ಠ್ಯಂತ, ಅದು ಆವೃತ್ತವಾಗಿ, ಯೋಗಾತ್ ಎಂಬಲ್ಲಿಯೂ ಆಖ್ಯಾಯಾಂ ಎಂಬಲ್ಲಿಯೂ ಅನ್ವಯಿಸುವುದು. ಪುಂಸಃ ಯೋಗಾತ್, ಪುಂಸಃ ಆಖ್ಯಾಯಾಮ್, ಎಂದು ಮಿಕ್ಕ ವಿಷಯಗಳು ಮೊದಲಿನಂತೆಯೇ. ಹೀಗಿದ್ದರೂ ಕೈಯಟಕಾರರ ಮತವನ್ನು ಅನುಸರಿಸಿ ಪದದ್ವಯವು ಪ್ರದರ್ಶಿಸಲ್ಪಟ್ಟಿದೆ. ಈ ಸೂತ್ರದಿಂದ ಙೀಷ್ ಬಂದರೆ ದೇವ+ಈ-**'ಯಸ್ಯೇತಿ ಚ'** (ಪಾ. ಸೂ ೬-೪-೧೪೮) ಎಂದು ಅಕಾರಲೋಪ; ಪ್ರತ್ಯಯಸ್ವರದಿಂದ ಇದು ಅಂತೋದಾತ್ತ, ದೇವೀ ಶಬ್ದದ ಮುಂದೆ ಜಸ್, ದೇವೀ+ಅಸ್, ಇಲ್ಲಿ **'ಪ್ರಥಮಯೋಃ ಪೂರ್ವಸವರ್ಣಃ'** (ಪಾ. ಸೂ. ೬-೧-೧೦೨) ಅಗ್ವರ್ಣಗಳಿಗೆ ಪ್ರಥಮಾ ದ್ವಿತೀಯಾ ವಿಭಕ್ತಿಗಳ ಸ್ವರ ಪರದಲ್ಲಿದ್ದರೆ ಪೂರ್ವಪರಸ್ಥಾನದಲ್ಲಿ ಪೂರ್ವ ಸವರ್ಣದೀರ್ಘ ಏಕಾದೇಶವಾಗಿ ಬರುವುದು ಎಂಬುದರಿಂದ ಬರುವ ಪೂರ್ವಸವರ್ಣದೀರ್ಘಕ್ಕೆ ಯದ್ಯಪಿ **'ದೀರ್ಘಾಜ್ಜಸಿ ಚ'** (ಪಾ. ಸೂ. ೬-೧-೧೦೫) ದೀರ್ಘದ ಮುಂದೆ ಜಸ್ ಇದ್ದರೂ ಇಚ್ ಪ್ರತ್ಯಾಹಾರಕ್ಕೆ ಸೇರಿದ ವರ್ಣವಿದ್ದರೂ ಪೂರ್ವಸವರ್ಣದೀರ್ಘ ಬರುವುದಿಲ್ಲ ಎಂಬುದರಿಂದ ನಿಷೇಧವು ಪ್ರಾಪ್ತವಾಗುವುದು. ಆದರೂ **'ವಾ ಛಂದಸಿ'** (ಪಾ. ಸೂ. ೬-೧-೧೦೬) ಛಂದಸ್ಸಿನಲ್ಲಿ ದೀರ್ಘದ ಮುಂದೆ ಜಸ್ ಇಚ್‌ಗಳು ಇದ್ದರೂ ಪೂರ್ವ ಸವರ್ಣದೀರ್ಘವು ವಿಕಲ್ಪವಾಗಿ ಬರುವುದು. ಎಂದು ವಿಕಲ್ಪವಾಗಿ ವಿಧಿಸಿರುವುದರಿಂದ ಪಾಕ್ಷಿಕವಾಗಿ ಪೂರ್ವಸವರ್ಣದೀರ್ಘ ಬರುವುದು. ದೇವೀಸ್ ಎಂದಾಗುವುದು ರುತ್ವ, ವಿಸರ್ಗ.

**ಅವಸಾ,** ಅವ ರಕ್ಷಣೇ ಧಾತು. **'ಸರ್ವಧಾತುಭ್ಯೋಽಸುನ್'** (ಉ. ಸೂ. ೪-೬-೨೮) ಎಂಬುದರಿಂದ ಅಸುನ್ ಪ್ರತ್ಯಯ. ಪ್ರತ್ಯಯವು ನಿತ್, ಆದ್ದರಿಂದ ಆದ್ಯುದಾತ್ತ ಸ್ವರ ಬರುವುದು.

**ಮಹಃ**—**'ಮಹ ಪೂಜಾಯಾಂ'** ಧಾತು **'ಕ್ವಿಪ್ ಚ್'** ಎಂಬುದರಿಂದ ಕ್ವಿಪ್ ಪ್ರತ್ಯಯ **'ಸುಪಾಂ ಸುಪೋ ಭವನ್ತಿ'** (ಪಾ. ಮ. ೭-೧-೩೯) ಎಂಬುದರಿಂದ ಮಹ್ ಶಬ್ದದ ಮುಂದೆ ಬಂದ ತೃತೀಯಾ ಏಕವಚನ

ಟಾಗೆ ಜ್‌ಸ್ ಆದೇಶ '**ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ**' (ಪಾ. ಸೂ. ೬-೧-೧೬೮) ಸಪ್ತಮೀವಿಭಕ್ತಿ ಬಹುವಚನ ಸುಪರದಲ್ಲಿರುವಾಗ ಏಕಾಚ್ಕವಾದ ಯಾವ ಶಬ್ದವಿದೆಯೋ ಅದರ ಮುಂದಿರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ವಿಭಕ್ತಿಯು ಉದಾತ್ತ.

**ನೃಪತ್ನೀಃ**—ನೄಣಾಂ ಪತ್ನ್ಯಃ ನೃಪತ್ನೀಃ ಪ್ರಥಮಾ ಬಹುವಚನಾಂತ. ಇಲ್ಲಿಯೂ '**ವಾಛಂದಸಿ**' ಎಂಬುದರಿಂದ ವೈಕಲ್ಪಿಕ ಪೂರ್ವಸವರ್ಣದೀರ್ಘ ಬರುವುದು. '**ಪತ್ಯುರ್ನೋಯಜ್ಞಸಂಯೋಗೇ**' ಎಂಬುದರಿಂದ ಪತಿ ಶಬ್ದದ ಇಕಾರಕ್ಕೆ ನಕಾರಾದೇಶ, '**ಋನ್ನೇಭ್ಯೋಙೀಪ್**' (ಪಾ ಸೂ. ೪-೧-೫) ಎಂಬುದರಿಂದ ನಾಂತ ಲಕ್ಷಣವಾದ ಙೀಪ್, ಙೀಪ್ ಪಿತ್ತಾದ್ದರಿಂದ ಅನುದಾತ್ತ, '**ಪಾತೇರ್ಡತಿಃ**' ಎಂಬ ಉಣಾದಿಸೂತ್ರದಿಂದ ಪಾಧಾತುವಿನ ಮುಂದೆ ಡತಿಪ್ರತ್ಯಯವೂ ಟಿಲೋಪವೂ ಬಂದು ಪತಿ ಎಂದಾಗುತ್ತೆ. ಪ್ರತ್ಯಯಸ್ವರದಿಂದ ಇದು ಆದ್ಯುದಾತ್ತ, ಇದೇ ಉಳಿಯುವುದು. ಏವಂಚ ಪತ್ನೀ ಶಬ್ದ ಆದ್ಯುದಾತ್ತ, ನೃಶಬ್ದದೊಂದಿಗೆ ಷಷ್ಠೀತತ್ಪುರುಷ ಬಂದನಂತರ '**ಸಮಾಸಸ್ಯ**' (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾದರೆ '**ಪರಾದಿಶ್ಛಂದಸಿ ಬಹುಲಮ್**' (ಪಾ. ಸೂ. ೬-೨-೧೯೯) ಛಂದಸ್ಸಿನಲ್ಲಿ ಪರದಲ್ಲಿರುವ ಸಕ್ಥಶಬ್ದದ ಆದಿಯು ವಿಕಲ್ಪದಿಂದ ಉದಾತ್ತವೆಂದು ಯದ್ಯಪಿ ಈ ಸೂತ್ರಕ್ಕೆ ಅರ್ಥವು. ಆದರೂ ಇಲ್ಲಿ ವಾರ್ತಿಕಕಾರರು '**ಪರಾದಿಶ್ಚ ಪರಾಂತಶ್ಚ ಪೂರ್ವಾಂತಶ್ಚಾಪಿ ದೃಶ್ಯತೇ । ಪೂರ್ವಾದಯಶ್ಚದೃಶ್ಯನ್ತೇ ವ್ಯತ್ಯಯೋ ಬಹುಲಂ ಯತಃ**' ಎಂದು ಬಹುಲಗ್ರಹಣದ ಅರ್ಥವನ್ನು ಸಂಗ್ರಹಿಸಿರುವರು. ಪರಾದಿಗೆ '**ತು ವಿಜಾತಾ ಉರುಕ್ಷಯಾ**' (ಋ. ಸಂ. ೧-೨-೯) ಎಂದೂ ಪರಾಂತಕ್ಕೆ '**ನಿಯೇನ ಮುಷ್ಟಿ ಹತ್ಯಯಾ, ಯಸ್ತ್ರಿಚಕ್ರಃ**' (ಋ. ಸಂ. ೧-೮-೨) ಎಂದೂ ಪೂರ್ವಾಂತಕ್ಕೆ **ವಿಶ್ವಾಯುರ್ಧೇಹಿ** ಎಂದೂ ಉದಾಹರಣೆ-ಈ ವಾರ್ತಿಕಾನುಸಾರ ಉರುಕ್ಷಯಾ ಎಂಬಲ್ಲಿ ಬರುವ ಹಾಗೆ ಇಲ್ಲಿಯೂ ಉತ್ತರಪದದ ಆದಿಯು ಉದಾತ್ತವಾಗುವುದು.

**ಅಚ್ಛಿನ್ನಪತ್ರಾಃ**—ನ ಛಿನ್ನಾನಿ '**ನಞ್**' (ಪಾ. ಸೂ. ೨-೨-೬) ಎಂಬುದರಿಂದ ನಞ್ ಸಮಾಸ '**ನಲೋಪೋನಞಃ**' (ಪಾ. ಸೂ. ೬-೩-೭೩) ಎಂಬುದರಿಂದ ನ್‌ಗೆ ಲೋಪ, ಅಚ್ಛಿನ್ನಾನಿ ಎಂದಾಗುತ್ತೆ-ಅಚ್ಛಿನ್ನ ಎಂಬುದು ಅವ್ಯಯಪೂರ್ವಪದಕತತ್ಪುರುಷ, ಆದ್ದರಿಂದ '**ಸಮಾಸಸ್ಯ**' ಎಂಬ ಅಂತೋದಾತ್ತವನ್ನು ಬಾಧಿಸಿ '**ತತ್ಪುರುಷೇತುಲ್ಯಾರ್ಥತೃತೀಯಾ ಸಪ್ತಮ್ಯುಪಮಾನಾವ್ಯಯ ದ್ವಿತೀಯಾ ಕೃತ್ಯಾಃ** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ, '**ಅಚ್ಛಿನ್ನಾನಿ ಪತ್ರಾಣಿ ಯಾಸಾಂ ತಾಃ, ಅಚ್ಛಿನ್ನಪತ್ರಾಃ**'-ಎಂದು ಬಹುವ್ರೀಹಿಸಮಾಸ. ಇಲ್ಲಿ '**ಬಹುವ್ರೀಹೌ ಪ್ರಕೃತ್ಯಾ ಪೂರ್ವ ಪದಮ್**' (ಪಾ. ಸೂ. ೩-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು. ॥ ೧೧ ॥

॥ ಸಂಹಿತಾಪಾಠಃ ॥

## ಇಹೇಂದ್ರಾಣೀಮುಪ ಹ್ವಯೇ ವರುಣಾನೀಂ ಸ್ವಸ್ತಯೇ ।

## ಅಗ್ನಾಯೀಂ ಸೋಮಪೀತಯೇ ॥ ೧೨ ॥

॥ ಪದಪಾಠಃ ॥

ಇಹ । ಇಂದ್ರಾಣೀಂ । ಉಪ । ಹ್ವಯೇ । ವರುಣಾನೀಂ । ಸ್ವಸ್ತಯೇ ॥
ಅಗ್ನಾಯೀಂ । ಸೋಮಽಪೀತಯೇ ॥ ೧೨ ॥

॥ ಸಾಯಣಭಾಷ್ಯಂ ॥

ಇಹಾಸ್ಮಿನ್ಕರ್ಮಣಿ ಸ್ವಸ್ತಯೇಽಸ್ಮಾಕಮವಿನಾಶಾಯ ಸೋಮಪೀತಯೇ ಸೋಮಪಾನಾಯ ಚೇಂದ್ರವರುಣಾಗ್ನೀನಾಂ ಪತ್ನೀರಾಹ್ವಯಾಮಿ ॥ ಇಂದ್ರಾಣೀಂ । ವರುಣಾನೀಂ । ಇಂದ್ರವರುಣೇತ್ಯಾದಿನಾ । ಪಾ. ೪. ೧. ೪೯ । ಪುಂಯೋಗೇ ಙೀಷ್ಪ್ರತ್ಯಯ ಆನುಗಾಗಮಶ್ಚ । ಪ್ರತ್ಯಯಸ್ವರಃ । ಅಗ್ನಾಯೀಂ । ವೃಷಾಕಪ್ಯಗ್ನಿಕುಸಿತಕುಸೀದಾನಾಮುದಾತ್ತಃ । ಪಾ. ೪-೧-೩೭ । ಇತಿ ಙೀಪ್ । ತತ್ಸಂನಿಯೋಗೇನೇಕಾರಸ್ಯೈಕಾರ ಉದಾತ್ತಃ । ಸೋಮಪೀತಯೇ । ಅಸಕೃತ್ಪೂರ್ವೋಕ್ತಂ ॥

॥ ಪ್ರತಿಪದಾರ್ಥ ॥

**ಇಹ**—ಇಲ್ಲಿಗೆ । **ಇಂದ್ರಾಣೀಂ**—ಇಂದ್ರ ಪತ್ನಿಯನ್ನೂ । **ವರುಣಾನೀಂ**—ವರುಣ ಪತ್ನಿಯನ್ನೂ **ಅಗ್ನಾಯೀಂ**—ಅಗ್ನಿ ಪತ್ನಿಯನ್ನೂ । **ಸ್ವಸ್ತಯೇ**—(ನಮ್ಮ) ಮಂಗಳಕ್ಕೋಸ್ಕರ (ಮತ್ತು) । **ಸೋಮಪೀತಯೇ**—ಸೋಮಪಾನ ಮಾಡುವುದಕ್ಕೋಸ್ಕರಲೂ । **ಉಪ ಹ್ವಯೇ**—ಆಹ್ವಾನಿಸುತ್ತೇನೆ.

॥ ಭಾವಾರ್ಥ ॥

ನಮಗೆ ಶುಭವನ್ನುಂಟುಮಾಡುವುದಕ್ಕಾಗಿಯೂ. ಸೋಮಪಾನಮಾಡುವುದಕ್ಕಾಗಿಯೂ ಇಂದ್ರನ ಪತ್ನಿಯಾದ ಇಂದ್ರಾಣಿಯನ್ನೂ, ವರುಣನ ಪತ್ನಿಯಾದ ವರುಣಾನಿಯನ್ನೂ, ಅಗ್ನಿಯ ಪತ್ನಿಯಾದ ಅಗ್ನಾಯೀದೇವಿಯನ್ನೂ ಇಲ್ಲಿಗೆ ಬರುವಂತೆ ಆಹ್ವಾನಿಸುತ್ತೇನೆ.

## English Translation.

I invoke here Indrani, Varunani, and Agnayi, for our welfare and to drink the Soma-juice.

॥ ವಿಶೇಷವಿಷಯಗಳು ॥

**ಇಂದ್ರಾಣೀ, ವರುಣಾನೀ, ಅಗ್ನಾಯೀ**—ಇಂದ್ರನ ಪತ್ನಿಗೆ **ಇಂದ್ರಾಣಿ**ಯೆಂದೂ, ವರುಣನ ಪತ್ನಿಗೆ **ವರುಣಾನಿ**ಯೆಂದೂ, ಅಗ್ನಿಯ ಪತ್ನಿಗೆ **ಅಗ್ನಾಯೀ** ಎಂದೂ ಹೇಳುವರು. ಈ ವಿಷಯದಲ್ಲಿ ಯಾಸ್ಕರು-

**ಇಂದ್ರಾಣೀಂದ್ರಸ್ಯ ಪತ್ನ್ಯಗ್ನಾಯ್ಯಗ್ನೇಃ ಪತ್ನ್ಯಶ್ವಿನ್ಯಶ್ವಿನೋಃ ಪತ್ನೀರಾಟ್ ರಾಜತೇ । ರೋದಸೀ ರುದ್ರಸ್ಯ ಪತ್ನೀ । ವರುಣಾನೀ ಚ ವರುಣಸ್ಯ ಪತ್ನೀ ।** (ನಿ. ೧೨-೪೬)

ಎಂದು ಹೇಳಿರುವರು. ಇವರಿಗೆ ದೇವಪತ್ನಿಯರೆಂದು ಹೆಸರು. ಕೆಲವು ಋಕ್ಕುಗಳಲ್ಲಿ ಇವರ ಹೆಸರನ್ನು ಪ್ರತ್ಯೇಕ ವಾಗಿ ಹೇಳದೆ ದೇವಪತ್ನಿ ಎಂದು ಸಮಷ್ಟಿಯಾಗಿಯೂ ಹೇಳಿರುವುದು. ಉದಾಹರಣೆಗಾಗಿ ಕೆಲವು ಋಕ್ಕುಗಳನ್ನು ಇಲ್ಲಿ ಕೊಟ್ಟಿದೇವೆ—

**ಇಂದ್ರಾಣೀಮಾಸು ನಾರಿಷು ಸುಭಗಾಮಹಮಶ್ರವಂ ।**
**ನಹ್ಯಸ್ಯಾ ಅಪರಂ ಚನ ಜರಸಾ ಮರತೇ ಪತಿರ್ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೧೧)

**ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ**

(ಋ. ಸಂ ೧೦-೮೬-೧೨)

**ಉತಾಹಮಸ್ಮಿ ವೀರಿಣೀಂದ್ರಪತ್ನೀ ಮರುತ್ಸಖಾ ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೯)

**ಇಂದ್ರಾಣೀಮುಹ್ವ ಊತಯೇ ವರುಣಾನೀಂ ಸ್ವಸ್ತಯೇ**

(ಋ. ಸಂ. ೨-೩೨-೮)

**ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯ೧ಗ್ನಾಯ್ಯಶ್ವಿನೀ ರಾಟ್**
**ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಂ ॥**

(ಋ. ಸಂ. ೫-೪೬-೮)

**ದೇವಾನಾಂ ಪತ್ನೀರುಶತೀರವಂತು ನಃ ಪ್ರಾವಂತು ನಸ್ತುಜಯೇ ವಾಜಸಾತಯೇ ।**
**ಯಾಃ ಪಾರ್ಥಿವಾಸೋ ಯಾ ಅಪಾಮಪಿ ವ್ರತೇ ತಾ ನೋ ದೇವಿಸುಹವಾಃ ಶರ್ಮ ಯಚ್ಛತ ॥**

(ಋ. ಸಂ. ೫-೪೬-೭)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ದೇವಪತ್ನಿಯರ ಹೆಸರುಗಳು ಪಠಿತವಾಗಿವೆ.

॥ ವ್ಯಾಕರಣಪ್ರಕ್ರಿಯಾ ॥

**ಇನ್ದ್ರಾಣೀಂ ವರುಣಾನೀಂ**— ‘ **ಇನ್ದ್ರವರುಣಭವಶರ್ವರುದ್ರಮೃಡಹಿಮಾರಣ್ಯಯವಯವನ ಮಾತುಲಾಚಾರ್ಯಾಣಾಮಾನುಕ್** ’ (ಪಾ. ಸೂ. ೪-೧-೪೯) ಇನ್ದ್ರ ಮೊದಲಾದ ೧೨ ಶಬ್ದಗಳಿಗೆ ಆನುಗಾಗಮವೂ ಙೀಷ್‌ಪ್ರತ್ಯಯವೂ ಸ್ತ್ರೀಲಿಂಗದಲ್ಲಿ ಬರುವುದೆಂದು ಸೂತ್ರಾರ್ಥ. ಇಲ್ಲಿ ಹಿಮ, ಅರಣ್ಯ, ಯವ, ಯವನ ಎಂಬ ನಾಲ್ಕು ಶಬ್ದಗಳಿಗೂ ಆನುಗಾಗಮವೂ, ಙೀಷ್‌ಪ್ರತ್ಯಯವೂ ಸಹ ವಿಧಿಸಲ್ಪಡುತ್ತೆ. ಮಿಕ್ಕ ೮ ಶಬ್ದಗಳಿಗೆ ‘ **ಪುಂಯೋಗಾದಾಖ್ಯಾಯಾಂ** ’ (ಪಾ. ಸೂ. ೪-೧-೪೮) ಎಂಬುದರಿಂದ ಙೀಷ್ ಸಿದ್ಧವಾಗುವುದರಿಂದ ಇಲ್ಲಿ ಆನುಗಾಗಮವು ಮಾತ್ರ ವಿಧಿಸಲ್ಪಡುವುದು. ಪ್ರಕೃತ ಇಂದ್ರ, ವರುಣ ಶಬ್ದಗಳ ಮುಂದೆ ‘ ಪುಂಯೋಗಾದಾಖ್ಯಾಯಾಂ ’ ಎಂಬುದರಿಂದ ಙೀಷ್ ಬರಲು, ಇನ್ದ್ರ+ಈ, ವರುಣ+ಈ ಎಂದಿರುವಾಗ ಇನ್ದ್ರವರುಣ-ಇತ್ಯಾದಿ ಪ್ರಕೃತ ಸೂತ್ರದಿಂದ ಆನುಗಾಗಮ, ಆನುಕ್. ಕಿತ್ ಆದ್ದರಿಂದ ‘ **ಆದ್ಯನ್ತೌಟಕಿತೌ** ’ (ಪಾ. ಸೂ. ೧-೧-೪೬) ಟಕಾರೇತ್ಸಂಜ್ಞಕವಾದ ಆಗಮವು ಯಾವುದಕ್ಕೆ ವಿಹಿತವಾಗಿದೆಯೋ ಅದರ ಆದ್ಯವಯವವಾಗಿಯೂ, ಕಕಾರೇತ್ಸಂಜ್ಞಕವಾದ

ಯಾವುದಕ್ಕೆ ವಿಹಿತವಾಗಿದೆಯೋ ಅದಕ್ಕೆ ಅಂತಾವಯವವಾಗಿ ಬರುವುದು ಎಂಬುದರಿಂದ ಅಂತಾವಯವವಾಗಿ ಬರುತ್ತೆ. ಇಂದ್ರ–ಆನ್+ಈ, ವರುಣ–ಆನ್+ಈ ಸವರ್ಣದೀರ್ಘ, ಮೊದಲನೆಯದಲ್ಲಿ **'ಅಟ್ಕುಪ್ವಾಙ್ನುಮ್ವ್ಯವಾಯೇಽಪಿ** (ಪಾ. ಸೂ. ೮–೪–೨) ಎಂಬುದರಿಂದ ನ ಗೆ ಣತ್ವ ಇನ್ದ್ರಾಣೀ, ವರುಣಾನೀ–ಎಂದಾಗುವುದು. ಙೀಷ್, **'ಆದ್ಯು ದಾತ್ತಶ್ಚ'** (ಪಾ. ಸೂ. ೩–೧–೩) ಎಂಬ ಪ್ರತ್ಯಯ ಸ್ವರದಿಂದ ಉದಾತ್ತ, ಏವಂಚ ಈ ಎರಡು ಶಬ್ದಗಳೂ ಅಂತೋ ದಾತ್ತಗಳು.

**ಅಗ್ನಾಯೀಂ—** ಅಗ್ನೇಃ, ಸ್ತ್ರೀ ಎಂದು ವಿಗ್ರಹ. **'ವೃಷಾಕಪ್ಯಗ್ನಿಕುಸಿತಕುಸಿದಾನಾಮುದಾತ್ತಃ'** (ಪಾ ಸೂ. ೪–೧–೩೭) ಪೂತಕ್ರತೋರೈಚ, ಎಂಬ ಹಿಂದಿನ ಸೂತ್ರದಿಂದ ' ಐ ಚ ' ಎಂದು ಅನುವೃತ್ತವಾಗುತ್ತೆ. **'ಸಂಖ್ಯಾವ್ಯಯಾದೇರ್ಙೀಪ್'** (ಪಾ. ಸೂ. ೪–೧–೨೬) ಎಂಬುದರಿಂದ ಙೀಪ್ ಎಂಬುದು ಅನುವೃತ್ತವಾಗುತ್ತೆ. ಏವಂಚ ಸೂತ್ರಾರ್ಥವು ಹೀಗೆ ಏರ್ಪಡುತ್ತೆ. ವೃಷಾಕಪಿ, ಅಗ್ನಿ, ಕುಸಿತ, ಕುಸಿದ, ಈ ನಾಲ್ಕು ಶಬ್ದಗಳ ಮುಂದೆ ಸ್ತ್ರೀಲಿಂಗದಲ್ಲಿ ಙೀಪ್ ಪ್ರತ್ಯಯವೂ. ಈ ನಾಲ್ಕು ಶಬ್ದಗಳ ಕೊನೆಯ ವರ್ಣಕ್ಕೆ ಐ ಆದೇಶವೂ ಸಹ ಬರುವುದು. ಈ ಐಕಾರವು ಉದಾತ್ತವೂ ಆಗುವುದು ಇತಿ, ಈ ಸೂತ್ರದಿಂದ ಪ್ರಕೃತ ಅಗ್ನಿಶಬ್ದದ ಮುಂದೆ ಙೀಪ್ ಪ್ರತ್ಯಯವೂ, ಇಕಾರಕ್ಕೆ ಉದಾತ್ತವಾದ ಐ ಆದೇಶವೂ ಬರುತ್ತದೆ. ಅಗ್ನೈ+ಈ–**'ಏಚೋಽಯವಾಯಾವಃ'** (ಪಾ. ಸೂ. ೬–೧–೭೮) ಎಂಬುದರಿಂದ ಐಗೆ ಆಯ್ ಆದೇಶ ಅಗ್ನಾಯೀ ಎಂದಾಗುತ್ತೆ. ಯದ್ಯಪಿ, ಅಗ್ನಿ ಶಬ್ದವು **'ಅಂಗೇರ್ನ ಲೋಪಶ್ಚ'** (ಉ. ಸೂ. ೪–೫೧೦) ಎಂಬುದರಿಂದ ನಿಪ್ರತ್ಯಯ ಬಂದು ನಿಷ್ಪನ್ನವಾಗಿರುವುದರಿಂದ ಪ್ರತ್ಯಯ ಸ್ವರ ದಿಂದ ಅಂತೋದಾತ್ತ, ಇದರ ಸ್ಥಾನದಲ್ಲಿ ಬರುವ ಐ ಆದೇಶವು, **'ಸ್ಥಾನೇಂತರತಮಃ'** (ಪಾ. ಸೂ. ೧–೧–೫೦) ಎಂಬುದರಿಂದ ಉದಾತ್ತವೇ ಆಗುವುದು. ಆದರೂ ವೃಷಾಕಪಿ ಶಬ್ದವು **' ಲಘಾವನ್ತೇ ದ್ವಯೋಶ್ಚ ಬಹ್ವಷೋ ಗುರುಃ'** ಎಂಬುದರಿಂದ ಪದದ ಕೊನೆಯಲ್ಲಿ ಒಂದು ಅಥವಾ ಎರಡು ಲಘುವರ್ಣಗಳನ್ನು ಹೊಂದಿರುವ ಬಹ್ವಚ್ಕವಾದ ಪದಗಳಲ್ಲಿ ಲಘುವಿನ ಪೂರ್ವದಲ್ಲಿರುವ ಗುರು ವರ್ಣವು ಉದಾತ್ತವಾಗುವುದು ಎಂಬುದರಿಂದ ಷಾ, ಎಂಬುದು ಉದಾತ್ತವಾಗಲು ಶೇಷ ನಿಘಾತ ಮಿಕ್ಕವು ಅನುದಾತ್ತವಾಗುವುವು ಆದ್ದರಿಂದ ಅಂತಾನುದಾತ್ತ, ಇದರ ಸ್ಥಾನದಲ್ಲಿ ಬರುವ ಐ ಆದೇಶವೂ **ಸ್ಥಾನೇಂತರತಮಃ,** ಎಂಬುದರಿಂದ ಅನುದಾತ್ತವಾಗಬೇಕಾಗುವುದು. ಆದ್ದರಿಂದ ಉದಾತ್ತವು ಪ್ರಕೃತ ಸೂತ್ರದಲ್ಲಿ ವಿಹಿತವಾಗಿದೆ. ವೃಷಾಕಪಿ ಎಂಬುದನ್ನುಳಿದು ಮೂರು ಶಬ್ದಗಳಲ್ಲಿ ಉದಾತ್ತವಿಧಿ ಇಲ್ಲದಿದ್ದರೂ ಸ್ಥಾನಸಾಮ್ಯದಿಂದಲೇ ಉದಾತ್ತವು ಸಿದ್ಧವಾಗುತ್ತೆ.

**ಸೋಮಪೀತಯೇ**—ಇದಕ್ಕೆ ಪ್ರಕ್ರಿಯೆಯು ಹಿಂದೆ ಅನೇಕಾವರ್ತಿ ಉಪಪಾದಿತವಾಗಿರುವುದು. ॥ ೧೨ ॥

॥ ಸಂಹಿತಾಪಾಠಃ ॥

ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಂ ।
ಪಿಪೃತಾಂ ನೋ ಭರೀಮಭಿಃ ॥ ೧೩ ॥

॥ ಪದಪಾಠಃ ॥

ಮಹೀ । ದ್ಯೌಃ । ಪೃಥಿವೀ । ಚ । ನಃ । ಇಮಂ । ಯಜ್ಞಂ । ಮಿಮಿಕ್ಷತಾಂ ॥
ಪಿಪೃತಾಂ । ನಃ । ಭರೀಮಽಭಿಃ ॥ ೧೩ ॥

॥ ಸಾಯಣಭಾಷ್ಯಂ ॥

ದ್ವಿತೀಯೇ ಛಂದೋಮೇ ವೈಶ್ವದೇವಶಸ್ತ್ರೇ ಮಹೀ ದ್ಯೌಃ ಪೃಥಿವೀ ಚ ನ ಇತಿ ದ್ಯಾವಾಪೃಥಿವ್ಯನಿವಿದ್ಧಾನೀಯಸ್ತೃಚಃ । ದ್ವಿತೀಯಸ್ಯಾಗ್ನಿಂ ವ ಇತಿ ಖಂಡೇ ಸೂತ್ರಿತಂ । ಮಹೀ ದ್ಯೌಃ ಪೃಥಿವೀ ಚ ನೋ ಯುವಾನಾ ಪಿತರಾ ಪುನಃ । ಆ. ೮–೧೦ । ಇತಿ ॥ ಆಗ್ರಯಣೇಷ್ಟೌ ಮಹೀ ದ್ಯೌರಿತ್ಯೇಷಾ ದ್ಯಾವಾಪೃಥಿವ್ಯೈಕಕಪಾಲಸ್ಯಾನುವಾಕ್ಯಾ । ಆಗ್ರಯಣಂ ವ್ರೀಹಿಶ್ಯಾಮಾಕೇತಿ ಖಂಡೇ ಸೂತ್ರಿತಂ । ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾ ಮಹೀ ದ್ಯೌಃ ಪೃಥಿವೀ ಚ ನಃ । ಆ. ೨–೯ । ಇತಿ ॥ ಅಗ್ನಿಮಂಥನೇಽಪ್ಯೇಷಾ ವಿನಿಯುಕ್ತಾ । ಪ್ರಾತರ್ವೈಶ್ವದೇವ್ಯಾಮಿತಿ ಖಂಡೇ ಸೂತ್ರಿತಂ । ಅಭಿ ತ್ವಾದೇವ ಸವಿತರ್ಮಹೀ ದ್ಯೌಃ ಪೃಥಿವೀ ಚ ನಃ । ಆ. ೨–೧೬ । ಇತಿ ॥ ವಿಷ್ಯಂದಮಾನಂ ಸಾಂನಾಯ್ಯಮನಯ್ಯೈವಾಹವನೀಯದೇಶೇ ನಿನಯೇತ್ । ವಿಧ್ಯಪರಾಧ ಇತಿ ಖಂಡೇ ತಥೈವ ಸೂತ್ರಿತಂ । ವಿಷ್ಯಂದಮಾನಂ ಮಹೀ ದ್ಯೌಃ ಪೃಥಿವೀ ಚ ನ ಇತ್ಯಂತಃಪರಿಧಿದೇಶೇ ನಿನಯೇಯುಃ । ಆ. ೩–೧೦ । ಇತಿ ॥ ಆಶ್ವಿನಶಸ್ತ್ರೇಽಪ್ಯೇಷಾ ಸಂಸ್ಥಿತೇಷ್ವಾಶ್ವಿನಾಯೇತಿ ಖಂಡೇ ಸೂತ್ರಿತಂ । ಮಹೀ ದ್ಯೌಃ ಪೃಥಿವೀ ಚ ನಸ್ತೇ ಹಿ ದ್ಯಾವಾಪೃಥಿವೀ ವಿಶ್ವಶಂಭುವಾ । ಆ. ೬–೫ । ಇತಿ ॥

ಮಹೀ ಮಹತೀ ದ್ಯೌರ್ದ್ಯುಲೋಕದೇವತಾ ಪೃಥಿವೀ ಭೂಮಿದೇವತಾ ಚ ನೋಽಸ್ಮದೀಯಮಿಮಂ ಯಜ್ಞಂ ಮಿಮಿಕ್ಷತಾಂ । ಸ್ವಕೀಯಸಾರಭೂತೇನ ರಸೇನ ಮಿಮಿಕ್ಷತಾಂ । ಸೇಕ್ತುಮಿಚ್ಛತಾಂ । ತಥಾ ಭರೀಮಭಿರ್ಭರಣೈಃ ಪೋಷಣೈರ್ನೋಽಸ್ಮಾನ್ಪಿಪೃತಾಂ । ಉಭೇ ದೇವ್ಯೌ ಪೂರಯತಾಂ ॥ ಮಹೀ । ಮಹಚ್ಛಬ್ದಾದುಗಿತಶ್ಚೇತಿ ಙೀಪ್ । ಅಚ್ಛಬ್ದಲೋಪಶ್ಛಾಂದಸಃ । ಬೃಹನ್ಮಹತೋರುಪಸಂಖ್ಯಾನಮಿತಿ ಙೀಪ ಉದಾತ್ತತ್ವಂ । ದ್ಯೌಃ । ದಿವ್ಶಬ್ದಃ ಪ್ರಾತಿಪದಿಕಸ್ವರೇಣಾಂತೋದಾತ್ತಃ । ಗೋತೋ ಣಿತ್ । ಪಾ. ೭–೧–೯೦ । ಇತಿ ತತಃ ಪರಸ್ಯ ಸೋರ್ಣಿದ್ವದ್ಭಾವಾದ್ಭವಂತೀ ವೃದ್ಧಿರಪಿ ಸ್ಥಾನಿವದ್ಭಾವೇನೋದಾತ್ತಾ । ಪೃಥಿವೀ । ಪ್ರಥ ಪ್ರಖ್ಯಾನೇ । ಪ್ರಥೇಃ ಷಿವನ್ಸಂಪ್ರಸಾರಣಂ ಚ । ಉ. ೧- ೧೫೦ । ಇತಿ ಷಿವನ್ಪ್ರತ್ಯಯಃ । ಷಿದ್ಗೌರಾದಿಭ್ಯಶ್ಚ । ಪಾ. ೪–೧–೪೧ । ಇತಿ ಙೀಷ್ । ಪ್ರತ್ಯಯಸ್ವರಃ । ಮಿಮಿಕ್ಷತಾಂ । ಮಿಹ ಸೇಚನೇ । ಸನಿ ದ್ವಿರ್ಭಾವಹಲಾದಿಶೇಷೌ । ಢತ್ವಕತ್ವಷತ್ವಾನಿ । ಪಿಪೃತಾಂ । ಪೄ ಪಾಲನಪೂರಣಯೋಃ । ಹ್ರಸ್ವ ಇತ್ಯೇಕೇ । ಶಪಃ ಶ್ಲುಃ । ಅರ್ತಿಪಿಪರ್ತ್ಯೋಶ್ಚ । ಪಾ. ೭–೪–೭೭ । ಇತ್ಯಭ್ಯಾಸಸ್ಯಾಕಾರಸ್ಯ ಇಕಾರಃ । ತಿಙಃ ಪ್ರತ್ಯಯಸ್ವರಃ । ಭರೀಮಭಿಃ । ಡುಭೃಞ್ ಧಾರಣಪೋಷಣಯೋಃ । ಹುಸ್ತೃಭೃಧೃಸ್ವೃಸೃಭ್ಯ ಈಮನ್ನಿತೀಮನ್ । ನಿತ್ತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

**ಮಹೀ**—ದೊಡ್ಡದಾದ । **ದ್ಯೌಃ**—ದ್ಯುಲೋಕದೇವತೆಯೂ । **ಪೃಥಿವೀ ಚ**—ಭೂದೇವತೆಯೂ ಸಹ । **ನಃ**—ನಮ್ಮ । **ಇಮಂ ಯಜ್ಞಂ**—ಈ ಯಜ್ಞವನ್ನು । **ಮಿಮಿಕ್ಷತಾಂ**—ರಸಯುಕ್ತವನ್ನಾಗಿ ಮಾಡಲುದ್ಯುಕ್ತರಾಗಲಿ । **ಭರೀಮಭಿಃ**—ಪೋಷಣಕಾರ್ಯಗಳಿಂದ । **ನಃ**—ನಮ್ಮನ್ನು । **ಪಿಪೃತಾಂ**—ಪೂರ್ಣರನ್ನಾಗಿ ಮಾಡಲಿ.

॥ ಭಾವಾರ್ಥ ॥

ನಮ್ಮ ಯಜ್ಞವನ್ನು ದೇವಲೋಕ ಮತ್ತು ಭೂಲೋಕ ದೇವತೆಗಳು ರಸಯುಕ್ತವನ್ನಾಗಿ ಮಾಡಲಿ ಮತ್ತು ನಮ್ಮನ್ನು ಪೋಷಕದ್ರವ್ಯಗಳಿಂದ ಪೋಷಿಸಲಿ.

## English Translation.

May the great Heaven and Earth sprinkle (with sweetness) this our Sacrifice ; may they fill us with nourishments.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಅನೇಕ ವಿನಿಯೋಗಗಳಿರುವವು. ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ದ್ವಿತೀಯ ಛಂದೋಮಾ ಮಂತ್ರವನ್ನಾಗಿ ದ್ಯಾವಾಪೃಥಿವೀದೇವತಾಕವಾದ ಮಂತ್ರಪಠನಕ್ಕಾಗಿ **ಮಹೀ ದ್ಯೌಃ ಪೃಥಿವೀ ಚನ** ಎಂಬ ಈ ಋಕ್ಕನ್ನು ಉಪಯೋಗಿಸುವರು. ಆಶ್ವಲಾಯನಶ್ರೌತಸೂತ್ರದ **ದ್ವಿತೀಯಸ್ಯಾಗ್ನಿಂ ವ** ಎಂಬ ಖಂಡದಲ್ಲಿ **ಮಹೀ ದ್ಯೌಃ ಪೃಥಿವೀ ಚನೋ** (ಋ. ಸಂ. ೧-೨೨-೧೨) **ಯುವಾನಾ ಪಿತರಾ ಪುನಃ** (ಋ. ಸಂ. ೧-೨೦-೪) ಎಂಬ ಸೂತ್ರವಿರುವುದು. (ಆ. ೮-೧೦).

ಆಗ್ರಯಣೇಷ್ಟಿಯಲ್ಲಿ **ಮಹೀ ದ್ಯೌಃ** ಎಂಬ ಈ ಋಕ್ಕನ್ನೂ ದ್ಯಾವಾಪೃಥಿವೀದೇವತಾಕವಾದ ಏಕಕಪಾಲ ನಿರ್ವಪನಕ್ಕಾಗಿ ಪುರೋನುವಾಕ್ಯಾಋಕ್ಕನ್ನಾಗಿ ಉಪಯೋಗಿಸುವರು. ಆಶ್ವಲಾಯನ ಶ್ರೌತಸೂತ್ರದ **ಆಗ್ರಯಣಂ ವ್ರೀಹಿಶ್ಯಾಮಾಕವೆಂಬ** ಖಂಡದಲ್ಲಿ **ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾ** (ಋ. ಸಂ. ೬-೫೨-೧೫) **ಮಹೀ ದ್ಯೌಃ ಪೃಥಿವೀ ಚನ.** (ಋ. ಸಂ. ೧-೨೨-೧೨) ಎಂಬ ಸೂತ್ರದಲ್ಲಿ ಈ ವಿಷಯವು ವಿವರಿಸಲ್ಪಟ್ಟಿರುವುದು (ಆ. ೨-೯).

ಅಗ್ನಿಮಂಥನಕಾಲದಲ್ಲಿಯೂ ಕೂಡ ಈ ಋಕ್ಕಿನ ವಿನಿಯೋಗವಿರುವುದು. ಆಶ್ವಲಾಯನಶ್ರೌತಸೂತ್ರದ **ಪ್ರಾತರ್ವೈಶ್ವದೇವ್ಯಾಂ** ಎಂಬ ಖಂಡದಲ್ಲಿ **ಅಭಿ ತ್ವಾ ದೇವ ಸವಿತ** (ಋ. ಸಂ ೧-೨೪-೩) **ಮಹೀ ದ್ಯೌಃ ಪೃಥಿವೀ ಚ ನಃ** (ಋ. ಸಂ. ೧-೨೨-೧೨) ಎಂಬ ಸೂತ್ರವಿರುವುದು (ಆ. ೨-೧೬).

ಸಾಂನಾಯ್ಯವೆಂಬ ಪುರೋಡಾಶವನ್ನು ಆಹವನೀಯಪ್ರದೇಶಕ್ಕೆ ಒಯ್ಯುವಾಗ ಈ ಮಂತ್ರವನ್ನು ಪಠಿಸುವರು. ಆಶ್ವಲಾಯನಶ್ರೌತಸೂತ್ರದ **ವಿಧ್ಯಪರಾಧ** ಎಂಬ ಖಂಡದಲ್ಲಿ **ವಿಷ್ಯಂದಮಾನಂ ಮಹೀ ದ್ಯೌಃ ಪೃಥಿವೀ ಚ ನ** (ಋ. ಸಂ. ೧-೨೨-೧೨) ಇತ್ಯಂತಃ ಪರಿಧಿದೇಶೇ ನಿನಯೇಯುಃ (ಆ. ೩-೧೦) ಎಂಬ ಸೂತ್ರವಿರುವುದು.

ಆಶ್ವಿನಶಸ್ತ್ರಮಂತ್ರಪಠನದಲ್ಲಿಯೂ ಸಹ ಇದರ ವಿನಿಯೋಗವು ಆಶ್ವಲಾಯನಶ್ರೌತಸೂತ್ರದ **ಸಂಸ್ಥಿತೇಷ್ವಾಶ್ವಿನಾಯ** ಎಂಬ ಖಂಡದಲ್ಲಿ **ಮಹೀ ದ್ಯೌಃ ಪೃಥಿವೀ ಚ ನಃ** (ಋ. ಸಂ. ೧-೨೨-೧೩) **ತೇ ಹಿ ದ್ಯಾವಾಪೃಥಿವೀ ವಿಶ್ವಶಂಭುವಾ** (ಋ. ಸಂ. ೧-೧೬೦-೧) ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು (ಆ. ೬-೫).

ಈ ವಿಧವಾದ ಶ್ರೌತಕರ್ಮಗಳಲ್ಲಲ್ಲದೆ ಗೃಹ್ಯಪ್ರಯೋಗಗಳಲ್ಲಿಯೂ ಪೃಥಿವೀಪ್ರಾರ್ಥನಾಸಂದರ್ಭಗಳಲ್ಲಿಯೂ ಈ ಮಂತ್ರದ ಪ್ರಯೋಗವಿರುವುದು.

**ದ್ಯೌಃ, ಪೃಥಿವೀ**—ಸ್ವರ್ಗ ಮತ್ತು ಭೂಮಿಯು. ಸ್ವರ್ಗ ಮತ್ತು ಭೂಮಿಗೆ ಅಭಿಮಾನಿದೇವತೆಗಳಾದ ದ್ಯಾವಾಪೃಥಿವೀ ಎಂಬ ಇಬ್ಬರು ದೇವತೆಗಳನ್ನು ಸಂಸ್ತವಿಕವಾಗಿ (ಒಟ್ಟಿಗೆ) ಸ್ತುತಿಸುವ ಮಂತ್ರಗಳು ಅನೇಕವಿದ್ದರೂ ದ್ಯೌಃ ಪೃಥಿವೀ ಎಂಬ ಪ್ರತ್ಯೇಕಶಬ್ದಗಳನ್ನು ಉಪಯೋಗಿಸಿ ಸ್ತುತಿಸುವ ಮಂತ್ರಗಳೂ ಕೆಲವಿವೆ—

**ಉಪ ಶ್ವಾಸಯ ಪೃಥಿವೀಮುತ ದ್ಯಾಂ ಪುರುತ್ರಾ ತೇ ಮನುತಾಂ ವಿಷ್ಠಿತಂ ಜಗತ್ ||**

(ಋ. ಸಂ. ೬-೪೭-೨೯)

**ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ |**

(ಋ. ಸಂ. ೩-೫೯-೧)

**ವಿಶ್ವಕರ್ಮನ್ ಹವಿಷಾ ವಾವೃಧಾನಃ ಸ್ವಯಂ ಯಜಸ್ವ ಪೃಥಿವೀಮುತ ದ್ಯಾಂ ||**

(ಋ. ಸಂ. ೧೦-೮೧-೬)

ದ್ಯಾವಾಪೃಥಿವೀ ಎಂಬ ಶಬ್ದದ ಅರ್ಥವನ್ನು ಸೂಚಿಸುವ ಸ್ವಧೇ ಪುರಂಧೀ ಮೊದಲಾದ ಇಪ್ಪತ್ತನಾಲ್ಕು ಶಬ್ದಗಳಿರುವವು (ನಿ. ೩-೩೦). ತೈತ್ತಿರೀಯ ಸಂಹಿತೆಯಲ್ಲಿ **ದ್ಯೌಃ ಪಿತಃ ಪೃಥಿವಿ ಮಾತಃ** ಎಂದರೆ ಸ್ವರ್ಗವನ್ನು ತಂದೆಯೆಂದೂ ಭೂಮಿಯನ್ನು ತಾಯಿಯೆಂದೂ ಸಂಬೋಧನೆಮಾಡಲಾಗಿದೆ. ಋಗ್ವೇದದಲ್ಲಿ ಸಾಧಾರಣವಾಗಿ ಸ್ವರ್ಗ, ಅಂತರಿಕ್ಷ, ಭೂಮಿ ಎಂದು ಪ್ರಪಂಚವನ್ನು (ವಿಶ್ವವನ್ನು) ಮೂರು ಮುಖ್ಯ ವಿಭಾಗಗಳನ್ನಾಗಿ (ಲೋಕಗಳನ್ನಾಗಿ) ಪರಿಗಣಿಸಲಾಗಿದೆ. ಸ್ವರ್ಗದಲ್ಲಿಯೂ ಸಹ **ನಾಕ,** (ಸ್ವರ್ಗದಲ್ಲಿ ಬಹು ಎತ್ತರದಲ್ಲಿರುವ ಉತ್ತಮವಾದ ಸ್ಥಾನ) **ವಿಷ್ಟಪ** (ಮಧ್ಯಪ್ರದೇಶ) **ಪೃಷ್ಠ** (ಕೆಳಭಾಗ) ಎಂದು ಮೂರು ವಿಭಾಗಗಳಿವೆ ಅಂತರಿಕ್ಷದಲ್ಲಿ ವಿಶೇಷ ವಿಭಾಗಗಳಿಲ್ಲದಿದ್ದರೂ **ವ್ಯೋಮನ್, ರೋಚನ** (ಪ್ರಕಾಶಮಾನವಾದ ಪ್ರದೇಶ) **ಅಂತರಿಕ್ಷ** ಮೊದಲಾದ ಶಬ್ದಗಳು ಅರ್ಥದಲ್ಲಿ ವ್ಯತ್ಯಾಸವನ್ನು ಸೂಚಿಸುವವು. ಪೃಥಿವೀಶಬ್ದವೂ ಸಹ **ಪೃಥಿವೀ** (ವಿಸ್ತಾರವಾದ ಪ್ರದೇಶ) **ಮಹೀ** (ದೊಡ್ಡದಾದ ಪ್ರದೇಶ) **ಇಳಾ** (ಈ ಪ್ರಪಂಚ) **ವಸುಮತೀ** (ಐಶ್ವರ್ಯಯುಕ್ತವಾದ) ಮೊದಲಾದ ನಾಮಗಳಿಂದ ಕರೆಯಲ್ಪಡುವುದು. ಋಗ್ವೇದದಲ್ಲಿ ಸಾಧಾರಣವಾಗಿ ದ್ಯಾವಾಪೃಥಿವೀ ಎಂಬ ಶಬ್ದವು ಸ್ವರ್ಗ ಮತ್ತು ಭೂಮಿಯ ಅಭಿಮಾನಿ ದೇವತೆಗಳೆಂದು ಭಾವಿಸಿ ಅದರಂತೆ ಪ್ರಯೋಗಿಸಲ್ಪಟ್ಟಿರುವುದು.

**ಯಜ್ಞಂ ಮಿಮಿಕ್ಷತಾಂ—ಸ್ವಕೀಯಸಾರಭೂತೇನ ರಸೇನ ಸೇಕ್ತುಮಿಚ್ಛತಾಂ |** ದ್ಯಾವಾಪೃಥಿವೀ ಎಂಬ ಸ್ವರ್ಗಭೂಮ್ಯಾಭಿಮಾನಿದೇವತೆಗಳು ಸ್ವರ್ಗ ಮತ್ತು ಭೂಮಿಯಲ್ಲಿರುವ ಉತ್ತಮವಾದ ವಸ್ತುಗಳಿಂದ ಈ ಯಜ್ಞವನ್ನು ಚೆನ್ನಾಗಿ ನೆರವೇರುವಂತೆ ಅನುಗ್ರಹಿಸಲಿ ಎಂದಭಿಪ್ರಾಯವು.

**ಪಿಪೃತಾಂ ನೋ ಭರೀಮಭಿಃ—ಭರಸಮರ್ಥೈರನ್ನೈ ರಸೈಶ್ಚ** ॥ ಪುಷ್ಟಿಕರವಾದ ಅನ್ನಾದ್ಯಾಹಾರ ವಸ್ತುಗಳಿಂದಲೂ ಸೋಮರಸಾದಿಪಾನೀಯಗಳಿಂದಲೂ ನಮ್ಮ ಯಜ್ಞವನ್ನು ಪರಿಪೂರ್ಣವನ್ನಾಗಿ ಮಾಡಲಿ.

॥ ವ್ಯಾಕರಣಪ್ರಕ್ರಿಯಾ ॥

**ಮಹೀ**—ಮಹತ್ ಶಬ್ದವು **'ವರ್ತಮಾನೇ ಪೃಷದ್ಬೃಹನ್ಮಹಜ್ಜಗಚ್ಛತೃವಚ್ಚ'** (ಉ. ಸೂ. ೨-೨೪೨) ಎಂದು ಶತೃವದ್ಭಾವಾತಿದೇಶವಿರುವುದರಿಂದ ಉಗಿತ್ತಾಗುವುದು. **'ಉಗಿತಶ್ಚ'** (ಪಾ. ಸೂ. ೪-೧-೬) **'ಜ್ಯಾಪ್ರಾತಿಪದಿಕಾತ್'** (ಪಾ. ಸೂ ೪-೧-೧೨) ಎಂಬುದರಿಂದ ಪ್ರಾತಿಪದಿಕಾತ್ ಎಂಬ ಪದವು ಅಧಿಕೃತವಾಗುವುದು. ಉಗಿತಃ, ಎಂಬುದು ಪ್ರಾದಿಪದಿಕಾತ್ ಎಂಬುದಕ್ಕೆ ವಿಶೇಷಣ. ಆದ್ದರಿಂದ **'ಯೇನವಿಧಿಸ್ತದನ್ತಸ್ಯ'** (ಪಾ. ಸೂ. ೧-೧-೭) ವಿಶೇಷಣವು ತದಂತಕ್ಕೆ ಬೋಧಕವಾಗುವುದು, ಎಂಬುದರಿಂದ ತದಂತಲಾಭ. ಯದ್ಯಪಿ ಇದು ಪ್ರತ್ಯಯವಿಧಿಯಾದ್ದರಿಂದ **ಸಮಾಸಪ್ರತ್ಯಯವಿಧೌ ಪ್ರತಿಷೇಧಃ'** (ಪಾ. ಸೂ. ೧-೧-೭೨ ವಾ ೫೪೫) ಸಮಾಸದ ವಿಧಿಯಲ್ಲಿಯೂ, ಪ್ರತ್ಯಯ ವಿಧಿಯಲ್ಲಿಯೂ, ತದಂತಲಾಭಕ್ಕೆ ಪ್ರತಿಷೇಧವನ್ನು ಹೇಳಬೇಕು ಎಂಬುದರಿಂದ ತದಂತ ಲಾಭಕ್ಕೆ ಪ್ರತಿಷೇಧವು ಪ್ರಾಪ್ತವಾಗುವುದು. ಆದರೂ **'ಉಗಿದ್ವರ್ಣಗ್ರಹಣವರ್ಜಮ್'** (ಪಾ. ಸೂ. ೧-೧-೮೨ ವಾ ೫೪೬) ಉಗಿದ್ಗ್ರಹಣ. ವರ್ಣಗ್ರಹಣಗಳನ್ನು ಬಿಟ್ಟು ಸಮಾಸವಿಧಿಯಲ್ಲಿಯೂ ಪ್ರತ್ಯಯ ವಿಧಿಯಲ್ಲಿಯೂ ತದಂತಲಾಭ ಪ್ರತಿಷೇಧವನ್ನು ಹೇಳಬೇಕು ಎಂದಿರುವುದರಿಂದ ಇಲ್ಲಿ **'ಉಗಿತಃ'** ಎಂದು ಉಗಿದ್ಗ್ರಹಣವಿರುವುದರಿಂದ ತದಂತಲಾಭಕ್ಕೆ ಪ್ರತಿಷೇಧ ಬರುವುದಿಲ್ಲ, ಅಥವಾ **'ಅನುಪಸರ್ಜನಾತ್'** (ಪಾ. ಸೂ. ೪-೧-೧೪) ಎಂಬ ಅಧಿಕಾರವು ಸ್ತ್ರೀಪ್ರತ್ಯಯ ಪ್ರಕರಣದಲ್ಲಿ ತದಂತವಿಧಿಯುಂಟು ಎಂದು ಜ್ಞಾಪಿಸುವುದು. ಆದ್ದರಿಂದ ತದಂತಲಾಭ ಬರುವುದು. **'ಸ್ತ್ರಿಯಾಂ'** (ಪಾ. ಸೂ. ೪-೧-೩) ಎಂದು ಅಧಿಕೃತವಾಗುತ್ತೆ. **'ಋನ್ನೇಭ್ಯೋ ಙೀಪ್'** (ಪಾ. ಸೂ. ೪-೧-೫) ಎಂಬುದರಿಂದ ಙೀಪ್ ಪದ ಅನುವೃತ್ತಿ ಏವಂಚ ಸೂತ್ರಾರ್ಥವು ಉಗಿದಂತವಾದ ಪ್ರಾತಿಪಾದಿಕದ ಮುಂದೆ ಸ್ತ್ರೀಲಿಂಗದಲ್ಲಿ ಙೀಪ್ ಬರುವುದು ಎಂದಾಗುವುದು. ಉಗಿತ್ ಎರಡು ವಿಧ. ೧. ಪ್ರಾತಿಪದಿಕ, ೨. ಪ್ರತ್ಯಯ ಪ್ರಾತಿಪದಿಕಮಾತ್ರವೃತ್ತಿ ಧರ್ಮಪುರಸ್ಕಾರದಿಂದ ಎಲ್ಲಿ ಪ್ರಾತಿಪದಿಕ ಗ್ರಹಣವಿದೆಯೋ ಅಲ್ಲಿ **'ವ್ಯಪದೇಶಿವದ್ಭಾವೋಽಪ್ರಾತಿಪದಿಕೇನ'** (ಪರಿಭಾ. ೩೩) ಎಂದು ನಿಷೇಧವಿರುವುದರಿಂದ ವ್ಯಪದೇಶಿವದ್ಭಾವ ಬರಲಾರದು. ಇಲ್ಲಿ ಉದಿತ್ತು ಪ್ರತ್ಯಯ ಪ್ರಾತಿಪದಿಕೋಭಯ ವೃತ್ತಿಯಾದ್ದರಿಂದ, ಇಲ್ಲಿ ವ್ಯಪದೇಶಿವದ್ಭಾವ ಬರುವುದು. ಆದ್ದರಿಂದ ಮಹತ್ ಎಂಬುದು ಉಗಿದಂತವಾದ ಪ್ರಾತಿಪದಿಕವಾಗುವುದು. ಇದರ ಮುಂದೆ ಙೀಪ್ ಬಂದರೆ ಮಹತ್+ಈ ಎಂದಿರುವಾಗ ಛಾಂದಸವಾಗಿ ಅತ್ ಶಬ್ದಕ್ಕೆ ಲೋಪ, ವಿಶಿಷ್ಟ ಅಪದೇಶಃ, ವ್ಯಪದೇಶಃ, ಮುಖ್ಯ ವ್ಯವಹಾರ ಎಂದರ್ಥ. ವ್ಯಪದೇಶಿನಾ ತುಲ್ಯಂ, ವ್ಯಪದೇಶಿವತ್, ಅಸಹಾಯವಾದುದರ ತದಂತ ವ್ಯವಹಾರವು ಮುಖ್ಯವಾಗಿ ಬರುವುದಿಲ್ಲ. ಆದರೂ ಮುಖ್ಯ ವ್ಯವಹಾರವಿರುವಲ್ಲಿ ಹೇಗೆ ಕಾರ್ಯ ಬರುವುದೋ ಅದೇ ರೀತಿಯಲ್ಲಿ ಕಾರ್ಯ ಬರುವುದು ಎಂದು ವ್ಯಪದೇಶಿವದ್ಭಾವ ಎಂಬುದಕ್ಕೆ ಅರ್ಥ. ಇಲ್ಲಿ ಮಹತ್ ಎಂಬುದು ಅತಿದೇಶದಿಂದ ಉಗಿತ್ತು, ಆದರೂ ಇದು ಇನ್ನೊಂದರ ಕೊನೆಯಲ್ಲಿಲ್ಲವಾದ್ದರಿಂದ ಉಗಿದಂತ, ಎಂದು ಮುಖ್ಯ ವ್ಯವಹಾರ ಬರಲಾರದು. ಅತಿ ಮಹತ್, ಎಂಬಲ್ಲಿ ಮುಖ್ಯವಾದ ಉಗಿದಂತ ವ್ಯವಹಾರವಿದೆ. ಇಲ್ಲಿ ಮುಖ್ಯ ವ್ಯವಹಾರವಿರುವೆಡೆಗಳಲ್ಲಿ ಹೇಗೆ ಕಾರ್ಯಬರುವುದೋ ಹಾಗೆ ಇಲ್ಲಿ ಕಾರ್ಯಬರುವುದು. ವ್ಯಪದೇಶಿವದ್ಭಾವದಿಂದ ಏರ್ಪಡುತ್ತೆ. ಆದ್ದರಿಂದ

ಇಲ್ಲಿ ಜ್ೀಪ್ ಬರಲು ತಡೆ ಇಲ್ಲ. ಜ್ೀಪ್, ಪಿತ್, ಆದ್ದರಿಂದ ಯದ್ಯಪಿ **'ಅನುದಾತ್ತೌ ಸುಪ್ಪಿತೌ'** ಎಂಬುದರಿಂದ ಅನುದಾತ್ತವಾಗಬೇಕು. ಆದರೂ **'ಶತುರನುಮೋನದ್ಯಜಾದೀ'** (ಪಾ. ಸೂ. ೬-೧-೧೭೩) ಎಂಬಲ್ಲಿ ಪಠಿತವಾದ **'ಬೃಹನ್ಮಹತೋರುಪಸಂಖ್ಯಾನಂ'** ಬೃಹತ್, ಮಹತ್ ಶಬ್ದಗಳ ಮುಂದಿರುವ ನದೀಸಂಜ್ಞಕವೂ, ಅಜಾದಿ ಶಸಾದಿ ವಿಭಕ್ತಿಯೂ ಸಹ ಉದಾತ್ತವಾಗುವುವು ಎಂಬುದರಿಂದ ಉದಾತ್ತವಾಗುದು, **'ಯೂಸ್ತ್ರ್ಯಾಖ್ಯೌನದೀ'** (ಪಾ. ಸೂ. ೧-೪-೩) ವರ್ಣಸಂಜ್ಞಾಪಕ್ಷದಲ್ಲಿ, ನಿತ್ಯಸ್ತ್ರೀತ್ವವಿಶಿಷ್ಟಾರ್ಥಬೋಧಕಗಳಾದ ಈ-ಊ ವರ್ಣಗಳು ನದೀ ಸಂಜ್ಞೆಯನ್ನು ಹೊಂದುವುವು ಎಂದು, ತದಂತಸಂಜ್ಞಾಪಕ್ಷದಲ್ಲಿ ನಿತ್ಯಸ್ತ್ರೀತ್ವ ವಿಶಿಷ್ಟಾರ್ಥಬೋಧಕಗಳಾದ ಈ ವರ್ಣಾಂತ, ಊವರ್ಣಾಂತ ಶಬ್ದಗಳು ನದೀಸಂಜ್ಞೆಯನ್ನು ಹೊಂದುವುವು ಎಂದು ಸೂತ್ರಾರ್ಥ. ಇಲ್ಲಿ ವರ್ಣಸಂಜ್ಞಾ ಪಕ್ಷದಲ್ಲಿ ಜ್ೀಪ್‌ಗೆ ನದೀಸಂಜ್ಞೆ ಇದೆ. ಯದ್ಯಪಿ ಶತೃವದ್ಭಾವಾತಿದೇಶದಿಂದಲೇ ಉದಾತ್ತವು ಸಿದ್ಧಿಸುವುದು. ಆದರೂ ಬೃಹತ್ ಮಹತ್ ಶಬ್ದಗಳನ್ನುಳಿದ ಶಬ್ದಗಳ ಮುಂದಿರುವ ಪ್ರತ್ಯಯಕ್ಕೆ ಉದಾತ್ತ ವ್ಯಾವೃತ್ತಿ ಬರುವಂತೆ ನಿಯಮ ಲಾಭಕ್ಕಾಗಿ ವಾರ್ತ್ತಿಕಾರಂಭವು ಎಂದು ಹಿಂದೆಯೇ ವಿವರಿಸಿರುವೆವು.

**ದ್ಯೌಃ**—ಈ ಶಬ್ದವನ್ನು ಎರಡು ವಿಧವಾಗಿ ನಿಷ್ಪತ್ತಿ ಮಾಡಬಹುದು. ೧. ದ್ಯುತ ದೀಪ್ತೌ ಧಾತು. ಇದರ ಮುಂದೆ **'ಉಣಾದಯೋ ಬಹುಲಂ'** (ಪಾ. ಸೂ. ೩-೩-೧) ಎಂಬಲ್ಲಿ ಬಹುಲಗ್ರಹಣದಿಂದ ಔಣಾದಿಕವಾದ **'ಡೋ'** ಪ್ರತ್ಯಯ ಬರುವುದು. ಪ್ರತ್ಯಯದಲ್ಲಿ ಡಿತ್ಕರಣ ಸಾಮರ್ಥ್ಯದಿಂದ ಭ ಸಂಜ್ಞೆ ಇಲ್ಲದಿದ್ದರೂ ಉತ್ ಎಂಬ ಧಾತುವಿನ ಟಿಗೆ **ಲೋಪ** ದ್ಯೋ, ಎಂದಾಯ್ತು. ಇದರ ಮುಂದೆ ಪ್ರಥಮಾ ಏಕವಚನ ಸು ಪ್ರತ್ಯಯ, **'ಗೋತೋ ಣಿತ್'** (ಪಾ.ಸೂ. ೭-೧-೯೦) ಗೋ ಶಬ್ದದ ಮುಂದೆ ಇರುವ ಸರ್ವನಾಮಸ್ಥಾನ ಸಂಜ್ಞಕ ಪ್ರತ್ಯಯಗಳು ಅಂದರೆ, ಸು, ಔ, ಜಸ್, ಅಮ್, ಔಟ್, ಈ ಐದು ಪ್ರತ್ಯಯಗಳು ಣಿತ್ತಿನಂತೆ ಆಗುವುವು ಎಂದಿದರ ಅರ್ಥ. ಇಲ್ಲಿ ವಾರ್ತ್ತಿಕಕಾರರು **'ಓತೋಣಿದಿತಿವಾಚ್ಯಮ್'** (ಪಾ ಸೂ. ವಾ. ೭-೧-೯೦-೧) ಗೋತೋಣಿತ್ ಎಂಬ ಸೂತ್ರವನ್ನು **'ಓತೋಣಿತ್'** ಎಂದು ಮಾಡಬೇಕು. ಅಂದರೆ ಗೋತಃ ಎಂಬ ಪದವನ್ನು ತೆಗೆದು ಅದರ ಸ್ಥಾನದಲ್ಲಿ **'ಓತಃ'** ಎಂಬ ಪದವನ್ನು ಸೇರಿಸಬೇಕು ಎಂದು ಹೇಳಿರುವರು. ಇದರ ಪ್ರಕಾರ ಓಕಾರಾಂತವಾದ ಶಬ್ದದ ಮುಂದಿರುವ ಸರ್ವನಾಮ ಸ್ಥಾನಪ್ರತ್ಯಯಗಳು ಣಿತ್ತಿನಂತೆ ಅಂದರೆ ಣಕಾರೇತ್ಸಂಜ್ಞಕದಂತೆ ಆಗುವುವು ಎಂದು ಏರ್ಪಡುವುದು. ಆದ್ದರಿಂದ ಓಕಾರಾಂತವಾದ ದ್ಯೋ ಶಬ್ದದ ಮುಂದಿರುವ ಸುವು ಣಿತ್ತಿನಂತಾಗುವುದು, **'ಅಚೋಞ್ಣಿತಿ'** (ಪಾ. ಸೂ. ೭-೨-೧೧೫) ಞಿತ್ತು ಣಿತ್ತಾದ ಪ್ರತ್ಯಯಗಳು ಪರದಲ್ಲಿರುವಾದ ಅಜಂತವಾಗ ಅಂಗಕ್ಕೆ ವೃದ್ಧಿ ಬರುವುದು ಎಂಬುದರಿಂದ ವೃದ್ಧಿ ಓ ಗೆ ಔ ಬಂದು ರುತ್ವವಿಸರ್ಗಗಳು ಸು ಗೆ ಬಂದರೆ ದ್ಯೌಃ ಎಂದಾಗುವುದು. ಈ ಪಕ್ಷದಲ್ಲಿ ಪ್ರತ್ಯಯಸ್ವರದಿಂದ ಓಕಾರ ಉದಾತ್ತ. ಸ್ಥಾನಸಾಮ್ಯದಿಂದ ಅದರ ಸ್ಥಾನದಲ್ಲಿ ಬಂದ ಔಕಾರವೂ ಉದಾತ್ತ. ೨-ದಿವ್- ಎಂಬುದು ವಕಾರಾಂತಪ್ರಾತಿಪದಿಕ, ಇದು **'ಫಿಷೋಂತಉದಾತ್ತಃ'** ಎಂಬುದರಿಂದ ಉದಾತ್ತ. ಇದರ ಮುಂದೆ ಸುಪ್ರತ್ಯಯ **'ದಿವ ಔತ್'** (ಪಾ.ಸೂ.೭-೧-೮೪) ಸುಪ್ರತ್ಯಯ ಪರದದಲ್ಲಿರುವಾಗ ದಿವ್ ಎಂಬ ಪ್ರಾತಿಪದಿಕದ ಕೊನೆಯ ವರ್ಣಕ್ಕೆ ಔ ಆದೇಶ ಬರುವುದು ಎಂಬುದರಿಂದ ದಿವ್‌ನ ವಕಾರಕ್ಕೆ ಔಕಾರಾದೇಶ ದಿ+ಔ+ಸ್-**'ಇಕೋ ಯಣಚಿ'** (ಪಾ. ಸೂ. ೬-೧-೭೭) ಎಂಬುದರಿಂದ ಇಕಾರಕ್ಕೆ ಯಕಾರ, ದ್ಯೌ ಸ್ ಔಕಾರ ವ್ ನ ಸ್ಥಾನದಲ್ಲಿ ಬಂದಿದೆ. **'ಸ್ಥಾನಿವದಾದೇಶಃ'**-(ಪಾ. ಸೂ. ೧-೧-೫೬) ಎಂಬುದರಿಂದ ಸ್ಥಾನಿವದ್ಭಾವಬಂದಲ್ಲಿ ಏವಂಚ ವ್ ಇದ್ದಂತಾಗುವುದು. ಆದ್ದರಿಂದ **'ಹಲ್ಜ್ಯಾಭ್ಯೋದೀರ್ಘಾತ್'**-(ಪಾ. ಸೂ. ೬-೧-೬೮) ಎಂಬುದು ಸು ಗೆ **ಲೋಪ** ಬರಲಿ ಎಂದು

ಶಂಕಿಸಬಹುದು, ಆದರೆ, '**ಸ್ಥಾನಿವದಾದೇಶೋಽನಲ್ವಿಧೌ**' (ಪಾ. ಸೂ. ೧-೧-೫೬) ಎಂಬಲ್ಲಿ ಅನಲ್ವಿಧೌ ಎಂದರೆ ಅಲ್ವಿಧಿಯಲ್ಲಿ ಸ್ಥಾನಿವದ್ಭಾವ ಬರುವುದಿಲ್ಲವೆಂದು ನಿಷೇಧವಿರುವುದರಿಂದ '**ಹಲ್ಙ್ಯಾಭ್ಯಃ**' ಎಂಬ ಅಲ್ವಿಧಿಯನ್ನು ಮಾಡುವಾಗ ಸ್ಥಾನಿವದ್ಭಾವ ಬರುವುದಿಲ್ಲ. ಆದ್ದರಿಂದ ಸು ಗೆ ಲೋಪ ಬರುವುದಿಲ್ಲ. ರುತ್ವವಿಸರ್ಗ ದ್ಯೌಃ ಎಂದಾಗುತ್ತೆ. ಈ ಪಕ್ಷದ ದಿವ್ ಎಂಬಲ್ಲಿ ಇಕಾರ ಉದಾತ್ತ, ವಕಾರ ಸ್ಥಾನದಲ್ಲಿ ಬಂದ '**ಅಸ್ವರಕಾಣಾಮಸ್ವರಕಾ ಆದೇಶಾಃ**' ಎಂಬುದರಿಂದ ಔಕಾರ ಅನುದಾತ್ತ '**ಉದಾತ್ತಸ್ವರಿತಯೋರ್ಯಣಸ್ವರಿತೋಽನುದಾತ್ತಸ್ಯ**' (ಪಾ. ಸೂ. ೭-೨-೪) ಉದಾತ್ತ ಅಥವಾ ಸ್ವರಿತ ಇವುಗಳ ಸ್ಥಾನದಲ್ಲಿ ಬಂದ ಯಣ್ ನ ಮುಂದಿರುವ ಅನುದಾತ್ತಕ್ಕೆ ಸ್ವರಿತ ಬರುವುದು ಎಂದುದರಿಂದ ಉದಾತ್ತ ಇ ಯ ಸ್ಥಾನದಲ್ಲಿ ಬಂದ ಯಕಾರದ ಮುಂದಿರುವ ಔಕಾರವು ಸ್ವರಿತವಾಗುವುದು ಎಂದು ಸ್ಥಿತಿಯು, ಪ್ರಕೃತ ವೇದಭಾಷ್ಯದಲ್ಲಿ '**ದಿವ್ ಶಬ್ದಃ ಪ್ರಾತಿಪದಿಕಸ್ವರೇಣಾಂತೋದಾತ್ತಃ**' ಎಂಬಲ್ಲಿ '**ದ್ಯೋ ಶಬ್ದಃ ಬಾಹುಲಕಾತ್ ಔಣಾದಿಕಡೋಪ್ರತ್ಯಯಾಂತ, ಪ್ರತ್ಯಯಸ್ವರೇಣಾಂತೋದಾತ್ತಃ**' ಎಂದು ಇರುವುದು ಯುಕ್ತವು. ಈಗಿರುವ ಪಾಠವು ಲೇಖಕ ಶೋಧಕರುಗಳ ಪ್ರಮಾದಿಂದ ಬಿದ್ದಿರುವುದೆಂದು ಪಂಡಿತರಿಗೆ ತಿಳಿಯದ ವಿಷಯವಲ್ಲ.

**ಪೃಥಿವೀ-ಪ್ರಥ ಪ್ರಖ್ಯಾನೇ** ಧಾತು '**ಪ್ರಥೇಃ ಷಿವನ್ ಸಂಪ್ರಸಾರಣಂ ಚ**' (ಉ. ಸೂ. ೧-೧೪೮) ಪ್ರಥಧಾತುವಿನ ಮುಂದೆ ಷಿವನ್‌ಪ್ರತ್ಯಯ ಬರುವುದು. ಧಾತುವಿಗೆ ಸಂಪ್ರಸಾರಣವೂ ಬರುವುದು ಎಂಬುದರಿಂದ, ಷಿರ್ವಪ್ರತ್ಯಯ ಬಂದರೆ-ಸಂಪ್ರಸಾರಣ, ರೇಫಕ್ಕೆ ಋಕಾರವೂ ಬಂದು. ಪೃಥ್+ಇವ್=ಪೃಥಿವ್, ಪ್ರತ್ಯಯಷಿತ್, '**ಷಿದ್ಗೌರಾದಿಭ್ಯಶ್ಚ**' (ಪಾ. ಸೂ. ೪-೧-೪೧) ಷಕಾರೇತ್ಸಂಜ್ಞಕವಾದ ಶಬ್ದಗಳು ಗೌರಾದಿಗಣಪಠಿತವಾದ ಶಬ್ದಗಳು ಇವುಗಳ ಮುಂದೆ ಸ್ತ್ರೀಲಿಂಗದಲ್ಲಿ ಙೀಷ್ ಬರುವುದು, ಎಂಬುದರಿಂದ ಙೀಷ್ ಬರುತ್ತೆ. ಯದ್ಯಪಿ ಇಲ್ಲಿ ಪ್ರತ್ಯಯವು ಷಿತ್, ಪೃಥಿವ್ ಶಬ್ದವು ಷಿತ್ತಲ್ಲ ಆದರೂ ಅವಯವೇ '**ಅಚರಿತಾರ್ಥಂ ಲಿಂಗಂ ಸಮುದಾಯೋಪಕಾರಕಂ ಭವತಿ**' ಎಂಬ ನ್ಯಾಯದಿಂದ ಪ್ರತ್ಯಯದಲ್ಲಿರುವ ಷಿತ್ವಕ್ಕೆ ಬೇರೆ ಪ್ರಯೋಜನವಿಲ್ಲದೇ ಇರುವುದರಿಂದ, ಆ ಷಿತ್ವವು ಸಮುದಾಯಕ್ಕೆ ವಿಶೇಷಣವಾಗುವುದು, ಪೃಥಿವೀ ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತ.

**ಮಿಮಿಕ್ಷತಾಮ್**— 'ಮಿಹ ಸೇಚನೇ' ಧಾತು. '**ಧಾತೋಃ ಕರ್ಮಣಸ್ಸಮಾನಕರ್ತೃಕಾದಿಚ್ಛಾಯಾಂವಾ**' (ಪಾ. ಸೂ. ೩-೧-೭) ಎಂಬುದರಿಂದ ಸನ್ ಪ್ರತ್ಯಯ '**ಸನ್ಯಙೋಃ**' (ಪಾ. ಸೂ. ೬-೧-೯) ಎಂಬುದರಿಂದ ದ್ವಿತ್ವ, ಮಿಹ್ ಮಿಹ್-ಸ, '**ಹಲಾದಿಶ್ಶೇಷಃ**' (ಪಾ. ಸೂ. ೭-೪-೬೦) ಎಂಬುದರಿಂದ ಮೊದಲನೇ ಮಿಹ್‌ನ ಹಕಾರಕ್ಕೆ ಲೋಪ. ಲೋಟ್–ಪ್ರಥಮಪುರುಷ ತಸ್, '**ಲೋಟೋಲಙ್ವತ್**' (ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ '**ತಸ್ಥಸ್ಥಮಿಪಾಂ ತಾಂತಂತಾಮಃ**' (ಪಾ. ಸೂ. ೩-೪-೧೦೧) ಎಂಬುದರಿಂದ ತಾಮ್ ಆದೇಶ. '**ವಸತಿರ್ದಹದಿಹಿದುಹೋನಹ್ ಮಿಹ್ ರುಹ್ ಲಿಹ್ ವಹಿಸ್ತಥಾ**' (ಪಾ. ಸೂ. ಪಾ. ಮಾ. ೭-೨-೧೦-೬) ಎಂದು ಅನಿಟ್ಕಾರಿಕೆಯಲ್ಲಿ ಮಿಹ್ ಧಾತುವಿರುವುದರಿಂದ '**ಏಕಾಚ ಉಪದೇಶೇಽನುದಾತ್ತಾತ್**' (ಪಾ. ಸೂ. ೭-೨-೧೦) ಎಂದು ಇಡಾಗಮಕ್ಕೆ ನಿಷೇಧ ಬರುವುದು. ಮಿಮಿಹ್+ಸ+ತಾಮ್' ಈಗ '**ಹೋಢಃ**' (ಪಾ. ಸೂ. ೮-೨-೩೧) ಎಂಬುದರಿಂದ ಹ್ ಗೆ ಢ ಆದೇಶ, ಈ ಢಕಾರಕ್ಕೆ '**ಷಢೋಃ ಕಃಸಿ**' (ಪಾ. ಸೂ. ೮-೮-೪೧) ಎಂಬುದರಿಂದ ತಕಾರಾದೇಶ, ಇದರ ಮುಂದಿರುವ ಸಕಾರಕ್ಕೆ '**ಆದೇಶಪ್ರತ್ಯಯಯೋಃ**' (ಪಾ. ಸೂ. ೮-೩-೫೯)

ಎಂಬುದರಿಂದ ಷತ್ವ, ಮಿಮಿಕ್ಷತಾಮ್ ಎಂದಾಗುತ್ತೆ. '**ತಿಙ್ಙತಿಙಃ** '(ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ.

**ಪಿಪೃತಾಮ್**—'**ಪೄ ಪಾಲನಪೂರಣಯೋಃ**' ಧಾತು, '**ಪೃ**' ಎಂದು ಹ್ರಸ್ವಾಂತವೆಂದು ಕೆಲವರು ಅಭಿಪ್ರಾಯ ಪಡುವರು. ಲೋಟ್ ಪ್ರಥಮಪುರುಷ ತಸ್ ಹಿಂದಿನಂತೆ ತಾಂ ಆದೇಶ ಶಪ್ '**ಜುಹೋತ್ಯಾದಿಭ್ಯಃ ಶ್ಲುಃ**' (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು (ಲೋಪ) '**ಶ್ಲೌ**' (ಪಾ. ಸೂ. ೬-೧-೧೦) ಎಂಬುದರಿಂದ ದ್ವಿತ್ವ '**ಅರ್ತಿಪಿಪರ್ತ್ಯೋಶ್ಚ**' (ಪಾ. ಸೂ. ೭-೪-೭೭) ಶ್ಲು ಬಂದಿರುವ ಪಕ್ಷದಲ್ಲಿ '**ಋ ಗತೌ**' ಪೄ, ಪೃ, ಪಾಲನ ಪೂರಣಯೋಃ ಇವುಗಳ ಅಭ್ಯಾಸಕ್ಕೆ ಇಕಾರವು ಅಂತಾದೇಶವಾಗಿ ಬರುವುದು ಎಂಬುದರಿಂದ ಮೊದಲನೆಯ ಪೃ ನ ಋ ಗೆ ಇಕಾರ '**ಉರಣ್ರಪರಃ**' ಎಂಬುದರಿಂದ ಅದು ರಪರವಾಗಿ ಬರುತ್ತೆ. '**ಹಲಾದಿಶ್ಶೇಷಃ**' ಎಂಬುದರಿಂದ ರೇಫ ನಿವೃತ್ತಿ ಪಿಪೃತಾಂ ಎಂದಾಗುತ್ತೆ. ಭಾಷ್ಯದಲ್ಲಿ ಮೊದಲು '**ಉರತ್**' (ಪಾ. ಸೂ. ೭-೪-೬೬) ಪ್ರತ್ಯಯಪರ ದಲ್ಲಿರುವಾಗ ಅಭ್ಯಾಸದ ಋಕಾರಕ್ಕೆ ಅಕಾರಬರುವುದು ಎಂಬುದರಿಂದ ಅಕಾರ ಬರುವುದು ನಂತರ, ಅಕಾರಕ್ಕೆ '**ಅರ್ತಿಪಿಪರ್ತ್ಯೋಶ್ಚ**' ಎಂಬುದರಿಂದ ಇತ್ವ ಬರುವುದು ಎಂದು ವರ್ಣಿತವಾಗಿದೆ. ವಸ್ತುತಃ, '**ಉರತ್**' ಎಂಬುದಕ್ಕೆ ಇತ್ವ ವಿಧಾಯಕವು ಅಪವಾದವಾದ್ದರಿಂದ, ಮೊದಲೇ ಇತ್ವ ಬರುವುದು ಎಂದು ಹೇಳುವುದು ಯುಕ್ತವು. ಇಲ್ಲಿ ಪೃ, ಎಂಬ ಹ್ರಸ್ವಾಂತ ಧಾತುವನ್ನು ಇಟ್ಟುಕೊಂಡಿರುವುದರಿಂದ '**ಉದೋಷ್ಠ್ಯ ಪೂರ್ವಸ್ಯ**' (ಪಾ. ಸೂ (೭-೧-೧೦೨) ಎಂಬುದರಿಂದ ಎರಡನೆ ಪೃ ಎಂಬುದರ ಋಕಾರಕ್ಕೆ ಉತ್ವ ಬರುವುದಿಲ್ಲ. '**ಕ್ಙಿತಿಚ**' (ಪಾ. ಸೂ. ೧-೧-೫) ಎಂದು ನಿಷೇಧ ಇರುವುದರಿಂದ ಗುಣಬರುವುದಿಲ್ಲ. ಇದು ಪಾದದ ಆದಿಯಲ್ಲಿರುವುದರಿಂದ '**ಅಪಾದಾದೌ**' ಎಂದು ನಿಷೇಧಬರುವುದರಿಂದ '**ತಿಙ್ಙತಿಙಃ**' ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಏವಂಚ ಪ್ರತ್ಯಯ ಸ್ವರದಿಂದ ತಾಮ್ ಉದಾತ್ತ.

**ಭರೀಮಭಿಃ**—'**ಡುಭೃಞ್ ಧಾರಣಪೋಷಣಯೋಃ**' ಧಾತು '**ಹು ಸ್ತೃಭೃಧೃ ಸ್ವಸೃಭ್ಯ ಈಮನ್**' (ದಶ. ಪಾ. ೬) ಹು ದಾನಾದನಯೋಃ, ಸ್ತೃಞ್ ಆಚ್ಛಾದನೇ, ಡುಭೃಞ್ ಧಾರಣಪೋಷಣಯೋಃ, ಧೃಞ್ ಅವಸ್ಥಾನೇ, ಸ್ವೃ ಶಬ್ದೋಪತಾಪಯೋಃ, ಸೃ ಗತೌ, ಈಧಾತುಗಳ ಮುಂದೆ ಈಮನ್ ಪ್ರತ್ಯಯ ಬರುವುದು ಎಂಬುದರಿಂದ ಈಮನ್ ಬಂದರೆ ಭೃ+ಈಮನ್ ಗುಣ, ಪ್ರತ್ಯಯವು ನಿತ್ ಆದ್ದರಿಂದ ನಿತ್ಸ್ವರದಿಂದ ಭರೀಮಭಿಃ ಎಂಬುದು ಆದ್ಯುದಾತ್ತ ॥ ೧೩ ॥

॥ ಸಂಹಿತಾಪಾಠಃ ॥

ತಯೋರಿದ್ಘೃತವತ್ಪಯೋ ವಿಪ್ರಾ ರಿಹಂತಿ ಧೀತಿಭಿಃ ।
ಗಂಧರ್ವಸ್ಯ ಧ್ರುವೇ ಪದೇ ॥ ೧೪ ॥

॥ ಪದಪಾಠಃ ॥

ತಯೋಃ । ಇತ್ । ಘೃತಽವತ್ । ಪಯಃ । ವಿಪ್ರಾಃ । ರಿಹಂತಿ । ಧೀತಿಽಭಿಃ ॥
ಗಂಧರ್ವಸ್ಯ । ಧ್ರುವೇ । ಪದೇ ॥ ೧೪ ॥

॥ ಸಾಯಣಭಾಷ್ಯಂ ॥

ಗಂಧರ್ವಸ್ಯ ಧ್ರುವಂ ಪದಮಂತರಿಕ್ಷಂ । ತಥಾ ಚ ತಾಪನೀಯಶಾಖಾಯಾಂ ಸಮಾಮ್ನಾಯತೇ । ಯಕ್ಷಗಂಧರ್ವಾಪ್ಸರೋಗಣಸೇವಿತಮಂತರಿಕ್ಷಂ । ನೃ. ತಾ. ೧-೨ । ಇತಿ । ತೇನಾಂತರಿಕ್ಷೇಣೋಪಲಕ್ಷಿತ ಆಕಾಶೇ ವರ್ತಮಾನಯೋಸ್ತಯೋರಿದ್ಯಾವಾಪೃಥಿವ್ಯೋರೇವ ಸಂಬಂಧಿ ಪಯೋ ಜಲಂ ಘೃತವದ್ಘೃತಸದೃಶಂ ವಿಪ್ರಾ ಮೇಧಾವಿನಃ ಪ್ರಾಣಿನೋ ಧೀತಿಭಿಃ ಕರ್ಮಭೀ ರಿಹಂತಿ । ಲಿಹಂತಿ । ಯದ್ವಾ । ಘೃತವದ್ಘೃತಂ ಸಾರಂ ತೇನೋಪೇತಂ ರಿಹಂತಿ । ಲಿಹೇರ್ವ್ಯತ್ಯಯೇನ ರೇಫಃ । ಗಂಧರ್ವಸ್ಯ । ಧೃಞ್ ಧಾರಣೇ । ಗವಿ ಗನ್ ಧೃಞೋ ವ ಇತಿ ವಪ್ರತ್ಯಯಃ । ತತ್ಸಂನ್ನಿಯೋಗೇನ ಗೋಶಬ್ದಸ್ಯ ಚ ಗನ್ನಾದೇಶಃ ॥

॥ ಪ್ರತಿಪದಾರ್ಥ ॥

**ಗಂಧರ್ವಸ್ಯ**—ಗಂಧರ್ವರ । **ಧ್ರುವೇ**—ಶಾಶ್ವತವಾದ । **ಪದೇ**—ಸ್ಥಾನವಾದ ಅಂತರಿಕ್ಷ (ಆಕಾಶ) ದಲ್ಲಿ (ಇರುವ) । **ತಯೋರಿತ್**—ಅವೆರಡಕ್ಕೇ (ದ್ಯು ಮತ್ತು ಪೃಥಿವೀ) ಸಂಬಂಧಿಸಿದ । **ಪಯಃ**—ಜಲವನ್ನು । **ಘೃತವತ್**—ಘೃತದಂತೆ । **ವಿಪ್ರಾಃ**—ಜ್ಞಾನಿಗಳು । **ಧೀತಿಭಿಃ**—ಒಳ್ಳೆಯ ಕರ್ಮಗಳಿಂದ । **ರಿಹಂತಿ**—ರುಚಿನೋಡುತ್ತಾರೆ.

॥ ಭಾವಾರ್ಥ ॥

ಆಕಾಶಸ್ಥವಾದ ದ್ಯುಲೋಕ ಮತ್ತು ಭೂಲೋಕ ಸಂಬಂಧವಾದ ಜಲವನ್ನೇ ಜ್ಞಾನಿಗಳು ಸತ್ಕರ್ಮಗಳ ಫಲವಾಗಿ ಘೃತದಂತೆ ರುಚಿನೋಡುತ್ತಾರೆ.

## English Translation.

The wise men sitting in the eternal home of the Gandharvas taste, through their pious acts the essence of all good things of both heaven and earth as the ghee is the essence of milk.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು, ಕೆಲವು ಪದಗಳನ್ನು ಅಧ್ಯಾಹಾರಮಾಡಿಕೊಂಡಲ್ಲಿ ಸರಿಯಾಗಿ ಹೊಂದುವುದು—ಹಾಲಿನಲ್ಲಿ ಸಾರಭೂತವಾದುದು ಘೃತವು. ಅದರಂತೆ ಸ್ವರ್ಗಭೂಮಿಗಳಲ್ಲಿ ಸಾರಭೂತವಾದ ಅನೇಕ ವಸ್ತುಗಳಿರುವವು.

ಬುದ್ಧಿವಂತರಾದ ಜನರು ಯಜ್ಞಾನುಷ್ಠಾನಾದಿಗಳಿಂದ ಉತ್ತಮಸ್ಥಾನವಾದ ಗಂಧರ್ವರ ಶಾಶ್ವತವಾದ ಲೋಕವನ್ನು (ಅಂತರಿಕ್ಷಲೋಕ) ಪಡೆದು ಅಲ್ಲಿ ಸ್ವರ್ಗಭೂಮಿಗಳ ಅತ್ಯುತ್ತಮಸಾರವಸ್ತುಗಳನ್ನು ಅನುಭವಿಸುವರು ಎಂದು ಮುಖ್ಯಾಭಿಪ್ರಾಯವು.

**ಘೃತವತ್ ಪಯಃ**—ಹಾಲಿನಲ್ಲಿ ಸಾರಭೂತವಾದ ತುಪ್ಪದಂತೆ ಅಥವಾ ಪಯಃ ಎಂದರೆ ಉದಕವೆಂದೂ ಅರ್ಥವಾಗುವುದರಿಂದ ಸಾರಭೂತವಾದ ಸೋಮರಸಾದಿಗಳು ಎಂದು ಹೇಳಬಹುದು.

**ಧೀತಿಭಿಃ—ಕರ್ಮಭಿಃ ।** ಯಜ್ಞಾದಿಸತ್ಕರ್ಮಾನುಷ್ಠಾನಗಳಿಂದ.

**ಗಂಧರ್ವಸ್ಯ ಧ್ರುವೇ ಪದೇ**—ಗಂಧರ್ವರ ಮುಖ್ಯಸ್ಥಾನವು ಅಂತರಿಕ್ಷವು ಎಂದು ಭಾಷ್ಯಕಾರರು ತಾಪನೀಯಶಾಖೆಯ **ಯಕ್ಷಗಂಧರ್ವಾಪ್ಸರೋಗಣಸೇವಿತಮಂತರಿಕ್ಷಂ** (ನೃ. ತಾ. ೧-೨) ಎಂಬ ವಾಕ್ಯವನ್ನು ಉದಹರಿಸಿರುವರು. ಅಥವಾ ಗಂಧರ್ವಜನಸೇವಿತವಾದ ಉತ್ತಮವಾದ ಸ್ಥಾನದಲ್ಲಿ (ಲೋಕದಲ್ಲಿ) ಎಂದು ಬೇಕಾದರೂ ಹೇಳಬಹುದು. ಯಜ್ಞಾದಿ ಸತ್ಕರ್ಮಾಚರಣೆಯಿಂದ ಉತ್ತಮಸ್ಥಾನವಾದ ಗಂಧರ್ವಲೋಕಾದಿಗಳನ್ನು ಪಡೆದು ಅಲ್ಲಿ ಸ್ವರ್ಗ ಮತ್ತು ಭೂಲೋಕಗಳ ಸಾರಭೂತವಾದ ಅತ್ಯುತ್ತಮವಸ್ತುಗಳನ್ನು ಅನುಭವಿಸುವರೆಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ರಿಹನ್ತಿ**—ಲಿಹ ಆಸ್ವಾದನೇ-ಲಕಾರಕ್ಕೆ ವ್ಯತ್ಯಯದಿಂದ ರೇಫ ಲಟ್. ಪ್ರಥಮಪುರುಷ ಬಹುವಚನ ಝಿ, **'ಝೋನ್ತಃ'** (ಪಾ. ಸೂ. ೭-೧-೩) ಎಂಬುದರಿಂದ ಝ್‌ಗೆ ಅನ್ತ್ ಆದೇಶ. **'ಅದಿಪ್ರಭೃತಿಭ್ಯಃ ಶಪಃ'** (ಪಾ. ಸೂ. ೨-೪-೭೨) ಎಂಬುದರಿಂದ ಶಪ್‌ಗೆ ಲುಕ್ ರಿಹನ್ತಿ ಎಂದಾಗುವುದು.

**ಗನ್ಧರ್ವಸ್ಯ**—'ಗವಿ ಗನ್ ಧೃ ಇತೋಽಪಃ, ಗೋ ಶಬ್ದವು ಉಪಪದವಾಗಿರುವಾಗ ಧೃಞ್ ಧಾರಣೇ ಧಾತು ವಿನ ಮುಂದೆ ವ ಪ್ರತ್ಯಯವೂ. ಗೋ ಶಬ್ದಕ್ಕೆ **'ಗನ್'** ಆದೇಶವೂ ಬರುವುದು ಎಂಬುದರಿಂದ ವ ಪ್ರತ್ಯಯವೂ, ಅದರ ಜತೆಯಲ್ಲಿ ವಿಹಿತವಾದ ಗನ್ ಆದೇಶವೂ ಬಂದರೆ ಗನ್+ಧೃ+ವ. ಗುಣವು ರ ಪರವಾಗಿ ಬರತ್ತದೆ. ಗನ್ಧರ್ವ, ಎಂದಾಗುವುದು. ಗವಿಗನ್-ಇತ್ಯಾದಿಯಾದ ಸೂತ್ರವು ಉಣಾದಿಯಲ್ಲಿ ಇರುವುದಿಲ್ಲ.

॥ ಸಂಹಿತಾಪಾಠಃ ॥

ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ ।

ಯಚ್ಛಾ ನಃ ಶರ್ಮ ಸಪ್ರಥಃ ॥ ೧೫ ॥

॥ ಪದಪಾಠಃ ॥

ಸ್ಯೋನಾ । ಪೃಥಿವಿ । ಭವ । ಅನೃಕ್ಷರಾ । ನಿऽವೇಶನೀ ॥
ಯಚ್ಛ । ನಃ । ಶರ್ಮ । ಸऽಪ್ರಥಃ ॥ ೧೫ ॥

॥ ಸಾಯಣಭಾಷ್ಯಂ ॥

ಸ್ಯೋನಾ ಪೃಥಿವೀತ್ಯೇಷಾ ಮಹಾನಾಮ್ನೀವ್ರತೇ ಭೂಮಿಸ್ಪರ್ಶನೇ ವಿನಿಯುಕ್ತಾ । ಏತದ್ವಿದಂ ಬ್ರಹ್ಮಚಾರಿಣಮಿತಿ ಖಂಡೇ ಸೂತ್ರಿತಂ । ಸ್ಯೋನಾ ಪೃಥಿವಿ ಭವೇತಿ ಸಮಾಪ್ಯ । ಆ. ೮-೧೪ ॥ ಇತಿ ॥ ಸ್ಮಾರ್ತೇ ಹೇಮಂತಪ್ರತ್ಯವರೋಹಣೇऽಪ್ಯೇಷಾ ಜಪ್ಯಾ । ಮಾರ್ಗಶೀರ್ಷ್ಯಾಂ ಪ್ರತ್ಯವರೋಹಣಮಿತಿ ಖಂಡೇ ಸೂತ್ರಿತಂ । ತಸ್ಮಿನ್ನುಪವಿಶ್ಯ ಸ್ಯೋನಾ ಪೃಥಿವಿ ಭವೇತಿ ಜಪಿತ್ವಾ । ಆ. ಗೃ. ೨-೩-೬ । ಇತಿ ॥

ಹೇ ಪೃಥಿವಿ ಸ್ಯೋನತ್ವಾದಿಗುಣಯುಕ್ತಾ ಭವ । ಸ್ಯೋನಶಬ್ದೋ ವಿಸ್ತೀರ್ಣವಾಚೀ । ತಥಾ ಚ ವಾಜಸನೇಯಬ್ರಾಹ್ಮಣೇ ಸ್ಯೋನಶಬ್ದೋಪೇತಂ ಕಂಚಿನ್ಮಂತ್ರಮುದಾಹೃತ್ಯ ವ್ಯಾಖ್ಯಾತಂ । ಇಂದ್ರಸ್ಯೋರುಮಾವಿಶ ಸ್ಯೋನಃ ಸ್ಯೋನಮಿತಿ ವಿಸ್ತೀರ್ಣೋ ವಿಸ್ತೀರ್ಣಮಿತ್ಯೇವ ತದಾಹೇತಿ । ಯದ್ವಾ । ಸ್ಯೋನಶಬ್ದಃ ಸುಖವಾಚೀ । ತಥಾ ಚ ಯಾಸ್ಕವಾಕ್ಯಮುದಾಹರಿಷ್ಯತೇ । ಅನೃಕ್ಷರಾ ಕಂಟಕರಹಿತಾ ನಿವೇಶನೀ ನಿವಾಸಸ್ಥಾನಭೂತಾ ಸಪ್ರಥೋ ವಿಸ್ತಾರಯುಕ್ತಂ ಶರ್ಮ ಶರಣಂ ನೋऽಸ್ಮಭ್ಯಂ ಯಚ್ಛ । ಹೇ ಪೃಥಿವಿ ದೇಹಿ । ತಾಮೇತಾಮೃಚಮುದಾಹೃತ್ಯ ಯಾಸ್ಕ ಏವಂ ವ್ಯಾಚಷ್ಟೇ । ಸುಖಾ ನಃ ಪೃಥಿವಿ ಭವಾನೃಕ್ಷರಾ ನಿವೇಶನ್ಯೃಕ್ಷರಃ ಕಂಟಕ ಋಚ್ಛತೇಃ ಕಂಟಕಃ ಕಂತಪೋ ವಾ ಕೃಂತತೇರ್ವಾ ಕಂಟತೇರ್ವಾ ಸ್ಯಾದ್ಗತಿಕರ್ಮಣ ಉದ್ಗತತಮೋ ಭವತಿ ಯಚ್ಛ ನಃ ಶರ್ಮ ಶರಣಂ ಸರ್ವತಃ ಪೃಥು । ನಿ. ೯-೩೨ । ಇತಿ ॥ ಸ್ಯೋನಾ । ಷಿವು ತಂತುಸಂತಾನೇ । ಸಿವೇಷ್ಟೇರ್ಯೋ ಚ । ಉ. ೩-೯ । ಇತಿ ನಪ್ರತ್ಯಯಃ । ಟೇಶ್ಚ ಯೋ ಇತ್ಯಾದೇಶಃ । ಪ್ರತ್ಯಯಸ್ವರಃ । ಸ್ಯೋನಾ ಪೃಥಿವೀತ್ಯನಯೋರ್ಭವೇತ್ಯಾಖ್ಯಾತೇನೈವಾನ್ವಯೋ ನ ಪರಸ್ಪರಂ । ಅತೋऽಸಾಮರ್ಥ್ಯೇನೈವ ಪರಾಂಗವದ್ಭಾವಾಭಾವಾದೋಕಾರಸ್ಯ ನಾಮಂತ್ರಿತಾದ್ಯುದಾತ್ತತ್ವಂ । ಅನೃಕ್ಷರಾ । ಋಷೀ ಗತೌ । ಗಚ್ಛತ್ಯಂತರಿತ್ಯೃಕ್ಷರಃ ಕಂಟಕಃ । ತನ್ಯೃಷಿಭ್ಯಾಂ ಕ್ಸರನ್ । ಉ. ೩-೭೫ । ಷಢೋಃ ಕಃ ಸಿ ಇತಿ ಕತ್ವಂ । ಆದೇಶಪ್ರತ್ಯಯಯೋರಿತಿ ಷತ್ವಂ । ನಞಾ ಬಹುವ್ರೀಹಿಃ । ತಸ್ಮಾನ್ನುಡಚಿ । ಪಾ. ೬-೩-೭೪ । ಇತಿ ನುಡಾಗಮಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ನಿವಿಶಂತ್ಯಸ್ಯಾಮಿತಿ ನಿವೇಶನೀ । ಕರಣಾಧಿಕರಣಯೋಶ್ಚೇತಿ ಲ್ಯುಟ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಯಚ್ಛ । ದಾಣ್ ದಾನೇ । ಪಾಘ್ರೇತ್ಯಾದಿನಾ ಯಚ್ಛಾದೇಶಃ । ದ್ವ್ಯಚೋऽತಸ್ತಿಙ ಇತಿ ದೀರ್ಘಃ । ಸಪ್ರಥಃ । ಪ್ರಥ ಪ್ರಖ್ಯಾನೇ । ಅಸುನ್ । ಪ್ರಥಸಾ ಸಹ ವರ್ತತ ಇತಿ ತೇನ ಸಹೇತಿ ತುಲ್ಯಯೋಗೇ । ಪಾ. ೨-೨-೨೮ । ಇತಿ ಸಮಾಸಃ । ವೋಪಸರ್ಜನಸ್ಯ । ಪಾ. ೬-೩-೮೨ । ಇತಿ ಸಭಾವಃ । ಕೃತ್ಸ್ವರಃ ॥ ೬ ॥

॥ ಪ್ರತಿಪದಾರ್ಥ ॥

**ಪೃಥಿವಿ**—ಎಲೈ ಪೃಥಿವಿಯೇ (ನೀನು) । **ಸ್ಯೋನಾ**—ವಿಸ್ತಾರವಾಗಿ ಅಥವಾ ಸುಖಕರಳಾಗಿ । **ಭವ**—ಆಗು । **ನಃ**—ನಮಗೆ । **ಅನೃಕ್ಷರಾ**—ಕಂಟರಹಿತಳಾಗಿ । **ನಿವೇಶನೀ**—ವಾಸಸ್ಥಾನವಾಗಿ । **ಸಪ್ರಥಃ**—ವಿಸ್ತಾರವಾದ । **ಶರ್ಮ**—ಆಶ್ರಯುವನ್ನು । **ಯಚ್ಛ**—ಕೊಡು.

॥ ಭಾವಾರ್ಥ ॥

ಎಲೈ ಪೃಥ್ವೀದೇವತೆಯೇ, ನೀನು ಸರ್ವದಾ ವಿಸ್ತಾರವಾಗಿಯೂ, ಕಂಟಕರಹಿತವಾಗಿಯೂ ಇರುವ ವಾಸಸ್ಥಾನಳಾಗಿದ್ದು, ನಮಗೆ ವಿಸ್ತಾರವಾದ ಆಶ್ರಯುವನ್ನು ಕೊಡು.

## English Translation.

O Earth, give us extensive abode free from thorns; give us great happiness.

॥ ವಿಶೇಷವಿಷಯಗಳು ॥

ಈ ಋಕ್ಕಿನ ವಿನಿಯೋಗವು ಶ್ರೌತಸ್ಮಾರ್ತಪ್ರಯೋಗಗಳೆರಡರಲ್ಲಿಯೂ ಇರುವುದು. ಮಹಾನಾಮ್ನೀ ಎಂಬ ವ್ರತ (ಯಾಗ) ದಲ್ಲಿ, ಭೂಮಿಸ್ಪರ್ಶನ ಕಾಲದಲ್ಲಿ ಇದನ್ನು ಪಠಿಸುವರು. ಈ ವಿಷಯುವು ಆಶ್ವಲಾಯನಶ್ರೌತಸೂತ್ರದ **ಏತದ್ವಿದಂ ಬ್ರಹ್ಮಚಾರಿಣಂ** ಎಂಬ ಖಂಡದಲ್ಲಿ **ಸ್ಯೋನಾ ಪೃಥಿವಿ ಭವೇತಿ ಸಮಾಪ್ಯ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ. ೮-೧೪).

ಸ್ಮಾರ್ತಪ್ರಯೋಗದಲ್ಲಿಯೂ ಕೂಡ ಹೇಮಂತಪ್ರತ್ಯವರೋಹಣವೆಂಬ ಕರ್ಮದಲ್ಲಿ ಈ ಮಂತ್ರವನ್ನು ಜಪಿಸಬೇಕು. ಈ ವಿಷಯುವು ಆಶ್ವಲಾಯನಗೃಹ್ಯಸೂತ್ರದ **ಮಾರ್ಗಶೀರ್ಷ್ಯಾಂ ಪ್ರತ್ಯವರೋಹಣಂ** ಎಂಬ ಖಂಡದಲ್ಲಿ **ತಸ್ಮಿನ್ನುಪವಿಶ್ಯ ಸ್ಯೋನಾ ಪೃಥಿವಿ ಭವೇತಿ ಜಪಿತ್ವಾ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ. ಗೃ. ೨-೩-೬).

**ಸ್ಯೋನಾ**—ಈ ಶಬ್ದವು ವಿಸ್ತಾರವಾದ ಅಥವಾ ಸುಖಕರವಾದ ಎಂಬ ಎರಡು ವಿಧವಾದ ಅರ್ಥಗಳನ್ನು ಸೂಚಿಸುವುದೆಂದು ಭಾಷ್ಯಕಾರರು ಹೇಳಿ ವಿಸ್ತಾರ ಎಂಬ ಅರ್ಥವನ್ನು ಪ್ರತಿಪಾದಿಸುವ **ಇಂದ್ರಸ್ಯೋರುಮಾವಿಶ ಸ್ಯೋನಃ ಸ್ಯೋನಮಿತಿ ವಿಸ್ತೀರ್ಣೋ ವಿಸ್ತೀರ್ಣಮಿತ್ಯೇವ ತದಾಹ** ಎಂಬ ವಾಜಸನೇಯ ಬ್ರಾಹ್ಮಣವಾಕ್ಯವನ್ನು ಉದಾಹರಿಸಿರುವರು.

ಈ ಋಕ್ಕಿಗೆ ಯಾಸ್ಕರು ಕೊಟ್ಟಿರುವ ವಿವರಣೆಯನ್ನು ಉದಾಹರಿಸಿರುವರು—

> **ಸುಖಾ ನಃ ಪೃಥಿವಿ ಭವಾನೃಕ್ಷರಾ ನಿವೇಶನ್ಯೃಕ್ಷರಃ ಕಂಟಕ ಋಚ್ಛತೇಃ ಕಂಟಕಃ ಕಂತಪೋ ವಾ ಕೃಂತತೇರ್ವಾ ಕಂಟತೇರ್ವಾ ಸ್ಯಾದ್ಗತಿಕರ್ಮಣ ಉದ್ಗತತಮೋ ಭವತಿ ಯಚ್ಛ ನಃ ಶರ್ಮ ಶರಣಂ ಸರ್ವತಃ ಪೃಥು.** (ನಿ. ೯-೩೨).

ಈ ನಿರ್ವಚನಪ್ರಕಾರ **ಸ್ಯೋನಾ**-ಸುಖಾ, **ಅನೃಕ್ಷರಾ**-ನಿಷ್ಕಂಟಕಾ, **ನಿವೇಶನೀ**-ನಿವಾಸಯೋಗ್ಯಾ, **ಶರ್ಮ**-ಸುಖಂ, **ಸಪ್ರಥಃ**-ಸರ್ವತಃ ಪೃಥು. ಎಂದರೆ ಸುಖಕರವಾಗಿಯೂ, ನಿಷ್ಕಂಟಕವಾಗಿಯೂ (ಬಾಧೆರಹಿತವಾಗಿಯೂ) ವಾಸಮಾಡುವುದಕ್ಕೆ ಯೋಗ್ಯವಾಗಿಯೂ ಇರುವ ವಾಸಸ್ಥಾನವನ್ನೂ ಸುಖವನ್ನೂ ಕೊಡು ಎಂದು ಭೂಮಿ ಪ್ರಾರ್ಥನೆಯು.

**ಅನೃಕ್ಷರಾ**—ಅಕ್ಷರವೆಂದರೆ–ಋಚ್ಛತೇಃ-ಗತಿಕರ್ಮಣಃ ಕೃಂತತೇರ್ವಾ । ಹೋಗುವುದು, ಅಡ್ಡಿಪಡಿಸುವುದು, ತೊಂದರೆಮಾಡುವುದು ಇತ್ಯಾದ್ಯರ್ಥವನ್ನು ಬೋಧಿಸುವ ಋಚ್ಛತಿಧಾತುವಿನಿಂದ ನಿಷ್ಪನ್ನವಾದ ಕಂಟಕವು, ಬಾಧೆಯು ಎಂದರ್ಥವು. ಅನೃಕ್ಷರವೆಂದರೆ ಅಂತಹ ಬಾಧೆಗಳಿಲ್ಲದ, ಕಂಟಕರಹಿತವಾದ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸ್ಯೋನಾ**—'ಷಿವು ತನ್ತುಸನ್ತಾನೇ' ಧಾತು '**ಸಿವೇಷ್ಟೇರ್ಯೋಚ**' (ಉ. ಸೂ. ೩–೨೪, '**ಧಾಪೃವಸ್ಯಜ್ಯತಿಭ್ಯೋನಃ**" (ಉ. ಸೂ. ೩–೨೮) ಎಂಬುದರಿಂದ ನಃ, ಪದವು ಅನುವೃತ್ತವಾಗುತ್ತೆ. ಷಿವ್ ಧಾತುವಿನ ಮುಂದೆ ನ ಪ್ರತ್ಯಯವೂ, ಧಾತುವಿನ ಟಿ ಆದ ಇವ್ ಗೆ ಯೋ ಆದೇಶವೂ ಬರುವುದು ಎಂದು ಸೂತ್ರಾರ್ಥ. '**ಅನೇಕಾಲ್ಶಿತ್ಸರ್ವಸ್ಯ**' ಎಂಬುದರಿಂದ ಯೋ ಆದೇಶ. ಇವ್ ಎಂಬ ಸಂಪೂರ್ಣಕ್ಕೂ ಬರುವುದು ವ್‌ಗೆ ಮಾತ್ರ ಬರುವುದಿಲ್ಲ. '**ಧಾತ್ವಾದೇಃ ಷಃ ಸಃ**' (ಪಾ. ಸೂ. ೬–೧–೬೪) ಎಂಬುದರಿಂದ ಷಕಾರಕ್ಕೆ ಸಕಾರ ಸ್ಯೋ+ನ, ಪ್ರತ್ಯಯು ಸ್ವರ ಬರುತ್ತೆ. ಅದಂತಲಕ್ಷಣಟಾಪ್ ಸ್ಯೋನಾ ಎಂದಾಗುತ್ತೆ ಎಂದು ವೇದಭಾಷ್ಯದ ವರ್ಣನೆ. ಈಗ ಮುದ್ರಿಸಿರುವ ಉಣಾದಿ ಸೂತ್ರಗಳಲ್ಲಿ '**ಸಿವೇಷ್ಟೇರ್ಯೂ ಚ**' (ಉ. ಸೂ. ೩–೨೪) ಎಂದು ಪಾಠವಿದೆ. ಈ ಪಕ್ಷದಲ್ಲಿ ಟಿಯಾದ ಇವ್‌ಗೆ ಯೂ ಆದೇಶ ಬರುತ್ತದೆ. ಸ್ಯೂ+ನ, ಈಗ ಯದ್ಯಪಿ '**ಸಾರ್ವಧಾತುಕಾರ್ಧಧಾತುಕಯೋಃ**' (ಪಾ. ಸೂ. ೭–೩–೮೪) ಎಂಬುದರಿಂದ ಗುಣವು ಊಕಾರಕ್ಕೆ ಓಕಾರವು ಪ್ರಾಪ್ತವಾಗುತ್ತೆ. ಆದರೂ ಯು, ಎಂದು ಹ್ರಸ್ವಾದೇಶವನ್ನು ಮಾಡಿ ಗುಣ ಬಂದರೂ, ಯೂ ಎಂದು ದೀರ್ಘ ಆದೇಶವನ್ನು ಮಾಡಿ ಗುಣ ಬಂದರೂ ಸ್ಯೋ ಎಂದೇ ಆಗಬೇಕು, ಯಾವ ವೈಲಕ್ಷಣ್ಯವೂ ಇರುವುದಿಲ್ಲ. ಮಾತ್ರಾಲಾಘವ ಬರುವುದರಿಂದ ಯು ಎಂದೇ ಆಹೇಶವನ್ನು ವಿಧಿಸಬಹುದಾಗಿತ್ತು. ಹೀಗಿದ್ದರೂ, ದೀರ್ಘಾದೇಶವನ್ನು ವಿಧಾನ ಮಾಡಿರುವ ಸಾಮರ್ಥ್ಯದಿಂದ ಗುಣ ಬರುವುದಿಲ್ಲ. ಸ್ಯೂನಃ ಎಂದೇ ರೂಪವು ಈ ಸೂತ್ರದ ಪ್ರಕಾರ ಸಿದ್ಧವಾಗುವುದು. ಸ್ಯೂನಃ ಎಂದರೆ ಆದಿತ್ಯ ಎಂದು ಅರ್ಥ. '**ಉಣಾದಯೋ ಬಹುಲಂ**' (ಪಾ. ಸೂ. ೩–೩–೧) ಎಂಬಲ್ಲಿ ಬಹುಲ ಗ್ರಹಣವಿರುವುದರಿಂದ ಷಿವ್ ಧಾತುವಿನ ಮುಂದೆ ನ ಪ್ರತ್ಯಯ ಮಾತ್ರ ಬಂದರೆ ಸಿವ್+ನ ಎಂದಿರುವಾಗ '**ಚ್ಛ್ವೋಃ ಶೂಡನುನಾಸಿಕೇಚ**' (ಪಾ. ಸೂ. ೬–೪–೧೯) ಅನುನಾಸಿಕ, ಅಥವಾ ಕ್ವಿಪ್ ಪ್ರತ್ಯಯ, ಅಥವಾ ಕಿತ್ತು ವಾ ಙಿತ್ತು ಆದ ಝಲಾದಿ ಪ್ರತ್ಯಯ ಇವು ಪರದಲ್ಲಿರುವಾಗ ತುಗಾಗಮದಿಂದ ಕೂಡಿದ ಛಕಾರಕ್ಕೆ ಶಕಾರವೂ, ವಕಾರಕ್ಕೆ ಊಠ್ ಎಂಬುದೂ ಆದೇಶವಾಗಿ ಬರುವುದು ಎಂಬುದರಿಂದ, ವ್‌ಗೆ ಊಠ್ ಆದೇಶ ಸಿ+ಊ+ನ, ಯಣಾದೇಶ ಗುಣಗಳೆರಡೂ ಪ್ರಾಪ್ತವಾದರೆ ಅಂತರ್ಭೂತನಿಮಿತ್ತಕವಾದ್ದರಿಂದ ಯಣಾದೇಶವು ಅಂತರಂಗವಾದಕಾರಣ '**ಅಸಿದ್ಧಂ ಬಹಿರಂಗಮನ್ತರಂಗೇ**' (ಪರಿಭಾ. ೫೧) ಎಂಬುದರಿಂದ ಮೊದಲು ಯಣಾದೇಶ, ನಂತರ ಗುಣ ಟಾಪ್ ಸ್ಯೋನಾ ಎಂದಾಗುತ್ತೆ. ಈಪರಿಯಾದ ವರ್ಣನೆಯು '**ಚ್ಛ್ವೋಃ ಶೂಡ್**' ಎಂಬ ಸೂತ್ರದಲ್ಲಿ ವೃತ್ತಿಯಲ್ಲಿಯೂ '**ಯೇನ ವಿಧಿಸ್ತದನ್ತಸ್ಯ**' (ಪಾ. ಸ. ೧–೧–೭೨) ಎಂಬಲ್ಲಿ ಕೈಯಟದಲ್ಲಿಯೂ

ವ್ಯಕ್ತವಾಗಿದೆ. **'ಸ್ಯೋನಃ ಕಿರಣಸೂರ್ಯಯೋಃ'** ಎಂಬ ಮೇದಿನೀಕೋಶಾನುಸಾರ, ಕಿರಣ ಅಥವಾ ಸೂರ್ಯ ಎಂದು ಸ್ಯೋನಶಬ್ದಕ್ಕೆ ಅರ್ಥವು ಏರ್ಪಡುವುದು. ಆದರೂ ಇಲ್ಲಿ ಬ್ರಾಹ್ಮಣಾನುಸಾರ ವಿಸ್ತೀರ್ಣ ಎಂದೂ, (೩-೬-೧೫) ನೇ ನಿರುಕ್ತಾನುಸಾರ ಸುಖ ಎಂದೂ ಅರ್ಥವು ವರ್ಣಿತವಾಗಿದೆ. ಪೃಥಿವಿ, ಎಂಬುದಕ್ಕೆ **'ಸಾಽಽಮನ್ತ್ರಿತಮ್'** (ಪಾ. ಸೂ. ೨-೩-೪೮) ಸಂಬೋಧನ ಪ್ರಥಮಾ ವಿಭಕ್ತಿ ಏಕವಚನವು ಆಮನ್ತ್ರಿತ ಸಂಜ್ಞೆಯನ್ನು ಹೊಂದುವುದು ಎಂಬುದರಿಂದ ಆಮನ್ತ್ರಿತ ಸಂಜ್ಞೆ ಇದೆ. **'ಸುಬಾಮನ್ತ್ರಿತೇ ಪರಾಂಗವತ್ಸ್ವರೇ'** (ಪಾ. ಸೂ. ೨-೧-೨) ಎಂಬುದರಿಂದ ಸ್ಯೋನಾ ಎಂಬ ಸುಬಂತವು ಪೃಥಿವಿ ಎಂಬ ಪದದಲ್ಲಿರುವ ಪದದ ಅಂಗವಾದಂತೆ ಆಗಲಿ. ಏವಂಚ **'ಆಮನ್ತ್ರಿತಸ್ಯ ಚ'** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತ ಬಂದು ಸ್ಯೋ ಎಂಬಲ್ಲಿಯ ಓಕಾರ ಆದ್ಯುದಾತ್ತವಾಗಲಿ ಎನ್ನಬಹುದು. ಆದರೆ ಪರಸ್ಪರಾನ್ವಯರೂಪವಾದ ಸಾಮರ್ಥ್ಯವಿರುವಾಗಲೇ **'ಸುಬಾಮನ್ತ್ರಿತೇ'** ಎಂಬುದು ಪ್ರವೃತ್ತವಾಗುವುದು. ಸುಬಾಮನ್ತ್ರಿತೇ ಎಂಬುದು ಪದವಿಧಿಯಾದ್ದರಿಂದ ಇದು **'ಸಮರ್ಥಃ ಪದವಿಧಿಃ"** (ಪಾ. ಸೂ. ೨-೧-೧) ಎಂಬ ಪರಿಭಾಷೆಯುಪ್ರಕಾರ ಸಾಮರ್ಥ್ಯವಿರುವಾಗಲೇ ಬರುವುದೆಂದು ಏರ್ಪಡುವುದು. ಪ್ರಕೃತದಲ್ಲಿ ಸುಖೇನ ಪೃಥಿವಿ, ಎಂಬ ಎರಡು ಪದಗಳೂ ಭವ ಎಂಬ ಕ್ರಿಯಾಪದದಲ್ಲಿ ಅನ್ವಯಿಸುವುವು. ಅವೆರಡಕ್ಕೂ ಪರಸ್ಪರಾನ್ವಯವು ಇರುವುದಿಲ್ಲ. ಆದ್ದರಿಂದ ಸಾಮರ್ಥ್ಯವಿಲ್ಲದಕಾರಣ ಪರಾಂಗವದ್ಭಾವ ಬರುವುದಿಲ್ಲ. ಏವಂಚ ಷಾಷ್ಠಸೂತ್ರದಿಂದ ಆಮನ್ತ್ರಿತಾದ್ಯುದಾತ್ತ ಬರುವುದಿಲ್ಲವಾದ್ದರಿಂದ ಓಕಾರವು ಆದ್ಯುದಾತವಾಗುವುದಿಲ್ಲ.

**ಅನೃಕ್ಷರಾ**—ಋಷೀ ಗತೌ, ಧಾತು, ಋಷತಿ-ಅಂತರ್ಗಚ್ಛತಿ-(ಒಳಕ್ಕೆ ಹೋಗುತ್ತದೆ) ಎಂದು ವಿಗ್ರಹ, **'ಋಕ್ಷರ'** ಎಂದಾಗುತ್ತೆ. ಅದಕ್ಕೆ ಕಣ್ಟಕ ಅಂದರೆ ಮುಳ್ಳು ಎಂದು ಅರ್ಥ **'ತನ್ಯೃಷಿಭ್ಯಾಂಕ್ಸರನ್'** (ಉ ಸೂ. ೩-೩೫೫) ತನುವಿಸ್ತಾರೇ ಋಕ್ಷೀ ಗತೌ, ಈ ಧಾತುಗಳ ಮುಂದೆ ಕ್ಸರನ್ ಪ್ರತ್ಯಯ ಬರುವುದು ಎಂಬುದರಿಂದ ಋಷೀ ಧಾತುವಿನ ಮುಂದೆ ಕ್ಸರನ್ ಪ್ರತ್ಯಯ. ಕ್ ಗೆ ಇತ್ಸಂಜ್ಞೆಲೋಪಗಳು, ಋಷ್+ಸರ ಎಂದಿರುವುದು. ಈಗ **'ಷಢೋಃಕಃಸಿ'** (ಪಾ. ಸೂ. ೮-೨-೪೧) ಸಕಾರ ಪರದಲ್ಲಿರುವಾಗ ಷಕಾರಢಕಾರಗಳಿಗೆ ಕಕಾರಾದೇಶ ಬರುವುದು ಎಂಬುದರಿಂದ ಷ್‌ಗೆ ಕ್ ಆದೇಶ-ಋಕ್+ಸರ **'ಆದೇಶಪ್ರತ್ಯಯಯೋಃ'** (ಪಾ. ಸೂ. ೮-೩-೫೯) ಎ ಇಣ್ ಕವರ್ಗಗಳ ಮುಂದಿರುವ ಆದೇಶರೂಪವಾದ ಸಕಾರ ಅಥವಾ ಪ್ರತ್ಯಯಾವಯವವಾದ ಸಕಾರಕ್ಕೆ ಷಕಾರ ಬರುವುದು ಎಂಬುದರಿಂದ ಸಕಾರಕ್ಕೆ ಷಕಾರ ಋಕ್ಷರ ಎಂದಾಗುತ್ತೆ, ನ ವಿದ್ಯಮಾನಃ ಋಕ್ಷರಃ ಯಸ್ಯಾಂ। ಸಾ ಎಂದು **'ನಞೋಽಸ್ತ್ಯರ್ಥಾನಾಂ ವಾಚ್ಯೋ ವಾಚೋತ್ತರಪದಲೋಪಃ'** ಎಂಬುದರಿಂದ ನಞ್‌ಸಮಾಸ, ಉತ್ತರ ಪದವಾದ ವಿದ್ಯಮಾನಶಬ್ದಕ್ಕೆ ಲೋಪ, **'ನಲೋಪೋನಞಃ'** (ಪಾ. ಸೂ. ೬-೩-೭೩) ಎಂಬುದರಿಂದ ನಞ್‌ನ ನ್‌ಗೆ ಲೋಪ-**'ತಸ್ಮಾನ್ನುಡಚಿ'** (ಪಾ. ಸೂ. ೬-೩-೭೪) ನಕಾರಲೋಪವನ್ನು ಹೊಂದಿರುವ ನಞ್‌ನ ಮುಂದೆ ಇರುವ ಅಜಾದಿಯಾದ ಉತ್ತರಪದಕ್ಕೆ ನುಡಾಗಮ ಬರುವುದು ಎಂಬುದರಿಂದ ನುಡಾಗಮ ಅನೃಕ್ಷರ **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **'ನಞ್‌ಸುಭ್ಯಾಂ'** (ಪಾ. ಸೂ. ೬-೨-೧೭೨) ಬಹುವ್ರೀಹಿಸಮಾಸದಲ್ಲಿ ನಞ್, ಸು, ಗಳ ಮುಂದೆ ಇರುವ ಉತ್ತರಪದವು ಅಂತೋದಾತ್ತವಾಗುವುದು ಎಂಬುದರಿಂದ ಉತ್ತರಪದವು ಅಂತೋದಾತ್ತ.

**ನಿವೇಶನೀ**—ನಿವಿಶನ್ತಿ ಅಸ್ಯಾಂ ಇತಿ ನಿವೇಶನೀ-ನಿ ಉಪಸರ್ಗಪೂರ್ವಕವಾದ ವಿಶಪ್ರವೇಶನೇ ಎಂಬ ಧಾತುವಿನ ಮುಂದೆ '**ಕರಣಾಧಿಕರಣಯೋಶ್ಚ**' (ಪಾ. ಸೂ. ೩-೩-೧೧೭) ಕರಣಾರ್ಥದಲ್ಲಿಯೂ ಅಧಿಕರಣಾರ್ಥ ದಲ್ಲಿಯೂ ಧಾತುಗಳ ಮುಂದೆ ಲ್ಯುಟ್ ಬರುವುದು ಎಂಬುದರಿಂದ ಲ್ಯುಟ್ ಪ್ರತ್ಯಯ '**ಯುವೋರನಾಕೌ**' (ಪಾ. ಸೂ. ೭-೧-೧) ಎಂಬುದರಿಂದ ಯುಗೆ ಅನ ಆದೇಶ ನಿವಿಶ್+ಅನ, ಲಘೂಪಧಗುಣ '**ಲಿತಿ**' (ಪಾ. ಸೂ. ೬-೧-೯೩) ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ಏಕಾರವು ಉದಾತ್ತ, ಪ್ರತ್ಯಯವು ಟಿತ್, ಆದ್ದರಿಂದ '**ಟಿಡ್ಢಾಣಞ್-**' (ಪಾ. ಸೂ. ೪-೧-೧೫) ಇತ್ಯಾದಿ ಸೂತ್ರದಿಂದ ಙೀಪ್-ನಿವೇಶನೀ ಎಂದಾಗುವುದು.

**ಯಚ್ಛ**—ದಾಣ್ ದಾನೇ ಧಾತು '**ಪಾಘ್ರಾಧ್ಮಾಸ್ಥಾ ದಾಣ್ದೃಶ್ಯರ್ತಿಸರ್ತಿಶದ ಸದಾಂ ಪಿಬಜಿಘ್ರ ಧಮ ತಿಷ್ಠ ಮನ ಯಚ್ಛ ಪಶ್ಯರ್ಚ್ಛಧೌ ಶೀಯಸೀದಾಃ**' (ಪಾ. ಸೂ. ೭-೩-೭೮) ಪಾ ಪಾನೇ-ಘ್ರಾ ಗಂಧೋಪಾದಾನೇ, ಧ್ಮಾ ಶಬ್ದಾಗ್ನಿಸಂಯೋಗೇ, ಷ್ಠಾ ಗತಿನಿವೃತ್ತೌ, ಮ್ನಾ ಅಭ್ಯಾಸೇ, ದಾಣ್ ದಾನೇ, ದೃಶಿರ್ ಪ್ರೇಕ್ಷಣೇ, ಋ ಗತಿಕ್ಷೇಪಣಯೋಃ, ಸೃ ಗತೌ, ಸರ್ತೇ'**ರ್ವೇಗಿತಾಯಾಂ ಗತೌ ಧಾವಾದೇಶಃ**' ಎಂಬ ವಾರ್ತಿಕದ ಪ್ರಕಾರ ವೇಗರೂಪವಾದ ಗತಿಯನ್ನು ಬೋಧಿಸುವ ಸೃಧಾತುವು ಇಲ್ಲಿ ವಿವಕ್ಷಿತವು. ಶದ್ಲೃ ಶಾತನೇ, ಷದ್ಲೃ ವಿಶರಣಗತ್ಯವಸಾದನೇಷು ಇವುಗಳಿಗೆ ಇತ್ಸಂಜ್ಞಕ ಶಕಾರಾದಿ ಪ್ರತ್ಯಯಪರದಲ್ಲಿರುವಾಗ ಕ್ರಮವಾಗಿ ಪಿಬ, ಜಿಘ್ರ, ಧಮ, ತಿಷ್ಠ, ಮನ, ಯಚ್ಛ, ಪಶ್ಯ, ಋಚ್ಛ, ಧೌ, ಶೀಯ, ಸೀದ, ಎಂಬ ಆದೇಶಗಳು ಬರುವುವು ಎಂಬುದರಿಂದ ದಾಣ್ ಧಾತುವಿನ ಮುಂದೆ ಲೋಟ್+ಸಿಪ್ ಶಪ್ ಬಂದನಂತರ ಯಚ್ಛ ಆದೇಶ, ಯಚ್ಛ+ಸಿ. '**ಸೇರ್ಹ್ಯಪಿಚ್ಚ**' (ಪಾ. ಸೂ. ೩-೪-೮೭) ಎಂಬುದರಿಂದ ಸಿಗೆ. ಹಿ ಆದೇಶ '**ಅತೋ ಹೇಃ**' (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್ ಯಚ್ಛ ಎಂದಾಗುತ್ತೆ. ಈಗ '**ದ್ವ್ಯಚೋಽತಸ್ತಿಙಃ**' (ಪಾ. ಸೂ. ೬-೩-೧೩೫) ಮಂತ್ರದಲ್ಲಿ ಸಂಹಿತಾಕಾಲದಲ್ಲಿ ಎರಡು ಸ್ವರಗಳನ್ನು ಹೊಂದಿರುವ ತಿಙಂತದ ಕೊನೆಯಲ್ಲಿ ರುವ ಹ್ರಸ್ವಾಕಾರಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘ, ಯಚ್ಛಾ. ಎಂದಾಗುತ್ತೆ.

**ಸಪ್ರಥಃ**—'**ಪ್ರಥ ಪ್ರಖ್ಯಾನೇ**' ಧಾತು. '**ಸರ್ವಧಾತುಭ್ಯೋಽಸುನ್**' (ಉ. ಸೂ. ೪-೬-೨೮) ಎಂಬುದರಿಂದ ಅಸುನ್ ಪ್ರತ್ಯಯ. ಪ್ರಥಃ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. '**ತೇನಸಹೇತಿತುಲ್ಯಯೋಗೇ**' (ಪಾ. ಸೂ. ೨-೨-೨೮) ತೇನ ಎಂಬುದು ತೃತೀಯಾಂತವನ್ನು ಬೋಧಿಸುವುದು. ಗಮನಾದಿರೂಪವಾದ ಒಂದೇ ಕ್ರಿಯೆಯಲ್ಲಿ ಸಂಬನ್ಧಿಸುವುದಕ್ಕೆ ತುಲ್ಯಯೋಗ ಎನ್ನುವರು. ಏವಂಚ ತುಲ್ಯಯೋಗದ್ಯೋತಕವಾದ ಸಹ ಎಂಬ ಅವ್ಯಯವು ತೃತೀಯಾಂತ ಸುಬಂತದೊಂದಿಗೆ ಸಮಾಸವನ್ನು ಹೊಂದುವುದು. ಅದು ಬಹುವ್ರೀಹಿಯಾಗುವುದು ಎಂಬುದರಿಂದ ಪ್ರಥಸಾ ಸಹ ವರ್ತತೇ ಎಂದು ಬಹುವ್ರೀಹಿ ಸಮಾಸ. ಪ್ರಥಃ ಎಂದರೆ ವಿಸ್ತಾರ ಎಂದು ಅರ್ಥ. ಶರ್ಮ ಎಂದರೆ ಮನೆ, ವರ್ತತೇ ಎಂಬ ಒಂದೇ ಕ್ರಿಯೆಯಲ್ಲಿ ಶರ್ಮ, ಪ್ರಥಃ ಎಂಬ ಎರಡೂ ಅನ್ವಯಿಸುವುದು ಎಂಬುದು ಸಹ ಎಂಬುದರಿಂದ ದ್ಯೋತಿತವಾಗುತ್ತೆ. ಆದ್ದರಿಂದ ಪ್ರಥಸಾ ಎಂಬ ತೃತೀಯಾಂತ ಪದದೊಂದಿಗೆ ಸಹ ಶಬ್ದಕ್ಕೆ ಸಮಾಸ, '**ವೋಪಸರ್ಜನಸ್ಯ**' (ಪಾ. ಸೂ. ೬-೩-೮೨) '**ಅಲುಗುತ್ತರಪದೇ**' (ಪಾ. ಸೂ. ೬-೩-೧) ಎಂಬುದ ರಿಂದ ಉತ್ತರಪದೇ ಎಂದು ಅಧಿಕೃತವಾಗುತ್ತೆ. '**ಸಹಸ್ಯಸಃ ಸಂಜ್ಞಾಯಾಮ್**' (ಪಾ. ಸೂ ೬-೩-೯೫) ಎಂಬುದ ರಿಂದ ಸಹಸ್ಯ, ಸಃ ಎಂಬ ಪದಗಳು ಅನುವೃತ್ತಗಳಾಗುವುವು. ಉಪಸರ್ಜನಂ ಅಸ್ಯ ಅಸ್ತೀತ್ಯುಪಸರ್ಜನಂ, ಎಂದು

ಅರ್ಶಆದ್ಯಜಂತ ಉತ್ತರಪದ ಎಂಬ ಶಬ್ದ ಸಮಾಸ ಚರಮಾವಯವದಲ್ಲಿ ರೂಢ. ಆದ್ದರಿಂದ '**ಯಂ ವಿನಾ ಯನ್ನೋಪಪದ್ಯತೇ ತತ್ತೇನೈವಾಕ್ಷಿಪ್ಯತೇ**' ಎಂಬ ನ್ಯಾಯದಿಂದ ಸಮಾಸವು ಆಕ್ಷಿಪ್ತವಾಗುವುದು. ಉಪಸರ್ಜನಸ್ಯ ಎಂಬ ಷಷ್ಠ್ಯಂತಕ್ಕೆ ಸಮಾಸಸ್ಯ ಎಂಬಲ್ಲಿ ಉಪಸರ್ಜನವತ್ತಾದ ಸಮಾಸದ ಎಂದಾಯಿತು. ಆದರೆ ಎಲ್ಲಾ ಸಮಾಸದಲ್ಲಿಯೂ ಯಾವುದಾದರೂ ಒಂದು ಅವಯವವು ಉಪಸರ್ಜನವಾಗಿಯೇ ಇರುವುದರಿಂದ ಉಪಸರ್ಜನಸ್ಯ ಎಂಬ ವಿಶೇಷಣ ಬಲದಿಂದ ಉಪಸರ್ಜನ ಸರ್ವಾವಯವಕವಾದ ಸಮಾಸದ ಎಂದು ಏರ್ಪಡುವುದು. ಏವಂಚ ಉಪಸರ್ಜನ ಸರ್ವಾವಯವಕವಾದ ಸಮಾಸದ (ಬಹುವ್ರೀಹಿಯ) ಉತ್ತರ ಪದದ ಹಿಂದೆ ಇರುವ ಸಹ ಎಂಬುದಕ್ಕೆ ಸ ಆದೇಶವು ವಿಕಲ್ಪವಾಗಿ ಬರುವುದು ಎಂದು ಸೂತ್ರಾರ್ಥವು ಸಿದ್ಧವಾಯಿತು. ಇದರಿಂದ ಸಹ ಶಬ್ದಕ್ಕೆ ಸ ಆದೇಶ ಬಂದರೆ ಸಪ್ರಥಃ ಎಂದಾಗುತ್ತೆ. ಇದು ಬಹುವ್ರೀಹಿಯಾದ್ದರಿಂದಲೂ, '**ಗತಿಕಾರಕೋಪಪದಾತ್ಕೃತ್**' ಎಂಬ ಕೃತ್ಸ್ವರವು ತತ್ಪುರುಷಸಮಾಸದಲ್ಲಿ ಮಾತ್ರ ಪ್ರವರ್ತಿಸುವುದರಿಂದಲೂ ಅದು ಇಲ್ಲಿ ಬರುವುದಿಲ್ಲ. '**ಪರಾದಿಶ್ಛಂದಸಿ ಬಹುಲಂ**' (ಪಾ. ಸೂ. ೬-೨-೧೯೯) ಎಂಬಲ್ಲಿ ಬಹುಲಗ್ರಹಣದಿಂದ ಸಮಾಸಾನಂತರ ಉತ್ತರಪದದ ಆದಿಯು ಉದಾತ್ತ ‖೧೫‖

‖ ಸಂಹಿತಾಪಾಠಃ ‖

ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ ।
ಪೃಥಿವ್ಯಾಃ ಸಪ್ತ ಧಾಮಭಿಃ ‖ ೧೬ ‖

‖ ಪದಪಾಠಃ ‖

ಅತಃ । ದೇವಾಃ । ಅವಂತು । ನಃ । ಯತಃ । ವಿಷ್ಣುಃ । ವಿಽಚಕ್ರಮೇ ‖
ಪೃಥಿವ್ಯಾಃ । ಸಪ್ತ । ಧಾಮಽಭಿಃ ‖ ೧೬ ‖

‖ ಸಾಯಣಭಾಷ್ಯಂ ‖

**ಪ್ರಾತಃಸವನೇ ಸೋಮಾತಿರೇಕ ಏಕಂ ಶಸ್ತ್ರಂ ಶಂಸನೀಯಂ । ಅತ್ರಾತೋ ದೇವಾ ಇತ್ಯಾದ್ಯಾಃ ಷಡೃಚಃ । ಸೋಮಾತಿರೇಕ ಇತಿ ಖಂಡೇ ಸೂತ್ರಿತಂ । ಮಹಾँ ಇಂದ್ರೋ ಯ ಓಜಸಾತೋ ದೇವಾ ಅವಂತು ನ ಇತ್ಯೈಂದ್ರೀಭಿರ್ವೈಷ್ಣವೀಭಿಶ್ಚ । ಆ. ೬-೭ । ಇತಿ ‖ ಅಪ್ತೋರ್ಯಾಮೇಽಚ್ಛಾವಾಕಾತಿರಿಕ್ತೋಕ್ಥ್ಯೇಽಸ್ಯೈತಾಃ ಷಡೃಚಃ ಸ್ತೋತ್ರಿಯಾನುರೂಪಾರ್ಥಾಃ । ತಥಾ ಚ ಯಸ್ಯ ಪಶವ ಇತಿ ಖಂಡೇ ಸೂತ್ರಿತಂ । ಅತೋ ದೇವಾ ಅವಂತು ನ ಇತಿ ಸ್ತೋತ್ರಿಯಾನುರೂಪೌ । ಆ. ೯-೧೧ । ಇತಿ ‖ ದರ್ಶಪೂರ್ಣಮಾಸಯೋಃ ಪ್ರಾಯಶ್ಚಿತ್ತಹೋಮೇಽಪ್ಯಾದ್ಯೇ ವಿನಿಯುಕ್ತೇ । ತಥೈವ ವೇದಂ ಪತ್ನ್ಯೈ ಇತಿ**

ಖಂಡೇ ಸೂತ್ರಿತಂ । ಅತೋ ದೇವಾ ಅವಂತು ನ ಇತಿ ದ್ವಾಭ್ಯಾಂ ವ್ಯಾಹೃತಿಭಿಶ್ಚ । ಆ. ೧-೧೧ । ಇತಿ ॥ ಯೊಜ್ಯಾನುವಾಕ್ಯಯೋರ್ಮಧ್ಯೇ ಲೌಕಿಕಭಾಷಣೇಽತೋ ದೇವಾ ಇತ್ಯೇಷಾ ಜಪ್ಯಾ । ಸೂತ್ರಿತಂ ಹಿ । ಅಪದ್ಯತೋ ದೇವಾ ಅವಂತು ನ ಇತಿ ಜಪೇತ್ । ಆ. ೧-೫ । ಇತಿ ॥

ವಿಷ್ಣುಃ ಪರಮೇಶ್ವರಃ ಸಪ್ತಧಾಮಭಿಃ ಸಪ್ತಭಿರ್ಗಾಯತ್ರ್ಯಾದಿಭಿಶ್ಛಂದೋಭಿಃ ಸಾಧನಭೂತೈ-ರ್ಯತಃ ಪೃಥಿವ್ಯಾ ಯಸ್ಮಾದ್ಭೂಪ್ರದೇಶಾದ್ವಿಚಕ್ರಮೇ । ವಿವಿಧಂ ಪಾದಕ್ರಮಣಂ ಕೃತವಾನ್ ಅತೋಽಸ್ಮಾತ್ಪೃಥಿವೀಪ್ರದೇಶಾನ್ನೋಽಸ್ಮಾನ್ದೇವಾ ಅವಂತು । ವಿಷ್ಣೋಃ ಪೃಥಿವ್ಯಾದಿಲೋಕೇಷು ಛಂದೋಭಿಃ ಸಾಧನೈರ್ಜಯಂ ತೈತ್ತಿರೀಯಾ ಆಮನಂತಿ । ವಿಷ್ಣುಮುಖಾ ವೈ ದೇವಾಶ್ಛಂದೋಭಿರಮಾಂಲ್ಲೋಕಾನ-ನಪಜಯ್ಯಮಭ್ಯಜಯನ್ । ತೈ. ಸಂ. ೫-೨-೧-೧ । ಇತಿ । ವಿಷ್ಣೋಸ್ತ್ರಿವಿಕ್ರಮಾವತಾರೇ ಪಾದತ್ರಯ-ಕ್ರಮಣಸ್ಯ ಪೃಥಿವ್ಯಪಾದಾನಂ । ಪೃಥಿವೀಪ್ರದೇಶಾದ್ರಕ್ಷಣಂ ನಾಮ ಭೂಲೋಕೇ ವರ್ತಮಾನಾನಾಂ ಪಾಪನಿವಾರಣಂ ॥ ಅತಃ ಏತಚ್ಛಬ್ದಾತ್ಪಂಚಮ್ಯಾಸ್ತಸಿಲ್ । ಪಾ. ೫-೩-೭ । ಇತಿ ತಸಿಲ್ । ಏತ-ದೋಽಶ್ । ಪಾ. ೫-೩-೫ । ಇತ್ಯಶಾದೇಶಃ । ಲಿತ್ಸ್ವರೇಣಾಕಾರ ಉದಾತ್ತಃ । ಯತಃ । ತಸಿಲಃ ಪ್ರಾಗ್ದಿಶೋ ವಿಭಕ್ತಿಃ । ಪಾ. ೫-೩-೧ । ಇತಿ ವಿಭಕ್ತಿಸಂಜ್ಞಾಯಾಂ ತ್ಯದಾದ್ಯತ್ವಂ । ಲಿತ್ಸ್ವರಃ । ವಿಷ್ಣುಃ - ವಿಷೇಃ ಕಿಚ್ಚ । ಉ. ೩-೩೯ । ಇತಿ ನುಪ್ರತ್ಯಯಃ । ಕಿತ್ತ್ವಾನ್ನ ಗುಣಃ । ನಿದಿತ್ಯನುವೃತ್ತೇರಾದ್ಯುದಾ-ತ್ತತ್ವಂ । ವಿಚಕ್ರಮೇ । ಸುಬಿತಿ ಯೋಗವಿಭಾಗಾದ್ವಿಶಬ್ದಸ್ಯ ಸಮಾಸಃ । ಸಮಾಸಾಂತೋದಾತ್ತತ್ವಂ । ಯದ್ವೃತ್ತಯೋಗಾನ್ನ ನಿಘಾತಃ । ಸಪ್ತ । ಸುಪಾಂ ಸುಲುಗಿತಿ ಭಿಸೋ ಲುಕ್ । ಧಾಮಭಿಃ । ದಧಾತೇ-ರಾತೋ ಮನಿನ್ನಿತಿ ಮನಿನ್ । ನಿತ್ಸ್ವರಃ ॥

॥ ಪ್ರತಿಪದಾರ್ಥ ॥

**ಯತಃ**—ಯಾವ । **ಪೃಥಿವ್ಯಾಃ**—ಭೂಮಿಯಿಂದ । **ವಿಷ್ಣುಃ**—ವಿಷ್ಣುವು । **ಸಪ್ತಭಿಃ**—ಏಳು । **ಧಾಮಭಿಃ**—ಗಾಯತ್ರ್ಯಾದಿ ಛಂದಸ್ಸುಗಳಿಂದ ಸಹಿತನಾಗಿ । **ವಿಚಕ್ರಮೇ**—ಹೊರಟನೋ । **ಅತಃ**—ಆ ಭೂಮಿಯಿಂದ । **ದೇವಾಃ**—ದೇವತೆಗಳು । **ನಃ**—ನಮ್ಮನ್ನು । **ಅವಂತು**—ರಕ್ಷಿಸಲಿ.

ವಿಷ್ಣುವು ತ್ರಿವಿಕ್ರಮನಾಗಿ ಹೆಜ್ಜೆಗಳನ್ನಿಡುವಾಗ ಯಾವ ಭೂಪ್ರದೇಶದಿಂದ ಗಾಯತ್ರ್ಯಾದಿಛಂದೋಪೇತನಾಗಿ ಹೊರಟನೋ ಆ ಭೂಪ್ರದೇಶದಲ್ಲಿರುವ ನಮ್ಮನ್ನು ದೇವತೆಗಳು ರಕ್ಷಿಸಲಿ.

## English Translation.

May the gods protect us from that portion of the earth whence Vishnu put his steps aided by seven meters.

॥ ವಿಶೇಷವಿಷಯಗಳು ॥

ಈ ಮಂತ್ರದ ವಿನಿಯೋಗವು ನಾಲ್ಕು ವಿಧವಾಗಿರುವುದು. ಪ್ರಾತಸ್ಸವನವೆಂಬ ಪ್ರಾತಃಕಾಲದಲ್ಲಿ ನಡೆಯುವ ಸೋಮಾಭಿಷವೆಂಬ ಸೋಮರಸವನ್ನು ಹಿಂಡಿ ತೆಗೆಯುವ ಕರ್ಮದಲ್ಲಿ ಸೋಮಾತಿರೇಕವೆಂಬ ಮಂತ್ರಪಠನಕಾಲದಲ್ಲಿ

ಈ ಮಂತ್ರವನ್ನು ಶಸ್ತ್ರಮಂತ್ರವನ್ನಾಗಿ ಪಠಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಸೋಮಾತಿರೇಕ** ಎಂಬ ಖಂಡದಲ್ಲಿ **ಮಹಾँ ಇಂದ್ರೋ ಯ ಓಜಸಾ**—(ಋ. ಸಂ. ೮-೬-೧) **ಅತೋ ದೇವಾ ಅವಂತು ನ** (ಋ. ಸಂ. ೧-೨೨-೧೬) **ಇತ್ಯೈಂದ್ರಿಭಿರ್ವೈಷ್ಣವೀಭಿಶ್ಚ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ. ೬-೭).

ಅಪ್ತೋರ್ಯಾಮವೆಂಬ ಸೋಮಯಾಗದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಉಕ್ಥ್ಯಮಂತ್ರಪಠನದಲ್ಲಿಯೂ ಸಹ **ಅತೋ ದೇವಾ** ಎಂದು ಮೊದಲಾಗುವ ಆರು ಋಕ್ಕುಗಳನ್ನು ಸ್ತೋತ್ರಿಯಾಮಂತ್ರಗಳೆಂದು ಪಠಿಸಬೇಕು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಯಸ್ಯ ಪಶವ** ಎಂಬ ಖಂಡದ **ಅತೋ ದೇವಾ ಅವಂತು ನ ಇತಿ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ. ೯-೧೧).

ದರ್ಶಪೂರ್ಣಮಾಸಯಾಗಗಳಲ್ಲಿ ಪ್ರಾಯಶ್ಚಿತ್ತಹೋಮಕಾಲದಲ್ಲಿ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳನ್ನು ಉಪಯೋಗಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ವೇದಂ ಪತ್ನ್ಯೈ** ಎಂಬ ಖಂಡದ **ಅತೋ ದೇವಾ ಅವಂತು ನ ಇತಿ ದ್ವಾಭ್ಯಾಂ ವ್ಯಾಹೃತಿಭಿಶ್ಚ** ಎಂಬ ಸೂತ್ರದಲ್ಲಿ ಹೇಳಿರುವುದು. (ಆ. ೧-೧೧).

ಯಾಜ್ಯಾ ಮತ್ತು ಪುರೋನುವಾಕ್ಯಾಮಂತ್ರಗಳನ್ನು ಪಠಿಸುವ ಕಾಲದಲ್ಲಿ ಈ ಎರಡು ಮಂತ್ರಗಳ ಮಧ್ಯದಲ್ಲಿ ಕಾರಣಾಂತರದಿಂದ ಲೌಕಿಕಸಂಭಾಷಣೆ ಮಾಡಿದಲ್ಲಿ **ಅತೋ ದೇವಾ** ಎಂಬ ಈ ಋಕ್ಕನ್ನು ಪ್ರಾಯಶ್ಚಿತ್ತಮಂತ್ರವನ್ನಾಗಿ ಜಪಿಸಬೇಕು ಎಂದು ಆಶ್ವಲಾಯನಶ್ರೌತಸೂತ್ರದ **ಆಪದ್ಯತೋ ದೇವಾ ಅವಂತು ನ ಇತಿ ಜಪೇತ್** ಎಂಬ ಸೂತ್ರದಲ್ಲಿ ಹೇಳಿರುವುದು. (ಆ. ೧-೫).

ಈ ಋಕ್ಕಿನಲ್ಲಿ ವಿಷ್ಣುವಿನ ವಿಷಯವು ಪ್ರಥಮತಃ ಉಲ್ಲೇಖಿತವಾಗಿದೆ ವಿಷ್ಣುವಿನ ಪ್ರಾಶಸ್ತ್ಯವು ಪುರಾಣಗಳಲ್ಲಿಯೂ ಆಧುನಿಕವೇದಾಂತಗ್ರಂಥಗಳಲ್ಲಿಯೂ ವಿಶೇಷವಾಗಿದ್ದರೂ ಋಗ್ವೇದದಲ್ಲಿ ವಿಷ್ಣುಪರವಾದ ಸೂಕ್ತಗಳು ಕೇವಲ ಐದು ಮಾತ್ರ ಇವೆ. ಇದಲ್ಲದೆ ಅನೇಕಕಡೆ ಇತರ ದೇವತೆಗಳೊಡನೆ ಮುಖ್ಯವಾಗಿ ಇಂದ್ರನೊಡನೆ ವಿಷ್ಣುವಿನ ಹೆಸರು ಅಲ್ಲಲ್ಲಿ ಸೂಚಿತವಾಗಿದೆ. ವಿಷ್ಣುವಿನ ಮುಖ್ಯ ಪರಾಕ್ರಮವು ಮೂರು ಪದಗಳ ವಿನ್ಯಾಸವೆಂದು ಹೇಳಿದೆ. ಈ ಮೂರು ಪದಕ್ರಮಗಳು ಸ್ವರ್ಗ ಅಂತರಿಕ್ಷ ಭೂಮಿಗಳಲ್ಲಿ ಇರುವವು. ಇದಲ್ಲದೆ ವಿಷ್ಣುವಿನ ಪರಮಪದವೆಂಬ ಸ್ಥಾನವು ಅತಿಶ್ರೇಷ್ಠವಾದ ಪದವಿಯೆಂದು ಪರಿಗಣಿಸಲ್ಪಟ್ಟಿರುವುದು.

ಋಗ್ವೇದದಲ್ಲಿ ಇತರ ದೇವತೆಗಳಿಗಿಂತ ಇಂದ್ರನೊಡನೆ ವಿಷ್ಣುವಿನ ಸಂಬಂಧವು ವಿಶೇಷವಾಗಿರುವಂತೆ ಕಂಡುಬರುವುದು. ಇಂದ್ರನು ವೃತ್ರಾಸುರನನ್ನು ಸಂಹಾರಮಾಡುವ ಕಾಲದಲ್ಲಿ ವಿಷ್ಣುವಿನ ಸಹಾಯವನ್ನು ಅಪೇಕ್ಷಿಸುತ್ತಾನೆ ಯಜುರ್ವೇದದಲ್ಲಿ ವಿಷ್ಣುವಿನ ವಿಷಯವು ನಾನಾ ರೀತಿಯಲ್ಲಿ ವರ್ಣಿತವಾಗಿದೆ. ವಿಷ್ಣುವು ಯಜ್ಞಕ್ಕೂ ಮತ್ತು ಪರ್ವತಗಳಿಗೂ ಅಧಿಪತಿಯೆಂದೂ, ಯಜ್ಞಸ್ವರೂಪನೆಂದೂ, ದೇವತೆಗಳಿಗೆಲ್ಲಾ ಮುಂದಾಳೆಂದೂ (Leader) ವಿವರಿಸುವ ಅನೇಕ ಮಂತ್ರಗಳಿವೆ. ಭಾಷ್ಯಕಾರರು ಈ ಋಕ್ಕಿನಲ್ಲಿ ವಿಷ್ಣುಶಬ್ದಕ್ಕೆ ಪರಮೇಶ್ವರನೆಂದು ಅರ್ಥವಿವರಣೆ ಮಾಡಿರುವರು ಏಕೆಂದರೆ, ಯಾಸ್ಕರು ಹೇಳಿರುವಂತೆ—

**ವಿಷ್ಣುಃ ಅಥ ಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ, ವಿಷ್ಣುರ್ವಿಶತೇರ್ವಾ ವ್ಯಶ್ನೋತೇರ್ವಾ ।**
ಎಲ್ಲವನ್ನೂ ವ್ಯಾಪಿಸಿರುವುದರಿಂದ ಅಥವಾ ಎಲ್ಲವನ್ನೂ ಪ್ರವೇಶಿಸಿ ವ್ಯಾಪಿಸುವುದರಿಂದ ಅಥವಾ ರಶ್ಮಿಗಳಿಂದ ಸರ್ವವನ್ನೂ ವ್ಯಾಪಿಸಿರುವವನಾದ್ದರಿಂದ ವಿಷ್ಣುವೆಂದು ಹೆಸರು. ಆದುದರಿಂದ ವಿಷ್ಣುವೆಂದರೆ ಆದಿತ್ಯನೆಂದೂ ಹೇಳಬಹುದು ಎಂದು ವಿಷ್ಣುಶಬ್ದದ ವಿವರಣೆಮಾಡಿರುವರು. ವಿಷ್ಣುಶಬ್ದದ ವಿವರಣೆಯು ಮುಂದಿನ ಋಕ್ಕಿನಲ್ಲಿಯೂ ಇರುವುದು.

**ವಿಚಕ್ರಮೇ—ವಿವಿಧಂ ಪಾದಕ್ರಮಣಂ ಕೃತವಾನ್**—ನಾನಾ ವಿಧವಾಗಿ ಎಂದರೆ ಬಹುಪ್ರಕಾರವಾಗಿ ಪಾದಗಳಿಂದ ಪೃಥಿವ್ಯಾದಿಲೋಕಗಳ ಪ್ರದೇಶವನ್ನು ಆಕ್ರಮಣಮಾಡಿದನು.

**ಸಪ್ತ ಧಾಮಭಿಃ**—ಧಾಮವೆಂದರೆ ಸ್ಥಾನ. ಇಲ್ಲಿ ಭಾಷ್ಯಕಾರರು ಧಾಮಶಬ್ದಕ್ಕೆ ಛಂದಸ್ಸೆಂದು ಹೇಳಿರುವರು ಸಪ್ತ ಧಾಮಭಿಃ ಎಂದರೆ ಗಾಯತ್ರ್ಯಾದಿ ಸಪ್ತ ಛಂದಸ್ಸುಗಳು ಅಥವಾ ಆದಿತ್ಯಪರವಾಗಿ ಅರ್ಥಮಾಡುವುದಾದರೆ ಸಪ್ತ ರಶ್ಮಿಗಳು (ಅಥವಾ ಸಪ್ತಾಶ್ವಗಳು) ಎಂದು ಹೇಳಬಹುದು. ತೈತ್ತಿರೀಯ ಸಂಹಿತೆಯಲ್ಲಿ—

**ವಿಷ್ಣುಮುಖಾ ವೈ ದೇವಾಶ್ಛಂದೋಭಿರಿಮಾಂಲ್ಲೋಕಾನನಪಜಯ್ಯಮಭ್ಯಜಯನ್**

(ತೈ. ಸಂ. ೫-೨-೧-೧)

ದೇವತೆಗಳು ವಿಷ್ಣುವಿನ ಮುಂದಾಳುತ್ವದಲ್ಲಿ ಛಂದಸ್ಸುಗಳ ಸಹಾಯದಿಂದ ಲೋಕಗಳನ್ನು ಜಯಿಸಿದರು ಎಂದಿರುವುದು. ಪುರಾಣಾದಿಗಳಲ್ಲಿ ವಿಷ್ಣುವು ತ್ರಿವಿಕ್ರಮಾವತಾರಮಾಡಿ ದೈತ್ಯರು ದೇವತೆಗಳಿಂದ ಅಪಹರಿಸಿದ್ದ ಭೂಮ್ಯಂತರಿಕ್ಷಗಳನ್ನು ಮೂರು ಪಾದವಿಕ್ರಮಣದಿಂದ ಮತ್ತೆ ದೇವತೆಗಳಿಗೆ ಕೊಟ್ಟನೆಂದು ಉಪಾಖ್ಯಾನದ ವಿಸ್ತಾರವಾದ ವರ್ಣನೆಗಳಿವೆ. ಪುರಾಣಗಳಲ್ಲಿರುವ ಉಪಾಖ್ಯಾನಗಳಿಗೆ ವೇದದಲ್ಲಿ ಕಂಡುಬರುವ ಸೂಕ್ಷ್ಮವಿವರಣೆಯೇ ಮೂಲವೆಂಬುದನ್ನು ಗಮನಿಸಬೇಕು.

॥ ವ್ಯಾಕರಣಪ್ರಕ್ರಿಯ ॥

ಅತಃ– **‘ ಪಂಚಮ್ಯಾಸ್ತಸಿಲ್ ’** (ಪಾ. ಸೂ. ೫-೩-೭) ಕಿಮ್ ಶಬ್ದ, ದ್ವಿ ಮೊದಲಾದುವನ್ನುಳಿದ ಸರ್ವನಾಮ ಶಬ್ದ, ಬಹು ಶಬ್ದ ಇವು ಪಂಚಮ್ಯಂತಗಳಾಗಿದ್ದು ಇವುಗಳ ಮುಂದೆ ತಸಿಲ್ ಪ್ರತ್ಯಯವು ವಿಕಲ್ಪವಾಗಿ ಬರುವುದು ಎಂಬುದರಿಂದ ಪಂಚಮ್ಯಂತವಾದ ಏತದ್ ಶಬ್ದದ ಮುಂದೆ ತಸಿಲ್ ಪ್ರತ್ಯಯ ಏತದ್+ಙಸ್+ತಸ್, ಈಗ **‘ ಏತದೋऽನ್ ’** (ಪಾ. ಸೂ. ೫-೩-೫) ಈ ಸೂತ್ರವನ್ನು **‘ ಏತದಃ ’**, **‘ ಅನ್ ’** ಎಂದು ಎರಡು ಸೂತ್ರವಾಗಿ ಮಾಡುವರು. ಮೊದಲನೆಯದಾದ **‘ ಏತದಃ ’** ಎಂಬುದಕ್ಕೆ ರೇಫ ಥಕಾರಾದಿಯಾದಪ್ರಾಗ್ದಿಶೀಯ ಪ್ರತ್ಯಯಗಳು ಪರದಲ್ಲಿರುವಾಗ ಏತದ್ ಶಬ್ದಕ್ಕೆ **‘ ಏತ ’** **‘ ಇತ ’** ಎಂಬ ಆದೇಶಗಳು ಕ್ರಮವಾಗಿ ಬರುವುವು ಎಂದರ್ಥ. ಉದಾಹರಣೆ ಏತರ್ಹಿ, ಇತ್ಥಮ್, **‘ ಅನ್ ’** ಎಂಬುದು ಎರಡನೆಯ ಸೂತ್ರ. ಇಲ್ಲಿ **‘ ರಥೋಃ ’** ಎಂಬ ಪದವು ಪೂರ್ವ ಸೂತ್ರದಿಂದ ಅನುವೃತ್ತವಾಗುವುದಿಲ್ಲ. ಏವಂಚ ಪ್ರಾಗ್ದಿಶೀಯ ಪ್ರತ್ಯಯ ಪರದಲ್ಲಿರುವಾಗ ಏತದ್ ಶಬ್ದಕ್ಕೆ ಅನ್ ಆದೇಶಬರುವುದು ಎಂದು ಅರ್ಥವು. ಪ್ರಕೃತದಲ್ಲಿ ಎರಡನೆಯ ಸೂತ್ರದಿಂದ ಅನ್ ಆದೇಶ ಬಂದರೆ ಅದು ಅನೇಕಾಲ್ ಆದ್ದರಿಂದ **‘ ಅನೇಕಾಲ್ಶಿತ್ಸರ್ವಸ್ಯ ’** ಎಂಬುದರಿಂದ ಸಂಪೂರ್ಣಸ್ಥಾನದಲ್ಲಿ ಬರುತ್ತೆ. ಅನ್+ತ್ಸ್, ತದ್ಧಿತಾಂತ ಪ್ರಾತಿಪದಿಕಾವಯವವಾದ ಪಂಚಮೀ ವಿಭಕ್ತಿಗೆ **‘ ಸುಪೋ ಧಾತು ಪ್ರಾತಿಪದಿಕಯೋಃ ’** (ಪಾ ಸೂ ೨-೪-೭೧) ಎಂಬುದರಿಂದ ಲುಕ್ ಬಂದಿದ್ದರೂ, **‘ ಪ್ರತ್ಯಯಲೋಪೇ ಪ್ರತ್ಯಯ ಲಕ್ಷಣಂ ’** (ಪಾ. ಸೂ. ೧-೧-೬೨) ಎಂಬುದರಿಂದ ಪ್ರತ್ಯಯ ಲಕ್ಷಣ ಬರುವುದರಿಂದ ಪದ ಸಂಜ್ಞೆ ಬರುತ್ತೆ. ಪದಸಂಜ್ಞೆಯು ಅಂಗೋದ್ದೇಶ್ಯಕವಲ್ಲವಾದ್ದರಿಂದ **‘ ನಲುಮತಾಂಗಸ್ಯ ’** (ಪಾ. ಸೂ. ೧-೧-೬೩) ಎಂಬುದರಿಂದ ಪ್ರತ್ಯಯ ಲಕ್ಷಣಕ್ಕೆ ಪ್ರತಿಷೇಧ ಬರುವುದಿಲ್ಲ. ಏವಂಚ **‘ ನ ಲೋಪಃ ಪ್ರಾತಿಪದಿಕಾನ್ತಸ್ಯ ’** (ಪಾ. ಸೂ. ೮-೨-೭) ಎಂಬುದರಿಂದ ಅನ್ ನ ನಕಾರಕ್ಕೆ ಲೋಪ, ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಅತಃ ಎಂದಾಗುತ್ತೆ. ಮಹಾಭಾಷ್ಯದಲ್ಲಿ **‘ ಅನ್ ’** ನಕಾರಾಂತ ಪಾಠವು ವಿಚಾರಿತವಾಗಿದೆ. ಕೈಯಟಕಾರರು **‘ ಇಹ ಕೇಚಿದಶಂ ಪಠಂತಿ ಕೇಚಿದನಮ್ । ತತ್ರೋತ್ತರಪಾಠಾಪೇಕ್ಷಯಾ**

**ವಿಚಾರಃ**' ಎಂದು, ಏತದೋಽಶ್, ಏತದೋಽನ್, ಎಂದು ಎರಡು ವಿಧವಾಗಿ ಸೂತ್ರಪಾಠವಿರುವುದೆಂದು ಅಭಿಪ್ರಾಯ ಪಟ್ಟಿರುವರು. ವೃತ್ತಿಕಾರರು '**ಏತದೋಽಶ್**' ಎಂಬ ಪಾಠವನ್ನು ಆದರಿಸಿರುವರು. ಅವರ ಮತದಂತೆ ವೇದ ಭಾಷ್ಯದಲ್ಲಿಯೂ, '**ಏತದೋಽಶ್**' ಎಂಬ ಪಾಠನೇ ಸ್ವೀಕರಿಸಲಾಗಿದೆ. ಈ ಪಕ್ಷದಲ್ಲಿ ಮೊದಲಿನಂತೆಯೇ ಯೋಗ ವಿಭಾಗವನ್ನು ಮಾಡಿ ಅರ್ಥವನ್ನು ವರ್ಣಿಸಬೇಕು. ಅಶ್ ಎಂಬುದು ಶಿತ್ತಾದ್ದರಿಂದ ಸರ್ವಾದೇಶವಾಗಿ ಬರುವುದು. ಏವಂಚ ಅತಃ ಎಂದಾಗುವುದು. ಎಂದಿಷ್ಟು ಮಾತ್ರ ವಿಶೇಷವಿದೆ. ಪ್ರತ್ಯಯವು ಲಿತ್, ಆದ್ದರಿಂದ '**ಲಿತಿ**' (ಪಾ. ಸೂ. ೬-೧-೯೩) ಎಂಬುದರಿಂದ ಪ್ರತ್ಯಯದ ಹಿಂದಿನ ಅಕಾರವು ಉದಾತ್ತ.

**ಯತಃ**—ಯಸ್ಮಾತ್ ಯತಃ, ಪಂಚಮ್ಯಂತವಾದ ಯಚ್ಛಬ್ದದ ಮುಂದೆ '**ಪಂಚಮ್ಯಾಸ್ತಸಿಲ್**' ಎಂಬುದರಿಂದ ತಸಿಲ್, ಪಂಚಮಿಗೆ ಲುಕ್. ಈ ತಸಿಲ್‌ಗೆ '**ಪ್ರಾಗ್ದಿಶೋ ವಿಭಕ್ತಿಃ**' (ಪಾ. ಸೂ. ೫-೩-೧) ಈ ಸೂತ್ರ ಮೊದಲುಗೊಂಡು '**ದಿಕ್‌ಶಬ್ದೇಭ್ಯಃ ಸಪ್ತಮೀ ಪಂಚಮೀ ಪ್ರಥಮಾಭ್ಯೋ ದಿಗ್ದೇಶ ಕಾಲೇಷ್ವ ಸ್ತಾತಿಃ**' (ಪಾ. ಸೂ. ೫-೩-೨೭) ಎಂಬ ಸೂತ್ರಪರ್ಯನ್ತ ವಿಹಿತವಾದ ಪ್ರತ್ಯಯಗಳು ವಿಭಕ್ತಿ ಸಂಜ್ಞೆಯನ್ನು ಹೊಂದುವುವು ಎಂಬುದರಿಂದ ವಿಭಕ್ತಿ ಸಂಜ್ಞೆ ಇದೆ. ಆದ್ದರಿಂದ '**ತ್ಯದಾದೀನಾಮಃ**' (ಪಾ. ಸೂ. ೭-೨-೧೦೨) ವಿಭಕ್ತಿಪರದಲ್ಲಿರುವಾಗ ತ್ಯದಾದಿ ಗಣಕ್ಕೆ ಸೇರಿದ ಶಬ್ದಗಳ ಕೊನೆಯ ವರ್ಣಕ್ಕೆ ಅಕಾರಾದೇಶ ಬರುವುದು ಎಂಬುದರಿಂದ ಯದ್ ಶಬ್ದದ ದಕಾರಕ್ಕೆ ಅಕಾರಾದೇಶ '**ಅತೋಗುಣೇ**' (ಪಾ ಸೂ. ೬-೧-೯೭) ಎಂಬುದರಿಂದ ಪರರೂಪ. ಪೂರ್ವದಂತೆಯೇ ಲಿತ್ಸ್ವರವು ಬರುತ್ತೆ.

**ವಿಷ್ಣುಃ**—'**ವಿಷೇ ಕಿಚ್ಚ**' (ಉ. ಸೂ. ೩-೩೯) ವಿಷ್ಲೃ ವ್ಯಾಪ್ತೌ ಧಾತುವಿನ ಮುಂದೆ ಣು ಪ್ರತ್ಯಯ ಬರುವುದು. ಅದು ಕಿತ್ತೂ ನಿತ್ತೂ ಸಹ ಆಗುವುದು ಎಂದು ಸೂತ್ರಾರ್ಥ. '**ಸ್ಥೋಣುಃ**' (ಉ. ಸೂ ೩-೩೭) ಎಂಬುದರಿಂದ ಣುಃ ಎಂದು ಅನುವೃತ್ತವಾಗುವುದು '**ನುಃ**' ಎಂಬುದಕ್ಕೆ ಇಲ್ಲಿ ಪ್ರಸಕ್ತಿಯೇ ಇರುವುದಿಲ್ಲ. ವಿಷ್+ಣು ಪ್ರತ್ಯಯವು ಕಿತ್ತಾದ್ದರಿಂದ '**ಕ್ಙಿತಿಚ**' ಎಂದು ನಿಷೇಧ ಬರುವುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯವು ನಿತ್ತಾದ್ದರಿಂದ ವಿಷ್ಣು ಎಂಬುದು ನಿತ್ಸ್ವರದಿಂದ ಆದ್ಯುದಾತ್ತ.

**ವಿಚಕ್ರಮೇ**—'**ಸಹಸುಪಾ**' (ಪಾ. ಸೂ. ೨-೧-೪) ಇಲ್ಲಿ '**ಸಹ, ಸುಪಾ**' ಎಂದು ಸೂತ್ರವಿಭಾಗ ವನ್ನು ಮಾಡುವರು. '**ಸುಬಾಮನ್ತ್ರಿತೇ**' ಎಂಬುದರಿಂದ ಸುಪ್ ಎಂದು ಅನುವೃತ್ತವಾಗುತ್ತೆ. '**ಸಮರ್ಥಃ ಪದವಿಧಿಃ**' (ಪಾ. ಸೂ. ೩-೧-೧) ಎಂಬುದರಿಂದ ಸಮರ್ಥಃ ಎಂದು ಲಬ್ಧವಾಗುತ್ತೆ. ಅದನ್ನು ತೃತೀಯಾನ್ತವಾಗಿ ಮಾರ್ಪಡಿಸಿಕೊಳ್ಳಬೇಕು. ಏವಂಚ ಸುಬಂತವು ಸಮರ್ಥದೊಂದಿಗೆ ಸಮಾಸವನ್ನು ಹೊಂದುವುದು ಎಂದು ಪ್ರಥಮಸೂತ್ರಾರ್ಥ, ಇಷ್ಟಸಿದ್ಧ್ಯರ್ಥಂ ಯೋಗವಿಭಾಗಃ ನತ್ವನಿಷ್ಟಾಪಾದನಾರ್ಥಂ, ಎಂದು ಹೇಳಿರುವುದರಿಂದ ಈ ಸೂತ್ರದಿಂದ ಸುಬಂತಕ್ಕೆ ತಿಙಂತ ಉತ್ತರಪದದೊಂದಿಗೆ ಸಮಾಸವು ಬರುತ್ತೆ, ಆದರೆ ಈ ಸಮಾಸವು ವೇದದಲ್ಲಿಯೇ ಬರುವುದು, ಎಂದು ಏರ್ಪಡುವುದು. ಈ ಸೂತ್ರದಿಂದ ಪ್ರಕೃತ ವಿ ಸುಬಂತವು ಚಕ್ರಮೇ ಎಂಬ ತಿಙಂತದೊಂದಿಗೆ ಸಮಾಸವನ್ನು ಹೊಂದುತ್ತೆ, ಆದ್ದರಿಂದ '**ಸಮಾಸಸ್ಯ**' (ಪಾ. ಸೂ. ೬-೧-೨೨೩) ಎಂಬುದರಿಂದ ಇಲ್ಲಿ ಅಂತೋ ದಾತ್ತ ಸ್ವರ ಬರುವುದು. ಯತಃ ಎಂದು ಯದ್ವೃತ್ತಯೋಗವಿರುವುದರಿಂದ '**ಯದ್ವೃತ್ತಾನ್ನಿತ್ಯಮ್**' (ಪಾ. ಸೂ. ೮-೧-೬೬) ಯಾವ ಪದದಲ್ಲಿ ಯಚ್ಛಬ್ದವಿದೆಯೋ ಅದರ ಮುಂದೆ ಇರುವ ತಿಙಂತವು ಅನುದಾತ್ತವಾಗುವುದಿಲ್ಲ

ಎಂಬುದರಿಂದ ನಿಷೇಧ ಬರುವುದರಿಂದ **' ತಿಙ್ಙತಿಙಃ '** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. **' ಸುಪಾ '** ಎಂಬ ಎರಡನೆಯ ಸೂತ್ರಕ್ಕೆ ಸುಬಂತವು ಸಮರ್ಥವಾದ ಸುಬಂತದೊಂದಿಗೆ ಸಮಾಸವನ್ನು ಹೊಂದುವುದು ಎಂದು ಅರ್ಥವು. ಅದು ಪ್ರಕೃತ ಅನವಶ್ಯವು. **ಸಪ್ತ**-ಈ ಶಬ್ದದ ಮುಂದೆ ಬರುವ ತೃತೀಯಾ ಬಹುವಚನ ಭಿಸ್ ಪ್ರತ್ಯಯಕ್ಕೆ **' ಸುಪಾಂ ಸುಲುಕ್ '** (ಪಾ. ಸೂ. ೭-೧-೩೯) ಎಂಬುದರಿಂದ ಲುಕ್.

**ಧಾಮಭಿಃ**—(ಡು) ಧಾಞ್ ಧಾರಣ ಪೋಷಣಯೋಃ ಧಾತು. ಇದು ಆಕಾರಾಂತ, **' ಆತೋಮನಿನ್ ಕ್ವನಿಬ್ವನಿಪಶ್ಚ '** (ಪಾ. ಸೂ. ೩-೨-೭೪) ಸುಬಂತ ಉಪಸರ್ಗ ಇವು ಉಪಪದವಾಗಿರುವಾಗ ಆಕಾರಾಂತವಾದ ಧಾತುವಿನ ಮುಂದೆ ಮನಿನ್, ಕ್ವನಿಪ್, ವನಿಪ್, ಈ ಮೂರು ಪ್ರತ್ಯಯಗಳೂ ಚಕಾರದಿಂದ ವಿಚ್ ಪ್ರತ್ಯಯವೂ ಸಹ ಬರುವುವು ಎಂಬುದರಿಂದ ಮನಿನ್ ಪ್ರತ್ಯಯ ಬರುತ್ತದೆ. ಧಾ+ಮನ್—ಇದು ನಿತ್ಸ್ವರದಿಂದ ಆದ್ಯುದಾತ್ತ ತೃತೀಯಾ ಬಹುವಚನ ಭಿಸ್ ಪ್ರತ್ಯಯವನ್ನಿಟ್ಟಾಗ **'ನಲೋಪಃ ಪ್ರಾತಿಪದಿಕಾಂತಸ್ಯ'** ಎಂಬುದರಿಂದ ನಕಾರ ಲೋಪ, ಧಾಮಭಿಃ ಎಂದಾಗುತ್ತೆ. ॥ ೧೬ ॥

॥ ಸಂಹಿತಾಪಾಠಃ ॥

ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಂ ।
ಸಮೂಳ್ಹಮಸ್ಯ ಪಾಂಸುರೇ ॥ ೧೭ ॥

॥ ಪದಪಾಠಃ ॥

ಇದಂ । ವಿಷ್ಣುಃ । ವಿ । ಚಕ್ರಮೇ । ತ್ರೇಧಾ । ನಿ । ದಧೇ । ಪದಂ ॥
ಸಂಽಊಳ್ಹಂ । ಅಸ್ಯ । ಪಾಂಸುರೇ ॥ ೧೭ ॥

॥ ಸಾಯಣಭಾಷ್ಯಂ ॥

ವೈಷ್ಣವೋಪಾಂಶುಯಾಜಸ್ಯೇದಂ ವಿಷ್ಣುರಿತ್ಯೇಷಾನುವಾಕ್ಯಾ । ಉಕ್ತಾ ದೇವತಾ ಇತಿ ಖಂಡೇ ಸೂತ್ರಿತಂ । ಇದಂ ವಿಷ್ಣುರ್ವಿ ಚಕ್ರಮೇ ತ್ರಿರ್ದೇವಃ ಪೃಥಿವೀಮೇಷ ಏತಾಂ । ಆ. ೧-೬ । ಇತಿ ॥ ಗಾರ್ಹಪತ್ಯಾಹವನೀಯಯೋರ್ಮಧ್ಯೇ ಶ್ವಾತಿಕ್ರಮಣೇಽನಯೈವ ಶ್ವಪದೇಷು ಭಸ್ಮ ಪ್ರಕ್ಷಿಪೇತ್ । ವಿಧ್ಯಪರಾಧ ಇತಿ ಖಂಡೇ ಸೂತ್ರಿತಂ । ಭಸ್ಮನಾ ಶುನಃ ಪದಂ ಪ್ರತಿವಪೇದಿದಂ ವಿಷ್ಣುರ್ವಿ ಚಕ್ರಮೇ । ಆ. ೩-೧೦ । ಇತಿ ॥ ಆತಿಥ್ಯಾಯಾಂ ಪ್ರಧಾನಸ್ಯ ಹವಿಷ ಏಷೈವಾನುವಾಕ್ಯಾ । ಅಥಾತಿಥ್ಯೇಳಾಂತೇತಿ

ಖಂಡೇ ಸೂತ್ರಿತಂ । ಇದಂ ವಿಷ್ಣುರ್ವಿ ಚಕ್ರಮೇ ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ । ಆ. ೪-೫ । ಇತಿ ॥ ಉಪಸತ್ಸು ವೈಷ್ಣವಸ್ಯೈಷೈವಾನುವಾಕ್ಯಾ । ಅಥೋಪಸದಿತಿ ಖಂಡೇ ಸೂತ್ರಿತಂ । ಗಯಸ್ಫಾನೋ ಅಮೀವಹೇದಂ ವಿಷ್ಣುರ್ವಿ ಚಕ್ರಮೇ । ಆ. ೪-೮ ॥ ಇತಿ ॥

ವಿಷ್ಣುಸ್ತ್ರಿವಿಕ್ರಮಾವತಾರಧಾರೀದಂ ಪ್ರತೀಯಮಾನಂ ಸರ್ವಂ ಜಗದುದ್ದಿಶ್ಯ ವಿ ಚಕ್ರಮೇ । ವಿಶೇಷೇಣ ಕ್ರಮಣಂ ಕೃತವಾನ್ । ತದಾ ತ್ರೇಧಾ ತ್ರಿಭಿಃ ಪ್ರಕಾರೈಃ ಪದಂ ನಿ ದಧೇ । ಸ್ವಕೀಯಂ ಪಾದಂ ಪ್ರಕ್ಷಿಪ್ತವಾನ್ । ಅಸ್ಯ ವಿಷ್ಣೋಃ ಪಾಂಸುರೇ ಧೂಲಿಯುಕ್ತೇ ಪಾದಸ್ಥಾನೇ ಸಮೂಳ್ಹಮಿದಂ ಸರ್ವಂ ಜಗತ್ಸಮ್ಯಗಂತರ್ಭೂತಂ । ಸೇಯಮೃಗ್ಯಾಸ್ಕೇನೈವಂ ವ್ಯಾಖ್ಯಾತಾ । ವಿಷ್ಣುರ್ವಿಶತೇರ್ವಾ ವ್ಯಶ್ನೋತೇರ್ವಾ । ಯದಿದಂ ಕಿಂಚ ತದ್ವಿಕ್ರಮತೇ ವಿಷ್ಣುಸ್ತ್ರಿಧಾ ನಿಧತ್ತೇ ಪದಂ ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ ಸಮೂಳ್ಹಮಸ್ಯ ಪಾಂಸುರೇಽಪ್ಯಾಯನೇಽಂತರಿಕ್ಷೇ ಪದಂ ನ ದೃಶ್ಯತೇಽಪಿ ವೋಪಮಾರ್ಥೇ ಸ್ಯಾತ್ ಪಾಂಸುರ ಏವ ಪದಂ ನ ದೃಶ್ಯತ ಇತಿ ಪಾಂಸವಃ ಪಾದೈಃ ಸೂಯಂತ ಇತಿ ವಾ ಪನ್ನಾಃ ಶೇರತ ಇತಿ ವಾ ಪಂಸನೀಯಾ ಭವಂತೀತಿ ವಾ । ನಿ. ೧೨-೧೯ । ಇತಿ ॥ ತ್ರೇಧಾ ವಿಧಾಚ್ಚ । ಪಾ. ೫-೩-೪೬ । ಇತ್ಯೇಧಾಚ್‌ಪ್ರತ್ಯಯಃ । ಚಿತೋಽಂತೋದಾತ್ತಃ ! ಸಮೂಳ್ಹಂ । ವಹ ಪ್ರಾಪಣೇ । ನಿಷ್ಠೇತಿ ಕ್ತಃ । ವಚಿಸ್ವಪೀತ್ಯಾದಿನಾ । ಪಾ. ೬-೧-೧೫ । ಸಂಪ್ರಸಾರಣಂ । ಢತ್ವಧತ್ವಷ್ಟುತ್ವಢಲೋಪದೀರ್ಘತ್ವಾನಿ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಅಸ್ಯ । ಇದಮೋಽಶಾದೇಶ ಇತ್ಯಶನುದಾತ್ತಃ । ಪ್ರತ್ಯಯಶ್ಚ ಸುಪ್ಸ್ವರೇಣ । ಪಾಂಸುರೇ । ನಗಪಾಂಸುಪಾಂಡುಭ್ಯಶ್ಚೇತಿ ವಕ್ತವ್ಯಂ । ಕಾ. ೫-೨-೧೦೭-೨ । ಇತಿ ಮತ್ವರ್ಥೀಯೋ ರಃ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

**ವಿಷ್ಣುಃ** - (ವಿಕ್ರಮಾವತಾರಧಾರಿಯಾದ) ವಿಷ್ಣುವು । **ಇದಂ**—ಈ ಸಮಸ್ತ ಜಗತ್ತನ್ನು । **ವಿ ಚಕ್ರಮೇ**—ವಿಶೇಷವಾಗಿ ಆಕ್ರಮಣಮಾಡಿದನು (ಹೇಗೆಂದರೆ) । **ತ್ರೇಧಾ**—ಮೂರು ಪ್ರಕಾರವಾಗಿ । **ಪದಂ**—ಪಾದನಿಕ್ಷೇಪವನ್ನು । **ನಿ ದಧೇ**—ಇಟ್ಟನು । **ಅಸ್ಯ**—ಈ ವಿಷ್ಣುವಿನ । **ಪಾಂಸುರೇ**—ಧೂಳಿಯುಕ್ತವಾದ ಪಾದಸ್ಥಾನದಲ್ಲಿ । **ಸಮೂಳ್ಹಂ**—(ಈ ಸಮಸ್ತ ಜಗತ್ತೂ) ಅಂತರ್ಭೂತವಾಯಿತು (ಲೀನವಾಯಿತು).

॥ ಭಾವಾರ್ಥ ॥

ವಿಷ್ಣುವು (ತ್ರಿವಿಕ್ರಮಾವತಾರಮಾಡಿ) ಈ ಸಮಸ್ತ ಜಗತ್ತನ್ನೂ ಮೂರು ವಿಧವಾದ ಪಾದಪ್ರಕ್ಷೇಪಣದಿಂದ ಆಕ್ರಮಿಸಿದನು. ಆ ವಿಷ್ಣುವಿನ ಧೂಳಿಯುಕ್ತವಾದ ಪಾದಸ್ಥಾನದಲ್ಲಿ ಈ ಜಗತ್ತು ಮುಚ್ಚಿಹೋಗಿ ಕಾಣದಂತಾಯಿತು.

## English Translation.

Vishnu traversed this universe; three times he planted his foot and the whole universe was collected in the dust of his footsteps.

|| ವಿಶೇಷವಿಷಯಗಳು ||

ವಿಷ್ಣುಸಂಬಂಧವಾದ ಉಪಾಂಶುಯಾಗದಲ್ಲಿ **ಇದಂ ವಿಷ್ಣುರ್ವಿ ಚಕ್ರಮೇ** (ಋ. ಸಂ. ೧-೨೨-೧೭) ಮತ್ತು **ತ್ರಿರ್ದೇವಃ ಪೃಥಿವೀಮೇಷ ಏತಾಂ** (ಋ. ಸಂ. ೭-೧೦೦-೩) ಎಂಬ ಋಕ್ಕುಗಳು ಪುರೋನುವಾಕ್ಯಾ ಮತ್ತು ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಉಕ್ತಾ ದೇವತಾ** ಎಂಬ ಖಂಡದಲ್ಲಿ (ಆ. ೧-೬) ಹೇಳಿರುವುದರಿಂದ ಪ್ರಸಕ್ತವಾದ ಈ **ಇದಂ ವಿಷ್ಣುರ್ವಿಚಕ್ರಮೇ** ಎಂಬ ಋಕ್ಕು ಪುರೋನುವಾಕ್ಯಾ ಮಂತ್ರವಾಗಿರುವುದು. ಯಜ್ಞದಲ್ಲಿ ಪ್ರತಿಷ್ಠಿತವಾಗಿರುವ ಗಾರ್ಹಪತ್ಯ ಮತ್ತು ಆಹವನೀಯವೆಂಬ ಅಗ್ನಿಕುಂಡಗಳ ನಡುವೆ ನಾಯಿಯು ಪ್ರವೇಶಿಸಿದಲ್ಲಿ ಆ ದೋಷಪರಿಹಾರಕ್ಕಾಗಿ ನಾಯಿ ಕುಳಿತ ಸ್ಥಳದ ಮೇಲೆ **ಇದಂ ವಿಷ್ಣುರ್ವಿಚಕ್ರಮೇ** ಎಂಬ ಮಂತ್ರದಿಂದ ಭಸ್ಮವನ್ನು ಹಾಕಬೇಕು ಎಂದು **ವಿಧ್ಯಪರಾಧ** ಎಂಬ ಖಂಡದಲ್ಲಿ ಹೇಳಿರುವುದು (ಆ. ೩-೧೦). ಮತ್ತು **ಆತಿಥ್ಯ**ವೆಂಬ ಹೋಮದಲ್ಲಿ ಪ್ರಧಾನವಾದ ಅಥವಾ ಮುಖ್ಯವಾದ ಹವಿಸ್ಸನ್ನು ಹೋಮಮಾಡುವಾಗ ಈ **ಇದಂ ವಿಷ್ಣುರ್ವಿಚಕ್ರಮೇ** ಎಂಬ ಮಂತ್ರವೇ ಪುರೋನುವಾಕ್ಯಾಮಂತ್ರವಾಗಿರುವುದು. **ಅಥಾತಿಥ್ಯೇಳಾಂತೇತಿ** ಎಂಬ ಖಂಡದಲ್ಲಿ ಇದಂ ವಿಷ್ಣುರ್ವಿಚಕ್ರಮೇ (ಋ. ಸಂ. ೧-೨೨-೧೭) ಮತ್ತು **ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ** (ಋ. ಸಂ. ೧-೧೫೪-೫) ಎಂಬ ಋಕ್ಕುಗಳನ್ನು ಪುರೋನುವಾಕ್ಯಾ ಮತ್ತು ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ (ಆ. ೪-೫) ಹೇಳಿರುವುದು. ಆತಿಥ್ಯವೆಂದರೆ ಸೋಮಯಾಗದಲ್ಲಿ ಸೋಮವನ್ನು ತರುವಾಗ ಸೋಮವು ರಾಜನೆಂದೂ ಗಾಯತ್ರ್ಯಾದಿ ಸಪ್ತಛಂದಸ್ಸುಗಳು ಅವನ ಅನುಚರರೆಂದೂ ಭಾವಿಸಲ್ಪಟ್ಟು ರಾಜನಿಗೂ ರಾಜನ ಅನುಚರರಿಗೂ ಆತಿಥ್ಯವನ್ನು (Hospitality) ಮಾಡುವಂತೆ ಗಾಯತ್ರ್ಯಾದಿ ಛಂದಸ್ಸುಗಳ ಪ್ರೀತ್ಯರ್ಥವಾಗಿ ಹೋಮಮಾಡುವುದು ಪದ್ಧತಿಯಾಗಿದೆ. ಈ ವಿಷಯವಾಗಿ ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ—

> **ಯಾವದ್ಭಿರ್ವೈ ರಾಜಾನುಚರೈರಾಗಚ್ಛತಿ ಸರ್ವೇಭ್ಯೋ ವೈ ತೇಭ್ಯ ಆತಿಥ್ಯಂ ಕ್ರಿಯತೇ ಛಂದಾಗ್ಂಸಿ ಖಲು ವೈ ಸೋಮಸ್ಯ ರಾಜ್ಞೋಽನುಚರಾಣ್ಯಗ್ನೇರಾತಿಥ್ಯಮಸಿ ವಿಷ್ಣವೇ ತ್ವೇತ್ಯಾಹ ಗಾಯತ್ರಿಯಾ ಏವೈತೇನ ಕರೋತಿ ಸೋಮಸ್ಯಾತಿಥ್ಯಮಸಿ ವಿಷ್ಣವೇ ತ್ವೇತ್ಯಾಹ ತ್ರಿಷ್ಟುಭ ಏವೈತೇನ ಕರೋತ್ಯತಿಥೇರಾತಿಥ್ಯಮಸಿ ವಿಷ್ಣವೇತ್ವೇತ್ಯಾಹ ಜಗತ್ಯಾ ಏವೈತೇನ ಕರೋತ್ಯಗ್ನಯೇ ತ್ವಾ ರಾಯಸ್ಪೋಷದಾವ್ನ್ನೇ ವಿಷ್ಣವೇ ತ್ವೇತ್ಯಾಹಾನುಷ್ಟುಭ ಏವೈತೇನ ಕರೋತಿ ಶ್ಯೇನಾಯ ತ್ವಾ ಸೋಮಭೃತೇ ವಿಷ್ಣವೇ ತ್ವೇತ್ಯಾಹ ಗಾಯತ್ರಿಯಾ ಏವೈತೇನ ಕರೋತಿ ||**

ಇತ್ಯಾದಿ. ಈ ಹೋಮಗಳಲ್ಲಿ ವಿಷ್ಣುವೇ ಮುಖ್ಯದೇವತೆಯು. ಅದರಂತೆ ಉಪಸದವೆಂಬ ಹೋಮದಲ್ಲಿಯೂ **ಗಯಸ್ಫಾನೋ ಅಮೀವಹಾ** (ಋ. ಸಂ. ೧-೯೧-೧೨) **ಇದಂ ವಿಷ್ಣುರ್ವಿಚಕ್ರಮೇ** (ಋ. ಸಂ. ೧-೨೨-೧೭) ಎಂಬ ಋಕ್ಕುಗಳನ್ನು ಯಾಜ್ಯಾಪುರೋನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಥೋಪಸತ್** ಎಂಬ ಖಂಡದಲ್ಲಿ ಹೇಳಿದೆ. (ಆ. ೪-೮) ಇದು ಈ ಋಕ್ಕಿನ ವಿನಿಯೋಗಕ್ರಮವು ಮತ್ತು ಗೃಹಕರ್ಮಗಳಲ್ಲಿಯೂ ಸ್ಮಾರ್ತಪ್ರಯೋಗಾದಿಗಳಲ್ಲಿಯೂ ಈ ಋಕ್ಕನ್ನು ವಿಷ್ಣುಸಂಬಂಧವಾದ ಮಂತ್ರಗಳನ್ನು ಪಠಿಸುವ ಸಂದರ್ಭದಲ್ಲಿ ಉಪಯೋಗಿಸುವುದು ರೂಢಿಯಾಗಿದೆ.

ಯಾಸ್ಕಮಹರ್ಷಿಯು ಈ ಋಕ್ಕಿಗೆ ನಿರುಕ್ತವನ್ನು ಹೇಳಿರುವರು—

**ವಿಷ್ಣುಃ । ಅಥ ಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ ವಿಷ್ಣುರ್ವಿಶತೇರ್ವಾ ವ್ಯಶ್ನೋತೇರ್ವಾ ॥**
(ನಿ. ೧೨-೧೮).

ವಿಷ್ಣುಶಬ್ದಕ್ಕೆ ಈ ರೀತಿ ಅರ್ಥವನ್ನು ವಿವರಿಸಿರುವರು—

**ಯದಾ ವಿಷಿತಃ ವ್ಯಾಪ್ತೋಽಯಮೇವ ಸೂರ್ಯೋ ರಶ್ಮಿಭಿಃ ಭವತಿ ತದಾ ವಿಷ್ಣುರ್ಭವತಿ । ವಿಶತೇರ್ವಾ ಯದಾ ವಿಷ್ಟಃ ಪ್ರವಿಷ್ಟಃ ಸರ್ವತೋ ರಶ್ಮಿಭಿರ್ಭವತಿ ತದಾ ವಿಷ್ಣುರ್ಭವತಿ । ವ್ಯಶ್ನೋತೇರ್ವಾ ವಿಪೂರ್ವಸ್ಯ ವಾಶ್ನೋತೇಃ ಯದಾ ರಶ್ಮಿಭಿರತಿಶಯೇನಾಯಂ ವ್ಯಾಪ್ತೋ ಭವತಿ ವ್ಯಾಪ್ನೋತಿ ವಾ ರಶ್ಮಿಭಿರಯಂ ಸರ್ವಂ ತದಾ ವಿಷ್ಣುರಾದಿತ್ಯೋ ಭವತಿ ॥**

ಎಂದರೆ ಸೂರ್ಯನು ತನ್ನ ರಶ್ಮಿಯಿಂದ ಯಾವಾಗ ಸಮಸ್ತವನ್ನೂ ವ್ಯಾಪ್ತವನ್ನಾಗಿ ಮಾಡುವನೋ ಆಗ ವಿಷ್ಣುವೆಂದು ಹೇಳಲ್ಪಡುವನು; ಅಥವಾ ರಶ್ಮಿಗಳ ಮೂಲಕ ಎಲ್ಲವನ್ನೂ ಪ್ರವೇಶಿಸುವುದರಿಂದ ವಿಷ್ಣುವೆಂದು ಹೇಳಲ್ಪಡುವನು; ಅಥವಾ ರಶ್ಮಿಗಳಿಂದ ಅತಿಶಯವಾಗಿ ಎಲ್ಲವನ್ನೂ ವ್ಯಾಪಿಸಿ ಪ್ರಕಾಶಿಸುವುದರಿಂದ ಆದಿತ್ಯನೇ ವಿಷ್ಣುವೆಂದು ಹೇಳಲ್ಪಡುವನು ಮತ್ತು—

**ತಸ್ಯೈಷಾ ಭವತಿ ॥ ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಳ್ಹಮಸ್ಯ ಪಾಂಸುರೇ ॥ ಯದಿದಂ ಕಿಂಚ ತದ್ವಿಕ್ರಮತೇ ವಿಷ್ಣುಸ್ತ್ರಿಧಾ ನಿಧತ್ತೇ ಪದಂ ತ್ರೇಧಾ ಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ । ಸಮಾರೋಹಣೇ ವಿಷ್ಣುಪದೇ ಗಯಶಿರಸೀ-ತ್ಯೌರ್ಣವಾಭಃ । ಸಮೂಳ್ಹಮಸ್ಯ ಪಾಂಸುರೇ ಪ್ಯಾಯನೇಽನ್ತರಿಕ್ಷೇ ಪದಂ ನ ದೃಶ್ಯತೇ । ಅಪಿ ವೋಪಮಾರ್ಥೇ ಸ್ಯಾತ್ ಸಮೂಳ್ಹಮಸ್ಯ ಪಾಂಸುಲ ಇವ ಪದಂ ನ ದೃಶ್ಯತ ಇತಿ ॥ ಪಾಂಸವಃ ಪಾದೈಃ ಸೂಯಂತ ಇತಿ ವಾ, ಪನ್ನಾಃ ಶೇರತ ಇತಿ ವಾ, ಪಿಂಶನೀಯಾ ಭವಂತೀತಿ ವಾ ॥** (ನಿ. ೧೨-೧೯).

ವಿಷ್ಣುಶಬ್ದಾರ್ಥಪ್ರತಿಪಾದನೆಗಾಗಿ **ಇದಂ ವಿಷ್ಣುರ್ವಿಚಕ್ರಮೇ** ಎಂಬ ಋಕ್ಕನ್ನೇ ಉದಾಹರಣೆಯನ್ನಾಗಿ ಕೊಟ್ಟು ಅದರ ಅರ್ಥವಿವರಣೆ ಮಾಡಿರುವರು–

ವಿಷ್ಣುವು (ಆದಿತ್ಯನು) ಈ ಜಗತ್ತನ್ನು ಮೂರು ವಿಧವಾಗಿ ಭಾಗಿಸುವುದಕ್ಕಾಗಿ ಮೂರು ಪಾದಗಳನ್ನು ಇಟ್ಟು ಪೃಥಿವೀ, ಅಂತರಿಕ್ಷ, ಸ್ವರ್ಗಗಳೆಂಬ ಮೂರು ಭಾಗಗಳನ್ನಾಗಿ ವಿಂಗಡಿಸುವುದಕ್ಕಾಗಿ ಮೂರು ಪಾದವಿಕ್ಷೇಪಮಾಡಿರುವನು ಎಂದು ಶಾಕಪೂಣಿಯ ಮತವು. ಹೇಗೆಂದರೆ ಭೂಮಿಯ ಮೇಲೆ ರಶ್ಮಿಗಳ ಮೂಲಕವೂ, ಅಂತರಿಕ್ಷದಲ್ಲಿ ವಿದ್ಯುತ್ತಿನ (ಮಿಂಚಿನ) ಮೂಲಕವೂ, ಸ್ವರ್ಗದಲ್ಲಿ ಸೂರ್ಯಮಂಡಲದ ಮೂಲಕವೂ ಪ್ರಕಟವಾಗುವುದರಿಂದ ತ್ರೇಧಾ ಎಂದರೆ ಮೂರು ವಿಧವಾಗಿ ಪ್ರಕಟವಾಗುವನು ಎಂದಭಿಪ್ರಾಯವು.

ಸೂರ್ಯನು ಪ್ರಾತಃಕಾಲದಲ್ಲಿ ಉದಯಿಸುವಾಗ (ಸಮಾರೋಹಣೇ) ಉದಯಗಿರಿಯಲ್ಲಿಯೂ, ಮಧ್ಯಾಹ್ನದಲ್ಲಿ (ವಿಷ್ಣುಪದೇ) ಅಂತರಿಕ್ಷದಲ್ಲಿಯೂ, ಸಾಯಂಕಾಲದಲ್ಲಿ (ಗಯಶಿರಸಿ) ಅಸ್ತಮಾನಪರ್ವತದಲ್ಲಿಯೂ ಕಾಣಲ್ಪಡುವುದರಿಂದ **ತ್ರೇಧಾ ನಿದಧೇ ಪದಂ** ಎಂಬುದಕ್ಕೆ ಇದೇ ಅರ್ಥವೆಂದು ಔರ್ಣವಾಭನೆಂಬುವರು ಅಭಿಪ್ರಾಯಪಡುವರು. **ಸಮೂಳ್ಹಮಸ್ಯ ಪಾಂಸುರೇ** ಎಂದರೆ ಅಂತರಿಕ್ಷದಲ್ಲಿ ಮಧ್ಯಂದಿನಪದವಾದ ವಿದ್ಯುತ್ತು ಯಾವಾಗಲೂ ಕಾಣಿಸದೆ

ಅಂತರ್ಹಿತವಾಗಿರುವದೆಂದರ್ಥವು. ಅಥವಾ ಧೂಳಿನಿಂದ ಮುಚ್ಚಲ್ಪಟ್ಟ ವಸ್ತುವು (ಅಥವಾ ಹೆಜ್ಜೆಯ ಗುರುತು) ಯಾವ ರೀತಿ ಕಾಣಿಸುವುದಿಲ್ಲವೋ ಅದರಂತೆ ಎಂದು ಉಪಮಾರ್ಥವನ್ನು ಬೇಕಾದರೂ ಹೇಳಬಹುದು.

ಪಾಂಸುರೇ ಎಂಬ ಶಬ್ದಕ್ಕೆ **' ಪಾದೈಃ ಸೂಯಂತೇ ಜನ್ಯಂತ ಇತ್ಯರ್ಥಃ '** ಪಾದಗಳಿಂದ ಜನಿಸುವುವು, ಉಂಟಾಗುವವು ಎಂದರೆ ಉದುರುವವು. ಆದುದರಿಂದ ಪಾದಗಳಿಂದ ಉದುರಿದ ಧೂಳಿಗೆ ಪಾಂಸುರ ಎಂದು ಹೆಸರು. **ಅಥವಾ ಪನ್ನಾಃ ಶೇರತೆ ಇತಿ ವಾ । ಪಿಂಶನೀಯಾಃ ಧ್ವಂಸನೀಯಾಃ ಧ್ವಂಸನಾರ್ಹಾಸ್ತೇ ಭವಂತಿ** ಎಂದರೆ ಪಾದದಲ್ಲಿ ಸೇರುವುದರಿಂದ ಅಥವಾ ಪಾದದಲ್ಲಿರುವ ಅದನ್ನು ಕೊಡವಿ ಧ್ವಂಸ (ನಾಶ) ಮಾಡಬೇಕಾದುದರಿಂದ ಪಾದದ ಧೂಳಿಗೆ ಪಾಂಸುರ ಎಂದು ಹೆಸರು.

ಮೇಲೆ ಹೇಳಿದ ವಿಷಯಗಳೆಲ್ಲಾ ಯಾಸ್ಕಮಹರ್ಷಿಯ ವಿವರಣೆಗಳು. ಪುರಾಣಾದಿಗ್ರಂಥಗಳಲ್ಲಿ ವಿಷ್ಣುವಿಗೆ ಒಂದು ಪ್ರಾಮುಖ್ಯವಾದ ಸ್ಥಾನವಿದೆ. ಸಮಸ್ತ ವಿಶ್ವವನ್ನೂ ವ್ಯಾಪಿಸಿರುವುದರಿಂದ ವಿಷ್ಣುವನ್ನು ಪರಮೇಶ್ವರನೆಂದೂ ಪರಬ್ರಹ್ಮನೆಂದೂ ಹೇಳುವರು. ಅಥವಾ ಜಗದುತ್ಪತ್ತಿಸ್ಥಿತಿಲಯಗಳನ್ನು ನಡೆಸುವ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ವಿಷ್ಣುವು ಒಬ್ಬನಾಗಿ ಜಗತ್ತನ್ನು ಪಾಲಿಸುವನೆಂದು ಪ್ರಸಿದ್ಧಿಯು. ಈ ಜಗತ್ಪಾಲನಕಾರ್ಯಕ್ಕಾಗಿ ವಿಷ್ಣುವು ಅನೇಕ ಅವತಾರಗಳನ್ನು ಕೈಗೊಳ್ಳಬೇಕಾದ ಅವಶ್ಯಕತೆಯುಂಟಾದುದರಿಂದ ಆ ಅವತಾರಗಳಲ್ಲಿ ಒಂದಾದ ವಾಮನ ಅಥವಾ ತ್ರಿವಿಕ್ರಮಾವತಾರವೇ ಈ ಋಕ್ಕಿನಲ್ಲಿ ವರ್ಣಿತವಾಗಿರುವುದೆಂದು ಭಾಷ್ಯಕಾರರ ಮತ್ತು ಇತರ ಪಂಡಿತರ ಅಭಿಪ್ರಾಯವು. ಋಗ್ವೇದದಲ್ಲಿ ವಿಷ್ಣುವಿನ ಅವತಾರಾದಿಗಳು ನಿರ್ದೇಶಿಸಲ್ಪಡದಿರುವುದರಿಂದಲೂ, ವೇದದಲ್ಲಿ ಅಲ್ಲಲ್ಲಿ ಕಂಡುಬರುವ ದೇವತಾಕಾರ್ಯಗಳೇ ಪುರಾಣಗಳಲ್ಲಿ ವಿಶೇಷರೀತಿಯಿಂದ ವರ್ಣಿತವಾಗಿರುವುದರಿಂದಲೂ, ಪುರಾಣಕಥೆಗಳಿಗೆ ಮೂಲವು ವೇದವೇ ಆಗಿರುವುದರಿಂದಲೂ ಪುರಾಣಾಂತರ್ಗತವಾದ ಅವತಾರಾದಿಗಳನ್ನು ವೇದ ಮಂತ್ರಗಳಿಗೆ ಹೊಂದಿಸಿ ಅರ್ಥಮಾಡುವುದು ಸರಿಯಲ್ಲವೆಂದು ಪಾಶ್ಚಾತ್ಯ ಮತ್ತು ಆಧುನಿಕಪಂಡಿತರು ಅಭಿಪ್ರಾಯ ಪಡುವರು.

ಪುರಾಣಗಳಲ್ಲಿ ಹೇಳಿರುವ ಕಥೆಯಂತೆ, ಬಲಿಚಕ್ರವರ್ತಿಯೆಂಬ ಅಸುರನು ದೇವತೆಗಳನ್ನು ಗೆದ್ದು ರಾಜ್ಯಭಾರ ಮಾಡುತ್ತಿರುವಾಗ ಸೋತುಹೋದ ದೇವತೆಗಳು ವಿಷ್ಣುವಿನಲ್ಲಿ ಮೊರೆಯಿಡಲು ವಿಷ್ಣುವು ಅವರನ್ನು ಸಂರಕ್ಷಿಸುವುದಕ್ಕಾಗಿ ವಾಮನಾವತಾರವನ್ನು ಮಾಡಿ ಬಲಿಚಕ್ರವರ್ತಿಯು ಯಾಗದೀಕ್ಷೆಯನ್ನು ಕೈಗೊಂಡಿರುವಾಗ ಅವನಲ್ಲಿಗೆ ಹೋಗಿ ತನಗೆ ಮೂರು ಪಾದದಷ್ಟು ಭೂಮಿಯನ್ನು ಕೊಡಬೇಕೆಂದು ಕೇಳಲು ಅದಕ್ಕೆ ಬಲಿಯು ಸಮ್ಮತಿಸಿ ಅದರಂತೆ ಕೊಡುವೆನೆಂದು ಹೇಳಿದನು. ಬಳಿಕ ವಾಮನಾವತಾರಿಯಾದ ವಿಷ್ಣುವು ತ್ರಿವಿಕ್ರಮಾವತಾರವನ್ನು ತಾಳಿ ಎಂದರೆ ಭೂಮ್ಯಂತರಿಕ್ಷಗಳೆಲ್ಲಾ ವ್ಯಾಪಿಸುವಂತೆ ಬೃಹದಾಕಾರವನ್ನು ತಾಳಿ ಒಂದು ಪಾದದಿಂದ ಭೂಮಿಯೆಲ್ಲವನ್ನೂ ಮತ್ತೊಂದು ಪಾದದಿಂದ ಅಂತರಿಕ್ಷವನ್ನೂ ಆಕ್ರಮಿಸಿ ಮೂರನೇ ಪಾದವನ್ನು ಎಲ್ಲಿಡಲೆಂದು ಬಲಿಯನ್ನು ಕೇಳಲು ಆ ರಾಜನು ಸತ್ಯಸಂಧನಾದುದರಿಂದ ಮೂರನೇ ಪಾದವನ್ನು ಬೇರೆ ಸ್ಥಳವಿಲ್ಲದ್ದರಿಂದ ತನ್ನ ತಲೆಯ ಮೇಲೆ ಇಟ್ಟು ಅನುಗ್ರಹಿಸಬೇಕೆಂದು ಪ್ರಾರ್ಥಿಸಲು ಅದರಂತೆ ತ್ರಿವಿಕ್ರಮನು ತನ್ನ ಮೂರನೆಯ ಪಾದವನ್ನು ಬಲಿಯ ತಲೆಯ ಮೇಲಿಟ್ಟು ಅವನನ್ನು ಪಾತಾಳಲೋಕಕ್ಕೆ ಹೋಗಿ ಅಲ್ಲಿ ರಾಜ್ಯಭಾರಮಾಡುತ್ತಾ ಸುಖದಿಂದಿರುವಂತೆ ಮಾಡಿ ಅವನಿಗೆ ಬೇಕಾದ ವರವನ್ನು ಕೊಟ್ಟನೆಂದು ವಿಸ್ತಾರವಾದ ವರ್ಣನೆ ಇರುವುದು.

॥ ವ್ಯಾಕರಣಪ್ರಕ್ರಿಯಾ ॥

**ತ್ರೇಧಾ**—'**ಏಧಾಚ್ಚ**' (ಪಾ. ಸೂ. ೫-೩-೪೬) ದ್ವಿ, ತ್ರಿ ಶಬ್ದಗಳ ಮುಂದೆ ಇರುವ ಧಾ ಪ್ರತ್ಯಯಕ್ಕೆ ಏಧಾಚ್ ಆದೇಶ ಬರುವುದು. ಎಂಬುದರಿಂದ '**ಸಂಖ್ಯಾಯಾ ವಿಧಾರ್ಥೇಧಾ**' (ಪಾ. ಸೂ. ೫-೩-೪೨) ಎಂಬುದರಿಂದ ತ್ರಿ ಶಬ್ದದ ಮುಂದೆ ಬರುವ ಧಾ ಪ್ರತ್ಯಯಕ್ಕೆ ಏಧಾಚ್ ಆದೇಶ ತ್ರಿ+ಏಧಾ. '**ಯಸ್ಯೇತಿಚ**' ಎಂಬುದರಿಂದ ಇಕಾರಕ್ಕೆ ಲೋಪ '**ಚಿತಃ**' (ಪಾ. ಸೂ. ೯-೧-೧೬೩) ಎಂಬುದರಿಂದ ತ್ರೇಧಾ ಎಂಬುದು ಅಂತೋದಾತ್ತ.

**ಸಮೂಳ್ಹಂ**— '**ವಹ ಪ್ರಾಪಣೇ**' ಧಾತು. ಇದರ ಮುಂದೆ '**ನಿಷ್ಠಾ**' (ಪಾ. ಸೂ. ೩-೨-೧೦೨) ಭೂತಾರ್ಥವೃತ್ತಿಯಾದ ಧಾತುವಿನ ಮುಂದೆ ಕ್ತ, ಕ್ತವತು ಪ್ರತ್ಯಯಗಳು ಬರುವುವು ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯದ ಕಕಾರಕ್ಕೆ ಇತ್ಸಂಜ್ಞೆ ಲೋಪ. ವಹ್+ತ. ಈಗ '**ವಚಿಸ್ವಪಿಯಜಾದೀನಾಂ ಕಿತಿ**' (ಪಾ. ಸೂ. ೬-೧-೫೧) ಕಕಾರೇತ್ಸಂಜ್ಞಕವಾದ ಪ್ರತ್ಯಯ ಪರದಲ್ಲಿರುವಾಗ ವಚ್, ಸ್ವಪ್, ಧಾತುಗಳಿಗೂ ಯಜಾದಿ ಧಾತುಗಳಿಗೂ ಸಹ ಸಂಪ್ರಸಾರಣ ಬರುವುದು ಎಂದು ಸೂತ್ರಾರ್ಥ. 'ಯಜಿರ್ವಪಿರ್ವಹಿಶ್ಚೈವ ವಸಿರ್ವೇಞ್ ವ್ಯೇಞ್ ಇತ್ಯಪಿ । ಹ್ವೇಞ್ ವದೀ ಶ್ವಯತಿಶ್ಚೇತಿ ಯಜಾದ್ಯಾಸ್ಯುರಿಮೇ ನವ' ಎಂದು ಪರಿಗಣಿಸಿರುವ ಯಜಾದಿಗಣದಲ್ಲಿ ವಹ್ ಧಾತುವು ಸೇರಿದೆ. ಆದ್ದರಿಂದ '**ವಚಿಸ್ವಪಿ**–' ಇತ್ಯಾದಿ ಸೂತ್ರದಿಂದ ಸಂಪ್ರಸಾರಣ ವಕಾರಕ್ಕೆ ಉಕಾರ, ಉ+ಅಹ್+ತ–'**ಸಂಪ್ರಸಾರಣಾಚ್ಚ**' (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ, ಉಹ್+ತ– '**ಹೋಢಃ**' (ಪಾ. ಸೂ. ೮-೨-೩೧) ಎಂಬುದರಿಂದ ಹಕಾರಕ್ಕೆ ಢಕಾರ ಉಢ್+ತ '**ಝಷಸ್ತಥೋರ್ಧೋಽಧಃ**' (ಪಾ. ಸೂ. ೮-೨-೪೦) ಧಾ ಧಾತು ಸಂಬಂಧಿಯಲ್ಲದ ಝಷ್ ·ಪ್ರತ್ಯಾಹಾರದ ವರ್ಣದ ಮುಂದೆ ಇರುವ ತಕಾರ ಥಕಾರಗಳಿಗೆ ಧ್ ಆದೇಶ ಬರುವುದು, ಎಂಬುದರಿಂದ ಢಕಾರದ ಮುಂದೆ ಇರುವ ತಕಾರಕ್ಕೆ ಧ್ ಆದೇಶ ಉಣ್+ಧ. '**ಷ್ಟುನಾಷ್ಟುಃ**' (ಪಾ. ಸೂ. ೮-೪-೪೧) ಎಂಬುದರಿಂದ ಧಕಾರಕ್ಕೆ ಢಕಾರ ಉಢ್+ಢ, '**ಢೋಢೇಲೋಪಃ**' (ಪಾ. ಸೂ. ೮-೩-೧೩) ಢಕಾರಾವ್ಯವಹಿತ ಪೂರ್ವದಲ್ಲಿರುವ ಢಕಾರಕ್ಕೆ ಲೋಪ ಬರುವುದು ಎಂಬುದರಿಂದ ಮೊದಲನೆ ಢಕಾರಕ್ಕೆ ಲೋಪ. ಉ+ಢ, '**ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ**' (ಪಾ. ಸೂ. ೬-೩-೧೧೧) ಢಕಾರ ರೇಫಾನ್ಯತರ ಲೋಪನಿಮಿತ್ತಿಕವಾದ ಢಕಾರ ರೇಫಾನ್ಯತರಾವ್ಯವಹಿತ ಪೂರ್ವದಲ್ಲಿರುವ ಅ-ಇ-ಉ ಗಳಿಗೆ ದೀರ್ಘ ಬರುವುದು ಎಂಬುದರಿಂದ ಉಕಾರಕ್ಕೆ ದೀರ್ಘ. ಊ+ಢ 'ಅಜ್ಮಧ್ಯಸ್ಥಡಕಾರಸ್ಯ ಳಕಾರಂ ಬಹ್ವೃಚಾ ಜಗುಃ । ಅಜ್ಮಧ್ಯಸ್ಥಢಕಾರಸ್ಯ ಳ್ಹಕಾರಂ ವೈ ಯಥಾಕ್ರಮಮ್' ಎಂಬ ಸಾಂಪ್ರದಾಯಿಕ ವಚನಾನುಸಾರ ಢಕಾಕ್ಕೆ ಳ್ಹಕಾರ. '**ಗತಿರನಂತರಃ**' (ಪಾ. ಸೂ. ೬-೨-೪೯) ಎಂಬುದರಿಂದ ಸಮ್ ಎಂಬ ಗತಿ ಸಂಜ್ಞಕಕ್ಕೆ ಪ್ರಕೃತಿಸ್ವರ ಬರುತ್ತೆ.

**ಅಸ್ಯ**—ಇದಮ್ ಶಬ್ದದ ಮುಂದೆ ಷಷ್ಠೀ ಏಕವಚನ ಙಸ್ '**ತ್ಯದಾದೀನಾಮಃ**' (ಪಾ. ಸೂ. ೭-೨-೧೦೨) ಎಂಬುದರಿಂದ ಮಕಾರಕ್ಕೆ ಅಕಾರ ಇದ+ಅ+ಙಸ್ '**ಅತೋಗುಣೇ**' (ಪಾ. ಸೂ ೬-೧-೯೭) ಎಂಬುದರಿಂದ ಪರರೂಪ, ಇದ+ಙಸ್ '**ಟಾಙಸಿಙಸಾಮಿನಾತ್ಸ್ಯಾಃ**' (ಪಾ. ಸೂ. ೭-೧-೧೨) ಎಂಬುದರಿಂದ ಙಸ್‌ಗೆ ಸ್ಯ ಆದೇಶ. ಇದ+ಸ್ಯ. '**ಇದಮೋಽನ್ವಾದೇಶೇಽಶನುದಾತ್ತ ಸ್ತೃತೀಯಾದೌ**' (ಪಾ. ಸೂ. ೨-೪-೩೨) ಎಂಬುದರಿಂದ ಇದ ಗೆ ಅನುದಾತ್ತವಾದ ಅಶ್ ಆದೇಶ ಅಸ್ಯ. '**ಅನುದಾತ್ತೌ ಸುಪ್ಪಿತೌ**' (ಪಾ. ಸೂ. ೩-೧-೪) ಎಂಬುದರಿಂದ ಸ್ಯ ಅನುದಾತ್ತ, ಏವಂಚ ಅಸ್ಯ ಎಂಬುದು ಸರ್ವಾನುದಾತ್ತ.

**ಪಾಂಸುರೇ—' ಉಷಿ ಶುಷಿ ಮುಷ್ಕ ಮಧೋರಃ '** (ಪಾ. ಸೂ. ೫-೨-೧೦೭) ಎಂಬಲ್ಲಿ ವಾರ್ತಿಕಕಾರರು **' ನಗಾಚ್ಚ '** ಎಂದು ಪಠಿಸಿರುವರು. ಇಲ್ಲಿ ಕಾಶಿಕಾವೃತ್ತಿಕಾರರು **' ನಗಪಾಂಸು ಪಾಂಡುಭ್ಯಶ್ಚೇತಿ ವಕ್ತವ್ಯಮ್'** (ಕಾಶಿಕಾ. ೫-೨-೧೦೭-೨) ಎಂದು ಪಠಿಸಿರುವರು. ಇದರ ಅರ್ಥವು ಇದು—ನಗ, ಪಾಂಸು, ಪಾಂಡು, ಶಬ್ದಗಳ ಮುಂದೆ ಮತ್ವರ್ಥದಲ್ಲಿ ರ ಪ್ರತ್ಯಯ ಬರುವುದು ಎಂದು ಹೇಳಬೇಕು. ಇದರಿಂದ ಪಾಂಸು ಶಬ್ದದ ಮುಂದೆ ರ ಪ್ರತ್ಯಯ ಬಂದರೆ ಪಾಂಸುರ ಎಂದಾಗುತ್ತೆ. ರ ವು ಪ್ರತ್ಯಯ ಸ್ವರದಿಂದ ಆದ್ಯುದಾತ್ತ. ಸಪ್ತಮ್ಯೇಕವಚನದಲ್ಲಿ ಪಾಂಸುರೇ ಎಂದಾಗುತ್ತೆ ॥ ೧೭ ॥

॥ ಸಂಹಿತಾಪಾಠಃ ॥

ತ್ರೀಣಿ ಪದಾ ವಿ ಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ ।
ಅತೋ ಧರ್ಮಾಣಿ ಧಾರಯನ್ ॥ ೧೮ ॥

॥ ಪದಪಾಠಃ ॥

ತ್ರೀಣಿ । ಪದಾ । ವಿ । ಚಕ್ರಮೇ । ವಿಷ್ಣುಃ । ಗೋಪಾಃ । ಅದಾಭ್ಯಃ ॥
ಅತಃ । ಧರ್ಮಾಣಿ । ಧಾರಯನ್ ॥ ೧೮ ॥

॥ ಸಾಯಣಭಾಷ್ಯಂ ॥

ಉಪಸದಿ ವೈಷ್ಣವಯಾಗಸ್ಯ ಪ್ರಾತಃಕಾಲೇ ಯಾಜ್ಯಾ ಸಾಯಂಕಾಲೇऽನುವಾಕ್ಯಾ ತ್ರೀಣಿ ಪದೇತ್ಯೇಷಾ । ಸೂತ್ರಿತಂ ಚ । ತ್ರೀಣಿ ಪದಾ ವಿ ಚಕ್ರಮ ಇತಿ ಸ್ವಿಷ್ಟಕೃದಾದಿ ಉಪ್ಯತೇ । ಆ. ೪-೮ ಇತಿ ॥

ಅದಾಭ್ಯಃ ಕೇನಾಪಿ ಹಿಂಸಿತುಮಶಕ್ಯೋ ಗೋಪಾಃ ಸರ್ವಸ್ಯ ಜಗತೋ ರಕ್ಷಕೋ ವಿಷ್ಣುಃ ಪೃಥಿವ್ಯಾದಿಸ್ಥಾನೇಷ್ವತ ಏತೇಷು ತ್ರೀಣಿ ಪದಾನಿ ವಿ ಚಕ್ರಮೇ । ಕಿಂ ಕುರ್ವನ್ । ಧರ್ಮಾಣ್ಯಗ್ನಿಹೋತ್ರಾದೀನಿ ಧಾರಯನ್ ಪೋಷಯನ್ ॥ ಪದಾ । ಸುಪಾಂ ಸುಲುಗಿತ್ಯಾದಿನಾ ವಿಭಕ್ತೇರ್ಡಾದೇಶಃ । ತಸ್ಯ ಸ್ಥಾನಿವದ್ಭಾವೇನಾನುದಾತ್ತತ್ವೇ ಪ್ರಾಪ್ತೇ ಉದಾತ್ತನಿವೃತ್ತಿಸ್ವರೇಣೋದಾತ್ತತ್ವಂ । ಗೋಪಾಃ । ಗೋಪಾಮೃತಸ್ಯ । ಋಗ್ವೇ. ೧-೧-೮ । ಇತ್ಯತ್ರೋಕ್ತಂ । ಅದಾಭ್ಯಃ । ದಭೇರ್ಋಹಲೋರ್ಣ್ಯದಿತಿ ಣ್ಯತ್ । ನಞ್ಸಮಾಸಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಧಾರಯನ್ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಣಿಚ ಏವ ಸ್ವರಃ ಶಿಷ್ಯತೇ ॥

॥ ಪ್ರತಿಪದಾರ್ಥ ॥

**ಅದಾಭ್ಯಃ**—ಯಾರಿಂದಲೂ ಹಿಂಸಿಸಲ್ಪಡುವುದಕ್ಕೆ ಅಶಕ್ಯನಾದ । **ಗೋಪಾಃ**—ಸಮಸ್ತ ಜಗತ್ತನ್ನೂ ರಕ್ಷಿಸುವ । **ವಿಷ್ಣುಃ**—ವಿಷ್ಣುವು । (ಪೃಥಿವ್ಯಾದಿಸ್ಥಾನಗಳಲ್ಲಿ) **ಧರ್ಮಾಣಿ**—ಅಗ್ನಿಹೋತ್ರಾದಿಸತ್ಕರ್ಮಾನುಷ್ಠಾನುರೂಪವಾದ ಧರ್ಮಕಾರ್ಯಗಳನ್ನು । **ಧಾರಯನ್**—ಪೋಷಿಸುತ್ತಾ (ರಕ್ಷಿಸುತ್ತಾ) । **ಅತಃ**—ಈ ವಿಧವಾದ ಕಾರ್ಯಕ್ರಮದಿಂದ । **ತ್ರೀಣಿ ಪದಾ**—ಮೂರು ಪಾದಗಳನ್ನು । **ವಿ ಚಕ್ರಮೇ**—ವಿಕ್ಷೇಪಮಾಡಿದನು ॥

॥ ಭಾವಾರ್ಥ ॥

ವಿಷ್ಣುವನ್ನು ಹಿಂಸಿಸಲು ಯಾರಿಂದಲೂ ಶಕ್ಯವಿಲ್ಲ. ಇವನು ಸಮಸ್ತ ಜಗತ್ತಿಗೂ ರಕ್ಷಕನು ; ಆದುದರಿಂದ ಅಗ್ನಿಹೋತ್ರಾದಿಧರ್ಮಗಳ ಪಾಲನೆಗಾಗಿ ವಿಷ್ಣುವು ಮೂರು ಪಾದವಿಕ್ಷೇಪವನ್ನು ಮಾಡಿದನು.

## English Translation.

Vishnu, the uninjurable and the protector of the Universe, stepped three steps, thereby preserving the Sacred laws.

॥ ವಿಶೇಷವಿಷಯಗಳು ॥

ಈ ಮಂತ್ರದ ವಿನಿಯೋಗವು ಈರೀತಿ ಇರುವುದು. ಉಪಸದನವೆಂಬ ಯಾಗದಲ್ಲಿ ವಿಷ್ಣುಸಂಬಂಧವಾದ ಹೋಮವನ್ನು ಮಾಡುವಾಗ ಈ ಋಕ್ಕನ್ನು ಪ್ರಾತಃಕಾಲದಲ್ಲಿ ಯಾಜ್ಯಾಮಂತ್ರವನ್ನಾಗಿಯೂ, ಸಾಯಂಕಾಲದಲ್ಲಿ ಪುರೋನುವಾಕ್ಯಾಮಂತ್ರವನ್ನಾಗಿಯೂ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ತ್ರೀಣಿ ಪದಾ ವಿ ಚಕ್ರಮ ಇತಿ ಸ್ವಿಷ್ಟಕೃದಾದಿ ಲುಪ್ಯತೇ** ಎಂಬ ಖಂಡದಲ್ಲಿ ಹೇಳಲ್ಪಟ್ಟಿರುವುದು. (ಆ. ೪-೮)

**ಗೋಪಾಃ**—ಗೋ ಎಂದರೆ ಭೂಮಿ, ಅದನ್ನು ಪಾಲಿಸುವವನಾದುದರಿಂದ ಗೋಪಾಃ ಎಂದು ವಿಷ್ಣುವಿಗೆ ಹೆಸರು.

**ಅದಾಭ್ಯಃ**—ಅಹಿಂಸ್ಯಃ, ಹಿಂಸಿಸಲ್ಪಡಲಶಕ್ಯನು. ಇವನನ್ನು ಹಿಂಸಿಸುವುದಕ್ಕೆ ಯಾರಿಗೂ ಶಕ್ತಿಯಿಲ್ಲ ಎಂದರ್ಥವು.

**ಧರ್ಮಾಣಿ, ಧಾರಯನ್—ಸರ್ವಸ್ಯ ಹಿ ಭಗವಾನ್ ವಿಷ್ಣುರಾಶ್ರಯಃ** ಎಂಬ ವಚನಾನುಸಾರವಾಗಿ ವಿಷ್ಣುವು ಸಮಸ್ತ ಜಗತ್ತಿಗೆ ಪಾಲಕನಾಗಿರುವುದಲ್ಲದೆ ಸಮಸ್ತ ಧರ್ಮಗಳಿಗೂ (Universal laws) ಆಶ್ರಯನಾಗಿ ಅವುಗಳ ಪಾಲಕನಾಗಿರುವನು ಎಂದರೆ ದುಷ್ಟಶಿಕ್ಷೆ ಮತ್ತು ಶಿಷ್ಟರಕ್ಷಣೆ ಮಾಡುವುದರಲ್ಲಿ ಅಗ್ರಗಣ್ಯನಾಗಿರುವನು. ತ್ರಿಮೂರ್ತಿಗಳಾದ ಬ್ರಹ್ಮ ವಿಷ್ಣು ಮಹೇಶ್ವರರ ಕರ್ತವ್ಯಗಳಾದ ಸೃಷ್ಟಿ, ಸ್ಥಿತಿ, ಲಯಾದಿಗಳಲ್ಲಿ ವಿಷ್ಣುವು ತನ್ನ ಕರ್ತವ್ಯವಾದ ಜಗತ್ಪರಿಪಾಲನೆ ಎಂದರೆ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಸಂರಕ್ಷಿಸುತ್ತಾ ಇರುವನೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಪದಾ**—ದ್ವಿತೀಯಾ ಬಹುವಚನ ಶಸ್ ಪ್ರತ್ಯಯಕ್ಕೆ **'ಸುಪಾಂ ಸುಲುಕ್'** (ಪಾ. ಸೂ. ೭-೧-೩೯) ಎಂಬುದರಿಂದ **'ಡಾ'** ಆದೇಶ, ಸ್ಥಾನಿವದ್ಭಾವದಿಂದ ಅನುದಾತ್ತ. ಶಸ್ ನ ಸ್ಥಾನದಲ್ಲಿ ಬರುವ ಡಾ ಆದೇಶವು

ಯದ್ಯಪಿ ಅನುದಾತ್ತವಾಗಬೇಕು. ಆದರೂ ಪ್ರತ್ಯಯದಲ್ಲಿ ಡಿತ್ಕರಣ ಸಾಮರ್ಥ್ಯದಿಂದ ಭ ಸಂಜ್ಞೆ ಇಲ್ಲದೇ ಇದ್ದರೂ **' ಟೇಃ '** ಎಂಬುದರಿಂದ ಪದ ಶಬ್ದದ ಕೊನೆಯ ಉದಾತ್ತ ಅಕಾರಕ್ಕೆ ಲೋಪ ಬಂದಿದೆ. ಆದ್ದರಿಂದ **' ಅನುದಾತ್ತಸ್ಯ ಚ ಯತ್ರೋದಾತ್ತ ಲೋಪಃ '** (ಪಾ. ಸೂ. ೬-೧-೧೬೧) ಎಂಬುದರಿಂದ ಉದಾತ್ತ ಅಕಾರಲೋಪ ನಿಮಿತ್ತವಾದ ಅನುದಾತ್ತ ಆಕಾರಕ್ಕೆ ಉದಾತ್ತ ಬರುವುದು.

**ಗೋಪಾಃ—' ಗೋಪಾಮೃತಸ್ಯ '** (ಋ. ಸಂ. ೧-೧-೮) ಎಂಬಲ್ಲಿ ಪ್ರಕ್ರಿಯೆಯು ವಿವೃತವಾಗಿದೆ ಎಂದು ಇಲ್ಲಿ ಭಾಷ್ಯದಿಂದ ವ್ಯಕ್ತವು, ಆದರೆ ಅಲ್ಲಿ ಪ್ರಕ್ರಿಯೆಯು ಈಗ ಮುದ್ರಿತಕೋಶ ರೀತಿಯಾಗಿ ಕಾಣಿಸುವುದಿಲ್ಲ. ಗಾಂ (ಭೂಮಿಯನ್ನು) ಪಾತಿ (ಕಾಪಾಡುವನು) ಎಂದು ವಿಗ್ರಹ, **' ಕ್ವಿಪ್ ಚ '** (ಪಾ. ಸೂ. ೩-೨-೭೬) ಎಂಬುದರಿಂದ ಗಾಂ, ಎಂಬ ಕರ್ಮ ವಾಚಕವು ಉಪಪದವಾಗಿರುವಾಗ **' ಪಾ ರಕ್ಷಣೇ '** ಧಾತುವಿನ ಮುಂದೆ ಕ್ವಿಪ್ ಬರುವುದು, ಪಾ, ಎಂಬುದು ಧಾತುಸ್ವರದಿಂದ ಉದಾತ್ತ, ಉಪಪದ ಸಮಾಸ, **' ಗತಿಕಾರಕೋಪಪದಾತ್ಕೃತ್ '** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರದಿಂದ ಅದೇ ಸ್ವರ ನಿಲ್ಲುವುದು.

**ಅದಾಭ್ಯಃ**—ದಭ್ ಧಾತುವು ಪಾಣಿನೀಯ ಧಾತುಪಾಠದಲ್ಲಿ ಉಪಲಬ್ಧವಾಗುವುದಿಲ್ಲ. ಆದರೂ ಈ ಧಾತುವು ಇದೆಯೆಂದೂ, ಇದಕ್ಕೆ ಹಿಂಸೆ ಅರ್ಥವೆಂದೂ ಭಾಷ್ಯಕಾರರು ವರ್ಣಿಸಿರುತ್ತಾರೆ. **' ಋಹಲೋರ್ಣ್ಯತ್ '** (ಪಾ. ಸೂ. ೩-೧-೧೨೪) ಋಕಾರಾಂತ, ಹಲಂತವಾದ ಧಾತುವಿನ ಮುಂದೆ ಣ್ಯತ್ ಪ್ರತ್ಯಯ ಬರುವುದು ಎಂಬುದರಿಂದ ಣ್ಯತ್ ಪ್ರತ್ಯಯ, ದಭ್+ಯ, **' ಅತಉಪಧಾಯಾಃ '** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾ ವೃದ್ಧಿ, ' ನ, ದಾಭ್ಯಃ, ಅದಾಭ್ಯಃ ' ಎಂದು **' ನಞ್ '** (ಪಾ. ಸೂ. ೨-೨-೬) ಎಂಬ ಸೂತ್ರದಿಂದ ನಞ್‌ಸಮಾಸ, **' ನಲೋಪೋನಞಃ '** (ಪಾ. ಸೂ. ೬-೩-೭೩) ಎಂಬುದರಿಂದ ನಕಾರ ಲೋಪ **' ತತ್ಪುರುಷೇ ತುಲ್ಯಾರ್ಥ, ತೃತೀಯಾ ಸಪ್ತಮ್ಯುಪಮಾನಾ, ವ್ಯಯ, ದ್ವಿತೀಯಾ, ಕೃತ್ಯಾಃ '** (ಪಾ. ಸೂ. ೬-೨-೨) ತತ್ಪುರುಷ ಸಮಾಸದಲ್ಲಿ ಪೂರ್ವಪದಗಳಾದ ಈ ಏಳೂ ಪ್ರಕೃತಿಸ್ವರವನ್ನು ಹೊಂದುವುವು ಎಂಬುದರಿಂದ ನಞ್ ಪ್ರಕೃತಿಸ್ವರಬರುತ್ತೆ.

**ಧಾರಯನ್**—ಧೃಞ್ ಧಾರಣೇ, ಣಿಚ್, ಧೃ+ಇ–**' ಅಚೋಞ್ಣಿತಿ '** (ಪಾ. ಸೂ. ೭-೨-೧೧೫) ಎಂಬುದರಿಂದ ವೃದ್ಧಿ, ರ ಪರವಾಗಿಬರುತ್ತೆ ಧಾರಿ ಎಂದಾಯಿತು. ಇದರ ಮುಂದೆ ಲಟ್, **' ಲಟಶ್ಶತೃಶಾನಚಾವಪ್ರಥಮಾಸಮಾನಾಧಿಕರಣೇ '** (ಪಾ. ಸೂ. ೩-೨-೧೨೪) ಎಂಬುದರಿಂದ ಲಟ್ಟಿಗೆ ಶತೃ ಆದೇಶ **' ಕರ್ತರಿಶಪ್ '** (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣ, ಧಾರಿ+ಇ+ಅತ್, ಶಪ್ಪನ್ನು ನಿಮಿತ್ತಮಾಡಿಕೊಂಡು ಣಿಚ್ಚಿನ ಇಕಾರಕ್ಕೆ ಗುಣ ಏಕಾರ, ಆಯಾದೇಶ ಅಕಾರಗಳೆರಡಕ್ಕೂ ಪರರೂಪ ಧಾರಯತ್ ಇದರ ಮುಂದೆ ಸುಪ್ರತ್ಯಯ, **' ಉಗಿದಚಾಂ '**–(ಪಾ. ಸೂ. ೭-೧-೭೦) ಎಂಬುದರಿಂದ ಯ ಎಂಬುದರ ಮುಂದೆ ನಕಾರಾಗಮ ಧಾರಯನ್ತ್‌ಸ್ **' ಹಲ್ಙ್ಯಾಭ್ಯಃ '**–(ಪಾ. ಸೂ. ೬-೧-೬೪) ಎಂಬುದರಿಂದ ಸುಲೋಪ, **' ಸಂಯೋಗಾಂತಸ್ಯ ಲೋಪಃ '** (ಪಾ ಸೂ. ೮-೨-೨೩) ಎಂಬುದರಿಂದ ಸಂಯೋಗದ ಕೊನೆಯ ತ್‌ಗೆ ಲೋಪ, **' ಪೂರ್ವತ್ರಾಸಿದ್ಧಮ್ '** (ಪಾ.ಸೂ. ೮-೨-೧) ಎಂಬುದರಿಂದ ಸಂಯೋಗಾಂತಲೋಪವು ಅಸಿದ್ಧವಾಗುವುದರಿಂದ **' ನಲೋಪಃಪ್ರಾತಿಪದಿಕಾಂತಸ್ಯ '** (ಪಾ. ಸೂ. ೮-೨-೭) ಎಂಬುದರಿಂದ ನಕಾರಕ್ಕೆ ಲೋಪಬರುವುದಿಲ್ಲ ಧಾರಯನ್. ಎಂದಾಗುತ್ತೆ, ಇಲ್ಲಿ ಶಪ್ ಪಿತ್ತಾದ್ದರಿಂದ **' ಅನುದಾತ್ತೌಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಶತೃವು. ಅದುಪದೇಶವಾದ

ಶಪ್‌ಗಿಂತಲೂ ಪರದಲ್ಲಿರುವುದರಿಂದ **'ತಾಸ್ಯನುದಾತ್ತೇನ್ಙಿದದುಪದೇಶಾಲ್ಲಸಾರ್ವಧಾತುಕಮನುದಾತ್ತಮಹ್ನ್ವಿಙೋಃ'** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಇವೆರಡಕ್ಕೂ ಪರರೂಪದಿಂದ ಬಂದ ಅಕಾರವು ಸ್ಥಾನ ಸಾಮ್ಯದಿಂದ ಅನುದಾತ್ತ. ಏವಂಚ ಣಿಚ್‌ನ ಇಕಾರವು ಪ್ರತ್ಯಯಸ್ವರದಿಂದ ಉದಾತ್ತವಾಗಿ ನಿಲ್ಲಲು ಅದರ ಸ್ಥಾನದಲ್ಲಿ ಬಂದ ಏಕಾರವೂ ಅದರ ಸ್ಥಾನದಲ್ಲಿ ಬಂದ ಆಯ್ ಆದೇಶವೂ ಉದಾತ್ತವಾಗುವುದು. ॥ ೧೮ ॥

॥ ಸಂಹಿತಾಪಾಠಃ ॥

ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ ।
ಇಂದ್ರಸ್ಯ ಯುಜ್ಯಃ ಸಖಾ ॥ ೧೯ ॥

॥ ಪದಪಾಠಃ ॥

ವಿಷ್ಣೋಃ । ಕರ್ಮಾಣಿ । ಪಶ್ಯತ । ಯತಃ । ವ್ರತಾನಿ । ಪಸ್ಪಶೇ ॥
ಇಂದ್ರಸ್ಯ । ಯುಜ್ಯಃ । ಸಖಾ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಗಾದಯೋ ವಿಷ್ಣೋಃ ಕರ್ಮಾಣಿ ಪಾಲನಾದೀನಿ ಪಶ್ಯತ । ಯತೋ ಯೈಃ ಕರ್ಮಭಿರ್ವ್ರತಾನ್ಯಗ್ನಿಹೋತ್ರಾದೀನಿ ಪಸ್ಪಶೇ ಸರ್ವೋ ಯಜಮಾನಃ ಸ್ಪೃಷ್ಟವಾನ್ । ವಿಷ್ಣೋರನುಗ್ರಹಾದನುತಿಷ್ಠತೀತ್ಯರ್ಥಃ । ತಾದೃಶೋ ವಿಷ್ಣುರಿಂದ್ರಸ್ಯ ಯುಜ್ಯೋ ಯೋಜ್ಯೋಽನುಕೂಲಃ ಸಖಾ ಭವತಿ । ವಿಷ್ಣೋರಿಂದ್ರಾನುಕೂಲ್ಯಂ ತ್ವಷ್ಟಾ ಹತಪುತ್ರ ಇತ್ಯನುವಾಕೇಽಥ ವೈ ತರ್ಹಿ ವಿಷ್ಣುರಿತ್ಯಾದಿನಾ । ತೈ. ಸಂ. ೨-೪-೧೨-೨ । ಪ್ರಪಂಚೇನ ತೈತ್ತಿರೀಯಾ ಆಮನಂತಿ ॥ ಪಸ್ಪಶೇ । ಸ್ಪಶ ಬಾಧನಸ್ಪರ್ಶನಯೋಃ । ಲಿಟ್ । ದ್ವಿರ್ಭಾವೇ ಶರ್ಪೂರ್ವಾಃ ಖಯಃ । ಪಾ. ೭-೪-೬೧ । ಇತಿ ಪಕಾರಃ ಶಿಷ್ಯತೇ । ಸಕಾರೋ ಲುಪ್ಯತೇ । ಯದ್ವೃತ್ತಯೋಗಾದನಿಘಾತಃ । ಯುಜ್ಯಃ । ಯುಜೇರ್ಬಾಹುಲಕಾತ್ಕ್ಯಪ್ । ಕಿತ್ತ್ವಾದ್ಗುಣಾಭಾವಃ । ಕ್ಯಪಃ ಪಿತ್ತ್ವಾದನುದಾತ್ತತ್ವಂ । ಧಾತುಸ್ವರಃ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಗಾದಿ ಜನರೇ,) **ಯತಃ**— ವಿಷ್ಣುವಿನ ಯಾವ ಕರ್ಮಗಳಿಂದ । (ಯಜ್ಞಮಾಡುವ ಯಜಮಾನನು) **ವ್ರತಾನಿ**— ಅಗ್ನಿಹೋತ್ರಾದಿ ಕರ್ಮಾನುಷ್ಠಾನಗಳನ್ನು । **ಪಸ್ಪಶೇ**— ಮಾಡುವನೋ (ಮಾಡಿದನೋ) ।

(ಅಂತಹ) **ವಿಷ್ಣೋಃ**— ವಿಷ್ಣುವಿನ । **ಕರ್ಮಾಣಿ**— ಪಾಲನಾದಿಕರ್ಮಗಳನ್ನು । **ಪಶ್ಯತ**— ನೋಡಿರಿ । (ಅಂತಹ ವಿಷ್ಣುವು) **ಇಂದ್ರಸ್ಯ**— ಇಂದ್ರನ । **ಯುಜ್ಯಃ**— ಜತೆಯಲ್ಲಿರುವ (ಅನುಕೂಲನಾದ) । **ಸಖಾ**— ಪ್ರಿಯ ಸ್ನೇಹಿತನು.

॥ ಭಾವಾರ್ಥ ॥

ಎಲೈ ಋತ್ವಿಗ್ಯಜಮಾನರಾದಿಯಾದ ಜನರೇ, ವಿಷ್ಣುವಿನ ಪಾಲನಾದಿ (ಅದ್ಭುತ) ಕರ್ಮಗಳನ್ನು ನೋಡಿರಿ. ಆ ವಿಷ್ಣುವಿನ ಮಹಿಮೆಯಿಂದಲೇ ಯಜಮಾನನು ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡಲು ಸಮರ್ಥನಾಗಿರುವನು. ಇಂತಹ ವಿಷ್ಣುವು ಇಂದ್ರನಿಗೆ ಜತೆಯಲ್ಲಿರುವ ಪರಮಮಿತ್ರನಾಗಿರುವನು.

## English Translation.

See the deeds of Vishnu, through which (the worshipper) has accomplished the pious acts ; he is the intimate friend of Indra.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಕೆಲವು ಶಬ್ದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗಿರುವುದು. **ಪಶ್ಯತ** ನೋಡಿರಿ ಎಂಬ ಪದವಿರುವುದರಿಂದ ಎಲೈ ಜನರೇ ಎಂಬ ಸಂಬೋಧನಪದವು ಅವಶ್ಯಕವು. ಹಾಗೆಯೇ ವ್ರತಾನಿ ಪಸ್ಪಶೇ-ವ್ರತಾಚರಣೆ ಮಾಡಿದನು ಎಂಬಲ್ಲಿ ಯಜಮಾನನು ಎಂಬ ಕರ್ತೃಪದವು ಅವಶ್ಯಕವು ಮತ್ತು **ಇಂದ್ರಸ್ಯ ಸಖಾ** ಎಂಬ ಪದಗಳ ಜತೆಗೆ **ವಿಷ್ಣುಃ** ಎಂಬ ಪದವೂ ಅವಶ್ಯಕವು.

**ವ್ರತಾನಿ**— ನಿಯಮವಾಗಿ ಮಾಡತಕ್ಕ ಸತ್ಕಾರ್ಯಗಳು ಎಂದರೆ ಯಜ್ಞಾದ್ಯನುಷ್ಠಾನಗಳು.

**ಪಸ್ಪಶೇ**-ಸ್ಪೃಷ್ಟವಾನ್-ಸ್ಪರ್ಶಮಾಡಿದನು ಎಂದರೆ ಉಪಕ್ರಮಿಸಿದನು. ಪ್ರಾರಂಭಮಾಡಿದನು ಎಂದರ್ಥವು.

**ಯುಜ್ಯಃ**— ಯೋಗ್ಯೋನುಕೂಲಃ ಅಥವಾ ಯೋಗ್ಯಃ ಇಂದ್ರನಿಗೆ ಅನುಕೂಲನಾದ, ಪ್ರಿಯಮಿತ್ರನಾದ, ಜತೆಯಲ್ಲಿರುವ, ಯೋಗ್ಯನಾದ ಎಂದರ್ಥವು. ಈ ಋಕ್ಕಿನಲ್ಲಿ ಹೇಳಿರುವ ವಿಷ್ಣುವಿನ ನಾನಾವಿಧ ಸಾಹಸಕೃತ್ಯ, ಇಂದ್ರನೊಡನೆ ವಿಷ್ಣುವಿನ ಸ್ನೇಹ, ಇಂದ್ರವಿಷ್ಣುಗಳನ್ನು ಜತೆಯಲ್ಲಿ ಆಹ್ವಾನಮಾಡುವುದು ಮೊದಲಾದ ವಿಷಯ ಗಳನ್ನು ತಿಳಿಸುವ ತೈತ್ತಿರೀಯ ಸಂಹಿತೆಯ (ತೈ. ಸಂ. ೨-೪-೧೨) ಒಂದು ಅನುವಾಕವನ್ನು ಭಾಷ್ಯಕಾರರು ಉದಾ ಹರಿಸಿರುವರು. ಅದರ ಮುಖ್ಯಾಭಿಪ್ರಾಯವು ಹೀಗಿರುವುದು—

ತ್ವಷ್ಟೃ ಪ್ರಜಾಪತಿಗೆ ವಿಶ್ವರೂಪನೆಂಬ ಪುತ್ರನಿದ್ದನು. ಅವನು ದೇವತೆಗಳಿಗೆ ಪುರೋಹಿತನಾಗಿದ್ದರೂ ಅಸುರರಲ್ಲಿಯೂ ಅಭಿಮಾನವುಳ್ಳವನಾಗಿ ಅವರಿಗೂ ಯಜ್ಞಾದಿಗಳಲ್ಲಿ ಭಾಗವನ್ನು ಕೊಡಬೇಕೆಂದು ಹೇಳುತ್ತಿದ್ದನು. ಇದನ್ನು ತಿಳಿದು ಇಂದ್ರನು, ಈ ವಿಶ್ವರೂಪನು ಕಾಲಕ್ರಮದಲ್ಲಿ ತನ್ನ ಸ್ವರ್ಗಾಧಿಪತ್ಯವನ್ನು ಅಸುರರಿಗೆ ಕೊಡಬಹು ದೆಂದು ಊಹಿಸಿ ಅಸುರಪಕ್ಷಪಾತಿಯಾದ ಈ ವಿಶ್ವರೂಪನನ್ನು ಸಂಹಾರಮಾಡಿದನು. ತನ್ನ ಪುತ್ರನ ಸಂಹಾರದಿಂದ

ಕೋಪಗೊಂಡ ತ್ವಷ್ಟೃವು ತನಗೆ ಇಂದ್ರನನ್ನು ಸಂಹಾರಮಾಡತಕ್ಕ ಪುತ್ರನಾಗಬೇಕೆಂದು ಬಯಸಿ ಅದಕ್ಕಾಗಿ ಯಜ್ಞ ಮಾಡಿದನು. ಯಜ್ಞಮಾಡುವಾಗ ಇಂದ್ರನ ಮೇಲಿನ ಕೋಪದಿಂದ ಆ ಯಜ್ಞದಲ್ಲಿ ಇಂದ್ರನನ್ನು ಸೋಮಪಾನ ಕ್ಕಾಗಿ ಆಹ್ವಾನ ಮಾಡಲಿಲ್ಲ. ತನ್ನನ್ನೂ ಯಜ್ಞಕ್ಕೆ ಆಹ್ವಾನಮಾಡಬೇಕೆಂದು ಇಂದ್ರನು ಹೇಳಲು ತ್ವಷ್ಟೃವು ಇಂದ್ರನನ್ನು ಕುರಿತು—ನೀನು ನನ್ನ ಪುತ್ರನನ್ನು ಕೊಂದದ್ದರಿಂದ ನಿನ್ನನ್ನು ಆಹ್ವಾನಮಾಡುವುದಿಲ್ಲವೆಂದು ಹೇಳಿ ಇಂದ್ರನನ್ನು ಬಿಟ್ಟೇ ಯಜ್ಞಮಾಡಿದನು. ಆದರೆ ಇಂದ್ರನು ಅವನ ಯಜ್ಞಕ್ಕೆ ತೊಂದರೆಯನ್ನು ಮಾಡಿ ಬಲಾ ತ್ಕಾರದಿಂದ ತ್ವಷ್ಟೃವಿನ ಅನುಮತಿಯಿಲ್ಲದೆ ಸೋಮಪಾನಮಾಡಿದನು. ಬಳಿಕ ತ್ವಷ್ಟೃವು ಇಂದ್ರನು ಪಾನಮಾಡಿ ಮಿಕ್ಕ ಸೋಮ ಶೇಷವನ್ನೇ ತೆಗೆದುಕೊಂಡು ಆಹವನೀಯಾಗ್ನಿಯ ಸಮೀಪಕ್ಕೆ ಹೋಗಿ ಅದನ್ನು ಚೆನ್ನಾಗಿ ಉರಿಯು ವಂತೆ ಉದ್ದೀಪನಗೊಳಿಸಿ ಆ ಅಗ್ನಿಯಲ್ಲಿ, ತನಗೆ ಇಂದ್ರನನ್ನು ಕೊಲ್ಲುವ ಮಗನಾಗಬೇಕೆಂಬ ಅರ್ಥಬರುವ **'ಸ್ವಾಹೇಂದ್ರಶತ್ರುರ್ವರ್ಧಸ್ವ'** ಎಂಬ ಮಂತ್ರದಿಂದ ಹೋಮಮಾಡಿದನು ಆದರೆ **ಇಂದ್ರಶತ್ರುಃ** ಎಂಬ ಶಬ್ದವನ್ನು ಉಚ್ಚಾರಮಾಡುವಾಗ ಸ್ವರ ವ್ಯತ್ಯಾಸವಾದುದರಿಂದ ಮಂತ್ರದ ಅರ್ಥವೂ ವ್ಯತ್ಯಾಸವಾಗಿ ಇಂದ್ರನನ್ನು ಕೊಲ್ಲುವ ಮಗನೆಂಬುದಕ್ಕೆ ಬದಲಾಗಿ ಇಂದ್ರನಿಂದ ಕೊಲ್ಲಲ್ಪಡುವ ಮಗನೆಂದು ಅರ್ಥವಾಗಿ ಅದರಂತೆ ವೃತ್ರನೆಂಬ ಪುತ್ರನು ಉತ್ಪನ್ನನಾದನು. ಈ ಮಧ್ಯೆ ಯಜ್ಞದಲ್ಲಿ ಪ್ರತಿಷ್ಠಿತನಾದ ಅಗ್ನಿಯು-ಈ ಯಜ್ಞದಲ್ಲಿ ಹುಟ್ಟುವ ವೃತ್ರನು ಊರ್ಧ್ವಲೋಕಕ್ಕೆ ಹೋಗಿ ದೇವತೆಗಳನ್ನು ಬಾಧಿಸುವನೆಂದು ತಿಳಿದು ಯಜ್ಞ ಪೂರ್ತಿಯಾಗುವುದಕ್ಕೆ ಮುಂಚೆಯೇ ಆರಿಹೋಗಿ ಯಜ್ಞಭಂಗವನ್ನು ಮಾಡಿದನು. ಯಜ್ಞದಲ್ಲಿ ಅಗ್ನಿಯು ಜ್ವಾಲೆಗಳಿಂದ ಕೂಡಿ ಪ್ರಕಾಶಮಾನವಾಗಿ ಧಗಧಗನೆ ಉರಿಯತೊಡಗಿದರೆ ಯಜ್ಞಮಾಡುವ ಯಜಮಾನನ ಇಷ್ಟಸಿದ್ಧಿಯಾಗುವುದೆಂದೂ, ಅಗ್ನಿಯು ಚೆನ್ನಾಗಿ ಉರಿಯದೆ ಆರಿಹೋದಲ್ಲಿ ಯಜಮಾನನಿಗೆ ಅನಿಷ್ಟವನ್ನು ಸೂಚಿಸುವುದೆಂದೂ ಹೇಳಲ್ಪಡುವುದು. ಆದುದರಿಂದ ಯಜ್ಞಾಹುತಿಯಿಂದ ಉತ್ಪನ್ನನಾದ ವೃತ್ರನು ಇಂದ್ರನನ್ನು ಕೊಲ್ಲುವುದಕ್ಕೆ ಬದಲಾಗಿ ಇಂದ್ರನಿಂದ ಕೊಲ್ಲಲ್ಪಡುವಂತೆ ಆದನು. ಬಳಿಕ ಆ ವೃತ್ರನು ಬೇಗಬೇಗನೆ ಜಗತ್ತೆಲ್ಲವನ್ನೂ ವ್ಯಾಪಿಸಿ ಪ್ರತಿದಿನವೂ ಬಿಲ್ಲಿನಿಂದ ಬಾಣವು ಹೋಗಿ ಬೀಳುವಷ್ಟು ಪ್ರಮಾಣದಂತೆ ಬೆಳೆಯಲುಪಕ್ರಮಿಸಿದನು. ಹೀಗೆ ತನ್ನ ಶರೀರದ ಬೆಳವಣಿಗೆಯಿಂದ ಜಗತ್ತನ್ನು ವ್ಯಾಪಿಸುತ್ತಿದ್ದುದರಿಂದ ಇವನಿಗೆ ವೃತ್ರನೆಂದು ಹೆಸರಾಯಿತು. ಇದನ್ನು ಕಂಡು ಇಂದ್ರನು ಹೆದರಿದನು. ತಂದೆಯಾದ ತ್ವಷ್ಟೃವಿಗೂ ಭಯವುಂಟಾಯಿತು. ಆಗ ತ್ವಷ್ಟೃವು ಒಂದು ದಿವ್ಯವಾದ ವಜ್ರಾಯುಧವನ್ನು ನಿರ್ಮಿಸಿ ಅದನ್ನು ಅಭಿಮಂತ್ರಿಸಿ ಇಂದ್ರನಿಗೆ ಕೊಟ್ಟನು. ಆ ತಪೋರೂಪವಾದ ಮಹಾ ವಜ್ರಾಯುಧವನ್ನು ಎತ್ತುವುದಕ್ಕೂ ಇಂದ್ರನಿಗೆ ಶಕ್ತಿಯಿಲ್ಲವಾಯಿತು. ಅದನ್ನು ಕಂಡು ಇದಕ್ಕೇನು ಮಾಡಬೇಕೆಂದು ಯೋಚಿಸುತ್ತಿರುವಲ್ಲಿ ವಿಷ್ಣುವು ಇಂದ್ರನಿಗೆ ಪ್ರತ್ಯಕ್ಷನಾದನು. ಆಗ ಇಂದ್ರನು ವಿಷ್ಣುವನ್ನು ಇಂತು ಪ್ರಾರ್ಥಿಸಿದನು—ಎಲೈ ವಿಷ್ಣುವೇ, ವೃತ್ರಾಸುರನ ಶಕ್ತಿ ಸಾಮರ್ಥ್ಯವನ್ನು ನೋಡಿ ನನಗೆ ಬಹಳ ಭಯವಾಗಿದೆ. ಆದುದರಿಂದ ಈ ವಜ್ರಾಯುಧವನ್ನು ಕೈಯಿಂದ ಎತ್ತುವು ದಕ್ಕೂ ನನಗೆ ಶಕ್ತಿಯಿಲ್ಲ. ಆದುದರಿಂದ ನಾವಿಬ್ಬರೂ ಸೇರಿ ಈ ವೃತ್ರಾಸುರನಿಗೆ ಇರುವ ಜಗದ್ವ್ಯಾಪ್ತಿತ್ವಶಕ್ತಿಯನ್ನು ಅಪಹರಿಸೋಣ. ಇದಕ್ಕೆ ನೀನು ಸಹಾಯಮಾಡಬೇಕು ಎಂದು ಪ್ರಾರ್ಥಿಸಲು, ಆಗ ವಿಷ್ಣುವು ಹಾಗೆಯೇ ಮಾಡುವೆ ನೆಂದೊಪ್ಪಿ ತನ್ನ ಶರೀರವನ್ನು (ಅಥವಾ ತನ್ನ ಶಕ್ತಿಸಾಮರ್ಥ್ಯವನ್ನು) ಮೂರು ಭಾಗವನ್ನಾಗಿ ಮಾಡಿ ಪೃಥಿವ್ಯಂತರಿಕ್ಷ ಸ್ವರ್ಗಗಳಲ್ಲಿ ಇಟ್ಟನು. ಬಳಿಕ ಇಂದ್ರನು ಪೃಥಿವಿಯ ಮೇಲಿದ್ದ ವಿಷ್ಣುವಿನ ಮೂರನೇ ಭಾಗವಾದ ಶರೀರದಿಂದ ಸಹಿತನಾಗಿ ವಿಷ್ಣುವಿನ ಹಿಂದುಗಡೆ ಬಿದ್ದಿದ್ದ ವಜ್ರಾಯುಧವನ್ನು ಕೈಯಿಂದ ಎತ್ತಿ ತೆಗೆದುಕೊಂಡನು. ಆಗ ವೃತ್ರನು

ಹೆದರಿ ಇಂದ್ರನನ್ನು ಕುರಿತು-ಎಲೈ ಇಂದ್ರನೇ, ನನ್ನ ಶರೀರವನ್ನು ಪ್ರಹರಿಸಬೇಡ. ಭೂಮಿಯಲ್ಲಿ ವ್ಯಾಪ್ತವಾಗಿರುವ ನನ್ನ ವೀರ್ಯವೆಲ್ಲವನ್ನು (ಶಕ್ತಿಯನ್ನು) ನಿನಗೆ ಕೊಡುವೆನೆಂದು ಹೇಳಿ ಅದರಂತೆ ಭೂಮಿಯಲ್ಲಿದ್ದ ತನ್ನ ಶಕ್ತಿಯೆಲ್ಲವನ್ನೂ ಇಂದ್ರನಿಗೆ ಕೊಟ್ಟನು. ಇಂದ್ರನು ಅದನ್ನು ಸ್ವೀಕರಿಸಿ ವಿಷ್ಣುವಿಗೆ ಕೊಟ್ಟನು. ವಿಷ್ಣುವೂ ಅದನ್ನು ಸ್ವೀಕರಿಸಿದನು ಹಾಗೆಯೇ ಅಂತರಿಕ್ಷ ಮತ್ತು ಸ್ವರ್ಗಲೋಕಗಳಲ್ಲಿದ್ದ ವೃತ್ರನ ವೀರ್ಯವನ್ನು ಇಂದ್ರನು ಸ್ವೀಕರಿಸಿ ವಿಷ್ಣುವಿಗೆ ಕೊಟ್ಟನು. ಅನಂತರ ವೃತ್ರನು ಇಂದ್ರನನ್ನುದ್ದೇಶಿಸಿ ನಾವಿಬ್ಬರೂ ಸಂಧಿಯನ್ನು ಮಾಡಿಕೊಳ್ಳೋಣ ನಿನ್ನ ಶರೀರವನ್ನು ನಾನು ಪ್ರವೇಶಮಾಡಲು ಅನುಮತಿಯನ್ನು ಕೊಡು ಎಂದು ಕೇಳಲು ಇಂದ್ರನು, ನನ್ನ ಶರೀರವನ್ನು ಪ್ರವೇಶಿಸಿ ನೀನು ಮಾಡುವುದೇನು? ನನ್ನನ್ನೇ ತಿಂದು ಹಾಕುವೆಯಲ್ಲವೇ ಎನ್ನಲು,? ವೃತ್ರನು--ಹಾಗಲ್ಲ, ನಾನು ನಿನ್ನ ಉದರದಲ್ಲಿ ಜಠರಾಗ್ನಿರೂಪದಲ್ಲಿದ್ದುಕೊಂಡು ನೀನು ತಿನ್ನುವ ಆಹಾರಾದಿಗಳನ್ನು ಪಚನಗೊಳಿಸುತ್ತಾ ನಿನ್ನ ಭೋಗಾರ್ಥವಾಗಿ ಇರುವೆನೆಂದು ಹೇಳಿ ಇಂದ್ರನ ಶರೀರವನ್ನು ಪ್ರವೇಶಿಸಿದನು. ಆಗಿನಿಂದ ವೃತ್ರನು ಮನುಷ್ಯರ ಉದರಗಳಲ್ಲಿ ಕ್ಷುದ್ರೂಪದಿಂದ (ಹಸಿವು) ಇರುತ್ತಾ ಪ್ರಾಣಿಗಳಿಗೆ ತೊಂದರೆಯನ್ನು ಕೊಡುತ್ತಿರುವನು. ಹಿಂದೆ ಹೇಳಿದಂತೆ ಇಂದ್ರನು ವೃತ್ರನಿಂದ ಮೂರಾವೃತ್ತಿ ವೀರ್ಯವನ್ನು ಸ್ವೀಕರಿಸಿ ವಿಷ್ಣುವಿಗೆ ಕೊಟ್ಟದ್ದರಿಂದ ಇಂದ್ರಾವಿಷ್ಣುಗಳನ್ನುದ್ದೇಶಿಸಿ ಹೋಮಮಾಡುವ ಪುರೋಡಾಶವೆಂಬ ಹವಿಸ್ಸಿಗೆ ತ್ರಿಧಾತುಯುಕ್ತವೆಂದು ಹೆಸರಾಯಿತು. ಮತ್ತು ಈ ವಿಧವಾದ ಹವಿಸ್ಸನ್ನು ಸಮರ್ಪಿಸುವಾಗ ಇಂದ್ರ ಮತ್ತು ವಿಷ್ಣುಗಳಿಬ್ಬರನ್ನು ಜತೆಯಲ್ಲಿ ಸೇರಿಸಿ ಆಹ್ವಾನಮಾಡಿ ಹೋಮಮಾಡುವುದು ರೂಢಿಯಾಯಿತು. ಈ ಉಪಾಖ್ಯಾನವು ವಿಷ್ಣುವಿನ ಕರ್ಮಗಳನ್ನೂ, ಇಂದ್ರನಿಗೆ ವಿಷ್ಣುವಿನಲ್ಲಿದ್ದ ಸ್ನೇಹಭಾವವನ್ನೂ, ಸೂಚಿಸುವುದಾಗಿರುವುದರಿಂದ ಭಾಷ್ಯಕಾರರು ಈ ಸೂಕ್ತವನ್ನು ಉದಾಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಪಸ್ಪಶೇ**—'**ಸ್ಪಶ ಬಾಧನಸ್ಪರ್ಶನಯೋಃ**' ಧಾತು-ಇದರ ಮುಂದೆ ಲಿಟ್ '**ಲಿಟಿಧಾತೋರನಭ್ಯಾಸಸ್ಯ**' (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ. ಸ್ಪಶ್+ಸ್ಪಶ್+ಲಿಟ್, '**ಹಲಾದಿಶೇಷಃ**' (ಪಾ. ಸೂ. ೭-೪-೬೦) ಎಂಬುದರಿಂದ ಅಭ್ಯಾಸದ ಆದಿವರ್ಣಕ್ಕೆ ಶೇಷವು ಪ್ರಾಪ್ತವಾಗುತ್ತೆ. ಆದರೆ ಅದಕ್ಕೆ ಅಪವಾದವಾದ '**ಶರ್ಪೂರ್ವಾಃಖಯಃ**' (ಪಾ. ಸೂ. ೭-೪-೬೧) ಅಭ್ಯಾಸದ ಶ-ಷ-ಸ ಇವುಗಳ ಮುಂದೆ ಇರುವ ಖ-ಫ-ಛ-ಠ-ಥ-ಚ-ಟ-ತ-ಕ-ಪ ವರ್ಣಗಳು ಉಳಿಯುವುವು ಎಂಬುದರಿಂದ ಪಕಾರವೇ ಉಳಿದರೆ ಅರ್ಥಿಕವಾಗಿ ಆದಿಯಾದ ಸಕಾರಕ್ಕೆ ಲೋಪಬರುವುದು. ಪ+ಸ್ಪಶ್-ಲಿಟ್, ಲಿಟ್‌ಗೆ '**ತ**' ಆದೇಶ '**ಲಿಟಸ್ತಝಯೋರೇಶಿರೇಚ್**' (ಪಾ. ಸೂ. ೩-೪-೮೧) ಎಂಬುದರಿಂದ '**ತ**'ಗೆ ಏಶ್ ಆದೇಶ ಪಸ್ಪಶೇ ಎಂದಾಗುತ್ತೆ. '**ಯದ್ವೃತ್ತಾನ್ನಿತ್ಯಮ್**' (ಪಾ. ಸೂ. ೮-೧-೬೬) ಯಾವ ಪದದಲ್ಲಿ ಯಚ್ಛಬ್ದವಿದೆಯೋ ಆ ಪದದ ಮುಂದೆ ಇರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ನಿಷೇಧವಿರುವುದರಿಂದ '**ಯತೋ ವ್ರತಾನಿ ಪಸ್ಪಶೇ**' ಎಂಬಲ್ಲಿ ಯತಃ ಪದದ ಪರದಲ್ಲಿ ಇರುವ ಪಸ್ಪಶೇ ಎಂಬುದಕ್ಕೆ ಅನುದಾತ್ತಬರುವುದಿಲ್ಲ. '**ಪೂಜನಾತ್ಪೂಜಿತಮನುದಾತ್ತಮ್**' (ಪಾ. ಸೂ. ೮-೧-೬೭) ಎಂಬಲ್ಲಿ ಪುನಃಪೂಜಿತಗ್ರಹಣವಿರುವುದರಿಂದ '**ಅತ್ರಪ್ರಕರಣೇ ಪಂಚಮೀನಿರ್ದೇಶೇಽಪಿನಾನನ್ತರ್ಯಮಿಷ್ಯತೇ**' ಎಂದು ಜ್ಞಾಪಿತವಾಗಿದೆ. ಆದ್ದರಿಂದ '**ವ್ರತಾನಿ**' ಎಂಬ ಪದದಿಂದ ವ್ಯವಧಾನವಿದ್ದರೂ ಅನುದಾತ್ತನಿಷೇಧಬರುವುದು.

**ಯುಜ್ಯಃ**—**‘ ಉಣಾದಯೋ ಬಹುಲಂ ’** (ಪಾ. ಸೂ. ೩-೩-೧) ಬಹುಲಗ್ರಹಣವಿರುವುದರಿಂದ ಯುಜ್‌ಧಾತುವಿನ ಮುಂದೆ ಔಣಾದಿಕವಾದ ಕ್ಯಪ್‌ಪ್ರತ್ಯಯ ಬರುತ್ತೆ. ಪ್ರತ್ಯಯವು ಕಿತ್ತಾದ್ದರಿಂದ **‘ ಕ್ಙಿತಿಚ ’** (ಪಾ. ಸೂ. ೧-೧-೫) ಎಂದು ನಿಷೇಧಬರುವುದರಿಂದ **‘ ಪುಗಂತಲಘೂಪಧಸ್ಯಚ ’** (ಪಾ ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ ಬರುವುದಿಲ್ಲ. ಕ್ಯಪ್ ಪಿತ್ತು ಆದ್ದರಿಂದ **‘ ಅನುದಾತ್ತೌಸುಪ್ಪಿತೌ ’** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಏವಂಚ ಯುಜ್ ಎಂಬಲ್ಲಿಯು ಉಕಾರವು **‘ ಧಾತೋಃ ’** (ಪಾ. ಸೂ. ೬-೧-೧೬೨) ಎಂಬ ಧಾತುಸ್ವರದಿಂದ ಉದಾತ್ತವಾಗಿ ನಿಲ್ಲುವುದು. ॥ ೧೯ ॥

॥ ಸಂಹಿತಾಪಾಠಃ ॥

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ದಿವೀವ ಚಕ್ಷುರಾತತಂ ॥ ೨೦ ॥

॥ ಪದಪಾಠಃ ॥

ತತ್ । ವಿಷ್ಣೋಃ । ಪರಮಂ । ಪದಂ । ಸದಾ । ಪಶ್ಯಂತಿ । ಸೂರಯಃ ॥
ದಿವಿಽಇವ । ಚಕ್ಷುಃ । ಆಽತತಂ ॥ ೨೦ ॥

॥ ಸಾಯಣಭಾಷ್ಯಂ ॥

ಸೂರಯೋ ವಿದ್ವಾಂಸ ಋತ್ವಿಗಾದಯೋ ವಿಷ್ಣೋಃ ಸಂಬಂಧಿ ಪರಮಮುತ್ಕೃಷ್ಟಂ ತಚ್ಛಾಸ್ತ್ರಪ್ರಸಿದ್ಧಂ । ಪದಂ ಸ್ವರ್ಗಸ್ಥಾನಂ ಶಾಸ್ತ್ರದೃಷ್ಟ್ಯಾ ಸರ್ವದಾ ಪಶ್ಯಂತಿ । ತತ್ರ ದೃಷ್ಟಾಂತಃ । ದಿವೀವ । ಆಕಾಶೇ ಯಥಾತತಂ ಸರ್ವತಃ ಪ್ರಸೃತಂ ಚಕ್ಷುರ್ನಿರೋಧಾಭಾವೇನ ವಿಶದಂ ಪಶ್ಯತಿ । ತದ್ವತ್ ॥ ಸದಾ । ಸರ್ವೈಕಾನ್ಯೇತಿ । ಪಾ. ೫-೩-೧೫ । ದಾಪ್ರತ್ಯಯಃ । ಸರ್ವಸ್ಯ ಸೋಽನ್ಯತರಸ್ಯಾಂ ದಿ । ಪಾ. ೫-೩-೬ । ಇತಿ ಸರ್ವಶಬ್ದಸ್ಯ ಸಭಾವಃ । ವ್ಯತ್ಯಯೇನಾದ್ಯುದಾತ್ತತ್ವಂ । ದಿವಿ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ತದೇವ ಶಿಷ್ಯತೇ । ಚಕ್ಷುಃ । ನಬ್ವಿಷಯಸ್ಯೇತ್ಯಾದ್ಯುದಾತ್ತತ್ವಂ । ಆತತಂ । ತನೋತೇಃ ಕರ್ಮಣಿ ಕ್ತಃ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಅನುದಾತ್ತೋಪದೇಶೇತ್ಯಾದಿನಾ ನಲೋಪಃ । ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತೇ ಗತಿರನಂತರ ಇತಿ ಗತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಸೂರಯಃ**—ವಿದ್ವಾಂಸರು । **ವಿಷ್ಣೋಃ**—ವಿಷ್ಣುವಿನ । **ತತ್**—ಆ । **ಪರಮಂ**—ಉತ್ಕೃಷ್ಟವಾದ । **ಪದಂ**—ಸ್ಥಾನವನ್ನು (ಸ್ವರ್ಗವನ್ನು ?) । **ದಿವಿ**—ಆಕಾಶದಲ್ಲಿ । **ಆತತಂ**—ವ್ಯಾಪ್ತವಾದ (ಪ್ರಸರಿಸಿದ) । **ಚಕ್ಷುರಿವ**—ಕಣ್ಣಿನಂತೆ । **ಸದಾ**—ಸರ್ವಕಾಲದಲ್ಲಿಯೂ । **ಪಶ್ಯಂತಿ**—ನೋಡುತ್ತಾರೆ.

॥ ಭಾವಾರ್ಥ ॥

ಆಕಾಶವು ಬಹು ವಿಸ್ತಾರವಾಗಿರುವುದರಿಂದ ಅದರಲ್ಲಿ ನೆಟ್ಟ ದೃಷ್ಟಿಯು ಎಲ್ಲವನ್ನೂ ನೋಡುವಂತೆ ವಿದ್ವಾಂಸರಾದವರು ವಿಷ್ಣುವಿನ ಪರಮಪದವೆಂದು ಹೇಳಲ್ಪಡುವ ಸ್ಥಾನವನ್ನು (ಸ್ವರ್ಗ ಅಥವಾ ವೈಕುಂಠ?) ಸದಾ ನೋಡುವರು.

## English Translation.

The wise always contemplate that supreme place of Vishnu as the eye fixed in broad heaven.

॥ ವಿಶೇಷವಿಷಯಗಳು ॥

**ಪರಮಂ ಪದಂ**—ಉತ್ಕೃಷ್ಟವಾದ ಸ್ಥಾನವು. ಭಾಷ್ಯಕಾರರು ಸ್ವರ್ಗವೆಂದು ಅರ್ಥಮಾಡಿರುವರು. ಸ್ಕಂದಸ್ವಾಮಿಯು ವಿಷ್ಣುವೆಂದರೆ ಆದಿತ್ಯನೆಂದು ಅರ್ಥಮಾಡಿ **ವಿಷ್ಣೋಃ ಪರಮಂ ಪದಂ** ಎಂದರೆ ಪ್ರಕಾಶಮಾನವಾದ ಸೂರ್ಯಮಂಡಲವೆಂದು ಹೇಳಿರುವರು. ಕೆಲವರು ಪುರಾಣಾದಿಗಳಲ್ಲಿ ಹೇಳಿರುವಂತೆ ವಿಷ್ಣುವಿನ ಪರಮಪದವೆಂದರೆ ವೈಕುಂಠಲೋಕವೆಂದು ಅಭಿಪ್ರಾಯಪಡುವರು. ಆದರೆ ಪುರಾಣಪ್ರಸಿದ್ಧವಾದ ಆ ಅರ್ಥವು ಇಲ್ಲಿ ಹೊಂದುವುದಿಲ್ಲ. ವೇದಾರ್ಥಯತ್ನಕಾರರು ಪದಂ ಎಂಬ ಶಬ್ದಕ್ಕೆ ಹಿಂದೆ ಹೇಳಿದಂತೆ **ತ್ರೀಣಿ ಪದಾ**-ಮೂರು ಪಾದವಿಕ್ಷೇಪಗಳು ಎಂದರ್ಥ ಮಾಡಿರುವರು. ಈ **ಪರಮಂ ಪದಂ** ಎಂಬ ಶಬ್ದಗಳು ಮುಂದಿನ ಋಕ್ಕಿನಲ್ಲಿಯೂ ಪಠಿತವಾಗಿದೆ.

**ದಿವೀವ ಚಕ್ಷುರಾತತಂ**—ಆಕಾಶದಲ್ಲಿ ನೆಟ್ಟ ದೃಷ್ಟಿಯು ಬಹುದೂರದ ವರೆಗೆ ನೋಡಬಲ್ಲದು. ಎಂದರೆ ಬಹುದೂರದಲ್ಲಿರುವ ವಸ್ತುವನ್ನೂ ನೋಡುವ ಶಕ್ತಿಯು ಕಣ್ಣಿಗಿರುವಂತೆ ಪ್ರಾಜ್ಞರಾದವರಿಗೆ ವಿಷ್ಣುವಿನ ಶ್ರೇಷ್ಠ ಸ್ಥಾನವನ್ನು ನೋಡುವ ಅಥವಾ ತಿಳಿದುಕೊಳ್ಳುವ ಸಾಮರ್ಥ್ಯವಿರುವುದೆಂದು ಭಾವವು.

॥ ವ್ಯಾಕರಣಪ್ರಕ್ರಿಯಾ ॥

**ಸದಾ**—ಸರ್ವಸ್ಮಿನ್ ಕಾಲೇ ಎಂದು ವಿಗ್ರಹ '**ಸರ್ವೈಕಾನ್ಯಕಿಂಯತ್ತದಃ ಕಾಲೇದಾ**' (ಪಾ. ಸೂ. ೫-೩-೧೫) ಸಪ್ತಮ್ಯಂತಗಳೂ ಕಾಲಾರ್ಥದಲ್ಲಿರುವುವೂ ಆದ ಸರ್ವ, ಏಕ, ಅನ್ಯ, ಕಿಮ್, ಯತ್, ತದ್ ಶಬ್ದಗಳ ಮುಂದೆ ಸ್ವಾರ್ಥದಲ್ಲಿ ದಾಪ್ರತ್ಯಯು ಬರುತ್ತದೆ ಎಂಬುದರಿಂದ ಸರ್ವಸ್ಮಿನ್ ಎಂಬುದರ ಮುಂದೆ ದಾಪ್ರತ್ಯಯು ಸರ್ವ+ಙಿ+ದಾ, ತದ್ಧಿತಾಂತವಾದ್ದರಿಂದ '**ಕೃತ್ತದ್ಧಿತಸಮಾಸಾಶ್ಚ**' (ಪಾ. ಸೂ. ೧-೨-೪೬) ಎಂಬುದರಿಂದ ಪ್ರಾತಿಪದಿಕಸಂಜ್ಞೆ ಬರಲು '**ಸುಪೋಧಾತುಪ್ರಾತಿಪದಿಕಸ್ಯ**' (ಪಾ. ಸೂ. ೨-೪-೭೧) ಎಂಬುದರಿಂದ ಙಿಗೆ

ಲುಕ್ ಸರ್ವ+ದಾ, ಈಗ **' ಸರ್ವಸ್ಯಸೋಽನ್ಯತರಸ್ಯಾಂ ದಿ '** (ಪಾ ಸೂ. ೫-೩-೬) ಪ್ರಾಗ್ದಿಶೀಯಕ್ಕೆ ಸೇರಿದ ದಕಾರಾದಿಪ್ರತ್ಯಯು ಪರದಲ್ಲಿರುವಾಗ ಸರ್ವಶಬ್ದಕ್ಕೆ ದಕಾರಾದೇಶವು ವಿಕಲ್ಪವಾಗಿ ಬರುವುದು ಎಂಬುದರಿಂದ **'ಸರ್ವ'** ಎಂಬುದಕ್ಕೆ **' ಸ '** ಆದೇಶ, ಸದಾ ಎಂದಾಗುತ್ತದೆ, ಯದ್ಯಪಿ ಇಲ್ಲಿ ಪ್ರತ್ಯಯಸ್ವರ ಬಂದು ಸದಾ ಎಂಬುದು ಅಂತೋದಾತ್ತವಾಗುವುದು ಯುಕ್ತವು. ಆದರೂ **' ವ್ಯತ್ಯಯೋ ಬಹುಲಂ '** (ಪಾ. ಸೂ. ೩-೧-೮೫) ಎಂಬುದರಿಂದ ಇಲ್ಲಿ ವ್ಯತ್ಯಾಸದಿಂದ ಆದ್ಯುದಾತ್ತವೇ ಬರುವುದು.

**ದಿವಿ**—ದಿವ್ ಶಬ್ದದ ಮುಂದೆ ಸಪ್ತಮೀ ವಿಭಕ್ತಿ ಏಕವಚನ ಙಿಪ್ರತ್ಯಯವನ್ನು ಹಚ್ಚಿದರೆ ದಿವ್+ಇ, **' ದಿವಿ '** ಎಂದಾಗುತ್ತದೆ. **' ಙಿ '** ಪ್ರತ್ಯಯವು ಸುಪ್, ಆದ್ದರಿಂದ **' ಅನುದಾತ್ತೌ ಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತವು ಪ್ರಾಪ್ತವಾಗುವುದು. ಆದರೂ **' ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ '** (ಪಾ. ಸೂ. ೬-೧-೧೭೧) ಅಂತೋದಾತ್ತಗಳೂ, ಏಕಾಚ್ಕಗಳೂ ಆದ ' ಊಠ್, ಇದಮ್, ಪತ್, ದತ್, ನಸ್, ಮಾಸ್, ಹೃತ್, ನಿಶ್ ' ಈ ಆರು ಪದಾದ್ಯಾದೇಶಗಳು ಅಪ್, ಪುಮ್, ರೈ, ದಿವ್ ಶಬ್ದಗಳ ಮುಂದೆ ಇರುವ ಅಸರ್ವನಾಮ ಸ್ಥಾನ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ, ಇಲ್ಲಿ ದಿವ್ ಎಂಬುದರ ಮುಂದಿರುವ ಅಸರ್ವನಾಮ ಸ್ಥಾನ ವಿಭಕ್ತಿಯಾದ, ಙಿಯು ಉದಾತ್ತವಾಗುವುದು. **' ಇವೇನ ವಿಭಕ್ತ್ಯಲೋಪಃ ಪೂರ್ವಪದ ಪ್ರಕೃತಿ ಸ್ವರತ್ವಂಚ '** (ಪಾ. ಸೂ. ೨-೧-೪. ವಾ. ೨) ಸುಬಂತವು ಇವ ಶಬ್ದದೊಂದಿಗೆ ನಿತ್ಯವಾಗಿ ಸಮಾಸವನ್ನು ಹೊಂದುವುದು, ಸಮಾಸದಲ್ಲಿರುವ ವಿಭಕ್ತಿಗೆ ಲೋಪವು ಬರುವುದಿಲ್ಲ. ಸಮಾಸಾನಂತರವೂ, ಪೂರ್ವಪದಕ್ಕೆ ಪ್ರಕೃತಿ ಸ್ವರವೇ ಬರುವುದು ಎಂಬುದರಿಂದ ದಿವಿ+ಇವ, ಎರಡಕ್ಕೂ ಸಮಾಸವೂ, **' ಇ '** ಎಂಬವಿಭಕ್ತಿ ಲೋಪಾಭಾವವೂ, ಪೂರ್ವಪದಕ್ಕೆ ಪ್ರಕೃತಿ ಸ್ವರವೂ ಸಹ ಬರುತ್ತೆ. **' ಚಾದಯೋಽನುದಾತ್ತಾಃ '** (ಫಿ. ಸೂ. ೮೪) ಎಂಬುದರಿಂದ ಇವ ಶಬ್ದವು ಅನುದಾತ್ತವೆಂದು **' ಸನಃ ಪಿತೇವ '** (ಋ. ಸಂ. ೧-೨-೯) ರಲ್ಲಿ ನಿರೂಪಿತವಾಗಿದೆ. **' ದಿವಿ '** ಎಂಬಲ್ಲಿರುವ ಕೊನೆಯ ಉದಾತ್ತ ಇಕಾರ, **' ಇವ '** ಎಂಬಲ್ಲಿಯ ಅನುದಾತ್ತ ಇಕಾರ ಇವೆರಡಕ್ಕೂ ಸವರ್ಣದೀರ್ಘವು ಏಕಾದೇಶವಾಗಿ ಬರುವುದು ಆದರೆ ಇಲ್ಲಿ **' ಏಕಾದೇಶ ಉದಾತ್ತೇನೋದಾತ್ತಃ '** (ಪಾ. ಸೂ. ೮-೨-೫) ಎಂಬುದರಿಂದ ಏಕಾದೇಶವು ಉದಾತ್ತವಾಗುವುದಿಲ್ಲ. ಇವ ಎಂಬ ಅನುದಾತ್ತಾದಿಯಾದ ಪದವು ಪರದಲ್ಲಿರುವುದರಿಂದ **' ಸ್ವರಿತೋ ವಾನುದಾತ್ತೇ ಪದಾದೌ '** (ಪಾ. ಸೂ. ೮-೨-೬) ಪದಾದಿಯಲ್ಲಿರುವ ಅನುದಾತ್ತವು ಪರದಲ್ಲಿದ್ದರೆ ಉದಾತ್ತದೊಂದಿಗೆ ಅನುದಾತ್ತಕ್ಕೆ ಬರುವ ಏಕಾದೇಶವು ವಿಕಲ್ಪವಾಗಿ ಸ್ವರಿತವಾಗುವುದು ಎಂಬುದರಿಂದ ಸ್ವರಿತಸ್ವರ ಬರುವುದು. ಚಕ್ಷುಃ ನಿತ್ಯನಪುಂಸಕಲಿಂಗವಾದ ಶಬ್ದ. ಆದ್ದರಿಂದ **' ನಬ್ವಿಷಯಸ್ಯಾನಿಸಂತಸ್ಯ '** (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತವಾಗುವುದು.

**ಆತತಮ್**—ಆಙ್ ಉಪಸರ್ಗ ಪೂರ್ವಕವಾದ ತನು ವಿಸ್ತಾರೇ ಧಾತುವಿನ ಮುಂದೆ ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ ಬರುವುದು. ಆತನ್+ತ, ತನು ಧಾತು. ಉಕಾರೇತ್ಸಂಜ್ಞಕವಾದ ಧಾತು ಆದ್ದರಿಂದ **' ಉದಿತೋ ವಾ '** (ಪಾ. ಸೂ. ೭-೨-೫೬) ಉದಿತ್ತಾದ ಧಾತುವಿನ ಮುಂದೆ ಇರುವ ಕ್ತ್ವಾ ಪ್ರತ್ಯಯಕ್ಕೆ ಇಡಾಗಮವು ವಿಕಲ್ಪವಾಗಿ ಬರುವುದು, ಎಂದು ಕ್ತ್ವಾ ಪ್ರತ್ಯಯಪರದಲ್ಲಿರುವಾಗ ಇಡಾಗಮವು ವೈಕಲ್ಪಿಕವಾಗಿ ವಿಹಿತವಾಗಿರುವುದು. ಆದ್ದರಿಂದ **' ಯಸ್ಯ ವಿಭಾಷಾ '** (ಪಾ. ಸೂ. ೭-೨-೧೫) ಯಾವ ಧಾತುವಿಗೆ ಕ್ವಚಿತ್ ಇಡಾಗಮವು ವಿಕಲ್ಪವಾಗಿ ವಿಹಿತವಾಗಿ

ರುವುದೋ ಆ ಧಾತುವಿನ ಮುಂದಿರುವ ಕ್ತ, ಕ್ತವತು ಪ್ರತ್ಯಯಗಳಿಗೆ ಇಡಾಗಮವು ಬರುವುದಿಲ್ಲ ಎಂಬುದರಿಂದ ಇಡಾಗಮಕ್ಕೆ ಪ್ರತಿಷೇಧ ಬರುತ್ತದೆ, ನಂತರ **'ಅನುದಾತ್ತೋಪದೇಶವನತಿ ತನೋತ್ಯಾದೀನಾಮನುನಾಸಿಕಲೋಪೋ ಝಲಿ ಕ್ಙಿತಿ'** (ಪಾ. ಸೂ. ೬-೪-೩೭) ಅನುನಾಸಿಕವನ್ನು ಕೊನೆಯಲ್ಲಿ ಹೊಂದಿರುವ, ಅನುದಾತ್ತೋಪದೇಶವಾದ ಧಾತುಗಳು, ಅಂತಹ ತನೋತ್ಯಾದಿ ಧಾತುಗಳು, ಇವುಗಳ ಅನುನಾಸಿಕಕ್ಕೂ ವನ ಧಾತುವಿನ ಅನುನಾಸಿಕಕ್ಕೂ ಝಲಾದಿಯಾಗಿ ಕಿತ್ ಅಥವಾ ಙಿತ್ ಆದ ಪ್ರತ್ಯಯಗಳು ಪರದಲ್ಲಿದ್ದರೆ ಲೋಪ ಬರುವುದು ಎಂಬುದರಿಂದ ತನ್ ಎಂಬುದರ ನ್‌ಗೆ ಲೋಪ, ಯಮಿ, ರಮಿ, ನಮಿ, ಗಮಿ, ಹನಿ, ಮನಿ, ಈ ಆರು ಧಾತುಗಳು ಅನುದಾತ್ತೋಪದೇಶಗಳು, ತನು, ಕ್ಷಣು, ಕ್ಷಿಣು, ಋಣು, ತೃಣು, ಘೃಣು, ವನು, ಮನು, ಈ ಎಂಟು ಧಾತುಗಳು ತನೋತ್ಯಾದಿ ಧಾತುಗಳು, ಏವಂಚ **'ಆತತೆ'** ಎಂದಾಯಿತು. **'ಗತಿಕಾರಕೋಪಪದಾತ್ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರದ ಪ್ರಕೃತಿಸ್ವರವು ಪ್ರಾಪ್ತವಾದರೆ, ಇದನ್ನು ಬಾಧಿಸಿ **'ಥಾಥಘಞ್‌ಕ್ತಾಜಬಿತ್ರಕಾಣಾಂ,'** (ಪಾ. ಸೂ. ೬-೧-೧೪೪) ಎಂಬುದರಿಂದ ಉತ್ತರ ಪದಾಂತೋದಾತ್ತವು ಪ್ರಾಪ್ತವಾದರೆ ಅದನ್ನೂ ಬಾಧಿಸಿ **'ಗತಿರನಂತರಃ'** (ಪಾ. ಸೂ. ೬-೨-೪೯) ಕರ್ಮಣಿ ಕ್ತ ಪ್ರತ್ಯಯಾಂತವು ಪರದಲ್ಲಿರುವಾಗ ಅವ್ಯವಹಿತವಾದ ಗತಿಯು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಆ ಎಂಬ ಗತಿಯು ಉದಾತ್ತವಾಗುವುದು ‖ ೨೦ ‖

‖ ಸಂಹಿತಾಪಾಠಃ ‖

ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ।
ವಿಷ್ಣೋರ್ಯತ್ಪರಮಂ ಪದಂ ‖ ೨೧ ‖

‖ ಪದಪಾಠಃ ‖

**ತತ್ । ವಿಪ್ರಾಸಃ । ವಿಪನ್ಯವಃ । ಜಾಗೃಽವಾಂಸಃ । ಸಂ । ಇಂಧತೇ ‖**
**ವಿಷ್ಣೋಃ । ಯತ್ । ಪರಮಂ । ಪದಂ ‖ ೨೧ ‖**

‖ ಸಾಯಣಭಾಷ್ಯಂ ‖

**ಪೂರ್ವೋಕ್ತಂ ವಿಷ್ಣೋರ್ಯತ್ಪರಮಂ ಪದಮಸ್ತಿ ತತ್ಪದಂ ವಿಪ್ರಾಸೋ ಮೇಧಾವಿನಃ ಸಮಿಂಧತೇ । ಸಮ್ಯಕ್ ದೀಪಯಂತಿ । ಕೀದೃಶಾಃ । ವಿಪನ್ಯವೋ ವಿಶೇಷೇಣ ಸ್ತೋತಾರೋ ಜಾಗೃವಾಂಸಃ ಶಬ್ದಾರ್ಥಯೋಃ ಪ್ರಮಾದರಾಹಿತ್ಯೇನ ಜಾಗರೂಕಾಃ ‖ ವಿಪ್ರಾಸಃ । ಆಜ್ಜಸೇರಸುಕ್ । ವಿಪನ್ಯವಃ । ಸ್ತುತ್ಯರ್ಥಸ್ಯ ಪನೇರ್ಬಾಹುಲಕ ಔಣಾದಿಕೋ ಯುಪ್ರತ್ಯಯಃ । ತತ್ರ ಪ್ರತ್ಯಯಸ್ವರಃ । ಜಾಗೃವಾಂಸಃ । ಜಾಗೃ ನಿದ್ರಾಕ್ಷಯೇ । ಲಿಟಃ ಕ್ವಸುಃ । ಕ್ರಾದಿನಿಯಮಾತ್ಪ್ರಾಪ್ತಸ್ಯೇಟೋ ವಸ್ವೇಕಾಜಾದ್ಘಸಾಮಿತಿ ನಿಯಮಾನ್ನಿವೃತ್ತಿಃ ‖ ೭ ‖**

॥ ಪ್ರತಿಪದಾರ್ಥ ॥

**ವಿಪನ್ಯವಃ**—ಸ್ತೋತ್ರಮಾಡುವ । **ವಿಪ್ರಾಸಃ**—ಬುದ್ಧಿವಂತರಾದ ಜನರು । **ವಿಷ್ಣೋಃ**—ವಿಷ್ಣುವಿನ । **ಯತ್**—ಹಿಂದೆ ಹೇಳಲ್ಪಟ್ಟ ಯಾವ । **ಪರಮಂ ಪದಂ**—ಉತ್ಕೃಷ್ಟವಾದ ಸ್ಥಾನವಿರುವುದೋ । **ತತ್**—ಅದನ್ನು । **ಜಾಗೃವಾಂಸಃ**—ಜಾಗರೂಕರಾಗಿ (ಬಹಳ ಎಚ್ಚರಿಕೆಯುಳ್ಳವರಾಗಿ । **ಸಂ ಇಂಧತೇ**—ಸ್ತೋತ್ರಗಳಿಂದ ಉದ್ದೀಪನಗೊಳಿಸುವರು ಎಂದರೆ ಪ್ರಶಂಸೆಮಾಡುವರು.

॥ ಭಾವಾರ್ಥ ॥

ಬುದ್ಧಿವಂತರಾದ ವಿವೇಕಿಗಳು ಹಿಂದೆ ಹೇಳಿದ ವಿಷ್ಣುವಿನ ಪರಮಪದವೆಂಬ ಉತ್ಕೃಷ್ಟಸ್ಥಾನವನ್ನು ಸ್ತೋತ್ರಾದಿಗಳಿಂದ ಬಹಳವಾಗಿ ಪ್ರಶಂಸೆಮಾಡುವರು.

## English Translation.

The wise, vigilant and full of praises, glorify the supreme place of Vishnu.

॥ ವಿಶೇಷವಿಷಯಗಳು ॥

**ವಿಪ್ರಾಸಃ**—**ಮೇಧಾವಿನಃ,** ಬುದ್ಧಿವಂತರು, ವಿವೇಕಿಗಳು, ಪ್ರಜ್ಞಾಶಾಲಿಗಳು ಇತ್ಯಾದಿ.

**ವಿಪನ್ಯವಃ**—**ಸ್ತುತಿಕಾಮಾಃ,** ಸ್ತೋತ್ರಮಾಡಲಪೇಕ್ಷಿಸುವವರು, ಪ್ರಶಂಸೆಮಾಡುವವರು.

**ಜಾಗೃವಾಂಸಃ**—**ಜಾಗೃ ನಿದ್ರಾಕ್ಷಯೇ.** ಜಾಗರೂಕರು, ಎಚ್ಚರಿಕೆಯಿಂದ ಇರುವವರು.

**ಸಂ ಇಂಧತೇ**—ಉದ್ದೀಪನಗೊಳಿಸುವರು, ಕಾಂತಿಯನ್ನು ಹೆಚ್ಚಿಸುವರು ಎಂದರೆ ಸ್ತೋತ್ರಾದಿಗಳಿಂದ ಪ್ರಶಂಸೆಮಾಡುವರು.

॥ ವ್ಯಾಕರಣಪ್ರಕ್ರಿಯಾ ॥

**ವಿಪ್ರಾಸಃ**—ವಿಪ್ರ ಶಬ್ದದ ಮುಂದೆ ಪ್ರಥಮಾ ವಿಭಕ್ತಿ ಬಹುವಚನ ಜಸ್, ವಿಪ್ರ+ಜಸ್, ಜಕಾರಕ್ಕೆ ಇತ್ಸಂಜ್ಞೆ, ಲೋಪ, ' **ಆಜ್ಜಸೇರಸುಕ್** ' (ಪಾ. ಸೂ. ೭-೧-೫೦) ಅವರ್ಣಾಂತ ಶಬ್ದದ ಮುಂದೆ ಇರುವ ಜಸ್‌ಗೆ ಅಸುಕ್ ಆಗಮ ಬರುವುದು ಎಂಬುದರಿಂದ ಜಸ್‌ಗೆ ಅಸುಕ್ ಆಗಮ. ಅದು ಕಿತ್ತಾದ್ದರಿಂದ ' **ಆದ್ಯನ್ತೌಟಕಿತೌ** ' (ಪಾ. ಸೂ. ೧-೧-೪೬) ಎಂಬ ಪರಿಭಾಷಾನುಸಾರ ಜಸ್‌ಗೆ ಅಂತಾವಯವವಾಗಿ ಬರುತ್ತೆ ವಿಪ್ರ+ಅಸ್‌ಅಸ್, ' **ಪ್ರಥಮಯೋಃ ಪೂರ್ವಸವರ್ಣಃ** ' (ಪಾ. ಸೂ. ೬-೧-೧೦೨) ಎಂಬುದರಿಂದ ಪೂರ್ವಸವರ್ಣದೀರ್ಘ, ಸಕಾರಕ್ಕೆ ರುತ್ವ ವಿಸರ್ಗಗಳು, ವಿಪ್ರಾಸಃ ಎಂದು ಸಿದ್ಧವಾಗುತ್ತೆ.

**ವಿಪನ್ಯವಃ**—ಪಣ ವ್ಯವಹಾರೇ ಸ್ತುತೌ ಚ, ಪನ ಚ, ಎಂದು ಪನ ಧಾತು ವ್ಯವಹಾರ ಮತ್ತು ಸ್ತುತಿ ಎಂಬ ಅರ್ಥಗಳಲ್ಲಿ ಪಠಿತವಾಗಿದೆ. ಇಲ್ಲಿ ಸ್ತುತ್ಯರ್ಥಕವಾದ ಪನ ಧಾತುವು ಗ್ರಾಹ್ಯವು ಅದರ ಮುಂದೆ ' **ಉಣಾದಯೋ**

**ಬಹುಲಮ್ '** (ಪಾ. ಸೂ ೩-೩-೧) ಎಂಬಲ್ಲಿ ಬಹುಲಗ್ರಹಣವಿರುವುದರಿಂದ ಬಾಹುಲಕವಾಗಿ ಯು ಪ್ರತ್ಯಯ, ವಿಪನ್ಯು, ಎಂದು ಉಕಾರಾಂತ ಶಬ್ದವಾಗುತ್ತೆ, ಯು ವು ಪ್ರತ್ಯಯ ಸ್ವರದಿಂದ ಉದಾತ್ತ, ಪ್ರಥಮಾ ಬಹುವಚನದಲ್ಲಿ ವಿಪನ್ಯವಃ ಎಂದಾಗುತ್ತೆ.

**ಜಾಗೃವಾಂಸಃ—' ಜಾಗೃ ನಿದ್ರಾಕ್ಷಯೇ '** ಧಾತು, ಇದರ ಮುಂದೆ ಲಿಟ್, ಲಿಟ್‌ಗೆ, **' ಲಿಟಃ ಕಾನಜ್ವಾ '** (ಪಾ. ಸೂ. ೩-೨-೧೦೬) **' ಕ್ವಸುಶ್ಚ '** (೩-೨-೧೦೭) ಎಂಬುದರಿಂದ ಕ್ವಸ್ ಪ್ರತ್ಯಯ **' ಲಿಟಿಧಾತೋರನಭ್ಯಾಸಸ್ಯ '** (ಪಾ. ಸೂ. ೬-೧-೮) ಎಂಬುದರಿಂದ ವಿಹಿತವಾಗ ದ್ವಿತ್ವವು ಇಲ್ಲಿ ಛಾಂದಸವಾಗಿ ಬರುವುದಿಲ್ಲ. ವಸ್ ಗೆ **' ಆರ್ಧಧಾತುಕಸ್ಯೇಡ್ವಲಾದೇಃ '** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮ ಪ್ರಾಪ್ತವಾದರೆ **' ನೇಡ್ವಶಿಕೃತಿ '** (ಪಾ. ಸೂ. ೭-೨-೮) ವಶಾದಿಯಾದ ಕೃತ್ತಿಗೆ ಇಟ್ ಬರುವುದಿಲ್ಲ ಎಂಬುದರಿಂದ ನಿಷೇಧವು ಪ್ರಾಪ್ತವಾಗುತ್ತೆ ನಂತರ, **' ಕೃಸೃಭೃವೃ ಸ್ತುದ್ರುಸ್ರುಶ್ರುವೋಲಿಟಿ '** (ಪಾ. ಸೂ. ೭-೨-೧೩) **' ಏಕಾಚ ಉಪದೇಶೇಽನುದಾತ್ತಾತ್ '** (೭-೨-೧೦) ಇತ್ಯಾದಿ ಸೂತ್ರ ವಿಹಿತವಾದ ಪ್ರಕೃತಿ ವಿಶೇಷ ನಿಮಿತ್ತಕವಾದ (ಪ್ರಕೃತ್ಯಾಶ್ರಯ) ಇಣ್ನಿಷೇಧಗಳಾಗಲೀ, **' ಶ್ರ್ಯುಕಃ ಕಿತಿ '** (ಪಾ. ಸೂ. ೭-೨-೧೧) ಇತ್ಯಾದಿ ಸೂತ್ರವಿಹಿತಗಳು ಪ್ರತ್ಯಯ ವಿಶೇಷ ನಿಮಿತ್ತಕವಾದ ಇಣ್ನಿಷೇಧಗಳಾಗಲೀ, ಎಷ್ಟು ಇಣ್ನಿಷೇಧಶಾಸ್ತ್ರಗಳಿವೆಯೋ ಅವು ಲಿಟ್ಟಿನಲ್ಲಿ ಬರುವ ಪಕ್ಷಕ್ಕೆ ಕೃ, ಸೃ, ಭೃ, ವೃ, ಎಂಬೀ ನಾಲ್ಕು ಧಾತುಗಳ ಮುಂದೆ ಇರುವ ಲಿಟ್ಟಿಗೆ ಮಾತ್ರ ಬರುವುವು ಕ್ರಾದಿ ಚತುಷ್ಟಯಾತಿರಿಕ್ತ ಧಾತುಗಳ ಮುಂದಿರುವ ಲಿಟ್ಟಿಗೆ ಯಾವ ಇಣ್ನಿಷೇಧವೂ ಬರುವುದಿಲ್ಲ ಎಂದು ಕ್ರಾದಿ ನಿಯಮ ಶರೀರವು. ಈ ನಿಯಮದಿಂದ ಪ್ರಕೃತ ಕ್ರಾದಿಯಲ್ಲಿ ಸೇರದೇ ಇರುವ ಜಾಗೃ ಧಾತುವಿನ ಮುಂದೆ ಇರುವ ಲಿಟ್ಟಿಗೆ ಯಾವ ಇಣ್ನಿಷೇಧ ಶಾಸ್ತ್ರವೂ ಬರದೇ ಇರುವ ಕಾರಣ ಇಡಾಗಮ ಪ್ರಾಪ್ತವಾಗುತ್ತೆ, ಆದರೆ ಇದು **' ವಸ್ವೇಕಾಜಾದ್ಘಸಾಮ್ '** (ಪಾ. ಸೂ. ೭-೨-೬೭) ವಸು ಪ್ರತ್ಯಯಕ್ಕೆ ಇಡಾಗಮ ಬರುವ ಪಕ್ಷದಲ್ಲಿ ದ್ವಿತ್ವ ಬಂದ ನಂತರ ಒಂದೇ ಸ್ವರವುಳ್ಳ ಧಾತುಗಳು, ಆಕಾರಾಂತ ಧಾತುಗಳು, ಘಸ್ಲೃ ಧಾತು ಇವುಗಳ ಮುಂದೆ ಇರುವುದಕ್ಕೆ ಮಾತ್ರ ಇಡಾಗಮ ಬರುವುದು. ಬಾಕಿ ಧಾತುಗಳ ಮುಂದೆ ಇರುವ ವಸ್ ಇಡಾಗಮ ಬರುವುದಿಲ್ಲ ಎಂಬೀ ನಿಯಮದಿಂದ, ಜಾಗೃ ಧಾತುವು ಈ ಧಾತುಗಳಲ್ಲಿ ಸೇರದ ಕಾರಣ ವಾರಿತವಾಗುತ್ತದೆ. ಏವಂಚ ಇಡಾಗಮ ಬರುವುದಿಲ್ಲ, ಪ್ರಥಮ ಬಹುವಚನ ಜಸ್ ಜಾಗೃ ವಸ್+ಅಸ್, ಈಗ **' ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ '** (ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ, ಜಾಗೃವಾನ್‌ಸ್+ಅಸ್ **' ಸಾಂತ ಮಹತಸ್ಸಂಯೋಗಸ್ಯ '** (ಪಾ. ಸೂ. ೬-೪-೧೦) ಎಂಬುದರಿಂದ ನಕಾರದ ಹಿಂದೆ ಇರುವ ಅಕಾರಕ್ಕೆ ದೀರ್ಘ ಜಾಗೃವಾನ್‌ಸ್+ಅಸ್, **' ನಶ್ಚಾಪದಾಂತಸ್ಯ ಝಲಿ '** (ಪಾ. ಸೂ. ೮-೩-೨೪) ಎಂಬುದರಿಂದ ನಕಾರಕ್ಕೆ ಅನುಸ್ವಾರ, ಜಾಗೃವಾಂಸ್+ಅಸ್=ಜಾಗೃವಾಂಸಃ ಎಂದಾಗುತ್ತೆ || ೨೧ ||

|| ಶ್ರೀಃ ||

# ಇಪ್ಪತ್ತಮೂರನೆಯ ಸೂಕ್ತವು

---

ತೀವ್ರಾ ಇತಿ ಚತುರ್ವಿಂಶತ್ಯೃಚಂ ಷಷ್ಠಸೂಕ್ತಂ । ಅತ್ರೇಯಮನುಕ್ರಮಣಿಕಾ । ತೀವ್ರಾಶ್ಚ-ತುರ್ವಿಂಶತಿರ್ವಾಯವ್ಯೈಕ್ಯೈಂದ್ರವಾಯವ್ಯೌ ಮೈತ್ರಾವರುಣಮರುತ್ವತೀಯವೈಶ್ವದೇವಪೌಷ್ಣಾಸ್ತ್ರ್ಯೃಚಾಃ ಶೇಷಾ ಆಪ್ಯೋಽಂತ್ಯಾಧ್ಯರ್ಧಾಗ್ನೇಯ್ಯಪ್ಸ್ವಂತಃ ಪುರಉಷ್ಣಿಕ್ ಪರಾನುಷ್ಟುಪ್ತಿಸ್ರಶ್ಚಾಂತ್ಯಾ ಏಕವಿಂಶೀ ಪ್ರತಿಷ್ಠೇತಿ । ಋಷಿಶ್ಚಾನ್ಯಸ್ಮಾತ್ । ಅನು. ೧೨-೨ । ಇತಿ ಪರಿಭಾಷಯಾನುವರ್ತನಾನ್ಮೇಧಾತಿಥಿಃ ಕಾಣ್ವ-ಋಷಿಃ । ಅಪ್ಸ್ವಂತರಿತ್ಯೇಷಾ ಪುರಉಷ್ಣಿಕ್ । ಪ್ರಥಮಪಾದಸ್ಯ ದ್ವಾದಶಾಕ್ಷರೇಣಾದ್ಯಶ್ಚೇತ್ಪುರ ಉಷ್ಣಿಕ್ । ಅನು. ೫-೨ । ಇತಿ ಲಕ್ಷಣಸದ್ಭಾವಾತ್ । ಅಪ್ಸು ಮೇ ಸೋಮ ಇತ್ಯೇಷಾನುಷ್ಟುಪ್ । ಇದಮಾಪ ಇತ್ಯಾದ್ಯಾಸ್ತಿಸ್ರೋಽನುಷ್ಟುಭಃ । ಶಿಷ್ಟಾ ಏಕೋನವಿಂಶತಿಸಂಖ್ಯಾಕಾ ಋಚೋ ಗಾಯ-ತ್ರ್ಯಃ । ಆದೌ ಗಾಯತ್ರಮಿತಿ ಪರಿಭಾಷಿತತ್ವಾತ್ । ಅನು. ೧೨-೧೪ । ಆದ್ಯಾ ವಾಯುದೇವತಾಕಾ । ತತೋ ದ್ವೇ ಋಚಾವಿಂದ್ರವಾಯೂದೇವತಾಕೇ । ತತ ಏಕಸ್ತ್ರ್ಯೃಚೋ ಮಿತ್ರಾವರುಣದೇವತ್ಯಃ । ತತ ಉತ್ತರತೃಚಸ್ಯ ಮರುದ್ಗಣವಿಶಿಷ್ಟೇಂದ್ರೋ ದೇವತಾ । ತತ ಏಕಸ್ತ್ರ್ಯೃಚೋ ವೈಶ್ವದೇವಃ । ತದನಂತರ-ಭಾವೀ ಪೌಷ್ಣಃ । ಶಿಷ್ಟಾ ಋಚೋಽಬ್ದೇವತಾಕಾಃ । ಪಯಸ್ವಾನಗ್ನ ಇತ್ಯರ್ಧರ್ಚಯುಕ್ತಾ ಸಂ ಮಾಗ್ನ ಇತ್ಯೇಷಾ ತ್ವಗ್ನಿದೇವತಾಕಾ ॥ ಸೂಕ್ತವಿನಿಯೋಗೋ ಲಿಂಗಾದವಗಂತವ್ಯಃ । ಅಭಿಪ್ಲವಷಡಹಸ್ಯ ದ್ವಿತೀಯೇಽಹನಿ ಪ್ರಉಗಶಸ್ತ್ರೇ ವಾಯುವ್ಯತೃಚಸ್ಯ ತೀವ್ರಾಃ ಸೋಮಾಸ ಇತ್ಯೇಷಾ ತೃತೀಯಾ । ದ್ವಿತೀಯಸ್ಯ ಚತುರ್ವಿಂಶೇನೇತಿ ಖಂಡೇ ಸೂತ್ರಿತಂ । ತೀವ್ರಾಃ ಸೋಮಾಸ ಆ ಗಹೀತ್ಯೇಕಾ । ಆ.-೭-೬ । ಇತಿ । ಪೃಷ್ಠ್ಯಷಡಹೇಽಪಿ ದ್ವಿತೀಯೇಽಹನಿ ಪ್ರಉಗ ಏಷಾ ॥

**ಅನುವಾದ**—ತೀವ್ರಾ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿವೆ. ಈ ಸೂಕ್ತದ ವಿಷಯದಲ್ಲಿ ಅನುಕ್ರಮಣಿಕೆಯಲ್ಲಿ ಹೀಗೆ ಹೇಳಿರುವುದು—ತೀವ್ರಾ ಎಂಬ ಇಪ್ಪತ್ತನಾಲ್ಕು ಋಕ್ಕುಗಳಿಂದ ಕೂಡಿದ ಈ ಸೂಕ್ತದಲ್ಲಿ ಮೊದಲನೆಯ ಋಕ್ಕು ವಾಯುದೇವತಾಕವು ಮುಂದಿನ ಎರಡು ಋಕ್ಕುಗಳಿಗೆ ಇಂದ್ರವಾಯುಗಳು ದೇವತೆಗಳು, ಅಲ್ಲಿಂದ ಮುಂದಿನ ಮೂರು ಋಕ್ಕುಗಳಿಗೆ ಮಿತ್ರಾವರುಣರೂ, ಮುಂದಿನ ಮೂರು ಋಕ್ಕುಗಳಿಗೆ ಇಂದ್ರ ಮತ್ತು ಮರುತ್ತುಗಳೂ, ಅಲ್ಲಿಂದ ಮುಂದಿನ ಮೂರು ಋಕ್ಕುಗಳಿಗೆ ಪೂಷಾ ಎಂಬ ದೇವತೆಯೂ, ಅಲ್ಲಿಂದ ಮುಂದಿನ ಏಳೂವರೆ ಋಕ್ಕುಗಳಿಗೆ ಆಪಃ (ಉದಕ) ಎಂಬ ದೇವತೆಯೂ ಕಡೆಯ ಒಂದೂವರೆ ಋಕ್ಕಿಗೆ ಅಗ್ನಿಯೂ ದೇವತೆಗಳು. ಛಂದಸ್ಸಿನ ವಿಷಯವಾಗಿ ಒಂದರಿಂದ ಹದಿನೆಂಟು ಋಕ್ಕುಗಳು ಗಾಯತ್ರೀಛಂದಸ್ಸು, ಅಪ್ಸ್ವಂತಃ ಎಂಬ ಹತ್ತೊಂಭತ್ತನೆಯ ಋಕ್ಕು ಪುರಉಷ್ಣಿಕ್ ಎಂದೂ, ಇಪ್ಪತ್ತು ಮತ್ತು ಇಪ್ಪತ್ತೆರಡರಿಂದ ಇಪ್ಪತ್ತನಾಲ್ಕರ ವರೆಗೆ ಅನುಷ್ಟುಪ್ ಛಂದಸ್ಸೆಂದೂ, ಇಪ್ಪತ್ತೊಂದನೆಯ ಋಕ್ಕು ಪ್ರತಿಷ್ಠಾ ಛಂದಸ್ಸೆಂದೂ ಹೇಳಲ್ಪಟ್ಟಿರುವುದು. ಋಷಿಯು ಹಿಂದಿನ ಸೂಕ್ತದ ಋಷಿಯಾದ ಮೇಧಾತಿಥಿಃ ಕಾಣ್ವಃ ಎಂಬುವನೇ

ಎಂದು ಅನು. ೧೨-೨ ರಲ್ಲಿ ಹೇಳಿರುವುದು. **ಅಪ್ಸ್ವ೧ ನ್ತಃ** ಎಂಬ ಹತ್ತೊಂಭತ್ತನೆಯ ಋಕ್ಕು ಪುರಉಷ್ಣಿಕ್ ಎಂಬ ಛಂದಸ್ಸಾಗಿರುವುದು. ಉಷ್ಣಿಕ್ ಛಂದಸ್ಸಿಗೆ ಮೂರು ಪಾದಗಳಿದ್ದು ಪ್ರಥಮ ದ್ವಿತೀಯಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ತೃತೀಯಪಾದದಲ್ಲಿ ಹನ್ನೆರಡು ಅಕ್ಷರಗಳೂ ಇರುವವು. ಇದಕ್ಕೆ ಬದಲಾಗಿ ಪ್ರಥಮಪಾದದಲ್ಲಿಯೇ ಹನ್ನೆರಡು ಅಕ್ಷರಗಳೂ ದ್ವಿತೀಯತೃತೀಯ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇದ್ದಲ್ಲಿ ಆ ಋಕ್ಕು ಪುರಉಷ್ಣಿಕ್ ಛಂದಸ್ಸೆಂದು ಹೇಳಲ್ಪಡುವುದು, ಆದುದರಿಂದ ಮೇಲೆ ಹೇಳಿದ **ಅಪ್ಸ್ವ೧ ನ್ತಃ**-ಎಂಬ ಋಕ್ಕು ಪುರಉಷ್ಣಿಕ್ ಛಂದಸ್ಸಾಗಿರುವುದು (ಅನು. ೫-೨). ಅಪ್ಸುಮೇ ಸೋಮ ಎಂಬ ಇಪ್ಪತ್ತನೆಯ ಋಕ್ಕೂ, ಇದಮಾಪಃ ಪ್ರವಹತ ಎಂಬ ಮೂರು ಋಕ್ಕುಗಳೂ ಅನುಷ್ಟುಪ್ ಛಂದಸ್ಸುಗಳಾಗಿರುವವು. ಅನುಷ್ಟುಪ್ ಛಂದಸ್ಸಿನಲ್ಲಿ ನಾಲ್ಕು ಪಾದಗಳಿದ್ದು ಪ್ರತಿಪಾದದಲ್ಲಿಯೂ ಎಂಟೆಂಟು ಅಕ್ಷರಗಳಿರುವವು. ಇದು ಅನುಷ್ಟುಪ್ ಛಂದಸ್ಸಿನ ಲಕ್ಷಣವು. ಮೊದಲಿನ ಹದಿನೆಂಟು ಋಕ್ಕುಗಳು ಗಾಯತ್ರೀಛಂದಸ್ಸು, ಗಾಯತ್ರೀಛಂದಸ್ಸಿನಲ್ಲಿ ಮೂರು ಪಾದಗಳಿದ್ದು ಪ್ರತಿಪಾದದಲ್ಲಿಯೂ ಎಂಟು ಎಂಟು ಅಕ್ಷರಗಳಿರುವವು. ಇಪ್ಪತ್ತೊಂದನೆಯ ಋಕ್ಕು ಪ್ರತಿಷ್ಠಾ ಎಂಬ ಹೆಸರಿನ ಛಂದಸ್ಸಾಗಿರುವುದು. ಪ್ರತಿಷ್ಠಾ ಛಂದಸ್ಸಿನಲ್ಲಿ ಮೂರು ಪಾದಗಳಿದ್ದು ಪ್ರಥಮಪಾದದಲ್ಲಿ ಎಂಟು ಅಕ್ಷರಗಳೂ, ದ್ವಿತೀಯಪಾದದಲ್ಲಿ ಏಳು ಅಕ್ಷರಗಳೂ, ತೃತೀಯಪಾದದಲ್ಲಿ ಆರು ಅಕ್ಷರಗಳೂ ಇರುವವು. ಇದು ಪ್ರತಿಷ್ಠಾ ಛಂದಸ್ಸಿನ ಲಕ್ಷಣವು. ಸೂಕ್ತದಲ್ಲಿರುವ ಋಕ್ಕುಗಳಿಗೆ ದೇವತೆಗಳನ್ನು ಹಿಂದೆಯೇ ಹೇಳಿರುವೆವು. ಸೂಕ್ತವಿನಿಯೋಗವನ್ನು ಆಯಾ ಋಕ್ಕುಗಳ ಅರ್ಥಾನುಸಾರವಾಗಿ ತಿಳಿದುಕೊಳ್ಳಬೇಕು. ಅಭಿಪ್ಲವಷಡಹವೆಂಬ ಯಾಗದ ಎರಡನೆಯ ದಿವಸದಲ್ಲಿ ಪ್ರಉಗಶಸ್ತ್ರಮಂತ್ರ ಪಠನಮಾಡುವಾಗ **ತೀವ್ರಾಃ ಸೋಮಾಸ** ಎಂಬ ಮೂರು ಋಕ್ಕುಗಳನ್ನು ವಾಯವ್ಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ದ್ವಿತೀಯಸ್ಯ ಚತುರ್ವಿಂಶೇನ** ಎಂಬ ಖಂಡದಲ್ಲಿ ಹೇಳಲ್ಪಟ್ಟಿರುವುದು. (ಆ. ೭-೬) ಪೃಷ್ಠ್ಯಷಡಹ ಯಾಗದಲ್ಲಿಯೂ ಎರಡನೆಯ ದಿವಸದಲ್ಲಿ ಈ ತೃಚವನ್ನು ಪ್ರಉಗಶಸ್ತ್ರಮಂತ್ರವನ್ನಾಗಿ ಪಠಿಸಬೇಕೆಂದು ಅಲ್ಲಿಯೇ ಹೇಳಿರುವುದು.

॥ ಶ್ರೀಃ ॥

## ಸೂಕ್ತ—೨೩

॥ ಮಂಡಲ—೧ ॥ ಅನುವಾಕ—೫ ॥ ಸೂಕ್ತ—೨೩ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ, ೮-೧೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ॥

॥ ಋಷಿಃ—ಮೇಧಾತಿಥಿಃ ಕಾಣ್ವಃ ।

॥ ದೇವತಾ—೧ ವಾಯುಃ । ೨-೩ ಇಂದ್ರವಾಯೂ । ೪-೬ ಮಿತ್ರಾವರುಣೌ । ೭-೯ ಇಂದ್ರೋ ಮರುತ್ವಾನ್ ॥ ೧೦-೧೨ ವಿಶ್ವೇ ದೇವಾಃ । ೧೩-೧೫ ಪೂಷಾ । ೧೬-೨೩½ ಆಪಃ । ೨೩½-೨೪ ಅಗ್ನಿಃ ॥

॥ ಛಂದಃ—೧-೧೮ ಗಾಯತ್ರೀ । ೧೯ ಪುರ ಉಷ್ಣಿಕ್ । ೨೦ ಅನುಷ್ಟುಪ್ । ೨೧ ಪ್ರತಿಷ್ಠಾ । ೨೨-೨೪ ಅನುಷ್ಟುಪ್ ॥

॥ ಸಂಹಿತಾಪಾಠಃ ॥

ತೀವ್ರಾಃ ಸೋಮಾಸ ಆ ಗಹ್ಯಾಶೀರ್ವಂತಃ ಸುತಾ ಇಮೇ ।
ವಾಯೋ ತಾನ್ಪ್ರಸ್ಥಿತಾನ್ಪಿಬ ॥ ೧ ॥

॥ ಪದಪಾಠಃ ॥

ತೀವ್ರಾಃ । ಸೋಮಾಸಃ । ಆ । ಗಹಿ । ಆಶೀಃऽವಂತಃ । ಸುತಾಃ । ಇಮೇ ।
ವಾಯೋ ಇತಿ । ತಾನ್ । ಪ್ರऽಸ್ಥಿತಾನ್ । ಪಿಬ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಾಯೋ ಇಮೇ ಸೋಮಾಸ ಐಂದ್ರವಾಯವಗ್ರಹಾದಿರೂಪಾಃ ಸೋಮಾಃ ಸುತಾ ಅಭಿಷುತಾಃ । ತೇ ಚ ತೀವ್ರಾಃ ಪ್ರಭೂತತ್ವಾತ್ತರ್ಪಯಿತುಂ ಸಮರ್ಥಾ ಆಶೀರ್ವಂತ ಆಶಿರಯುಕ್ತಾಃ । ಅತಸ್ತ್ವಮಾ ಗಹಿ । ಅಸ್ಮಿನ್ಕರ್ಮಣ್ಯಾಗಚ್ಛ । ಪ್ರಸ್ಥಿತಾನುತ್ತರವೇದಿಂ ಪ್ರತ್ಯಾನೀತಾಂಸ್ತಾನ್ಸೋಮಾನ್ಪಿಬ ॥ ಸೋಮಾಸಃ । ಅರ್ತಿಸ್ತುಸ್ವಿತ್ಯಾದಿನಾ ಮನ್ । ನಿತ್ತ್ವಾದಾದ್ಯುದಾತ್ತಃ । ಆಜ್ಜಸೇರಸುಕ್ । ಗಹಿ । ಮರುದ್ಭಿರಗ್ನ ಆ ಗಹಿ । ಋಗ್ವೇ. ೧-೧೯-೨ । ಇತ್ಯತ್ರೋಕ್ತಂ । ಆಶೀರ್ವಂತಃ । ಶ್ರೀಞ್ ಪಾಕೇ । ಅಪಸ್ಪೃಧೇಥಾಮಿತ್ಯಾದಿಸೂತ್ರೇ । ಪಾ. ೬-೧-೩೬ । ಆಙ್ಪೂರ್ವಸ್ಯ ಕ್ವಿಪಿ ಶಿರಾದೇಶೋ ನಿಪಾತಿತಃ । ಕರಣಸ್ಯಾಪಿ ಶ್ರಯಣದ್ರವ್ಯಸ್ಯ ಸ್ವವ್ಯಾಪಾರೇ ಕರ್ತೃತ್ವವಿವಕ್ಷಯಾ ಕರ್ತರಿ ಕ್ವಿಪ್ ನ ವಿರುಧ್ಯತೇ । ಆಶೀರೇಷಾಮಸ್ತೀತ್ಯಾಶೀರ್ವಂತಃ । ಛಂದಸೀರ ಇತಿ ವತ್ವಂ । ವಾಯೋ । ಆಮಂತ್ರಿತಾದ್ಯುದಾತ್ತತ್ವಂ । ಪ್ರಸ್ಥಿತಾನ್ । ಪ್ರಾದಿಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ ಬಾಧಿತ್ವಾ ವ್ಯತ್ಯಯೇನಾವ್ಯಯಪೂರ್ವಪದ-ಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

(ಹೇ) **ವಾಯೋ**—ಎಲೈ ವಾಯುವೇ । **ಇಮೇ ಸೋಮಾಸಃ**— ಈ ಸೋಮರಸಗಳು । **ತೀವ್ರಾಃ**— ಬಹಳ ಹೆಚ್ಚಾಗಿಯೂ (ಅಥವಾ ಹೆಚ್ಚು ಸಾರವುಳ್ಳವುಗಳಾಗಿಯೂ) । **ಆಶೀರ್ವಂತಃ**—ದಧಿ, ಯವ ಮೊದಲಾದ ಆಶಿರದ್ರವ್ಯಗಳಿಂದ ಕೂಡಿದವುಗಳಾಗಿಯೂ । **ಸುತಾಃ**— ಹಿಂಡಿ ಪಾನಯೋಗ್ಯವಾಗುವಂತೆ ಸಿದ್ಧಪಡಿಸಲ್ಪಟ್ಟಿವೆ । **ಪ್ರಸ್ಥಿತಾನ್**—ಯಜ್ಞದ ಉತ್ತರವೇದಿಗೆ ತರಲ್ಪಟ್ಟ । **ತಾನ್**— ಆ ಸೋಮರಸಗಳನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ವಾಯೂ, ಇದೋ, ಈ ಸೋಮರಸಗಳು ದಧಿ ಮೊದಲಾದ ಆಶಿರದ್ರವ್ಯಮಿಶ್ರಿತವಾಗಿಯೂ, ಬಹಳ ಸಾರಯುಕ್ತವಾಗಿಯೂ ಇವೆ. ನಿನ್ನ ಪಾನಾರ್ಥವಾಗಿ ಈ ರೀತಿ ಸಿದ್ಧಪಡಿಸಲ್ಪಟ್ಟ ಆ ಸೋಮರಸವನ್ನು ಉತ್ತರ ವೇದಿಯಲ್ಲಿ ತಂದಿಟ್ಟಿರುವೆವು. ಅದನ್ನು ಪಾನಮಾಡು.

## English Translation.

These intoxicating Soma juice flavoured with milk, barley, and butter-milk are extracted and placed for your use. O Vayu, drink those Soma juices.

॥ ವಿಶೇಷವಿಷಯಗಳು ॥

**ತೀವ್ರಾಃ**—ಈ ಶಬ್ದಕ್ಕೆ ಭಾಷ್ಯಕಾರರು ಅಧಿಕಪ್ರಮಾಣದಲ್ಲಿ ಎಂದೂ ಸ್ಕಂದಸ್ವಾಮಿಯು, ಕಟುವಾದ (ತಿಕ್ತ ಅಥವಾ ಕಹಿಯಾದ) ಎಂದೂ, ವೆಂಕಟಮಾಧವರು ಮದವನ್ನುಂಟುಮಾಡುವ ಎಂದೂ ಅರ್ಥಮಾಡಿರುವರು. Wilson ಪಂಡಿತನೂ, ವೇದಾರ್ಥಯತ್ನಕಾರರೂ Sharps ಎಂದು ಭಾಷಾಂತರಮಾಡಿರುವರು. ಈ ವಿಧವಿಧವಾದ ಅರ್ಥಗಳಲ್ಲಿ ವೆಂಕಟಮಾಧವರ ಅರ್ಥವೇ ಹೆಚ್ಚು ಸಮಂಜಸವಾಗಿರುವುದು ಈ ಶಬ್ದಕ್ಕೆ ಸಾರಯುಕ್ತವಾದ, highly-concentrated, intoxicating, ಮದವನ್ನುಂಟುಮಾಡುವ ಎಂಬ ಅರ್ಥವೇ ಇಲ್ಲಿ ಸರಿಯಾಗಿ ಹೊಂದುವುದು.

**ಆಶೀರ್ವಂತಃ**—ಸೋಮರಸವು ರುಚಿಕರವಾಗುವುದಕ್ಕಾಗಿ ಅದಕ್ಕೆ ಹಾಲು, ಮೊಸರು, ಯವ ಎಂಬ ದ್ರವ್ಯಗಳನ್ನು ಸೇರಿಸಿ ಉಪಯೋಗಿಸುವುದು ಪದ್ಧತಿಯು. ಈ ರೀತಿ ಸೇರಿಸುವ ಮಿಶ್ರಣದ್ರವ್ಯಗಳಿಗೆ ಆಶಿರದ್ರವ್ಯಗಳೆಂದು ಹೆಸರು. ಹಾಲು ಮಿಶ್ರಮಾಡಿದ ಸೋಮರಸಕ್ಕೆ ಗವಾಶಿರವೆಂದೂ, ಮೊಸರನ್ನು ಮಿಶ್ರಮಾಡಿದ ರಸಕ್ಕೆ ದಧ್ಯಾಶಿರವೆಂದೂ, ಯವವನ್ನು (ಹಿಟ್ಟನ್ನು) ಮಿಶ್ರಮಾಡಿದ ರಸಕ್ಕೆ ಯವಾಶಿರವೆಂದೂ ಹೆಸರು. Wilson ಪಂಡಿತನು ಈ ಶಬ್ದವನ್ನು Blessing-bearing ಎಂದು ಭಾಷಾಂತರಮಾಡಿರುವನು. ಅದು ಸರಿಯಾಗಿರುವಂತೆ ಕಾಣುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಸೋಮಾಸಃ**—**'ಅರ್ತಿಸ್ತುಸುಹುಸೃಧೃಕ್ಷಿಕ್ಷುಭಾಯಾವಾಪದಿಯಕ್ಷಿನೀಭ್ಯೋಮನ್'** (ಉ. ಸೂ. ೧-೧೩೭) ಋ ಗತೌ, ಷ್ಟುಞ್ ಸ್ತುತೌ, ಷುಞ್ ಅಭಿಷವೇ, ಹು ದಾನಾದನಯೋಃ, ಸೃ ಗತೌ, ಧೃಞ್ ಧಾರಣೇ, ಕ್ಷಿ ಕ್ಷಯೇ, ಕ್ಷು ಶಬ್ದೇ, ಭಾ ದೀಪ್ತೌ, ಯಾ ಪ್ರಾಪಣೇ, ವಾ ಗತಿಗನ್ಧನಯೋಃ, ಪದ ಗತೌ, ಯಕ್ಷ ಪೂಜಾಯಾಂ, ಣೀಞ್ ಪ್ರಾಪಣೇ ಈ ಧಾತುಗಳ ಮುಂದೆ ಮನ್ ಪ್ರತ್ಯಯ ಬರುವುದು ಎಂಬುದರಿಂದ ಷುಞ್ ಅಭಿಷವೇ ಎಂದು ಪಠಿತವಾಗಿರುವ ಕ್ಷು ಧಾತುವಿನ ಮುಂದೆ ಮನ್ ಪ್ರತ್ಯಯ **'ಧಾತ್ವಾದೇಃ ಷಃಸಃ'** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ ಸು+ಮ **'ಸಾರ್ವಧಾತುಕಾರ್ಧ ಧಾತುಕಯೋಃ'** (ಪಾ. ಸೂ. ೭-೩-೮೪) ಎಂಬುದರಿಂದ ಗುಣ ಅಂದರೆ ಉಕಾರಕ್ಕೆ ಓಕಾರ ಬರುತ್ತೆ ಸೋಮ ಎಂದು ನಿಷ್ಪನ್ನವಾಯಿತು. ಮನ್

ಪ್ರತ್ಯಯವು ನಿತ್, ಆದ್ದರಿಂದ **'ಞ್ನಿತ್ಯಾದಿರ್ನಿತ್ಯಮ್'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಸೋಮಶಬ್ದ, ಇದರ ಮುಂದೆ ಜಸ್ **'ಆಜ್ಜಸೇರಸುಕ್'** (ಪಾ. ಸೂ. ೭-೧-೫೦) ಎಂಬುದರಿಂದ ಜಸ್ಸಿಗೆ ಅಸುಕ್ ಆಗಮ.

**ಗಹಿ—'ಮರುದ್ಭಿರಗ್ನ ಆಗಹಿ'** (ಋ. ಸಂ. ೧-೧೯-೨) ಎಂಬಲ್ಲಿ ಪ್ರಕ್ರಿಯೆಯು ವರ್ಣಿಸಲಾಗಿದೆ.

**ಆಶೀರ್ವನ್ತಃ—'ಶ್ರೀಞ್ ಪಾಕೇ'** ಧಾತು, **'ಅಪಸ್ಪೃಧೇಥಾಮಾನೃಚುರಾನೃಹುಶ್ಚಿಚ್ಯುಷೇ ತಿತ್ಯಾಜ ಶ್ರಾತಾ ಶ್ರಿತಾಽಽಶೀ ರಾಶೀರ್ತಾಃ'** (ಪಾ. ಸೂ. ೬-೧-೩೬) **'ಸ್ಪರ್ಧ ಸಂಘರ್ಷೇ'** ಧಾತು. ಇದರ ಮುಂದೆ ಲಙ್. ಅದಕ್ಕೆ ಮಧ್ಯಮ ಪುರುಷ ದ್ವಿವಚನ ಆಥಾಮ್ ಪ್ರತ್ಯಯ. ಸ್ಪರ್ಧ್+ಆಥಾಮ್ **'ಲುಙ್ ಲಙ್ ಲೃಙ್ಕ್ಷ್ವಡುದಾತ್ತಃ'** ಎಂಬುದರಿಂದ ಅಡಾಗಮ, ಶಪ್, ಅಸ್ಪರ್ಧ್+ಅ+ಆಥಾಮ್. **'ಆತೋಙಿತಃ'** (ಪಾ. ಸೂ. ೭-೨-೮೧) ಹ್ರಸ್ವಾಕಾರದ ಮುಂದೆ ಇರುವ ಙಿತ್ತಿನ ಆಕಾರಕ್ಕೆ ಇಯ್ ಆದೇಶ ಬರುತ್ತೆ ಎಂಬುದರಿಂದ ಆಕಾರಕ್ಕೆ ಇಯ್ ಆದೇಶ ಅಸ್ಪರ್ಧ್+ಅ+ಇಯಥಾಂ ಗುಣ, ಯಲೋಪ, ಅಸ್ಪರ್ಧೇಥಾಮ್ ಲೋಕದಲ್ಲಿ ಆಗುವುದು. ಇಲ್ಲಿ ಛಂದಸ್ಸಿನಲ್ಲಿ, ಧಾತುವಿಗೆ ದ್ವಿತ್ವವೂ, ರೇಫಕ್ಕೆ ಸಂಪ್ರಸಾರಣ ಋಕಾರವೂ. ಉತ್ತರಖಂಡದ ಸ್ಪ ಎಂಬುದರ ಅಕಾರಕ್ಕೆ ಲೋಪವೂ ಸಹ ನಿಪಾತಿಸಲಾಗುವುದು, ಏವಂಚ ಅ ಸ್ಪರ್ಧ್+ಸ್ಪರ್ಧ್+ಅ-ಆಥಾಮ್ ಎಂಬಲ್ಲಿ ಅಭ್ಯಾಸದಲ್ಲಿ **'ಶರ್ಪೂರ್ವಾಃಖಯಃ'** (ಪಾ. ಸೂ. ೭-೪-೬೧) ಎಂಬುದರಿಂದ **'ಪ'** ನಿಲ್ಲುವುದು. ಅ. ಪ. ಸ್ಪರ್ಧ್+ಅ+ಆಥಾಮ್ ಎರಡನೆಯದರಲ್ಲಿ ರೇಫಕ್ಕೆ ಋಕಾರವೂ, ಸ್ಪ ಎಂಬುದರ ಅಕಾರಕ್ಕೆ ಲೋಪವೂ ಬಂದರೆ ಶೇಷಪ್ರಕ್ರಿಯೆಯನ್ನು ಮೊದಲಿನಂತೆ ಉಪಪಾದಿಸಲು ಅ ಪಸ್ಪೃಧೇಥಾಂ ಎಂದಾಗುತ್ತೆ ಇದೇ ಅಂಶವನ್ನು ಮಹಾ ಭಾಷ್ಯಕಾರರು 'ಸ್ಪರ್ಧೇರ್ಲಙ್ಯಾತ್ಮನೇ ಪದಾನಾಂ ಮಧ್ಯಮ ಪುರುಷಸ್ಯ ದ್ವಿವಚನೇ ಆಥಾಮಿ ದ್ವಿರ್ವಚನೇ ಸಂಪ್ರಸಾರಣಮಕಾರಲೋಪಶ್ಚ' ಎಂಬ ವಾರ್ತಿಕದಿಂದ ಸ್ಪಷ್ಟಪಡಿಸಿರುವರು. ಈ ಉಪಪಾದನೆಯು ಅಪಸ್ಪೃಧೇಥಾಮ್ ಒಂದೇ ಪದವೆಂದು ಯಾವ ಶಾಖೆಯಲ್ಲಿದೆಯೋ ಅದರ ಪ್ರಕಾರವಾಗಿ ವರ್ಣಿತವಾಗಿದೆ, ಮತ್ತೊಂದು ಶಾಖೆಯು ಪದದ್ವಯಾತ್ಮಕ ಎಂದು ಹೇಳಲಾಗಿದೆ. ಆ ಪಕ್ಷದಲ್ಲಿ ಅಪ ಎಂಬ ಉಪಸರ್ಗ ಪೂರ್ವಕವಾದ ಸ್ಪರ್ಧಧಾತುವಿನ ಮುಂದೆ ಲಙ್ ಅದಕ್ಕೆ ಆಥಾಮ್ ಶಪ್, ಇಯಾದೇಶ ಗುಣ, ಯಲೋಪ, ಛಂದಸ್ಸಾದ್ದರಿಂದ ಅಡಾಗಮ ಬರುವುದಿಲ್ಲ. ಅಪ ಸ್ಪರ್ಧೇಥಾಮ್ ಎಂಬಲ್ಲಿ ರೇಫಕ್ಕೆ ಋಕಾರವೂ ಸ್ಪನ ಅಕಾರಕ್ಕೆ ಲೋಪವೂ ಸಹ ನಿಪಾತಿಸಲ್ಪಡುವುದು. ಈ ಅಂಶವು—ಅಪರ ಆಹ **'ಅಪ ಪೂರ್ವಾತ್ ಸ್ಪರ್ಧೇರ್ಲಙ್ಯಾತ್ಮನೇಪದಾನಾಂ ಮಧ್ಯಮಪುರುಷಸ್ಯ ದ್ವಿವಚನೇ ಆಥಾಮಿ ಸಂಪ್ರಸಾರಣ ಮಕಾರ ಲೋಪಶ್ಚ'** ಎಂಬ ವಾರ್ತಿಕದಿಂದ ವ್ಯಕ್ತವಾಗುತ್ತೆ. ಮೊದಲನೆಯ ಪಕ್ಷದಲ್ಲಿ ಅಪಸ್ಪೃಧೇಥಾಂ ಎಂಬುದು ಆದ್ಯುದಾತ್ತ ಎರಡನೇ ಪಕ್ಷದ ಸ್ಪೃಧೇಥಾಂ ಎಂಬುದು ಆದ್ಯುದಾತ್ತ **'ತಿಙಿಚೋದಾತ್ತವತಿ'** (ಪಾ. ಸೂ. ೮-೨-೭೧) ಎಂಬುದರಿಂದ ಅಪ ಎಂಬುದು ಅನುದಾತ್ತ. ಸೂತ್ರದಲ್ಲಿ ಸ್ವರ ಸರ್ವನಾಮವಾದ ಏಕಶ್ರುತಿ ನಿರ್ದೇಶವಿರುವುದರಿಂದ, ಭಿನ್ನಸ್ವರಗಳಾದ ಎರಡಕ್ಕೂ ಇಲ್ಲಿ ಸಂಗ್ರಹವಿದೆ. ಆನರ್ಚುಃ, ಆನರ್ಹುಃ ಎಂದು ಲೋಕದಲ್ಲಿ ಅರ್ಚ ಪೂಜಾಯಾಂ, ಅರ್ಹ ಪೂಜಾಯಾಂ ಎಂಬೀಧಾತುಗಳ ಲಿಟ್ ಪ್ರಥಮಪುರುಷ ಬಹುವಚನದಲ್ಲಿ ರೂಪವು. ಛಂದಸ್ಸಿನಲ್ಲಿ ರೇಫಕ್ಕೆ ಸಂಪ್ರಸಾರಣ, ಅಕಾರ ಲೋಪಗಳು ನಿಪಾತಿಸಲ್ಪಡುವುವು. ಆನೃಚುಃ, ಆನೃಹುಃ ಎಂದಾಗುತ್ತೆ. ಚ್ಯುಙ್ ಧಾತು ಲಿಟ್ ಥಾಸ್ ಚುಚ್ಯುಷೇ ಎಂದಾಗುವುದು. ತ್ಯಜ ಧಾತು ಲಿಟ್ ಪ್ರಥಮಪುರುಷ ಏಕವಚನ, ತತ್ಯಾಜ ಎಂದಾಗುತ್ತೆ. ಎರಡು ಕಡೆಯಲ್ಲಿ ಅಭ್ಯಾಸದ ಸ್ವರಕ್ಕೆ ಇಕಾರಾದೇಶ ನಿಪಾತಿಸಲ್ಪಡುತ್ತೆ. **'ಶ್ರೀಣಾತೇಃ ಕ್ತೇಶ್ರಾಭಾವಶ್ರಿಭಾವೌ'**

ಎಂಬ ವಾರ್ತಿಕಾನುಸಾರ ಶ್ರೀಇ್ ಪಾಕೇ ಧಾತುವಿನ ಮುಂದೆ ಕ್ತ ಪ್ರತ್ಯಯವನ್ನಿಟ್ಟಾಗ ಧಾತುವಿಗೆ ಶ್ರಾ ಆದೇಶ ಬಂದರೆ ಶ್ರಾತ, ಎಂದೂ ಶ್ರಿ ಆದೇಶ ಬಂದರೆ ಶ್ರಿತ, ಎಂದೂ ಆಗುತ್ತೆ. ಆಙ್ ಉಪಸರ್ಗಪೂರ್ವಕವಾದ ಶ್ರೀಇ್ ಪಾಕೇ, ಧಾತುವಿನ ಮುಂದೆ ಕ್ವಿಪ್ ಪ್ರತ್ಯಯ ಬಂದಾಗ, ಧಾತುವಿಗೆ '**ಶಿರ್**' ಎಂಬ ಆದೇಶವು ಪ್ರಕೃತಸೂತ್ರದಿಂದ ನಿಪಾತಿಸಲ್ಪಡುವುದು. ಕ್ವಿಪ್‌ನಲ್ಲಿ ಎಲ್ಲ ವರ್ಣಗಳಿಗೂ **ಲೋಪ**, ಪ್ರಥಮೈಕವಚನ ಸುಪ್ರತ್ಯಯ '**ಹಲ್ಙ್ಯಾಭ್ಯಃ**' (ಪಾ. ಸೂ. ೬-೧-೬೮) ಎಂಬುದರಿಂದ ಸು **ಲೋಪ** '**ರ್ವೋರುಪಧಾಯಾದೀರ್ಘ ಇಕಃ**' (ಪಾ. ಸೂ. ೮-೨-೭೬) ಪದಾಂತ ವಿಷಯದಲ್ಲಿ ರೇಫಾಂತ, ಅಥವಾ ವಕಾರಾಂತಗಳಾದ ಧಾತುಗಳ ಉಪಾಂತ್ಯವರ್ಣಗಳಾದ ಇ, ಉ, ಋ,ಲೃ, ಗಳಿಗೆ **ದೀರ್ಘ** ಬರುವುದು, ಎಂಬುದರಿಂದ ಇಕಾರಕ್ಕೆ ದೀರ್ಘ '**ಆಶೀರ್**' ಎಂದಾಯಿತು. ಆಶೀಃ ಏಷಾಮಸ್ತಿ ಎಂದು ವಿಗ್ರಹವಾದಾಗ '**ತದಸ್ಯಾಸ್ತ್ಯಸ್ಮಿನ್ನಿತಿಮತುಪ್**' (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ ಆಶೀರ್+ಮತ್ ಈಗ '**ಛಂದಸೀರಃ**' (ಪಾ. ಸೂ. ೮-೨-೧೫) ಛಂದಸ್ಸಿನಲ್ಲಿ **ಇ**ಕಾರಾಂತ ರೇಫಾಂತಗಳಾದ ಶಬ್ದಗಳ ಮುಂದೆ ಇರುವ ಮತುಪ್ಪಿನ ಮಕಾರಕ್ಕೆ ವಕಾರಾದೇಶ ಬರುತ್ತೆ ಎಂಬುದರಿಂದ ಮಕಾರಕ್ಕೆ ವಕಾರಾದೇಶ, ಆಶೀರ್ವತ್ ಇದರ ಮುಂದೆ ಜಸ್, '**ಉಗಿದಚಾಂ**-' (ಪಾ. ಸೂ. ೭-೧-೭೦) ಎಂಬುದರಿಂದ ನುಮ್ ಆಗಮ ರುತ್ವವಿಸರ್ಗಗಳು ಆಶೀರ್ವನ್ತಃ ಎಂದಾಗುವುದು.

**ವಾಯೋ**—ಇದು ಸಂಬೋಧನ ಪ್ರಥಮೈಕವಚನಾಂತ. ಆದ್ದರಿಂದ '**ಸಾಮನ್ತ್ರಿತಮ್**' (ಪಾ. ಸೂ. ೨-೩-೪೮) ಸಂಬೋಧನೆಯ ಪ್ರಥಮಾ ಏಕವಚನವು ಆಮನ್ತ್ರಿತ ಸಂಜ್ಞೆಯನ್ನು ಹೊಂದುವುದು ಎಂಬುದರಿಂದ ಆಮಂನ್ತ್ರಿತ ಸಂಜ್ಞೆ ಇದೆ. '**ಆಮನ್ತ್ರಿತಸ್ಯಚ**' (ಪಾ. ಸೂ. ೬-೧-೧೯೮) ಎಂಬ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತೆ.

**ಪ್ರಸ್ಥಿತಾನ್**—ಸ್ಥಿತ ಎಂಬುದು ಕ್ತ ಪ್ರತ್ಯಯಾಂತ '**ಕುಗತಿ ಪ್ರಾದಯಃ**' (ಪಾ. ಸೂ. ೨-೨-೧೮) ಎಂಬುದರಿಂದ ಪ್ರಾದಿಸಮಾಸ, ಈಗ '**ಗತಿಕಾರಕೋಪಪದಾತ್ಕೃತ್**' (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದಪ್ರಕೃತಿ ಸ್ವರವು ಪ್ರಾಪ್ತವಾದರೆ '**ವ್ಯತ್ಯಯಬಹುಲಂ**' ಎಂಬುದರಿಂದ ವ್ಯತ್ಯಯದಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರವು ಬರುವುದು. ಪ್ರ ಎಂಬುದು '**ಉಪಸರ್ಗಾಶ್ಚಾಭಿವರ್ಜಂ**' (ಫಿ. ಸೂ. ೮೨) ಅಭಿಯನ್ನುಳಿದ ಉಪಸರ್ಗಗಳು ಆದ್ಯುದಾತ್ತಗಳಾಗುವುವು, ಎಂಬುದರಿಂದ ಆದ್ಯುದಾತ್ತ, ಪೂರ್ವೋಕ್ತ ಪ್ರಕಾರ ಅದೇ ಸ್ವರ ನಿಲ್ಲುವುದು. ॥ ೧ ॥

॥ ಸಂಹಿತಾಪಾಠಃ ॥

ಉಭಾ ದೇವಾ ದಿವಿಸ್ಪೃಶೇಂದ್ರವಾಯೂ ಹವಾಮಹೇ ।
ಅಸ್ಯ ಸೋಮಸ್ಯ ಪೀತಯೇ ॥ ೨ ॥

॥ ಪದಪಾಠಃ ॥

ಉಭಾ । ದೇವಾ । ದಿವಿऽಸ್ಪೃಶಾ । ಇಂದ್ರವಾಯೂ ಇತಿ । ಹವಾಮಹೇ ।
ಅಸ್ಯ । ಸೋಮಸ್ಯ । ಪೀತಯೇ ॥ ೨ ॥

॥ ಸಾಯಣಭಾಷ್ಯಂ ॥

ಪೂರ್ವೋಕ್ತ ಏವ ಶಸ್ತ್ರ ಉಭಾ ದೇವಾ ದಿವಿಸ್ಪೃಶೇತಿ ದ್ವೇ ಐಂದ್ರವಾಯವತೃಚಸ್ಯ ಪ್ರಥಮಾದ್ವಿತೀಯೇ । ತಥಾ ಚ ದ್ವಿತೀಯಸ್ಯೇತಿ ಖಂಡೇ ಸೂತ್ರಿತಂ । ಉಭಾ ದೇವಾ ದಿವಿಸ್ಪೃಶೇತಿ ದ್ವೇ । ಆ- ೭-೬ । ಇತಿ ॥

ದಿವಿಸ್ಪೃಶಾ ದ್ಯುಲೋಕವರ್ತಿನಾವುಭಾ ದೇವಾ ದ್ವೌ ದೇವಾವಿಂದ್ರವಾಯೂ ಹವಾಮಹೇ । ಆಹ್ವಯಾಮಃ । ಕಿಮರ್ಥಂ । ಅಸ್ಯ ಸೋಮಸ್ಯ ಪೀತಯೇ । ಅಸಕೃದ್ವ್ಯಾಖ್ಯಾತಂ ॥ ಉಭಾ ದೇವಾ । ಸುಪಾಂ ಸುಲುಗಿತ್ಯಾಕಾರಃ । ದಿವಿಸ್ಪೃಶಾ । ಹೃದ್ಯುಭ್ಯಾಂ ಜೇರುಪಸಂಖ್ಯಾನಂ । ಪಾ. ೬-೩-೯-೧ । ಇತಿ ಸಪ್ತಮ್ಯಾ ಅಲುಕ್ । ಕೃದುತ್ತರಪದಪ್ರಕೃತಿಸ್ವರತ್ವಂ । ಇಂದ್ರವಾಯೂ । ಇಂದ್ರಶ್ಚ ವಾಯುಶ್ಚೇತಿ ದ್ವಂದ್ವಃ । ಉಭಯತ್ರ ವಾಯೋಃ ಪ್ರತಿಷೇಧೋ ವಕ್ತವ್ಯಃ । ಪಾ. ೬-೩-೨೬-೧ । ಇತ್ಯಾನಙೋ ನಿಷೇಧಃ । ದೇವತಾದ್ವಂದ್ವೇ ಚೇತಿ ಪ್ರಾಪ್ತಸ್ಯೋಭಯಪದಪ್ರಕೃತಿಸ್ವರತ್ವಸ್ಯ ನೋತ್ತರಪದೇಽನುದಾತ್ತಾದೌ । ಪಾ. ೬-೨-೧೪೨ । ಇತಿ ನಿಷೇಧಾತ್ಸಮಾಸಾಂತೋದಾತ್ತತ್ವಮೇವ ಶಿಷ್ಯತೇ । ಹವಾಮಹೇ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಬಹುಲಂ ಛಂದಸೀತಿ ಸಂಪ್ರಸಾರಣಂ । ಸಂಪ್ರಸಾರಣಾಚ್ಚೇತಿ ಪರಪೂರ್ವತ್ವಂ । ಶಪ್ । ಗುಣಾವಾದೇಶೌ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಪದಸ್ಯಾದ್ಯುದಾತ್ತತ್ವೇ ಪ್ರಾಪ್ತೇ ತಿಙ್ಙತಿಙ ಇತ್ಯಾಷ್ಟಮಿಕೋ ನಿಘಾತಃ । ಅಸ್ಯ । ಊಡಿದಮಿತ್ಯಾದಿನಾ ಷಷ್ಠ್ಯಾ ಉದಾತ್ತತ್ವಂ । ಪೀತಯೇ । ಪಾ ಪಾನೇ । ಸ್ಥಾಗಾಪಾಪಚಃ । ಪಾ. ೩-೩-೯೫ । ಇತಿ ಭಾವೇ ಕ್ತಿನ್ । ಘುಮಾಸ್ಥೇತೀತ್ವಂ । ವ್ಯತ್ಯಯೇನಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ದಿವಿಸ್ಪೃಶಾ**—ಸ್ವರ್ಗಲೋಕದಲ್ಲಿರುವ । **ಉಭಾ ದೇವಾ**—ಇಬ್ಬರು ದೇವತೆಗಳಾದ । **ಇಂದ್ರವಾಯೂ**—ಇಂದ್ರ ಮತ್ತು ವಾಯು ಎಂಬ ದೇವತೆಗಳನ್ನು । **ಅಸ್ಯ ಸೋಮಸ್ಯ**—ಇಲ್ಲಿ ಸಿದ್ಧಪಡಿಸಿಟ್ಟಿರುವ ಈ ಸೋಮರಸದ । **ಪೀತಯೇ**—ಪಾನಾರ್ಥವಾಗಿ । **ಹವಾಮಹೇ**—ಆಹ್ವಾನಮಾಡುವೆವು.

॥ ಭಾವಾರ್ಥ ॥

ಈಗ ನಾವು ಇಲ್ಲಿ ಸಿದ್ಧಪಡಿಸಿಟ್ಟಿರುವ ಸೋಮರಸವನ್ನು ಪಾನಮಾಡುವುದಕ್ಕಾಗಿ ಸ್ವರ್ಗಲೋಕದಲ್ಲಿರುವ ಇಂದ್ರ ಮತ್ತು ವಾಯು ಎಂಬ ಇಬ್ಬರು ದೇವತೆಗಳನ್ನು ಆಹ್ವಾನಮಾಡುತ್ತೇವೆ (ಕರೆಯುತ್ತೇವೆ)

## English Translation.

We invoke the two gods Indra and Vayu that reach the sky, in order that they may drink this Soma.

॥ ವಿಶೇಷವಿಷಯಗಳು ॥

**ದಿವಿಸ್ಪೃಶಾ**—ದ್ವಿವಚನಾಂತವಾದ ಈ ಶಬ್ದವು ಸ್ವರ್ಗವನ್ನು ಮುಟ್ಟುವ ಎಂದರೆ ಸ್ವರ್ಗಕ್ಕೆ ಹೋಗುವ, ಸ್ವರ್ಗದಲ್ಲಿರುವ ಎಂದು ಮೊದಲಾದ ಅರ್ಥವನ್ನು ಸೂಚಿಸುವುದು.

॥ ವ್ಯಾಕರಣಪ್ರಕ್ರಿಯಾ ॥

**ಉಭಾ ದೇವಾ**—ಉಭಾ, ದೇವಾ ಶಬ್ದಗಳ ಮುಂದಿರುವ ದ್ವಿತೀಯಾದ್ವಿವಚನ ಔಟ್‌ಪ್ರತ್ಯಯಕ್ಕೆ '**ಸುಪಾಂಸುಲುಕ್ಪೂರ್ವಸವರ್ಣಾಽಽಚ್ಛೇ ಯಾಡಾಡ್ಯಾಯಾಜಾಲಃ**' (ಪಾ ಸೂ. ೭-೧-೩೯) ಎಂಬುದರಿಂದ ಆಕಾರಾದೇಶ.

**ದಿವಿಸ್ಪೃಶಾ**—ದಿವಂ ಸ್ಪೃಶತ ಇತಿ ದಿವಿಸ್ಪೃಶೌ, ಎಂದು ವಿಗ್ರಹ, ಔಟ್‌ಪ್ರತ್ಯಯಕ್ಕೆ ಆಕಾರದೇಶ ಮೊದಲಿನಂತೆಯೇ, '**ಹೃದ್ಯುಭ್ಯಾಂಙೇರುಪಸಂಖ್ಯಾನಂ**' (ಪಾ. ಸೂ. ೬-೩-೯-೧) ಎಂಬ ವಾರ್ತಿಕದಲ್ಲಿ ಹೃತ್, ದಿವ್ ಶಬ್ದಗಳ ಮುಂದೆ ಇರುವ ಸಪ್ತಮೀ ಏಕವಚನಕ್ಕೆ ಸಮಾಸದಲ್ಲಿ ಅಲುಕ್ ಬರುವುದು ಎಂದು ವಿಧಾನಮಾಡಿರುವುದರಿಂದ, ಇಲ್ಲಿ ಕರ್ಮಾರ್ಥದಲ್ಲಿ ಸಪ್ತಮೀವಿಭಕ್ತಿಯೇ ಬರುವುದು ಎಂದು '**ಅನ್ಯಾರ್ಥೇ ಚ**' (ಪಾ. ಸೂ. ೬-೩-೯-೨) ಎಂಬ ವಾರ್ತಿಕದಲ್ಲಿ ವ್ಯಕ್ತವು. ಏವಂಚ ಸಪ್ತಮ್ಯೇಕವಚನಪ್ರತ್ಯಯಕ್ಕೆ '**ಹೃದ್ಯುಭ್ಯಾಂ**' ಇತ್ಯಾದಿ ವಾರ್ತಿಕದಿಂದ ಲುಕ್ ಬರುವುದಿಲ್ಲ. '**ಗತಿಕಾರಕೋಪಪದಾತ್ಕೃತ್**' (ಪಾ. ಸೂ. ೬-೨-೧೩೯) ಎಂಬುದರಿಂದ ಸ್ಪೃಕ್ ಎಂಬ ಕೃದಂತ ಉತ್ತರಪದಕ್ಕೆ ಪ್ರಕೃತಿಸ್ವರ ಬರುತ್ತೆ. ಉತ್ತರಪದವು ಧಾತುಸ್ವರದಿಂದ ಉದಾತ್ತ, ಅದೇ ಸ್ವರ ನಿಲ್ಲುವುದು.

**ಇನ್ದ್ರವಾಯೂ**—ಇನ್ದ್ರಶ್ಚ ವಾಯುಶ್ಚ, ಎಂದು ವಿಗ್ರಹ. ಇನ್ದ್ರ, ವಾಯು ಇವು ಎರಡೂ ದೇವತಾವಾಚಕಗಳು. ಆದ್ದರಿಂದ ಇಂದ್ರವಾಯೂ ಎಂಬುದು ದೇವತಾದ್ವಂದ್ವ, '**ದೇವತಾದ್ವಂದ್ವೇ ಚ**' (ಪಾ. ಸೂ. ೬-೩-೨೬) ದೇವತಾದ್ವಂದ್ವ ಸಮಾಸದಲ್ಲಿರುವ ಉತ್ತರಪದದ ಹಿಂದೆ ಇರುವದಕ್ಕೆ ಆನಙ್ ಬರುವುದು ಎಂಬುದರಿಂದ ಯದ್ಯಪಿ ಇನ್ದ್ರಶಬ್ದಕ್ಕೆ ಆನಙ್ ಪ್ರಾಪ್ತವಾಗುವುದು. ಆದರೂ '**ದೇವತಾದ್ವಂದ್ವೇ ಉಭಯತ್ರ ವಾಯೋಃ ಪ್ರತಿಷೇಧಃ**' (ಪಾಸೂ ೬-೩-೨೬-೧) ದೇವತಾವಾಚಕಪದಗಳನ್ನೊಳಗೊಂಡ ದ್ವಂದ್ವಸಮಾಸದಲ್ಲಿ ವಾಯುಶಬ್ದವು ಪೂರ್ವಪದವಾಗಿದ್ದರೂ, ಉತ್ತರಪದವಾಗಿದ್ದರೂ ಆನಙಾದೇಶಕ್ಕೆ ಪ್ರತಿಷೇಧವನ್ನು ಹೇಳಬೇಕು. ಎಂದು ಪ್ರತಿಷೇಧವಿರುವುದರಿಂದ ಆನಙ್ ಆದೇಶ ಬರುವುದಿಲ್ಲ. ಇನ್ದ್ರಶಬ್ದವು '**ಋಜ್ರೇಂದಾಗ್ರ**' (ಉ. ಸೂ. ೨-೧೮೬) ಎಂಬುದರಿಂದ ರನ್ ಪ್ರತ್ಯಯಾಂತ ಆದ್ಯುದಾತ್ತ, ವಾಯು ಶಬ್ದವು '**ಕೃವಾಪಾಜಿಮಿಸ್ವದಿ ಸಾಧ್ಯ ಶೂಭ್ಯ ಉಣ್**' (ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯಾಂತ. ಆದ್ದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತ '**ದೇವತಾದ್ವಂದ್ವೇಚ**' (೬-೨-೧೪೧) ದೇವತಾಬೋಧಕ ಪದಗಳನ್ನೊಳಗೊಂಡ ದ್ವಂದ್ವ ಸಮಾಸದಲ್ಲಿ ಏಕಕಾಲದಲ್ಲಿ ಪೂರ್ವೋತ್ತರ ಪದಗಳೆರಡಕ್ಕೂ ಪ್ರಕೃತಿಸ್ವರ ಬರುವುದು ಎಂಬುದರಿಂದ ಉಭಯಪದ ಪ್ರಕೃತಿ ಸ್ವರವು ಪ್ರಾಪ್ತ

ವಾಗುತ್ತದೆ. ಆದರೂ **'ನೋತ್ತರಪದೇऽನುದಾತ್ತಾದಾವಪೃಥಿವೀರುದ್ರಪೂಷಮಂಥಿಷು'** (ಪಾ. ಸೂ. ೬-೨-೧೪೨) ಪೃಥಿವೀ ಮೊದಲಾಗಿ ಈ ಸೂತ್ರ ನಿರ್ದಿಷ್ಟವಾದ ಪದಗಳನ್ನು ಬಿಟ್ಟು ಅನುದಾತ್ತಾದಿಯಾದ ಶಬ್ದವು ಪರದಲ್ಲಿದ್ದರೆ ಪೂರ್ವಸೂತ್ರೋಕ್ತವಾದ ಉಭಯಪ್ರಕೃತಿ ಸ್ವರ ಬರುವುದಿಲ್ಲ ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುವುದಿಲ್ಲ. **'ಸಮಾಸಸ್ಯ'** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತವೇ ಬರುವುದು.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು, ಲಟ್ ಉತ್ತಮ ಪುರುಷ ಬಹುವಚನ ಮಹಿಙ್ ಪ್ರತ್ಯಯ. ಇದರ ಟಿಗೆ **'ಟಿತ ಆತ್ಮನೇ ಪದಾನಾಂಟೇರೇ'** (ಪಾ. ಸೂ. ೩-೪-೭೯) ಎಂಬುದರಿಂದ ಎಕಾರ ಶಪ್ ವಿಕರಣ. ಹ್ವೇ+ಅ+ಮಹೇ. ಈಗ **'ಬಹುಲಂಛಂದಸಿ'** (ಪಾ. ಸೂ. ೬-೧-೩೪) ಛಂದಸ್ಸಿನಲ್ಲಿ ಹ್ವೇಞ್‌ಧಾತುವಿಗೆ ಬಹುಲವಾಗಿ ಸಂಪ್ರಸಾರಣ ಬರುವುದು ಎಂಬುದರಿಂದ ಸಂಪ್ರಸಾರಣ ಅಂದರೆ ವ್‌ಗೆ, ಉಕಾರ, ನಂತರ **'ಸಂಪ್ರಸಾರಣಾಚ್ಚ'** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ, ಹು+ಅ-ಮಹೇ **'ಸಾರ್ವಧಾತು-ಕಾರ್ಧಧಾತುಕಯೋಃ'** (ಪಾ. ಸೂ. ೭-೩-೮೪) ಎಂಬುದರಿಂದ ಉಕಾರಕ್ಕೆ ಓ ಎಂಬ ಗುಣ ಬರುತ್ತೆ. **'ಏಚೋऽಯವಾಯಾವಃ'** (ಪಾ ಸೂ. ೬-೧-೭೮) ಎಂಬುದರಿಂದ ಓ ಗೆ ಅವ್ ಆದೇಶ ಹವ+ಮಹೇ **'ಅತೋದೀರ್ಘೋಯಞಿ'** (ಪಾ. ಸೂ. ೭-೩-೧೦೧) ಯಞಾದಿಯಾದ ಸಾರ್ವಧಾತುಕ ಪರದಲ್ಲಿರುವಾಗ ಹ್ರಸ್ವಾಕಾರಾಂತವಾದ ಅಂಗಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ, ಹವಾಮಹೇ ಎಂದಾಯಿತು, ಶಪ್ ಪಿತ್ ಆದ್ದರಿಂದ **'ಅನುದಾತ್ತೌಸುಪ್ಪಿತೌ'** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ, ಅದರ ಸ್ಥಾನದಲ್ಲಿ ಬಂದ ದೀರ್ಘವೂ ಸ್ಥಾನಿವದ್ಭಾವದಿಂದ ಅನುದಾತ್ತ, ಮಹೇ ಎಂಬುದು ಲಕಾರದಸ್ಥಾನದಲ್ಲಿ ಬಂದ ಸಾರ್ವಧಾತುಕ ಪ್ರತ್ಯಯ ಇದು ಶಪ್ ಎಂಬ ಅದುಪದೇಶಕ್ಕೆ ಪರದಲ್ಲಿರುವುದು. **'ತಾಸ್ಯನುದಾತ್ತೇನ್ಙಿದದುಪದೇಶಾಲ್ಲಸಾರ್ವಧಾತುಕ-ಮನ್ಹ್ವಿಙೋಃ'** (ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತ, ಧಾತುಸ್ವರದಿಂದ ಹ ಉದಾತ್ತ ಏವಂಚ ಹವಾಮಹೇ ಎಂಬುದು ಆದ್ಯುದಾತ್ತವಾದ ಪದವಾಗಬೇಕಾಗಿ ಬಂತು. ಆದರೆ **'ತಿಙ್ಙತಿಙಃ'** (ಪಾ. ಸೂ. ೮-೧-೨೮) ಎಂಬ ಎಂಟನೇ ಅಧ್ಯಾಯದ ಸೂತ್ರದ ಪ್ರಕಾರ ಇದು ಸರ್ವಾನುದಾತ್ತವಾಗುವುದು.

**ಅಸ್ಯ**—ಇದಮ್ ಶಬ್ದದ ಮುಂದೆ ಷಷ್ಠೀವಿಭಕ್ತಿ ಏಕವಚನ ಪ್ರತ್ಯಯವನ್ನು ಇಟ್ಟರೆ ಇದಮ್ ಙಸ್-**'ತ್ಯದಾದಿನಾಮಃ'** (ಪಾ. ಸೂ. ೭-೨-೧೦೨) ವಿಭಕ್ತಿಯು ಪರದಲ್ಲಿರುವಾಗ ತ್ಯದಾದಿ ಗಣಪಠಿತವಾದ ಶಬ್ದಗಳಿಗೆ ಅಕಾರವು ಅಂತಾದೇಶವಾಗಿ ಬರುವುದು. ಎಂಬುದರಿಂದ ಮ್‌ಗೆ ಅಕಾರಾದೇಶ, **'ಅತೋಗುಣೇ'** (ಪಾ. ಸೂ. ೬-೧-೯೭) ಪದದ ಕೊನೆಯಲಿಲ್ಲದ ಅಕಾರದ ಮುಂದೆ ಗುಣಸಂಜ್ಞಕವಾದ ಅ ಏ-ಓ ಗಳು ಪರದಲ್ಲಿದ್ದರೆ ಪೂರ್ವ ಪರಸ್ಥಾನಗಳಲ್ಲಿ ಪರರೂಪವು ಏಕಾದೇಶವಾಗಿ ಬರುವುದು ಎಂಬುದರಿಂದ, ಪರರೂಪ, ಇದ+ಙಸ್ **'ಟಾಙಸಿಙಸಾ-ಸಾಮಿನಾತ್ಸ್ಯಾಃ'** (ಪಾ. ಸೂ. ೭-೧-೧೨) ಹ್ರಸ್ವಾಂಕಾರಾಂತ ಶಬ್ದದ ಮುಂದೆ ಇರುವ ಟಾ, ಙಸಿ, ಙಸ್ ಇವುಗಳಿಗೆ ಕ್ರಮವಾಗಿ ಇನ-ಅತ್, ಸ್ಯಗಳು ಬರುವುವು ಎಂಬುದರಿಂದ ಸ್ಯ ಆದೇಶ, **'ಹಲಿಲೋಪಃ'** (ಪಾ. ಸೂ. ೭-೨-೧೧೩) ಹಲಾದಿಯಾದ ತೃತೀಯಾದಿ ವಿಭಕ್ತಿಪರದಲ್ಲಿರುವಾಗ ಕಕಾರರಹಿತವಾದ ಇದಮ್ ಶಬ್ದದ ಇದ್‌ಗೆ ಲೋಪ ಬರುವುದು ಎಂಬುದು ಇದ್‌ಗೆ ಲೋಪ **'ಅಸ್ಯ'** ಎಂದು ನಿಷ್ಪನ್ನವಾಗುತ್ತೆ. **'ಫಿಷೋಂತ ಉದಾತ್ತಃ'** (ಫಿ. ಸೂ. ೧) ಫಿಟ್ ಎಂದರೆ ಪ್ರಾತಿಪದಿಕ, ಈ ಸೂತ್ರದಿಂದ ಪ್ರಾತಿಪದಿಕ ಅಕಾರವು ಉದಾತ್ತ ಸ್ಯಗೆ **'ಅನುದಾತ್ತೌಸುಪ್ಪಿತೌ'**

(ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತವು ಪ್ರಾಪ್ತವಾದರೆ ಅದನ್ನು ಬಾಧಿಸಿ **'ಊಡಿದಂ ಪದಾದ್ಯ-ಪ್ಪುಮ್‌ರೈದ್ಯುಭ್ಯಃ'** (ಪಾ. ಸೂ. ೬-೧-೧೭೧) ಊಠ್ ಎಂಬ ಆದೇಶ, ಇದಮ್ ಶಬ್ದ **'ಪದ್ದನ್ನೋಮಾಸ್'**-(ಪಾ. ಸೂ. ೬-೧-೬೩) ಎಂದು ವಿಹಿತವಾದ ಆರು ಪದಾದಿಗಳು ಅಪ್, ಪುಮ್ ರೈ. ದಿವ್, ಎಂಬ ಅಂತೋದಾತ್ತ ಗಳೂ ಏಕಾಚ್ಕಗಳೂ ಆದ ಈ ಶಬ್ದಗಳ ಮುಂದೆ ಇರುವ ಅಸರ್ವನಾಮಸ್ಥಾನ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ಸ್ಯ ಎಂಬುದು ಉದಾತ್ತ. ನಂತರ **'ಅನುದಾತ್ತಂ ಪದಮೇಕವರ್ಜಮ್'** (ಪಾ. ಸೂ. ೬-೧-೧೫೮) ಎಂಬ ಶೇಷಾನುದಾತ್ತ ಸ್ವರದಿಂದ ಪ್ರಾತಿಪದಿಕದ ಅಕಾರವು ಅನುದಾತ್ತ. ಪುರೋವರ್ತಿಸೋಮವು ಅಸ್ಯ ಎಂಬುದರಿಂದ ಬೋಧಿತವಾಗುವುದು. ಆದ್ದರಿಂದ ಅನ್ವಾದೇಶವಿಲ್ಲ ಏವಂಚ, **'ಇದಮೋಽನ್ವಾದೇಶೇಽಶನು-ದಾತ್ತಸ್ತೃತೀಯಾದೌ'** (ಪಾ. ಸೂ. ೨-೪-೩೨) ಎಂಬುದರಿಂದ ಅನುದಾತ್ತ. ಅಶ್ ಆದೇಶ ಬರುವುದಿಲ್ಲ ಆದ್ದರಿಂದ ಅಸ್ಯ ಎಂಬುದು ಸರ್ವಾನುದಾತ್ತವಾಗುವುದಿಲ್ಲ.

**ಪೀತಯೇ**—ಪಾ ಪಾನೇ ಧಾತು, **'ಸ್ಥಾಗಾ ಪಾಪಚೋ ಭಾವೇ'** (ಪಾ. ಸೂ. ೩-೩-೬೫) ಷ್ಠಾ ಗತಿ ನಿವೃತ್ತೌ, ಗೈ ಶಬ್ದೇ--ಪಾ ಪಾನೇ, ಡುಪಚಷ್ ಪಾಕೇ ಈ ಧಾತುಗಳ ಮುಂದೆ ಭಾವಾರ್ಥದ ಕ್ತಿನ್ ಪ್ರತ್ಯಯ ಬರುವುದು, ಎಂಬುದರಿಂದ ಕ್ತಿನ್ ಪ್ರತ್ಯಯ ಪಾ+ತಿ. **'ಏಕಾಚ ಉಪದೇಶೇಽನುದಾತ್ತಾತ್'** (ಪಾ. ಸೂ. ೭-೨-೧೦) ಎಂಬುದರಿಂದಲೋ ಅಥವಾ **'ತಿತುತ್ರತಥಸಿಸುಸರಕಸೇಷುಚ'** (ಪಾ. ಸೂ. ೭-೨-೯) ಎಂಬುದರಿಂದಲೋ ಇಟ್‌ಗೆ ನಿಷೇಧ. **'ಘುಮಾಸ್ಥಾಗಾ ಪಾಜಹಾತಿಸಾಂ ಹಲಿ'** (ಪಾ. ಸೂ. ೬ ೪-೬೬) ಹಲಾದಿಯಾದ ಕಿತ್, ವಾ ಙಿತ್ ಆದ ಆರ್ಧಧಾತುಕ ಪ್ರತ್ಯಯಃಪರದಲ್ಲಿರುವಾಗ ಘು ಸಂಜ್ಞೆಯನ್ನು ಹೊಂದಿರುವ ದಾ, ಧಾ ಧಾತುಗಳು, ಷ್ಠಾ, ರಾ, ಪಾ. ಜಹಾ, ತಿ, ಸಾ, ಈ ಧಾತುಗಳಿಗೂ ಸಹ ಈಕಾರಾದೇಶ ಬರುವುದು, ಎಂಬುದರಿಂದ ಪಾಗೆ ಈ ಆದೇಶ, ಪೀತಿ ಎಂದಾಯಿತು, ಪ್ರತ್ಯಯವು ನಿತ್ತಾದ್ದರಿಂದ **'ಞ್ನಿತ್ಯಾದಿರ್ನಿತ್ಯಮ್'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವು ಪ್ರಾಪ್ತವಾದರೂ ವ್ಯತ್ಯಯದಿಂದ ಅಂತೋದಾತ್ತವೇ ಬರುವುದು. ಚತುರ್ಥೀ ವಿಭಕ್ತಿ ಏಕ ವಚನದಲ್ಲಿ ಪೀತಯೇ ಎಂದಾಗುತ್ತೆ. ‖ ೨ ‖

‖ ಸಂಹಿತಾಪಾಠಃ ‖

ಇಂದ್ರವಾಯೂ ಮನೋಜುವಾ ವಿಪ್ರಾ ಹವಂತ ಊತಯೇ ।
ಸಹಸ್ರಾಕ್ಷಾ ಧಿಯಸ್ಪತೀ ‖ ೩ ‖

‖ ಪದಪಾಠಃ ‖

ಇಂದ್ರವಾಯೂ ಇತಿ । ಮನಃಽಜುವಾ । ವಿಪ್ರಾಃ । ಹವಂತೇ । ಊತಯೇ ।
ಸಹಸ್ರಽಅಕ್ಷಾ । ಧಿಯಃ । ಪತೀ ಇತಿ ‖ ೩ ‖

॥ ಸಾಯಣಭಾಷ್ಯಂ ॥

ವಿಪ್ರಾ ಮೇಧಾವಿನ ಋತ್ವಿಗ್ಯಜಮಾನಾ ಊತಯೇ ರಕ್ಷಣಾರ್ಥಮಿಂದ್ರವಾಯೂ ಹವಂತೇ । ಆಹ್ವಯಂತಿ । ಕೀದೃಶೌ । ಮನೋಜುವಾ ಮನ ಇವ ವೇಗವತ್ತರೌ ಸಹಸ್ರಾಕ್ಷಾ ಸಹಸ್ರನಯನ-ಯುಕ್ತೌ । ಯದ್ಯಪೀಂದ್ರ ಏವ ಸಹಸ್ರಾಕ್ಷಸ್ತಥಾಪಿ ಛತ್ರಿನ್ಯಾಯೇನ ವಾಯುರಪಿ ತಥೋಚ್ಯತೇ । ಧಿಯಸ್ಪತೀ । ಕರ್ಮಣೋ ಬುದ್ಧೇರ್ವಾ ಪಾಲಕೌ ॥ ಮನೋಜುವಾ । ಜವತಿರ್ಗತಿಕರ್ಮಾ । ಮನೋ-ವಜ್ಜವತ ಇತಿ ಮನೋಜುವಾ ಮನ ಇವ ವೇಗಯುಕ್ತೌ । ಕೃದುತ್ತರಪದಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತ್ಯಾಕಾರಃ । ವಿಪ್ರಾಃ । ಔಣಾದಿಕೋ ರನ್ । ರನ್ಪ್ರತ್ಯಯಾಂತ ಆದ್ಯುದಾತ್ತಃ । ಊತಯೇ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ । ಸಹಸ್ರಾಕ್ಷಾ । ಸಹಸ್ರಮಕ್ಷೀಣಿ ಯಯೋಸ್ತೌ । ಬಹು-ವ್ರೀಹೌ ಸಕ್ಥ್ಯಕ್ಷ್ಣೋಃ । ಪಾ. ೫-೪-೧೧೩ । ಇತಿ ಷಚ್ ಸಮಾಸಾಂತಃ । ಬಹುವ್ರೀಹಿಸ್ವರೇ ಪ್ರಾಪ್ತೇ ಸಮಾಸಾಂತಪ್ರತ್ಯಯಸ್ಯ ಸತಿ ಶಿಷ್ಟತ್ವಾಚ್ಚಿತ ಇತ್ಯಂತೋದಾತ್ತತ್ವಂ । ಧಿಯಃ । ಸಾವೇಕಾಚ ಇತಿ ಜಸ ಉದಾತ್ತತ್ವಂ । ಷಷ್ಠ್ಯಾಃ ಪತಿಪುತ್ರೇತಿ ಸಂಹಿತಾಯಾಂ ವಿಸರ್ಜನೀಯಸ್ಯ ಸಕಾರಃ । ಪತೀ । ಡತ್ಯಂತ ಆದ್ಯುದಾತ್ತಃ ॥

॥ ಪ್ರತಿಪದಾರ್ಥ ॥

ವಿಪ್ರಾಃ—ಮೇಧಾವಿಗಳಾದ (ಬುದ್ಧಿವಂತರಾದ) ಜನರು । **ಮನೋಜುವಾ**—ಮನಸ್ಸಿನ ವೇಗದಂತೆ ಶೀಘ್ರಗಾಮಿಗಳಾದ ! **ಸಹಸ್ರಾಕ್ಷಾ**—ಸಾವಿರಾರು ಕಣ್ಣುಗಳುಳ್ಳ । **ಧಿಯಸ್ಪತೀ**—ಕರ್ಮಾಧಿಪತಿಗಳಾದ ಅಥವಾ ಬುದ್ಧಿಗೆ ಅಧಿಪತಿಗಳಾದ । **ಇಂದ್ರವಾಯೂ**—ಇಂದ್ರ ಮತ್ತು ವಾಯು ಎಂಬ ಈರ್ವರು ದೇವತೆಗಳನ್ನು । **ಊತಯೇ**—ರಕ್ಷಣೆಗಾಗಿ । **ಹವಂತೇ**—ಆಹ್ವಾನ ಮಾಡುತ್ತಾರೆ.

॥ ಭಾವಾರ್ಥ ॥

ಇಂದ್ರ ಮತ್ತು ವಾಯು ಎಂಬ ದೇವತೆಗಳು ಮನೋವೇಗವುಳ್ಳವರು, ಸಹಸ್ರನಯನಯುಕ್ತರು, ಕರ್ಮಗಳಿಗೆ ಅಧಿಪತಿಗಳು ಅಥವಾ ಬುದ್ಧಿಯನ್ನು ಪ್ರೇರಿಸುವವರು. ಇಂತಹ ಇಂದ್ರವಾಯುಗಳನ್ನು ಬುದ್ಧಿವಂತರಾದ ಜನರು ರಕ್ಷಣೆಗಾಗಿ ಆಹ್ವಾನ ಮಾಡುತ್ತಾರೆ.

## English Translation.

The wise invoke for protection Indra and Vayu who are swift as thought, who have a thousand eyes and who are the lords of the pious acts (or of mind).

॥ ವಿಶೇಷವಿಷಯಗಳು ॥

**ಮನೋಜುವಾ—ಮನ ಇವ ವೇಗಯುಕ್ತೌ**—ಮನಸ್ಸಿನಂತೆ ವೇಗವುಳ್ಳವರು. ಮನಸ್ಸು ಎಷ್ಟು ದೂರದಲ್ಲಿರುವ ವಸ್ತುವನ್ನಾಗಲಿ ಕ್ಷಣಮಾತ್ರದಲ್ಲಿ ಚಿಂತಿಸಬಲ್ಲದು. ಆದುದರಿಂದ ಬಹು ವೇಗವನ್ನು ನಿರ್ದೇಶಿಸುವಾಗ ಮನೋವೇಗದಂತೆ ವೇಗವುಳ್ಳ ಎಂಬ ಉಪಮಾನವನ್ನು ಹೇಳುವ ರೂಢಿಯಿರುವುದು.

**ಸಹಸ್ರಾಕ್ಷಾ—ಸಹಸ್ರಮಕ್ಷೀಣಿ ಯಯೋಸ್ತೌ—**ಸಾವಿರ ಕಣ್ಣುಗಳುಳ್ಳವರು. ಪುರಾಣಾದಿಗಳಲ್ಲಿಯೂ, ಆಧುನಿಕ ಸಂಸ್ಕೃತದಲ್ಲಿಯೂ ಇಂದ್ರನಿಗೆ ಸಹಸ್ರಾಕ್ಷನೆಂದು ಹೇಳುವ ರೂಢಿಯಿರುವುದು. ವೇದದಲ್ಲಿ ಈ ವಿಧವಾದ ಎಂದರೆ ಸಾವಿರಕಣ್ಣುಗಳುಳ್ಳವನು ಎಂಬ ಅರ್ಥವು ಉಂಟಾಗಲು ಕಾರಣವೇನೆಂದರೆ—ಇಂದ್ರನು ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಇರುವನು. ಸ್ವರ್ಗದಲ್ಲಿ ಸಾವಿರಾರು ನಕ್ಷತ್ರಗಳು ಕಣ್ಣುಗಳಂತೆ ಮಿನುಗುತ್ತಿರುವುವು. ಆದುದರಿಂದ ಇಂದ್ರನು ಸಹಸ್ರನಯನೋಪೇತನು ಎಂದು ಹೇಳುವ ರೂಢಿ ಬಂದಿರಬಹುದೆಂದು ತೋರುತ್ತದೆ. ಇಲ್ಲಿ ಇಂದ್ರನಿಗೆ ಸಹಸ್ರಾಕ್ಷನೆಂದು ಹೇಳುವುದು ಯುಕ್ತವಾಗಿದ್ದರೂ ವಾಯುವನ್ನು ಈ ವಿಶೇಷಣ ಶಬ್ದದಿಂದ ವಿವರಿಸುವುದು ಸರಿಯಾಗಿರುವುದಿಲ್ಲ ಇಂದ್ರನ ಸಹಚರ್ಯದಿಂದಲೋ ಅಥವಾ :ವಾಯು ಸರ್ವವ್ಯಾಪಿಯಾಗಿರುವುದರಿಂದ ಎಲ್ಲವನ್ನೂ ನೋಡಲು ಶಕ್ತಿಯಿರುವುದರಿಂದಲೋ, ಸಹಸ್ರಾಕ್ಷನೆಂದು ವಾಯುವನ್ನು ಸಂಬೋಧನೆ ಮಾಡಿರಬಹುದು. ಇದರಂತೆ ಮನೋಜುವಾ ಎಂಬ ಶಬ್ದವು ವಾಯುವಿಗೆ ಅನ್ವಯಿಸವುದಾದರೂ ಇಂದ್ರನಿಗೂ ಹೆಚ್ಚಾಗಿ ಅನ್ವಯಿಸುವಂತೆ ಇಲ್ಲಿ ಸಂಬೋಧನೆ ಮಾಡಿದೆ. ಮುಖ್ಯಾಭಿಪ್ರಾಯವೇನೆಂದರೆ ಮನೋಜುವಾ ಎಂಬ ಶಬ್ದವು ಸದಾ ಚಲಿಸುತ್ತಿರುವ ಅಥವಾ ಚಲಿಸುವ ಸ್ವಭಾವವುಳ್ಳ ವಾಯುವಿಗೆ ಮಾತ್ರವೇ ಅನ್ವಯಿಸುವುದು. ಸಹಸ್ರಾಕ್ಷಾ ಎಂಬ ಶಬ್ದವು ಇಂದ್ರನನ್ನೇ ನಿರ್ದೇಶಿಸುವುದು. ಆದರೂ ಈ ಶಬ್ದಗಳು ಇಂದ್ರವಾಯುಗಳಿಬ್ಬರನ್ನೂ ಪ್ರಶಂಸಿಸುವ ವಿಶೇಷಣಪದಗಳಾಗಿ ಇಲ್ಲಿ ಉಪಯೋಗಿಸಲ್ಪಟ್ಟಿರುವವು.

**ಧಿಯಸ್ಪತೀ—**ಧೀ ಶಬ್ದಕ್ಕೆ ಕರ್ಮ ಅಥವಾ ಪ್ರಜ್ಞೆಯೆಂದರ್ಥವು. ಆದುದರಿಂದ ಧಿಯಸ್ಪತೀ ಎಂದರೆ, ನಾವು ಮಾಡುವ ಯಜ್ಞಾದಿಸತ್ಕರ್ಮಗಳಿಗೆ ಸ್ವಾಮಿ ಎಂದರೆ ಅವುಗಳು ನಿರ್ವಿಘ್ನವಾಗಿ ನೆರವೇರುವಂತೆ ಸಂರಕ್ಷಿಸತಕ್ಕವರು, ಅಥವಾ ನಮ್ಮ ಬುದ್ಧಿಯು ಒಳ್ಳೆಯ ಕಾರ್ಯಗಳಲ್ಲಿ ಆಸಕ್ತವಾಗುವಂತೆ ಮಾಡತಕ್ಕವರು, ಅಥವಾ ನಮ್ಮ ಬುದ್ಧಿಯು ಒಳ್ಳೆಯ ಕಾರ್ಯಗಳಲ್ಲಿ ಆಸಕ್ತವಾಗುವಂತೆ ಪ್ರೇರಿಸತಕ್ಕವರು ಎಂದಭಿಪ್ರಾಯವು. ಇದರಂತೆ ಇರುವ **ಶುಭಸ್ಪತೀ, ಜ್ಯೋತಿಷಸ್ಪತೀ, ವಾಚಸ್ಪತಿ, ಶವಸಸ್ಪತಿ,** ಮೊದಲಾದ ಶಬ್ದಗಳ ಅರ್ಥವು ಗಮನಾರ್ಹವಾಗಿರುವುದು.

॥ ವ್ಯಾಕರಣಪ್ರಕ್ರಿಯ ॥

**ಮನೋಜುವಾ—**'**ಜು**' ಎಂಬ ಧಾತುವು ಧಾತುಪಾಠದಲ್ಲಿ ಪಠಿತವಾಗಿಲ್ಲ ಆದರೂ '**ಜು ಚಂಕ್ರಮ್ಯ-**' (ಪಾ. ಸೂ. ೩-೨-೧೫೦) ಎಂಬ ಸೂತ್ರದಲ್ಲಿ ಪಠಿತವಾಗಿದೆ. '**ಜು ಇತಿ ಸೌತ್ರೋ ಧಾತುರ್ಗತೌ ವೇಗೇ ಚ**' ಎಂದು ಕೌಮುದಿಯಲ್ಲಿ ಗತಿ, ವೇಗ ಎಂದು ಎರಡು ಅರ್ಥಗಳೂ ಇದಕ್ಕೆ ಇರುವುವು ಎಂದು ಹೇಳಲಾಗಿದೆ ಮನೋವತ್ ಜವತ ಇತಿ, ಮನಸ್ಸಿನಂತೆ (ವೇಗವಾಗಿ) ಹೋಗುವವು ಎಂದು ವಿವಕ್ಷೆಮಾಡಿದರೆ '**ಕ್ವಿಪ್ ಚ**' ಎಂಬುದರಿಂದ ಕ್ವಿಪ್, ಉಪಪದಸಮಾಸ, ಮನೋಜು ಶಬ್ದದ ಮುಂದೆ ದ್ವಿತೀಯಾ ದ್ವಿವಚನ ಔಟ್‌ಪ್ರತ್ಯಯ, ಅದಕ್ಕೆ '**ಸುಪಾಂ ಸುಲುಕ್-**' (ಪಾ. ಸೂ. ೭-೧-೩೯) ಎಂಬುದರಿಂದ ಆಕಾರದೇಶ ಮನೋಜು+ಆ, ಇಲ್ಲಿ '**ಅಚಿಶ್ನುಧಾತು ಭ್ರುವಾಂ ಯ್ವೋರಿಯಙುವಙೌ**' (ಪಾ. ಸೂ. ೬-೪-೭೭) ಎಂಬುದರಿಂದ ಉವಙಾದೇಶ ಬಂದರೆ, ಮನೋಜುವಾ, ಎಂದಾಗುತ್ತೆ, '**ಗತಿಕಾರಕಪೂರ್ವಸ್ಯೈವೇಷ್ಯತೇ**' (ಪಾ. ಸೂ. ೬-೪-೮೨) ಯತ್ಕಿಂಚಿತ್ ಪದವನ್ನು ಪೂರ್ವದಲ್ಲಿ ಹೊಂದಿರುವ ಇ. ಉ. ವರ್ಣಾಂತ ಧಾತುಗಳಿಗೆ ಯಣ್ ಬರುವ ಪಕ್ಷದಲ್ಲಿ ಗತಿಸಂಜ್ಞಕ ಅಥವಾ ಕಾರಕಸಂಜ್ಞಕವಾದ ಪೂರ್ವಪದವಿರುವಾಗ ಮಾತ್ರವೇ ಬರುವುದು, ಗತಿಕಾರಕಭಿನ್ನ ಪೂರ್ವಪದಕಗಳಾದ ಇ, ಉ, ವರ್ಣಾಂತಧಾತುಗಳಿಗೆ ಯಣ್

ಬರುವುದಿಲ್ಲ. ಎಂಬುದರಿಂದ ' ಓಸ್ಸುಪಿ ' (ಪಾ. ಸೂ. ೬-೪-೮೩) ಎಂಬುದರಿಂದ ಪ್ರಾಪ್ತವಾಗುವ ಯಣ್ ವಾರಿತವಾಗುತ್ತೆ ಇಲ್ಲಿ ಇವಾರ್ಥಸಾದೃಶ್ಯದಲ್ಲಿ ಮನಃ ಎಂಬ ಪ್ರಥಮಾಂತವು ಅನ್ವಿತವಾಗುತ್ತೆ. ಕ್ರಿಯೆಯಲ್ಲಿ ಅನ್ವಿತವಾಗುವುದಿಲ್ಲ. ಆದ್ದರಿಂದ ಅದು ಗತಿಸಂಜ್ಞವೂ ಅಲ್ಲ. ಕಾರಕಸಂಜ್ಞಕವೂ ಅಲ್ಲ ಎಂಬುದು ಸ್ಪಷ್ಟವು ವಿಪ್ರಾಃ, **' ಋಜ್ರೇನ್ದ್ರಾಗ್ರ-ವಿಪ್ರ-'** (ಉ. ಸೂ. ೨-೧೮೬) ಎಂಬ ಸೂತ್ರದಿಂದ ಡುವಪ್ ಬೀಜಸಂತಾನೇ, ಎಂಬ ಧಾತುವಿನ ಮುಂದೆ ದನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ, ಧಾತುವಿನ ಅಕಾರಕ್ಕೆ ಇಕಾರಾದೇಶವು ಈ ಸೂತ್ರದಲ್ಲಿ ನಿಪಾತಿತವಾಗಿದೆ, ಪ್ರತ್ಯಯವು ನಿತ್, ಆದ್ದರಿಂದ **' ಞ್ನಿತ್ಯಾದಿರ್ನಿತ್ಯಮ್ '** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ.

**ಊತಯೇ—' ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ '** (ಪಾ. ಸೂ. ೩-೩-೯೭) **' ಮನ್ತ್ರೇ ವೃಷೇಷಪಚಮನವಿದಭೂವೀರಾ ಉದಾತ್ತಃ '** (ಪಾ. ಸೂ. ೩-೩-೯೬) ಎಂಬ ಹಿಂದಿನ ಸೂತ್ರದಿಂದ ಉದಾತ್ತಃ ಎಂಬ ಪದವು ಇಲ್ಲಿ ಅನುವೃತ್ತವಾಗುವುದು, ಏವಂಚ, ಊತಿ ಮೊದಲಾದ ಕ್ತಿನ್ನಂತ ಪದಗಳು ಅಂತೋದಾತ್ತಗಳಾಗಿ ನಿಪಾತಿಸಲ್ಪಡುವುವು ಎಂದು ಸೂತ್ರಕ್ಕೆ ಅರ್ಥ. ಪ್ರಕೃತ. ಅವ ರಕ್ಷಣೇ ಧಾತುವಿನ ಮುಂದೆ ಕ್ತಿನ್ ಪ್ರತ್ಯಯ ಅವ್+ತಿ **' ಜ್ವರತರಸ್ರವ್ಯವಿಮವಾಮುಪಧಾಯಾಶ್ಚ '** (ಪಾ. ಸೂ. ೬-೪-೨೦) ಎಂಬುದರಿಂದ ಅಕಾರವಕಾರಗಳೆರಡಕ್ಕೂ ಊಠ್-ಊತಿ, ಎಂದಾಗುತ್ತೆ, ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಪ್ರಾಪ್ತವಾದರೆ ಈ ಸೂತ್ರದಿಂದ ಅಂತೋದಾತ್ತವೇ ಆಗುವುದು.

**ಸಹಸ್ರಾಕ್ಷಾ**—ಸಹಸ್ರಂ ಅಕ್ಷೀಣಿ ಯಯೋಸ್ತೌ ಎಂದು ವಿಗ್ರಹ, ಯಾರಿಗೆ ಸಹಸ್ರ ಕಣ್ಣುಗಳಿವೆಯೋ ಅವರಿಬ್ಬರೂ ಎಂದರ್ಥ. ಇದು ಬಹುವ್ರೀಹಿಸಮಾಸ, **' ಬಹುವ್ರೀಹೌ ಸಕ್ಥ್ಯಕ್ಷ್ಣೋಃಸ್ವಾಂಗಾತ್ಷಚ್ '** (ಪಾ. ಸೂ. ೫-೪-೧೧೩) ಬಹುವ್ರೀಹೌ, ಎಂಬಲ್ಲಿ ಸಪ್ತಮಿಯೂ, ಸಕ್ಥ್ಯಕ್ಷ್ಣೋಃ ಎಂಬಲ್ಲಿ ಷಷ್ಠಿಯೂ ಸಹ ಪಂಚಮ್ಯರ್ಥದಲ್ಲಿ ಬಂದಿರುವುದು ಸಕ್ಥ್ಯಕ್ಷ್ಣೋಃ ಎಂಬುದು ಬಹುವ್ರೀಹೌ ಎಂಬುದಕ್ಕೆ ವಿಶೇಷಣ. ಆದ್ದರಿಂದ **' ಯೇನ ವಿಧಿಸ್ತದನ್ತಸ್ಯ '** (ಪಾ. ಸೂ. ೧-೧-೭೨) ಎಂಬುದರಿಂದ ತದಂತಲಾಭ, **' ಸಮಾಸಾಂತಾಃ '** (ಪಾ. ಸೂ. ೫-೪-೬೮) **' ತದ್ಧಿತಾಃ '** (ಪಾ. ಸೂ. ೪-೧-೭೬) ಎಂಬ ಸೂತ್ರಗಳು ಅಧಿಕೃತವಾಗುವುವು. ಸ್ವಾಂಗವಾಚಕಗಳಾದ ಯಾವ ಸಕ್ಥಿ ಅಕ್ಷಿ ಶಬ್ದಗಳಿವೆಯೋ ಅವುಗಳನ್ನು ಕೊನೆಯಲ್ಲಿ ಹೊಂದಿರುವ ಬಹುವ್ರೀಹಿ ಸಮಾಸದ ಮುಂದೆ ಷಚ್ ಬರುವುದು ಅದು ಸಮಾಸಾಂತಾವಯವವಾಗುವುದು. ತದ್ಧಿತಸಂಜ್ಞಕವೂ ಆಗುವುದು ಎಂದು ಸೂತ್ರಾರ್ಥ. **' ಅದ್ರವಂ ಮೂರ್ತಿಮತ್ಸ್ವಾಂಗಂ ಪ್ರಾಣಿಸ್ಥಮವಿಕಾರಜಮ್ । ಅತತ್ಸ್ಥಂ ತತ್ರ ದೃಷ್ಟಂ ಚ, ತಸ್ಯ ಚೇತ್ತತ್ತಥಾಯುತಮ್ '** (ಪಾ. ಸೂ ೪-೧-೫೪ ಶ್ಲೋಕ ವಾರ್ತಿಕ) ಎಂದು ಮೂರು ವಿಧವಾಗಿ ಸ್ವಾಂಗಲಕ್ಷಣವು ನಿರುಕ್ತವಾಗಿದೆ, ದ್ರವಭಿನ್ನವೂ, ಅವಿಭುದ್ರವ್ಯ ಪರಿಮಾಣಕವೂ, ರೋಗಾದಿ ವಿಕಾರಾಜನ್ಯವೂ ಆಗಿ ಯಾವುದು ಪ್ರಾಣಿಯಲ್ಲಿರುವುದೋ ಅದು ಸ್ವಾಂಗವೆನಿಸುವುದು ಎಂದು ಪ್ರಥಮ ಲಕ್ಷಣ. ಈಗ ಪ್ರಾಣಿಯಲ್ಲಿಲ್ಲದಿದ್ದರೂ ಯಾದಾಕದಾಚಿತ್ ಪ್ರಾಣಿಯಲ್ಲಿ ದೃಷ್ಟವಾದುದೂ ಸ್ವಾಂಗವೆನಿಸುವುದು ಎಂದು ದ್ವಿತೀಯ ಲಕ್ಷಣ, ಪ್ರತಿಮಾದ್ಯಪ್ರಾಣಿದ್ರವ್ಯವು, ಪ್ರಾಣವುಳ್ಳ ದ್ರವ್ಯದಂತೆಯೇ ಪ್ರಾಣಿಸ್ಥವಾದ ಸ್ತನಾದ್ಯಾಕೃತಿಗಳಿಂದ ಕೂಡಿಕೊಂಡಿರುವ ಪಕ್ಷದಲ್ಲಿ ಆ ಸ್ತನಾದ್ಯಾಕೃತಿಯು ಅಪ್ರಾಣಿಸಂಬಂಧಿಯಾದಾಗ್ಯೂ ಸ್ವಾಂಗವೆನಿಸುವುದು ಎಂದು ತೃತೀಯ ಲಕ್ಷಣ, ಪ್ರಕೃತ ಸಕ್ಥಿ ಅಕ್ಷಿ ಇವುಗಳಿಗೆ, ಪ್ರಥಮ ಲಕ್ಷಣವೇ ಸಮನ್ವಿತವಾಗುವುದು. ಏವಂಚ, ಪೂರ್ವಸೂತ್ರದಿಂದ ಷಚ್ ಬಂದರೆ ಸಹಸ್ರಾಕ್ಷಿನ್+ಅ, **' ನಸ್ತದ್ಧಿತೇ '** (ಪಾ. ಸೂ. ೬-೪-೧೪೪) ತದ್ಧಿತಪ್ರತ್ಯಯ ಪರದಲ್ಲಿರುವಾನಾಂತವಾದ ಭಸಂಜ್ಞಕಾಂಗದ ಟಿಗೆ ಲೋಪ ಬರುವುದು

ಎಂಬುದರಿಂದ ಅನ್‌ಗೆ ಲೋಪ ಸಹಸ್ರಾಕ್ಷ, ಎಂದಾಯ್ತು. **'ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾಗುವುದು. ಆದರೂ, **'ಸತಿ ಶಿಷ್ಟ ಸ್ವರಃ ಬಲೀಯಸ್ತ್ವಮನ್ಯತ್ರ ವಿಕರಣೇಭ್ಯಃ'** ಎಂಬುದರಿಂದ ಸತಿಶಿಷ್ಟಸ್ವರವು ಪ್ರಬಲ ಆದ್ದರಿಂದ ಸತಿಶಿಷ್ಟವಾದ **'ಚಿತಃ'** ಎಂಬ ಅಂತೋದಾತ್ತವೇ ಇಲ್ಲಿ ಬರುವುದು. ಚಷ್ ಚಿತ್ ವಿಭಕ್ತಿಗೆ ಮೊದಲಿನಂತೆ ಆ ಆದೇಶ.

**ಧಿಯಃ—'ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ'** (ಪಾ. ಸೂ. ೬-೧-೧೬೮) ಸು ಎಂಬುದರಿಂದ ಸಪ್ತಮೀ ವಿಭಕ್ತಿ ಬಹುವಚನವು ವಿವಕ್ಷಿತವು. ಸಪ್ತಮೀ ಬಹುವಚನ ಪ್ರತ್ಯಯ ಪರದಲ್ಲಿರುವಾಗ ಯಾವ ಶಬ್ದವು ಒಂದೇ ಅಜ್ವರ್ಣವನ್ನು ಹೊಂದಿರುವುದೋ ಆಶಬ್ದದ ಮುಂದೆ ಬರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗು-ವುದು ಎಂದು ಸೂತ್ರಾರ್ಥ, ಧೀಷು ಎಂಬಲ್ಲಿ ಧೀಶಬ್ದವು ಸಪ್ತಮೀ ಬಹುವಚನ ಪರದಲ್ಲಿರುವಾಗ ಏಕಾಚ್ಕವಾಗಿದೆ. ಆದ್ದರಿಂದ ಧೀಶಬ್ದದ ಮುಂದೆ ಇರುವ ಷಷ್ಠೀವಿಭಕ್ತಿ ಉದಾತ್ತ, ಧಿಯಃ+ಪತೀ, ಎಂಬಲ್ಲಿ **'ಷಷ್ಠ್ಯಾಃ ಪತಿಪುತ್ರ-ಪೃಷ್ಠಪಾರಪದಪಯಸ್ಪೋಷೇಷು'** (ಪಾ. ಸೂ. ೮-೩-೫೩) ಪತಿಮೊದಲಾದ ಶಬ್ದಗಳು ಪರದಲ್ಲಿರುವಾಗ ಷಷ್ಠೀವಿಭಕ್ತಿಸಂಬಂಧಿಯಾದ ವಿಸರ್ಗಕ್ಕೆ ಸಕಾರಾದೇಶ ಬರುವುದು. ಎಂಬುದರಿಂದ ವಿಸರ್ಗಕ್ಕೆ ಸಕಾರಾದೇಶ, ಪತೀ. **'ಪಾ ರಕ್ಷಣೇ,** ಧಾತು **'ಪಾತೇರ್ಡತಿಃ'** (ಉ. ಸೂ. ೪-೫೭) ಎಂಬುದರಿಂದ ಡತಿಪ್ರತ್ಯಯ, ಪ್ರತ್ಯಯ ಡಿತ್, ಡಿತ್ವಸಾಮರ್ಥ್ಯದಿಂದ ಭಸಂಜ್ಞೆ ಇಲ್ಲದೇ ಇದ್ದರೂ ಆ ಎಂಬ ಟಿಗೆ ಲೋಪ, ಪತಿ ಎಂದಾಗುತ್ತೆ. ಏವಂ ಚ **'ಆದ್ಯುದಾತ್ತಶ್ಚ'** (ಪಾ. ಸೂ. ೩-೩-೩) ಎಂಬುದರಿಂದ ಆದ್ಯುದಾತ್ತ ॥ ೩ ॥

॥ ಸಂಹಿತಾಪಾಠಃ ॥

ಮಿತ್ರಂ ವಯಂ ಹವಾಮಹೇ ವರುಣಂ ಸೋಮಪೀತಯೇ ।
ಜಜ್ಞಾನಾ ಪೂತದಕ್ಷಸಾ ॥ ೪ ॥

॥ ಪದಪಾಠಃ ॥

ಮಿತ್ರಂ । ವಯಂ । ಹವಾಮಹೇ । ವರುಣಂ । ಸೋಮಽಪೀತಯೇ ॥
ಜಜ್ಞಾನಾ । ಪೂತಽದಕ್ಷಸಾ ॥ ೪ ॥

॥ ಸಾಯಣಭಾಷ್ಯಂ ॥

**ಚತುರ್ವಿಂಶಕೇಽಹನಿ ಪ್ರಾತಃಸವನೇ ಮೈತ್ರಾವರುಣಶಸ್ತ್ರೇ ಮಿತ್ರಂ ವಯಂ ಹವಾಮಹ ಇತಿ ತೃಚಃ ಷಡಹಸ್ತೋತ್ರಿಯಃ । ಚತುರ್ವಿಂಶ ಇತಿ ಖಂಡೇ ಸೂತ್ರಿತಂ । ಆ ನೋ ಮಿತ್ರಾವರುಣಾ ಮಿತ್ರಂ ವಯಂ ಹವಾಮಹೇ । ಆ. ೭-೨ । ಇತಿ ॥ ಅಭಿಪ್ಲವಷಡಹೇಽಪಿ ಪ್ರಾತಃಸವನೇ ಮೈತ್ರಾವರುಣಸ್ಯಾಯಂ**

ತೃಚ ಆವಾಪಾರ್ಥಃ । ಅಭಿಪ್ಲವಪೃಷ್ಠ್ಯಾಹಾನೀತಿ ಖಂಡೇ ಸೂತ್ರಿತಂ । ಪರಿಶಿಷ್ಟಾನಾವಾಪಾನುದ್ಧೃತ್ಯ ಮಿತ್ರಂ ವಯಂ ಹವಾಮಹೇ । ಆ. ೭-೫ । ಇತಿ ॥ ಮೈತ್ರಾವರುಣಸ್ಯ ಮಿತ್ರಂ ವಯಂ ಹವಾಮಹ ಇತ್ಯೇಷಾ ಪ್ರಾತಃಸವನೇ ಪ್ರಸ್ಥಿತಯಾಜ್ಯಾ । ಪ್ರಶಾಸ್ತಾ ಬ್ರಾಹ್ಮಣಾಚ್ಛಂಸೀತ್ಯುಪಕ್ರಮ್ಯೇದಂ ತೇ ಸೌಮ್ಯಂ ಮಧು ಮಿತ್ರಂ ವಯಂ ಹವಾಮಹೇ । ಆ. ೫-೫ । ಇತಿ ಸೂತ್ರಿತಂ ॥

ವಯಮನುಷ್ಠಾತಾರಃ ಸೋಮಪೀತಯೇ ಸೋಮಪಾನಾರ್ಥಂ ಮಿತ್ರಂ ವರುಣಂ ಚೋಭಾವಾಹ್ವಯಾಮಃ । ಕೀದೃಶಾವುಭೌ । ಜಜ್ಞಾನಾ ಕರ್ಮಪ್ರದೇಶೇ ಪ್ರಾದುರ್ಭವಂತೌ ಪೂತದಕ್ಷಸಾ ಶುದ್ಧಬಲೌ ॥ ವರುಣಂ । ವೃಞ್ ವರಣೇ । ಕೃವೃಜೃಸಿದ್ರುಪನ್ಯನಿಸ್ವಪಿಭ್ಯೋ ನಿತ್ । ನಿತ್ವಾದಾದ್ಯುದಾತ್ತಃ । ಸೋಮಪೀತಯೇ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಜಜ್ಞಾನಾ । ಜನೀ ಪ್ರಾದುರ್ಭಾವೇ । ಛಂದಸಿ ಲಿಟ್ । ಪಾ. ೩-೨-೧೦೫ । ತಸ್ಯ ಲಿಟಃ ಕಾನಜ್ವಾ । ಪಾ. ೩-೨-೧೦೬ । ಇತಿ ಕಾನಜಾದೇಶಃ । ಗಮಹನೇತ್ಯಾದಿನಾ । ಪಾ. ೬-೪-೯೮ । ಉಪಧಾಲೋಪಃ । ತಸ್ಯಾಚಃ ಪರಸ್ಮಿನ್ನಿತಿ ಸ್ಥಾನಿವದ್ಭಾವಾಜ್ಜನಶಬ್ದಸ್ಯ ದ್ವಿರ್ವಚನಂ । ಸ್ತೋಃ ಶ್ಚುನಾ ಶ್ಚುಃ । ಪಾ. ೮-೪-೪೦ । ಇತಿ ನಕಾರಸ್ಯ ಞಕಾರಃ । ಚಿತ ಇತ್ಯಂತೋದಾತ್ತತ್ವಂ । ಪೂರ್ವವದಾಕಾರಃ । ಪೂತದಕ್ಷಸಾ । ಪೂಞ್ ಪವನೇ । ನಿಷ್ಠೇತಿ ಕ್ತಃ । ಶ್ರ್ಯುಕಃ ಕಿತಿ । ಪಾ. ೭-೨-೧೧ । ಇತೀಟ್ಪ್ರತಿಷೇಧಃ । ಪೂತಂ ದಕ್ಷೋ ಯಯೋಸ್ತೌ । ಬಹುವ್ರೀಹೌ ಪ್ರಕೃತ್ಯೇತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ವಯಂ**—(ಯಜ್ಞಕರ್ಮವನ್ನು ಮಾಡುತ್ತಿರುವ) ನಾವು । **ಜಜ್ಞಾನಾ**—(ಯಜ್ಞಭೂಮಿಯಲ್ಲಿ) ಉತ್ಪನ್ನರಾಗುವ ಎಂದರೆ ಪ್ರತ್ಯಕ್ಷರಾಗುವ । **ಪೂತದಕ್ಷಸಾ**—ಶುದ್ಧಬಲವುಳ್ಳ । **ಮಿತ್ರಂ**—ಮಿತ್ರನೆಂಬ ದೇವತೆಯನ್ನೂ । **ವರುಣಂ**—ವರುಣನೆಂಬ ದೇವತೆಯನ್ನೂ । **ಸೋಮಪೀತಯೇ**—ಸೋಮಪಾನಕ್ಕಾಗಿ । **ಹವಾಮಹೇ**—ಆಹ್ವಾನಮಾಡುವೆವು

॥ ಭಾವಾರ್ಥ ॥

ಯಜ್ಞಭೂಮಿಯಲ್ಲಿ ಪ್ರತ್ಯಕ್ಷರಾಗಿ ಶುದ್ಧಬಲಯುಕ್ತರಾದ ಮಿತ್ರ ಮತ್ತು ವರುಣ ಎಂಬ ದೇವತೆಗಳನ್ನು ಸೋಮಪಾನಾರ್ಥವಾಗಿ ನಾವು ಆಹ್ವಾನಮಾಡುತ್ತೇವೆ.

## English Translation.

We invoke Mitra and Varuna, present (at our Sacrifice) and of pure strength that they may drink Soma.

॥ ವಿಶೇಷವಿಷಯಗಳು ॥

ಈ ಮಂತ್ರದ ವಿನಿಯೋಗವಿಷಯವಾಗಿ ಭಾಷ್ಯಕಾರರು ಈರೀತಿ ಹೇಳಿರುವರು. ಇಪ್ಪತ್ತನಾಲ್ಕನೆಯ ದಿನದಲ್ಲಿ ಪ್ರಾತಃಸವನಕಾಲದಲ್ಲಿ ಮೈತ್ರಾವರುಣಶಸ್ತ್ರಮಂತ್ರಪಠನಮಾಡುವಾಗ ಷಡಹಸ್ತೋತ್ರಿಯಮಂತ್ರಗಳಿಗಾಗಿ

**ಮಿತ್ರಂ ವಯಂ ಹವಾಮಹೇ** ಎಂಬ ತೃಚವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಚತುರ್ವಿಂಶೇ** ಎಂಬ ಖಂಡದಲ್ಲಿ **ಆನೋ ಮಿತ್ರಾವರುಣಾ** ( ಋ. ಸಂ. ೭-೬೫-೪) **ಮಿತ್ರಂ ವಯಂ ಹವಾಮಹೇ** (ಋ. ಸೂ. ೧-೨೩-೪) ಎಂಬ ಋಕ್ಕುಗಳನ್ನು ಪಠಿಸಬೇಕೆಂದು ಹೇಳಿರುವುದು. ಅಭಿಪ್ಲವಷಡಹವೆಂಬ ಯಾಗದಲ್ಲಿಯೂ ಸಹ ಪ್ರಾತಸ್ಸವನಕಾಲದಲ್ಲಿ ಮೈತ್ರಾವರುಣಸ್ತೋತ್ರಾವಾಪಕ್ಕಾಗಿ ಈ ತೃಚವನ್ನು ಪಠಿಸಬೇಕೆಂದು **ಅಭಿಪ್ಲವಪೃಷ್ಠ್ಯಾಹಾನಿ** ಎಂಬ ಖಂಡದಲ್ಲಿ **ಪರಿಶಿಷ್ಟಾನಾವಾಪಾನುದ್ಧೃತ್ಯ ಮಿತ್ರಂ ವಯಂ ಹವಾಮಹೇ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ, ೭-೫) ಮತ್ತು ಮೈತ್ರಾವರುಣಸಂಬಂಧವಾದ ಹೋಮಾದಿಗಳಲ್ಲಿ ಪ್ರಾತಸ್ಸವನಕಾಲದಲ್ಲಿ **ಮಿತ್ರಂ ವಯಂ ಹವಾಮಹೇ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ **ಬ್ರಾಹ್ಮಣಾಚ್ಛಂಸೀ** ಎಂಬ ಖಂಡದ **ಇದಂ ತೇ ಸೋಮ್ಯಂ ಮಧು** (ಋ. ಸಂ. ೮-೬೫-೮) **ಮಿತ್ರಂ ವಯಂ ಹವಾಮಹೇ** (ಋ. ಸಂ. ೧-೨೩-೪) ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು.

**ಮಿತ್ರಂ**—ಮಿತ್ರನೆಂಬ ದೇವತೆಯು. ಸಾಧಾರಣವಾಗಿ ಮಿತ್ರ ಮತ್ತು ವರುಣ ಎಂಬ ದೇವತೆಗಳನ್ನು ಒಟ್ಟಿಗೆ ಸೇರಿಸಿ ಆಹ್ವಾನಮಾಡುವುದು ವಿಶೇಷಬಳಕೆಯಲ್ಲಿದ್ದರೂ ಅನೇಕ ಸಂದರ್ಭಗಳಲ್ಲಿ ಪ್ರತ್ಯೇಕವಾಗಿಯೂ ನಿರ್ದೇಶಿಸಿ ಸ್ತೋತ್ರಮಾಡುವುದು ಕಂಡುಬರುವುದು. ಮಿತ್ರಶಬ್ದಕ್ಕೆ ಯಾಸ್ಕರ ವಿವರಣೆಯು ಈರೀತಿ ಇರುವುದು—

**ಮಿತ್ರಃ । ಮಿತ್ರಃ ಪ್ರಮೀತೇಸ್ತ್ರಾಯತೇ ॥**

**ಪ್ರಮೀತೇಃ**—ಮರಣದಿಂದ, **ತ್ರಾಯತೇ**-ಸಂರಕ್ಷಿಸುವವನಾದುದರಿಂದ ಮಿತ್ರನೆಂದು ಹೆಸರು. ಸರ್ವ ಲೋಕಗಳಿಗೂ ವೃಷ್ಟಿಯನ್ನುಂಟುಮಾಡಿ ಕಾಪಾಡುವವನಾದುದರಿಂದ ಮಿತ್ರನೆಂಬ ಹೆಸರು.

**ಸಂ ಮಿನ್ವಾನೊ ದ್ರವತೀತಿ ವಾ ॥**

ಎಲ್ಲೆಲ್ಲಿಯೂ ವೃಷ್ಟಿಯನ್ನುಂಟುಮಾಡಿ ಉದಕದಿಂದ ಲೋಕವನ್ನು ದ್ರವಯುಕ್ತವನ್ನಾಗಿ ಮಾಡುವವನಾದುದರಿಂದ ಮಿತ್ರನೆಂದು ಹೆಸರು.

**ಮೇದಯತೇರ್ವಾ ॥**

**ಮೇದಯತೇ—ಸ್ನೇಹಾರ್ಥಸ್ಯ**—ಸರ್ವವನ್ನು ಉದಕದಿಂದ ಸ್ನೇಹಯುಕ್ತವನ್ನಾಗಿ ಮಾಡುವುದರಿಂದ ಮಿತ್ರನೆಂದು ಹೆಸರು. ಈರೀತಿ ವಿವರಣೆಮಾಡಿ ಮಿತ್ರನು ಭೂಮಿಯನ್ನು ಕಾಪಾಡುವ ವಿಷಯದಲ್ಲಿ ಉದಾಹರಣೆಗಾಗಿ—

**ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।**
**ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥**

(ಋ. ಸಂ. ೩-೫೯-೧)

ಎಂಬ ಋಕ್ಕನ್ನು ಕೊಟ್ಟಿರುವರು. (ನಿ. ೧೦-೨೨)

**ವರುಣಃ**—ವರುಣ ಶಬ್ದದ ಅರ್ಥ ವಿಷಯದಲ್ಲಿಯೂ **ವೃಣೋತೀತಿ ಸತಃ** ಅಂತರಿಕ್ಷವನ್ನು ಮೇಘಜಾಲ ದಿಂದ ಆವರಣಮಾಡುವವನಾದುದರಿಂದ ವರುಣನೆಂದು ಹೆಸರು ಎಂಬ ವಿವರಣೆಯನ್ನು ಕೊಟ್ಟಿರುವರು. (ನಿ. ೧೦-೫)

**ಜಜ್ಞಾನಾ**—ಹುಟ್ಟಿದವರು ಎಂದರೆ ಯಜ್ಞವೇದಿಕೆಯಲ್ಲಿ ಆವಿರ್ಭೂತರಾದವರು, ಸ್ತೋತ್ರಮಾಡುವ ಜನರಿಗೆ ಪ್ರತ್ಯಕ್ಷರಾದವರು ಎಂದರ್ಥವು.

**ಪೂತದಕ್ಷಸಾ**—ಪೂತ ಎಂದರೆ ಶುದ್ಧವಾದ, ಬಹಳವಾದ, ದಕ್ಷ ಎಂದರೆ ಬಲ. ಬಹಳ ಬಲಶಾಲಿಗಳು, ಅತಿಸಾಮರ್ಥ್ಯವುಳ್ಳವರು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ವರುಣಂ,—'ಕೃವೃದಾರಿಭ್ಯಉನನ್'** (ಉ. ಸೂ. ೩-೫೩) ಕೃ ವಿಕ್ಷೇಪೇ, ವೃಞ್ ವರಣೇ, ದೃ ವಿದಾರಣೇ ಣಿಜಂತ, ಇವುಗಳ ಮುಂದೆ ಉನನ್ ಬರುವುದು ಎಂಬುದರಿಂದ ಉನನ್ ಪ್ರತ್ಯಯ. ವೃ+ಉನ, ಗುಣ ರಪರತ್ವ ವರುಣ, ಎಂದಾಗುವುದು 'ತೄರಶ್ಚ ಲೋವಾ' ಎಂದು ಮುಂದಿನಸೂತ್ರದಲ್ಲಿರುವುದರಿಂದ ಈ ಸೂತ್ರದಲ್ಲಿ ತೃಗ್ರಹಣವು ಅನವಶ್ಯಕ, ಪ್ರತ್ಯಯವು ನಿತ್, ಆದ್ದರಿಂದ ನಿತ್ಸ್ವರದಿಂದ ವರುಣಶಬ್ದವು ಆದ್ಯುದಾತ್ತ,

**ಸೋಮಪೀತಯೇ,— 'ಅರ್ತಿಸ್ತುಸು'** (ಉ. ಸೂ. ೧-೧೩೭) ಎಂಬುದರಿಂದ ಷುಞ್ ಅಭಿಷವೇ ಧಾತುವಿನ ಮುಂದೆ ಮನ್ ಪ್ರತ್ಯಯ ಗಣ ಬಂದು ಸೋಮ ಎಂದಾಗುತ್ತೆ ಇದು ನಿತ್ಸ್ವರದಿಂದ ಆದ್ಯುದಾತ್ತ. ಶೇಷಾನುದಾತ್ತಕ್ಕೆ **'ಉದಾತ್ತಾದನುದಾತ್ತಸ್ಯ'** ಎಂಬುದರಿಂದ ಸ್ವರಿತ ಬರುತ್ತೆ. ಸೋಮಸ್ಯಪೀತಿಃ ಎಂದು ವಿಗ್ರಹ, ಆದರೂ ಸಮಾಸಾನಂತರ **'ಕುರುಗಾರ್ಹಪತ....ದಾಸೀಭಾರಾಣಾಂ ಚ'** (ಪಾ. ಸೂ. ೬-೨-೪೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರವೇ ಬರುವುದು.

**ಜಜ್ಞಾನಾ**—ಜನೀ ಪ್ರಾದುರ್ಭಾವೇ ಧಾತು, ಇದರ ಮುಂದೆ **'ಛಂದಸಿ ಲಿಟ್'** (ಪಾ. ಸೂ. ೩-೨-೧೦೫) ಭೂತ ಸಾಮಾನ್ಯಾರ್ಥದಲ್ಲಿ ಧಾತುವಿನ ಮುಂದೆ ಛಂದಸ್ಸಿನಲ್ಲಿ ಲಿಟ್ ಬರುತ್ತೆ ಎಂಬುದರಿಂದ ಲಿಟ್, ಅದರ ಸ್ಥಾನದಲ್ಲಿ **'ಲಿಟಕಾನಜ್ವಾ'** (ಪಾ. ಸೂ. ೩-೨-೧೦೬) ಛಂದಸ್ಸಿನಲ್ಲಿ ಲಿಟ್ಟಿನ ಸ್ಥಾನದಲ್ಲಿ ಕಾನಚ್ ಆದೇಶವು ವಿಕಲ್ಪವಾಗಿ ಬರುವುದು ಎಂಬುದರಿಂದ ಕಾನಚ್ ಆದೇಶ ಜನ್+ಆನ. ಈಗ, **'ಗಮಹನಜನಖನಘಸಾಂ ಲೋಪಃ ಕ್ಙಿತ್ಯನಙಿ'** (ಪಾ. ಸೂ. ೬-೪-೯೮) ಅಙ್ ಎಂಬ ಪ್ರತ್ಯಯವನ್ನು ಬಿಟ್ಟು ಕಿತ್, ವಾ ಙಿತ್ ಆದ ಅಜಾದಿಪ್ರತ್ಯಯವು ಪರದಲ್ಲಿರುವಾಗ ಗಮ್ ಮೊದಲಾದ ಧಾತುಗಳ ಉಪಾಂತ್ಯ ವರ್ಣಕ್ಕೆ ಲೋಪಬರುವುದು ಎಂಬುದರಿಂದ ಜನ್ ಎಂಬು ದರ ಅಕಾರಕ್ಕೆ ಲೋಪ ಜ್+ನ್+ಆನ. **'ದ್ವಿರ್ವಚನೇಽಚಿ'** (ಪಾ. ಸೂ. ೧-೧-೫೯) ದ್ವಿರ್ವಚನೇ, ಅಚಿ, ಎಂದು ಪದಚ್ಛೇದ, **'ಯಂ ವಿನಾ ಯನ್ನೋಪಪದ್ಯತೇ ತತ್ತೇನಾಕ್ಷಿಪ್ಯತೇ'** ಎಂಬ ನ್ಯಾಯದಿಂದ ಪ್ರತ್ಯಯೇ ಎಂದು ಆಕ್ಷಿಪ್ತವಾಗುವುದು. **'ಅಚಃ ಪರಸ್ಮಿನ್ಪೂರ್ವವಿಧೌ'** ಎಂಬುದರಿಂದ ಪರಸ್ಮಿನ್ ಎಂದು ಅನುವೃತ್ತವಾಗುವುದೆಂದು ನ್ಯಾಸಕಾರಾದಿಗಳು ವರ್ಣಿಸಿರುವರು. ದ್ವಿರ್ವಚನೇ ಎಂಬುದಕ್ಕೆ ಅವೃತ್ತಿ ದ್ವಿರ್ವಚನಮಸ್ಯಅಸ್ತಿ ಇತಿ ದ್ವಿರ್ವಚನಂ, ತಸ್ಮಿ ಎಂದು ದ್ವಿರ್ವಚನೇ, ಎಂಬಲ್ಲಿ ವಿಗ್ರಹ, ಇದು ಪ್ರತ್ಯಯೇ ಎಂಬಲ್ಲಿ ವಿಶೇಷಣ, ಅಚಿ ಎಂಬುದು ಪ್ರತ್ಯಯೇ ಎಂಬುದಕ್ಕೆ ವಿಶೇಷಣ. ಆದ್ದರಿಂದ **'ಯಸ್ಮಿನ್ವಿಧಿಸ್ತದಾದಾವಲ್ಗ್ರಹಣೇ'** (ಪರಿಭಾ ೩೪) ಎಂಬುದರಿಂದ ತದಾದಿ-ಲಾಭ, ತಥಾಚಾಯಂ ಸೂತ್ರಾರ್ಥಃ-ದ್ವಿತ್ವನಿಮಿತ್ತವಾದ ಅಜಾದಿ ಪ್ರತ್ಯಯವು ಪ್ರತ್ಯಯಾಂತರದಿಂದ ವ್ಯವಧಾನವಿಲ್ಲದೇ ಪರವಾಗಿದ್ದ ಪಕ್ಷದಲ್ಲಿ ಅಚ್‌ಸ್ಥಾನಿಕವಾದ ಆದೇಶವು ದ್ವಿತ್ವವನ್ನು ಮಾಡುವಾಗ ಸ್ಥಾನಿವದ್ರೂಪವನ್ನು ಹೊಂದುವುದು. ಎಂದು. ಏವಂಚ ಏಕವರ್ಣವ್ಯವಧಾನವಿದ್ದರೂ ಈ ಸೂತ್ರವು ಪ್ರವರ್ತಿಸುವುದು. ಈ ಅಂಶವು ಪ್ರಕೃತ ಸೂತ್ರಕೌಸ್ತುಭ ದಲ್ಲಿ-**'ವಸ್ತುತಸ್ತುದ್ವಿರ್ವಚನಾಕ್ಷಿಪ್ತಃ'** ಇತ್ಯಾದಿ ಗ್ರಂಥಸಂದರ್ಭದಲ್ಲಿ ವ್ಯಕ್ತವು. ಪ್ರತ್ಯಯೇ ಎಂಬುದು ನಿಮಿತ್ತ ಸಪ್ತಮೀ-ತಥಾ ಚ ದ್ವಿತ್ವನಿಮಿತ್ತಭೂತಾಜಾದಿಪ್ರತ್ಯಯನಿಮಿತ್ತಕಃ ಅಚ್‌ಸ್ಥಾನಿಕಃ ಆದೇಶಃ ಸ್ಥಾನಿವದ್ರೂಪಂ ಲಭತೇ ಎಂದು ಅರ್ಥವನ್ನು ವಿವಕ್ಷಿಸಿದರೆ, ಉಪಧಾಲೋಪ ಬಂದನಂತರ, ಅನ ಎಂಬ ದ್ವಿತ್ವನಿಮಿತ್ತಭೂತ ಅಜಾದಿ

ಪ್ರತ್ಯಯ ನಿಮಿತ್ತಕವಾದ ಉಪಧಾಲೋಪಕ್ಕೆ ಸ್ಥಾನಿವದ್ಭಾವ ಬರುತ್ತದೆ, ಆದರೆ ಚಕ್ರತುಃ ಇತ್ಯಾದಿ ಸಿದ್ಧಿಗಾಗಿ ತದ್ಭಾವ-ಭಾವಿತಾಮಾತ್ರೇಣಾಪಿ ನಿಮಿತ್ತತಾ ಸ್ವೀಕರಿಸಬೇಕಾಗುವುದು. ' ಕಾನಿ ಪುನರಸ್ಯ ಪ್ರಯೋಜನಾನಿ । ಪಪತುಃ ಪಪುಃ । ತಸ್ಥತುಃ ತಸ್ಥುಃ । ಜಗ್ಮತುಃ ಜಗ್ಮುಃ । ಆಟಿಟತ್ ಆಶಿಶತ್ । ಚಕ್ರತುಃ ಚಕ್ರುರಿತಿ । ಆಲ್ಲೋಪೋಪಧಾಲೋಪ ಣಿಲೋಪ ಯಣಾದೇಶೇಷ್ವನಚ್ಕತ್ವಾ ದ್ದ್ವಿರ್ವಚನಂ ನ ಪ್ರಾಪ್ನೋತಿ । ಸ್ಥಾನಿವದ್ಭಾವಾದ್ಭವತಿ (೧-೧-೫೯ ಮ.ಭಾ) ಎಂಬ ಮಹಾಭಾಷ್ಯದಿಂದಲೂ ಏಕವರ್ಣ ವ್ಯವಧಾನವಿದ್ದರೂ ಪ್ರಕೃತ ಸೂತ್ರವು ಪ್ರವರ್ತಿಸುವುದು, ಏವಂಚ ಸ್ಥಾನಿವದ್ರೂಪಾತಿದೇಶವು ಬಂದರೆ ಜನ್ ಇದ್ದಂತಾಯಿತು. ಈಗ **' ಲಿಟಿಧಾತೋರನಭ್ಯಾಸಸ್ಯ '** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ ಜನ್-ಜ್+ನ್-ಆನ, ದ್ವಿತ್ವವನ್ನು ಮಾಡುವಾಗ ರೂಪಾತಿದೇಶ ಬಂದರೂ ದ್ವಿತ್ವಾನಂತರ ಈ ಅತಿದೇಶವಿರುವುದಿಲ್ಲವಾದ್ದರಿಂದ ಉಪಧೆಗೆ ಶ್ರವಣವಿಲ್ಲ, ದ್ವಿತ್ವವು ಸ್ಥಾನಿಭೂತವಾದ ಅಚ್ಚಿಗೂ ಅದರ ಪೂರ್ವಪರ ವ್ಯಂಜನಗಳಿಗೂ ಬರುವುದು, ಆದ್ದರಿಂದ ಇದು ಸ್ಥಾನಿಭೂತಾಚಃ ಪೂರ್ವಸ್ಯ ವಿಧಿಯಾಗಲೀ, ಸ್ಥಾತಿಭೂತಾಚಃ ಪೂರ್ವಸ್ಮಾತ್ಪರಸ್ಯ ವಿಧಿಯಾಗಲೀ ಆಗುವುದಿಲ್ಲ. ಆದ್ದರಿಂದ ಇಲ್ಲಿ **' ಅಚಃಪರಸ್ಮಿನ್ಪೂರ್ವವಿಧೌ '** (ಪಾ. ಸೂ ೧-೧-೫೭) ಎಂಬುದರಿಂದ ಸ್ಥಾನಿವದ್ಭಾವವು ಬರಲಾರದು. ಈಸೂತ್ರ ವ್ಯಾಖ್ಯಾವಸರದಲ್ಲಿ ಕೈಯಟಕಾರರು. ಅಚಃ ಪರಸ್ಮಿನ್ನಿತ್ಯತ್ರ ಯೋಽನಾದಿಷ್ಟಾದಚಃ ಪೂರ್ವ ಇತಿ ಸ್ಥಿತವಮ್ । ಸಾಚ್ಕಸ್ಯ ಚ ದ್ವಿರ್ವಚನಮಿತಿ ಪೂರ್ವವಿಧಿತ್ವಾಭಾವಾದಪ್ರಾಪ್ತಂ ಸ್ಥಾನಿವತ್ವಂ ವಿಧೀಯತೇ ಎಂದು ಪ್ರತಿಪಾದಿಸಿರುವರು, ಉದ್ಯೋತಕಾರರೂ ಸಹ ಯದ್ಯಪಿ **' ನಪದಾಂತ ದ್ವಿರ್ವಚನವರೇ-'** (ಪಾ. ಸೂ. ೧-೧-೫೮) ಎಂಬಲ್ಲಿ ದ್ವಿರ್ವಚನ ಎಂಬುದರಿಂದ ಆಷ್ಟಮಿಕ ದ್ವಿತ್ವಕ್ಕೆ ಗ್ರಹಣವು, ಆದ್ದರಿಂದ ಷಾಷ್ಠ ದ್ವಿತ್ವವನ್ನು ಮಾಡುವಾಗ ಸ್ಥಾನಿವದ್ಭಾವಕ್ಕೆ ಪ್ರತಿಷೇಧ ಬರುವುದಿಲ್ಲ, ಆದರೂ **' ಅಚಃ ಪರಸ್ಮಿನ್ '** ಎಂಬಲ್ಲಿ **' ನಿಮಿತ್ತಭೂತಾಚಃ ಪೂರ್ವಸ್ಯ ಕಾರ್ಯೇ ಕರ್ತವ್ಯೇ '** ಎಂದು ಅರ್ಥವು ಭಾಷ್ಯಾರೂಢವಾಗುವುದಿಲ್ಲ. ಕಿಂತು ನಾವು ಪೂರ್ವದಲ್ಲಿ ಪ್ರದರ್ಶಿಸಿದಂತೆಯೇ ಅರ್ಥವು ಏರ್ಪಡುವುದು. ಆದ್ದರಿಂದ **' ಅಚಃ ಪರಸ್ಮಿನ್ '** ಎಂಬುದು ಇಲ್ಲಿ ಬರುವುದಿಲ್ಲ ಎಂದು ವರ್ಣಿಸಿರುವರು. ಶೇಖರದಲ್ಲಿ ಪ್ರಕೃತಸೂತ್ರವ್ಯಾಖ್ಯಾನಾವಸರದಲ್ಲಿ ' ಸಾನ್ಯಚಃಪೂರ್ವತ್ವೇನ ದೃಷ್ಟಸ್ಯೈವ ಚಕ್ರೇ ' ಇತ್ಯಾದೌ ಕಾರ್ಯಭಾವಾತ್ **ಅಚಃ ಪರಸ್ಮಿನ್ನಿತ್ಯನೇನಾಸಿದ್ಧೇರಿದ-ಮಾರಬ್ಧಂ** ಏವಂ ಚ ಪ್ರಕೃತ ವೇದಭಾಷ್ಯದಲ್ಲಿ **' ತಸ್ಯ ಅಚಃ ಪರಸ್ಮಿನ್ '** ಇತಿ ಸ್ಥಾನಿವದ್ಭಾವಾತ್ ಜನಶಬ್ದಸ್ಯ ದ್ವಿರ್ವಚನಮ್, ಎಂಬುದನ್ನು ಸರಿಪಡಿಸಬೇಕಾದರೆ, ಅಚಃ ಪರಸ್ಮಿನ್, ಎಂಬುದರ ಮುಂದೆ, ' ಇತ್ಯತಃ ಪರಸ್ಮಿನ್ ಇತ್ಯನುವೃತ್ತೌ **' ದ್ವಿರ್ವಚನೇಽಚಿ '** ಎಂದು ಸೇರಿಸಿಕೊಳ್ಳಬೇಕು. ಇಲ್ಲದಿದ್ದರೆ ಸರಿಹೋಗುವುದಿಲ್ಲ. **' ದ್ವಿರ್ವಚನೇಽಚಿ '** ಎಂಬುದಕ್ಕೆ ದ್ವಿತ್ವವನ್ನು ಮಾಡುವಾಗ ದ್ವಿತ್ವನಿಮಿತ್ತವಾದ ಅಜಾದಿ ಪ್ರತ್ಯಯವು ಪ್ರತ್ಯಯಾಂತರ ವ್ಯವಧಾನರಹಿತವಾಗಿ ಪರದಲ್ಲಿದ್ದರೆ ಅಚ್ ನ ಸ್ಥಾನದಲ್ಲಿ ಆದೇಶ ಬರುವುದಿಲ್ಲ ಎಂದು ಅರ್ಥವರ್ಣನೆ ಮಾಡಿದರೂ, ಮೊದಲು ಜನ ಶಬ್ದಕ್ಕೆ ದ್ವಿತ್ವ ಜನ+ಜನ+ಆ ಈಗ **' ಗಮಹನ '** ಇತ್ಯಾದಿ ಸೂತ್ರದಿಂದ ಉಪಧಾಲೋಪ ಬರುವುದು. ಅಭ್ಯಾಸದಲ್ಲಿನ ನಕಾರಕ್ಕೆ **' ಹಲಾದಿಶ್ಶೇಷಃ '** (ಪಾ. ಸೂ. ೭-೪-೬೦) ಎಂಬುದರಿಂದ ನಿವೃತ್ತಿ ಜ+ಜ್+ನ್+ಆನ. **' ಸ್ತೋಶ್ಚುನಾಶ್ಚುಃ '** (ಪಾ. ಸೂ. ೮-೪-೪೦) ನಕಾರ ತವರ್ಗಗಳಿಗೆ ಶಕಾರ ಚವರ್ಗದಿಂದ ಯೋಗವಿದ್ದರೆ ಕ್ರಮವಾಗಿ ಸಕಾರತವರ್ಗಗಳಿಗೆ ಶಕಾರ ಚವರ್ಗಗಳು ಬರುವುವು ಎಂಬುದರಿಂದ ನಕಾರಕ್ಕೆ ಜ್ ಎಂಬುದರ ಯೋಗವಿರುವುದರಿಂದ ಞಕಾರ ಬರುವುದು. ಏವಂಚ ಜಜ್ಞಾನ ಎಂದಾಗುವುದು, ಶಾನಚ್, ಚಿತ್ ಆದ್ದರಿಂದ **' ಚಿತಃ '** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತೆ. ಇದರ ಮುಂದೆ ಔಟ್ ಪ್ರತ್ಯಯ. ಅದಕ್ಕೆ **' ಸುಪಾಂ ಸುಲುಕ್ '** ಎಂಬುದರಿಂದ ಆಕಾರಾದೇಶ.

**ಪೂತದಕ್ಷಸಾ—ಪೂಞ್ ಪವನೇ**—ಧಾತು **' ನಿಷ್ಠಾ '** (ಪಾ. ಸೂ ೩-೨-೧೦೨) ಭೂತಾರ್ಥದಲ್ಲಿರುವ ಧಾತುವಿನ ಮುಂದೆ ಕ್ತ, ಕ್ತವತು ಪ್ರತ್ಯಯಗಳು ಬರುವುವು ಎಂಬುದರಿಂದ, ಕ್ತ ಪ್ರತ್ಯಯ, ಪೂ+ತ, ತ, ಎಂಬುದು ವಲಾದಿಯಾದ ಆರ್ಧಧಾತುಕ, ಆದ್ದರಿಂದ **' ಆರ್ಧಧಾತುಕಸ್ಯೇಡ್ವಲಾದೇಃ '** (ಪಾ. ಸೂ. ೭-೨-೩೫) ಎಂಬುದರಿಂದ ಇಟ್ ಆಗಮವು ಪ್ರಾಪ್ತವಾಗುವುದು. ಆದರೆ **' ಶ್ರ್ಯುಕಃ ಕಿತಿ '** (ಪಾ. ಸೂ. ೭-೨-೧೧) ಶ್ರಿಞ್‌ಧಾತು, ಏಕಾಚ್ಕವಾಗಿಯೂ ಉಗಂತವಾಗಿಯೂ (ಉಕ್+ಉ-ಋ-ಇ) ಇರುವ ಧಾತುವಿನ ಮುಂದೆಯೂ ಇರುವ ಗಿತ್-ವಾ ಕಿತ್ ಆದ ವಲಾದ್ಯಾರ್ಧಧಾತುಕಕ್ಕೆ ಇಡಾಗಮ ಬರುವುದಿಲ್ಲ ಎಂಬುದರಿಂದ ಇಡಾಗಮ ಬರುವುದಿಲ್ಲ, ಪೂತ ಶಬ್ದವು ಪ್ರತ್ಯಯಸ್ವರದಿಂದ ಅಂತೋದಾತ್ತ. ಪೂತಂ ದಕ್ಷಃ ಯಯೋಸ್ತೌ, (ಶುದ್ಧವಾದ ಬಲವುಳ್ಳವರು ಎಂದು ಅರ್ಥ) ಹೀಗೆ ಬಹುವ್ರೀಹಿ ಸಮಾಸವನ್ನು ಮಾಡಿದರೆ **' ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ '** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರವೇ ಬರುವುದು. ‖ ೪ ‖

‖ ಸಂಹಿತಾಪಾಠಃ ‖

ಋತೇನ ಯಾವೃತಾವೃಧಾವೃತಸ್ಯ ಜ್ಯೋತಿಷಸ್ಪತೀ ।
ತಾ ಮಿತ್ರಾವರುಣಾ ಹುವೇ ‖ ೫ ‖

‖ ಪದಪಾಠಃ ‖

ಋತೇನ । ಯೌ । ಋತಽವೃಧೌ । ಋತಸ್ಯ । ಜ್ಯೋತಿಷಃ । ಪತೀ ಇತಿ ।
ತಾ । ಮಿತ್ರಾವರುಣಾ । ಹುವೇ ‖ ೫ ‖

‖ ಸಾಯಣಭಾಷ್ಯಂ ‖

ಯೌ ಮಿತ್ರಾವರುಣಾವೃತೇನ ಸತ್ಯವಚನೇನ ಯಜಮಾನಾನುಗ್ರಹಕಾರಿಣಾ ಋತಾವೃಧೌ । ಋತಮವಶ್ಯಂ ಭಾವಿತಯಾ ಸತ್ಯಂ ಕರ್ಮಫಲಂ ತಸ್ಯ ವರ್ಧಕೌ । ಋತಸ್ಯ ಸತ್ಯಸ್ಯ ಪ್ರಶಸ್ತಸ್ಯ ಜ್ಯೋತಿಷಃ ಪ್ರಕಾಶಸ್ಯ ಪತೀ ಪಾಲಕೌ । ಶ್ರುತ್ಯಂತರೇ ಮಿತ್ರಾವರುಣಯೋರದಿತಿಪುತ್ರತ್ವೇನ ಶ್ರುತತ್ವಾ-ದ್ದ್ವಾದಶಾದಿತ್ಯೇಷ್ವಂತರ್ಭೂತತ್ವೇನ ಜ್ಯೋತಿಷ್ಪಾಲಕತ್ವಂ ಯುಕ್ತಂ । ಶ್ರುತ್ಯಂತರೇ ಚಾಷ್ಟೌ ಪುತ್ರಾಸೋ ಅದಿತೇರಿತ್ಯುಪಕ್ರಮ್ಯ ಮಿತ್ರಶ್ಚ ವರುಣಶ್ಚೇತ್ಯಾದಿಕಮಾಮ್ನಾತಂ । ತೈ. ಆ. ೧-೧೩. ೨-೩ । ತಾ ಮಿತ್ರಾವರುಣಾ ತಥಾವಿಧೌ ಮಿತ್ರಾವರುಣೌ ಹುವೇ । ಆಹ್ವಯಾಮಿ ‖ ಋತಾವೃಧೌ । ವೃಧು ವೃದ್ಧೌ । ಕ್ವಿಪ್ಚೇತಿ ಕ್ವಿಪ್ । ಅನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ । ಕೃದುತ್ತರಪದಪ್ರಕೃತಿಸ್ವರತ್ವಂ । ಜ್ಯೋತಿಷಃ । ದ್ಯುತ ದೀಪ್ತೌ । ದ್ಯುತೇರಿಸಿನ್ನಾದೇಶ್ಚ ಜಃ । ಉ. ೨-೧೧೧ । ಇತೀಸಿನ್ಪ್ರತ್ಯಯಃ । ನಿತ್ತ್ವಾ-ದಾದ್ಯುದಾತ್ತಃ । ಷಷ್ಠ್ಯಾಃ ಪತಿಪುತ್ರೇತಿ ಸಂಹಿತಾಯಾಂ ವಿಸರ್ಜನೀಯಸ್ಯ ಸತ್ವಂ । ಮಿತ್ರಾವರುಣಾ । ದೇವತಾದ್ವಂದ್ವೇ ಚೇತ್ಯಾನಜ್ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಸುಪಾಂ ಸುಲು-

**ಗಿತಿ ಪೂರ್ವಸವರ್ಣದೀರ್ಘ ಆಕಾರಃ । ಹುವೇ । ಹ್ವೇಞ್ । ಆತ್ಮನೇಪದೋತ್ತಮಪುರುಷೈಕವಚನೇ ಸಂಪ್ರಸಾರಣೇ ಪರಪೂರ್ವತ್ವೇ ಚ ಕೃತೇ ಬಹುಲಂ ಛಂದಸೀತಿ ಶಪೋ ಲುಕ್ । ಟೇರೇತ್ವಂ । ಗುಣೇ ಪ್ರಾಪ್ತೇ ಕ್ಙಿತಿ ಚ । ಪಾ. ೧-೧-೫ । ಇತಿ ಪ್ರತಿಷೇಧಃ । ಉವಙಾದೇಶಃ ತಿಙ್ಙತಿಙ ಇತಿ ನಿಘಾತಃ ॥ ೮ ॥**

॥ ಪ್ರತಿಪದಾರ್ಥ ॥

**ಯೌ—**ಯಾವ ಮಿತ್ರಾವರುಣರೆಂಬ ದೇವತೆಗಳು । **ಋತೇನ—**ಯಜಮಾನನಿಗೆ ಅನುಗ್ರಹವನ್ನುಂಟು ಮಾಡಬೇಕೆಂಬ ಸತ್ಯವಚನದಿಂದ ಕೂಡಿ । **ಋತಾವೃಧೌ—**ಕರ್ಮಫಲವನ್ನು ಸತ್ಯವಾಗಿಯೂ ಕೊಡುವವರೋ । **ಋತಸ್ಯ—**ಸತ್ಯಸ್ವರೂಪವಾದ ಅಥವಾ ಪ್ರಶಸ್ತವಾದ । **ಜ್ಯೋತಿಷಃ—**ಪ್ರಕಾಶಕ್ಕೆ । **ಪತೀ—**ಪಾಲಕರಾದ (ಒಡೆಯರಾದ) ವರೋ । **ತಾ—**ಅಂತಹ । **ಮಿತ್ರಾವರುಣಾ—**ಮಿತ್ರಾವರುಣರೆಂಬ ದೇವತೆಗಳನ್ನು । **ಹುವೇ—**ಆಹ್ವಾನಮಾಡುವೆನು (ಕರೆಯುವೆನು)

॥ ಭಾವಾರ್ಥ ॥

ಮಿತ್ರಾವರುಣರು ಯಜ್ಞಮಾಡುವ ಯಜಮಾನನಿಗೆ ಅನುಗ್ರಹಮಾಡುವ ವಿಚಾರದಲ್ಲಿ ಸತ್ಯವಚನವುಳ್ಳವರು ; ಮತ್ತು ಮಾಡಿದ ಕರ್ಮಫಲವನ್ನು ವೃದ್ಧಿಮಾಡುವವರು ; ಪ್ರಶಸ್ತವಾದ ಪ್ರಕಾಶಕ್ಕೆ ಒಡೆಯರಾದವರು ; ಇಂತಹ ಮಿತ್ರಾವರುಣರೆಂಬ ದೇವತೆಗಳನ್ನು ಆಹ್ವಾನಮಾಡುವೆನು.

English Translation.

I invoke Mitra and Varuna who are true in speech and who are encouragers of pious acts and are the lords of true light.

॥ ವಿಶೇಷವಿಷಯಗಳು ॥

**ಋತ** ಮತ್ತು **ಋತಾವೃಧಾ** ಎಂಬ ಶಬ್ದಗಳ ಅರ್ಥವಿವರಣೆಯನ್ನು ನಾವು ಹಿಂದೆಯೇ ಮಾಡಿದೇವೆ. (ಭಾಗ. ೧ ಪೇಜು 647 ಮತ್ತು 707) ಋತವೆಂದರೆ ಇಲ್ಲಿ ಉದಕ ಅಥವಾ ಯಜ್ಞವೆಂದು ಅರ್ಥಮಾಡಬಹುದು.

**ಜ್ಯೋತಿಷಸ್ಪತೀ—**ಪ್ರಕಾಶಸ್ಯ ಪಾಲಕೌ । ರಶ್ಮಿರೂಪವಾದ ಪ್ರಕಾಶಕ್ಕೆ ಅಧಿಪತಿಗಳು. ಮಿತ್ರ, ವರುಣ ಎಂಬ ಈ ಎರಡು ಹೆಸರುಗಳು ದ್ವಾದಶಾದಿತ್ಯರ ನಾಮಗಳ ಮಧ್ಯದಲ್ಲಿ ಸೇರಿರುವುದರಿಂದ ಇವರನ್ನು ಜ್ಯೋತಿಷಸ್ಪತೀ ಎಂದು ಕರೆಯುವುದು ಸಹಜವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಋತಾವೃಧೌ—'ವೃಧು ವೃದ್ಧೌ'** ಧಾತು, ಋತಂ (ಸತ್ಯಂ ಕರ್ಮಫಲಂ) ವರ್ಧಯತಃ ಇತಿ ವಿಗ್ರಹಃ । ವರ್ಧಯತಃ ಇತಿ ವೃಧೌ. ಋತಸ್ಯ ವೃಧೌ, ಎಂದಾಗಲೀ ವಿಗ್ರಹ, ಇಲ್ಲಿ **'ಕ್ವಿಪ್ಚ'** (ಪಾ. ಸೂ. ೩-೨-೭೬) ಸುಬಂತವು ಉಪಪದವಾಗಿದ್ದರೂ ಇಲ್ಲದಿದ್ದರೂ ಧಾತುವಿನ ಮುಂದೆ ಕ್ವಿಪ್ ಬರುವುದು ಎಂಬುದರಿಂದ ಕ್ವಿಪ್ ಬರುತ್ತೆ, ಕ್ವಿಪಸ್ಸರ್ವಸ್ಯಾಪಿ **ಲೋಪಃ,** ದ್ವಿತೀಯಾ ದ್ವಿವಚನ **ಔಟ್** ಪ್ರತ್ಯಯ ಋತ ವೃಧೌ. **'ಅನ್ಯೇಷಾಮಪಿ ದೃಶ್ಯತೇ'** (ಪಾ. ಸೂ. ೬-೩-೧೩೭) ನಿಪಾತಕ್ಕಿಂತಲೂ **ಬೇರೆಯಾದ ಪೂರ್ವಪದಸ್ಥಗಳಿಗೂ** ದೀರ್ಘ ಬರುವುದು ಎಂಬುದರಿಂದ

ಋತ ಎಂಬ ಪೂರ್ವಪದಕ್ಕೆ ದೀರ್ಘ, ವೃಧ್ ಎಂಬುದು ಕ್ವಿಬಂತ ಆದ್ದರಿಂದ ಕೃದಂತ, ಇದು ಉತ್ತರಪದವಾಗಿದೆ. ಏವಂಚ **'ಗತಿಕಾರಕೋಪಪದಾತ್ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಉತ್ತರಪದ ಪ್ರಕೃತಿಸ್ವರವೇ ಬರುವುದು ವೃಧ್ ಎಂಬಲ್ಲಿಯ ಋಕಾರ **'ಧಾತೋಃ'** (ಪಾ. ಸೂ. ೬-೧-೧೬೨) ಎಂಬುದರಿಂದ ಉದಾತ್ತ, ಏವಂಚ ಸಮಾಸದಲ್ಲಿ ಇದೇ ಸ್ವರ ನಿಂತರೆ ಶೇಷಾನುದಾತ್ತ ಸ್ವರದಿಂದ ಋತ. ಅನುದಾತ್ತ. ಸುಪ್ಸ್ವರದಿಂದ ಔ ಅನು ದಾತ್ತವಾಗಿ **'ಉದಾತ್ತಾದನುದಾತ್ತಸ್ಯ ಸ್ವರಿತಃ'** ಎಂಬುದರಿಂದ ಸ್ವರಿತ.

**ಜ್ಯೋತಿಷಃ**—**'ದ್ಯುತ ದೀಪ್ತೌ'** ಧಾತು ಇದರ ಮುಂದೆ **'ದ್ಯುತೇರಿಸಿನ್ನಾದೇಶ್ಚ ಜಃ'** (ಉ. ಸೂ. ೩-೨೬೭) **'ದ್ಯುತ ದೀಪ್ತೌ'** ಎಂಬ ದ್ಯುತಧಾತುವಿನ ಮುಂದೆ ಇಸಿನ್ ಪ್ರತ್ಯಯವು ಅದರ ಆದಿಭೂತವಾದ ದಕಾರಕೆ ಜಕಾರವೂ ಬರುವುದು ಎಂಬುದರಿಂದ ಇಸಿನ್ ಪ್ರತ್ಯಯವೂ ದಕಾರಕ್ಕೆ ಜಕಾರವೂ ಬಂದರೆ ಜ್ಯುತ್+ಇಸ್, **'ಪುಗನ್ತ-ಲಘೂಪಧಸ್ಯಚ'** (ಪಾ. ಸೂ. ೭-೩-೮೬) ಎಂಬುದರಿಂದ ಉ ಗೆ ಓಕಾರ ಗುಣ, ಜ್ಯೋತಿಸ್ ಎಂದಾಯಿತು, ಪ್ರತ್ಯಯ ನಿತ್, ಆದ್ದರಿಂದ **'ಞ್ನಿತ್ಯಾದಿರ್ನಿತ್ಯಮ್'** (ಪಾ. ಸೂ. ೬-೧-೧೯೭) ಎಂಬುದರಿಂದ ಜ್ಯೋತಿಸ್ ಆದ್ಯುದಾತ್ತ ಇದರ ಮುಂದೆ ಷಷ್ಠೀ ವಿಭಕ್ತಿ ಙಸ್ ಜೋತಿಸ್+ಅಸ್, **'ಆದೇಶಪ್ರತ್ಯಯಯೋಃ'** (ಪಾ. ಸೂ. ೮-೩-೫೯) ಎಂಬುದರಿಂದ ಪ್ರಥಮ ಸಕಾರಕ್ಕೆ ಷಕಾರ, **'ಸಸಜುಷೋರುಃ'** (ಪಾ. ಸೂ. ೮-೨-೬೬) ಎಂಬುದ-ರಿಂದ ಸಗೆ ರೇಫ, **'ಖರವಸಾನಯೋರ್ವಿಸರ್ಜನೀಯಃ'** (ಪಾ. ಸೂ. ೮-೩-೧೫) ಎಂಬುದರಿಂದ ರೇಫಕ್ಕೆ ವಿಸರ್ಗ ಜ್ಯೋತಿಷಃ ಎಂದಾಯಿತು, ಜೋತಿಷಃ ಪತೀ ಎಂದು ಸಂಹಿತಾಕಾಲದಲ್ಲಿ **'ಷಷ್ಠ್ಯಾಃ ಪತಿಪುತ್ರ ಪೃಷ್ಠ-ಪಾರಪದ ಪಯಸ್ಪೋಷೇಷು'** (ಪಾ. ಸೂ. ೮-೩-೫೩) ಎಂಬುದರಿಂದ ವಿಸರ್ಗಕ್ಕೆ ಸಕಾರ.

**ಮಿತ್ರಾವರುಣಾ**—**'ಮಿತ್ರಶ್ಚ ವರುಣಶ್ಚ'** ಎಂದು ವಿಗ್ರಹ, ದ್ವಂದ್ವಸಮಾಸ, **'ಮಿತ್ರಂ ಹುವೇ'** (ಋ. ಸಂ. ೧-೨-೭) ಎಂಬಲ್ಲಿ ಮಿತ್ರ ಶಬ್ದ ಪುಲ್ಲಿಂಗ **'ಫಿಷೋನ್ತ ಉದಾತ್ತಃ'** (ಫಿ. ಸೂ. ೧) ಎಂಬ ಪ್ರಾತಿಪದಿಕ ಸ್ವರದಿಂದ ಅಂತೋದಾತ್ತ ಎಂದೂ ವರುಣ ಶಬ್ದವು ಉನನ್ ಪ್ರತ್ಯಯಾನ್ತ ನಿತ್ಸ್ವರದಿಂದ ಆದ್ಯುದಾತ್ತವೆಂದೂ ವರ್ಣಿತವಾಗಿದೆ. **'ದೇವತಾದ್ವಂದ್ವೇ ಚ'** (ಪಾ. ಸೂ. ೬-೩-೨೬) ದೇವತಾವಾಚಕ ದ್ವಂದ್ವ ಸಮಾಸದಲ್ಲಿರುವ ಉತ್ತರಪದದ ಹಿಂದೆ ಇರುವ ಪೂರ್ವಪದಕ್ಕೆ ಆನಙ್ ಆದೇಶ ಬರುವುದು ಎಂಬುದರಿಂದ ಮಿತ್ರ ಶಬ್ದಕ್ಕೆ ಆನಙ್ ಬರುತ್ತೆ. ಅದು **'ಙಿಚ್ಚ'** (ಪಾ ಸೂ. ೧-೧-೫೩) ಙಕಾರೇತ್ಸಂಜ್ಞಕವಾದ ಆದೇಶವು ಅನೇಕಾಲ್ಲಾದರೂ ಅಂತ್ಯಕ್ಕೆ ಬರುವುದು, ಅಂತ್ಯವರ್ಣಕ್ಕೆ ಆನಙ್ ಬರುತ್ತೆ. ಮಿತ್ರಾ ವರುಣ, ಎಂದಿರುವಾಗ ಅಂತರ್ಭೂತ ವಿಭಕ್ತಿಯನ್ನು ನಿಮಿತ್ತೀಕರಿಸಿಕೊಂಡು ಪದಸಂಜ್ಞೆ ಇರುವುದರಿಂದ **'ನಲೋಪಃ ಪ್ರಾತಿಪದಿಕಾಂತಸ್ಯ'** (ಪಾ. ಸೂ. ೮-೨-೭) ಎಂಬುದರಿಂದ ನಲೋಪ, **'ದೇವತಾದ್ವಂದ್ವೇಚ'** (ಪಾ. ಸೂ. ೬-೨-೧೪೧) ದೇವತಾವಾಚಕಪದಗಳನ್ನೊಳ ಗೊಂಡ ದ್ವಂದ್ವಸಮಾಸದಲ್ಲಿ ಪೂರ್ವಪದ ಉತ್ತರಪದಗಳೆರಡೂ ಒಟ್ಟಿಗೆ ಪ್ರಕೃತಿಸ್ವರವನ್ನು ಹೊಂದುವುವು ಎಂಬುದರಿಂದ ಪದಗಳೆರಡಕ್ಕೂ ಪ್ರಕೃತಿಸ್ವರ ಬರುವುವು. ಮಿತ್ರಾವರುಣ+ಔ, ಎಂದಿರುವಾಗ **'ಸುಪಾಂಸುಲುಕ್ಪೂರ್ವಸವರ್ಣ ದೀರ್ಘ'**-(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಆಕಾರವು **'ಅ+ಔ'** ಇವುಗಳ ಸ್ಥಾನ ದಲ್ಲಿ ಬರುವುದು.

**ಹುವೇ**—**'ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ'** ಧಾತು ಲಟ್, ಆತ್ಮನೇಪದ ಉತ್ತಮಪುರುಷ ಏಕವಚನ ಇಟ್ ಪ್ರತ್ಯಯ ಹ್ವೇ+ಇ. ಈಗ **'ಬಹುಲಂ ಛಂದಸಿ'** (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರ

ಸಾರಣ ವಕಾರಕ್ಕೆ ಉಕಾರ, **'ಸಂಪ್ರಸಾರಣಾಚ್ಚ'** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ, ಹು+ಇ **'ಕರ್ತರಿಶಪ್'** (ಪಾ. ಸೂ. ೩-೧-೬೮) ಎಂಬುದರಿಂದ ವಿಕರಣಶಪ್ ಆದಕ್ಕೆ **'ಬಹುಲಂ ಛಂದಸಿ'** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ **'ಟಿತ ಆತ್ಮನೇಪದಾನಾಂ ಟೇರೇ'** (ಪಾ. ಸೂ ೩-೪-೭೯) ಎಂಬುದರಿಂದ ಉಗೆ ಓಕಾರರೂಪವಾದ ಗುಣವು ಪ್ರಾಪ್ತವಾದರೆ, **'ಸಾರ್ವಧಾತುಕಮಪಿತ್'** (ಪಾ. ಸೂ. ೧-೨-೪) ಎಂಬುದರಿಂದ ಏ ಎಂಬುದು ಙಿತ್ತಾದ್ದರಿಂದ **'ಕ್ಙಿತಿ ಚ'** (ಪಾ ಸೂ. ೧-೧-೫) ಎಂಬುದರಿಂದ ಗುಣನಿಷೇಧ ಬರುವುದು, **'ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ'** (ಪಾ. ಸೂ. ೬-೪-೭೭) ಎಂಬುದರಿಂದ ಉಗೆ ಉವಙ್ ಆದೇಶ ಹುವೇ, ಎಂದಾಗುತ್ತೆ. **'ತಿಙ್ಙತಿಙಃ'** (ಪಾ. ಸೂ ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು. ‖ ೫ ‖

‖ ಸಂಹಿತಾಪಾಠಃ ‖

ವರುಣಃ ಪ್ರಾವಿತಾ ಭುವನ್ಮಿತ್ರೋ ವಿಶ್ವಾಭಿರೂತಿಭಿಃ ।
ಕರತಾಂ ನಃ ಸುರಾಧಸಃ ‖ ೬ ‖

‖ ಪ್ರತಿಪದಾರ್ಥ ‖

ವರುಣಃ । ಪ್ರಽಅವಿತಾ । ಭುವತ್ । ಮಿತ್ರಃ । ವಿಶ್ವಾಭಿಃ । ಊತಿಽಭಿಃ ।
ಕರತಾಂ । ನಃ । ಸುಽರಾಧಸಃ ‖ ೬ ‖

‖ ಸಾಯಣಭಾಷ್ಯಂ ‖

ಅಯಂ ವರುಣೋಽಸ್ಮಾಕಂ ಪ್ರಾವಿತಾ ಭುವತ್ । ಪ್ರಕರ್ಷೇಣ ರಕ್ಷಕೋ ಭವತು । ಮಿತ್ರಶ್ಚ ವಿಶ್ವಾಭಿರೂತಿಭಿಃ ಸರ್ವಾಭೀ ರಕ್ಷಾಭಿಃ ಪ್ರಾವಿತಾ ಭುವತ್ । ತಾವುಭಾವಪಿ ನೋಽಸ್ಮಾನ್ಸುರಾಧಸಃ ಪ್ರಭೂತಧನಯುಕ್ತಾನ್ಕರತಾಂ । ಕುರುತಾಂ ‖ ಅವಿತಾ । ತೃಚಶ್ಚಿತ್ತ್ವಾದಂತೋದಾತ್ತತ್ವಂ । ಪ್ರಾದಿಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ । ಭುವತ್ । ಭೂ ಸತ್ತಾಯಾಂ । ಲೇಟಸ್ತಿಪ್ । ಲೇಟೋಽಡಾಟಾವಿತ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಬಹುಲಂ ಛಂದಸೀತಿ ಶಪೋ ಲುಕ್ । ಗುಣೇ ಪ್ರಾಪ್ತೇ ಭೂಸುವೋಸ್ತಿಙಿ । ಪಾ. ೭-೩-೮೮ । ಇತಿ ಪ್ರತಿಷೇಧಃ । ಉವಙಾದೇಶಃ । ತಿಙ್ಙತಿಙ ಇತಿ ನಿಘಾತಃ । ವಿಶ್ವಾಭಿಃ ಅಶಿಪ್ರುಷೀತ್ಯಾದಿನಾ ಕ್ವನಂತೋ ವಿಶ್ವಶಬ್ದಃ ಆದ್ಯುದಾತ್ತಃ । ಟಾಪ್ಸುಪೋರನುದಾತ್ತತ್ವಾತ್ತದೇವ ಶಿಷ್ಯತೇ । ಊತಿಭಿಃ । ಊತಿಯೂತೀತ್ಯಾದಿನಾ ಕ್ತಿನ್ನುದಾತ್ತಃ । ಕರತಾಂ । ಕೃಞ್ ಕರಣೇ । ಭೌವಾದಿಕಃ । ಲೋಟಸ್ತಸ್ । ತಸಸ್ತಾಂ । ಕರ್ತರಿ ಶಪ್ । ಗುಣೋ ರಪ-

**ರತ್ವಂ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಸುರಾಧಸಃ । ರಾಧ ಸಾಧ ಸಂಸಿದ್ಧೌ । ರಾಧ್ನೋತ್ಯನೇನೇತಿ ರಾಧೋ ಧನಂ । ಶೋಭನಂ ರಾಧೋ ಯೇಷಾಂ ತೇ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ಪ್ರಾಪ್ತಂ ಸೋರ್ಮನಸೀ ಅಲೋಮೋಷಸೀ । ಪಾ. ೬-೨-೧೧೭ । ಇತ್ಯುತ್ತರಪದಾದ್ಯುದಾತ್ತತ್ವೇನ ಬಾಧ್ಯತೇ ॥**

॥ ಪ್ರತಿಪದಾರ್ಥ ॥

**ವರುಣಃ**—ವರುಣನು (ನಮ್ಮ) । **ಪ್ರಾವಿತಾ**—ಮುಖ್ಯರಕ್ಷಕನಾಗಿ । **ಭುವತ್**—ಆಗಲಿ । **ಮಿತ್ರಃ**—ಮಿತ್ರನು । **ವಿಶ್ವಾಭಿಃ**—ಸಮಸ್ತವಾದ । **ಊತಿಭಿಃ**—ರಕ್ಷಣೆಗಳಿಂದ (ನಮ್ಮ ಸಂರಕ್ಷಕನಾಗಿ ಆಗಲಿ) । ಈ ಮಿತ್ರಾವರುಣರು । **ನಃ**—ನಮ್ಮನ್ನು । **ಸುರಾಧಸಃ**—ವಿಶೇಷವಾಗಿ ಧನಯುಕ್ತರನ್ನಾಗಿ । **ಕರತಾಂ**—ಮಾಡಲಿ.

॥ ಭಾವಾರ್ಥ ॥

ವರುಣನು ನಮ್ಮ ಮುಖ್ಯಸಂರಕ್ಷಕನಾಗಿರಲಿ, ಮಿತ್ರನೂ ಸಹ ತನ್ನ ಸಕಲ ರಕ್ಷಣೆಗಳನ್ನು ಕೊಟ್ಟು ನಮ್ಮನ್ನು ಕಾಪಾಡಲಿ. ಮತ್ತು ಈ ಮಿತ್ರಾವರುಣರಿಬ್ಬರೂ ನಮ್ಮನ್ನು ಧನಯುಕ್ತರನ್ನಾಗಿ ಮಾಡಲಿ ಎಂದರೆ ನಮಗೆ ಹೆಚ್ಚಾಗಿ ಧನವನ್ನು ಕೊಡಲಿ.

## English Translation.

May Varuna be our special protector; may Mitra protect us with all kinds of protections; may they make us possessors of great riches.

॥ ವಿಶೇಷವಿಷಯಗಳು ॥

**ವಿಶ್ವಾಭಿಃ ಊತಿಭಿಃ**—ಅನೇಕ ವಿಧವಾದ ಸಂರಕ್ಷಣೆಗಳಿಂದ. ಇಲ್ಲಿ ಅನೇಕ ವಿಧವಾದ ಎಂದರೆ, ಅನ್ನಾದ್ಯಾಹಾರಗಳು, ವಾಸಿಸುವ ಸ್ಥಳ, ಶತ್ರುಗಳಿಂದ ಒದಗುವ ಭಯವನ್ನು ನಿವಾರಿಸುವುದು ಇವೇ ಮೊದಲಾದ ರಕ್ಷಣೆಗಳು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಪ್ರಾವಿತಾ**—ಅವ ರಕ್ಷಣೇ ಧಾತು '**ಣ್ವುಲ್ತೃಚೌ**' (ಪಾ. ಸೂ. ೩-೧-೧೩೩) ಎಂಬುದರಿಂದ ತೃಚ್, '**ಆರ್ಧಧಾತುಕಸ್ಯೇಡ್ವಲಾದೇಃ**' (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮ, ಅವಿತೃ '**ಕುಗತಿಪ್ರಾದಯಃ**' (ಪಾ. ಸೂ. ೨-೨-೧೮) ಎಂಬುದರಿಂದ ಪ್ರಶಬ್ದದೊಂದಿಗೆ ಪ್ರಾದಿಸಮಾಸ, ತೃಚ್ ಚಿತ್, ಆದ್ದರಿಂದ '**ಚಿತಃ**' (ಪಾ. ಸೂ. ೬-೧-೧೬೩) ಎಂಬುದರಿಂದ ಅವಿತೃ ಎಂಬುದು ಅಂತೋದಾತ್ತ ಸಮಾಸಾನಂತರವೂ, '**ಗತಿಕಾರಕೋಪಪದಾತ್ಕೃತ್**' (ಪಾ. ಸೂ. ೬-೨-೧೩೯) ಎಂಬುದರಿಂದ ಅದೇ ಸ್ವರವೇ ನಿಲ್ಲುವುದು ಪ್ರಾವಿತೃ

ಎಂಬುದರ ಮುಂದೆ ಸು ಪ್ರತ್ಯಯು, **'ಋದುಶನಸ್ಪುರುದಂಸೋಽನೇಹಸಾಂ ಚ'** (ಪಾ. ಸೂ. ೭-೧-೯೪) ಎಂಬುದರಿಂದ ಅನಙ್ ಆದೇಶ, **ಅಪ್‌ತೃನ್‌ತೃಚ್-'** (ಪಾ. ಸೂ. ೬-೪-೧೧) ಎಂಬುದರಿಂದ ದೀರ್ಘ **'ಹಲ್ಙ್ಯಾ ಭ್ಯೋದೀರ್ಘಾತ್-'** (ಪಾ. ಸೂ. ೬-೧-೬೮) ಎಂಬುದರಿಂದ ಸುಲೋಪ **'ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ಸಕಾರಕ್ಕೆ ಲೋಪ.

**ಭುವತ್**— ಭೂ ಸತ್ತಾಯಾಂ, ಧಾತು, ಇದರ ಮುಂದೆ **'ಲಿಙರ್ಥೇ ಲೇಟ್'** (ಪಾ. ಸೂ. ೩-೪-೭) ಎಂಬುದರಿಂದ ಲೇಟ್ ಅದಕ್ಕೆ ತಿಪ ಆದೇಶ ಭೂ+ತಿ, **'ಲೇಟೋಽಡಾಟೌ'** (ಪಾ. ಸೂ ೩-೪-೯೪) ಲೇಟ್ಟಿಗೆ ಅಟ್ ಆಟ್ ಆಗಮಗಳು ಬರುವುವು ಎಂಬುದರಿಂದ ಅಡಾಗಮ. ಭೂ+ಅತಿ, **'ಇತಶ್ಚಲೋಪಃ ಪರಸ್ಮೈ ಪದೇಷು'** (ಪಾ. ಸೂ. ೩-೪-೯೭) ಪರಸ್ಮೈ ಪದದಲ್ಲಿ ಬಂದ ಪ್ರತ್ಯಯದ ಇಕಾರಕ್ಕೆ ಲೋಪ ಬರುವುದು. ಎಂಬುದ ರಿಂದ ಇಕಾರಕ್ಕೆ ಲೋಪ. ಭೂ ಅತ್, ಶಪ್ ವಿಕರಣಕ್ಕೆ **'ಬಹುಲಂ ಛಂದಸಿ'** (ಪಾ. ಸೂ. ೨-೪-೭೩) ಎಂಬುದ ರಿಂದ ಲುಕ್, **'ಸಾರ್ವಧಾತುಕಾರ್ಧಧಾತುಕಯೋಃ'** (ಪಾ. ಸೂ. ೭-೩-೮೪) ಸಾರ್ವಧಾತುಕಪ್ರತ್ಯಯ ಅಂದರೆ ತಿಙ್‌ಪ್ರತ್ಯಯ ಮತ್ತು ಶಕಾರೇತ್ಸಂಜ್ಞಕವಾದ ಪ್ರತ್ಯಯ ಇವು ಪರವಾಗಿರುವಾಗಲೂ, ಇವುಗಳನ್ನುಳಿದ-ಧಾತ್ವಧಿಕಾರ ವಿಹಿತ ಪ್ರತ್ಯಯಗಳಿಗೆ ಆರ್ಧಧಾತುಕಪ್ರತ್ಯಯ ಎಂದು ಸಂಜ್ಞೆ ಅದು ಪರವಾಗಿದ್ದರೂ ಇ, ಉ, ಋ, ಲೃ ಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದಕ್ಕೆ ಗುಣಬರುವುದು. ಎಂಬುದರಿಂದ ಯದ್ಯಪಿ ಭೂ ಎಂಬಲ್ಲಿಯ ಊಗೆ ಓ ಎಂಬ ಗುಣವು ಪ್ರಾಪ್ತವಾಗುತ್ತೆ ಆದರೆ **'ಭೂಸುವೋಸ್ತಿಙಿ'** (ಪಾ. ಸೂ. ೭-೩-೮೮) ಸಾರ್ವಧಾತುಕ ಸಂಜ್ಞಕ-ವಾದ ತಿಙ್‌ಪ್ರತ್ಯಯವು ಪರದಲ್ಲಿರುವಾಗ ಭೂ, ಸೂ, ಇವುಗಳಿಗೆ ಗುಣಬರುವುದಿಲ್ಲ, ಎಂದು ನಿಷೇಧ ಬರುವುದರಿಂದ ಗುಣ ಬರುವುದಿಲ್ಲ. **'ಅಚಿಶ್ನು ಧಾತು ಭ್ರುವಾಂಯ್ವೋರಿಯಙುವಙೌ'** (ಪಾ. ಸೂ. ೬-೪-೭೭) ಅಚಿ, ಶ್ನುಧಾತು ಭ್ರುವಾಂ, ಯ್ವೋಃ, ಇಯಙುವಙೌ, ಇತಿ ಛೇದಃ ಇಶ್ಚ ಉಶ್ಚ=ಯೂ ತಯೋಃ ಯ್ವೋಃ ಇವರ್ಣ ಉವರ್ಣಗಳ ಎಂದು ಅರ್ಥ ಯ್ವೋಃ ಎಂಬುದು ಧಾತೋಃ ಎಂಬುದಕ್ಕೆ ವಿಶೇಷಣ, **'ಯೇನವಿಧಿಸ್ತದನ್ತಸ್ಯ'** (ಪಾ. ಸೂ. ೧-೧-೭೧) ಎಂಬುದರಿಂದ ತದಂತ ಲಾಭ ಇ-ಉ ವರ್ಣಾನ್ತಗಳಾದ ಧಾತುಗಳ ಎಂದು ಅರ್ಥವಾಯಿತು. ಶ್ನು-ಭ್ರು ಇವೆರಡೂ ಯಾವಾಗಲೂ ಉವರ್ಣಾಂತವಾಗಿಯೇ ಇರುವುವು, ಯಾವಾಗಲೂ ಇವರ್ಣಾಂತಗಳಾಗುವುದಿಲ್ಲ, ಏವಂಚ ಸಂಭವ ವ್ಯಭಿಚಾರಗಳು (ಇತರ ವ್ಯಾವೃತ್ತಿ ಯೋಗ್ಯತೆಗಳು) ಇಲ್ಲದೇ ಇರುವುದರಿಂದ ಯ್ವೋಃ ಎಂಬುದಕ್ಕೆ ಶ್ನು ಭ್ರೂ ಎಂಬಲ್ಲಿ ವಿಶೇಷಣವಾಗುವುದಿಲ್ಲ. **'ಸಂಭವ ವ್ಯಭಿಚಾರಾಭ್ಯಾಂ ಸ್ಯಾದ್ವಿಶೇಷಣಮರ್ಥವತ್'** ಎಂಬ ನ್ಯಾಯವನ್ನು ಇಲ್ಲಿ ಹೇಳಿಕೊಳ್ಳಬೇಕು, ಆರನೇ ಅಧ್ಯಾಯ ನಾಲ್ಕನೇ ಪಾದ, ಏಳನೇ ಅಧ್ಯಾಯದ ನಾಲ್ಕು ಪಾದಗಳು ಅಂತು ಅಷ್ಟಾಧ್ಯಾಯಿಯ ಐದು ಪಾದಗಳಿಗೆ ಅಂಗಾಧಿಕಾರದಲ್ಲಿರುವುವು ಎಂದು ಸ್ಥಿತಿ, ಇದೂ ಅಂಗಾಧಿಕಾರದಲ್ಲಿರುವುದರಿಂದ **'ಅಂಗಸ್ಯ'** (ಪಾ. ಸೂ. ೬-೪-೧) ಎಂಬುದು ಅಧಿಕೃತವಾಗುವುದು. **'ಯಂವಿನಾ-'** ನ್ಯಾಯದಿಂದ ಪ್ರತ್ಯಯಃ ಎಂದು ಆಕ್ಷಿಪ್ತವಾಗುವುದು, ಸಪ್ತಮ್ಯಂತವಾಗಿ ವಿಪರಿಣಾಮುಮಾಡುವುದು ಅಚಿ ಎಂಬುದು ಅದಕ್ಕೆ ವಿಶೇಷಣವಾದ್ದ ರಿಂದ ತದಾದಿಲಾಭ ಶ್ನುಧಾತು ಭುವಾಂ, ಎಂಬುದು ಅಂಗಸ್ಯ ಎಂಬುದಕ್ಕೆ ವಿಶೇಷಣವಾದ್ದರಿಂದ **'ಯೇನವಿಧಿಸ್ತ-ದನ್ತಸ್ಯ'** (ಪಾ. ಸೂ. ೧-೧-೭೨) ಎಂಬುದರಿಂದ ತದನ್ತಲಾಭಃ ತಥಾ ಚಾಯಂ ಸೂತ್ರಾರ್ಥಃ, ಶ್ನು ಪ್ರತ್ಯಯಾಂತ ವಾದ ಅಂಗ ಇ ಉವರ್ಣಾಂತಗಳಾದ ಧಾತುಗಳನ್ನು ಕೊನೆಯಲ್ಲಿ ಹೊಂದಿರುವ ಅಂಗ, ಭ್ರೂಶಬ್ದಾಂತವಾದ ಅಂಗ, ಇದಕ್ಕೆ ಅಜಾದಿ ಪ್ರತ್ಯಯಪರದಲ್ಲಿದ್ದರೆ ಇಯಙ್ ಉವಙ್ ಎಂಬ ಆದೇಶಗಳು ಬರುವುವು. ಎಂದು, ಇ ಗೆ ಇಯಙ್

ಉಗೆ ಉವಙ್ ಬರುವುದು. ಇ ಉ ಗಳು ಹ್ರಸ್ವಗಳೂ ದೀರ್ಘಗಳೂ ಸಹ ಗ್ರಹಿಸಲ್ಪಡುವವು. ಭೂ+ಅತ್, ಎಂಬಲ್ಲಿ ಊಗೆ ಉವಙ್ ಬಂದರೆ ಭುವ್+ಅತ್=ಭುವತ್ ಎಂದಾಗುತ್ತೆ **'ತಿಙ್ಙತಿಙಃ'** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುತ್ತೆ.

**ವಿಶ್ವಾಭಿಃ**—ವಿಶ ಪ್ರವೇಶನೇ, ಧಾತು **'ಅಶೂಪ್ರುಷಿ ಲಟಿಕಣಿ ಖಟಿ ವಿಶಿಭ್ಯಃ ಕ್ವನ್'** (ಉ. ಸೂ. ೧-೧೫೧) ಎಂಬುದರಿಂದ ಕ್ವನ್ ಪ್ರತ್ಯಯ ವಿಶ್ವ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. ಇದರ ಮುಂದೆ, ಸ್ತ್ರೀತ್ವ ವಿವಕ್ಷೆಮಾಡಿದಾಗ **'ಅಜಾದ್ಯತಷ್ಟಾಪ್'** (ಪಾ. ಸೂ. ೪-೧-೪) ಎಂಬುದರಿಂದ ಟಾಪ್, ತೃತೀಯಾಬಹುವಚನ ಭಿಸ್, ಟಾಪ್, ಭಿಸ್, ಎರಡೂ **'ಅನುದಾತ್ತೌಸುಪ್ಪಿತೌ'** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ, ಏವಂಚ ವಿಶ್ವಾಭಿಃ ಎಂಬಲ್ಲಿ ಆದ್ಯುದಾತ್ತವೇ ನಿಲ್ಲುವುದು.

**ಊತಿಭಿಃ**—**'ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ'** (ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತ ವಾದ ಕ್ತಿನ್ ಬರುವುದು.

**ಕರತಾಮ್**—ಡುಕೃಞ್ ಕರಣೇ ಧಾತು, ಭ್ವಾದಿ (೧ನೇ ಗಣದ) ಯಲ್ಲಿರುವುದು ಲೋಟ್. ಅದಕ್ಕೆ **'ತಿಪ್ ತಸ್ ಝಿ-'** (ಪಾ. ಸೂ. ೩-೪-೭೮) ಎಂಬುದರಿಂದ ತಸ್ ಕೃ+ತಸ್ **'ಕರ್ತರಿಶಪ್'** (ಪಾ. ಸೂ. ೩-೧-೬೮) ಶಪ್ ವಿಕರಣ **'ಸಾರ್ವಧಾತುಕಾರ್ಧಧಾತುಕಯೋಃ'** (ಪಾ. ಸೂ. ೭-೩-೮೪) ಎಂಬುದರಿಂದ ಋಗೆ ಗುಣವು ಬರುತ್ತೆ ಅದು **'ಉರಣ್ರಪರಃ'** (ಪಾ. ಸೂ. ೧-೧-೫೧) ಎಂಬುದರಿಂದ ರಪರವಾಗಿ ಬರುವುದು ಅಂದರೆ **'ಅರ್'** ಬರುತ್ತೆ, ಕರ್+ಅ+ತಸ್, **'ಲೋಟೋ ಲಙ್ವತ್'** (ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ **'ತಸ್ಥಸ್ಥಮಿಪಾಂತಾಂತಂತಾಮಃ'** (ಪಾ. ಸೂ. ೩-೪-೧೦೧) ಎಂಬುದರಿಂದ **'ತಾಮ್'** ಆದೇಶ ಶಪ್ ಪಿತ್ತ್ವಾದ್ದರಿಂದ ಅನುದಾತ್ತ ಇದರ ಮುಂದಿನ ತಾಮ್ ಎಂಬ ತಿಙ್ಙ **'ತಾಸ್ಯನುದಾತ್ತೇನ್ಙಿದದುಪದೇಶಾಲ್ಲ ಸಾರ್ವಧಾತುಕಮನುದಾತ್ತಮಹ್ನ್ವಿಙಯೋಃ'** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಧಾತುಸ್ವರವೇ ಉಳಿಯುವುದು.

**ಸುರಾಧಸಃ**—**'ರಾಧ ಸಾಧ ಸಂಸಿದ್ಧೌ'** ಧಾತು. ರಾಧ್ನೋತಿ ಅನೇನ-ಇದರಿಂದ ಸಿದ್ಧಿಯನ್ನು ಹೊಂದುವನು. ಇತಿ ರಾಧಃ, ಧನ ಎಂದು ಅರ್ಥ. ಶೋಭನಂ ರಾಧಃ ಯೇಷಾಂ ತೇ, ಒಳ್ಳೆಯ ಧನವುಳ್ಳವರು ಎಂದು **'ಅನೇಕಮನ್ಯಪದಾರ್ಥೇ'** (ಪಾ. ಸೂ. ೨-೨-೨೪) ಎಂಬುದರಿಂದ ಬಹುವ್ರೀಹಿಸಮಾಸ, **'ಸರ್ವಧಾತುಭ್ಯೋಽಸುನ್'** (ಉ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯಾಂತ ರಾಧಃಶಬ್ದ ನಿತ್ಸ್ವರದಿಂಡ ಆದ್ಯುದಾತ್ತ. ಬಹುವ್ರೀಹಿ ಸಮಾಸಾನಂತರ **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾದರೆ ಅದನ್ನು ಬಾಧಿಸಿ **'ನಞ್ಸುಭ್ಯಾಮ್'** (ಪಾ. ಸೂ. ೬-೨-೧೭೨) ಬಹುವ್ರೀಹಿ ಸಮಾಸದಲ್ಲಿ ನಞ್ ಸುಗಳ ಮುಂದೆ ಇರುವ ಉತ್ತರ ಪದವು ಅಂತೋದಾತ್ತವಾಗುವುದು ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾಗುತ್ತೆ. ಇದನ್ನೂ ಬಾಧಿಸಿ **'ಸೋರ್ಮನಸೀ ಅಲೋಮೋಷಸೀ'** (ಪಾ. ಸೂ. ೬-೨-೧೧೭) ಲೋಮನ್, ಉಷಸ್, ಈ ಎರಡು ಶಬ್ದಗಳನ್ನು ಬಿಟ್ಟು ಮನ್ನಂತ, ಅಸಂತ ಶಬ್ದಗಳು ಸು ಎಂಬುದರ

ಮುಂದೆ ಇದ್ದರೆ ಆದ್ಯುದಾತ್ತಗಳಾಗುವುದು, (ಮನ್, ಇದನ್ನು ಕೊನೆಯಲ್ಲಿ ಹೊಂದಿರುವುದು ಮನ್ನಂತ, ಅಸ್, ಇದನ್ನು ಕೊನೆಯಲ್ಲಿ ಹೊಂದಿರುವುದು ಅಸಂತ,) ಎಂಬುದರಿಂದ ಉತ್ತರಪದಕ್ಕೆ ಆದ್ಯುದಾತ್ತ ಸ್ವರವೇ ಬರುವುದು ॥ ೬ ॥

॥ ಸಂಹಿತಾಪಾಠಃ ॥

ಮರುತ್ವಂತಂ ಹವಾಮಹ ಇಂದ್ರಮಾ ಸೋಮಪೀತಯೇ ।
ಸಜೂರ್ಗಣೇನ ತೃಂಪತು ॥ ೭ ॥

॥ ಪದಪಾಠಃ ॥

ಮರುತ್ವಂತಂ । ಹವಾಮಹೇ । ಇಂದ್ರಂ । ಆ । ಸೋಮಽಪೀತಯೇ ॥
ಸಽಜೂಃ । ಗಣೇನ । ತೃಂಪತು ॥ ೭ ॥

॥ ಸಾಯಣಭಾಷ್ಯಂ ॥

ಮರುತ್ವಂತಂ ಮರುದ್ಭಿರ್ಯುಕ್ತಮಿಂದ್ರಂ ಸೋಮಪೀತಯೇ ಸೋಮಪಾನಾಯಾ ಹವಾಮಹೇ । ಆಹ್ವಯಾಮಃ । ಸ ಚೇಂದ್ರೋ ಗಣೇನ ಮರುತ್ಸಮೂಹೇನ ಸಜೂಃ ಸಹ ತೃಂಪತು । ತೃಪ್ತೋ ಭವತು ॥ ಮರುತ್ವಂತಂ । ಮರುತೋಽಸ್ಯ ಸಂತೀತಿ ಮರುತ್ವಾನ್ । ಝಯಃ । ಪಾ. ೮-೨-೧೦ । ಇತಿ ಮತುಪೋ ವತ್ವಂ । ತಸೌ ಮತ್ವರ್ಥೇ । ಪಾ. ೧-೪-೧೯ । ಇತಿ ಭಸಂಜ್ಞಾಯಾಂ ಪದಸಂಜ್ಞಾಯಾ ಬಾಧಿತತ್ವಾಜ್ಜಶ್ತ್ವಾಭಾವಃ । ಮತುಪ್ಪಸೌ ಪಿತ್ವಾದನುದಾತ್ತೌ । ನನು ಹ್ರಸ್ವನುಡ್ಭ್ಯಾಂ ಮತುಪ್ । ಪಾ. ೬-೧-೧೭೬ ।ಇತಿ ಮತುಪ ಉದಾತ್ತತ್ವೇನ ಭವಿತವ್ಯಂ ಸ್ವರವಿಧೌ ವ್ಯಂಜನಮವಿದ್ಯಮಾನವತ್ । ಪರಿ. ೭೯। ಇತಿ ತಕಾರಸ್ಯಾವಿದ್ಯಮಾನವತ್ತ್ವೇನ ಹ್ರಸ್ವಾತ್ಪರತ್ವಾತ್ । ನ । ಹ್ರಸ್ವನುಡ್ಭ್ಯಾಮಿತ್ಯತ್ರ ನುಡ್ಗ್ರಹಣಸಾಮರ್ಥ್ಯಾದವಿದ್ಯಮಾನಪರಿಭಾಷಾ ನಾಶ್ರೀಯತ ಇತಿ ವೃತ್ತಾವುಕ್ತಂ । ಕಾ. ೬-೧-೧೭೬ । ಅತೋ ಮರುಚ್ಛಬ್ದಸ್ಯ ಸ್ವರ ಏವ ಶಿಷ್ಯತೇ । ಸಜೂಃ । ಜುಷೀ ಪ್ರೀತಿಸೇವನಯೋಃ । ಸಂಪದಾದಿಲಕ್ಷಣಃ ಕ್ವಿಪ್ । ಸಮಾನಾ ಪ್ರೀತಿರ್ಯಸ್ಯೇತಿ ಬಹುವ್ರೀಹಿಃ । ಸಮಾನಸ್ಯ ಛಂದಸೀತಿ ಸಭಾವಃ । ಸಸಜುಷೋ ರುಃ । ಪಾ ೮-೨-೬೬ । ಇತಿ ರುತ್ವಂ । ರ್ವೋರುಪಧಾಯಾಃ । ಪಾ. ೮-೨-೭೬ । ಇತ್ಯುಪಧಾದೀರ್ಘಃ । ಬಹುವ್ರೀಹಿಸ್ವರೇ ಪ್ರಾಪ್ತೇ ತ್ರಿಚಕ್ರಾದೀನಾಂ ಛಂದಸಿ । ಪಾ. ೬-೨-೧೯೯-೧ । ಇತ್ಯುತ್ತರಪದಾಂತೋದಾತ್ತತ್ವಂ । ತೃಂಪತು । ತೃಪ ತೃಂಪ ತೃಪ್ತೌ । ತುದಾದಿಭ್ಯಃ ಶಃ । ಶೇ ಮುಚಾದೀನಾಂ । ಪಾ. । ೭-೧-೫೯ ಇತಿ ನುಗಾಗಮಃ ॥

॥ ಪ್ರತಿಪದಾರ್ಥ ॥

**ಮರುತ್ವಂತಂ**—ಮರುದ್ದೇವತೆಗಳಿಂದ ಯುಕ್ತನಾದ । **ಇಂದ್ರಂ**—ಇಂದ್ರನನ್ನು । **ಸೋಮ-ಪೀತಯೇ**—ಸೋಮಪಾನಾರ್ಥವಾಗಿ । **ಆ ಹವಾಮಹೇ**—ಆಹ್ವಾನಮಾಡುವೆವು. (ಆ ಇಂದ್ರನು) । **ಗಣೇನ**—ಮರುದ್ಗಣಗಳಿಂದ । **ಸಜೂಃ**—ಸಹಿತನಾಗಿ । **ತೃಂಪತು**—ತೃಪ್ತನಾಗಲಿ.

॥ ಭಾವಾರ್ಥ ॥

ಮರುದ್ದೇವತೆಗಳಿಂದ ಯುಕ್ತನಾದ ಇಂದ್ರನನ್ನು ಸೋಮಪಾನಾರ್ಥವಾಗಿ ಆಹ್ವಾನಮಾಡುವೆವು ಆ ಇಂದ್ರನು ಮರುತ್ತಗಳೊಡನೆ (ಇಲ್ಲಿಗೆ ಬಂದು ಸೋಮಪಾನಮಾಡಿ) ತೃಪ್ತಿಯನ್ನು ಹೊಂದಲಿ.

## English Translation.

We invoke Indra with his Maruts to drink the Soma-juice; may he be satisfied with his host (of Maruts).

॥ ವಿಶೇಷವಿಷಯಗಳು ॥

**ಸಜೂಃ ತೃಂಪತು**—ಜುಷೀ ಪ್ರೀತಿಸೇವನಯೋಃ । ಸಮಾನಾ ಪ್ರೀತಿರ್ಯಸ್ಯ ಸಜೂಃ । ಇಂದ್ರನು ಮತ್ತು ಮರುದ್ದೇವತೆಗಳು ಸಮನಾಗಿ ತೃಪ್ತಿಯನ್ನು ಹೊಂದಲಿ ಎಂದರೆ ಇಬ್ಬರೂ ತೃಪ್ತರಾಗಲಿ ಎಂದಭಿಪ್ರಾಯವು. ಇಲ್ಲಿ **ಸಜೂಃ** ಎಂದರೆ ಸಮಾನತೃಪ್ತಿಯುಳ್ಳವನಾಗಿ ಎಂದೂ **ತೃಂಪತು** ಎಂದರೆ ತೃಪ್ತನಾಗಲಿ ಎಂದೂ ಶಬ್ದಗಳಿಗೆ ಅರ್ಥವಿರುವುದರಿಂದ ದ್ವಿರುಕ್ತಿದೋಷವು ಬರಬಹುದೆಂಬ ಶಂಕೆಗೆ- ಇಂತಹ ಅನೇಕ ಪ್ರಯೋಗಗಳು ರೂಢಿಯಲ್ಲಿರುವುದರಿಂದ ಅವು ಅಷ್ಟು ಗಮನಾರ್ಹವಲ್ಲ ಎಂದು ಸಮಾಧಾನವನ್ನು ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಮರುತ್ವಂತಮ್**—ಮರುತಃ ಅಸ್ಯ ಸಂತಿ-ಮರುತ್ತುಗಳು ಇವನಿಗೆ ಇವೆ ಎಂದು ವಿಗ್ರಹ. **'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್'** (ಪಾ. ಸೂ. ೫-೨-೯೪) ಎಂಬುದರಿಂದ ಮರುತ್ ಶಬ್ದದ ಮುಂದೆ ಮತುಪ್ ಪ್ರತ್ಯಯ. ಮರುತ್+ಮತ್, **'ಝಯಃ'** (ಪಾ. ಸೂ. ೮-೨-೧೦) ಝಯ್ ವರ್ಣವನ್ನು ಕೊನೆಯಲ್ಲಿ ಹೊಂದಿರುವ ಶಬ್ದದ ಮುಂದೆ ಇರುವ ಮತುಪ್ಪಿನ ಮಕಾರಕ್ಕೆ ವಕಾರ ಬರುವುದು ಎಂಬುದರಿಂದ ವಕಾರ ಮರುತ್+ವತ್, ಮರುತ್ ಎಂಬುದು ತಕಾರವನ್ನು ಕೊನೆಯಲ್ಲಿ ಹೊಂದಿರುವ ಶಬ್ದ, ಆದ್ದರಿಂದ **'ತಸೌ ಮತ್ವರ್ಥೇ'** (ಪಾ. ಸೂ. ೧-೪-೧೯) ಮತ್ವರ್ಥ ಪ್ರತ್ಯಯು ಪರದಲ್ಲಿರುವಾಗ ತಕಾರಾಂತ ಸಕಾರಾಂತಗಳು ಭ ಸಂಜ್ಞೆಯನ್ನು ಹೊಂದುವವು ಎಂಬುದರಿಂದ ಭ ಸಂಜ್ಞೆ ಬರುತ್ತೆ. ಈ ಭ ಸಂಜ್ಞೆಯಿಂದ ಅಂತರ್ವರ್ತಿ ವಿಭಕ್ತಿಯನ್ನು ನಿಮಿತ್ತ ಮಾಡಿಕೊಂಡು **'ಸುಪ್ತಿಙಂತಂ ಪದಂ'** ಎಂಬುದರಿಂದ ಬರುವ ಪದಸಂಜ್ಞೆಯು ಬಾಧಿತವಾಗುವುದು. ಹೀಗೆ ಮರುತ್ ಎಂಬುದಕ್ಕೆ ಪದಸಂಜ್ಞೆ ಇಲ್ಲದಿರುವುದರಿಂದ **'ಝಲಾಂ ಝಶೋಽನ್ತೇ'** (ಪಾ. ಸೂ. ೮-೪- ) ಪದದ ಕೊನೆಯಲ್ಲಿರುವ ಝಲ್ ವರ್ಣಗಳಿಗೆ ಜ ಬ ಗ ಡ ದ ಗಳು ಬರುವುವು ಎಂಬುದರಿಂದ ತ್ ಗೆ ದ್ ಬರುವುದಿಲ್ಲ. ಮರುತ್ವತ್ ಎಂಬುದರ ಮುಂದೆ

ದ್ವಿತೀಯಾ ಏಕವಚನ ಅಮ್ ಪ್ರತ್ಯಯ, **'ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ'** (ಪಾ. ಸೂ. ೭-೧-೭೦) ಎಂಬುದರಿಂದ ನುಮ್ ಆಗಮ ಮರುತ್ವನ್‌ತ್+ಅಮ್-ಅನುಸ್ವಾರ ಪರಸವರ್ಣಗಳು ಮರುತ್ವನ್ತಮ್ ಎಂದಾಗುತ್ತೆ. ಮತುಪ್ ಪಿತ್ತಾದ್ದರಿಂದಲೂ, ಅಮ್ ಸುಪ್ಪಾದ್ದರಿಂದಲೂ ಎರಡೂ **'ಅನುದಾತ್ತೌ ಸುಪ್ಪಿತೌ'** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತಗಳು, ಸುಪ್ಪಾದ ಅಮ್ಮು ಪಿತ್ತಲ್ಲ. ಆದ್ದರಿಂದ **'ಮತುಪ್ಸುಪೌ ಪಿತ್ತ್ವಾದನುದಾತ್ತೌ'** (ಮತುಪ್, ಸುಪ್, ಎರಡೂ ಪಿತ್ತಾದ್ದರಿಂದ ಅನುದಾತ್ತಗಳು) ಎಂದು ವೇದಭಾಷ್ಯದ ಪಂಕ್ತಿಯು ಪ್ರಾಮಾದಿಕವು **'ಸ್ವರವಿಧೌ ವ್ಯಂಜನಮವಿದ್ಯಮಾನವತ್'** (ಪರಿಭಾ. ೭೯) ಸ್ವರವನ್ನು ಮಾಡುವಾಗ ವ್ಯಂಜನವು ಇಲ್ಲದಂತೆ ಆಗುವುದು ಎಂಬ ಪರಿಭಾಷೆಯಿಂದ ಮರುತ್ ಎಂಬುದರ ತ್‌ವು ಇಲ್ಲದಂತೆ ಆಗುವುದು. ಆದ್ದರಿಂದ ವತ್ ಎಂಬ ಮತುಪ್ ಪ್ರತ್ಯಯವು 'ರು' ಎಂಬ ಹ್ರಸ್ವಕ್ಕಿಂತಲೂ ಪರದಲ್ಲಿದ್ದಂತೆ ಆಗುವುದು. ಏವಂಚ **'ಹ್ರಸ್ವನುಡ್ಭ್ಯಾಂ ಮತುಪ್'** (ಪಾ. ಸೂ. ೬-೧-೧೭೬) ಹ್ರಸ್ವಾಂತವಾಗಿದ್ದು ಅಂತೋದಾತ್ತವಾಗಿರುವ ಶಬ್ದದ ಅವ್ಯವಹಿತ ಮುಂದೆ ಇರುವ ಅಥವಾ ನುಟ್ ಆಗಮದ ಅವ್ಯವಹಿತ ಮುಂದೆ ಇರುವ ಮತುಪ್ಪು ಉದಾತ್ತವಾಗುವುದು ಎಂಬುದರಿಂದ **'ಮರು'** ನ ಮುಂದಿರುವ ಮತುಪ್ ಉದಾತ್ತವಾಗಲಿ ಎಂದು ಪ್ರಶ್ನೆ ಬರುವುದು. ಇದಕ್ಕೆ ಕಾಶಿಕಾ ವೃತ್ತಿಕಾರರು (ಕಾ. ೬-೧-೧೭೬) ಪ್ರಕೃತ ಸೂತ್ರದಲ್ಲಿ ಹೀಗೆ ಸಮಾಧಾನವನ್ನು ಹೇಳಿರುವರು. **'ಹ್ರಸ್ವನುಡ್ಭ್ಯಾಂ'** ಎಂಬ ಸೂತ್ರದಲ್ಲಿ ನುಟ್ಟಿಗೆ ಉದಾಹರಣೆ ಅಕ್ಷಣ್ವಂತಃ ಎಂಬುದು. ಅಕ್ಷಿ ಶಬ್ದದ ಮುಂದೆ ಮತುಪ್, **'ಅಸ್ಥಿದಧಿಸಕ್ಥ್ಯಕ್ಷ್ಣಾಮನಙುದಾತ್ತಃ'** (ಪಾ. ಸೂ. ೭-೧-೭೫) ಇತ್ಯನುವೃತ್ತೌ, **'ಛಂದಸ್ಯಪಿದೃಶ್ಯತೇ'** ಛಂದಸ್ಸಿನ ಅಸ್ಥಿ ಮೊದಲಾದ ಶಬ್ದಗಳಿಗೆ ಅನಙಾದೇಶ ದೃಷ್ಟವಾಗಿದೆ, ಇದು ಉದಾತ್ತವೂ ಆಗಿದೆ. ಇಲ್ಲಿ ಅಪಿ ದೃಶ್ಯತೇ, ಎಂದು ಹೇಳಿರುವುದರಿಂದ ಸರ್ವೋಪಾಧಿಗಳಿಗೂ ವ್ಯಾವೃತ್ತಿ ಬರುವುದು. ಅಜಾದಿ ತೃತೀಯಾದಿ ವಿಭಕ್ತಿ ಪರದಲ್ಲಿರುವಾಗ ಅನಙಾದೇಶವು ಪೂರ್ವಸೂತ್ರದಲ್ಲಿ ಹೇಳಿದೆ. ಇದು **'ಅಸ್ಥಾಭಿಃ'** ಇತ್ಯಾದಿ ಕಡೆಗಳಲ್ಲಿ ಹಲಾದಿ ವಿಭಕ್ತಿ ಪರದಲ್ಲಿದ್ದರೂ, **'ಅಸ್ಥನ್ವನ್ತಂ ಯದನಸ್ಥಾ ಬಿಭರ್ತಿ'** ಇತ್ಯಾದಿ ಕಡೆಯಲ್ಲಿ ವಿಭಕ್ತಿ ಪರದಲ್ಲಿಲ್ಲದೇ ಇದ್ದರೂ ಅನಙಾದೇಶ ಬರುವುದು. ಅಸ್ಥನ್ವನ್ತಂ ಎಂಬಲ್ಲಿ ಅಸ್ಥಿ ಶಬ್ದಾನ್ಮತುಪ್, ಅನಙಾದೇಶ, **'ಅನೋನುಟ್'** (ಪಾ. ಸೂ. ೮-೨-೧೬) ಎಂಬುದರಿಂದ ಮತುಪ್ಪಿಗೆ ನುಟ್, ಅನಙೋನಸ್ಯಲೋಪಃ, ಏವಂಚ ಈ ಸೂತ್ರದಿಂದ ಅನಙಾದೇಶ ಬಂದರೆ ಅಕ್ಷನ್+ಮತ್, **'ಪೂರ್ವತ್ರಾಸಿದ್ಧಮ್'** (ಪಾ. ಸೂ. ೮-೨-೧) ಎಂಬುದರಿಂದ **'ಅನೋನುಟ್'** (ಪಾ. ಸೂ. ೮-೨-೬) ಎಂಬುದು ಅಸಿದ್ಧವಾಗುವುದರಿಂದ ಮೊದಲು **'ನಲೋಪಃ ಪ್ರಾತಿಪದಿಕಾನ್ತಸ್ಯ'** (ಪಾ. ಸೂ. ೮-೨-೭) ಎಂಬುದರಿಂದ ನಕಾರಕ್ಕೆ ಲೋಪ, ಈಗ ಭೂತಪೂರ್ವಗತ್ಯಾ ಅನ್ನಂತವಾಗುವುದರಿಂದ **'ಅನೋನುಟ್'** (ಪಾ. ಸೂ. ೮-೨-೧೬) **'ಅನ್'** ಎಂಬುದನ್ನು ಕೊನೆಯಲ್ಲಿ ಹೊಂದಿರುವ ಪದದ ಮುಂದೆ ಇರುವ ಮತುಪ್‌ಗೆ ನುಟ್ ಆಗಮ ಬರುತ್ತೆ, ಎಂಬುದರಿಂದ ನುಟ್ ಆಗಮ ಅಕ್ಷ+ನ್‌ಮತ್ ನುಟ್ಟು ಅಸಿದ್ಧ. (ಪಾ. ಸೂ. ೮-೨-೧) ವಾಗುವುದರಿಂದ **'ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ'** (ಪಾ. ಸೂ. ೭-೧-೭೦) ಎಂಬುದರಿಂದ ಮಕಾರಕ್ಕೆ ವಕಾರ, ನಕಾರಕ್ಕೆ **'ಅಟ್ಕುಪ್ವಾ'** (ಪಾ. ಸೂ. ೮-೪-೨) ಎಂಬುದರಿಂದ ಣಕಾರ ಅಕ್ಷಣ್ವಪ್, ಎಂದಾಗುತ್ತೆ, **'ಕ್ಷ'** ದ ಅಕಾರ ಉದಾತ್ತ. ಏವಂಚ ಅಕ್ಷ ಎಂಬುದು ಅಂತೋದಾತ್ತವೂ ಹ್ರಸ್ವಾಂತವೂ ಆಗಿದೆ. ಆದರೂ ಇದರ ಮುಂದೆ **'ನ್'** ಎಂಬ ನುಡಾಗಮವಿರುವುದು. ಅದರಿಂದ ವ್ಯವಧಾನ ಬರುವುದರಿಂದ ಮತುಪ್ ಹ್ರಸ್ವಾಂತಾತ್ಪರವಾಗುವುದಿಲ್ಲ. ಆದಕಾರಣ ನುಡ್ಗ್ರಹಣವು **'ಹ್ರಸ್ವಾನುಡ್ಭ್ಯಾಂ-'** ಎಂಬ ಸೂತ್ರದಲ್ಲಿ ಮಾಡಲಾಗಿದೆ

ಇಲ್ಲಿ **'ಸ್ವರವಿಧೌ ವ್ಯಂಜನಮವಿದ್ಯಮಾನವತ್'** ಎಂಬ ಪರಿಭಾಷೆಯು ಬರುವ ಪಕ್ಷದಲ್ಲಿ **'ನ್'** ಗೆ ಅವಿದ್ಯಮಾನದ್ಭಾವ ಬರುವುದರಿಂದ ಅದು ಇಲ್ಲದಂತೆ ಆಗುವುದು, ಆಗ ಹ್ರಸ್ವಾಂತವಾದ **'ಅಕ್ಷ'** ಎಂಬುದಕ್ಕೆ ಅವ್ಯವಹಿತ ಮುಂದೆ ಇರುವಂತೆ ಮತ್ ಆಗುತ್ತೆ. ಆದ್ದರಿಂದ ಮತುಪ್‌ಗೆ ಉದಾತ್ತವು ಸಿದ್ಧವೇ ಆಗಬಹುದು. ಹೀಗಿದ್ದರೆ ಪುನಃ ನುಡ್ಗ್ರಹಣವು ವ್ಯರ್ಥವೇ ಆಗಬೇಕಾದೀತು. ಹೀಗೆ ವ್ಯರ್ಥವಾದ ಪದಗಳನ್ನು ಪಾಣಿನ್ಯಾಚಾರ್ಯರು ಪ್ರಯೋಗಿಸಲಾರರು, ಆದ್ದರಿಂದ ನುಡ್ಗ್ರಹಣ ಸಾಮರ್ಥ್ಯದಿಂದ ಹ್ರಸ್ವನುಡ್ಭ್ಯಾಂ ಎಂಬ ಸೂತ್ರ ವಿಷಯದಲ್ಲಿ **'ಸ್ವರವಿಧೌ ವ್ಯಂಜನಮವಿದ್ಯಮಾನವತ್'** ಎಂಬ ಪರಿಭಾಷೆಯು ಪ್ರವರ್ತಿಸುವುದಿಲ್ಲ ಎಂದು ಒಪ್ಪುತ್ತೇವೆ ಎನ್ನುವರು. ಈ ಅರ್ಥವನ್ನು ಕೊಡುವ ಕಾಶಿಕಾವಾಕ್ಯವಿದು **'ಹ್ರಸ್ವನುಡ್ಭ್ಯಾಂ ಇತ್ಯತ್ರ ನಡ್‌ಗ್ರಹಣಸಾಮರ್ಥ್ಯಾತ್ ಅವಿದ್ಯಮಾನ ಪರಿಭಾಷಾ ನಾಶ್ರೀಯತೇ'** (ಕಾ. ೬-೧-೧೭೬) ಅವಿದ್ಯಮಾನ ಪರಿಭಾಷೆಯು ಇಲ್ಲಿ ಬರದಿದ್ದರೆ ನ್ ಎಂಬುದು ಅಸಿದ್ಧವಾಗುವುದಿಲ್ಲವಾದ್ದರಿಂದ ಮತುಪ್ಪು ಹ್ರಸ್ವಾಂತಾಂತೋದಾತ್ತವಾದ **'ಅಕ್ಷ'** ಎಂಬುದಕ್ಕೆ ಅವ್ಯವಹಿತ ಪರದಲ್ಲಿರುವುದಿಲ್ಲವಾದ್ದರಿಂದ ಪುನಃ ನುಡ್ಗ್ರಹಣವು ಸಾರ್ಥಕವಾಗುವುದು, ಆದ್ದರಿಂದ ಪ್ರಕೃತದಲ್ಲಿ **'ಸ್ವರವಿಧೌ'** ಎಂಬುದು ಹ್ರಸ್ವನುಡ್ಭ್ಯಾಂ, ಎಂಬುದನ್ನು ಮಾಡುವಾಗ ಬರದೇ ಹೋದರೆ ತ್ ಎಂಬುದರಿಂದ ವ್ಯವಧಾನ ಬರುವುದರಿಂದ ಮತುಪ್ಪು ಹ್ರಸ್ವಾಂತಾಂತೋದಾತ್ತವಾದ **'ಮರು'** ವಿನ ಅವ್ಯವಹಿತ ಮುಂದೆ ಇರುವುದಿಲ್ಲ. ಆದ್ದರಿಂದ ಮತುಪ್ಪು ಉದಾತ್ತವಾಗುವುದಿಲ್ಲ. **'ಮರುತ್'** ಎಂಬುದು **'ಮೃಗ್ರೋರುತಿಃ'** (ಉ. ಸ. ೧-೯೪) ಎಂದು ಉತಿಪ್ರತ್ಯಯಾಂತವಾದ್ದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತ, ಇದೇ ನಿಲ್ಲುವುದು., ಇಲ್ಲಿ ಮತ್ತೆ ಕೆಲವರು ಬೇರೆ ವಿಧವಾಗಿಯೂ ಮತುಪ್‌ಗೆ ಉದಾತ್ತವನ್ನು ವ್ಯಾವೃತ್ತಿ ಮಾಡುವರು. ಹೇಗೆಂದರೆ, **'ಸ್ವರವಿಧೌ'** ಎಂಬ ಪರಿಭಾಷೆಯು **'ನೋತ್ತರಪದೇऽನುದಾತ್ತಾದಾವಪೃಥಿವೀರುದ್ರಪೂಷಮಂಥಿಷು'** (ಪಾ. ಸೂ. ೬-೨ ೧೪೨) ಎಂಬಲ್ಲಿ ಅಪೃಥಿವೀ ಇತ್ಯಾದಿ ಪೃಥಿವ್ಯಾದಿ ನಿಷೇಧದಿಂದ ಜ್ಞಾಪಿತವಾಗಿದೆ. **'ದ್ಯಾವಾಪೃಥಿವೀ'** ಇತ್ಯಾದಿ ಸ್ಥಳದಲ್ಲಿ ಪೃಥಿವೀ ಎಂಬುದು ಅನುದಾತ್ತಾದಿಯಾಗದೇ ಇರುವುದರಿಂದ, ಅನುದಾತ್ತಾದೌ ಉತ್ತರಪದೇಪರತ ಉಭಯಪದ ಪ್ರಕೃತಿ ಸ್ವರಃ ನ ಭವತಿ ಎಂದು ಅರ್ಥಕೊಡುವ **'ನೋತ್ತರಪದೇ ಅನುದಾತ್ತಾದೌ'** ಎಂಬುದು ಪ್ರವರ್ತಿಸುವುದೇ ಇಲ್ಲ. ಹೀಗಿದ್ದ ಮೇಲೆ ಪೃಥಿವ್ಯಾದಿಪರ್ಯುದಾಸವು ವ್ಯರ್ಥವಾಗಿ **'ವ್ಯರ್ಥಂ ಸತ್ ಕಿಂಚಿದರ್ಥಂಜ್ಞಾಪಯತಿ'** ಎಂಬ ನ್ಯಾಯಾನುಸಾರ **'ಸ್ವರವಿಧೌ'** ಎಂಬುದನ್ನು ಜ್ಞಾಪಿಸುವುದು. ಜ್ಞಾಪಿಸಿದನಂತರ ಸ್ವರವನ್ನು ಮಾಡುವಾಗ ಪಕಾರಾದಿ ವ್ಯಂಜನಗಳಿಗೆ ಅವಿದ್ಯಮಾನವದ್ಭಾವ ಬರುವುದರಿಂದ ಅನುದಾತ್ತಾದಿಯಾಗುವುದು. ಪೃಥಿವೀ, ಎಂಬುದು, ಏವಂಚ **'ನೋತ್ತರಪದೇऽನುದಾತ್ತಾದೌ'** ಎಂಬ ಪ್ರತಿಷೇಧವು **'ದ್ಯಾವಾಪೃಥಿವೀ'** ಎಂಬಲ್ಲಿ ಪ್ರಾಪ್ತವಾದರೆ ತದ್ವ್ಯಾವೃತ್ತಿಗಾಗಿ ಅಪೃಥಿವೀತ್ಯಾದಿ ಪರ್ಯುದಾಸವು ಸಾರ್ಥಕವಾಗುವುದು. ಈ ಜ್ಞಾಪಕಬಲದಿಂದ ಸ್ವರೋದ್ದೇಶ್ಯಕ ವಿಧಿಯಲ್ಲಿಯೇ ಈ ಪರಿಭಾಷೆಯು ಪ್ರವರ್ತಿಸುವುದು ಎಂದರೆ, ಉದ್ದೇಶ್ಯಕೋಟಿಪ್ರವಿಷ್ಟವಾದ ಅನುದಾತ್ತಕ್ಕೆ ಆದ್ಯವಯವತ್ವ ವ್ಯವಹಾರ ವಿರೋಧಿಯಾದ ವ್ಯಂಜನ, ಉದ್ದೇಶ್ಯಕೋಟಿ ಪ್ರವಿಷ್ಟವಾದ ಉದಾತ್ತಕ್ಕೆ ಚರಮಾವಯವತ್ವ ವ್ಯವಹಾರ ವಿರೋಧಿಯಾದ ವ್ಯಂಜನ, ಇವೆರಡಕ್ಕೆ ಸ್ವರವನ್ನು ಮಾಡುವಾಗ **'ಸ್ವರವಿಧೌ'** ಪರಿಭಾಷೆಯು ಪ್ರವರ್ತಿಸುವುದು. ಉದ್ದೇಶ್ಯಕೋಟಿ ಪ್ರವಿಷ್ಟೋದಾತ್ತಾದಿ ಸಂಬಂಧಿ ಚರಮಾವಯವತ್ವಾದಿ ವ್ಯವಹಾರ ವಿರೋಧಿ ವ್ಯಂಜನಂ ಸ್ವರವಿಧೌ ಅವಿದ್ಯಮಾನವತ್ ಭವತಿ, ಎಂದು ಪರಿಭಾಷಾ ನಿರ್ಗಲಿತಾರ್ಥ. ಪ್ರಕೃತ ಮರುತ್ ನ ತಕಾರವು ಇಂತಹದಾಗುವುದಿಲ್ಲ. ಏಕೆಂದರೆ, ಮರುತ್, ಎಂಬುದು ಹ್ರಸ್ವಾಂತ ಎಂಬ ವ್ಯವಹಾರಕ್ಕೂ ಅಂತೋದಾತ್ತ ಎಂಬ ವ್ಯವಹಾರಕ್ಕೂ

ವಿರೋಧಿಯಾಗಿದೆ '**ತ್**' ಎಂಬುದು, ಉದಾತ್ತವಿಧಿಯಲ್ಲಿ ಹ್ರಸ್ವಾಂತಾಂತೋದಾತ್ತಾವ್ಯವಹಿತ ಪರ ಮತುಪ್, ಉದ್ದೇಶ್ಯ, ಈ ಉದ್ದೇಶ್ಯಕೋಟಿಯಲ್ಲಿ ಪ್ರವಿಷ್ಟವಾದ ಉದಾತ್ತಚರಮಾವಯುವ ವ್ಯವಹಾರ ವಿರೋಧಿಯಾದ ತ್ ಗೆ ಅವಿದ್ಯಮಾನವದ್ಭಾವ ಬಂದು ಮರುತ್ ಎಂಬುದು ಅಂತೋದಾತ್ತವಾದರೂ, ಹ್ರಸ್ವಾಂತ ವ್ಯಾವಹಾರವಿರೋಧಿಯಾದ ತ್‌ಗೆ ಅವಿದ್ಯಮಾನವದ್ಭಾವ ಬರುವುದಿಲ್ಲವಾದ್ದರಿಂದ ಮರುತ್ ಎಂಬುದು ಹ್ರಸ್ವಾಂತವಾಗುವುದಿಲ್ಲ ಆದ್ದರಿಂದ, **ಹ್ರಸ್ವನುಡ್ಭ್ಯಾಂ ಮತುಪ್** ಎಂಬುದರಿಂದ ಮತುಪ್‌ಗೆ ಉದಾತ್ತವು '**ಮರುತ್ವಸ್ತಂ**' ಎಂಬಲ್ಲಿ ಬರುವುದಿಲ್ಲ, ಅಕ್ಷಣ್ವಂತಂ ಎಂಬಲ್ಲಿ ನ್‌ವು, ಮತುಪ್‌ಗೆ ಆದ್ಯವಯುವವಾದ್ದರಿಂದ ಅದು '**ಹ್ರಸ್ವಾಂತಾಂತೋದಾತ್ತಾ ವ್ಯವಹಿತ ಪರದಲ್ಲಿರುವ ಮತುಪ್**' ರೂಪವಾದ '**ಹ್ರಸ್ವನುಡ್ಭ್ಯಾಂ ಮತುಪ್**' ಎಂಬುದರ ಉದ್ದೇಶ್ಯಕೋಟಿ ಪ್ರವಿಷ್ಟವಾದ ಉದಾತ್ತಸಂಬಂಧಿಯಾದ ಯಾವ ಚರಮಾವಯುವತ್ವ ವ್ಯವಹಾರವಿದೆಯೋ ಅದಕ್ಕೆ ಪ್ರತಿಬಂಧಕವಾಗಿಲ್ಲ. ಆದ್ದರಿಂದ '**ಸ್ವರವಿಧೌ**' ಎಂಬುದು ಪ್ರವರ್ತಿಸುವುದಿಲ್ಲ. ಆದ್ದರಿಂದ ನುಡ್ಗ್ರಹಣವು ಸಾರ್ಥಕವೇ ಆಗುತ್ತೆ, ಈ ಪಕ್ಷದಲ್ಲಿ ನುಡ್ಗ್ರಹಣ ಸಾಮರ್ಥ್ಯದಿಂದ '**ಹ್ರಸ್ವನುಡ್ಭ್ಯಾಂ**' ಸೂತ್ರವಿಷಯದಲ್ಲಿ '**ಸ್ವರವಿಧೌ**' ಎಂಬ ಪರಿಭಾಷೆಗೆ ಅಪ್ರವರ್ತಿಯನ್ನು ಕಲ್ಪಿಸಬೇಕಾದ ಗೌರವವು ಇರುವುದಿಲ್ಲ. ಆದ್ದರಿಂದಲೇ ಪರಿಭಾಷೇಂದುಶೇಖರದಲ್ಲಿ (ಸ್ವರೋದ್ದೇಶ್ಯಕ ವಿಧಿಯಲ್ಲಿ ಇದು ಪ್ರವರ್ತಿಸುವದರಿಂದಲೇ) '**ಉದಶ್ವಿತ್ವಾನಿತ್ಯತ್ರ ಹ್ರಸ್ವನುಡ್ಭ್ಯಾಮಿತಿ ಮತುಬುದಾತ್ತತ್ವಂ ಚ ನೇತ್ಯಾಕರಃ**' (ಪರಿ. ಶೇ. ೭೯) ಎಂದು ಹೇಳಿರುವರು.

**ಸಜೂಃ**—ಸಮಾನಃ ಜುಷ್ (ಸಮಾನಾ ಪ್ರೀತಿಃ) ಒಂದೇ ವಿಧವಾದ ಪ್ರಿತಿಯು ಯಾರಿಗೆ ಇದೆಯೋ ಅವರು. '**ಜುಷೀ ಪ್ರೀತಿಸೇವನಯೋಃ**' ಧಾತು ಇದರ ಮುಂದೆ '**ಸಂಪದಾದಿಭ್ಯಃ ಕ್ವಿಪ್**' (ಪಾ. ಸೂ. ೩-೩-೧೦೮ ವಾರ್ತಿ ೯) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಬರುತ್ತದೆ, '**ಸಮಾನಸ್ಯ ಛಂದಸ್ಯಮೂರ್ಧ ಪ್ರಭೃತ್ಯುದರ್ಕೇಷು**' (ಪಾ. ಸೂ. ೬-೩-೮೪) ಮೂರ್ಧನ್, ಪ್ರಭೃತಿ, ಉದರ್ಕ ಈ ಮೂರು ಶಬ್ದಗಳನ್ನುಳಿವ ಉತ್ತರಪದದ ಹಿಂದೆ ಇರುವ ಸಮಾನ ಶಬ್ದಕ್ಕೆ '**ಸ**' ಆದೇಶವು ಛಂದಸ್ಸಿನಲ್ಲಿ ಬರುವುದು ಎಂಬುದರಿಂದ ಸಮಾನ ಶಬ್ದಕ್ಕೆ ಸ ಆದೇಶ ಸಜುಷ್ ಎಂದಾಗುತ್ತೆ. '**ಸ ಸಜುಷೋರುಃ**' (ಪಾ. ಸೂ. ೮-೨-೬೬) ಪದದ ಕೊನೆಯ ಸಕಾರಕ್ಕೂ, ಪದದಕೊನೆಯ ಸಜುಷ್ ಶಬ್ದಕ್ಕೂ ರು ಆದೇಶ ಬರುವುದು. ಎಂದರ್ಥ, ಅಥವಾ ಸಾಂತವಾದ ಪದದ ಸಜುಷ್ ಶಬ್ದಾಂತವಾದ ಪದದ ಕೊನೆಯ ವರ್ಣಕ್ಕೆ ರು ಆದೇಶ ಬರುವುದು ಎಂದರ್ಥ, ಇಲ್ಲಿ ಸಜುಷ್ ಎಂಬುದರ ಮುಂದೆ ಪ್ರ, ಏ, ಸುಪ್ರತ್ಯಯ, ಅದಕ್ಕೆ '**ಹಲ್ಙ್ಯಾಭ್ಯಃ**' ಎಂಬುದರಿಂದ ಲೋಪ. ಈಗ ಸಜುಷ್ ಎಂಬುದು '**ಸುಪ್ತಿಙಂತಂಪದಂ**' (ಪಾ. ಸೂ. ೧-೪-೧೪) ಎಂಬುದರ ಪ್ರಕಾರ ಪದವಾಗುವುದು, ವ್ಯಪದೇಶಿವದ್ಭಾವದಿಂದ ಸಜುಷ್ ಶಬ್ದಾಂತವಾದ ಪದವೂ ಅದೇ ಆಗುತ್ತೆ. ಅದರ ಕೊನೆಯ ಷ್ ಗೆ '**ರು**' ಆದೇಶ ಸಜುರ್ ಎಂದಾಯಿತು. '**ರ್ವೋರುಪಧಾಯಾ ದೀರ್ಘ ಇಕಃ**' (ಪಾ. ಸೂ. ೮-೨-೭೬) ರೇಫ ಅಥವಾ ವಕಾರ ವನ್ನು ಕೊನೆಯಲ್ಲಿ ಹೊಂದಿರುವ ಧಾತುವಿನ ಉಪಾಂತ್ಯ ವರ್ಣಕ್ಕೆ ದೀರ್ಘವು ಪದಾಂತ ವಿಷಯದಲ್ಲಿ ಬರುವುದು, ಎಂಬುದರಿಂದ ಉಕಾರಕ್ಕೆ ದೀರ್ಘ ಸಜೂರ್, **ಖರವಸಾನಯೋರ್ವಿಸರ್ಜನೀಯಃ**' (ಪಾ. ಸೂ ೮-೩-೧೫) ಎಂಬುದರಿಂದ ರ್‌ಗೆ ವಿಸರ್ಗ ಸಜೂಃ ಎಂದಾಗುತ್ತದೆ, ಗಣೇನ ಸಜೂಃ ಗಣದಿಂದ ಸಮಾನ ಪ್ರೀತಿಯುಳ್ಳವನಾಗಿ, ಎಂದರ್ಥ, ಸಜೂಃ ಎಂಬುದು ಬಹುವ್ರೀಹಿ, ಆದ್ದರಿಂದ '**ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್**' (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾಗುತ್ತೆ. ಆದರೆ ಅದನ್ನು ಬಾಧಿಸಿ '**ಅಂತೋದಾತ್ತಪ್ರಕರಣೇ ತ್ರಿಚಕ್ರಾ-**

**ದೀನಾಂ ಛಂದಸ್ಯುಪಸಂಖ್ಯಾನಮ್** ' (ಪಾ. ಸೂ. ೬-೨-೧೯೯-೧) ಎಂಬುದರಿಂದ ಉತ್ತರಪದಕ್ಕೆ ಅಂದೋದಾತ್ತ ಸ್ವರ ಬರುವುದು.

**ತೃಮ್ಪತು—ತೃಪ ತೃಂಭ ತೃಪ್ತೌ**' ಧಾತು, **ಲೋಟ್**, ತಿಪ್, ' **ಏರುಃ** ' (ಪಾ. ಸೂ. ೩-೪-೮೬) ಎಂಬುದರಿಂದ ' ತಿ ' ಗೆ ತು ಆದೇಶ ತೃಪ್+ತು ' **ತುದಾದಿಭ್ಯಃಶಃ** ' (ಪಾ. ಸೂ. ೩-೧-೭೭) ಎಂಬುದರಿಂದ ಶ ವಿಕರಣ ತೃಪ್+ಅ+ತು, ' **ಶೇ ತೃಮ್ಫಾದೀನಾಮ್** ' (ಪಾ. ಸೂ. ೭-೧-೫೯-೧) ತೃಮ್ಪ ಮೊದಲಾದ ಧಾತುಗಳಿಗೆ ಶ ಪ್ರತ್ಯಯ ಪರದಲ್ಲಿರುವಾಗ ನುಮ್ ಆಗಮ ಬರುವುದು ಎಂಬುದರಿಂದ ನುಮ್ ಆಗಮ. ಇಲ್ಲಿ ನುಮಾಗಮ ವಿಶಿಷ್ಟವಾಗಿಯೇ ಧಾತುಪಾಠದಲ್ಲಿ ' **ತೃಮ್ಪ-ತೃಮ್ಫ** ' ಎಂದು ಪಾಠಮಾಡಿದರೆ ನಕಾರಕ್ಕೆ ' **ಅನಿದಿತಾಂಹಲ ಉಪಧಾಯಾಃಕ್ಙಿತಿ** ' (ಪಾ.ಸೂ. ೬-೪-೨೪) ಎಂಬುದರಿಂದ **ಲೋಪ** ಬರಬೇಕಾಗುತ್ತೆ. ಆದ್ದರಿಂದ ವಾರ್ತಿಕಾರಂಭ ' ಮುಚಾದಿಗಣದಲ್ಲಿ ಈ ಧಾತುಗಳನ್ನು ಪಾಠ ಮಾಡಿದರೆ ವಾರ್ತಿಕವು ಬೇಕಾಗುವುದಿಲ್ಲ ' ತೃನ್ಪ್+ಅತು, ' **ನಶ್ಚಾಪದಾಂತಸ್ಯಝಲಿ** ' (ಪಾ. ಸೂ. ೮-೩-೭) ಎಂಬುದರಿಂದ ನಕಾರಕ್ಕೆ ಅನುಸ್ವಾರ, ' **ಅನುಸ್ವಾರಸ್ಯ ಯಯಿ ಪರಸವರ್ಣಃ** ' (ಪಾ. ಸೂ. ೮-೪-೫೮) ಎಂಬುದರಿಂದ ಪರಸವರ್ಣ ಮಕಾರ, ತೃಮ್ಪತು ಎಂದಾಗುವುದು. ' **ತೃಪ ತೃಮ್ಪ ತೃಪ್ತೌ**' ಎಂದು ವೇದಭಾಷ್ಯದಲ್ಲಿರುವುದು. ಹೀಗೇ ಧಾತುಪಾಠದಲ್ಲಿ ಪಾಠವು ಉಪಲಬ್ಧವಾಗುವುದಿಲ್ಲ ಆದ್ದರಿಂದ, ' **ತೃಪ ತೃಮ್ಫ**' ಎಂಬುದು ಗೃಹೀತವಾಗಿದೆ ॥ ೭ ॥

॥ ಸಂಹಿತಾಪಾಠಃ ॥

ಇಂದ್ರಜ್ಯೇಷ್ಠಾ ಮರುದ್ಗಣಾ ದೇವಾಸಃ ಪೂಷರಾತಯಃ ।
ವಿಶ್ವೇ ಮಮ ಶ್ರುತಾ ಹವಂ ॥ ೮ ॥

॥ ಪದಪಾಠಃ ॥

**ಇಂದ್ರಽಜ್ಯೇಷ್ಠಾಃ । ಮರುತ್ಽಗಣಾಃ । ದೇವಾಸಃ । ಪೂಷಽರಾತಯಃ ॥**
**ವಿಶ್ವೇ । ಮಮ । ಶ್ರುತ । ಹವಂ ॥ ೮ ॥**

॥ ಸಾಯಣಭಾಷ್ಯಂ ॥

**ಹೇ ದೇವಾಸ ಇಂದ್ರಮರುದ್ರೂಪಾ ವಿಶ್ವೇ ಸರ್ವೇ ಯೂಯಂ ಮಮ ಹವಮಾಹ್ವಾನಂ ಶ್ರುತ । ಶೃಣುತ । ಕೀದೃಶಾಃ । ಇಂದ್ರಜ್ಯೇಷ್ಠಾಃ । ಇಂದ್ರೋ ಜ್ಯೇಷ್ಠೋ ಮುಖ್ಯೋ ಯೇಷು ತೇ । ತಥಾವಿಧಾ**

**ಮರುದ್ಗಣಾಃ ಮರುತ್ಸಮೂಹರೂಪಾಃ । ಪೂಷರಾತಯಃ । ಪೂಷಾಖ್ಯೋ ದೇವೋ ರಾತಿರ್ದಾತಾ ಯೇಷಾಮಿಂದ್ರಮರುತಾಂ ತೇ ಪೂಷರಾತಯಃ ॥ ಇಂದ್ರಜ್ಯೇಷ್ಠಾಃ । ಆಮಂತ್ರಿತಾದ್ಯುದಾತ್ತತ್ವಂ । ಪಾದಾದಿತ್ವಾದನಿಘಾತಃ । ಮರುದ್ಗಣಾಃ । ವಿಭಾಷಿತಂ ವಿಶೇಷವಚನೇ ಬಹುವಚನಂ । ಪಾ. ೮-೧-೭೪। ಇತಿ ಪೂರ್ವಸ್ಯಾವಿದ್ಯಮಾನವತ್ತ್ವಾದನಿಘಾತಃ । ದೇವಾಸಃ ಪೂಷರಾತಯಃ । ಪೂರ್ವವತ್ । ಶ್ರುತ । ಶ್ರು ಶ್ರವಣೇ । ಲೋಣ್ಮಧ್ಯಮಬಹುವಚನಂ ಥ । ತಸ್ಥಸ್ಥಮಿಪಾಂ । ಪಾ. ೩-೪-೧೦೧ । ಇತಿ ತಾದೇಶಃ । ವ್ಯತ್ಯಯೇನ ಶಪ್ । ಬಹುಲಂ ಛಂದಸೀತಿ ಶಪೋ ಲುಕ್ । ಸಾರ್ವಧಾತುಕಾರ್ಧಧಾತುಕಯೋರಿತಿ ಗುಣೇ ಪ್ರಾಪ್ತೇ ಕ್ಙಿತಿ ಚೇತಿ ಪ್ರತಿಷೇಧಃ । ದ್ವ್ಯಚೋಽತಸ್ತಿಙ ಇತಿ ದೀರ್ಘಃ । ಹವಂ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಭಾವೇಽನುಪಸರ್ಗಸ್ಯ । ಪಾ. ೩-೩-೭೫ । ಇತ್ಯಪ್ । ಸಂಪ್ರಸಾರಣಂ ಪರಪೂರ್ವತ್ವಂ ಗುಣಾವಾದೇಶೌ । ಪಿತ್ತ್ವಾದನುದಾತ್ತತ್ವಂ । ಧಾತುಸ್ವರಃ ಶಿಷ್ಯತೇ ॥**

॥ ಪ್ರತಿಪದಾರ್ಥ ॥

**ಇಂದ್ರಜ್ಯೇಷ್ಠಾಃ**—ಇಂದ್ರನೇ ಮುಖ್ಯರಾದ । **ಮರುದ್ಗಣಾಃ**- ಮರುದ್ದೇವತೆಗಳ ಸಮೂಹದಿಂದ ಕೂಡಿರುವ । **ಪೂಷರಾತಯಃ**—ಧನಪ್ರದಾತನಾದ ಪೂಷನೆಂಬ ದೇವತೆಯೊಡನಿರುವ । **ವಿಶ್ವೇ ದೇವಾಸಃ**—ಎಲ್ಲೈ ಸಮಸ್ತ ದೇವತೆಗಳೇ ( ನೀವು ) । **ಮಮ**—ನನ್ನ । **ಹವಂ**—ಆಹ್ವಾನವನ್ನು । **ಶ್ರುತ**—ಕೇಳಿರಿ.

॥ ಭಾವಾರ್ಥ ॥

ಎಲ್ಲೈ ಸಮಸ್ತದೇವತೆಗಳೇ, ನೀವು ದೇವತೆಗಳಲ್ಲಿ ಮುಖ್ಯನಾದ ಇಂದ್ರನಿಂದ ಸಹಿತರಾಗಿರುವವರು, ಮರುದ್ದೇವತೆಗಳಿಂದಲೂ ಧನವನ್ನುಕೊಡುವ ಪೂಷನೆಂಬ ದೇವತೆಯಿಂದಲೂ ಕೂಡಿರುವವರು ಇಂತಹ ನೀವು ನಾನು ಮಾಡುವ ಆಹ್ವಾನವನ್ನು ಕೇಳಿರಿ.

## English Translation.

O Gods with the divine hosts of Maruts with Indra at your head among whom Pusha is most liberal, hear all of you this my call.

॥ ವಿಶೇಷವಿಷಯಗಳು ॥

**ಇಂದ್ರಜ್ಯೇಷ್ಠಾಃ—ಜ್ಯೇಷ್ಠಶಬ್ದಃ ಪ್ರಧಾನವಚನಃ । ಇಂದ್ರಃ ಪ್ರಧಾನಭೂತೋ ಯೇಷಾಂ ತ ಇಂದ್ರಜ್ಯೇಷ್ಠಾಃ ॥** ಜ್ಯೇಷ್ಠ ಎಂದರೆ ಪ್ರಧಾನ, ಮುಖ್ಯ ಎಂದರ್ಥವು. ಆದುದರಿಂದ ಇಂದ್ರಜ್ಯೇಷ್ಠಾ:—ಇಂದ್ರನನ್ನೇ ಮುಖ್ಯವಾಗಿವುಳ್ಳ, ಇಂದ್ರನೇ ಪ್ರಧಾನನ್ನಾಗಿವುಳ್ಳ ಎಂದರ್ಥವು Indra at their heads. ಎಂದರೆ ದೇವತೆಗಳಿಗೆ ಇಂದ್ರನೇ ನಾಯಕನು, leader. ಅವನನ್ನೇ ಮುಂದೆ ಮಾಡಿಕೊಂಡು ಹೊರಟಿರುವ ದೇವತೆಗಳು ಎಂದರ್ಥವು.

**ಪೂಷರಾತಯಃ—ಪೂಷಾಖ್ಯೋ ದೇವೋ ರಾತಿರ್ದಾತಾ ಯೇಷಾಂ ತೇ ಪೂಷರಾತಯಃ** ॥ ರಾತಿ ಎಂದರೆ ದಾತಾ, ಧನಪ್ರದನು, ಇಂತಹ ಪೂಷನೆಂಬ ದೆ ವತೆಯಿಂದ ಕೂಡಿರುವ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಇನ್ದ್ರಜ್ಯೇಷ್ಠಾಃ**—ಇದು ಆಮನ್ತ್ರಿತ, ಆದರೆ ಇದು ಪಾದದ ಆದಿಯಲ್ಲಿರುವುದರಿಂದ '**ಅನುದಾತ್ತಂ ಸರ್ವಮಪಾದಾದೌ**' (ಪಾ. ಸೂ. ೮-೧-೧೮) ಎಂದು ನಿಷೇಧವಿರುವುದರಿಂದ ಆಷ್ಟಮಿಕವಾದ '**ಆಮನ್ತ್ರಿತಸ್ಯ ಚ**' (ಪಾ.ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಆರನೇ ಅಧ್ಯಾಯ ಪಠಿತವಾದ '**ಆಮನ್ತ್ರಿತಸ್ಯಚ**' (ಪಾ. ಸೂ.೬-೧-೧೯೮) ಎಂಬುದರಿಂದ ಆದ್ಯುದಾತ್ತವೇ ಬರುವುದು.

**ಮರುದ್ಗಣಾಃ**—ಇದು ಬಹುವಚನಾಂತವಾದ ಆಮನ್ತ್ರಿತವು. ಇಲ್ಲಿ '**ವಿಭಾಷಿತಂ ವಿಶೇಷವಚನೇ**' (ಪಾ. ಸೂ. ೮-೧-೭೪) ವಿಶೇಷಣವಾಗಿರುವ ಬಹುವಚನಾಂತವಾದ ಆಮನ್ತ್ರಿತವು ಪರದಲ್ಲಿದ್ದರೆ ಪೂರ್ವದ ವಿಶೇಷ್ಯ ವಾಚಕ ಬಹುವಚನಾಂತವಾದ ಆಮನ್ತ್ರಿತವು ವಿಕಲ್ಪದಿಂದ ಅವಿದ್ಯವತ್ತಾಗಿ ಆಗುವುದು. (ಇಲ್ಲಿ ಸೂತ್ರದಲ್ಲಿ ಬಹು ವಚನ ಎಂಬುದು ಇಲ್ಲ. ಆದರೂ ಮಹಾಭಾಷ್ಯಕಾರರು ಶೇಷಪೂರಣ ಮಾಡಿರುವುದರಿಂದ ಉಕ್ತಾರ್ಥವು ಯುಕ್ತ ವೆಂದು ತಿಳಿಯಬೇಕು). ಈ ಸೂತ್ರದಿಂದ, '**ಮರುದ್ಗಣಾಃ**' ಆ ಎಂಬ ಆಮನ್ತ್ರಿತದ ಹಿಂದಿನ ಪದವಾದ '**ಇನ್ದ್ರಜ್ಯೇಷ್ಠಾಃ**' ಎಂಬುದಕ್ಕೆ ಅವಿದ್ಯಮಾನದ್ಭಾವ ಬರುವುದು ಆದ್ದರಿಂದ '**ಮರುದ್ಗಣಾಃ**' ಎಂಬುದು ಪದಾತ್ಪರ ವಾಗುವುದಿಲ್ಲ. ಏವಂಚ ಆಷ್ಟಮಿಕವಾದ ಸರ್ವಾನುದಾತ್ತ ಬರುವುದಿಲ್ಲ.

**ದೇವಾಸಃ, ಪೂಷರಾತಯಃ**—ಈ ಎರಡೂ ಬಹುವಚನಾಂತಗಳಾದ ಆಮನ್ತ್ರಿತಗಳು. ಇಲ್ಲಿ '**ದೇವಾಃ**' ಎಂಬುದು ಎರಡನೇ ಪಾದದ ಆದಿಯಲ್ಲಿರುವುದರಿಂದ '**ಅನುದಾತ್ತಂ ಸರ್ವಮಪಾದಾದೌ**' (ಪಾ. ಸೂ. ೮-೧-೧೮) ಎಂದು ಪ್ರತಿಷೇಧ ಬರುವುದರಿಂದಲೂ '**ಪೂಷರಾತಯಃ**' ಎಂಬುದಕ್ಕಿಂತಲೂ ಪೂರ್ವಪದಗಳಿಗೆ ಹಿಂದೆ ಹೇಳಿದಂತೆ ಅವಿದ್ಯಮಾನವದ್ಭಾವ ಬರುವುದರಿಂದಲೂ ಆಷ್ಟಮಿಕಾನುದಾತ್ತ ಬರುವುದಿಲ್ಲ. ಆರನೇ ಅಧ್ಯಾಯದಲ್ಲಿರುವ '**ಆಮನ್ತ್ರಿತಸ್ಯಚ**' ಎಂಬುದರಿಂದ ಆದ್ಯುದಾತ್ತವೇ ಬರುವುದು.

**ಶ್ರುತ**—'**ಶ್ರು ಶ್ರವಣೇ**' ಧಾತು. ಲೋಟ್-ಮಧ್ಯಮಪುರುಷ ಬಹುವಚನ '**ಥ**' ಪ್ರತ್ಯಯ. ಶ್ರು+ಥ '**ಲೋಟೋ ಲಙ್ವತ್**' (ಪಾ. ಸೂ.೩-೪-೮೫) ಎಂಬುದರಿಂದ ಲಙ್ವದ್ಭಾವಾತಿದೇಶ. '**ತಸ್ಥಸ್ಥಮಿಪಾಂತಾಂತಂತಾಮಃ**' (ಪಾ. ಸೂ. ೩-೪-೧೦೧) ಙಕಾರೇತ್ಸಂಜ್ಞಕವಾದ ಲಕಾರಸ್ಥಾನದಲ್ಲಿ ಬಂದ, ತಸ್-ಥಸ್-ಥ-ಮಿಪ್, ಈ ನಾಲ್ಕು ಪ್ರತ್ಯಯಗಳ ಸ್ಥಾನದಲ್ಲಿ ಕ್ರಮವಾಗಿ ತಾಮ್-ತಮ್-ತ-ಅಮ್. ಈ ನಾಲ್ಕು ಆದೇಶಗಳು ಬರುವುವು ಎಂಬುದರಿಂದ ಥಗೆ '**ತ**' ಆದೇಶ ಶ್ರು+ತ-'**ಶ್ರುವಃ ಶೃಚ**' (ಪಾ. ಸೂ. ೩-೧-೭೪) ಶಪ್ ವಿಕರಕ್ಕೆ ಬದಲಾಗಿ ಶ್ರುಧಾತುವಿನ ಮುಂದೆ ಶ್ನುವಿಕರಣವೂ, ಧಾತುವಿಗೆ '**ಶೃ**' ಆದೇಶವೂ ಬರುವುದು ಎಂಬುದರಿಂದ ಶ್ನು, ವಿಕ ರಣವು ಪ್ರಾಪ್ತವಾದರೂ ಅದನ್ನು ಬಾಧಿಸಿ ವ್ಯತ್ಯಯದಿಂದ ಶಪ್ ಬರುತ್ತೆ ಆದಕ್ಕೆ '**ಬಹುಲಂ ಛಂದಸಿ**' ಎಂಬುದರಿಂದ ಲುಕ್ '**ಸಾರ್ವಧಾತುಕಾರ್ಧಧಾತುಕಯೋಃ**' (ಪಾ. ಸೂ. ೭-೩-೮೪) ಸಾರ್ವ ಧಾತುಕ, ಅರ್ಧಧಾತುಕ, ಪ್ರತ್ಯಯಪರದಲ್ಲಿರುವಾಗ ಇಗಂತವಾದ ಅಂಗಕ್ಕೆ ಗುಣಬರುವುದು ಎಂಬುದರಿಂದ ಶ್ರು ನ

ಉಕಾರಕ್ಕೆ ಗುಣವು ಪ್ರಾಪ್ತವಾಗುವುದು ಅದಕ್ಕೆ '**ಕ್ಙಿತಿಚ**' (ಪಾ. ಸೂ. ೧-೧-೫) ಗಿತ್, ಕಿತ್, ಙಿತ್ ಪ್ರತ್ಯಯಗಳನ್ನು ನಿಮಿತ್ತಮಾಡಿಕೊಂಡು ಗುಣವೃದ್ಧಿಗಳು ಬರುವುದಿಲ್ಲ, ಎಂಬುದರಿಂದ ಪ್ರತಿಷೇಧಬರುವುದು. ಇಲ್ಲಿ '**ತ**' ಎಂಬುದು ಸ್ವಾಭಾವಿಕವಾಗಿ ಗಿತ್, ಕಿತ್, ಅಥವಾ ಙಿತ್ ಆಗುವುದಿಲ್ಲ. ಆದರೂ '**ಸಾರ್ವಧಾತುಕಮಪಿತ್**' (ಪಾ. ಸೂ. ೧-೨-೪) ಪಿತ್ತಲ್ಲದ ಸಾರ್ವಧಾತುಕ ಪ್ರತ್ಯಯುವು ಙಿತ್ತಿನಂತೆ ಆಗುವುದು. ಎಂಬುದರಿಂದ ಙಿದ್ವದ್ಭಾವ ಬರುವುದು ಆದ್ದರಿಂಡ ಅದು ಙಿತ್ ಆಗುವುದು, ಶ್ರುತ-ಈಗ ಸಂಹಿತಾಕಾಲದಲ್ಲಿ '**ದ್ವ್ಯಚೋಽತಸ್ತಿಙಃ**' (ಪಾ. ಸೂ. ೬-೩-೧೩೫) ಮಂತ್ರದಲ್ಲಿರುವ ಎರಡು ಸ್ವರಗಳುಳ್ಳ ಅಕಾರಾಂತವಾದ ತಿಙಂತಕ್ಕೆ ಸಂಹಿತಾಕಾಲದಲ್ಲಿ ದೀರ್ಘಬರುವುದು ಎಂಬುದರಿಂದ ದೀರ್ಘ.

**ಹವಮ್**'—'**ಹ್ವೇಞ್ ಸ್ಪರ್ಧಾಯಾಂ ಶಬ್ದೇಚ**' ಧಾತು. '**ಭಾವೇಽನುಪಸರ್ಗಸ್ಯ**' (ಪಾ. ಸೂ. ೩-೩-೭೫) '**ಋದೋರಪ್**' (ಪಾ. ಸೂ. ೩-೩-೫೭) ಎಂಬುದರಿಂದ ಅಪ್, ಎಂಬುದೂ '**ಹ್ವಃ ಸಂಪ್ರಸಾರಣಂ ಚ**-' (ಪಾ. ಸೂ. ೩-೩-೭೨) ಎಂಬುದರಿಂದ '**ಹ್ವ ಸಂಪ್ರಸಾರಣಂ**' ಎಂಬುದೂ ಅನುವೃತ್ತವಾಗುತ್ತೆ. ಏವಂಚ ಉಪಸರ್ಗರಹಿತವಾದ ಹ್ವೇಞ್ ಧಾತುವಿನ ಮುಂದೆ ಭಾವಾರ್ಥದಲ್ಲಿ ಅಪ್ ಪ್ರತ್ಯಯುವೂ, ಹ್ವೇಞ್‌ಗೆ ಸಂಪ್ರಸಾರಣವೂ ಸಹ ಬರುತ್ತೆ ಎಂಬುದರಿಂದ ಅಪ್, ಸಂಪ್ರಸಾರಣಗಳು ಬಂದರೆ '**ಸಂಪ್ರಸಾರಣಾಚ್ಚ**' (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ ಬಂದು ಹು+ಅ ಎಂದಿರುತ್ತೆ ಈಗ '**ಸಾರ್ವಧಾತುಕಾರ್ಧಧಾತುಕಯೋಃ**' ಎಂಬುದರಿಂದ ಗುಣ, ಹೋ+ಅ-'**ಏಚೋಽಯವಾಯಾವಃ**' (ಪಾ. ಸೂ. ೬-೧-೭೮) ಎಂಬುದರಿಂದ '**ಅವ್**' ಆದೇಶ ಹವ ಎಂದಾಯಿತು. ಅಪ್ ಪ್ರತ್ಯಯ ಪಿತ್, ಆದ್ದರಿಂದ '**ಅನುದಾತ್ತೌ ಸುಪ್ಪಿತೌ**' (ಪಾ. ಸೂ. ೩-೧-೪) ಸುಪ್ ಪಿತ್, ಎರಡೂ ಅನುದಾತ್ತಗಳಾಗುವುವು ಎಂಬುದರಿಂದ ಅನುದಾತ್ತಾನಂತರ ಧಾತುಸ್ವರವೇ ಉಳಿಯುವುದು. ಆದ್ದರಿಂದ '**ಹ**' ನ ಅಕಾರ ಉದಾತ್ತವಾಗುತ್ತೆ ದ್ವಿತೀಯಾ ಏಕವಚನ ಅಮ್ ಪ್ರತ್ಯಯವನ್ನು ಹಚ್ಚಿದರೆ '**ಅಮಿ ಪೂರ್ವಃ**' ಎಂಬುದರಿಂದ ಪೂರ್ವರೂಪ ಬಂದು ಹವಮ್-ಎಂದಾಗುತ್ತೆ. ॥ ೮ ॥

॥ ಸಂಹಿತಾಪಾಠಃ ॥

ಹತ ವೃತ್ರಂ ಸುದಾನವ ಇಂದ್ರೇಣ ಸಹಸಾ ಯುಜಾ ।
ಮಾ ನೋ ದುಃಶಂಸ ಈಶತ ॥ ೯ ॥

॥ ಪದಪಾಠಃ ॥

**ಹತ । ವೃತ್ರಂ । ಸುಽದಾನವಃ । ಇಂದ್ರೇಣ । ಸಹಸಾ । ಯುಜಾ ॥**

**ಮಾ । ನಃ । ದುಃಽಶಂಸಃ । ಈಶತ ॥ ೯ ॥**

॥ ಸಾಯಣಭಾಷ್ಯಂ ॥

**ಹೇ ಸುದಾನವಃ ಶೋಭನದಾನಯುಕ್ತಾಃ ಮರುದ್ಗಣಾಃ ಸಹಸಾ ಬಲವತಾ ಯುಜಾ ಯೋಗ್ಯೇನೇಂದ್ರೇಣ ಸಹ ವೃತ್ರಂ ಶತ್ರುಂ ಹತ । ನಾಶಯತ । ದುಃಶಂಸೋ ದುಷ್ಟೇನ ಶಂಸನೇನ ಕೀರ್ತನೇನ ಯುಕ್ತೋ ವೃತ್ರೋ ನೋಽಸ್ಮಾನ್ಪ್ರತಿ ಮೇಶತ । ಸಮರ್ಥೋ ಮಾ ಭೂತ್ ॥ ಹತ । ಹನ ಹಿಂಸಾಗತ್ಯೋಃ । ಲೋಟಸ್ಥ । ತಸ್ಯ ತ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಸುದಾನವಃ । ಡುದಾಞ್ ದಾನೇ । ದಾಭಾಭ್ಯಾಂ ನುಃ । ಉ. ३. ३२ । ಇತ್ಯೌಣಾದಿಕೋ ನುಪ್ರತ್ಯಯಃ । ಪ್ರಾದಿಸಮಾಸ ಆಮಂತ್ರಿತನಿಘಾತಃ । ಯುಜಾ । ಯುಜಿರ್ ಯೋಗೇ । ಋತ್ವಿಗಿತ್ಯಾದಿನಾ ಕ್ವಿನ್ । ಸಾವೇಕಾಚ ಇತಿ ತೃತೀಯೈಕವಚನಸ್ಯೋದಾತ್ತತ್ವಂ । ದುಃಶಂಸಃ । ಈ ಷದ್ದುಃಸುಷ್ವಿತಿ ಖಲ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಈಶತ । ಈಶ ಐಶ್ವರ್ಯೇ । ಮಾಙಿ ಲುಙಿ ಪ್ರಾಪ್ತೇ ಛಂದಸಿ ಲುಙ್‌ಲಙ್‌ಲಿಟ ಇತಿ ವ್ಯತ್ಯಯೇನ ಲಙ್ । ತಸ್ಯ ಬಹುಲಂ ಛಂದಸೀತಿ ಶಪೋ ಲುಗಭಾವಃ । ನ ಮಾಙ್ಯೋಗ ಇತ್ಯಾಡಾಗಮಾಭಾವಃ । ತಿಙ್ಙತಿಙ ಇತಿ ನಿಘಾತಃ ॥**

॥ ಪ್ರತಿಪದಾರ್ಥ ॥

**(ಹೇ) ಸುದಾನವಃ**— ಉತ್ತಮವಾದ ಧನಾದಿಗಳನ್ನು ಕೊಡುವ ಮರುದ್ದೇವತೆಗಳೇ (ನೀವು) । **ಸಹಸಾ**—ಬಲವುಳ್ಳ । **ಯುಜಾ**—ಯೋಗ್ಯನಾದ (ಎಂದರೆ ನಿಮ್ಮ ಜತೆಗಾರನಾದ) । **ಇಂದ್ರೇಣ**—ಇಂದ್ರನಿಂದ ಕೂಡಿ । **ವೃತ್ರಂ**—ವೃತ್ರಾಸುರನನ್ನು (ಅಥವಾ ಶತ್ರುವನ್ನು) । **ಹತ**—ನಾಶಮಾಡಿರಿ । **ದುಃಶಂಸಃ**—ದುಷ್ಟನೆಂದು ಪ್ರಸಿದ್ಧನಾದ ಆ ವೃತ್ರನು । **ನಃ**—ನಮ್ಮನ್ನು । **ಮಾ ಈಶತ**—ಬಾಧೆಪಡಿಸದಿರಲಿ.

॥ ಭಾವಾರ್ಥ ॥

ಧನಾದಿಗಳನ್ನು ಕೊಡುವ ಎಲೈ ಮರುದ್ಗಣಗಳೇ ನೀವು ಸಾಹಸವಂತನೂ ನಿಮ್ಮ ಜತೆಗಾರನೂ ಆದ ಇಂದ್ರನೊಡಗೂಡಿ ವೃತ್ರಾಸುರನನ್ನು ಸಂಹಾರಮಾಡಿರಿ. ದುಷ್ಟನೆಂದು ಪ್ರಸಿದ್ಧನಾದ ಆ ವೃತ್ರನು ನಮಗೆ ತೊಂದರೆಯನ್ನುಂಟುಮಾಡದಿರಲಿ.

## English Translation.

O liberal gods, aided by your powerful friend, Indra, destroy Vritra, let not the wicked one prevail against us.

॥ ವಿಶೇಷವಿಷಯಗಳು ॥

**ಸುದಾನವಃ—ಡುದಾಞ್ ದಾನೇ । ಶೋಭನದಾನಯುಕ್ತಾಃ ॥** ಎಂದರೆ ಉತ್ತಮವಾದ ವಸ್ತುಗಳನ್ನು ಕೊಡುವ (ದೇವತೆಗಳು) liberal doners ಎಂದರ್ಥವು.

**ಸಹಸಾ—ಸಹಃ** ಎಂದರೆ ಬಲವು, ಶಕ್ತಿಯು. ಈ ಶಬ್ದವು ತೃತೀಯೈಕವಚನವು.

**ಯುಜಾ—ಯುಜಿರ್ ಯೋಗೇ ।** ಜೊತೆಯಲ್ಲಿರುವ, ಯೋಗ್ಯನಾದ.

**ದುಃಶಂಸಃ—ದುಷ್ಟೇನ ಶಂಸನೇನ ಯುಕ್ತಃ ।** ಕೆಟ್ಟ ಮಾತುಗಳಿಂದ ನಿಂದಿಸಲ್ಪಡುವವನು, ಕೆಟ್ಟವ ನೆಂದು ಪ್ರಸಿದ್ಧನಾದವನು. ದುಷ್ಟಸ್ವಭಾವದವನು.

**ಈಶತ—ಈಶ ಐಶ್ವರ್ಯೇ ।** ಮಾ ಈಶತ ಎಂದರೆ ನಮ್ಮ ಮೇಲೆ ಅಧಿಕಾರಮಾಡದಿರಲಿ, ನಮಗೆ ತೊಂದರೆಯನ್ನು ಕೊಡದಿರಲಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಹತ—'ಹನ ಹಿಂಸಾಗತ್ಯೋಃ'** ಧಾತು. ಲೋಟ್ ಮಧ್ಯಮಪುರುಷ ಬಹುವಚನ **'ಥ'** ಪ್ರತ್ಯಯಃ. ಹನ್+ಥ **'ಲೋಟೋಲಙ್ವತ್'** (ಪಾ. ಸೂ. ೩-೪-೮೫) ಎಂದು ಲಙ್ವದ್ಭಾವ, **'ಸ್ಥಸ್ಥಮಿಪಾಂತಾಂತಂತಾಮಃ'** (ಪಾ. ಸೂ. ೩-೪-೧೦೧) ಎಂಬುದರಿಂದ **'ತ'** ಆದೇಶ; ಹನ್+ತ, **'ಕರ್ತರಿ ಶಪ್'** (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣ ಆದಕ್ಕೆ **'ಅದಿಪ್ರಭೃತಿಭ್ಯಃ ಶಪಃ'** (ಪಾ. ಸೂ. ೨-೪-೭೨) ಎಂಬುದ ರಿಂದ ಲುಕ್ ಈಗ **'ಅನುದಾತ್ತೋಪದೇಶ ವನತಿ ತನೋತ್ಯಾದೀನಾಮನುನಾಸಿಕಲೋಪೋಝಲಿ ಕ್ಙಿತಿ'** (ಪಾ. ಸೂ. ೬-೪-೩೭) ಝಲಾದಿಯಾದ ಕಿತ್-ವಾ ಙಿತ್ ಪ್ರತ್ಯಯ ಪರದಲ್ಲಿರುವಾಗ ಅನುನಾಸಿಕವನ್ನು ಕೊನೆ ಯಲ್ಲಿ ಹೊಂದಿರುವ, ಅನುದಾತ್ತೋಪದೇಶಧಾತುಗಳು, ಅನುನಾಸಿಕವನ್ನು ಕೊನೆಯಲ್ಲಿ ಹೊಂದಿರುವ ತನೋತ್ಯಾದಿ ಧಾತುಗಳು, ವನ್ ಧಾತು, ಇವುಗಳ ಕೊನೆಯ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ ನ್ ಗೆ ಲೋಪ, **'ಮನ್ಯಹನ್ನಾಪ್ ಕ್ಷಿಪ್ ಛುಪಿ ತಪ್ ತಿಪಸ್ತಿಪ್ಯತಿ ದೃಪ್ಯತೀ'** ಎಂದು ಅನುದಾತ್ತೋಪದೇಶಗಳನ್ನು ಪರಿಗಣನೆ ಮಾಡಿರುವ ಕಾರಿಕೆಯಲ್ಲಿ ಹನ್ ಸೇರಿದೆ. ಆದ್ದರಿಂದ ಇದು ಅನುದಾತ್ತೋಪದೇಶ

**ಸುದಾನವಃ—'ಡುದಾಞ್ ದಾನೇ'** ಧಾತು **'ದಾಭಾಭ್ಯಾಂ ನುಃ'** (ಉ. ಸೂ. ೩-೩೧೨) ಡು ದಾಞ್ ದಾನೇ, ಭಾ ದೀಪ್ತೌ ಈ ಧಾತುಗಳ ಮುಂದೆ ನು ಪ್ರತ್ಯಯ ಬರುವುದು ಎಂಬುದರಿಂದ ದಾ ಧಾತುವಿನ ಮುಂದೆ ನು ಪ್ರತ್ಯಯ ಬಂದರೆ ದಾನು ಎಂದಾಗುತ್ತೆ. ಸು ಎಂಬುದರೊಂದಿಗೆ **'ಕುಗತಿಪ್ರಾದಯಃ'** (ಪಾ. ಸೂ. ೨-೨-೧೮) ಎಂಬುದರಿಂದ ಪ್ರಾದಿಸಮಾಸ ಪದಾತ್ಪರವಾಗಿರುವುದರಿಂದಲೂ, ಪಾದಾದಿಯಲ್ಲಿಲ್ಲದೇ ಇರುವುದರಿಂ ದಲೂ, **'ಆಮನ್ತ್ರಿತಸ್ಯ ಚ'** (ಪಾ. ಸೂ. ೮-೧-೧೯) ಎಂಬ ಆಷ್ಟಮಿಕ ಸೂತ್ರದಿಂದ ಸರ್ವಾನುದಾತ್ತ ಬರುವುದು.

**ಯುಜಾ— 'ಯುಜಿರ್ ಯೋಗೇ'** ಧಾತು. **'ಋತ್ವಿಗ್ದಧೃಕ್ಸ್ರಗ್ದಿಗುಷ್ಣಿಗಞ್ಚುಯುಜಿಕ್ರುಞ್ಚಾಂಚ'** (೩-೨-೫೯) ಋತು ಎಂಬುದು ಉಪಪದವಾಗಿರುವಾಗ ಯಜ್ ಧಾತುವಿನ ಮುಂದೆಯೂ ಧೃಷ್, ಸೃಜ್, ದಿಶ್, ಉತ್, ಉಪಸರ್ಗಪೂರ್ವಕವಾದ ಷ್ಣಿಹ್, ಅಞ್ಚ್, ಯುಜ್, ಕುಞ್ಚ್, ಈ ಧಾತುಗಳ ಮುಂದೆ ಕ್ವಿನ್ ಪ್ರತ್ಯಯ ಬರುತ್ತೆ. ಕೆಲವು ವಿಶೇಷ ಕಾರ್ಯಗಳೂ ನಿಪಾತಿತವಾಗುವುವು. ಧೃಷ್ ಧಾತುವಿನ ಮುಂದೆ ಕ್ವಿನ್ ಬಂದಾಗ ದ್ವಿತ್ವವೂ ಅಂತೋದಾತ್ತವೂ ನಿಪಾತಿತವಾಗುತ್ತೆ, ದಧೃಕ್ ಎಂದಾಗುತ್ತೆ. ಸೃಜ್ ನ ಮುಂದೆ ಕರ್ಮಣಿ ಕ್ವಿನ್ ಬಂದಾಗ ಅಮಾಗಮ ನಿಪಾತಿತವಾಗುತ್ತೆ, ಸ್ರಕ್ ಎಂದಾಗುತ್ತೆ. ಉತ್ ಪೂರ್ವಕ ಸ್ನಿಹ್‌ನ ಮುಂದೆ ಕ್ವಿ- ಉಪಸರ್ಗದ ಕೊನೆಯ ವರ್ಣಕ್ಕೆ ಲೋಪ, ಸಕಾರಕ್ಕೆ ಷಕಾರವೂ ನಿಪಾತಿತವಾಗುತ್ತೆ ಎಂದು ತಿಳಿಯಬೇಕು. ಯುಜ್

ಧಾತುವಿನ ಮುಂದೆ ಪೂರ್ವೋಕ್ತ ಸೂತ್ರದಿಂದ ಕ್ವಿನ್ ಬರುತ್ತೆ. ಕ್ವಿನ್ನಿನ ವರ್ಣಗಳೆಲ್ಲವೂ ಕ್ರಮಶಃ ಲುಪ್ತಗಳಾಗುವುವು. ಇದರ ಮುಂದೆ ತೃತೀಯಾ ಏಕವಚನ ಟಾ ಪ್ರತ್ಯಯ ಯುಜ್+ಆ, ' **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** ' (ಪಾ. ಸೂ. ೬-೧-೧೬೮) ಸು, ಎಂಬ ಸಪ್ತಮೀ ಬಹುವಚನ ಪರದಲ್ಲಿರುವಾಗ ಒಂದೇ ಸ್ವರವನ್ನು ಹೊಂದಿರುವ ಶಬ್ದದ ಮುಂದೆ ಇರುವಾಗ ತೃತೀಯಾದಿ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ಆ ವಿಭಕ್ತಿಯು ಉದಾತ್ತವಾಗುವುದು.

**ದುಃಶಂಸಃ**—' **ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್** ' (ಪಾ. ಸೂ. ೩-೩-೧೨೬) ಕೃಚ್ಛ್ರಾರ್ಥಕವಾದ ದುಸ್ ಎಂಬುದೂ ಅಕೃಚ್ಛ್ರಾರ್ಥಕವಾದ ಈಷತ್, ಸು ಗಳೂ ಉಪಪದವಾಗಿರುವಾಗ ಧಾತುಗಳ ಮುಂದೆ ಭಾವ, ಕರ್ಮ ಎಂಬ ಅರ್ಥಗಳಲ್ಲಿ ಖಲ್ ಪ್ರತ್ಯಯ ಬರುವುದು ಎಂಬುದರಿಂದ ದುಸ್ ಉಪಸರ್ಗಪೂರ್ವಕವಾದ ಶಂಸು ಸ್ತುತೌ, ಧಾತುವಿನ ಮುಂದೆ ಖಲ್ ಬರುತ್ತೆ. ದುಸ್+ಶಂಸ್+ಅ, ದುಶ್ಶಂಸ ಎಂದಾಗುತ್ತೆ. ' **ಲಿತಿ** ' (ಪಾ. ಸೂ. ೬-೧-೯೩) ಎಂಬುದರಿಂದ ಪ್ರತ್ಯಯಕ್ಕಿಂತಲೂ ಪೂರ್ವದ ಸ್ವರವು ಉದಾತ್ತವಾಗುತ್ತೆ.

**ಈಶತ**—ಈಶ ಐಶ್ವರ್ಯೇ, ' **ಮಾನೋದುಶ್ಶಂಸ ಈಶತ** ' ಎಂದು ಮಾಜ್ ಯೋಗವಿದೆ ಆದ್ದರಿಂದ ' **ಮಾಜಿ ಲುಙ್** ' (ಪಾ. ಸೂ. ೩-೩-೧೭೫) ಮಾಜ್ ಪ್ರಯೋಗವಿದ್ದರೆ ಧಾತುವಿನ ಮುಂದೆ ಲುಙ್ ಬರುವುದು, ಎಂಬುದರಿಂದ ಲುಙ್ ಪ್ರಾಪ್ತವಾಗುವುದು. ಆದರೂ ' **ಛಂದಸಿ ಲುಙ್‌ಲಙ್‌ಲಿಟಃ** ' (ಪಾ. ಸೂ. ೩-೪-೬) ಎರಡು ಧಾತ್ವರ್ಥಗಳ ಸಂಬಂಧವು ತೋರುವಾಗ ಸರ್ವಕಾಲದಲ್ಲಿಯೂ ಲುಙ್, ಲಙ್, ಲಿಟ್ ಪ್ರತ್ಯಯಗಳು ಬರುವುವು ಎಂಬುದರಿಂದ ವ್ಯತ್ಯಯದಿಂದ ಲಙ್ ಬರುತ್ತೆ. ಆತ್ಮನೇಪದ ಪ್ರಥಮಪುರುಷ ಏಕವಚನ ಈಶ್+ತ ಶಪ್ ' **ಅದಿಪ್ರಭೃತಿಭ್ಯಶ್ಶಪಃ** ' (ಪಾ ಸೂ. ೨-೪-೭೨) ಎಂಬುದರಿಂದ ಲುಕ್ ಪ್ರಾಪ್ತವಾದರೂ ' **ಬಹುಲಂ ಛಂದಸಿ** ' ಎಂಬುದರಿಂದ ಶಪ್‌ಗೆ ಲುಕ್ ಬರುವುದಿಲ್ಲ, ' **ಲುಙ್‌ಲಙ್‌ಲೃಙ್ಕ್ಷ್ವಡುದಾತ್ತಃ** ' (ಪಾ. ಸೂ. ೬-೪-೭೧) ಎಂಬುದರಿಂದ ಅಡಾಗಮವು ಪ್ರಾಪ್ತವಾದರೆ ' **ನಮಾಙ್ಯೋಗೇ** ' (ಪಾ. ಸೂ. ೬-೪-೭೪) ಮಾಜ್ ಯೋಗವಿದ್ದರೆ ಅಟ್. ಆಟ್ ಈ ಆಗಮಗಳು ಬರುವುದಿಲ್ಲ ಎಂಬುದರಿಂದ ಪ್ರತಿಷೇಧ ಬರುತ್ತೆ. ಈಶತ ಎಂದಾಗುತ್ತೆ. ' **ತಿಙ್ಙತಿಙಃ** ' (ಪಾ. ಸೂ. ೮-೧-೨೮) ತಿಙಂತವಲ್ಲದ ಶಬ್ದದ ಮುಂದೆ ಇರುವ ತಿಙಂತವು ಅನುದಾತ್ತವಾಗುವುದು ಎಂಬುದರಿಂದ ಸರ್ವಾನುದಾತ್ತ ಬರುತ್ತೆ ॥ ೯ ॥

॥ ಸಂಹಿತಾಪಾಠಃ ॥

ವಿಶ್ವಾನ್ದೇವಾನ್ಹವಾಮಹೇ ಮರುತಃ ಸೋಮಪೀತಯೇ ।

ಉಗ್ರಾ ಹಿ ಪೃಶ್ನಿಮಾತರಃ ॥ ೧೦ ॥

॥ ಪದಪಾಠಃ ॥

ವಿಶ್ವಾನ್ । ದೇವಾನ್ । ಹವಾಮಹೇ । ಮರುತಃ । ಸೋಮಽಪೀತಯೇ ॥
ಉಗ್ರಾಃ । ಹಿ । ಪೃಶ್ನಿಽಮಾತರಃ ॥ ೧೦ ॥

॥ ಸಾಯಣಭಾಷ್ಯಂ ॥

ಮರುತೋ ಮರುತ್ಸಂಜ್ಞಕಾನ್ವಿಶ್ವಾನ್ಸರ್ವಾನ್ದೇವಾನ್ಸೋಮಪೀತಯೇ ಹವಾಮಹೇ । ಸೋಮಪಾನಾರ್ಥಮಾಹ್ವಯಾಮಃ । ತೇ ಚ ಮರುತ ಉಗ್ರಾಃ ಶತ್ರುಭಿರಸಹ್ಯಬಲಾಃ ಪೃಶ್ನಿಮಾತರಃ ಪೃಶ್ನೇರ್ನಾನಾವರ್ಣಯುಕ್ತಾಯಾ ಭೂಮೇಃ ಪುತ್ರಾಃ । ಹಿಶಬ್ದಃ ಪ್ರಸಿದ್ಧ್ಯರ್ಥಃ । ಸಾ ಚ ಪ್ರಸಿದ್ಧಿಃ ಪೃಶ್ನೇಃ ಪುತ್ರಾಃ । ಋಗ್ವೇ. ೫-೫೮-೫ । ಇತಿ ಮಂತ್ರಾಂತರಾದವಗಂತವ್ಯಾ ॥ ಪೃಶ್ನಿಮಾತರಃ । ಪೃಶ್ನಿರ್ಮಾತಾ ಯೇಷಾಂ ತೇ । ಪೃಶ್ನಿಶಬ್ದೋ ಘೃಣಿಃ ಪೃಶ್ನಿರಿತ್ಯುಣಾದಾವಾದ್ಯುದಾತ್ತೋ ನಿಪಾತಿತಃ । ಉ. ೪-೫೨. । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥ ೯ ॥

॥ ಪ್ರತಿಪದಾರ್ಥ ॥

**ಮರುತಃ**—ಮರುದ್ದೇವತೆಗಳನ್ನೂ (ಮತ್ತು) । **ವಿಶ್ವಾನ್ ದೇವಾನ್**—ಸಮಸ್ತ ದೇವತೆಗಳನ್ನೂ । **ಸೋಮಪೀತಯೇ**—ಸೋಮಪಾನಾರ್ಥವಾಗಿ । **ಹವಾಮಹೇ**—ಆಹ್ವಾನಮಾಡುವೆವು । (ಆ ಮರುದ್ದೇವತೆಗಳು) **ಉಗ್ರಾಃ**—ಶತ್ರುಗಳಿಂದ ನಿಗ್ರಹಿಸಲ್ಪಡಲಸಾಧ್ಯರಾದವರು । **ಪೃಶ್ನಿಮಾತರಃ**—ನಾನಾವಿಧವರ್ಣಯುಕ್ತವಾದ ಭೂಮಿಯ ಪುತ್ರರಾದವರು । **ಹಿ**—ಪ್ರಸಿದ್ಧವು ॥

॥ ಭಾವಾರ್ಥ ॥

ನಾವು ಮರುದ್ದೇವತೆಗಳನ್ನೂ ಇತರ ಎಲ್ಲಾ ದೇವತೆಗಳನ್ನೂ ಸೋಮಪಾನಾರ್ಥವಾಗಿ ಆಹ್ವಾನ ಮಾಡುತ್ತೇವೆ. ಆ ಮರುದ್ದೇವತೆಗಳು ಮಹಾಪರಾಕ್ರಮಿಗಳಾದ್ದರಿಂದ ಶತ್ರುಗಳಿಂದ ಸೋಲಿಸಲ್ಪಡಲು ಸಾಧ್ಯವಿಲ್ಲ. ಅವರು ನಾನಾವಿಧವರ್ಣಯುಕ್ತವಾದ ಭೂಮಿಯ ಪುತ್ರರು. ಈ ವಿಷಯವು ಪ್ರಸಿದ್ಧವಾಗಿಯೇ ಇದೆ.

## English Translation.

We invoke all the divine gods and the Maruts who are mighty and are the Sons of many coloured earth, to drink the Soma juice.

॥ ವಿಶೇಷವಿಷಯಗಳು ॥

**ಉಗ್ರಾಃ**—ಕ್ರೂರರಾದವರು, fierce. ಎಂದರೆ ಶತ್ರುಗಳೊಡನೆ ಯುದ್ಧಮಾಡುವಾಗ ಬಹಳ ಪರಾಕ್ರಮವುಳ್ಳವರು. ಆದುದರಿಂದ ಶತ್ರುಗಳಿಂದ ಅಜೇಯರಾದವರು.

**ಪೃಶ್ನಿಮಾತರಃ—**ಈ ಶಬ್ದಕ್ಕೆ ಭಾಷ್ಯಕಾರರು ನಾನಾವಿಧವರ್ಣಯುಕ್ತವಾದ ಭೂಮಿಯ ಪುತ್ರರು ಎಂದರ್ಥ ಮಾಡಿರುವರು. ಮತ್ತು ಉದಾಹರಣೆಗಾಗಿ—

**ಪೃಶ್ನೇಃ ಪುತ್ರಾ ಉಪಮಾಸೋ ರಭಿಷ್ಠಾಃ ಸ್ವಯಾ ಮತ್ಯಾ ಮರುತಃ ಸಂ ಮಿಮಿಕ್ಷುಃ ||**

(ಋ. ಸಂ. ೫-೫೮-೫)

ಎಂಬ ಋಕ್ಕನ್ನು ಕೊಟ್ಟು ಆ ಋಕ್ಕನ್ನು ವ್ಯಾಖ್ಯಾನ ಮಾಡುವಾಗ ಪೃಶ್ನೇಃ ಪುತ್ರಾಃ ಎಂಬ ಶಬ್ದಗಳಿಗೆ **ಗೋರೂಪಾಯಾ ಅಂತರಿಕ್ಷಸ್ಯ ವಾ ಪುತ್ರಸ್ಥಾನೀಯಾಃ**—ಎಂದರೆ ಗೋರೂಪವಾದ ಭೂಮಿಯು ಅಥವಾ ಅಂತರಿಕ್ಷದ ಪುತ್ರರೆಂದು ಅರ್ಥವಿವರಣೆಮಾಡಿರುವರು. ಸ್ಕಂದಸ್ವಾಮಿಯು—**ಪೃಶ್ನಿರಿತಿ ದ್ಯುನಾಮ | ದ್ಯೌರ್ಮಾತಾ ಯೇಷಾಂ ಮರುತಾಂ ತೇ ಪೃಶ್ನಿಮಾತರಃ | ದಿವಃ ಪುತ್ರಾ ಇತ್ಯರ್ಥಃ ||** ಪೃಶ್ನಿಯೆಂದರೆ ಸ್ವರ್ಗವು, ಅಂತರಿಕ್ಷದ ಪುತ್ರರು ಎಂದು ಹೇಳಿರುವರು. ಅಂತರಿಕ್ಷದಲ್ಲಿಯೇ ಮರುತ್ತುಗಳ ಸಂಚಾರವಿರುವುದರಿಂದ ಅದರಿಂದ ಹುಟ್ಟಿದವರು ಎಂದು ಹೇಳುವುದು ಯುಕ್ತವಾಗಿದೆ. ಯಾಸ್ಕರು ಈ ಶಬ್ದಕ್ಕೆ ಈ ರೀತಿ ಅರ್ಥವಿವರಣೆ ಮಾಡಿರುವರು—

**ಸ್ವಃ | ಪೃಶ್ನಿಃ | ನಾಕಃ | ಗೌಃ | ವಿಷ್ಟಂ | ನಭ ಇತಿ ಷಟ್**
**ಸಾಧಾರಣಾನಿ || ಸಾಧಾರಣಾನ್ಯುತ್ತರಾಣಿ ದಿವಶ್ಚಾದಿತ್ಯಸ್ಯ ||**

(ನಿ. ೨-೧೩)

ಎಂದರೆ **ಸ್ವಃ ಪೃಶ್ನಿಃ ನಾಕಃ ಗೌಃ ವಿಷ್ಟಂ ನಭಃ** ಎಂಬ ಆರು ಶಬ್ದಗಳೂ ಸ್ವರ್ಗಃ (ದಿವಃ) ಮತ್ತು ಆದಿತ್ಯರನ್ನು ಸೂಚಿಸುವ ಸಾಧಾರಣ ಶಬ್ದಗಳು. ಮತ್ತು—

**ಪೃಶ್ನಿರಾದಿತ್ಯೋ ಭವತಿ | ಪ್ರಾಶ್ನುತ ಏನಂ ವರ್ಣ ಇತಿ ನೈರುಕ್ತಾಃ**
**ಸಂಸ್ಪ್ರಷ್ಟಾ ರಸಾನ್ | ಸಂಸ್ಪ್ರಷ್ಟಾ ಭಾಸಂ ಜ್ಯೋತಿಷಾಂ ||**
**ಸಂಸ್ಪೃಷ್ಟೋ ಭಾಸೇತಿ ವಾ ||**
**ಅಥ ದ್ಯೌಃ ಸಂಸ್ಪೃಷ್ಟಾ ಜ್ಯೋತಿಭಿಃ ಪುಣ್ಯಕೃದ್ಭಿಶ್ಚ ||**

(ನಿ. ೨-೧೪)

ಪೃಶ್ನಿಯೆಂದರೆ ಆದಿತ್ಯನು. ಉತ್ಕೃಷ್ಟವಾದ ಕಾಂತಿಯು ಇವನನ್ನು ಸುತ್ತಲೂ ವ್ಯಾಪಿಸಿರುವುದರಿಂದ ಪೃಶ್ನಿಯೆಂದರೆ ಆದಿತ್ಯನೆಂದು ನೈರುಕ್ತರು (ನಿರುಕ್ತಕಾರರು) ಹೇಳುವರು. **ಸಂಸ್ಪೃಷ್ಟಾ ರಸಾನ್** ಎಂದರೆ **ಸ ಹಿ ನಿತ್ಯಕಾಲಮೇವ ರಸಾನಾಂ ಸಂಸ್ಪ್ರಷ್ಟಾ ಭವತಿ | ಅಥಾಸ್ಯಕರ್ಮ ರಸಾದಾನಂ |** ರಸವೆಂದರೆ ಉದಕವನ್ನು ಮಳೆಯ ರೂಪದಲ್ಲಿ ಕೊಡುವುದಕ್ಕೆ ಕಾರಣಭೂತನಾದುದರಿಂದ ಆದಿತ್ಯನಿಗೆ ಪೃಶ್ನಿಯೆಂದು ಹೆಸರು. ಅಥವಾ **ಸಂಸ್ಪ್ರಷ್ಟಾ ಭಾಸಂ ಜ್ಯೋತಿಷಾಂ**—ಗ್ರಹನಕ್ಷತ್ರಚಂದ್ರಾದಿಗಳ ಪ್ರಕಾಶವು **ಸೂರ್ಯನ ಪ್ರಕಾಶಾಧಿಕ್ಯದಿಂದ** ಮಲಿನವಾಗುವುದು. ಅಥವಾ **ಸಂಸ್ಪೃಷ್ಟೋ ಭಾಸೇತಿ ವಾ**—ತನ್ನ ಕಾಂತಿಯಿಂದ ಎಲ್ಲೆಡೆಯಲ್ಲಿಯೂ ವ್ಯಾಪಿಸುವನು ಆದುದರಿಂದ ಪೃಶ್ನಿಯೆಂದರೆ ಆದಿತ್ಯನು.

ಇನ್ನು ಪೃಶ್ನಿಯೆಂದರೆ **ದ್ಯೌಃ** ಎಂದರ್ಥವು. ಏಕೆಂದರೆ **ಸಂಸ್ಪೃಷ್ಟಾ ಜ್ಯೋತಿರ್ಭಿಃ ಪುಣ್ಯಕೃದ್ಭಿಶ್ಚ**—ಪ್ರಕಾಶದಿಂದಲೂ, ಪುಣ್ಯವಂತರಿಂದಲೂ ಹೊಂದಲ್ಪಡುವುದರಿಂದ ಪೃಶ್ನಿಯೆಂದರೆ ದ್ಯೌಃ (ಸ್ವರ್ಗವು) ಎಂದರ್ಥವು.

ಇದು ಯಾಸ್ಕರ ವಿವರಣೆಯು, ಆದುದರಿಂದ ಪೃಶ್ನಿಯೆಂದರೆ ದ್ಯೌಃ—ಸ್ವರ್ಗ, ಅಂತರಿಕ್ಷ ಎಂಬರ್ಥವನ್ನೇ ಸ್ವೀಕರಿಸಿ ಪೃಶ್ನಿಮಾತರಃ ಎಂಬ ಶಬ್ದಕ್ಕೆ ದಿವಸ್ಪುತ್ರಾಃ—ಅಂತರಿಕ್ಷದಲ್ಲಿ ಉತ್ಪನ್ನರಾದವರು ಎಂದು ಹೇಳುವುದೇ ಯುಕ್ತವಾಗಿರುವುದು.

**ಯದ್ಯೂಯಂ ಪೃಶ್ನಿಮಾತರೋ ಮರ್ತಾಸಃ ಸ್ಯಾತನ ॥**
(ಋ. ಸಂ. ೧-೩೮-೪)

ಎಂಬ ಋಕ್ಕಿನ ಅರ್ಥವಿವರಣೆಮಾಡುವಾಗ **ಪೃಶ್ನಿಮಾತರಃ** ಎಂಬ ಶಬ್ದಕ್ಕೆ **ಪೃಶ್ನಿನಾಮಕಧೇನುಪುತ್ರಾ ಮರುತಃ** ಎಂದು ಅರ್ಥಮಾಡಿರುವರು. ಮರುದ್ದೇವತೆಗಳನ್ನು ಸ್ತೋತ್ರಮಾಡುವ ಅನೇಕ ಸಂದರ್ಭಗಳಲ್ಲಿ ಪೃಶ್ನಿಮಾತರಃ ಎಂಬ ಶಬ್ದದ ಪ್ರಯೋಗವು ವಿಶೇಷವಾಗಿ ಕಂಡುಬರುವುದು. ಆದುದರಿಂದ ಈ ಶಬ್ದಕ್ಕೆ ಒಂದು ನಿರ್ದಿಷ್ಟವಾದ ಅರ್ಥವು ರೂಢಿಯಲ್ಲಿತ್ತೆಂದು ಧಾರಾಳವಾಗಿ ಹೇಳಬಹುದು. ಋಗ್ವೇದದಲ್ಲಿ ಈ ಶಬ್ದಪ್ರಯೋಗವಿರುವ ಋಕ್ಕುಗಳನ್ನು ಕೆಳಗೆ ಕೊಟ್ಟಿರುವೆವು—

**ಯದ್ಯೂಯಂ ಪೃಶ್ನಿಮಾತರೋ ಮರ್ತಾಸಃ ಸ್ಯಾತನ ॥**
(ಋ. ಸಂ. ೧-೩೮-೪)

**ಅರ್ಚಂತೋ ಅರ್ಕಂ ಜನಯಂತ ಇಂದ್ರಿಯಮಧಿ ಶ್ರಿಯೋ ದಧಿರೇ ಪೃಶ್ನಿಮಾತರಃ ॥**
(ಋ. ಸಂ. ೧-೮೫-೨)

**ಪೃಷದಶ್ವಾ ಮರುತಃ ಪೃಶ್ನಿಮಾತರಃ ಶುಭಂಯಾವಾನೋ ವಿದಥೇಷು ಜಗ್ಮಯಃ ॥**
(ಋ. ಸಂ. ೧-೮೯-೭)

**ಸುಜಾತಾಸೋ ಜನುಷಾ ಪೃಶ್ನಿಮಾತರೋ ದಿವೋ ಮರ್ಯಾ ಆ ನೋ ಅಚ್ಛಾ ಜಿಗಾತನ ॥**
(ಋ. ಸಂ. ೫-೫೯-೬)

**ಉದೀರಯಂತ ವಾಯುಭಿರ್ವಾಶ್ರಾಸಃ ಪೃಶ್ನಿಮಾತರಃ ॥**
(ಋ. ಸಂ. ೮-೭-೩)

**ಉದು ಸ್ವಾನೇಭಿರೀರತ ಉದ್ರಥೈರುದು ವಾಯುಭಿಃ । ಉತ್ಸ್ತೋಮೈಃ ಪೃಶ್ನಿಮಾತರಃ ॥**
(ಋ. ಸಂ. ೮-೭-೧೭)

**ಅಭೀಮೃತಸ್ಯ ವಿಷ್ಟಪಂ ದುಹತೇ ಪೃಶ್ನಿಮಾತರಃ ॥**
(ಋ. ಸಂ. ೯-೩೪-೫)

**ಸ್ವಶ್ವಾಃ ಸ್ಥ ಸುರಥಾ ಪೃಶ್ನಿಮಾತರಃ ಸ್ವಾಯುಧಾ ಮರುತೋ ಯಾಥನಾ ಶುಭಂ ॥**
(ಋ. ಸಂ. ೫-೫೭-೨)

**ಕೋಪಯಥ ಪೃಥಿವೀಂ ಪೃಶ್ನಿಮಾತರಃ ಶುಭೇ ಯದುಗ್ರಾಃ ಪೃಷತೀರಯುಗ್ಧ್ವಂ ॥**
(ಋ. ಸಂ. ೫-೫೭-೩)

**ಪೃಶ್ನಿಮಾತರಃ** ಎಂಬ ಶಬ್ದಪ್ರಯೋಗವಿರುವ ಋಕ್ಕುಗಳನ್ನೆಲ್ಲಾ ಮೇಲೆ ಕೊಟ್ಟಿರುತ್ತೆ. ಈ ಋಕ್ಕುಗಳಲ್ಲಿ ಪೃಶ್ನಿಮಾತರಃ ಎಂಬ ಶಬ್ದಕ್ಕೆ ಮರುತ್ತುಗಳೆಂದೇ ಅರ್ಥವಿವರಣೆ ಇರುವುದರಿಂದ ಈ ಶಬ್ದವು ಈ ದೇವತೆಗಳ ವಿಷಯದಲ್ಲಿ ಮಾತ್ರ ಒಂದು ನಿರ್ದಿಷ್ಟವಾದ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದೆಂದು ಧಾರಾಳವಾಗಿ ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಪೃಶ್ನಿಮಾತರಃ—' ಪೃಶ್ನಿಃ ಮಾತಾ ಯೇಷಾಂ ತೇ, '** ಯಾರಿಗೆ ನಾನಾವರ್ಣವುಳ್ಳ ಭೂಮಿಯು ತಾಯಿಯೋ ಅವರು ಎಂದು ವಿಗ್ರಹ ವಾಕ್ಯದ ಅರ್ಥ, ಪೃಶ್ನಿ ಶಬ್ದಕ್ಕೆ ಅಲ್ಪಶರೀರವುಳ್ಳವನು ಎಂದು ವೈಯ್ಯಾಕರಣರು ಅರ್ಥ ಹೇಳಿರುವರು. **' ಪೃಶ್ನಿರಲ್ಪತನೌ '** (ಅಮರಕೋಶ) ಎಂಬುದರಿಂದ ಹೀಗೆಯೇ ಏರ್ಪಡುತ್ತೆ. ಆದರೆ ವೇದ ಭಾಷ್ಯಕಾರರು ಇಲ್ಲಿ ನಾನಾ ವರ್ಣಗಳುಳ್ಳ ಭೂಮಿ ಎಂದು ಅರ್ಥವನ್ನು ವರ್ಣಿಸಿರುವರು. **' ಸ್ಪೃಶ ಸಂಸ್ಪರ್ಶನೇ '** ಧಾತುವಿನಿಂದ ಈ ರೂಪವು ಸಿದ್ಧವಾಗುವುದು. **' ಘೃಣಿ ಪೃಶ್ನಿ ಪಾರ್ಷ್ಣಿ ಚೂರ್ಣಿಭೂರ್ಣಿ '** (ಉ. ಸೂ. ೪-೫೨) ಘೃ ಕ್ಷರಣದೀಪ್ತ್ಯೋಃ, ಸ್ಪೃಶ ಸಂಸ್ಪರ್ಶನೇ, ಪೃಷು ಸೇಚನೇ, ಚರ ಗತೌ, ಡುಭೃಞ್ ಧಾರಣಪೋಷಣಯೋಃ, ಇವುಗಳ ಮುಂದೆ ನಿ ಪ್ರತ್ಯಯವು ಬಂದು ಕೆಲವು ಕಾರ್ಯಗಳೂ ಆದ್ಯುದಾತ್ತ ಸ್ವರವೂ ಸಹ ನಿಪಾತಿತವಾಗುವುವು ಎಂದು ಸೂತ್ರಾರ್ಥ. ಘೃಣಿ ಎಂಬಲ್ಲಿ ಘೃ ಧಾತುವಿನ ಮುಂದೆ ನಿ ಪ್ರತ್ಯಯ ಬಂದರೆ **ಸಾರ್ವಧಾತುಕಾ**– ಎಂಬುದರಿಂದ ಪ್ರಾಪ್ತವಾಗುವ ಗುಣಕ್ಕೆ ಅಭಾವವು ನಿಪಾತಿತವಾಗಲು ನಕಾರಕ್ಕೆ **' ಋವರ್ಣಾನ್ನಸ್ಯಣತ್ವಂ ವಾಚ್ಯಂ '** ಎಂಬುದರಿಂದ ಣತ್ವ ಬಂದು ಘೃಣಿ ಎಂದಾಗುತ್ತೆ, ಸ್ಪೃಶಧಾತುವಿನ ಮುಂದೆ ನಿ ಪ್ರತ್ಯಯು ಬರಲು ಧಾತುಸಂಬಂಧಿಯಾದ ಸಕಾರಕ್ಕೆ ಲೋಪವೂ ಗುಣಕ್ಕೆ ಅಭಾವವೂ ಈ ಸೂತ್ರದಲ್ಲಿ ನಿಪಾತಿತವಾಗುತ್ತವೆ. ಏವಂಚ ಪೃಶ್ನಿ ಎಂದಾಗುತ್ತೆ. ಹೀಗೆಯೇ ಪಾರ್ಷ್ಣಿ ಎಂಬಲ್ಲಿ ವೃದ್ಧಿಯೂ ಚೂರ್ಣಿ ಎಂಬಲ್ಲಿ ಧಾತೂಪಾಂತ್ಯವರ್ಣಕ್ಕೆ ಊಕಾರಾದೇಶವೂ ಭೂರ್ಣಿ ಎಂಬಲ್ಲಿ ಧಾತು ಋಕಾರಕ್ಕೆ ಉತ್ವವೂ ನಿಪಾತಿತವಾಗಿ ಆಯಾ ರೂಪಗಳು ಸಿದ್ಧವಾಗುವುವು ಎಂದು ತಿಳಿಯಬೇಕು. ಬಹುವ್ರೀಹಿ ಸಮಾಸ ಬಂದರೆ **' ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ '** (ಪಾ.ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದು ಪೃಶ್ನಿ ಎಂಬುದು ಆದ್ಯುದಾತ್ತವಾಗಿಯೇ ನಿಲ್ಲುವುದು. ॥ ೧೦ ॥

---

॥ ಸಂಹಿತಾಪಾಠಃ ॥

## ಜಯತಾಮಿವ ತನ್ಯತುರ್ಮರುತಾಮೇತಿ ಧೃಷ್ಣುಯಾ ।
## ಯಚ್ಛುಭಂ ಯಾಥನಾ ನರಃ ॥ ೧೧ ॥

॥ ಪದಪಾಠಃ ॥

**ಜಯತಾಂಽಇವ । ತನ್ಯತುಃ । ಮರುತಾಂ । ಏತಿ । ಧೃಷ್ಣುಽಯಾ ॥**

**ಯತ್ । ಶುಭಂ । ಯಾಥನ । ನರಃ ॥ ೧೧ ॥**

॥ ಸಾಯಣಭಾಷ್ಯಂ ॥

**ಮರುತಾಂ ದೇವಾನಾಂ ತನ್ಯತುಃ ಶಬ್ದೋ ಧೃಷ್ಣುಯಾಧಾರ್ಷ್ಟ್ಯಯುಕ್ತಃ ಸನ್ನೇತಿ । ಗಚ್ಛತಿ । ಕೇಷಾಮಿವ । ಜಯತಾಂ ವಿಜಯಯುಕ್ತಾನಾಂ ಶೂರಾಣಾಂ ಭಟಾನಾಮಿವ । ಹೇ ನರೋ ನೇತಾರೋ ಮರುತೋ ಯೂಯಂ ಯದ್ಯದಾ ಶುಭಂ ಶೋಭನಂ ದೇವಯಜನಂ ಯಾಥನ ಪ್ರಾಪ್ನುಥ । ತದಾ ತ್ವದೀಯಃ ಶಬ್ದೋ ಗಚ್ಛತೀತಿ ಪೂರ್ವತ್ರಾನ್ವಯಃ ॥ ತನ್ಯತುಃ । ತನು ವಿಸ್ತಾರೇ । ಋತನ್ಯಂಜೀತ್ಯಾದಿನಾ । ಉ. ೪-೨. । ಯತುಚ್‌ಪ್ರತ್ಯಯಃ । ಧೃಷ್ಣುಯಾ । ಞಿಧೃಷಾ ಪ್ರಾಗಲ್ಭ್ಯೇ । ಅಸಿಗೃಧಿಧೃಷಿಕ್ಷಿಪೇಃ ಕ್ನುಃ । ಪಾ. ೩-೨-೧೪೦ । ಸುಪಾಂ ಸುಲುಗಿತಿ ಸೋರ್ಯಾಜಾದೇಶಃ । ಚಿತ್ತ್ವಾದಂತೋದಾತ್ತಃ । ಯಾಥನ । ತಪ್ತನಪ್ತನಥನಾಶ್ಚೇತಿ ಥನಾದೇಶಃ । ಯಚ್ಛಬ್ದಯೋಗಾನ್ನಿಘಾತಾಭಾವಃ ॥**

॥ ಪ್ರತಿಪದಾರ್ಥ ॥

**(ಹೇ) ನರಃ**—ಮನುಷ್ಯರಿಗೆ ಮುಖಂಡರಾದ ಎಲೈ ಮರುದ್ದೇವತೆಗಳೇ (ನೀವು) । **ಯತ್**—ಯಾವಾಗ **ಶುಭಂ**—ಶೋಭನಕರ್ಮವಾದ ಯಜ್ಞಾದಿಸ್ಥಳಗಳನ್ನು । **ಯಾಥನ**—ಹೊಂದುವಿರೋ (ಆಗ) । **ಮರುತಾಂ**—ಮರುದ್ದೇವತೆಗಳ । **ತನ್ಯತುಃ**—(ಹರ್ಷಯುಕ್ತವಾದ) ಶಬ್ದವು । **ಜಯತಾಮಿವ**—ವಿಜಯಶಾಲಿಗಳಾದ ಯುದ್ಧ ಭಟರ ಜಯಶಬ್ದದಂತೆ । **ಧೃಷ್ಣುಯಾ**—ಧಾರ್ಷ್ಟ್ಯಯುಕ್ತವಾಗಿ । **ಏತಿ**—ಆಗುವುದು.

॥ ಭಾವಾರ್ಥ ॥

ಎಲೈ ನಾಯಕರಾದ ಮರುದ್ದೇವತೆಗಳೇ, ನೀವು ಶೋಭನಕರ್ಮಗಳಾದ ಯಜ್ಞಾದಿಗಳಿಗೆ ಹೋಗುವಾಗ, ನೀವು ಮಾಡುವ ಹರ್ಷಧ್ವನಿಯು ಜಯಶಾಲಿಗಳಾದ ಯುದ್ಧಭಟರ ಹರ್ಷಧ್ವನಿಯಂತೆ ಬಹಳ ಗಂಭೀರವಾಗಿರುವುದು.

## English Translation.

Brave Maruts, when you go to the Sacrifice, the shouts of Maruts spreads with exultation like that of conquerors.

॥ ವಿಶೇಷವಿಷಯಗಳು ॥

**ಜಯತಾಮಿವ**—ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಬಂದಿರುವ ಯೋಧರು ಜಯಸೂಚಕವಾದ ಹರ್ಷಧ್ವನಿ ಯನ್ನು ಮಾಡುವಂತೆ.

**ತನ್ಯತುಃ**—ಇದಕ್ಕೆ ಯಾಸ್ಕರು **ತನ್ಯತುಸ್ತನಿತ್ರೀ ವಾಚೋಽನ್ಯಸ್ಯಾಃ** । ಶಬ್ದಮಾಡುವುದು, ಇನ್ನೊಬ್ಬ ದೇವತೆಯ ವಾಕ್ಯವು, ಎಂದರ್ಥವಿವರಣೆ ಮಾಡಿರುವರು. **ತನ್ಯತುಃ** ಎಂಬ ಶಬ್ದವು ಋಗ್ವೇದದಲ್ಲಿ ೧-೩೨-೧೩; ೧-೧೧೬-೧೨; ೫-೫೫-೮; ೬-೬-೨; ೭-೩-೬; ೯-೧೦೦-೩; ೧೦-೬೫-೧೩ ಎಂಬ ಋಕ್ಕುಗಳಲ್ಲಿಯೂ ಪಠಿತವಾಗಿದೆ.

**ಧೃಷ್ಣುಯಾ**—ಧಾರ್ಷ್ಟ್ಯಯುಕ್ತವಾಗಿ, ಗಂಭೀರವಾಗಿ, ಬಹಳ ಗಟ್ಟಿಯಾಗಿ.

**ಯತ್—ಯದಾ** । ಯಾವಾಗ

**ಶುಭಂ**—ಶುಭಕರ್ಮವನ್ನು ಎಂದರೆ ಯಜ್ಞಾನುಷ್ಠಾನ, ದೇವಯಜನ ಇತ್ಯಾದಿ. ಸ್ಕಂದಸ್ವಾಮಿಯು ಈ ಶಬ್ದಕ್ಕೆ ಮೇಘದಲ್ಲಿರುವ ಉದಕವೆಂದು ಅರ್ಥಮಾಡಿರುವರು. ಇದರಂತೆ ಮರುದ್ದೇವತೆಗಳು ಸಿಡಿಲು ಗುಡುಗು ಮೊದಲಾದ ಗರ್ಜನೆಗಳಿಂದ ಕೂಡಿ ಮೇಘದ ಸಮೀಪಕ್ಕೆ ಹೋಗಿ ಮಳೆ ಸುರಿಯುವಂತೆ ಮಾಡುವದು ಎಂದಭಿಪ್ರಾಯವು.

**ಯಾಥನ**—ಛಂದಸ್ಸಿನ ಅನುಕೂಲಕ್ಕಾಗಿ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ನರಃ**—ಸಂಬುದ್ಧಿಪ್ರಥಮಾಬಹುವಚನವು. **ನೇತಾರಃ**-ಎಂದರೆ ನಾಯಕರು, ಮುಖಂಡರು.

॥ ವ್ಯಾಕರಣಪ್ರಕ್ರಿಯಾ ॥

**ತ್ಯನತುಃ**— ' **ತನು ವಿಸ್ತಾರೇ** ' ಧಾತು ' **ಋತನ್ಯಞ್ಜಿವನ್ಯಞ್ಜ್ಯರ್ಪಿಮದ್ಯತ್ಯಙ್ಗಿಕುಯು-ಕೃಶಿಭ್ಯಃ, ಕತ್ನಿಜ್ಯತುಜಲಿಜಿಷ್ಣುಜಿಷ್ಠಜಿಸನ್ಸ್ಯನಿಥಿನುಲ್ಯಸಾಸಾನುಕಃ** ' (ಉ. ಸೂ. ೪-೪೪೨) ಋ ಗತೌ ತನು ವಿಸ್ತಾರೇ, ಅಞ್ಜು ವ್ಯಕ್ತ್ಯಾದೌ, ವನು ಯಾಚನೇ, ಅಞ್ಜು ವ್ಯಕ್ತ್ಯಾದೌ, ಋ ಗತೌ ಣಿಚ್ಪ್ರತ್ಯಯಾಂತ, ಮದೀ ಹರ್ಷೇ, ಅತ ಸಾತತ್ಯಗಮನೇ, ಅಗಿ ಗತೌ, ಕು ಶಬ್ದೇ, ಯು ಮಿಶ್ರಣೇ, ಕೃಶ ತನೂಕರಣೇ, ಈ ಹನ್ನೆರಡು ಧಾತುಗಳ ಮುಂದೆ ಕ್ರಮವಾಗಿ ಕತ್ನಿಚ್, ಯತುಚ್, ಅಲಿಚ್, ಇಷ್ಣುಚ್, ಇಷ್ಠಚ್, ಇಸನ್, ಸ್ಯನ್, ಇಥಿನ್, ಉಲಿ, ಅಸ ಆಸ, ಆನುಕ್, ಈ ಹನ್ನೆರಡು ಪ್ರತ್ಯಯಗಳು ಬರುವುವು ಎಂಬುದರಿಂದ ತನುಧಾತುವಿನ ಮುಂದೆ ಯತುಚ್ ಪ್ರತ್ಯಯ ಬರುತ್ತೆ.

**ಧೃಷ್ಣುಯಾ**—' **ಞಿಧೃಷಾ ಪ್ರಾಗಲ್ಭ್ಯೇ** ' ಧಾತು. ಇದರ ಮುಂದೆ ' **ತ್ರಸಿ ಗೃಧಿ ಧೃಷಿ ಕ್ಷಿಪೇಃ, ಕ್ನುಃ** ' (ಪಾ. ಸೂ. ೩-೨-೧೪೦) ತ್ರಸೀ ಉದ್ವೇಗೇ, ಗೃಧು ಅಭಿಕಾಂಕ್ಷಾಯಾಂ, ಞಿಧೃಷಾ ಪ್ರಾಗಲ್ಭ್ಯೇ, ಕ್ಷಿಪ ಪ್ರೇರಣೇ ಈ ಧಾತುಗಳ ಮುಂದೆ ತಚ್ಛೀಲ, ತದ್ಧರ್ಮ, ತತ್ಸಾಧುಕಾರಿಗಳು ಕರ್ತೃಗಳಾಗಿರುವಾಗ ಕ್ನು ಪ್ರತ್ಯಯ ಬರುತ್ತೆ ಎಂಬುದರಿಂದ ಕ್ನು ಪ್ರತ್ಯಯ. ಪ್ರತ್ಯಯದಲ್ಲಿ ' **ನು** ' ಉಳಿಯುತ್ತೆ. ಧೃಷ್+ನು, ' **ರಷಾಭ್ಯಾಂ ನೋಣಃ ಸಮಾನಪದೇ** ' (ಪಾ. ಸೂ. ೮-೪-೧) ಎಂಬುದರಿಂದ ನಕಾರಕ್ಕೆ ಣಕಾರ, ಧೃಷ್ಣು ಎಂಬುದರ ಮುಂದೆ ಪ್ರಥಮಾ ಏಕವಚನ ಸು ಪ್ರತ್ಯಯ. ಅದಕ್ಕೆ ' **ಸುಪಾಂಸುಲುಕ್ಪೂರ್ವಸವರ್ಣಾಽಽಚ್ಛೇಯಾಡಾಡ್ಯಾಯಾ ಜಾಲಃ** ' (ಪಾ. ಸೂ. ೭-೧-೩೯) ಛಂದಸ್ಸಿನಲ್ಲಿ ಸುಪ್ಪುಗಳ ಸ್ಥಾನದಲ್ಲಿ, ಸುಲುಕ್, ಪೂರ್ವಸವರ್ಣ, ಆ-ಆತ್-ಶೇ-ಯಾ-ಡಾ-ಡ್ಯಾ-ಯಾಚ್-ಅಲ್ ಎಂಬ ಆದೇಶಗಳು ಲಕ್ಷ್ಯಾನುಸಾರವಾಗಿ ಬರುವುವು, ಎಂಬುದರಿಂದ ಪ್ರಕೃತದಲ್ಲಿ ಯಾಚ್ ಆದೇಶ, ಅದು ಚಿತ್, ಆದ್ದರಿಂದ ' **ಚಿತಃ** ' (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಯಾಥನ**— ' **ಯಾ ಪ್ರಾಪಣೇ** ' ಧಾತು-ಲೋಟ್ ಮಧ್ಯಮಪುರುಷ ಬಹುವಚನ ಥ ಪ್ರತ್ಯಯ. ' **ಲೋಟೋ ಲಙ್ವತ್** ' (ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ. ' **ತಸ್ಥಸ್ಥಮಿಪಾಂತಾಂತಂತಾಮಃ** ' (ಪಾ. ಸೂ. ೩-೪-೧೦೧) ಎಂಬುದರಿಂದ ತ ಆದೇಶವು ಥ ಗೆ ಬರುತ್ತದೆ. ಶಪ್ ವಿಕರಣ, ಅದಕ್ಕೆ ' **ಅದಿಪ್ರಭೃತಿಭ್ಯಃ ಶಪಃ** ' (ಪಾ. ಸೂ. ೨-೪-೭೨) ಎಂಬುದರಿಂದ ಲುಕ್ ಯಾ+ತ, ಈಗ ' **ತಪ್ತನಪ್ತನಥನಾಶ್ಚ** '

(ಪಾ. ಸೂ. ೭-೧-೪೫) ಲೋಟ್ ನ ಸ್ಥಾನದಲ್ಲಿ ಬಂದ '**ತ**' ಎಂಬುದಕ್ಕೆ ತಪ್, ತನಪ್, ತನ, ಥನ ಎಂಬೀ ಆದೇಶಗಳಲ್ಲಿ ಲಕ್ಷ್ಯಾನುಸಾರ ಯಾವುದಾದರೂ ಒಂದು ಬರುವುದು ಎಂಬುದರಿಂದ '**ಥನ**' ಆದೇಶ '**ಯಾಥನ**' ಎಂದಾಗುತ್ತೆ. ಇಲ್ಲಿ '**ತಿಙ್ಙತಿಙಃ**' (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಪ್ರಾಪ್ತವಾದರೂ '**ಯದ್ವೃತ್ತಾನ್ನಿತ್ಯಮ್**' (ಪಾ. ಸೂ. ೬-೧-೬೬) ಯಾವ ಪದದಲ್ಲಿ ಯಚ್ಛಬ್ದವಿದೆಯೋ ಅದರ ಮುಂದಿರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ಪ್ರತಿಷೇಧ ಬರುವುದು. ಆದ್ದರಿಂದ ಸರ್ವಾನುದಾತ್ತ ಬರುವುದಿಲ್ಲ. ಸಂಹಿತಾ ಕಾಲದಲ್ಲಿ '**ಅನ್ಯೇಷಾಮಪಿ ದೃಶ್ಯತೇ**' (ಪಾ. ಸೂ. ೬-೩-೧೩೭) ಎಂಬುದರಿಂದ ಯಾಥನಾ ಎಂದಾಗುವುದು. ॥ ೧೧ ॥

---

॥ ಸಂಹಿತಾಪಾಠಃ ॥

ಹಸ್ಕಾರಾದ್ವಿದ್ಯುತಸ್ಪರ್ಯತೋ ಜಾತಾ ಅವಂತು ನಃ ।
ಮರುತೋ ಮೃಳಯಂತು ನಃ ॥ ೧೨ ॥

॥ ಪದಪಾಠಃ ॥

ಹಸ್ಕಾರಾತ್ । ವಿಽದ್ಯುತಃ । ಪರಿ । ಅತಃ । ಜಾತಾಃ । ಅವಂತು । ನಃ ।
ಮರುತಃ । ಮೃಳಯಂತು । ನಃ ॥ ೧೨ ॥

॥ ಸಾಯಣಭಾಷ್ಯಂ ॥

**ಹಸ್ಕಾರಾದ್ದೀಪ್ತಿಕರಾದ್ವಿದ್ಯುತೋ ವಿಶೇಷೇಣ ದೀಪ್ಯಮಾನಾದತೋಽಂತರಿಕ್ಷಾತ್ಪರಿ ಜಾತಾಃ ಸರ್ವತ ಉತ್ಪನ್ನಾ ಮರುತೋ ನೋಽಸ್ಮಾನವಂತು । ರಕ್ಷಂತು । ತಥಾವಿಧಾ ಮರುತೋ ನೋಽಸ್ಮಾನ್ಮೃಳಯಂತು । ಸುಖಯಂತು ॥ ಹಸ್ಕಾರಾತ್ । ಹಸೇ ಹಸನೇ । ಅತ್ರ ತು ಪ್ರಕಾಶಮಾತ್ರೇ ವರ್ತತೇ । ಅಸ್ಮಾತ್ಸಂಪದಾದಿಲಕ್ಷಣಃ ಕ್ವಿಪ್ । ಅಸ್ಮಿನ್ನುಪಪದೇ ಡುಕೃಞ್ ಕರಣ ಇತ್ಯಸ್ಮಾತ್ಕರ್ಮಣ್ಯಣ್ । ಪಾ. ೩-೨-೧. । ಇತ್ಯಣ್ ಪ್ರತ್ಯಯಃ । ತತ್ಪುರುಷೇ ತುಲ್ಯಾರ್ಥೇತ್ಯಾದಿನಾ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಗತಿಕಾರಕೇತ್ಯಾದಿನಾ ಕೃದುತ್ತರಪದಪ್ರಕೃತಿಸ್ವರತ್ವಂ । ಅತಃ ಕೃಕಮಿಾತ್ಯಾದಿನಾ । ಪಾ. ೮. ೩-೪೬. । ವಿಸರ್ಜನೀಯಸ್ಯ ಸತ್ವಂ ॥**

॥ ಪ್ರತಿಪದಾರ್ಥ ॥

**ಹಸ್ಕಾರಾತ್**—ಬೆಳಕನ್ನುಂಟುಮಾಡುವ । **ವಿದ್ಯುತಃ**—ವಿಶೇಷವಾಗಿ ಪ್ರಕಾಶಮಾನವಾದ । **ಅತಃ**—ಅದರಿಂದ ಎಂದರೆ ಅಂತರಿಕ್ಷದಿಂದ । **ಪರಿ**—ಮೇಲುಭಾಗದಲ್ಲಿ । **ಜಾತಾಃ**—ಉತ್ಪನ್ನರಾದ । **ಮರುತಃ**—ಮರುದ್ದೇವತೆಗಳು । **ನಃ**—ನಮ್ಮನ್ನು । **ಅವಂತು**—ರಕ್ಷಿಸಲಿ । (ಮತ್ತು) **ನಃ**—ನಮಗೆ । **ಮೃಳಯಂತು**—ಸುಖವನ್ನುಂಟುಮಾಡಲಿ.

॥ ಭಾವಾರ್ಥ ॥

ಅಂತರಿಕ್ಷದಲ್ಲಿ ಥಳಥಳಿಸುವಂತೆ ಅತಿಪ್ರಕಾಶಮಾನವಾದ ಮಿಂಚಿನ ಮೇಲುಭಾಗದಲ್ಲಿ ಉತ್ಪನ್ನರಾದ ಮರುದ್ದೇವತೆಗಳು ನಮ್ಮನ್ನು ಸಂರಕ್ಷಿಸಲಿ ಮತ್ತು ನಮಗೆ ಸುಖವನ್ನುಂಟುಮಾಡಲಿ.

## English Translation.

May the Maruts born from the lightning in the resplendent region protect us and make us happy.

॥ ವಿಶೇಷವಿಷಯಗಳು ॥

**ಹಸ್ಕಾರಾತ್—ಹಸೇ ಹಸನೇ ಅತ್ರ ತು ಪ್ರಕಾಶಮಾತ್ರೇ ವರ್ತತೇ ॥** ಹಸಧಾತುವಿಗೆ ನಗುವುದು ಎಂದರ್ಥವಿದ್ದರೂ ಇಲ್ಲಿ ಪ್ರಕಾಶವೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದೆಂದು ಭಾಷ್ಯಕಾರರು ಹೇಳಿರುವರು. ಹಃ+ಕಾರಾತ್ ಎಂದರೆ ಪ್ರಕಾಶವನ್ನುಂಟುಮಾಡುವ ಎಂದರ್ಥವು. ಸ್ಕಂದಸ್ವಾಮಿಯು ಹಃ ಎಂಬ ಶಬ್ದವು–ಜನರು ಕಷ್ಟದಲ್ಲಿದ್ದಾಗ ಉಪಯೋಗಿಸುವ ಆರ್ತನಾದಸೂಚಕವಾದ ಶಬ್ದವೆಂದು ಅರ್ಥಮಾಡಿ ಈ ಋಕ್ಕಿಗೆ, ಜನರ ಆರ್ತನಾದವನ್ನು ಪರಿಹರಿಸಿ ಮೇಘವು ಮಳೆಯನ್ನು ಹುಯ್ಯುವಂತೆಮಾಡಿ ನಮ್ಮನ್ನು ಸಂರಕ್ಷಿಸಿ ಸುಖವನ್ನುಂಟುಮಾಡಲಿ ಎಂದರ್ಥವಿವರಣೆಮಾಡಿರುವರು.

**ವಿದ್ಯುತಃ—ವಿಶೇಷೇಣ ದೀಪ್ಯಮಾನಾತ್**—ವಿಶೇಷವಾಗಿ ಪ್ರಕಾಶಿಸುವ ಎಂದರ್ಥವು. ಈ ಶಬ್ದಕ್ಕೆ ಮಿಂಚಿನಿಂದ ಎಂಬರ್ಥವನ್ನೂ ಹೇಳಬಹುದು.

**ಪರಿ ಅತಃ ಜಾತಾಃ**—ಪ್ರಕಾಶದಿಂದಲೂ ಮಿಂಚಿನಿಂದಲೂ ಆವೃತವಾದ ಅಂತರಿಕ್ಷದ ಮೇಲುಭಾಗದಲ್ಲಿ, ಎಂದರೆ ಭೂಮಿಯ ಮೇಲಿರುವ ಅಂತರಿಕ್ಷದಲ್ಲಿ, ಉತ್ಪನ್ನರಾದ ಮರುದ್ದೇವತೆಗಳು. ಮರುದ್ದೇವತೆಗಳ ಸಂಚಾರವು ಯಾವಾಗಲೂ ಅಂತರಿಕ್ಷದಲ್ಲಿಯೇ ಇರುವುದರಿಂದ ಅಂತರಿಕ್ಷದಲ್ಲಿ ಮರುತ್ತುಗಳು ಜನಿಸುವರೆಂದು ಹೇಳುವ ರೀತಿಯಿರಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಹಸ್ಕಾರಾತ್**—ಹಸ್–ಪ್ರಕಾಶವನ್ನು, ಕರೋತಿ–ಮಾಡುತ್ತದೆ ಎಂದು ವಿಗ್ರಹ. **'ಹಸೇ ಹಸನೇ'** ಧಾತು. ಇಲ್ಲಿ ಪ್ರಕಾಶ ಎಂಬ ಅರ್ಥದಲ್ಲಿ ಈ ಧಾತುವಿರುವುದು. ಧಾತೂನಾಮನೇಕಾರ್ಥತ್ವಾತ್, **'ಸಂಪದಾದಿಭ್ಯಃ**

**ಕ್ವಿಪ್** ' (ಪಾ. ಸೂ. ೩-೩-೧೮, ವಾ. ೯) ಸಂಪದಾದಿಗಣಪಠಿತವಾದ ಧಾತುಗಳ ಮುಂದೆ ಭಾವಾರ್ಥದಲ್ಲಿ ಕ್ವಿಪ್ ಬರುತ್ತದೆ ಎಂಬುದರಿಂದ ಹಸ್ ಧಾತುವಿನ ಮುಂದೆ ಕ್ವಿಪ್ ಬರಲು ಅದರ ಎಲ್ಲಾ ವರ್ಣಗಳಿಗೂ ಲೋಪ ಬಂದು ಹಸ್ ಎಂದೇ ಉಳಿಯುತ್ತದೆ. ಹಸ್ ಎಂಬ ದ್ವಿತೀಯಾ ಏಕವಚನಾಂತವಾದ ಕರ್ಮವಾಚಕವು ಉಪಪದವಾದಾಗ '**ಕರ್ಮಣ್ಯಣ್**" (ಪಾ. ಸೂ ೩-೨-೧) ಕರ್ಮವಾಚಕವು ಉಪಪದವಾಗಿದ್ದರೆ ಧಾತುವಿನ ಮುಂದೆ ಅಣ್ ಬರುತ್ತದೆ ಎಂಬುದರಿಂದ ಅಣ್ ಪ್ರತ್ಯಯವು '**ಡುಕೃಞ್ಕರಣೇ**' ಕೃ ಧಾತುವಿನ ಮುಂದೆ ಬರುತ್ತೆ. ಹಸ್ ಕೃ+ಅ '**ಅಚೋಞ್ಣಿತಿ**' (ಪಾ. ಸೂ. ೭-೧೧) ಎಂಬುದರಿಂದ ಋ ಗೆ ಆರ್ ಎಂಬ ವೃದ್ಧಿ ಬರುತ್ತೆ, ಹಸ್ಕಾರ ಎಂದಾಗುತ್ತೆ. ಇದು ತತ್ಪುರುಷ ಸಮಾಸ. ಆದ್ದರಿಂದ '**ತತ್ಪುರುಷೇತುಲ್ಯಾರ್ಥ ತೃತೀಯಾ ಸಪ್ತಮ್ಯುಪ-ಮಾನಾವ್ಯಯ ದ್ವಿತೀಯಾ ಕೃತ್ಯಾಃ**' (ಪಾ. ಸೂ. ೬-೨-೨) ತತ್ಪುರುಷ ಸಮಾಸದಲ್ಲಿ ಪೂರ್ವಪದಗಳಾಗಿರುವ ತುಲ್ಯಾರ್ಥಕ (ಸಮ ಎಂಬ ಅರ್ಥವನ್ನು ಹೇಳುವ) ಗಳೇ ಮೊದಲಾದ ಏಳು ಶಬ್ದಗಳು ಪ್ರಕೃತಿ ಸ್ವರವನ್ನು ಹೊಂದುವವು ಎಂಬುದರಿಂದ ದ್ವಿತೀಯಾಂತವಾದ ಹಸ್ ಗೆ ಪ್ರಕೃತಿಸ್ವರವು ಅಂದರೆ '**ಧಾತೋಃ**' (ಪಾ. ಸೂ. ೬-೧-೧೬೨) ಎಂಬುದರಿಂದ ಅದು ಉದಾತ್ತವಾದಕಾರಣ ಆದ್ ಉದಾತ್ತವು ಪ್ರಾಪ್ತವಾದರೆ ಅದನ್ನು ಬಾಧಿಸಿ '**ಗತಿಕಾರಕೋಪಪದಾತ್ಕೃತ್**' (ಪಾ. ಸೂ. ೬-೨-೧೩೯) ಗತಿಸಂಜ್ಞಕ, ಕಾರಕಸಂಜ್ಞಕ, ಉಪಪದಸಂಜ್ಞಕ ಇವುಗಳ ಮುಂದೆ ಇರುವ ಕೃದಂತ ಶಬ್ದವು ತತ್ಪುರುಷಸಮಾಸದಲ್ಲಿ ಪ್ರಕೃತಿ ಸ್ವರವನ್ನು ಹೊಂದುವುದು ಎಂಬುದರಿಂದ, ಉತ್ತರಪದ ಪ್ರಕೃತಿಸ್ವರ ಬರುವುದು, ಕಾರ ಎಂಬ ಉತ್ತರಪದವು ಪ್ರತ್ಯಯ ಸ್ವರದಿಂದ ಅಂತೋದಾತ್ತ. ಆದ್ದರಿಂದ ಸಮಾಸಾನಂತರವೂ ಪ್ರಕೃತಿಸ್ವರ ಬಂದು ಅದೇ ನಿಲ್ಲುತ್ತೆ. '**ತತ್ರೋಪಪದಂ ಸಪ್ತಮೀಸ್ಥಮ್**' (ಪಾ. ಸೂ. ೩-೧-೯೨) ಸನ್ನಿಹಿತ ವಾದ '**ಧಾತೋಃ**' (ಪಾ. ಸೂ. ೩-೧-೯೧) ಎಂಬ ಅಧಿಕಾರದಲ್ಲಿರುವ ಸೂತ್ರದಲ್ಲಿರುವ '**ಕರ್ಮಣಿ**' ಇತ್ಯಾದಿ ಸಪ್ತಮ್ಯಂತಪದಬೋಧ್ಯವಾದ ಅರ್ಥವನ್ನು ಬೋಧಿಸುವ, '**ಹಸ್**' ಮೊದಲಾದುವು ಉಪಪದ ಸಂಜ್ಞೆಯನ್ನು ಹೊಂದುವವು ಎಂಬುದರಿಂದ ಹಸ್ ಗೆ ಉಪಪದ ಸಂಜ್ಞೆ ಇದೆ. ಹಸ್+ಕಾರ ಎಂಬಲ್ಲಿನ ಸಕಾರಕ್ಕೆ '**ಸ ಸ ಜುಷೋ ರುಃ**" (ಪಾ. ಸೂ. ೮-೨-೬೬) ಪದದ ಕೊನೆಯಲ್ಲಿರುವ ಸಕಾರಕ್ಕೂ ಸಜುಷ್ ಶಬ್ದಕ್ಕೂ '**ರು**' ಆದೇಶ ಬರುವುದು ಎಂಬುದರಿಂದ ರು ಆದೇಶ, '**ಖರವಸಾನಯೋರ್ವಿಸರ್ಜನೀಯಃ**' (ಪಾ. ಸೂ ೮-೩-೧೫) ಪದಾಂತವಿಷಯ ವಲ್ಲಿ ಖರ್ ವರ್ಣದ ಹಿಂದಿನ ರೇಫಕ್ಕೂ ಅವಸಾನ (ಕೊನೆಯದಾ) ದ ರೇಫಕ್ಕೂ ವಿಸರ್ಗ ಬರುವುದು ಎಂಬುದರಿಂದ ವಿಸರ್ಗ. ಹಃ+ಕಾರ, '**ಅತಃ ಕೃಕಮಿಕಂಸಕುಂಭಪಾತ್ರಕುಶಾಕರ್ಣೀಷ್ವನವ್ಯಯಸ್ಯ**' (ಪಾ. ಸೂ. ೮-೩-೪೬) ಕೃ ಮೊದಲಾದ ಏಳು ಶಬ್ದಗಳು ಪರದಲ್ಲಿದ್ದರೆ ಅಕಾರದ ಮುಂದೆ ಇರತಕ್ಕುದೂ, ಅವ್ಯಯಸಂಬಂಧಿಯಲ್ಲದುದೂ ಆದ ವಿಸರ್ಗಕ್ಕೆ ಸಮಾಸದಲ್ಲಿ ನಿತ್ಯವಾಗಿ ಸಕಾರಾದೇಶ ಬರುವುದು. ಆದರೆ ಉತ್ತರಪದದಲ್ಲಿ ವಿಸರ್ಗ ವಿದ್ದರೆ ಅದಕ್ಕೆ ಸಕಾರಾದೇಶ ಬರುವುದಿಲ್ಲ, ಎಂಬುದರಿಂದ ವಿಸರ್ಗಕ್ಕೆ ಸಕಾರಾದೇಶ, ಹಸ್ಕಾರ ಎಂದು ಸಿದ್ಧವಾಗುತ್ತೆ. ॥ ೧೨ ॥

॥ ಸಂಹಿತಾಪಾಠಃ ॥

ಆ ಪೂಷಞ್ಚಿತ್ರಬರ್ಹಿಷಮಾಘೃಣೇ ಧರುಣಂ ದಿವಃ ।
ಆಜಾ ನಷ್ಟಂ ಯಥಾ ಪಶುಂ ॥ ೧೩ ॥

॥ ಪದಪಾಠಃ ॥

ಆ । ಪೂಷನ್ । ಚಿತ್ರಽಬರ್ಹಿಷಂ । ಆಘೃಣೇ । ಧರುಣಂ । ದಿವಃ ।
ಆ । ಅಜ । ನಷ್ಟಂ । ಯಥಾ । ಪಶುಂ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಪೂಷನ್ ಚಿತ್ರಬರ್ಹಿಷಂ ವಿಚಿತ್ರೈರ್ದರ್ಭೈರ್ಯುಕ್ತಂ ಧರುಣಂ ಯಾಗಸ್ಯ ಧಾರಕಂ ಸೋಮಂ ದಿವ ಆ ದ್ಯುಲೋಕಾದಾ ಹರೇತಿ ಶೇಷಃ । ಪೂಷಾ ವಿಶೇಷ್ಯತೇ । ಆಘೃಣೇ ಆಗತದೀಪ್ತಿಯುಕ್ತ । ತತ್ರ ದೃಷ್ಟಾಂತಃ । ಹೇ ಅಜ ಗಮನಶೀಲ ಯಥಾ ಲೋಕೇ ನಷ್ಟಂ ಪಶುಂ ಮಹಾರಣ್ಯಾದಾನ್ವಿಷ್ಯ ಕಶ್ಚಿದಾಹರತಿ ತದ್ವತ್ ॥ ಆಘೃಣೇ । ಘೃ ಕ್ಷರಣದೀಪ್ತ್ಯೋರಿತ್ಯಾಸ್ಮಾದ್ಘೃಣಿಃ ಪೃಶ್ನಿರಿತಿ ನಿಪ್ರತ್ಯಯೋ ನಿಪಾತಿತಃ । ಋವರ್ಣಾಚ್ಚೇತಿ ವಕ್ತವ್ಯಮಿತಿ ಣತ್ವಂ । ಪ್ರಾದಿಸಮಾಸಃ । ಆಮಂತ್ರಿತಾದ್ಯುದಾತ್ತತ್ವಂ । ಧರುಣಂ । ಧೃಞ್ ಧಾರಣೇ । ಅಸ್ಮಾಣ್ಣ್ಯಂತಾದ್ಧಾತೋರರ್ತೇರ್ಣಿಲುಕ್ಚ । ಉ. ೩-೫೮ । ಇತ್ಯುನನ್ಪ್ರತ್ಯಯಃ । ವ್ಯತ್ಯಯೇನ ನಿತ್ಸ್ವರಾಭಾವೇ ಪ್ರತ್ಯಯಸ್ವರಃ । ದಿವಃ । ಊಡಿದಮಿತ್ಯಾದಿನಾ ಷಷ್ಠ್ಯಾ ಉದಾತ್ತತ್ವಂ । ಅಜ । ಅಜ ಗತಿಕ್ಷೇಪಣಯೋಃ ॥

॥ ಪ್ರತಿಪದಾರ್ಥ ॥

**ಆಘೃಣೇ**—ಪ್ರಕಾಶಯುಕ್ತನಾದ । **ಅಜ**—ಗಮನಶೀಲನಾದ । **ಪೂಷನ್**—ಎಲೈ ಪೂಷನೇ, । **ಚಿತ್ರಬರ್ಹಿಷಂ**—ವಿಚಿತ್ರವಾದ ದರ್ಭೆಗಳಿಂದ ಸಹಿತವಾದ । **ಧರುಣಂ**—ಯಜ್ಞಕ್ಕೆ ಆಧಾರಭೂತವಾದ ಸೋಮವನ್ನು । (ಒಬ್ಬಾನೊಬ್ಬ ಪುರುಷನು) **ನಷ್ಟಂ**—ತಪ್ಪಿಸಿಕೊಂಡು ಹೋಗಿರುವ । **ಪಶುಂ**—ಪಶುವನ್ನು । **ಯಥಾ**—ಯಾವ ಪ್ರಕಾರವಾಗಿ । **ಆ (ಹರತಿ)**—ಹುಡುಕಿ ತರುವನೋ । (ಅದರಂತೆ) **ದಿವಃ**—ಸ್ವರ್ಗಲೋಕದಿಂದ । **ಆ (ಹರ)**—ತಂದುಕೊಡು.

॥ ಭಾವಾರ್ಥ ॥

ಎಲೈ ಪ್ರಕಾಶಯುಕ್ತನಾದ ಪೂಷನೇ, ನೀನು ಗಮನಶೀಲನಾದುದರಿಂದ, ವಿಚಿತ್ರದರ್ಭೆಗಳಿಂದ ಕೂಡಿದುದೂ ಯಜ್ಞಕ್ಕೆ ಆಧಾರಭೂತವಾದುದೂ ಆದ ಸೋಮವನ್ನು, ಲೋಕದಲ್ಲಿ ತಪ್ಪಿಸಿಕೊಂಡು ಹೋದ ಪಶುವನ್ನು ಹುಡುಕಿ ತರುವಂತೆ, ಸ್ವರ್ಗಲೋಕದಿಂದ ನಮಗೆ ತಂದುಕೊಡು.

## English Translation.

Resplendent and swift-moving Pushan, bring from heaven the Soma juice with the variegated sacred grass as a man brings back a stray animal.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು—ಎಲೈ ಪೂಷನೇ, ನೀನು ಮಹಾ ತೇಜಸ್ವಿಯು ಮತ್ತು ವೇಗವಾಗಿ ಸಂಚರಿಸಬಲ್ಲವನು. ಆದುದರಿಂದ ಲೋಕದಲ್ಲಿ ಕಳೆದು ಹೋದ ಪಶುವನ್ನು (ಹಸು, ಆಡು ಇತ್ಯಾದಿ) ಹುಡುಕಿ ಹಿಂದಕ್ಕೆ ತರುವಂತೆ ವಿಚಿತ್ರ ದರ್ಭೆಯುಕ್ತವೂ ಯಜ್ಞಾಧಾರಭೂತವೂ ಆದ ಸೋಮವನ್ನು ಸ್ವರ್ಗದಿಂದ ನಮಗೆ ತಂದು ಕೊಡು ಎಂದು ಮುಖ್ಯಾಭಿಪ್ರಾಯವು.

**ಪೂಷನ್**—ಪೂಷ ಶಬ್ದವು ಗೌಃ ಗ್ಮಾ ಜ್ಮಾ ಮೊದಲಾದ ಇಪ್ಪತ್ತೊಂದು ಪೃಥಿವೀವಾಚಕಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಪೂಷ ಎಂದರೆ ಪೃಥಿವೀ ಎಂದೂ ಅರ್ಥವಾಗುವುದು. ಇಲ್ಲಿ ಪೂಷನ್ ಶಬ್ದಕ್ಕೆ ಪೂಷನೆಂಬ ದೇವತೆಯು. ಈ ದೇವತೆಯು ಕಳೆದುಹೋದ ವಸ್ತುವನ್ನು ಹುಡುಕಿ ಹಿಂದಕ್ಕೆ ತಂದುಕೊಡುವನೆಂದು ಪ್ರಸಿದ್ಧಿ ಇರುವುದರಿಂದ ಅನೇಕ ಋಕ್ಕುಗಳಲ್ಲಿ ಈ ವಿಧವಾದ ವರ್ಣನೆ ಇರುವುದು. ಈ ಶಬ್ದಕ್ಕೆ ಯಾಸ್ಕರ ವಿವರಣೆಯು—

**ಪೂಷಾ । ಅಥ ಯದ್ರಶ್ಮಿಪೋಷಂ ಪುಷ್ಯತಿ ತತ್ಪೂಷಾ ಭವತಿ ॥**

(ನಿ. ೧೨-೧೬) ಎಂದಿರುವುದು.

ಎಂದರೆ ರಶ್ಮಿ ಅಥವಾ ಕಿರಣಗಳಿಂದ ಪೂರ್ಣವಾದುದರಿಂದ ಈ ದೇವತೆಗೆ ಪೂಷಾ ಎಂದು ಹೆಸರು. ದ್ವಾದಶಾದಿತ್ಯರಲ್ಲಿ ಪೂಷಾ ಒಬ್ಬನಾದುದರಿಂದ ಪೂಷನೆಂದರೆ ಸೂರ್ಯನ ರೂಪವಿಶೇಷವೆಂದು ಹೇಳುವರು. ಆದುದರಿಂದಲೇ ಈ ದೇವತೆಯನ್ನು ವರ್ಣಿಸುವಾಗ ತೇಜಸ್ಸಿನಿಂದ ಯುಕ್ತನಾದವನು, ಪ್ರಕಾಶಮಾನನು, ದೀಪ್ತಿಯುಕ್ತನು ಮೊದಲಾದ ವಿಶೇಷಣ ಪದಗಳನ್ನು ಉಪಯೋಗಿಸುವರು. ಮತ್ತು **ಅಜಾಃ ಪೂಷ್ಣಃ** (ನಿ. ೨-೨೮) ಎಂದು ಯಾಸ್ಕರು ಆದಿಷ್ಟೋಪಯೋಜನಶಬ್ದಗಳ ಮಧ್ಯದಲ್ಲಿ ಇದನ್ನು ಸೇರಿಸಿರುವರು. ಆದಿಷ್ಟೋಪಯೋಜನವೆಂದರೆ ಆ ಶಬ್ದವು ಆಯಾ ದೇವತೆಗೆ ಅನ್ವಯಿಸುವಂತೆ ಅನುರೂಪವಾದ ಅರ್ಥವನ್ನು ವಿವರಿಸುವ ವಿಶೇಷಣಪದವೆಂದು ಪ್ರಸಿದ್ಧಿಯಾಗಿ ಬಳಕೆಯಲ್ಲಿರುವುದು. ಉದಾಹರಣೆಗಾಗಿ—ಹರೀ ಇಂದ್ರಸ್ಯ; ರಾಸಭಾ ಅಶ್ವಿನೋಃ; ನಿಯುತೋ ವಾಯುಃ ಇತ್ಯಾದಿ ಎಂದರೆ ಹರೀ (ಇಂದ್ರನ ಕುದುರೆಗಳು) ಎಂಬ ಶಬ್ದವು ವೇದದಲ್ಲಿ ಇಂದ್ರನ ಕುದುರೆಗಳನ್ನು ಮಾತ್ರ ನಿರ್ದೇಶಿಸುವುದಕ್ಕೆ ಮಾತ್ರ ಉಪಯೋಗಿಸಲ್ಪಡುವುದು. ಅದರಂತೆ ರಾಸಭಾ ಎಂಬ ಶಬ್ದವು ಅಶ್ವಿನೀ ದೇವತೆಗಳ ಸ್ತುತಿಯಲ್ಲಿಯೂ ನಿಯುತಃ ಎಂಬ ಶಬ್ದವು ವಾಯುವನ್ನು ಪ್ರಶಂಸೆ ಮಾಡುವಾಗಲೂ ಉಪಯೋಗಿಸಲ್ಪಡುವುದು. ಆದುದರಿಂದ ಅಜ ಎಂಬ ಶಬ್ದವು ಪೂಷಾ ಎಂಬ ದೇವತೆಯನ್ನು ಪ್ರಶಂಸಿಸುವಾಗ ಉಪಯೋಗಿಸಲ್ಪಡುವುದೆಂದು ತಿಳಿಯಬೇಕು. ಈ ಋಕ್ಕಿನಲ್ಲಿಯೂ ಅಜಶಬ್ದಪ್ರಯೋಗವಿರುವುದು. ಇದಕ್ಕೆ ಗಮನಶೀಲ ಎಂದು ಭಾಷ್ಯಕಾರರು **ಅರ್ಥವಿವರಣೆ** ಮಾಡಿರುವರು. ಸೂರ್ಯನು (ಪೂಷಾ) ಮೂರು ಲೋಕವನ್ನು ಸಂಚರಿಸುವವನಾದುದರಿಂದಲೂ, ಎಲ್ಲವನ್ನು ನೋಡುವವನಾದುದರಿಂದಲೂ, ಗಮನಶೀಲನೆಂದು ಹೇಳುವುದು ಸ್ವಾಭಾವಿಕವಾಗಿದೆ. ಪೂಷಾ

ಎಂಬ ಶಬ್ದದ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಯಾಸ್ಕರು-ಶುಕ್ರಂ ತೇ ಅನ್ಯದ್ಯಜತಂತೇ (ಋ. ಸಂ. ೬-೫೮-೧) ಪಥಸ್ಪಥಃ ಪರಿಪತಿಂ ವಚಸ್ಯಾ (ಋ. ಸಂ. ೬-೪೯-೮) ಎಂಬ ಎರಡು ಋಕ್ಕುಗಳನ್ನು ಉದಾಹರಣೆಯಾಗಿ ಕೊಟ್ಟಿರುವರು.

**ಚಿತ್ರಬರ್ಹಿಷಂ—ವಿಚಿತ್ರದರ್ಭೈರ್ಯುಕ್ತಂ ।** ವಿಚಿತ್ರ ದರ್ಭೆಗಳಿಂದ ಸಹಿತವಾದ ಎಂದು ಭಾಷ್ಯಕಾರರು ಹೇಳಿರುವರು. ಸೋಮವು ಹೇಗೆ ದರ್ಭೆಯಿಂದ ಯುಕ್ತವಾದುದು ಎಂಬುದು ಸ್ಪಷ್ಟವಾಗುವುದಿಲ್ಲ. ಬಹುಶಃ ದರ್ಭೆಯ ಮೇಲೆ ಸೋಮಪಾತ್ರೆಯನ್ನು ಇಡುವುದರಿಂದ ಆರೀತಿ ಹೇಳಿರಬಹುದು. ಸ್ಕಂದಸ್ವಾಮಿಯು ಚಿತ್ರಂ ಎಂದರೆ ಪೂಜ್ಯಂ ಎಂದೂ ಅರ್ಥಮಾಡಿರುವರು. ವೇದಾರ್ಥಯತ್ನಕಾರರು ಚಿತ್ರಬರ್ಹಿಷಂ ಶಬ್ದಕ್ಕೆ ವಿಚಿತ್ರವಾದ ರೆಕ್ಕೆಗಳಿಂದ (feathers) ಕೂಡಿದ ಎಂದರ್ಥವನ್ನು ಹೇಳಿರುವರು. ಸೋಮಕ್ಕೆ ರೆಕ್ಕೆಗಳಿರುವುದೆಂದರೆ ವಿಚಿತ್ರವಾಗಿ ತೋರುವುದು. ಆ ಅರ್ಥವು ಅಷ್ಟು ಸಮಂಜಸವಾಗಿಲ್ಲ.

**ಆ ಘೃಣೇ—**ವಸ್ತೋಃ ದ್ಯೋಃ ಮೊದಲಾದ ಹನ್ನೆರಡು ಅಹರ್ನಾಮಗಳ ಮಧ್ಯದಲ್ಲಿ ಘೃಣಃ ಎಂಬ ಶಬ್ದವು ಪಠಿತವಾಗಿರುವುದರಿಂದ ಘೃಣಃ ಎಂದರೆ ಹಗಲು ಎಂದು ಹೆಸರು. (ನಿ ೨-೨೧) ಹಗಲನ್ನು ಉಂಟುಮಾಡುವುದರಿಂದ ಸೂರ್ಯನಿಗೆ (ಪೂಷಾ) ಘೃಣಿ ಎಂದು ಹೆಸರು. **ಘೃಣಿಃ ಸೂರ್ಯ ಆದಿತ್ಯಃ** ಎಂದು ಶ್ರುತಿವಾಕ್ಯವಿರುವುದು. (ತೈ. ಉ.) ಮತ್ತು ಘೃಣಿಃ ಎಂಬ ಶಬ್ದವು ಜಮತ್ ಮೊದಲಾದ ಹನ್ನೊಂದು ಜ್ವಲತಃ ಎಂಬ ಅರ್ಥಸೂಚಕವಾದ ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ. ೨-೨೮) ಘೃಣಿಶಬ್ದಕ್ಕೆ ಪ್ರಕಾಶಮಾನನಾದ ಎಂದರ್ಥವು. ಈ ಅರ್ಥವನ್ನೇ ಇಲ್ಲಿ ಭಾಷ್ಯಕಾರರು ಹೇಳಿರುವರು. ಈ ಪದದ ಜೊತೆಯಲ್ಲಿ ಆ ಎಂಬ ಉಪಸರ್ಗವಿರುವುದರಿಂದ ಆ ಸಮಂತಾತ್ ದೀಪ್ತಿಯುಕ್ತಃ-ಸುತ್ತಲೂ ಪ್ರಸರಿಸಿರುವ ಅಥವಾ ಹರಡಿರುವ ಕಾಂತಿಯುಳ್ಳವನು ಎಂದರ್ಥವು.

**ಧರುಣಂ—ಯೋಗಸ್ಯ ಧಾರಕಂ ।** ಯಜ್ಞಕ್ಕೆ ಆಧಾರಭೂತವಾದ ಮುಖ್ಯ ವಸ್ತು ಎಂದರೆ ಸೋಮರಸವು ಎಂದಭಿಪ್ರಾಯವು.

**ದಿವಃ—**ಸ್ವರ್ಗಲೋಕದಿಂದ. ಸ್ಕಂದಸ್ವಾಮಿಯು ಧರುಣಂ ಎಂಬ ಶಬ್ದವನ್ನು ದಿವಃ ಶಬ್ದದೊಂದಿಗೆ ಸೇರಿಸಿ ದಿವಃ ಧರುಣಂ-ದಿವಃ ಧರ್ತಾರಂ, ಸ್ವರ್ಗವನ್ನು ಧರಿಸುವ, ಸ್ವರ್ಗವನ್ನು ಪೋಷಿಸುವ ಎಂದರ್ಥಮಾಡಿರುವರು. ಸೋಮರಸವು ಸ್ವರ್ಗದಲ್ಲಿರುವುದೆಂದು ಪ್ರಸಿದ್ಧವಾಗಿರುವುದರಿಂದ ಸ್ವರ್ಗದಿಂದ ಸೋಮರಸವನ್ನು ತಂದುಕೊಡು ಎಂದು ಭಾಷ್ಯಕಾರರು ಹೇಳಿರುವ ಅರ್ಥವೇ ಸಮಂಜಸವಾಗಿರುವುದು. **ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್** (ತೈ. ಬ್ರಾ. ೩-೨-೧) ಎಂಬ ಶ್ರುತಿವಾಕ್ಯವು ಸೋಮವು ಸ್ವರ್ಗದಲ್ಲಿತ್ತೆಂಬ ವಿಷಯವನ್ನು ಸಮರ್ಥಿಸುವುದು.

**ಅಜ—ಅಜ ಗತಿಕ್ಷೇಪಣಯೋಃ** ಅಜ ಧಾತುವಿಗೆ ಗಮನಾರ್ಥವಿರುವುದರಿಂದ ಗಮನಶೀಲ ಎಂಬರ್ಥವು ಇಲ್ಲಿ ಅನ್ವಯಿಸುವುದು.

**ನಷ್ಟಂ ಯಥಾ ಪಶುಂ—**ಕಳೆದು ಹೋದ ಪಶುವು ಸಿಕ್ಕಿದರೆ ಸಂತೋಷವಾಗುವಂತೆ ಸ್ವರ್ಗದಲ್ಲಿರುವ ಸೋಮವನ್ನು ನಮಗೆ ತಂದುಕೊಟ್ಟರೆ ಸಂತೋಷವಾಗುವುದೆಂದು ಸೂಚಿಸುವುದಕ್ಕಾಗಿ ಈ ಉಪಮಾನದ ಪ್ರಯೋಗವಿರಬಹುದು.

॥ ವ್ಯಾಕರಣಪ್ರಕ್ರಿಯ ॥

ಆ ಘೃಣೇ— **'ಘೃ ಕ್ಷರಣದೀಪ್ತ್ಯೋಃ'** ಧಾತು. **'ಘೃಣಿ ಪೃಶ್ನಿ-'** (ಉ. ಸೂ. ೪-೪೯೨) ಇದರ ಅರ್ಥವು (ಋ. ಸಂ. ೧-೨೩-೧) **'ಉಗ್ರಾಹಿ ಪೃಶ್ನಿಮಾತರಃ'** ಎಂಬಲ್ಲಿ ವಿವೃತವು. ಇದರಿಂದ **'ನಿ'** ಪ್ರತ್ಯಯು, ಘೃ+ನಿ, **'ಋವರ್ಣಾನ್ನಸ್ಯ ಣತ್ವಂ ವಾಚ್ಯಮ್'** ಎಂಬುದರಿಂದ ನಕಾರಕ್ಕೆ ಣಕಾರ, ಆ, ಎಂಬ ಉಪಸರ್ಗ ದೊಂದಿಗೆ **'ಕುಗತಿ ಪ್ರಾದಯಃ'** (ಪಾ. ಸೂ. ೨-೨-೧೮) ಎಂಬುದರಿಂದ ಸಮಾಸ, ಪಾದಾದಿಯಲ್ಲಿರುವುದರಿಂದ ಅಷ್ಟಮಿಕ **'ಆಮನ್ತ್ರಿತಸ್ಯ ಚ'** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಆರನೇ ಅಧ್ಯಾಯದ **'ಆಮನ್ತ್ರಿತಸ್ಯ ಚ'** ಎಂಬುದರಿಂದ ಆದ್ಯುದಾತ್ತ ಬರುತ್ತೆ.

ಧರುಣಮ್— **'ಧೃಞ್ ಧಾರಣೇ'** ಧಾತು. ಇದರ ಮುಂದೆ ಣಿಚ್ ಪ್ರತ್ಯಯ ಧೃ+ಇ ಈಗ **'ಧಾರೇರ್ಣಿಲುಕ್ ಚ'** (ದಶಪಾ. ೫) ಣಿಚ್ ಪ್ರತ್ಯಯಾಂತವಾದ ಧೃಞ್ ಧಾತುವಿನ ಮುಂದೆ ಉನನ್ ಪ್ರತ್ಯಯ ಬರುತ್ತೆ. ಣಿಚ್ಚಿಗೆ ಲುಕ್ಕೂ ಬರುತ್ತೆ ಎಂಬುದರಿಂದ ಉನನ್ ಪ್ರತ್ಯಯವೂ, ಣಿ ಲೋಪವೂ ಬಂದರೆ ಧೃ+ಉನ **'ಸಾರ್ವಧಾತುಕಾರ್ಧಧಾತುಕಯೋಃ'** (ಪಾ. ಸೂ. ೭-೩-೮೪) ಎಂಬುದರಿಂದ ಋಗೆ ಅರ್ ಗುಣ, ಧರುನ–ಈಗ **'ಅಟ್ಕುಪ್ವಾಙ್ನುಮ್ವ್ಯವಾಯೇಽಪಿ'** (ಪಾ. ಸೂ. ೮-೪-೨) ಎಂಬುದರಿಂದ ನಕಾರಕ್ಕೆ ಣಕಾರ ಧರುಣ ಎಂದಾಗುತ್ತದೆ. **'ಆದ್ಯುದಾತ್ತಶ್ಚ'** (ಪಾ. ಸೂ. ೩-೧-೩) ಎಂದು ವಿಹಿತವಾಗಿರುದ ಪ್ರತ್ಯಯಾದ್ಯುದಾತ್ತವನ್ನು ಬಾಧಿಸಿ ಯದ್ಯಪಿ ಪ್ರತ್ಯಯವು ನಿತ್ತಾಗಿರುವುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವು ಪ್ರಾಪ್ತವಾಗುವುದು, ಆದರೂ ಇಲ್ಲಿ **'ವ್ಯತ್ಯಯೋ ಬಹುಲಂ'** (ಪಾ. ಸೂ. ೩-೧-೮೫) ಎಂಬ ಸೂತ್ರಾನುಸಾರವಾಗಿ ಪ್ರತ್ಯಯಾದ್ಯುದಾತ್ತವೇ ಬಂದು ಉ ಉದಾತ್ತವಾಗುವುದು.

ದಿವಃ— **ಊಡಿದಮ್ ಪದಾದ್ಯಪ್ಪುಮ್‌ರೈದ್ಯುಭ್ಯಃ'** (ಪಾ. ಸೂ. ೬-೧-೧೭೧) ಇಲ್ಲಿ ಏಕಾಚಃ, ಅಂತೋದಾತ್ತಾತ್, ಎಂಬಿವು ಅನುವೃತ್ತಗಳಾಗುವುವು. ಏಕಾಚಃ ಎಂಬುದು ವ್ಯಾವೃತಿಬಾರದ ಕಾರಣ ಊಠಿಗೆ ವಿಶೇಷಣವಾಗುವುದಿಲ್ಲ. ಊಡಿನಿಂದ ಕೂಡಿದ ಸಮುದಾಯಕ್ಕೆ ವಿಶೇಷಣವಾದರೂ ಬಾಧಕವಿಲ್ಲ. ಪ್ರಷ್ಠೌಹ್ ಇತ್ಯಾದಿ ಕಡೆಗಳ ಊಟ್ ಘಟಿತವಾಗಿಯೂ ಅರ್ಥವುಳ್ಳದ್ದೂ ಆಗಿರುವ ಊಹ್ ಎಂಬುದು ದೊರೆಯುವುದು. ಏವಂಚ ಅಂತೋದಾತ್ತಗಳೂ ಏಕಾಚ್ಕಗಳೂ ಆದ ಊಠ್ ಮೊದಲಾದುವುಗಳ ಮುಂದೆ ಇರುವ ಅಸರ್ವನಾಮಸ್ಥಾನ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ಷಷ್ಠೀ ವಿಭಕ್ತಿಯು ಉದಾತ್ತವಾಗುವುದು. ಆದ್ದರಿಂದ **'ಅನುದಾತ್ತೌ ಸುಪ್ಪಿತೌ'** ಎಂಬುದರಿಂದ ವಿಭಕ್ತಿಗೆ ಅನುದಾತ್ತ ಬರುವುದಿಲ್ಲ.

ಅಜ— **'ಅಜ ಗತಿಕ್ಷೇಪಣಯೋಃ'** ಎಂಬ ಧಾತುವಿನಿಂದ ಸಿದ್ಧವಾಗದೆ. ॥೧೩॥

॥ ಸಂಹಿತಾಪಾಠಃ ॥

ಪೂಷಾ ರಾಜಾನಮಾಘೃಣಿರಪಗೂಳ್ಹಂ ಗುಹಾ ಹಿತಂ ।

ಅವಿಂದಚ್ಚಿತ್ರಬರ್ಹಿಷಂ ॥ ೧೪ ॥

॥ ಪದಪಾಠಃ ॥

ಪೂಷಾ । ರಾಜಾನಂ । ಆಘೃಣಿಃ । ಅಪಽಗೂಳ್ಹಂ । ಗುಹಾ । ಹಿತಂ ।
ಅವಿಂದತ್ । ಚಿತ್ರಽಬರ್ಹಿಷಂ ॥ ೧೪ ॥

॥ ಸಾಯಣಭಾಷ್ಯಂ ॥

ಆಘೃಣಿಃ ಪೂಷಾ ರಾಜಾನಂ ಸೋಮಮವಿಂದತ್ । ಅಲಭತ । ಕೀದೃಶಂ । ಅಪಗೂಳ್ಹಮತ್ಯಂತ ಗೂಢಂ । ತತ್ರ ಹೇತುಃ । ಗುಹಾ ಹಿತಂ ಗುಹಾಸದೃಶೇ ದುರ್ಗಮೇ ದ್ಯುಲೋಕೇ ಸ್ಥಿತಂ । ತಥಾ ಚಿತ್ರ ಬರ್ಹಿಷಂ ॥ ಅಪಗೂಳ್ಹಂ । ಗುಹೂ ಸಂವರಣೇ । ನಿಷ್ಠೇತಿ ಕರ್ಮಣಿ ಕ್ತಃ । ಹೋ ಢಃ । ಪಾ· ೮-೨-೩೧ । ಇತಿ ಢತ್ವಂ । ಝಷಸ್ತಥೋರ್ಧೋಽಧಃ । ಪಾ. ೮-೨-೪೦ । ಇತಿ ಧಕಾರಃ । ಷ್ಟುತ್ವಢಲೋಪದೀರ್ಘಾಃ । ಸಮಾಸೇ ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಗುಹಾ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಹಿತಂ । ನಿಷ್ಠಾಯಾಂ ದಧಾತೇರ್ಹಿಃ ॥

॥ ಪ್ರತಿಪದಾರ್ಥ ॥

**ಆಘೃಣಿಃ**—ದೀಪ್ತಿಯುಕ್ತನಾದ । **ಪೂಷಾ**—ಪೂಷನು । **ಅಪಗೂಳ್ಹಂ**—ಅತ್ಯಂತಗೂಢವಾದ । **ಗುಹಾ**—ಗುಹಾ ಸದೃಶವಾದ ದುರ್ಗಮಸ್ಥಾನದಲ್ಲಿ । **ಹಿತಂ**—ಇಡಲ್ಪಟ್ಟಿರುವ । **ಚಿತ್ರಬರ್ಹಿಷಂ**—ವಿಚಿತ್ರ ದರ್ಭಯುಕ್ತವಾದ । **ರಾಜಾನಂ**—ಸೋಮರಸವನ್ನು । **ಅವಿಂದತ್**—ದೊರಕಿಸಿದನು ॥

॥ ಭಾವಾರ್ಥ ॥

ಪ್ರಕಾಶಮಾನನಾದ ಪೂಷನು ಅತಿರಹಸ್ಯಪ್ರದೇಶದಲ್ಲಿದ್ದ ವಿಚಿತ್ರದರ್ಭೆಯುಕ್ತವಾದ ಸೋಮರಸವನ್ನು (ನಮಗಾಗಿ) ತಂದುಕೊಟ್ಟನು.

## English Translation.

The resplendent Pushan found out the Soma (king) although concealed in a secret cave placed upon the sacred grass.

॥ ವಿಶೇಷವಿಷಯಗಳು ॥

**ರಾಜಾನಂ**—ಸೋಮನನ್ನು ರಾಜನೆಂದು ಕರೆಯುವ ರೂಢಿಯಿದೆ. ಈ ವಿಧವಾದ ಪ್ರಯೋಗವು ಋಗ್ವೇದ ಕ್ಕಿಂತ ಯಜುರ್ವೇದದಲ್ಲಿ ವಿಶೇಷವಾಗಿ ಕಂಡುಬರುವುದು.

**ಸೋಮಂ ರಾಜಾನಮವಸೇಽಗ್ನಿಂ ಗೀರ್ಭಿರ್ಹವಾಮಹೇ ||**

(ಋ. ಸಂ. ೧೦-೧೪೧-೩)

**ಸೋಮಸ್ಯ ರಾಜ್ಞೋ ವರುಣಸ್ಯ ಧರ್ಮಣಿ ಬೃಹಸ್ಪತೇರನುಮತ್ಯಾ ಉ ಶರ್ಮಣಿ ||**

(ಋ. ಸಂ. ೧೦-೧೬೭-೩)

ಇತ್ಯಾದಿ ಅನೇಕ ಉದಾಹರಣೆಗಳಿವೆ. ಯಜುರ್ವೇದದ ತೈತ್ತಿರೀಯಸಂಹಿತೆಯ ಆರನೇ ಕಾಂಡದ ಎರಡನೇ ಅಧ್ಯಾಯದ ಪ್ರಥಮಾನುವಾಕದಲ್ಲಿ (ತೈ. ಸಂ. ೬-೨-೧) ಸೋಮನು ರಾಜನೆಂದೂ ಗಾಯತ್ರ್ಯಾದಿ ಛಂದಸ್ಸುಗಳು ಅವನ ಭೃತ್ಯರೆಂದೂ ವಿವರಣೆ ಇದೆ.

**ಅಪಗೂಳ್ಹಂ—ಅತ್ಯಂತಗೂಢಂ । ನಿಗೂಳ್ಹಮಾಚ್ಛಾದಿತಂ ।** ಅತ್ಯಂತರಹಸ್ಯ ಪ್ರದೇಶದಲ್ಲಿದ್ದ ಎಂದರ್ಥವು ಈ ವಿಷಯದಲ್ಲಿ ಸ್ಕಂದಸ್ವಾಮಿಯು ಒಂದು ಪೂರ್ವೇತಿಹಾಸವನ್ನು ಹೇಳಿರುವರು—

**ಅತ್ರೇತಿಹಾಸಮಾಚಕ್ಷತೇ । ಅಸುರಾಃ ಸೋಮಂ ರಾಜಾನಂ ದೀಯಮಾನಮಗ್ನೇರ್ಹಸ್ತಾದಪಹೃತ್ಯ ಗುಹಾಯಾಂ ನ್ಯದಧುಃ । ತಂ ಪರ್ಯೇಷಮಾಣಾ ಅನ್ಯೇ ದೇವಾನಾವಿಂದನ್ । ಪೂಷಾ ತ್ವವಿಂದತ್ ।**

ಎಂದರೆ ಅಸುರರು ಅಗ್ನಿಯ ಹಸ್ತದಿಂದ ಸೋಮನನ್ನು ಅಪಹರಿಸಿ ಅದನ್ನು ಅತಿ ರಹಸ್ಯಸ್ಥಾನವಾದ ಗುಹೆಯೊಂದರಲ್ಲಿ ಬಚ್ಚಿಟ್ಟಿದ್ದರು. ದೇವತೆಗಳು ಅದನ್ನು ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ಅದನ್ನು ಪೂಷನೇ ಹುಡುಕಿ ತಂದು ಕೊಟ್ಟನು ಎಂದು.

**ಗುಹಾ ಹಿತಂ**—ಗುಹೆಯಂತಿರುವ ಎಂದರೆ ದುರ್ಗಮವಾದ ರಹಸ್ಯಪ್ರದೇಶದಲ್ಲಿ ಬಚ್ಚಿಡಲ್ಪಟ್ಟ ಎಂದರ್ಥವು. ಇಲ್ಲಿ ಗುಹಾ ಎಂದರೆ ಗುಹೆಯೆಂದಾಗಲಿ ರಹಸ್ಯ ಪ್ರದೇಶನೆಂದಾಗಲಿ ಅರ್ಥ ಮಾಡಬಹುದು. ಋಗ್ವೇದದಲ್ಲಿಯೂ ಉಪನಿಷತ್ತುಗಳಲ್ಲಿಯೂ ಯಾರಿಗೂ ತಿಳಿಯದಂತಿರುವ ರಹಸ್ಯ ಪ್ರದೇಶದಲ್ಲಿ ಇಡಲ್ಪಟ್ಟ ವಸ್ತುವನ್ನು **ಗುಹಾ ಹಿತಂ** ಎಂಬ ಶಬ್ದಗಳಿಂದ ನಿರ್ದೇಶಿಸುವುದು ರೂಢಿಯಾಗಿದೆ—

**ಗುಹಾ ತ್ರೀಣಿ ನಿಹಿತಾ ನೇಂಗಯಂತಿ ತುರೀಯಂ ವಾಚೋ ಮನುಷ್ಯಾ ವದಂತಿ ||**

(ಋ. ಸಂ. ೧-೧೬೪-೪೫)

**ಅವಿಂದದ್ದಿವೋ ನಿಹಿತಂ ಗುಹಾ ನಿಧಿಂ ವೇರ್ನ ಗರ್ಭಂ ಪರಿವೀತಮಶ್ಮನ್ಯನಂತೇ ಅಂತರಶ್ಮನಿ ||**

(ಋ. ಸಂ. ೧-೧೩೦-೩)

**ಗುಹಾ ಹಿತಂ ಗುಹ್ಯಂ ಗೂಳ್ಹಮಪ್ಸ್ವಪೀವೃತಂ ಮಾಯಿನಂ ಕ್ಷಿಯಂತಂ ||**

(ಋ. ಸಂ. ೨-೧೧-೫)

**ಅಭಿನಕ್ಷಂತೋ ಅಭಿ ಯೇ ತಮಾನಶುರ್ನಿಧಿಂ ಪಣೀನಾಂ ಪರಮಂ ಗುಹಾ ಹಿತಂ ||**

(ಋ. ಸಂ. ೨-೨೪-೬)

**ತಿಸ್ರೋ ಮಹೀರುಪರಾಸ್ತಸ್ಥುರತ್ಯಾ ಗುಹಾ ದ್ವೇ ನಿಹಿತೇ ದರ್ಶ್ಯೇಕಾ ||**

(ಋ. ಸಂ. ೩-೫೬-೨)

**ಪ್ರವಾಚ್ಯಂ ವಚಸಃ ಕಿಂ ಮೇ ಅಸ್ಯ ಗುಹಾ ಹಿತಮುಪ ನಿಣಿಗ್ವದಂತಿ ॥**

(ಋ. ಸಂ ೪-೫-೮)

**ಚಿತ್ರಂ ಸನ್ತಂ ಗುಹಾ ಹಿತಂ ಸುವೇದಂ ಕೂಚಿದರ್ಥಿನಂ ॥**

(ಋ. ಸಂ ೪-೭-೬)

**ತ್ವಾಮಗ್ನೇ ಅಂಗಿರಸೋ ಗುಹಾ ಹಿತಮನ್ವವಿಂದಞ್ಛಿಶ್ರಿಯಾಣಂ ವನೇವನೇ ॥**

(ಋ. ಸಂ. ೫-೧೧-೬)

ಇತ್ಯಾದ್ಯನೇಕ ಉದಾಹರಣೆಗಳಿವೆ.

**ಚಿತ್ರಬರ್ಹಿಷಂ**—ಈ ಶಬ್ದವು ಹಿಂದಿನ ಋಕ್ಕಿನಲ್ಲಿಯೂ ಇರುವುದು. ಈ ಶಬ್ದದ ಸರಿಯಾದ ಅರ್ಥ ವೇನೆಂಬುದು ಸ್ಪಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಅಪಗೂಳ್ಹಮ್**—ಅಪ ಉಪಸರ್ಗ, **' ಗುಹೂ ಸಂವರಣೇ '** ಧಾತು. ಇದರ ಮುಂದೆ **' ನಿಷ್ಠಾ '** (ಪಾ. ಸೂ. ೩-೨-೧೦೨) ಭೂತಾರ್ಥವೃತ್ತಿಯಾದ ಧಾತುವಿನ ಮುಂದೆ ಕ್ತ ಕ್ತವತು ಪ್ರತ್ಯಯಗಳು ಬರುವವು ಎಂಬುದರಿಂದ ಕರ್ಮಾರ್ಥದಲ್ಲಿ **' ಕ್ತ '** ಪ್ರತ್ಯಯ ಬರುವುದು, ಅಪ್+ಗುಹ್+ತಃ ಈಗ **' ಹೋಢಃ '** (ಪಾ. ಸೂ. ೮-೨-೬೧) ಝಲ್ ವರ್ಣ ಪರದಲ್ಲಿದ್ದರೂ, ಪದಾಂತವಿಷಯದಲ್ಲಿಯೂ ಹಕಾರಕ್ಕೆ ಢಕಾರಾದೇಶ ಬರುವುದು ಎಂಬುದರಿಂದ, **' ತ '** ಎಂಬ ಝಲ್ವರ್ಣದ ಹಿಂದೆ ಇರುವ ಹಕಾರಕ್ಕೆ, ಢಕಾರಾದೇಶ ಗುಢ್+ತ **' ಝಷಸ್ತಥೋರ್ಧೋಽಧಃ '** (ಪಾ. ಸೂ. ೮-೨-೪೦) ಧಾಧಾತು ಸಂಬಂಧಿಯಲ್ಲದ ಝಷ್ ಪ್ರತ್ಯಾಹಾರಕ್ಕೆ ಸೇರಿದ ವರ್ಣದ ಮುಂದೆ ಇರುವ ತಕಾರ ಥಕಾರ ಗಳಿಗೆ ಧಕಾರ ಬರುವುದು ಎಂಬುದರಿಂದ ತಕಾರಕ್ಕೆ ಧಕಾರ ಗುಢ್+ಧ **' ಷ್ಟುನಾಷ್ಟುಃ '** (ಪಾ. ಸೂ. ೮-೪-೪೧) ಎಂಬುದರಿಂದ, ಷ್ಟುತ್ವ ಧಕಾರಕ್ಕೆ ಢಕಾರ ಗುಢ್+ಢ. **' ಢೋಢೇಲೋಪಃ '** (ಪಾ. ಸೂ. ೮-೩-೧೩) ಢಕಾರದ ಹಿಂದೆ ಇರುವ ಢಕಾರಕ್ಕೆ ಲೋಪ ಬರುವುದು ಎಂಬುದರಿಂದ ಢಕಾರಕ್ಕೆ ಲೋಪ ಗು+ಢ. **' ಢ್ರಲೋಪೇಪೂರ್ವಸ್ಯ ದೀರ್ಘೋಽಣಃ '** (ಪಾ. ಸೂ. ೬-೩-೧೧೧) ಢಕಾರರೇಫಾನ್ಯತರ ಲೋಪಕ್ಕೆ ನಿಮಿತ್ತಗಳಾದ ಢಕಾರರೇಫಾನ್ಯ ತರಗಳ ಹಿಂದೆ ಇರುವ ಅಣ್‌ಗೆ ದೀರ್ಘ ಬರುವುದು ಎಂಬುದರಿಂದ ಉ ಗೆ ದೀರ್ಘ ಗೂ+ಢ, ಅಪಗೂಢ ಎಂದಾಯಿತು. ಈಗ **' ಅಜ್ಮಧ್ಯಸ್ಥಡಕಾರಸ್ಯ ಳಕಾರಂ ಬಹ್ವೃಚಾ ಜಗುಃ । ಅಜ್ಮಧ್ಯಸ್ಥಢಕಾರಸ್ಯ ಳ್ಹಕಾರಂ ವೈ ಯಥಾ-ಕ್ರಮಮ್ ॥** ಎಂದು ಬಹ್ವೃಚರ ಸಂಪ್ರದಾಯಾನುಸಾರ ಸ್ವರಗಳ ಮಧ್ಯದಲ್ಲಿರುವ ಢ್ ಗೆ ಳ್ಹ್ ಬರುತ್ತೆ. ಅಪಗೂ ಳ್ಹಮ್ ಎಂದಾಗುತ್ತೆ. ಅಪ, ಗೂಳ್ಹಂ, ಎರಡಕ್ಕೂ ಪ್ರಾದಿಸಮಾಸ. **' ಗತಿರನಂತರಃ '** (ಪಾ. ಸೂ. ೬-೨-೪೯) ಕರ್ಮಣಿಕ್ತಪ್ರತ್ಯಯಾಂತವು ಪರದಲ್ಲಿರುವಾಗ ಅವ್ಯವಹಿತವಾದ ಗತಿಯು ಪ್ರಕೃತಿ ಸ್ವರವನ್ನು ಹೊಂದುವುದು ಎಂಬುದ ರಿಂದ ಅಪ ಎಂಬದರ ಸ್ವರವೇ ನಿಲ್ಲುವುದು. ಅಪ ಎಂಬುದು **' ಉಪಸರ್ಗಾಶ್ಚಾಭಿವರ್ಜಮ್ '** (ಫಿ. ಸೂ. ೮೨) ಎಂಬುದರಿಂದ ಆದ್ಯುದಾತ್ತ.

**ಗುಹಾ**—ಈ ಶಬ್ದದ ಮುಂದೆ ಬರುವ ಸಪ್ತಮೀ ಏಕವಚನ ಸು ಪ್ರತ್ಯಯಕ್ಕೆ **' ಸುಪಾಂ ಸುಲುಕ್ '** (ಪಾ. ಸೂ. ೭-೧-೩೯) ಸೂತ್ರಾರ್ಥಕ್ಕೆ ೧೧ ನೆ ಮಂತ್ರ ನೋಡಿ. ಎಂಬುದರಿಂದ ಲುಕ್, ಗುಹಾಯಾಂ ಎಂಬುದಕ್ಕೆ ಬದಲಾಗಿ **' ಗುಹಾ '** ಎಂದೇ ನಿಲ್ಲುತ್ತೆ

**ಹಿತಂ** --'**ಡುಧಾಞ್ ಧಾರಣಪೋಷಣಯೋಃ**' ಎಂಬ ಧಾತುವಿನ ಮುಂದೆ '**ಕ್ತ**' ಪ್ರತ್ಯಯ ಧಾ+ತ '**ದಧಾತೇರ್ಹಿಃ**' (ಪಾ. ಸೂ. ೭-೪-೪೨) ತಕಾರಾದಿಯಾದ ಕಿತ್ ಪ್ರತ್ಯಯ ಪರದಲ್ಲಿರುವಾಗ ಧಾ ಧಾತುವಿಗೆ '**ಹಿ**' ಆದೇಶ ಬರುವುದು ಎಂಬುದರಿಂದ ಧಾಗೆ '**ಹಿ**' ಬಂದರೆ ಹಿ+ತ ದ್ವಿತೀಯಾ ಏಕವಚನ ಅಮ್ ಪ್ರತ್ಯಯ ಹಿತಮ್ ಎಂದಾಗುತ್ತೆ. ॥ ೧೪ ॥

---

॥ ಸಂಹಿತಾಪಾಠಃ ॥

ಉತೋ ಸ ಮಹ್ಯಮಿಂದುಭಿಃ ಷಡ್ಯುಕ್ತಾँ ಅನುಸೇಷಿಧತ್ ।

ಗೋಭಿರ್ಯವಂ ನ ಚರ್ಕೃಷತ್ ॥ ೧೫ ॥

॥ ಪದಪಾಠಃ ॥

ಉತೋ ಇತಿ । ಸಃ । ಮಹ್ಯಂ । ಇಂದುಽಭಿಃ । ಷಟ್ । ಯುಕ್ತಾ । ಅನುಽಸೇಸಿಧತ್ ।

ಗೋಭಿಃ । ಯವಂ । ನ । ಚರ್ಕೃಷತ್ ॥ ೧೫ ॥

॥ ಸಾಯಣಭಾಷ್ಯಂ ॥

ಉತೋ ಅಪಿ ಚ ಸ ಪೂಷಾ ಮಹ್ಯಂ ಯಜಮಾನಾಯೇಂದುಭಿರ್ಯಾಗಹೇತುಭಿಃ ಸೋಮೈರ್ಯುಕ್ತಾನ್ ಷಡ್ವಸಂತಾದೀನೃತೂನನುಸೇಷಿಧತ್ । ಅನುಕ್ರಮೇಣ ಪುನಃಪುನರ್ನಯನ್ವರ್ತತ ಇತಿ ಶೇಷಃ । ತತ್ರ ದೃಷ್ಟಾಂತಃ । ಗೋಭಿರ್ಬಲೀವರ್ದೈರ್ಯವಂ ನ ಚರ್ಕೃಷತ್ । ನಶಬ್ದ ಉಪಮಾರ್ಥಃ । ಯಥಾ ಯವಮುದ್ದಿಶ್ಯ ಭೂಮಿಂ ಪ್ರತಿಸಂವತ್ಸರಂ ಪುನಃಪುನಃ ಕೃಷತಿ ತದ್ವತ್ । ಮಹ್ಯಂ । ಙಯಿ ಚ । ಪಾ. ೬-೧-೨೧೨ । ಇತ್ಯಾದ್ಯುದಾತ್ತತ್ವಂ । ಇಂದುಭಿಃ । ಉಂದೀ ಕ್ಲೇದನೇ । ಉಂದೇರಿಚ್ಚಾದೇಃ । ಉ. ೧-೧೩ । ಇತ್ಯುಪ್ರತ್ಯಯ ಉಕಾರಸ್ಯೇಕಾರಾದೇಶಶ್ಚ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಯುಕ್ತಾನ್ । ದೀರ್ಘಾದಟಿ ಸಮಾನಪಾದ ಇತಿ ಸಂಹಿತಾಯಾಂ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ । ಅನುಸೇಷಿಧತ್ । ಷಿಧು ಗತ್ಯಾಂ । ಧಾತೋರೇಕಾಚಃ । ಪಾ. ೩-೧-೨೨ । ಇತಿ ಯಙ್ । ಯಙೋಽಚಿ ಚ । ಪಾ. ೨-೪-೭೪ । ಇತಿ ತಸ್ಯ ಲುಕ್ । ಪ್ರತ್ಯಯಲಕ್ಷಣೇನ ಸನ್ಯಙೋಃ। ಪಾ. ೬-೧-೯ । ಇತಿ ದ್ವಿರ್ಭಾವಃ । ಹಲಾದಿಶೇಷಃ । ಗುಣೋ ಯಙ್ಲುಕೋಃ । ಪಾ. ೭-೪-೮೨ । ಇತ್ಯಭ್ಯಾಸಸ್ಯ ಗುಣಃ । ಇಣ್ಕೋಃ । ಪಾ. ೮-೩-೫೭ । ಇತಿ ಷತ್ವಂ । ಸನಾದಿತ್ವಾದ್ಧಾತುಸಂಜ್ಞಾಯಾಂ ಲಟಃ

**ಶತ್ರೈ । ಕರ್ತರಿ ಶಪ್ । ಅದಾದಿವಚ್ಚೇತಿ ವಚನಾತ್ತಸ್ಯ ಲುಕ್ । ನಾಭ್ಯಸ್ತಾಚ್ಛತುಃ । ಪಾ. ೭-೧-೭೮ । ಇತಿ ನುಮ್ ಪ್ರತಿಷೇಧಃ । ಪ್ರತ್ಯಯಸ್ವರೇ ಪ್ರಾಪ್ತೇಽಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಗೋಭಿಃ । ಸಾವೇಕಾ ಚ ಇತಿ ಭಿಸ ಉದಾತ್ತತ್ವೇ ಪ್ರಾಪ್ತೇ ನ ಗೋಶ್ವನ್ನಿತಿ ಪ್ರತಿಷೇಧಃ । ಚರ್ಕೃಷತ್ । ಕೃಷ ವಿಲೇಖನೇ । ಯಙ್ ಲುಕಿ ದ್ವಿರ್ಭಾವಹಲಾದಿಶೇಷಚತ್ವಾನಿ । ರುಗ್ರಿಕೌ ಚ ಲುಕಿ । ಪಾ. ೭-೪-೯೧ । ಇತ್ಯಭ್ಯಾಸಸ್ಯ ರುಗಾಗಮಃ । ಅಸ್ಮಾದ್ಯಙ್ ಲುಗಂತಾಲ್ಲೇಟಸ್ತಿಪ್ । ಇತಶ್ಚ ಲೋಪಃ । ಲೇಟೋಽಡಾ-ಟಾವಿತ್ಯಡಾಗಮಃ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಲಘೂಪಧಗುಣೇ ಪ್ರಾಪ್ತೇ ನಾಭ್ಯಸ್ತ-ಸ್ಯಾಚಿ ಪಿತಿ । ಪಾ. ೭-೩-೮೭ । ಇತಿ ನಿಷೇಧಃ । ತಿಙ್ಙತಿಙ ಇತಿ ನಿಘಾತಃ ॥ ೧೦ ॥**

॥ ಪ್ರತಿಪದಾರ್ಥ ॥

**ಉತೋ**—ಮತ್ತು । **ಸಃ**—ಆ ಪೂಷನು । **ಮಹ್ಯಂ**—ಯಜ್ಞಮಾಡುತ್ತಿರುವ ನನಗಾಗಿ । **ಇಂದುಭಿಃ**—ಯಜ್ಞದಲ್ಲಿ ಮುಖ್ಯವಸ್ತುವಾದ ಸೋಮರಸಗಳಿಂದ । **ಯುಕ್ತಾನ್**—ಸಹಿತವಾದ । **ಷಟ್**—ವಸಂತಾದಿ ಆರು ಋತುಗಳನ್ನು । (ವ್ಯವಸಾಯ ಮಾಡುವವನು) **ಗೋಭಿಃ**—ಎತ್ತುಗಳಿಂದ । **ಯವಂ**—ಯವವೆಂಬ (ಗೋಧಿ, barley) ಧಾನ್ಯವನ್ನು ಪಡೆಯುವುದಕ್ಕಾಗಿ । **ನ ಚರ್ಕೃಷತ್**—ಭೂಮಿಯನ್ನು ಪುನಃ ಪುನಃ ಉಳುವಂತೆ । **ಅನುಸೇಷಿಧತ್**—ಒಂದಾಗುತ್ತಲೊಂದು ಪರಿವರ್ತನ ಕ್ರಮದಿಂದ ನಡೆಸಲಿ ॥

॥ ಭಾವಾರ್ಥ ॥

ವ್ಯವಸಾಯಗಾರನು ಯವವೆಂಬ ಧಾನ್ಯವನ್ನು ಬೆಳೆಯುವುದಕ್ಕಾಗಿ ಭೂಮಿಯನ್ನು ಪುನಃ ಪುನಃ ಎಂದರೆ ಅನೇಕಾವರ್ತಿ ಎತ್ತುಗಳಿಂದ ಉಳುವಂತೆ, ಆ ಪೂಷನು ಯಜ್ಞಸಾಧಕವಾದ ಸೋಮರಸಗಳಿಂದ ಕೂಡಿದ ಆರು ಋತುಗಳನ್ನು ಒಂದಾಗುತ್ತಲೊಂದು ಪರಿವರ್ತನಕ್ರಮದಿಂದ ನಡೆಯುವಂತೆ ಮಾಡಲಿ.

## English Translation.

And he has brought to me successively the six (seasons) connected with the drops of the Soma juice as a man repeatedly ploughs a field with bullocks for the sake of barley.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಅಷ್ಟು ಸಮಂಜಸವಾಗಿ ಹೊಂದುವುದಿಲ್ಲ. ಉಪಮಾನವೂ ಚೆನ್ನಾಗಿಲ್ಲ. ಯವ ಧಾನ್ಯವನ್ನು ಬೆಳೆಯುವುದಕ್ಕಾಗಿ ಕೃಷೀವಲನು ಭೂಮಿಯನ್ನು ಪದೇ ಪದೇ ಉಳುವಂತೆ ವಸಂತಾದಿ ಋತುಗಳು, ಆ ಋತುಗಳಲ್ಲಿ ನಾವು ಮಾಡುವ ಸೋಮಯಾಗಗಳು ಪದೇ ಪದೇ ಬರುವಂತೆ ಮಾಡಲಿ ಎಂದು ಈ ಋಕ್ಕಿನ ಅಭಿಪ್ರಾಯವಿರಬಹುದು. ವಸಂತಾದಿ ಋತುಗಳು ಪ್ರತಿ ಸಂವತ್ಸರದಲ್ಲಿಯೂ ಬರುವುದರಿಂದ ಅನೇಕಾವರ್ತಿ ಬಂದಹಾಗಾಯಿತು. ಧಾನ್ಯವನ್ನು ಬೆಳೆಯುವುದಕ್ಕಾಗಿ ಭೂಮಿಯನ್ನು ಅನೇಕಾವರ್ತಿ ಉಳಬೇಕಾಗಿರುವುದು. ಆದುದರಿಂದ ಅನೇಕಾವರ್ತಿ

ಎಂಬ ಅರ್ಥವನ್ನು ಸೂಚಿಸುವುದಕ್ಕಾಗಿ ಈ ಉಪಮಾನವನ್ನು ಕೊಟ್ಟಿರಬಹುದು. ಈ ಋಕ್ಕಿನಲ್ಲಿ ಷಟ್ ಎಂಬ ಶಬ್ದ ಮಾತ್ರವಿರುವುದು. ಭಾಷ್ಯಕಾರರು ಷಟ್ ಎಂದರೆ ಷಡೃತುಗಳು (ಆರು ಋತುಗಳು) ಎಂದು ವಿವರಣೆ ಮಾಡಿರುವರು.

**ಇಂದುಭಿಃ**—ಸೋಮರಸದ ಬಿಂದುಗಳಿಂದ ಎಂದರೆ ಸೋಮರಸವನ್ನು ಲತೆಯಿಂದ ಜಜ್ಜಿ ಹಿಂಡುವಾಗ ತೊಟ್ಟುತೊಟ್ಟಾಗಿ ಬೀಳುವುದರಿಂದ ಸೋಮರಸವನ್ನು ಬಿಂದುಗಳೆಂಬ (ಇಂದವಃ ಇಂದುಭಿಃ ಇತ್ಯಾದಿ) ಶಬ್ದಗಳಿಂದ ಹೇಳುವುದು ರೂಢಿಯಾಗಿದೆ.

**ಗೋಭಿಃ**—ಗೋಭಿಃ ಎಂದರೆ ಗೋವುಗಳಿಂದ, ಹಸುಗಳಿಂದ ಎಂದರ್ಥವಿದ್ದರೂ ಇಲ್ಲಿ ಗೋಭಿಃ ಎಂದರೆ ಕೃಷಿಕರ್ಮಕ್ಕೆ ಸಾಧನಭೂತವಾದ ಎತ್ತುಗಳಿಂದ ಎಂಬ ಅರ್ಥವನ್ನು ಹೇಳಬೇಕೆಂದು ಭಾಷ್ಯಕಾರರೂ, ಸ್ಕಂದ ಸ್ವಾಮಿಯೂ ಅಭಿಪ್ರಾಯಪಡುವರು.

**ನ**—ಈ ಶಬ್ದವು ಇಲ್ಲಿ ಉಪಮಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮಹ್ಯಂ**—ಯುಷ್ಮದ್ ಶಬ್ದದ ಮುಂದೆ ಚತುರ್ಥೀ ಏಕವಚನ ಙೇ ಪ್ರತ್ಯಯ. ಯುಷ್ಮದ್+ಙೇ, ಈಗ **'ತುಭ್ಯ ಮಹ್ಯೌಙಯಿ'** (ಪಾ. ಸೂ. ೭-೨-೯೫) ಙೇ ಪ್ರತ್ಯಯ ಪರದಲ್ಲಿರುವಾಗ ಯುಷ್ಮದ್, ಅಸ್ಮದ್ ಶಬ್ದಗಳ ಮ ಪರ್ಯಂತಕ್ಕೆ ಅಂದರೆ ಯುಷ್ಮ್-ಅಸ್ಮ್‌ಗಳಿಗೆ ಕ್ರಮವಾಗಿ ತುಭ್ಯ-ಮಹ್ಯ ಆದೇಶಗಳು ಬರುವುವು ಎಂಬುದರಿಂದ ಯುಷ್ಮ್‌ಗೆ ತುಭ್ಯ ಆದೇಶ. ತುಭ್ಯ+ಅದ್+ಙೇ, **'ಅತೋಗುಣೇ'** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ತುಭ್ಯದ್+ಙೇ **'ಙೇಪ್ರಥಮಯೋರಮ್'** (ಪಾ. ಸೂ. ೭-೧-೨೮) ಎಂಬುದರಿಂದ ಙೇಗೆ ಅಮ್ ಆದೇಶ ತುಭ್ಯದ್+ಅಮ್ **'ಶೇಷೇಲೋಪಃ'** (ಪಾ. ಸೂ. ೭-೨-೯೦) ಅದ್‌ಗೆ ಲೋಪ. ಶೇಷೇಲೋಪವು ಅಂತ್ಯ ವರ್ಣಕ್ಕೆ ಎಂಬ ಪಕ್ಷದಲ್ಲಿ ದಕಾರಕ್ಕೆ ಲೋಪ ಬಂದರೆ **'ಅಮಿಪೂರ್ವಃ'** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪ ತುಭ್ಯಮ್ ಎಂದು ಆಗುತ್ತೆ. ಅಂತ್ಯಲೋಪ ಪಕ್ಷದಲ್ಲಿ ಪೂರ್ವರೂಪದಿಂದ ಬಂದ ಏಕಾದೇಶವು **'ಏಕಾದೇಶ ಉದಾತ್ತೇನೋದಾತ್ತಃ'** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತವಾಗಬೇಕಾಗುವುದು. ಅಂದರೆ ತುಭ್ಯಮ್ ಎಂಬಲ್ಲಿ ಕೊನೆಯ ಅಕಾರವು ಉದಾತ್ತ ಎಂದು ಏರ್ಪಡುತ್ತಿತ್ತು. ಟಿಲೋಪ ಪಕ್ಷದಲ್ಲಿ **'ಅನುದಾತ್ತಸ್ಯಚ ಯತ್ರೋದಾತ್ತಲೋಪಃ'** (ಪಾ. ಸೂ. ೬-೧-೧೬೧) ಎಂಬ ಉದಾತ್ತ ನಿವೃತ್ತಿಸ್ವರದಿಂದ ವಿಭಕ್ತಿಯು ಉದಾತ್ತವಾಗಬೇಕಾಗುತ್ತಿತ್ತು. ಹೀಗೆ ಬಂದರೆ **'ಙಯಿ ಚ'** (ಪಾ. ಸೂ. ೬-೧-೨೧೨) ಙೇಪ್ರತ್ಯಯ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತೆ.

**ಇನ್ದುಭಿಃ**—**'ಉನ್ದೀ ಕ್ಲೇದನೇ'** ಧಾತು **'ಉನ್ದೇರಿಚ್ಚಾದೇಃ'** (ಉ. ಸೂ ೧-೧೨) ಉನ್ದ್ ಧಾತು ವಿನ ಮುಂದೆ ಉ ಪ್ರತ್ಯಯವೂ ಮೊದಲನೆಯ ಉಕಾರಕ್ಕೆ ಇಕಾರಾದೇಶವೂ ಬರುವುದು ಎಂಬುದರಿಂದ ಉಪ್ರತ್ಯಯ. ಉಕಾರಕ್ಕೆ ಇಕಾರ ಬಂದರೆ ಇನ್ದು ಎಂದಾಗುತ್ತೆ. **'ಧಾನ್ಯೇನಿತ್'** (ಉ. ಸೂ. ೧-೯) ಎಂಬುದರಿಂದ ನಿತ್ ಎಂಬುದು ಈ ಸೂತ್ರದಲ್ಲಿ ಅನುವೃತ್ತವಾಗುತ್ತೆ. ಅದರಿಂದ ಪ್ರತ್ಯಯವು ನಿತ್ ಆಗುವುದು ಎಂದು ಏರ್ಪಡುವುದು ಏವಂಚ **'ಞ್ನಿತ್ಯಾದಿರ್ನಿತ್ಯಮ್'** (ಪಾ. ಸೂ. ೬-೧-೧೯೭) ಎಂಬುದರಿಂದ ಇದು ಆದ್ಯುದಾತ್ತ.

**ಯುಕ್ತಾನ್**—ದ್ವಿತೀಯಾ ಬಹುವಚನಾಂತ ಯುಕ್ತಾನ್+ಅನು ಇವಕ್ಕೆ ಸಂಹಿತಾಕಾಲದಲ್ಲಿ **'ದೀರ್ಘಾ ದಟಿಸಮಾನಪಾದೇ'** (ಪಾ. ಸೂ. ೮-೩-೯) ನಕಾರವೂ ಅಟ್‌ಪ್ರತ್ಯಾಹಾರಕ್ಕೆ ಸೇರಿದ ವರ್ಣವೂ ಒಂದೇ ಪಾದ

ದಲ್ಲಿದ್ದರೆ, ಆ ಅಡ್ವರ್ಣದ ಹಿಂದಿರುವ ಸಕಾರವು ದೀರ್ಘವರ್ಣಕ್ಕಿಂತಲೂ ಪರದಲ್ಲಿರುವಾಗ ಅದಕ್ಕೆ ರು ಆದೇಶ ಬರುತ್ತೆ ಎಂಬುದರಿಂದ ನಕಾರಕ್ಕೆ ರು ಆದೇಶ ಯುಕ್ತಾ್ರ್+ಅನು ಈಗ '**ಅಟೋऽಟನಿತ್ಯಮ್**' (ಪಾ. ಸೂ. ೮-೩-೩) ಅಡ್ವರ್ಣದ ಹಿಂದೆ ಇರುವ '**ರು**'ವಿನ ಹಿಂದೆ ಇರುವ ದೀರ್ಘಾಕಾರಕ್ಕೆ ನಿತ್ಯವಾಗಿ ಅನುನಾಸಿಕವು ಬರುವುದು. ಎಂಬುದರಿಂದ ಆಕಾರಕ್ಕೆ ಅನುನಾಸಿಕ, ಯುಕ್ತಾ̐ರ್+ಅನು '**ಭೋಭಗೋ ಅಘೋ ಅಪೂರ್ವಸ್ಯಯೋऽಶಿ**' (ಪಾ. ಸೂ. ೮-೩-೧೭) ಎಂಬುದರಿಂದ ರ್‌ಗೆ ಯತ್ವ '**ಲೋಪಶ್ಶಾಕಲ್ಯಸ್ಯ**' (ಪಾ. ಸೂ ೮-೩-೧೯) ಎಂಬುದರಿಂದ ಯ ಲೋಪ, ಪೂರ್ವತ್ರಾಸಿದ್ಧಮ್ (ಪಾ. ಸೂ. ೮-೨-೧) ಎಂಬುದರಿಂದ ಸವರ್ಣದೀರ್ಘವನ್ನು ಮಾಡುವಾಗ ಯಲೋಪವು ಅಸಿದ್ಧವಾಗುವುದು. ಆದ್ದರಿಂದ ಸವರ್ಣದೀರ್ಘ ಬರುವುದಿಲ್ಲ.

**ಅನುಸೇಷಿಧತ್**—'**ಷಿಧು ಗತ್ಯಾಂ**' ಧಾತು, '**ಧಾತೋರೇಕಾಚೋಹಲಾದೇಃ ಕ್ರಿಯಾಸಮಭಿಹಾರೇಯಙ್**' (ಪಾ. ಸೂ. ೩-೧-೨೨) ಪೌನಃಪುನ್ಯ, ಭೃಶಾರ್ಥ ಇವು ತೋರುವಾಗ ಏಕಾಚ್ಚವೂ ಹಲಾದಿಯೂ ಆದ ಧಾತುವಿನ ಮುಂದೆ ಯಙ್ ಬರುತ್ತೆ ಎಂಬುದರಿಂದ ಯಙ್ ಷಿಧ್+ಯ '**ಧಾತ್ವಾದೇಃ ಷಃ ಸಃ**' (ಪಾ. ಸೂ. ೬-೧-೬೪) ಷಕಾರಕ್ಕೆ ಸಕಾರ. ಸಿಧ್+ಯ '**ಯಙೋऽಚಿಚ**' (ಪಾ.ಸೂ. ೨-೪-೭೪) ಅಚ್ಪ್ರತ್ಯಯ ಪರದಲ್ಲಿದ್ದರೂ ಅಚ್ಪ್ರತ್ಯಯ ಪರದಲ್ಲಿಲ್ಲದಿದ್ದರೂ ಯಙ್‌ಗೆ ಲುಕ್ ಬರುತ್ತೆ ಎಂಬುದರಿಂದ ಯಙ್‌ಗೆ ಲುಕ್ (ಲೋಪ) ಸಿಧ್ ಎಂದೇ ಇರುವುದು. ಹೀಗೆ ಯಙ್‌ಗೆ ಲುಕ್ ಬಂದರೂ '**ಪ್ರತ್ಯಯಲೋಪೇಪ್ರತ್ಯಯಲಕ್ಷಣಮ್**' (ಪಾ. ಸೂ. ೧-೧-೬೨) ಪ್ರತ್ಯಯಕ್ಕೆ ಲೋಪಬಂದಿದ್ದರೂ, ಪ್ರತ್ಯಯನಿಮಿತ್ತವಾದಕಾರ್ಯವು ಬರುವುದು ಎಂಬುದರಿಂದ ಯಙ್‌ಗೆ ಲೋಪ ಬಂದಿದ್ದರೂ ಯಙ್ ಇದ್ದರೆ ಯಾವ ಕಾರ್ಯವು ಬರುತ್ತಿತ್ತೋ ಅದು ಈಗಲೂ ಬರುತ್ತದೆ. ಆದರೆ ಇಲ್ಲಿ ಲುಕ್ ಶಬ್ದವನ್ನುಚ್ಚರಿಸಿ ಲೋಪ ಬಂದಿದೆ. ಆದ್ದರಿಂದ '**ನಲುಮತಾಂಗಸ್ಯ**' (ಪಾ. ಸೂ. ೧-೧-೬೩) ಎಂಬುದರಿಂದ ಪ್ರತ್ಯಯಲಕ್ಷಣಕ್ಕೆ ನಿಷೇಧಬರಲಿ ಎನ್ನಬಹುದು. ನಲುಮತಾಂಗಸ್ಯ ಎಂಬ ಸೂತ್ರಕ್ಕೆ ಲುಶಬ್ದವನ್ನು ಹೊಂದಿರುವ ಲುಕ್-ಶ್ಲು-ಲುಪ್ ಈ ಶಬ್ದಗಳನ್ನುಚ್ಚರಿಸಿ ಲೋಪಬಂದಿರುವೆಡೆಗಳಲ್ಲಿ ಲುಪ್ತಪ್ರತ್ಯಯ ನಿಮಿತ್ತಕವಾದ ಅಂಗೋದ್ದೇಶ್ಯಕವಾದ ಕಾರ್ಯವು ಅಂಗಾಧಿಕಾರವಿಹಿತವಾಗಿದ್ದರೂ ಸರಿಯೇ, ಅಂಗಾಧಿಕಾರ ವಿಹಿತವಲ್ಲದೆ ಇದ್ದರೂ ಸರಿಯೇ, ಬರುವುದಿಲ್ಲ ಎಂದು ಅರ್ಥವು ಪ್ರಕೃತ ದ್ವಿತ್ವವು ಯಙಂತಕ್ಕೆ ಬರುತ್ತೆ. ಆದ್ದರಿಂದ ಅದು ಅಂಗೋದ್ದೇಶ್ಯವಾದ ಕಾರ್ಯವಲ್ಲ. ಆದಕಾರಣ ಈ ಪ್ರತಿಷೇಧವು ಇಲ್ಲಿ ಬರುವುದಿಲ್ಲ. '**ಸನ್ಯಙೋಃ**' (ಪಾ. ಸೂ. ೬-೧-೯) ಸನ್ನಂತ ಅಥವಾ ಯಙಂತ ಧಾತುವಿನ ಮೊದಲನೆಯ ಏಕಾಚ್ಚಿಗೆ ದ್ವಿತ್ವ ಬರುತ್ತೆ, ಅಜಾಧಿ ಧಾತುವಾಗಿದ್ದರೆ ಎರಡನೆಯ ಏಕಾಚ್ಚಿಗೆ ದ್ವಿತ್ವ ಬರುತ್ತದೆ ಎಂಬುದರಿಂದ ದ್ವಿತ್ವ ಬಂದರೆ ಸಿಧ್+ಸಿಧ್. '**ಹಲಾದಿಶ್ಶೇಷಃ**' (೭-೪-೬೦) ಅಭ್ಯಾಸದ ಮೊದಲನೆಯ ವ್ಯಂಜನವು ನಿಲ್ಲುವುದು ಮಿಕ್ಕ ಅಭ್ಯಾಸದ ವ್ಯಂಜನಗಳಿಗೆ ಲೋಪ ಬರುವುದು ಎಂಬುದರಿಂದ ಧ್‌ಗೆ ಲೋಪ ಸಿ+ಸಿಧ್. '**ಗುಣೋಯಙ್‌ಲುಕೋಃ**' (ಪಾ. ಸೂ. ೭-೪-೮೨) ಯಙ್‌ನಲ್ಲಿಯೂ ಯಙ್ ಲುಕ್ಕಿನಲ್ಲಿಯೂ ಅಭ್ಯಾಸಕ್ಕೆ ಗುಣ ಬರುವುದು ಎಂಬುದರಿಂದ ಸಿಗೆ ಗುಣ. ಇಕಾರ ಏಕಾರ-'ಸೇಸಿಧ್' '**ಇಣ್ಕೋಃ**' (ಪಾ. ಸೂ. ೮-೩-೫೭) ಇಣ್ ಪ್ರತ್ಯಾಹಾರದ ವರ್ಣಗಳ ಮುಂದೆ ಇರುವ ಸಕಾರಕ್ಕೆ ಮೂರ್ಧನ್ಯಾದೇಶ (ಷತ್ವ) ಬರುವುದು ಎಂಬುದರಿಂದ ಸೇಗಿಂತಲೂ ಪರದಲ್ಲಿ ಸಕಾರಕ್ಕೆ ಷಕಾರ ಸೇಷಿಧ್.

**ಸನ್‌ಕ್ಯಚ್‌ಕಾಮ್ಯಚ್ ಕ್ಯಙ್ ಕ್ಯಷೋಥಾಚಾರಕ್ವಿಬ್ಣಿಜ್ಯಙೌ ತಥಾ ।**
**ಯಗಾಯ ಈಯಙ್ ಣಿಙ್ ಚೇತಿ ದ್ವಾದಶಾಮೀ ಸನಾದಯಃ ॥**

ಎಂದು ಸನಾದಿಗಳನ್ನು ಪರಿಗಣನೆ ಮಾಡಿರುವರು. ಏವಂಚ ಯಙಂತವು ಸನಾದ್ಯಂತವಾಗುತ್ತೆ. ತಥಾಚ '**ಸನಾ-**

**ದ್ಯನ್ತಾ ಧಾತವಃ'** (ಪಾ. ಸೂ. ೩-೧-೩೨) ಸನಾದಿ ಪ್ರತ್ಯಯಗಳನ್ನು ಕೊನೆಯಲ್ಲಿ ಹೊಂದಿರುವವು ಧಾತು ಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಸೇಷಿಧ್ ಎಂಬುದಕ್ಕೆ ಧಾತು ಸಂಜ್ಞೆ ಬರುತ್ತದೆ. ಏವಂಚ, **'ಲಟಶ್ಶತೃಶಾನಚಾವಪ್ರಥಮಾಸ್ ಮಾನಾಧಿಕರಣೇ'** (ಪಾ. ಸೂ. ೩-೨-೧೨೪) ಎಂಬುದರಿಂದ ಲಟ್ ಪ್ರತ್ಯಯಕ್ಕೆ ಶತೃ ಬಂದರೆ ಸೇಷಿಧ್+ಅತ್. **'ಕರ್ತರಿಶಪ್'** (ಪಾ. ಸೂ ೩-೧-೬೮) ಎಂಬುದರಿಂದ ಶಪ್ ವಿಕರಣ. **'ಚರ್ಕರೀತಂ ಪರಸ್ಮೈ ಪದಮ್ ಅದಾದಿವಚ್ಚ ದ್ರಷ್ಟವ್ಯಂ'** (ಋ. ಸಂ. ೧-೮-೪) ಚರ್ಕರಿತಂ ಎಂದು ಯಙ್ಲುಗಂತಕ್ಕೆ ಸಂಜ್ಞೆ. ಆದು ಪರಸ್ಮೈಪದವೇ ಆಗುವುದು. ಅದು ಅದಾದಿಯಲ್ಲಿದ್ದಂತೆಯೂ ಆಗುವುದು ಎಂಬುದರಿಂದ ಯಙ್ಲುಗಂತವು ಅದಾದಿಯಲ್ಲಿದ್ದಂತೆ ಆಯಿತು. ಆದ್ದರಿಂದ **'ಅದಿಪ್ರಭೃತಿಭ್ಯಃ ಶಪಃ'** (ಪಾ. ಸೂ. ೨-೪-೭೨) ಎಂಬುದರಿಂದ ಶಪ್‌ಗೆ ಲುಕ್ ಬರುತ್ತೆ. ಇದೇ ಅರ್ಥವು ಅದಾದಿಯಲ್ಲಿ ಪಠಿಸಿರುವ **'ಚರ್ಕರೀತಂಚ'** ಎಂಬ ಗಣಸೂತ್ರದಿಂದ ಏರ್ಪಡುತ್ತೆ. **'ಅಥ ತ್ರಯಃ ಪರಸ್ಮೈಪದಿನಃ'** ಎಂದು ಪ್ರತಿಜ್ಞೆಮಾಡಿ ಷಸ-ಸಸ್ತಿ ಸ್ವಪ್ನೇ, ವಶ ಕಾನ್ತೌ ಧಾತುಗಳನ್ನು ಪಠಿಸಿ ನಂತರ ಈ ಗಣಸೂತವಿರುವುದರಿಂದ ಯಙ್ಲುಙಂತವು ಪರಸ್ಮೈಪದವೆಂದು ಏರ್ಪಡುತ್ತೆ. ಅದಾದಿಯಲ್ಲಿ ಪಾಠಮಾಡಿರುವುದರಿಂದ ಅದಾದಿಯೂ ಆಗುತ್ತೆ. ಏವಂಚ ಯಾವ ವಿಕರಣದ ಧಾತುವಿನ ಮುಂದೆಯಾದರೂ ಸರಿಯೆ ಯಙ್‌ಗೆ ಲುಕ್ ಬಂದಿದ್ದರೆ ಅಲ್ಲಿ ಶಪ್ ವಿಕರಣವೇ ಬರುತ್ತೆ ಅದಕ್ಕೆ ಲುಕ್ ಬರುತ್ತದೆಯೆಂದೂ ಏರ್ಪಡುವುದು. ಸೇಷಿಧತ್, ಎಂಬುದರ ಮುಂದೆ ಸು ಪ್ರತ್ಯಯವನ್ನಿಟ್ಟಾಗ **'ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ'** (ಪಾ. ಸೂ. ೭-೧-೭೦) ಎಂಬುದರಿಂದ ನುಮ್ ಪ್ರಾಪ್ತವಾಗುತ್ತೆ. ಆದಕ್ಕೆ **'ನಾಭ್ಯಸ್ತಾಚ್ಛತುಃ'** (ಪಾ. ಸೂ. ೭-೧-೭೮) ಅಭ್ಯಸ್ತದ ಮುಂದೆ ಇರುವ ಶತೃಪ್ರತ್ಯಯಕ್ಕೆ ನುಮ್ ಬರುವುದಿಲ್ಲ ಎಂದು ಪ್ರತಿಷೇಧ ಬರುತ್ತದೆ **'ಉಭೇ-ಅಭ್ಯಸ್ತಮ್'** (ಪಾ. ಸೂ. ೬-೧-೫) ಷಾಷ್ಠಸೂತ್ರದಿಂದ ದ್ವಿತ್ವವನ್ನು ಹೊಂದಿರುವ ಶಬ್ದ ಸಮುದಾಯಕ್ಕೆ ಅಭ್ಯಸ್ತವೆಂದು ಸಂಜ್ಞೆ ಬರುತ್ತೆ ಎಂಬುದರಿಂದ **'ಸೇಷಿಧ್'** ಎಂಬುದಕ್ಕೆ ಅಭ್ಯಸ್ತ ಸಂಜ್ಞೆ ಇದೆ, ಶತೃಪ್ರತ್ಯಯದ ಸ್ವರವೇ ನಿಲ್ಲಬೇಕಾಗಿ ಬಂದರೆ **'ಅಭ್ಯಸ್ತಾನಾಮಾದಿಃ'** (ಪಾ. ಸೂ. ೬-೧-೧೮೯) ಇಡಾಗಮ ಭಿನ್ನವಾದ ಅಜಾದಿಯಾದ ಲಸ್ಥಾನಿಕಸಾರ್ವಧಾತುಕವು ಪರದಲ್ಲಿರುವಾಗ ಅಭ್ಯಸ್ತದ ಆದಿಯು ಉದಾತ್ತವಾಗುವುದು ಎಂಬುದರಿಂದ ಸೇ ಎಂಬುದು ಉದಾತ್ತವಾಗುತ್ತೆ.

**ಗೋಭಿಃ—'ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ'** (ಪಾ. ಸೂ. ೬-೧-೧೬೮) ಸು-ಎಂದರೆ ಸಪ್ತಮೀ ಬಹುವಚನ, ಸಪ್ತಮೀ ಬಹುವಚನ ಪ್ರತ್ಯಯವು ಪರದಲ್ಲಿರುವಾಗ ಒಂದೇ ಸ್ವರವನ್ನು ಹೊಂದಿರುವ ಯಾವ ಶಬ್ದವಿದೆಯೋ, ಆದಕ್ಕಿಂತಲೂ ಪರವಲ್ಲಿರುವ ತೃತೀಯಾದಿವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರವು ಪ್ರಾಪ್ತವಾದರೆ ಅದಕ್ಕೆ ಮುಂದೆ ಹೇಳುವ ಸೂತ್ರದಿಂದ ನಿಷೇಧ ಬರುತ್ತೆ. **'ನ ಗೋಶ್ವನ್ಸಾವವರ್ಣರಾಡಙ್ಕ್ರುಙ್ಕೃದ್ಭ್ಯಃ'** (ಪಾ. ಸೂ. ೬-೧-೧೮೨) ಗೋ, ಶ್ವನ್ ಶಬ್ದಗಳು, ಪ್ರಥಮೈಕವಚನದಲ್ಲಿ ಅವರ್ಣಾಂತವಾದ ಶಬ್ದಗಳು, ಕ್ವಿಬಂತವಾದ ರಾಟ್ ಶಬ್ದ-ಅಞ್ಚು ಧಾತುವಿನ ಮುಂದೆ ಕ್ವಿಪ್ ಬಂದು ನಿಷ್ಪನ್ನವಾದ ಅಙ್ ಶಬ್ದ, ಕೃಞ್ಚ ಗತಿಕೌಟಿಲ್ಯಾಲ್ಪೀಭಾವಯೋಃ ಧಾತುವಿನ ಮುಂದೆ ಕ್ವಿನ್ ಬಂದು ನಿಷ್ಪನ್ನವಾದ ಕ್ರುಙ್ ಶಬ್ದ, ಕೃಞ್ ಧಾತುವಿನ ಮುಂದೆ ಕ್ವಿಪ್ ಬಂದು ನಿಷ್ಪನ್ನವಾದ ಕೃತ್ ಶಬ್ದ, ಇವುಗಳ ಮುಂದೆ ಇರುವ ವಿಭಕ್ತಿಗೂ ಮತುಪ್ಪಿಗೂ ಷಷ್ಠಾಧ್ಯಾಯಸೂತ್ರವಿಹಿತವಾದ ಉದಾತ್ತವು ಬರುವುದಿಲ್ಲ ಎಂದು ಸೂತ್ರಾರ್ಥ. **'ಚೌ'** (ಪಾ. ಸೂ. ೬-೧-೨೨೨) ಈ ಸೂತ್ರದಲ್ಲಿ **'ನಗೋಶ್ವನ್'** ಎಂಬ ಸೂತ್ರವನ್ನು ಪ್ರಸ್ತಾಪಿಸಿ, **'ಕಸ್ಯತರ್ಹಿ? ಯೇನ ಕೇನ ಚಿಲ್ಲಕ್ಷಣೇನ**

**ಪ್ರಾಪ್ತಸ್ಯ ವಿಭಕ್ತಿಸ್ವರಸ್ಯ ಪ್ರತಿಷೇಧಮ್. ಯದಿ ವಿಭಕ್ತಿಸ್ವರಸ್ಯ ಪ್ರತಿಷೇಧಃ, ವೃಕ್ಷವಾನ್, ಪ್ಲಕ್ಷವಾನ್, ಅತ್ರ ನ ಪ್ರಾಪ್ನೋತಿ । ಮತುಬ್‌ಗ್ರಹಣಮಪಿ ಪ್ರಕೃತಮನುವರ್ತತೇ ಕ್ವ ಪ್ರಕೃತಮ್ ? ' ಹ್ರಸ್ವನುಡ್ಭ್ಯಾಂ ಮತುಪ್, ಇತಿ '** ಎಂಬ ಮಹಾಭಾಷ್ಯದಲ್ಲಿ ಮತುಪ್ ವಿಭಕ್ತಿಸ್ವರಗಳಿಗೆ ಇದು ನಿಷೇಧವೆಂದೂ, ಷಾಷ್ಠಸ್ವರ ಸಾಮಾನ್ಯಕ್ಕೆ ನಿಷೇಧವೆಂದೂ ಸ್ಪಷ್ಟವಾಗಿದೆ. ಈ ಅಂಶಗಳು ಇದೇ ಭಾಷ್ಯದ ಕೈಯಟದಿಂದಲೂ ಸಿದ್ಧವಾಗುವವು.

**ಚರ್ಕೃಷತ್—'ಕೃಷ ವಿಲೇಖನೇ '** ಧಾತು. **'ಧಾತೋರೇಕಾಚಃ '** (ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಅದಕ್ಕೆ **'ಯಙೋಽಚಿ ಚ '** (ಪಾ. ಸೂ. ೨-೪-೭೪) ಎಂಬುದರಿಂದ ಲುಕ್, ಪ್ರತ್ಯಯ ಲಕ್ಷಣದಿಂದ ಯಙಂತ. **'ಸನ್ಯಙೋಃ '** (ಪಾ. ಸೂ. ೬-೧-೯) ಎಂಬುದರಿಂದ ದ್ವಿತ್ವ. ಕೃಷ್+ಕೃಷ್, **'ಉರತ್ '** (ಪಾ.ಸೂ. ೭-೪-೬೬) ಪ್ರತ್ಯಯ ಪರದಲ್ಲಿರುವಾಗ ಅಭ್ಯಾಸದ ಋ ಗೆ ಅಕಾರ ಬರುತ್ತೆ ಎಂಬುದರಿಂದ ಋಗೆ ಅರ ಪ್ರತ್ಯಯ ಲಕ್ಷಣದಿಂದ ಪ್ರತ್ಯಯವು ಪರದಲ್ಲಿದೆ ಎಂದು ಇಟ್ಟುಕೊಳ್ಳಬೇಕು. ಯಙ್ ಗೆ ಲುಕ್ ಬಂದಿದ್ದರೂ ಪ್ರತ್ಯಯ ಲಕ್ಷಣದಿಂದ **' ಉರತ್ '** ಎಂಬುದು ಬಂದೇ ಬರುವುದು ಎಂದು **'ನಲುಮತಾಂಗಸ್ಯ'** ಎಂಬ ಸೂತ್ರದಲ್ಲಿ ಶೇಖರಕಾರರು ಸ್ಪಷ್ಟಪಡಿಸಿರುವರು ಕರ್+ಕೃಷ್, **' ಹಲಾದಿಶ್ಶೇಷಃ '** (ಪಾ. ಸೂ. ೭-೪-೬೦) ಎಂಬುದರಿಂದ ರೇಫಕ್ಕೆ ನಿವೃತ್ತಿ. **'ಅಭ್ಯಾಸೇಚರ್ಚ '** (ಪಾ. ಸೂ. ೮-೪-೫೪) ಅಭ್ಯಾಸದ ಝಲ್ ವರ್ಣಗಳಿಗೆ ಚರ್ ವರ್ಣಗಳೂ ಜರ್ ವರ್ಣಗಳೂ ಬರುವುವು, ಎಂಬುದರಿಂದ, ಮೊದಲನೆ ಕಕಾರಕ್ಕೆ ಚಕಾರ ಚಕೃಷ್ **' ರುಗ್ರಿಕೌ ಚ ಲುಕಿ '** (ಪಾ. ಸೂ. ೭-೪-೯೧) ಯಙ್ಲುಕ್ಕಿನಲ್ಲಿ ಋಕಾರೋಪಧಕವಾದ (ಉಪಾಂತ್ಯ ವರ್ಣ ಋಕಾರವಾದ) ಧಾತುವಿನ ಅಭ್ಯಾಸಕ್ಕೆ ರುಕ್, ರಿಕ್, ರೀಕ್ ಈ ಆಗಮಗಳು ಬರುತ್ತವೆ. **'ರೀಗೃದುಪಧಸ್ಯಚ '** (ಪಾ. ಸೂ. ೭-೪-೯೦) ಎಂಬುದರಿಂದ ಋದುಪಧಸ್ಯ ರೀಕ್ ಎಂಬೀ ಪದಗಳು ಪೂರ್ವ ಸೂತ್ರಕ್ಕೆ ಅನುವೃತ್ತಗಳಾಗುವವು. ಚರ್ಕೃಷ್ ಎಂಬುದರ ಮುಂದೆ **'ಲಿಙರ್ಥೇ ಲೇಟ್ '** (ಪಾ. ಸೂ. ೩-೪-೭) ಎಂಬುದರಿಂದ ಲೇಟ್ ಆದಕ್ಕೆ ತಿಪ್, **'ಇತಶ್ಚಲೋಪಃ ಪರಸ್ಮೈಪದೇಷು '** (ಪಾ. ಸೂ. ೩-೪-೯೭) ಪರಸ್ಮೈಪದದಲ್ಲಿ ಲೇಟ್ ನ ಸ್ಥಾನದಲ್ಲಿ ಬಂದ ತಿಙ್ ನ ಇಕಾರಕ್ಕೆ ಲೋಪ ಬರುತ್ತೆ ಎಂಬುದರಿಂದ ಇಕಾರಕ್ಕೆ ಲೋಪ. **'ಲೇಟೋಽಡಾಟೌ '** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. ಚರ್ಕೃಷ್+ಅತ್-ವಿಕರಣ ಶಪ್- **'ಅದಿಪ್ರಭೃತಿಭ್ಯಃ ಶಪಃ '** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್-**'ಪುಗಂತಲಘೂಪದಸ್ಯ ಚ ,** (ಪಾ. ಸೂ ೭-೩-೮೬) ಸಾರ್ವಧಾತುಕಾರ್ಧಧಾತುಕಪ್ರತ್ಯಯಗಳು ಪರದಲ್ಲಿರುವಾಗ ಪುಗಂತ ಅಥವಾ ಲಘೂಪಧವಾದ ಅಂಗದ ಇಗ್ವರ್ಣಕ್ಕೆ ಗುಣ ಬರುತ್ತೆ ಎಂಬುದರಿಂದ ಗುಣಕ್ಕೆ ಪ್ರಾಪ್ತಿ ಬರುತ್ತೆ. ಆದರೆ **'ನಾಭ್ಯಸ್ತಸ್ಯಾಚಿಪಿತಿ ಸಾರ್ವಧಾತುಕೇ '** (ಪಾ. ಸೂ. ೭-೩-೮೭) ಅಜಾದಿಯೂ ಪಕಾರೇತ್ಸಂಜ್ಞಕವೂ ಆದ ಸಾರ್ವಧಾತುಕ ಪ್ರತ್ಯಯವು ಪರದಲ್ಲಿರುವಾಗ ಲಘೂಪಧಗುಣವು ಬರುವುದಿಲ್ಲ ಎಂದು ನಿಷೇಧ ಬರುತ್ತೆ. ಆದಕಾರಣ ಗುಣ ಬರುವುದಿಲ್ಲ. **'ತಿಙ್ಙತಿಙಃ '** (ಪಾ. ಸೂ. ೮-೧-೨೮) ತಿಙಂತವಲ್ಲದ ಶಬ್ದದ ಮುಂದೆ ಇರುವ ತಿಙಂತವು ಅನುದಾತ್ತವಾಗುವುದು ಎಂಬುದರಿಂದ **' ನ '** ಎಂಬ ತಿಙಂತವಲ್ಲದ ಶಬ್ದದ ಮುಂದೆ ಇರುವ ಚರ್ಕೃಷತ್ ಎಂಬ ತಿಙಂತವು ಸರ್ವಾನುದಾತ್ತವಾಗುವುದು. ॥ ೧೫ ॥

॥ ಸಂಹಿತಾಪಾಠಃ ॥

ಅಂಬಯೋ ಯಂತ್ಯಧ್ವಭಿರ್ಜಾಮಯೋ ಅಧ್ವರೀಯತಾಂ ।
ಪೃಂಚತೀರ್ಮಧುನಾ ಪಯಃ ॥ ೧೬ ॥

॥ ಪದಪಾಠಃ ॥

ಅಂಬಯಃ । ಯಂತಿ । ಅಧ್ವಽಭಿಃ । ಜಾಮಯಃ । ಅಧ್ವರಿಽಯತಾಂ ।
ಪೃಂಚತೀಃ । ಮಧುನಾ । ಪಯಃ ॥ ೧೬ ॥

॥ ಸಾಯಣಭಾಷ್ಯಂ ॥

ಅಪೋನಪ್ತ್ರೀಯೆ ಏಕಧನಾಸೂಪಾನೀತಾಸು ಸ್ವಯಮನುಗಚ್ಛನ್ನಂಬಯ ಇತಿ ದ್ವೇ ಅನುಬ್ರೂಯಾತ್ । ತೃತೀಯಯಾಪೋ ದೇವೀರಿತ್ಯನಯೈಕಧನಾಸು ಹವಿರ್ಧಾನಂ ಪ್ರವಿಷ್ಟಾಸು ಸ್ವಯಮನುಪ್ರವಿಶೇತ್ । ತಥೈವ ಸೂತ್ರಿತಂ । ಅಂಬಯೋ ಯಂತ್ಯಧ್ವಭಿರಿತಿ ತಿಸ್ರ ಉತ್ತಮಯಾನುಪ್ರಪದ್ಯೇತ । ಆ. ೫-೧ । ಇತಿ ॥

ಅಧ್ವರೀಯತಾಮಧ್ವರಮಾತ್ಮನ ಇಚ್ಛತಾಮಸ್ಮಾಕಮಂಬಯೋ ಮಾತೃಸ್ಥಾನೀಯಾ ಆಪಃ । ತಥಾ ಚ ಕೌಷೀತಕಿಬ್ರಾಹ್ಮಣೇ ಸಮಾಮ್ನಾಯತೇ । ಅಂಬಯೋ ಯಂತ್ಯಧ್ವಭಿರಿತ್ಯಾಪೋ ವಾ ಅಂಬಯ ಇತಿ । ತಾ ಆಪೋಽಧ್ವಭಿರ್ದೇವಯಜನಮಾರ್ಗೈರ್ಯಂತಿ । ಗಚ್ಛಂತಿ । ಕೀದೃಶ್ಯ ಆಪಃ । ಜಾಮಯೋ ಹಿತಕಾರಿಣ್ಯೋ ಬಂಧವಃ । ತಥಾ ಮಧುನಾ ಮಾಧುರ್ಯರಸೇನ ಯುಕ್ತಂ ಪಯಃ ಪೃಂಚತೀರ್ಗವಾದಿಷು ಯೋಜಯಂತ್ಯಃ ॥ ಅಂಬಯಃ । ರಬಿ ಲಬಿ ಅಬಿ ಶಬ್ದೇ । ಏತಸ್ಮಾದಚ ಇಃ । ಉ. ೪-೧೩೮ । ಇತಿ ಪ್ರಕರಣೇ ಬಾಹುಲಕಾದಿಃ । ಪ್ರತ್ಯಯಸ್ವರಃ । ಅಧ್ವಭಿಃ । ಅದೇರ್ಧ ಚ । ಉ. ೪-೧೧೫ । ಇತಿ ಕ್ವನಿಪ್ । ಪಿತ್ತ್ವಾತ್ಪ್ರತ್ಯಯಸ್ಯಾನುದಾತ್ತತ್ವೇ ಧಾತುಸ್ವರಃ । ಜಾಮಯಃ । ಜಮು ಅದನೇ । ಬಾಹುಲಕಾದಿಃ । ಅಧ್ವರೀಯತಾಂ । ಅಧ್ವರಶಬ್ದಾತ್ಸುಪ ಆತ್ಮನಃ ಕ್ಯಜಿತಿ ಕ್ಯಚ್ । ಕ್ಯಚಿ ಚೇತೀತ್ವಂ । ಅಪುತ್ರಾದೀನಾಮಿತಿ ವಕ್ತವ್ಯಂ । ಮ, ೭-೪-೩೫ । ಇತಿ ವಚನಾನ್ನ ಛಂದಸ್ಯಪುತ್ರಸ್ಯೇತೀತ್ವನಿಷೇಧಾಭಾವಃ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ಕವ್ಯಧ್ವರಪೃತನಸ್ಯ । ಪಾ. ೭-೪-೩೯ । ಇತ್ಯಕಾರಲೋಪೋಪಿ ನ ಭವತಿ । ಕ್ಯಚ್ಪ್ರತ್ಯಯಾಂತಧಾತೋರ್ಲಟಃ ಶತೃ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ತಯೋಃ ಕ್ಯಚಾ ಸಹೈಕಾದೇಶಃ । ಏಕಾದೇಶ ಉದಾತ್ತೇನೋದಾತ್ತ ಇತ್ಯಂತೋದಾತ್ತತ್ವೇ ಸತಿ ಶತುರನುಮೋ ನದ್ಯಜಾದೀ ಇತಿ ಷಷ್ಠ್ಯಾ ಉದಾತ್ತತ್ವಂ । ಪೃಂಚತೀಃ । ಪೃಚೀ

**ಸಂಪರ್ಕೇ । ಲಟಃ ಶತೃ । ರುಧಾದಿಭ್ಯಃ ಶ್ನಮ್ । ಶ್ನಸೋರಲ್ಲೋಪಃ । ಅನುಸ್ವಾರಪರಸವರ್ಣೌ । ಉಗಿತಶ್ಚೇತಿ ಙೀಪ್ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಶತುರನುಮ ಇತಿ ಙೀಪ ಉದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅಧ್ವರೀಯತಾಂ**—ಯಜ್ಞಾನುಷ್ಠಾನವನ್ನಪೇಕ್ಷಿಸುವ ನಮಗೆ । **ಜಾಮಯಃ**—ಬಂಧುಗಳಂತೆ ಹಿತ ವನ್ನುಂಟುಮಾಡುವ । **ಅಂಬಯಃ**—ಮಾತೃಸ್ವರೂಪರಾದ ಉದಕಗಳು (ಉದಕಾಭಿಮಾನಿದೇವತೆಗಳು) । **ಪಯಃ**-ಗೋವುಗಳ ಹಾಲನ್ನು । **ಮಧುನಾ**—ಮಾಧುರ್ಯರಸದಿಂದ । **ಪೃಂಚತೀಃ**—ಕೂಡಿರುವಂತೆ ಮಾಡುತ್ತಾ । **ಅಧ್ವಭಿಃ**—ದೇವಯಜನಮಾರ್ಗವಾಗಿ । **ಯಂತಿ**—ಪ್ರವಹಿಸುತ್ತವೆ ॥

॥ ಭಾವಾರ್ಥ ॥

ಉದಕಗಳು ( ನೀರು ) ಯಜ್ಞಾನುಷ್ಠಾನವನ್ನಪೇಕ್ಷಿಸುವ ನಮಗೆ ಮಾತೃಸ್ವರೂಪವಾಗಿರುವವು ಎಂದರೆ ತಾಯಿಯಂತೆ ಪೂಜ್ಯವಾಗಿರುವವು. ಬಂಧುಗಳಂತೆ ಹಿತವನ್ನುಂಟುಮಾಡುವುವು. ಗೋವುಗಳ ಹಾಲನ್ನು ಸಿಹಿಯಾಗುವಂತೆ ಮಾಡುವವು. ಇಂತಹ ಉದಕವು ನಮ್ಮ ಮಾರ್ಗದಲ್ಲಿ ಪ್ರವಹಿಸುತ್ತಿರುವುದು (ಹರಿಯುತ್ತಿರುವುದು)

English Translation.

The Sacred waters (dear mothers) of the Sacrificers are flowing by the way mixing the milk (of cows) with sweetness.

॥ ವಿಶೇಷವಿಷಯಗಳು ॥

**ಅಂಬಯಃ**--ಕೌಷೀತಕೀಬ್ರಾಹ್ಮಣದಲ್ಲಿ **ಅಂಬಯೋ ಯಂತ್ಯಧ್ವಭಿರಿತ್ಯಾಪೋ ವಾ ಅಂಬಯಃ** ಎಂದು ಅಂಬಯ ಎಂಬ ಶಬ್ದಕ್ಕೆ ಉದಕಗಳೆಂದು (ನೀರು) ಅರ್ಥವಿವರಣೆ ಇರುವುದು. ತಾಯಿಯನ್ನು ಅಂಬ ಎಂದು ಕರೆಯುವುದು ರೂಢಿಯಾಗಿರುವುದರಿಂದ ಇಲ್ಲಿ ಉದಕವನ್ನು ಪ್ರೀತಿವಾಚಕವಾದ ಶಬ್ದದಿಂದ ಸಂಬೋಧನೆ ಮಾಡಿರುವುದೆಂದು ತಿಳಿಯಬೇಕು. ಋಗ್ವೇದದಲ್ಲಿ ಆಪೋ ದೇವೀಃ ಎಂದು ಉದಕಾಭಿಮಾನಿದೇವತೆಗಳನ್ನು (ಅಥವಾ ಉದಕವನ್ನು) ಪೂಜ್ಯಸ್ತ್ರೀಯರಂತೆ ಪೂಜ್ಯಭಾವದಿಂದಲೇ ಕರೆಯುವುದು ರೂಢಿಯಾಗಿದೆ. ಅಲ್ಲದೆ ಈ ಉದಕಾಭಿಮಾನಿದೇವತೆಗಳನ್ನು ಯಾವಾಗಲೂ ಸ್ತ್ರೀಲಿಂಗದ ಬಹುವಚನದಲ್ಲಿಯೇ ಸಂಬೋಧನೆಮಾಡುವುದೂ ರೂಢಿಯಾಗಿದೆ ಈ ಆಪೋದೇವತಾಕವಾದ ಸೂಕ್ತಗಳು ಬಹುಗಂಭೀರವಾಗಿಯೂ ಅರ್ಥಗರ್ಭಿತವಾಗಿಯೂ ಭಕ್ತಿಭಾವದಿಂದ ಸಹಿತವಾಗಿ ಬಹುಸುಂದರವಾಗಿಯೂ ಇರುವವು.

**ಜಾಮಯಃ—ಹಿತಕಾರಿಣ್ಯೋ ಬಂಧವಃ** । ಹಿತೈಷಿಗಳಾದ ಬಂಧುಗಳು. ಈ ಶಬ್ದದ ಪ್ರಯೋಗವು ಋಗ್ವೇದದಲ್ಲಿ ೧-೩೧-೧೦; ೩-೫೭-೩; ೪-೨೫-೩; ೮-೧೦೨-೧೩; ೯-೨೬-೫; ೯-೬೫-೧; ೯-೬೬-೮; ೯-೮೯-೪; ೧೦-೧೦-೧೦ ಈ ಋಕ್ಕುಗಳಲ್ಲಿರುವುದು.

**ಅಧ್ವರೀಯತಾಂ—ಅಧ್ವರೇಣ (ಯಜ್ಞೇನ) ದೇವಯಜನಂ ಕರ್ತುಮಿಚ್ಛತಾಂ** ॥ ಯಜ್ಞಾನುಷ್ಠಾನವನ್ನು ಮಾಡಬೇಕೆಂದು ಅಪೇಕ್ಷಿಸುವ

**ಪೃಂಚತೀಃ—**ಮಿಶ್ರಯಂತ್ಯಃ--ಮಿಶ್ರಮಾಡುವವು.

**ಮಧುನಾ ಪಯಃ—**ಜಲವು ಜೀವನಾಧಾರಕ್ಕೆ ಅತ್ಯವಶ್ಯಕವಾದುದರಿಂದಲೂ, ನದೀ ಮೊದಲಾದ ಹರಿಯುತ್ತಿರುವ ಪ್ರವಾಹಜಲವು ಸಮುದ್ರದ ನೀರಿನಂತಲ್ಲದೆ ಸಿಹಿಯಾಗಿರುವುದರಿಂದಲೂ ಗೋವುಗಳು ಇಂತಹ ಜಲಪಾನದಿಂದ ರುಚಿಕರವಾದ ಹಾಲನ್ನು ಕೊಡುವುದರಿಂದಲೂ ಋಷಿಯು ಈ ಶಬ್ದಪ್ರಯೋಗಮಾಡಿರಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಅಂಬಯಃ—' ರಬಿ ಲಬಿ ಅಬಿ ಶಬ್ದೇ '** ಧಾತು, ಅಬಿ ಧಾತುವಿನ ಇಕಾರಕ್ಕೆ ಇತ್ಸಂಜ್ಞೆ ಲೋಪಗಳು ಬಂದಿವೆ. ಆದ್ದರಿಂದ ಇದು ಇದಿತ್ತು ಅಂದರೆ ಇಕಾರವನ್ನು ಇತ್ಸಂಜ್ಞಕವಾಗಿವುಳ್ಳದ್ದು, ಏವಂಚ **' ಇದಿತೋ-ನುಮ್ ಧಾತೋಃ '** (ಪಾ. ಸೂ. ೭-೧-೫೮) ಇದಿತ್ತಾದ ಧಾತುವಿನ ಕೊನೆಯ ಸ್ವರದ ಮುಂದೆ ನುಮ್ (ನ್ ಆಗಮ) ಬರುತ್ತೆ ಎಂಬುದರಿಂದ ನುಮಾಗಮ **' ಅಚ ಇಃ '** (ಉ. ಸೂ. ೪-೫೭೮) ಸ್ವರವನ್ನು ಕಡೆಯಲ್ಲಿ ಹೊಂದಿರುವ ಧಾತುವಿನ ಮುಂದೆ ಇ-ಪ್ರತ್ಯಯ ಬರುವುದು ಎಂದು ಇದರ ಅರ್ಥ. ಇಲ್ಲಿ ಯದ್ಯಪಿ ಅಮ್ಬ್ ಧಾತುವು ಅಜಂತವಲ್ಲ ಆದರೂ ಈ ಪ್ರಕರಣದಲ್ಲಿ ಬಹುಲಂ ಎಂದಿರುವುದರಿಂದ ಇಲ್ಲಿ ಇ-ಪ್ರತ್ಯಯ ಬರುತ್ತೆ. ಪ್ರತ್ಯಯಸ್ವರದಿಂದ ಇಕಾರ ಉದಾತ್ತ.

**ಅಧ್ವಭಿಃ—' ಅದೇರ್ಧಚ '** (ಉ. ಸೂ. ೪-೫೫೫) ಅದ ಭಕ್ಷಣೇ ಧಾತುವಿನ ಮುಂದೆ ಕ್ವನಿಪ್ ಪ್ರತ್ಯಯ ಬರುತ್ತೆ, ಧಾತುವಿನ ದಕಾರಕ್ಕೆ ಧಕಾರವೂ ಬರುತ್ತೆ ಎಂಬುದರಿಂದ ಕ್ವನಿಪ್ ಪ್ರತ್ಯಯ ಬಂದು ದ ಗೆ ಧ ಬಂದರೆ ಅಧ್ವನ್ ಎಂದಾಗುವುದು. ಕ್ವನಿಪ್ ಪ್ರತ್ಯಯ ಪಿತ್. ಆದ್ದರಿಂದ **' ಅನುದಾತ್ತೌಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ, ಧಾತುಸ್ವರವೇ ನಿಲ್ಲುವುದು.

**' ಜಾಮಯಃ—' ಜಮು ಅದನೇ '** ಧಾತು, ಇದರ ಮುಂದೆ ಬಹುಲಗ್ರಹಣದಿಂದ ಇಪ್ರತ್ಯಯ.

**ಅಧ್ವರೀಯತಾಂ—**ನ ವಿದ್ಯತೇ ಧ್ವರಃ-ಹಿಂಸಾ ಯಸ್ಮಿನ್ ಸಃ, ಅಧ್ವರಃ **' ನಞ್ಸುಭ್ಯಾಮ್ '** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತ. ಅಧ್ವರಂ ಆತ್ಮನಃ ಇಚ್ಛಂತೀತಿ ಅಧ್ವರೀಯನ್ತಃ ತೇಷಾಂ ಅಧ್ವರೀಯತಾಂ ಎಂದು ವಿಗ್ರಹ **' ಸು ಪ ಆತ್ಮನಃ ಕ್ಯಚ್ '** (ಪಾ. ಸೂ. ೩-೧-೮) **' ಪ್ರತ್ಯಯಗ್ರಹಣೇ ಯಸ್ಮಾತ್ಸವಿಹಿತಸ್ತದಾದೇಸ್ತದಂತಸ್ಯಗ್ರಹಣಮ್ '** (ಪರಿಭಾ ೨೪) ಎಂಬುದರಿಂದ ಸುಪಃ ಎಂಬಲ್ಲಿ ತದಂತಲಾಭ ಬರುತ್ತೆ. ಸುಬಂತಾತ್ ಎಂದಾಯಿತು, **' ಧಾತೋಃ ಕರ್ಮಣಃ ಸಮಾನಕರ್ತೃಕಾದಿಚ್ಛಾಯಾಂವಾ '** (ಪಾ.ಸೂ. ೩-೧-೭) ಎಂಬುದರಿಂದ ಕರ್ಮಣಃ, ಇಚ್ಛಾಯಾಂ, ವಾ, ಎಂಬ ಮೂರು ಪದಗಳು ಅನುವರ್ತಿಸುವವು. ಕರ್ಮಣಃ ಎಂಬುದು ಪಂಚಮ್ಯಂತಪದ, ಕರ್ಮವಾಚಕಾತ್ ಎಂದು ಏರ್ಪಟ್ಟಿತು ಯಾವುದನ್ನು ಕುರಿತು ಕರ್ಮ ಎಂದು. ಆಕಾಂಕ್ಷೆ ಬಂದರೆ ಇಚ್ಛಾಯಾ ಎಂದು ಉಪಸ್ಥಿತವಾಗಿರುವುದರಿಂದ ಇಷಿ ಧಾತುವನ್ನು ಕುರಿತು ಕರ್ಮವಾಗಿರುವ ಎಂದು ಸಿದ್ಧವಾಗುತ್ತೆ. ಆತ್ಮ ಶಬ್ದವು **'ಸ್ವ'** ಎಂದರೆ ತಾನು ಎಂಬ ಅರ್ಥವನ್ನು ಬೋಧಿಸುತ್ತದೆ. ತಾದರ್ಥ್ಯವನ್ನು ವಿವಕ್ಷಿಸಿದಾಗ ಇಲ್ಲಿ ಯದ್ಯಪಿ ಆತ್ಮನೇ ಎಂದು ಚತುರ್ಥೀವಿಭಕ್ತಿಯು ಉಚಿತವು. ಆದರೂ ತಾದರ್ಥ್ಯವನ್ನು ಶೇಷತ್ವೇನ

ವಿವಕ್ಷೆಮಾಡಿ **' ಷಷ್ಠೀಶೇಷೇ '** (ಪಾ. ಸೂ. ೨-೩-೫೦) ಎಂಬುದರಿಂದ ಷಷ್ಠೀವಿಭಕ್ತಿ ಬಂದಿದೆ. ಏವಂಚ ಆತ್ಮನಃ ಎಂಬುದಕ್ಕೆ ಸ್ವಾರ್ಥಕ್ಕಾಗಿ ಎಂದು ಅರ್ಥವು. ಸ್ವ-ಎಂದರೆ ಇಚ್ಛಿಸುವವನೇ ವಿವಕ್ಷಿತ. ಏವಂ ಚ ಇಚ್ಛಿಸುವವನ ಪ್ರಯೋಜನಕ್ಕಾಗಿ ಯಾವ ಕರ್ಮ ಕಾರಕವಿದೆಯೋ, ಆ ಕರ್ಮವಾಚಕವಾದ ಸುಬಂತದ ಮುಂದೆ ಇಚ್ಛಿಸುತ್ತಾನೆ ಎಂಬ ಅರ್ಥದಲ್ಲಿ ಕ್ಯಚ್ ಬರುತ್ತೆ ಎಂದು ಸೂತ್ರಾರ್ಥ. ಈ ಮಂತ್ರವು ಅಬ್ದೇವತಾಕವಾದಮಂತ್ರ. ಅಬ್ದೇವತೆಯನ್ನು ಸ್ತೋತ್ರಮಾಡುವವರು ತಮ್ಮ ಪ್ರಯೋಜನಕ್ಕಾಗಿ ಅಧ್ವರವನ್ನು ಇಚ್ಛಿಸುವರು ಎಂದು ಸ್ಥಿತಿ. ಅಂದಮೇಲೆ ಅಧ್ವರಂ, ಎಂಬುದು ಇಚ್ಛತಿ ಎಂಬ ಇಷ್ ಧಾತುವನ್ನು ಕುರಿತು ಕರ್ಮವಾಗಿರುವ ಸುಬಂತವು. ಈ ಕರ್ಮಕಾರಕವು ಯಾರು ಇಚ್ಛಿಸುವರೋ ಅವರ ಪ್ರಯೋಜನಕ್ಕಾಗಿ ಇದೆ. ಆದ್ದರಿಂದ, ಅಧ್ವರಂ, ಎಂಬುದರ ಮುಂದೆ ಕ್ಯಚ್‌ಪ್ರತ್ಯಯ ಬರುತ್ತದೆ. ಅಧ್ವರ+ಅಮ್+ಕ್ಯಚ್ **' ಸನ್‌ಕ್ಯಚ್‌ಕಾಮ್ಯಚ '**-ಇತ್ಯಾದಿಪರಿಗಣಿತವಾದ ಸನಾದಿ ೧೨ ಪ್ರತ್ಯಯಗಳಲ್ಲಿ ಕ್ಯಚ್ ಸೇರಿದೆ, ಆದ್ದರಿಂದ **' ಸನಾದ್ಯನ್ತಾಧಾತವಃ '** (ಪಾ ಸೂ. ೩-೧-೩೨) ಸನ್ ಮೊದಲಾದುವನ್ನು ಕೊನೆಯಲ್ಲಿ ಹೊಂದಿರುವವು ಧಾತುಸಂಜ್ಞೆಯನ್ನು ಹೊಂದುವವು ಎಂಬುದರಿಂದ, ಅಧ್ವರಂಯ ಎಂಬುದಕ್ಕೆ ಧಾತುಸಂಜ್ಞೆ **' ಸುಪೋಧಾತುಪ್ರಾತಿಪದಿಕಯೋಃ '** (ಪಾ. ಸೂ. ೨-೪-೭೧) ಧಾತುಪ್ರಾತಿಪದಿಕಾವಯವವಾದ ಸುಪ್‌ಗೆ ಲುಕ್ ಬರುತ್ತದೆ ಎಂಬುದರಿಂದ ಅಮ್‌ಗೆ ಲುಕ್. ಅಧ್ವರ+ಯ **' ಕ್ಯಚಿಚ '** (ಪಾ. ಸೂ. ೭-೪-೩೩) ಕ್ಯಚ್‌ಪ್ರತ್ಯಯ ಪರದಲ್ಲಿರುವಾಗ ಆ ಗೆ ಈ ಆದೇಶ ಬರುತ್ತದೆ ಎಂಬುದರಿಂದ ಯ ಗೆ ಹಿಂದಿನ ಆಕಾರಕ್ಕೆ ಈಕಾರಾದೇಶ, ಅಧ್ವರೀ+ಯ ಎಂದಾಯಿತು. ಆದರೆ ಇಲ್ಲಿ **' ನ ಛಂದಸ್ಯಪುತ್ರಸ್ಯ '** (ಪಾ. ಸೂ. ೭-೪-೩೫) ಕ್ಯಚ್ ಪರದಲ್ಲಿರುವಾಗ ಪುತ್ರಶಬ್ದ ಭಿನ್ನವಾದ ಅಕಾರಾಂತಶಬ್ದಗಳಿಗೆ ಈಕಾರಾದೇಶ ದೀರ್ಘ ಇವೆರಡೂ ಬರುವುದಿಲ್ಲ. ಎಂಬುದರಿಂದ (ಪುತ್ರಶಬ್ದವಲ್ಲದ) ಅಧ್ವರ ಎಂಬುದಕ್ಕೆ ಈತ್ವ ನಿಷೇಧ ಬರಲಿ ಎಂದು ಪ್ರಶ್ನೆ ಬರುವುದು. ಇದಕ್ಕೆ ವಾರ್ತಿಕಕಾರರು ಸೂತ್ರದಲ್ಲಿ ಅಪುತ್ರಸ್ಯ ಎಂಬುದಕ್ಕೆ ಬದಲಾಗಿ **' ಅಪುತ್ರಾದೀನಾಂ '** ಎಂದು ಪಠಿಸಬೇಕು ಎಂದು **' ಅಪುತ್ರಾದೀನಾ-ಮಿತಿ ವಕ್ತವ್ಯಮ್ '** (ಪಾ. ಸೂ. ೭-೪-೩೫-ವಾ) ಎಂಬ ವಾರ್ತಿಕದಿಂದ ಹೇಳಿರುತ್ತಾರೆ, ಈಗ ಪುತ್ರ ಶಬ್ದ ಮೊದಲಾದ ಶಬ್ದಗಳನ್ನು ಬಿಟ್ಟು, ಅಕಾರಾಂತ ಶಬ್ದಕ್ಕೆ ಕ್ಯಚ್ ಪರದಲ್ಲಿರುವಾಗ ಈತ್ವ ಬರುವುದಿಲ್ಲ ಎಂದು ಅರ್ಥವಾಗುತ್ತೆ. ಪುತ್ರಾದಿಗಳಲ್ಲಿ ಅಧ್ವರ ಶಬ್ದವು ಸೇರುವುದರಿಂದ ಇದಕ್ಕೆ ಈತ್ವ ನಿಷೇಧ ಬರುವುದಿಲ್ಲ ಎಂದು ಸಮಾಧಾನವಿರುವುದು. **' ಕವ್ಯಧ್ವರಪೃತನಸ್ಯರ್ಚಿಲೋಪಃ '** (ಪಾ. ಸೂ. ೭-೪-೯) ಋಕ್ಕಿನ ವಿಷಯದಲ್ಲಿ, ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಕವಿ, ಅಧ್ವರ, ಪೃತನಾ ಈ ಶಬ್ದಗಳ ಕೊನೆಯ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ, ಅಧ್ವರ ಶಬ್ದದ ಅಕಾರಕ್ಕೆ ಲೋಪವು ಪ್ರಾಪ್ತವಾಗುವುದು. ಆದರೆ **' ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ '** (ಪರಿಭಾ. ೩೬) ವೇದದಲ್ಲಿ ಎಲ್ಲಾ ಕಾರ್ಯಗಳೂ ಪಾಕ್ಷಿಕವಾಗಿ ಬರುವವು. ಎಂಬುದರಿಂದ ಅಕಾರಕ್ಕೆ ಲೋಪ ಬರುವುದಿಲ್ಲ. **' ವರ್ತಮಾನೇಲಟ್ '** (ಪಾ. ಸೂ. ೩-೨-೧೨೩) ಎಂಬುದರಿಂದ **' ಅಧ್ವರೀಯ '** ಎಂಬ ಕ್ಯಚ್ ಪ್ರತ್ಯಯಾಂತ ಧಾತುವಿನ ಮುಂದೆ ಲಟ್ ಬರುತ್ತೆ, ಅದಕ್ಕೆ **' ಲಟಃಶತೃಶಾನಚಾವಪ್ರಥಮಾಸಮಾನಾಧಿಕರಣೇ '** (ಪಾ. ಸೂ. ೨-೨-೧೨೪) ಎಂಬುದರಿಂದ ಶತೃ ಆದೇಶ **' ಕರ್ತರಿಶಪ್ '** (ಪಾ. ಸೂ. ೩-೧-೬೮) ಎಂಬುದರಿಂದ ಶಪ್ (ಅ) ವಿಕರಣ ಅಧ್ವರೀಯ+ಅ+ಅತ್ ಎಂದಾಯಿತು. **' ಚಿತಃ '** (ಪಾ. ಸೂ. ೬-೧-೧೬೩) ಎಂಬುದರಿಂದ ಚಿತ್ತಾದ ಕ್ಯಚ್‌ನ ಅಕಾರ ಉದಾತ್ತ. **' ಅನುದಾತ್ತೌಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಶಪ್ ಅನುದಾತ್ತ. ಶತೃವು ಲಸ್ಥಾನಿಕವಾದ ಸಾರ್ವಧಾತುಕ, ಇದು ಶಪ್ ಎಂಬ ಅದುಪದೇಶದ ಮುಂದೆ ಇದೆ. ಆದ್ದರಿಂದ **' ತಾಸ್ಯನು

**ದಾತ್ತೇನ್ನಿದದುಪದೇಶಾತ್** '-(ಪಾ ಸೂ. ೬-೧-೧೮೬) ಎಂಬುದರಿಂದ ಶತೃವು ಅನುದಾತ್ತ, ಈ ಅನುದಾತ್ತಗಳಾದ ಎರಡು ಅಕಾರಕ್ಕೂ ' **ಅತೋಗುಣೇ** ' (ಪಾ ಸೂ. ೬-೧-೯೭) ಎಂಬುದರಿಂದ ಪರರೂಪ ಬರುವುದು. ಅದು ಸ್ಥಾನಿವದ್ಭಾವದಿಂದ ಅನುದಾತ್ತವೇ ಆಗುತ್ತೆ. ಈ ಅಕಾರಕ್ಕೂ ಕ್ಯಚ್‌ನ ಅಕಾರಕ್ಕೂ ಪುನಃ ಪರರೂಪದಿಂದ ಹ್ರಸ್ವಾಕಾರ ಬಂದೇ ಬರುತ್ತದೆ. ಅದು ಉದಾತ್ತಅನುದಾತ್ತಗಳೆರಡರ ಸ್ಥಾನದಲ್ಲಿ ಬಂದಿರುವುದರಿಂದ ' **ಏಕಾದೇಶ ಉದಾತ್ತೇನೋದಾತ್ತಃ** ' (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತವಾಗುತ್ತೆ. ಹೀಗೆ ' **ಅಧ್ವರೀಯತ್** ' ಎಂಬುದು ಅಂತೋದಾತ್ತ. ಇದರ ಮುಂದೆ ಷಷ್ಠೀ ಬಹುವಚನ ಆಮ್, ಅಧ್ವರೀತ್+ಆಮ್ ಇಲ್ಲಿ '**ಶತುರನುಮೋನದ್ಯಜಾದೀ** ' (ಪಾ. ಸೂ. ೬-೧-೧೭೩) ನುಮಾಗಮವನ್ನು ಹೊಂದದ ಶತೃಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಅಂತೋದಾತ್ತವಾಗಿದ್ದರೆ ಅದರ ಮುಂದೆ ಇರುವ ನದೀಸಂಜ್ಞಕವೂ, ಅಜಾದಿಯಾದ ಶಸಾದಿವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ ಆಮ್ ಉದಾತ್ತ.

**ಪೃಞ್ಚತೀಃ**—' **ಪೃಚೀ ಸಂಪರ್ಕೇ** ' ಧಾತು. ಇದರ ಮುಂದೆ ಲಟ್, ಅದಕ್ಕೆ ಶತೃ, ಪೃಚ್+ಅತ್ ' **ರುಧಾದಿಭ್ಯಃಶ್ನಮ್** ' (ಪಾ. ಸೂ. ೩-೧-೭೮) ಎಂಬುದರಿಂದ ಶ್ನವಿಕರಣ. ವು ಪೃ ಎಂಬುದರ ಮುಂದೆ ಮಿತ್ಕರಣ ಸಾಮರ್ಥ್ಯದಿಂದ ಬರುವುದು ಪೃ+ನಚ್+ಅತ್, ' **ಶ್ನಸೋರಲ್ಲೋಪಃ** ' (ಪಾ. ಸೂ. ೬-೪-೧೧೧) ಕಿತ್, ಅಥವಾ ಙಿತ್ ಆದ ಸಾರ್ವಧಾತುಕಪ್ರತ್ಯಯ ಪರದಲ್ಲಿರುವಾಗ ಶ್ನ ಪ್ರತ್ಯಯ, ಅಸ್‌ಧಾತು ಇವುಗಳ ಅಕಾರಕ್ಕೆ ಲೋಪ, ಬರುವುದು ಎಂಬುದರಿಂದ ಶ್ನ ಪ್ರತ್ಯಯದ ಅಕಾರಕ್ಕೆ ಲೋಪ ಪೃಚ್+ನ್+ಅತ್. ' **ಸ್ತೋಃಶ್ಚುನಾಶ್ಚುಃ** ' (ಪಾ. ಸೂ. ೮-೪-೪೦) ಎಂಬುದರಿಂದ ನಕಾರಕ್ಕೆ ಞಕಾರರೂಪವಾದ ಶ್ಚುತ್ವವು ಅನುಸ್ವಾರವನ್ನು ಮಾಡುವಾಗ ಅಸಿದ್ಧವಾಗುತ್ತೆ ಆದ್ದರಿಂದ ' **ನಶ್ಚಾಪದಾಂತಸ್ಯಝಲಿ** ' (ಪಾ. ಸೂ. ೮-೩-೨೪) ಪದದ ಕೊನೆಯಲ್ಲಿಲ್ಲದ ನಕಾರ ಮಕಾರಗಳಿಗೆ ಝಲ್ ವರ್ಣ ಪರದಲ್ಲಿರುವಾಗ ಅನುಸ್ವಾರ ಬರುವುದು ಎಂಬುದರಿಂದ ಅನುಸ್ವಾರ, ಅದಕ್ಕೆ ' **ಅನುಸ್ವಾರಸ್ಯಯಯಿ ಪರಸವರ್ಣಃ** ' (ಪಾ ಸೂ. ೮-೪-೫೮) ಯಯ್ ವರ್ಣ ಪರದಲ್ಲಿದ್ದರೆ ಅನುಸ್ವಾರಕ್ಕೆ ಪರಸವರ್ಣ ಬರುವುದು, ಎಂಬುದರಿಂದ ಚಕಾರಕ್ಕೆ ಸ್ಥಾನದಿಂದ ಸವರ್ಣವೂ ಅನುನಾಸಿಕವೂ ಆದ ಞಕಾರ ಬರುವುದು. ಪೃಞ್ಚ್+ಅತ್, ಅನುಸ್ವಾರ ಪರಸವರ್ಣಗಳನ್ನು ಮಾಡುವಾಗ ' **ನಪದಾಂತ . . . . ಸ್ವರ ಸವರ್ಣಾನುಸ್ವಾರ**–' (ಪಾ. ಸೂ. ೧-೧-೫೮) ಎಂದು ನಿಷೇಧ ಬರುವುದರಿಂದ ' **ಅಚಃ ಪರಸ್ಮಿನ್**–' (ಪಾ. ಸೂ ೧-೧-೫೭) ಎಂಬುದರಿಂದ ಅಕಾರಲೋಪಕ್ಕೆ ಸ್ಥಾನಿವದ್ಭಾವ ಬರುವುದಿಲ್ಲ. ಶತೃವಿನ ಋಗೆ ಇತ್ಸಂಜ್ಞೆ ಬಂದಿದೆ, ಋವು ಉಕ್ ಪ್ರತ್ಯಾಹಾರದಲ್ಲಿ ಸೇರಿದೆ ಏವಂಚ ಶತೃವು ಉಗಿತ್, '**ಉಗಿತಶ್ಚ**' (ಪಾ ಸೂ. ೪-೧-೬) ಉಗಿದಂತವಾದ ಪ್ರಾತಿಪದಕದ ಮುಂದೆ ಸ್ತ್ರೀತ್ವವನ್ನು ವಿವಕ್ಷಿಸಿದಾಗ ಙೀಪ್ ಬರುವುದು ಎಂಬುದರಿಂದ ಙೀಪ್ ಬರುತ್ತೆ ಪೃಞ್ಚತ್+ಈ, ವರ್ಣಸಂಜ್ಞಾಪಕ್ಷದಲ್ಲಿ ' **ಯೂಸ್ತ್ರ್ಯಾಖ್ಯೌನದೀ** ' (ಪಾ. ಸೂ. ೧-೪-೩) ಎಂಬುದರಿಂದ ಈ ಗೆ ನದೀಸಂಜ್ಞೆ ಇದೆ, ಏವಂಚ ' **ಶತುರನುಮೋನದ್ಯಜಾದೀ** ' ಎಂಬುದರಿಂದ ಈ ಯು ಉದಾತ್ತ, ' **ಪೃಂಚತೀ** ' ಎಂಬುದರ ಮುಂದೆ ಜಸ್, ' **ವಾ ಛಂದಸಿ** ' (ಪಾ ಸೂ. ೬-೧-೧೦೬) ವೇದದಲ್ಲಿ ದೀರ್ಘದ ಮುಂದೆ ಜಸ್ ಅಥವಾ ಇಚ್ ಇದ್ದರೆ ಪೂರ್ವಸವರ್ಣದೀರ್ಘವು ವಿಕಲ್ಪವಾಗಿ ಬರುವುದು, ಎಂಬುದರಿಂದ ಪೂರ್ವಸವರ್ಣ ದೀರ್ಘ ಬರುವುದು. ॥ ೧೬ ॥

॥ ಸಂಹಿತಾಪಾಠಃ ॥

ಅಮೂರ್ಯಾ ಉಪ ಸೂರ್ಯೇ ಯಾಭಿರ್ವಾ ಸೂರ್ಯಃ ಸಹ ।
ತಾ ನೋ ಹಿನ್ವನ್ತ್ವಧ್ವರಂ ॥ ೧೭ ॥

॥ ಪದಪಾಠಃ ॥

ಅಮೂಃ । ಯಾಃ । ಉಪ । ಸೂರ್ಯೇ । ಯಾಭಿಃ । ವಾ । ಸೂರ್ಯಃ । ಸಹ ।
ತಾಃ । ನಃ । ಹಿನ್ವನ್ತು । ಅಧ್ವರಂ ॥ ೧೭ ॥

॥ ಸಾಯಣಭಾಷ್ಯಂ ॥

**ಯಾ ಅಮೂರಾಪಃ ಸೂರ್ಯೆ ಉಪ ಸಮೀಪೇನಾವಸ್ಥಿತಾಃ । ಆಪಃ ಸೂರ್ಯೇ ಸಮಾಹಿತಾ ಇತಿ ಶ್ರುತ್ಯಂತರಾತ್ । ವಾಥವಾ ಸೂರ್ಯೋ ಯಾಭಿರದ್ಭಿಃ ಸಹ ವರ್ತತೇ । ಪೂರ್ವತ್ರಾಪಾಂ ಪ್ರಧಾನ್ಯಮುತ್ತರತ್ರ ಸೂರ್ಯಸ್ಯೇತಿ ವಿಶೇಷಃ । ತಾಸ್ತಾದೃಶ್ಯ ಆಪೋ ನೋಽಸ್ಮದೀಯಮಧ್ವರಂ ಯಾಗಂ ಹಿನ್ವಂತು । ಪ್ರೀಣಯಂತು ॥ ಯಾಭಿಃ । ಸಾವೇಕಾಚ ಇತಿ ವಿಭಕ್ತ್ಯುದಾತ್ತಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಶೇಷಾ ತು ಪ್ರಕ್ರಿಯಾ ಸ್ಪಷ್ಟಾ ॥**

॥ ಪ್ರತಿಪದಾರ್ಥ ॥

**ಯಾ ಅಮೂಃ**—ಯಾವ ಈ ಉದಕಗಳು । **ಸೂರ್ಯೇ ಉಪ**—ಸೂರ್ಯನ ಸಮೀಪದಲ್ಲಿರುವವೋ । **ವಾ**—ಅಥವಾ । **ಸೂರ್ಯಃ**—ಸೂರ್ಯನು । **ಯಾಭಿಃ**—ಯಾವ ಉದಕಗಳಿಂದ । **ಸಹ**—ಸಹಿತನಾಗಿರುವನೋ । **ತಾ**—ಆ ಉದಕಗಳು । **ನಃ**—ನಮ್ಮ । **ಅಧ್ವರಂ**—ಯಜ್ಞವನ್ನು । **ಹಿನ್ವಂತು**—ಪ್ರೀತಿಯಿಂದ ನಿರ್ವಹಿಸಲಿ ॥

॥ ಭಾವಾರ್ಥ ॥

ಯಾವ ಉದಕಗಳು ಸೂರ್ಯನ ಸಮೀಪದಲ್ಲಿರುವವೋ ಅಥವಾ ಸೂರ್ಯನು ಯಾವ ಉದಕಗಳ ಸಮೀಪದಲ್ಲಿಯೇ ಇರುವನೋ ಅಂತಹ ಉದಕಗಳು ನಮ್ಮ ಯಜ್ಞವನ್ನು ಸಂತೋಷದಿಂದ ನೆರವೇರುವಂತೆ ಮಾಡಲಿ.

## English Translation.

Those sacred waters who are near the sun or to whom the sun is near, may they promote our sacrifice.

॥ ವಿಶೇಷವಿಷಯಗಳು ॥

**ಯಾ ಉಪ ಸೂರ್ಯೇ**—ಸೂರ್ಯನ ಸಮೀಪದಲ್ಲಿರುವ ಉದಕಗಳು ಎಂದರೆ ಸೂರ್ಯನ ಕಿರಣಗಳ ಮೂಲಕ (ಸಮುದ್ರೋದಕವು) ಆಕರ್ಷಿಸಲ್ಪಟ್ಟು ಅಂತರಿಕ್ಷದಲ್ಲಿ ಮೇಘರೂಪದಿಂದ ಇರುವ ಜಲವು. ತೈತ್ತಿರೀಯ ಆರಣ್ಯಕದಲ್ಲಿಯೂ—**ಆಪಃ ಸೂರ್ಯೇ ಸಮಾಹಿತಾಃ** ಎಂದು ಶ್ರುತಿವಾಕ್ಯವಿರುವುದು. **ಯಾಭಿರ್ವಾ ಸೂರ್ಯಃ ಸಹ**—ಈ ವಾಕ್ಯಕ್ಕೂ ಇದೇ ಅರ್ಥವು. ಪ್ರಕಾರಾಂತರವಾಗಿ ವಿಭಕ್ತಿ ವಚನಗಳನ್ನು ವ್ಯತ್ಯಾಸ ಮಾಡಿ ಹೇಳಲಾಗಿರುವುದು. ಅಥವಾ ನದೀ ಮೊದಲಾದ ಜಲಾಶಯದ ಮೇಲೆ ಸೂರ್ಯನ ಕಿರಣಗಳು ಬೀಳುವುದರಿಂದ ನೀರಿನ ಸಮೀಪದಲ್ಲಿ ಸೂರ್ಯನು ಇರುವನೆಂದು ಹೇಳಿರಬಹುದು. ಒಟ್ಟಿನಲ್ಲಿ ನೀರಿಗೂ ಸೂರ್ಯನಿಗೂ ನಿಕಟಸಂಬಂಧವಿರುವುದೆಂಬುದನ್ನು ಈ ಮಂತ್ರವು ಸೂಚಿಸುವುದು.

॥ ವ್ಯಾಕರಣಪ್ರಕ್ರಿಯಾ ॥

**ಯಾಭಿಃ**—ಯದ್ ಶಬ್ದದ ಮುಂದೆ, ಭಿಸ್, **'ತ್ಯದಾದೀನಾಮಃ'**. (ಪಾ. ಸೂ. ೭-೨-೧೦೨) ತ್ಯದಾದಿ ಗಣಪಠಿತ ಶಬ್ದಗಳ ಕೊನೆಯ ವರ್ಣಕ್ಕೆ ಅಕಾರಾದೇಶವು ವಿಭಕ್ತಿಪರದಲ್ಲಿರುವಾಗ ಬರುವುದು. ಎಂಬುದರಿಂದ, ದಕಾರಕ್ಕೆ ಅಕಾರ ಪರರೂಪ, ಸ್ತ್ರೀತ್ವ ತೋರುವಾಗ ಟಾಪ್, ಸವರ್ಣದೀರ್ಘಃ, ಯಾ+ಭಿಸ್ ಸಕಾರಕ್ಕೆ ರುತ್ವ ವಿಸರ್ಗಗಳು, ಯಾಭಿಃ ಎಂದಾಗುತ್ತದೆ. **'ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ'** (ಪಾ. ಸೂ. ೬-೧-೧೬೮) ಸಪ್ತಮೀ ಬಹುವಚನ ಸು ಪ್ರತ್ಯಯ ಪರದಲ್ಲಿರುವಾಗ ಯಾವ ಅರ್ಥವನ್ನು ಕೊಡುವ ಏಕಾಚ್ಕವಾದ ರೂಪವಿದೆಯೋ, ಅದೇ ಅರ್ಥ ಕೊಡುವ ಏಕಾಚ್ಕವಾದ ರೂಪದ ಮುಂದಿರುವ ವಿಭಕ್ತಿಯು ಉದಾತ್ತವಾಗುವುದು ಎಂದು ಸೂತ್ರದ ಅರ್ಥ. ಈ ಸೂತ್ರದ ಮಹಾಭಾಷ್ಯ **'ಸಾವಿತಿ ಕಿಮಿದಂ ಪ್ರಥಮೈಕವಚನಸ್ಯ ಗ್ರಹಣಮಾಹೋ ಸ್ವಿತ್ಸಪ್ತಮೀ ಬಹುವಚನಸ್ಯ'** ಇದರ ಅರ್ಥ **ಸೌ**—ಎಂಬ ಪದದಿಂದ, ಪ್ರಥಮಾವಿಭಕ್ತಿ ಏಕವಚನ **ಸು** ಪ್ರತ್ಯಯಕ್ಕೆ ಗ್ರಹಣವೇ, ಅಥವಾ ಸಪ್ತಮೀ ಬಹುವಚನ ಪ್ರತ್ಯಯವಾದ **'ಸುಪ್'** ಎಂಬುದಕ್ಕೆ ಗ್ರಹಣವೇ? ಭಾಷ್ಯ—**'ಕುತಃ ಸಂದೇಹಃ?'** ಸಂದೇಹಕ್ಕೆ ಕಾರಣವೇನು? **ಸಮಾನೋ ನಿರ್ದೇಶಃ** ಪ್ರಥಮೈಕವಚನ **'ಸು'** ಎಂಬುದರ ಮುಂದೆ ಸಪ್ತಮೀವಿಭಕ್ತಿ ಙಿ ಪ್ರತ್ಯಯವನ್ನಿಟ್ಟರೂ **'ಸೌ'** ಎಂದಾಗುವುದು. ಸಪ್ತಮೀಬಹುವಚನ ಸುಪ್ ನ ಪಕಾರಕ್ಕೆ ಇತ್ಸಂಜ್ಞೆಯಿಂದ ನಿವೃತ್ತಿ ಬಂದರೆ ಸು ಎಂದಿರುವುದರಿಂದ ಅದರ ಮುಂದೆ ಸಪ್ತಮ್ಯೇಕವಚನ ಙಿ ಪ್ರತ್ಯಯವನ್ನಿಟ್ಟರೂ **'ಸೌ'** ಎಂದೇ ಆಗುತ್ತೆ. ಹೀಗೆ ಪ್ರಥಮಾಸಪ್ತಮೀಗಳಲ್ಲಿ ಒಂದೇ ವಿಧವಾಗಿ **'ಸೌ'** ಎಂಬ ರೂಪವಾಗುವಕಾರಣ ಸಂದೇಹ ಬರುತ್ತದೆ. ಇಲ್ಲಿ ಕೈಯಟಕಾರರು ಭಾವವನ್ನು ಹೀಗೆ ವರ್ಣಿಸಿರುವರು. **'ಯದಿ ಶಾಸ್ತ್ರೀಯಂ ಸುರೂಪಂ ಗೃಹ್ಯತೇ ತದಾ ಪ್ರಾಥಮ್ಯಾತ್ ಪ್ರಥಮೈಕವಚನಸ್ಯ ಗ್ರಹಣೇನ ಭಾವ್ಯಮ್, ಅಥ ಪ್ರಾಯೋಗಿಕಂ ತತಸ್ಸಪ್ತಮೀ ಬಹುವಚನಸ್ಯ । ತದ್ಧಿ ಪ್ರಯೋಗೇ ಸುರೂಪಂ ಶ್ರೂಯತೇ । ಪ್ರಥಮೈಕವಚನೇ ತು ವಿಕೃತರೂಪಪ್ರಯೋಗೇ ನ ಸುರೂಪಮಿತಿ ಸಂಶಯಾನಃ ಪೃಚ್ಛತಿ ಸಾವಿತಿ ಕಿಮಿತಿ** ಎಂದು ಹೇಳಿರುವರು. ಇದರ ಅರ್ಥ—ಶಾಸ್ತ್ರವ್ಯವಹಾರಸಿದ್ಧವಾದ ಸು ರೂಪವನ್ನು ತೆಗೆದುಕೊಳ್ಳುವ ಪಕ್ಷಕ್ಕೆ, ಸು ಮೊದಲಾದ ೨೧ ಪ್ರತ್ಯಯಗಳಲ್ಲಿ **'ಪ್ರಥಮೋಪಸ್ಥಿತ ಪರಿತ್ಯಾಗೇ ಕಾರಣಾಭಾವಃ'** ಎಂಬ ನ್ಯಾಯದಿಂದ ಮೊದಲನೆಯದಾದ ಸು ಎಂಬ ಪ್ರಥಮೈಕವಚನಕ್ಕೇ ಗ್ರಹಣ ಬರುವುದು, ಪ್ರಯೋಗಗಳಲ್ಲಿ ಶ್ರೂಯಮಾಣವಾಗುವ **'ಸು'** ಗೆ ಗ್ರಹಣವೆಂದು ವಿವಕ್ಷಿಸಿದರೆ, ಸಪ್ತಮೀಬಹುವಚನಕ್ಕೇ ಗ್ರಹಣ ಬರುವುದು. ಏಕೆಂದರೆ ಪ್ರಥಮೈಕವಚನದಲ್ಲಿ ಸು ಆನುಪೂರ್ವಿಯು

ವಿಕಾರವನ್ನು ಹೊಂದುವುದರಿಂದ '**ಸು**' ರೂಪದಿಂದ ಶ್ರೂಯಮಾಣವಾಗುವುದಿಲ್ಲ. ಉದಾಹರಣೆ—ರಾಮಃ, ಇತ್ಯಾದಿ, ಇಲ್ಲಿ ಸು ಗೆ ವಿಸರ್ಗ ಬಂದಿದೆ. ರಮಾಸು ಇತ್ಯಾದಿ ಕಡೆಗಳಲ್ಲಿ ಸಪ್ತಮೀ ಬಹುವಚನದಲ್ಲಿ '**ಸು**' ಎಂಬ ಆನುಪೂರ್ವಿಯು ಶ್ರೂಯಮಾಣವಾಗುತ್ತೆ. ಆದ್ದರಿಂದ, ಪ್ರಾಯೋಗಿಕಕ್ಕೆ ಗ್ರಹಣಪಕ್ಷದಲ್ಲಿ ಸಪ್ತಮೀಗೇ ಗ್ರಹಣ ಬರಬೇಕಾಗುವುದು. ಈ ರೀತಿ ಸಂಶಯ ಬರುವುದರಿಂದ ಭಾಷ್ಯದಲ್ಲಿ ಪ್ರಥಮೈಕವಚನಕ್ಕೆ ಗ್ರಹಣವೇ, ಸಪ್ತಮೀ ಬಹುವಚನಕ್ಕೆ ಗ್ರಹಣವೇ ಎಂದು ವಿಚಾರ ಮಾಡಿರುವರು.

ಉತ್ತರ-ಭಾಷ್ಯ—**ಸಪ್ತಮೀ ಬಹುವಚನಸ್ಯ ಗ್ರಹಣಂ** ॥ ಸಪ್ತಮೀ ಬಹುವಚನಕ್ಕೇ ಗ್ರಹಣವು.

ಭಾಷ್ಯ—**ಕಥಂಜ್ಞಾಯತೇ** ॥ ಸಪ್ತಮೀ ಬಹುವಚನಕ್ಕೆ ಗ್ರಹಣ ಬರುವುದೆಂದು ಹೇಗೆ ಏರ್ಪಡುವುದು?

ಭಾಷ್ಯ—**ಯದಯಂ—'ನಗೋಶ್ವನ್‌ಸಾವವರ್ಣ'** (ಪಾ. ಸೂ. ೬-೧-೧೮೨) '**ಇತಿಪ್ರತಿಷೇಧಂ-ಶಾಸ್ತಿ**' ॥ ಪಾಣಿನ್ಯಾಚಾರ್ಯರು, '**ನಗೋಶ್ವನ್**' ಇತ್ಯಾದಿ ಸೂತ್ರದಲ್ಲಿ, ಗೋಶಬ್ದ ಶ್ವನ್ ಶಬ್ದಗಳಮುಂದೆ ಇರುವ ವಿಭಕ್ತಿಗೆ ಉದಾತ್ತ ಬರುವುದಿಲ್ಲವೆಂದು, ಹೇಳಿರುವುದರಿಂದ ತಿಳಿಯಬರುತ್ತದೆ.

ಭಾಷ್ಯ—ಕಥಂ ಕೃತ್ವಾ ಜ್ಞಾಪಕಮ್ ? ಗೋಶ್ವನ್‌ಗಳಮುಂದೆ ಇರುವ ವಿಭಕ್ತಿಗೆ ಉದಾತ್ತ ಬರುವುದಿಲ್ಲ ವೆಂಬ ಪ್ರತಿಷೇಧದಿಂದ ಸಪ್ತಮೀ ಬಹುವಚನಕ್ಕೆ ಗ್ರಹಣವೆಂದು ಹೇಗೆ ಏರ್ಪಡುವುದು ?

ಭಾಷ್ಯ—'**ಯದಿಪ್ರಥಮೈಕವಚನಸ್ಯ ಗ್ರಹಣಂ ಸ್ಯಾದ್ಗೋಶುನೋಃ ಪ್ರತಿಷೇಧವಚನಮನ-ರ್ಥಕಂಸ್ಯಾತ್**' ಪ್ರಥಮಾ ಏಕವಚನದಲ್ಲಿ '**ಗೌಃ**' ಶ್ವಾ ಎಂದು ರೂಪವು, ಆದ್ದರಿಂದ ಗೋ ಶಬ್ದದಲ್ಲಿ '**ಗೌಃ**' ಎಂದು ಔಕಾರಾಂತವು ಏಕಾಚ್ಕವಾದ ರೂಪವು. ಶ್ವನ್ ಶಬ್ದದಲ್ಲಿ '**ಶ್ವಾ**' ಎಂಬ ಆಕಾರಾಂತವು ಏಕಾಚ್ಕ ವಾದ ರೂಪವು. ಗೋಭ್ಯಾಂ ಶ್ವಭ್ಯಾಂ ಎಂಬಲ್ಲಿ ವಿಭಕ್ತಿಯು ಗೋ ಎಂಬ ಓಕಾರಾಂತವಾದ ಏಕಾಚ್ಕದ ಮುಂದೆಯೂ ಶ್ವ, ಎಂಬ ಹ್ರಸ್ವಾಂತವಾದ ಏಕಾಚ್ಕದ ಮುಂದೆಯೂ ಇದೆ. ಆದ್ದರಿಂದ ಪ್ರಥಮೈಕವಚನದಲ್ಲಿ ಎಂತಹ ಏಕಾಚ್ಕವಾದ ರೂಪವಿದೆಯೋ ಅಂತಹ ಏಕಾಚ್ಕದ ಮುಂದೆ ಇರುವ ವಿಭಕ್ತಿಯು ಇಲ್ಲವಾದ್ದರಿಂದ '**ಸಾವೇಕಾಚಃ**' ಎಂಬುದಕ್ಕೆ ಪ್ರಾಪ್ತಿಯೇಇಲ್ಲ. ಅಂದಮೇಲೆ ಪ್ರತಿಷೇಧವಚನವು ವ್ಯರ್ಥವೇ ಆಗುವುದು. ಸಪ್ತಮೀ ಬಹುವಚನಕ್ಕೆ ಗ್ರಹಣವೆಂದು ಇಟ್ಟುಕೊಂಡರೆ ಸಪ್ತಮೀ ಬಹುವಚನದಲ್ಲಿ ಗೋಷು, '**ಶ್ವಸು**' ಎಂದಾಗುವುದರಿಂದ '**ಗೋ**' '**ಶ್ವ**' ಎಂಬುದು ಏಕಾಚ್ಕವಾದ ರೂಪವು ಸಪ್ತಮೀಬಹುವಚನ ಸುಪರದಲ್ಲಿರುವಾಗ ಸಿಗುವುದು. ಆದ್ದರಿಂದ ಗೋ, ಶ್ವ-ಎಂಬ ಏಕಾಚ್ಕದ ಮುಂದೆ ಇರುವ ಭ್ಯಾಂ ಗೋಭ್ಯಾಂ, ಶ್ವಭ್ಯಾಂ ಎಂಬಲ್ಲಿ ಸಾವೇಕಾಚ ಎಂಬುದರಿಂದ ಉದಾತ್ತವು ಪ್ರಾಪ್ತವಾಗುತ್ತೆ. ಅದನ್ನು ನಿವಾರಣೆ ಮಾಡಲು '**ನಗೋಶ್ವನ್**' ಎಂಬ ಸೂತ್ರದಲ್ಲಿ ಗೋ ಶ್ವನ್‌ಗಳ ಮುಂದೆ ಇರುವ ವಿಭಕ್ತಿಗೆ ಉದಾತ್ತನಿಷೇಧವು ಸಾರ್ಥಕವಾಗುವುದು. ಆದ್ದರಿಂದ ಸಪ್ತಮೀಬಹು ವಚನಕ್ಕೇ ಗ್ರಹಣವೆಂದು ಭಾಷ್ಯಕಾರರು ನಿರೂಪಿಸಿರುವರು. ಜ್ಞಾಪಕವನ್ನು ಹೇಳುವ ಭಾಷ್ಯದಿಂದಲೇ '**ಸಾವೇ ಕಾಚಃ**' ಎಂಬಲ್ಲಿ ರೂಪಗ್ರಹಣವು ವಿವಕ್ಷಿತವೆಂದು ಏರ್ಪಡುತ್ತದೆ. ಇಲ್ಲದಿದ್ದರೆ '**ಸೌ ಯ ಏಕಾಚ್**' ಸು ಎಂಬ

ಪ್ರಥಮೈಕವಚನದಲ್ಲಿ ಗೌಃ, ಶ್ವಾ ಎಂದು ಏಕಾಚ್ಕವಿರುವುದರಿಂದ, ಸ್ವರ ಪ್ರಾಪ್ತವಾದರೆ, ಪ್ರತಿಷೇಧವು ಸಾರ್ಥಕವೇ ಆಗುವುದರಿಂದ ನಿರುಕ್ತಾರ್ಥಕ್ಕೆ ಜ್ಞಾಪಕವಾಗಲಾರದು, ರೂಪಗ್ರಹಣವನ್ನು ವಿವಕ್ಷಿಸಿದರೆ **' ಸೌಯದ್ರೂಪವಿಶಿಷ್ಟಃ ಏಕಾಚ್'** ಪ್ರಥಮೈಕವಚನ ಸು ಪರದಲ್ಲಿರುವಾಗ ಏಕಾಚ್ಕವಾದ ಯಾವ ರೂಪವಿದೆಯೋ ಗೌಃ, ಶ್ವಾ ಎಂದು ಅದರ ಮುಂದೆ ಗೋಭ್ಯಃ, ಶ್ವಭ್ಯಃ ಎಂಬಲ್ಲಿ ವಿಭಕ್ತಿ ಇಲ್ಲದ ಕಾರಣ ನಿಷೇಧವು ಅಸಂಗತವಾಗಿ ನಿರುಕ್ತಾರ್ಥಕ್ಕೆ ಜ್ಞಾಪಕ ವಾಗುತ್ತೆ.

ಪ್ರಥಮೈಕವಚನವನ್ನು ಗ್ರಹಿಸಿದರೆ, ಯಾ ಧಾತುವಿನ ಮುಂದೆ ಲಟ್, ಅದಕ್ಕೆ ಶತೃ, ಶಪ್‌ಗೆ ಲುಕ್, ತೃತೀಯೈಕವಚನ ಟಾ ಪ್ರತ್ಯಯ ಯಾತಾ ಎಂಬಲ್ಲಿ ದೋಷ ಬರುತ್ತೆ, ಹೇಗೆಂದರೆ, ಪ್ರಥಮೈಕವಚನದಲ್ಲಿ **'ಯಾನ್'** ಎಂದಾಗಲಿ ಸಂಯೋಗಾಂತಲೋಪವು ಅಸಿದ್ಧವಾಗುವುದರಿಂದ ಯರ್ನಾತ್ ಎಂದಾಗಲೀ ಏಕಾಚ್ಕವಾದ ರೂಪವು ಇರು ವುದು. ಅದರ ಮುಂದೆ ತೃತೀಯಾದಿ ವಿಭಕ್ತಿ ಇಲ್ಲ, ಕಿಂತು **' ಯಾತ್ '** ಎಂಬುದರ ಮುಂದೆ ತೃತೀಯಾವಿಭಕ್ತಿ ಇದೆ. ಆದ್ದರಿಂದ ಪ್ರಥಮೈಕವಚನೇ ಯದರ್ಥವಿಶಿಷ್ಟಮೇಕಾಜ್ರೂಪಂ, ತದರ್ಥ ವಿಶಿಷ್ಟೈಕಾಚಃ ಪರವಾದ ತೃತೀ ಯಾದಿ ವಿಭಕ್ತಿ ಇಲ್ಲದ ಕಾರಣ **' ಸಾವೇಕಾಚಃ '** ಎಂಬುದು ಇಲ್ಲಿ ಬರದೇ ಹೋಗುವುದು. ಪ್ರಥಮೈಕ ವಚನದಲ್ಲಿ ರುವ **' ಯರ್ನಾತ್ '** ಎಂಬ ವಿಕೃತಿರೂಪಗ್ರಹಣದಿಂದ ಯಾತ್ ಎಂಬ ಪ್ರಕೃತಿರೂಪಕ್ಕೆ ಗ್ರಹಣ ಬರಲಾರದು, ಯದಾಗಮಾಸ್ತದ್ಗುಣೀಭೂತಾಸ್ತದ್ಗ್ರಹಣೇನ ಗೃಹ್ಯಂತೇ ಎಂಬ ನ್ಯಾಯವು ಆಗಮರಹಿತಗ್ರಹಣವಿರುವ ಕಡೆಗಳಲ್ಲಿ ಆಗಮವಿಶಿಷ್ಟಕ್ಕೂ ಗ್ರಹಣ ಬರುವುದು ಎಂದು ಹೇಳುವುದು ಆದ್ದರಿಂದ ಆಗಮವಿಶಿಷ್ಟನಾದ ಯರ್ನಾಸ್ ಎಂಬು ದಕ್ಕೂ ಗ್ರಹಣದಿಂದ ಆಗಮರಹಿತವಾದ **' ಯಾತ್ '** ಗೆ ಗ್ರಹಣಬರಲಾರದು. **' ತನ್ಮಧ್ಯ ಪತಿತಸ್ತ ದ್ಗ್ರಹಣೇನ- ಗೃಹ್ಯತೇ '** (ಪರಿಭಾ. ೯೦) ಎಂಬುದೂ ಕೇವಲ ಗ್ರಹಣದಿಂದ ವಿಶಿಷ್ಟಕ್ಕೆ ಗ್ರಹಣವನ್ನು ಬೋಧಿಸುತ್ತೆ. ವಿಶಿಷ್ಟವಾದ **' ಯಾನ್ತ್ '** ಎಂಬುದರಿಂದ **' ಯಾತ್ '** ಎಂಬ ಕೇವಲಕ್ಕೆ ಗ್ರಹಣವನ್ನು ಬೋಧಿಸಲಾರದು.

**' ಸಾವೇಚಃ '** ಎಂಬಲ್ಲಿ ಸುಪ್ರತ್ಯಯ ಪರದಲ್ಲಿರುವ ಯಾವ ಅರ್ಥಬೋಧಕವಾದ ಏಕಾಚ್ಕವಾದ ರೂಪ ವಿದೆಯೊ, ಎಂದು ರೂಪಗ್ರಹಣ ವಿವಕ್ಷೆಯನ್ನು ಮಾಡಿ ಅರ್ಥವನ್ನು ವರ್ಣಿಸುವುದಿಲ್ಲ. ಕಿಂತು ಸು ಪ್ರತ್ಯಯ ಪರದಲ್ಲಿ ರುವಾಗ ಯಾವ ಶಬ್ದವು ಏಕಾಚ್ಕವಾಗಿದೆಯೋ ಆ ಶಬ್ದದ ಮುಂದೆ ಇರುವ ತೃತೀಯಾದಿವಿಭಕ್ತಿಯು ಉದಾತ್ತ ವಾಗುವುದು ಎಂದು **' ಸಾವೇಚಃ '** ಎಂಬ ಸೂತ್ರಕ್ಕೆ ಅರ್ಥವು. ಏವಂಚ, ಯಾತ್ ಶಬ್ದವು ಪ್ರಥಮೈಕವಚನದಲ್ಲಿ ಏಕಾಚ್ಕವಾಗಿದೆ, ಆದ್ದರಿಂದ ಅದರ ಮುಂದಿರುವ ವಿಭಕ್ತಿಗೆ ಉದಾತ್ತ ಬರಬಹುದು, ಎಂದರೆ, ಈಗ ಯದ್ಯಪಿ **'ಯಾತಾ'** ಎಂಬಲ್ಲಿ ದೋಷವಿಲ್ಲ ಆದರೂ ದೋಷಭ್ಯಾಂ ಎಂಬಲ್ಲಿ ದೋಷ ಬರುವುದು. **' ದೋಃ '** ಎಂದು ಪ್ರಥಮೈಕ ವಚನ ದಲ್ಲಿ ದೋಃಶಬ್ದವು ಏಕಾಚ್ಕವಾಗಿದೆ. ಇದರ ಮುಂದೆ ಭ್ಯಾಮ್ ಪ್ರತ್ಯಯ ಬಂದಾಗ **' ಪದ್ದನ್ನೋಮಾಸ್ ಹೃನಿ ಶಸನ್ಯೂಷನ್ದೋಷನ್'** (ಪಾ. ಸೂ. ೬-೧-೬೩) ಎಂಬುದರಿಂದ ದೋಷನ್ ಆದೇಶ ಬಂದ ಮೇಲೆ ದೋರ್ಷ+ಭ್ಯಾಂ ಎಂದಿರುವಾಗಲೂ ಭ್ಯಾಮ್‌ಗೆ ಉದಾತ್ತ ಬರಬೇಕಾಗುವುದು. **' ದೋಷಭ್ಯಾಮ್ '** ಎಂದು ಮಧ್ಯೋದಾತ್ತ ಸ್ವರವೇ ಇಲ್ಲಿ ಇಷ್ಟವು. ಆದ್ದರಿಂದ ರೂಪಗ್ರಹಣವನ್ನು ವಿವಕ್ಷಿಸಲೇಬೇಕು. ಈಗ ಸು ಪರದಲ್ಲಿರುವ ಏಕಾಚ್ಕವಾದ ರೂಪವು **' ದೋಃ '** ಎಂದು. ಅದರ ಮುಂದೆ ಭ್ಯಾಂ ಇಲ್ಲ. ಆದ್ದರಿಂದ **' ಸಾವೇಕಾಚಃ '** ಎಂಬುದರಿಂದ ವಿಭಕ್ತಿಗೆ ಉದಾತ್ತ ಬರುವುದಿಲ್ಲ. ಕಿಂತು **' ಅನುದಾತ್ತೌ ಸುಪ್ಪಿತೌ '** ಎಂಬುದರಿಂದ ಅನುದಾತ್ತ ಬರುತ್ತೆ. ದೋಃಶಬ್ದವು

**‘ ದಮೇರ್ಡೋಸಿಃ ’** (ಉ. ಸೂ. ೨೨೮) ಎಂಬುದರಿಂದ ಡೋಸಿ ಪ್ರತ್ಯಯಾಂತ, ಪ್ರತ್ಯಯಸ್ವರದಿಂದ ಅಂತೋದಾತ್ತ. ಇದರ ಸ್ಥಾನದಲ್ಲಿ ಬರುವ ದೋಷನ್ ಆದೇಶವೂ ಸಹ ಅಂತೋದಾತ್ತವಾಗಿ ಬಂದರೆ ದೋಷಭ್ಯಾಂ ಎಂದು ಮಧ್ಯೋದಾತ್ತವು ಸಿದ್ಧವಾಗುತ್ತದೆ, ಸೌ ಎಂಬುದು ಸಪ್ತಮೀ ಬಹುವಚನವೆಂದು ವಿವಕ್ಷಿಸಿದರೂ, **‘ ಸೌವೇಕಾಚಃ ’** ಎಂಬಲ್ಲಿ ಪೂರ್ವೋಕ್ತರೀತಿಯಲ್ಲಿ ರೂಪ ಗ್ರಹಣ ವಿವಕ್ಷೆಮಾಡದೇ ಇದ್ದರೆ ದೋಷಭ್ಯಾಂ. ಎಂಬಲ್ಲಿ ದೋಷ ಬಂದೇ ಬರುವುದು. ಏವಂಚ ದೋಷಭ್ಯಾಂ ಎಂಬಲ್ಲಿ ವಿಭಕ್ತಿಗೆ ಉದಾತ್ತಸ್ವರವಾರಣೆಗಾಗಿ **‘ ಸಾವೇಕಾಚಃ ’** ಎಂಬಲ್ಲಿ ರೂಪ ಗ್ರಹಣವಿವಕ್ಷೆಯು ಅವಶ್ಯಕವೆಂದು ಸಿದ್ಧವಾದ ಮೇಲೆ ಪ್ರಥಮೈಕವಚವನ್ನು ಗ್ರಹಿಸಿದರೆ ಯಾತಾ ಎಂಬಲ್ಲಿ ಉದಾತ್ತ ಬರಲಾರದು. ಅದಕ್ಕೆ ಸಪ್ತಮೀ ಬಹುವಚನಕ್ಕೇ ಗ್ರಹಣವೆಂದು ಇಟ್ಟುಕೊಳ್ಳಬೇಕು. ಈಗ **‘ ಯಾತ್ಸು ’** ಎಂದು ಸಪ್ತಮಿಯಲ್ಲಿ ರೂಪವಾದ್ದರಿಂದ ಸೌಯದೇಕಾಜ್ರೂಪಂ ಯಾತ್, ಇತಿ, ತತಃಪರವಾದ ವಿಭಕ್ತಿ ಇರುವುದರಿಂದ ಯಾತಾ, ಯಾದ್ಭ್ಯಾಮ್, ಇತ್ಯಾದಿ ಕಡೆಗಳಲ್ಲಿ ಉದಾತ್ತಸ್ವರ ಸಿದ್ಧವಾಗುವುದು. **‘ ಸಾವೇಕಾಚಃ ’** ಎಂಬಲ್ಲಿ ಸಪ್ತಮೀ ವಿಭಕ್ತಿ ಎಂದು ಇಟ್ಟುಕೊಂಡು ರೂಪಗ್ರಹಣವನ್ನು ವಿವಕ್ಷಿಸಿದರೂ **‘ ದೋಷಭ್ಯಾಂ ’** ಎಂಬಲ್ಲಿ ದೋಷ ಬಂದೇ ಬರುವುದು. ದೋಃಷು ಎಂಬಲ್ಲಿ ಸುಪರದಲ್ಲಿ **‘ ದೋಃ ’** ಎಂಬ ರೂಪವಿದೆ. ಇದು ದೋಷಭ್ಯಾಂ ಎಂಬಲ್ಲಿ ಯದ್ಯಪಿ ಶ್ರುತವಾಗಿಲ್ಲ. ಆದರೂ ದೋಷ್ ಎಂಬುದರ ಸ್ಥಾನದಲ್ಲಿ ದೋಷನ್–ಆದೇಶ ಬಂದಿರುವುದರಿಂದ **‘ ಸ್ಥಾನಿವದಾದೇಶಃ ’** (ಪಾ. ಸೂ. ೧-೧-೫೬) ಎಂಬ ಸ್ಥಾನಿವದ್ಭಾವದಿಂದ ದೋಷನ್ ಎಂಬ ರೂಪವೇ ದೋಃ ಎಂಬ ರೂಪದಂತೆ ಆಗುತ್ತದೆ. ಆದ್ದರಿಂದ ಸಪ್ತಮೀ ಬಹುವಚನದಲ್ಲಿ ಯಾವ ರೂಪವಿದೆಯೋ ತತಃಪರವಾದ ತೃತೀಯಾದಿ ವಿಭಕ್ತಿ ಇರುವುದರಿಂದ ಭ್ಯಾಂ, ಗೆ ಉದಾತ್ತ ಬರಬೇಕಾಗುವುದು, **‘ ದೋಷಭ್ಯಾಂ ಸ್ವಾಹಾ ’** ತೈತ್ತಿರೀಯದಲ್ಲಿ ಮಧ್ಯೋದಾತ್ತವೇ ಇರುವುದರಿಂದ ವಿಭಕ್ತಿಗೆ ಉದಾತ್ತಸ್ವರವೇ ಇಷ್ಟವು ಎನ್ನಲಾಗುವುದಿಲ್ಲ. ಸಪ್ತಮೀ ಬಹುವಚನ ಪರದಲ್ಲಿರುವಾಗ ಯಾವ ರೂಪವಿದೆಯೋ ಆ ರೂಪವೇ ಶ್ರುತವಾಗಿದ್ದರೆ ಅಲ್ಲಿಯೇ **‘ಸಾವೇಕಾಚಃ’** ಎಂಬುದು ಬರುವುದು. ಎಲ್ಲಿ ಸಾಕ್ಷಾತ್ ಶ್ರುತವಾಗದೆ ಇದೆಯೋ ಅಲ್ಲಿ ಸ್ಥಾನಿವದ್ಭಾವಾದಿಗಳಿಂದ ಅದೇ ರೂಪವಿದೆ ಎಂದು ಭಾವಿಸಿ ಪ್ರಕೃತ ಸೂತ್ರವು ಪ್ರವೇಶಿಸುವುದಿಲ್ಲ ಎನ್ನುತ್ತೇವೆ. ಏವಂಚ ದೋಷಭ್ಯಾಂ ಎಂಬಲ್ಲಿ ದೋಃ ಎಂಬುದು ಶ್ರುತವಾಗಿಲ್ಲದ ಕಾರಣ ಇಲ್ಲಿ ಸಾವೇಕಾಚಃ ಎಂಬುದು ಬರುವುದಿಲ್ಲ. ಎಂದರೆ ಈ ಪಕ್ಷದಲ್ಲಿ **‘ನಗೋಶ್ವನ್’** ಸೂತ್ರದಲ್ಲಿ ಶುನಃ, ಶುನಾ, ಎಂದು ಭಾಷ್ಯಕಾರರು ಉದಹರಿಸಿರುವುದು ಅಸಂಗತವಾಗಬೇಕಾಗುವುದು. **‘ ಶ್ವಸು ’** ಎಂದು ಸಪ್ತಮೀ ಬಹು ವಚನದ ರೂಪ, ಇಲ್ಲಿ ಶ್ವ ಎಂಬ ರೂಪವು ಶ್ರುತ, ನಲೋಪಕ್ಕೆ ಸ್ವರವಿಧಿಯಾದ್ದರಿಂದ **‘ ನಲೋಪಃ ಸುಪ್‌ಸ್ವರ– ’** (ಪಾ ಸೂ ೮-೨-೨) ಎಂಬುದರಿಂದ ಅಸಿದ್ಧತ್ವ ಬಂದರೂ **‘ ಶ್ವನ್ ’** ಎಂದು ಇದ್ದಂತೆ ಆಗುತ್ತೆ. ಶುನಃ, ಶುನಾ, ಎಂಬಲ್ಲಿ ಶ್ವನ್, ಎಂಬ ರೂಪವು ಶ್ರುತವೇದಿನಾ, ಶ್ವ ಎಂದಾಗಲಿ ಶ್ವ, ಎಂದಾಗಲೀ ಶ್ರುತವಾಗಿಲ್ಲ, ಆದ್ದರಿಂದ ಇಲ್ಲಿ **‘ ಸಾವೇಕಾಚಃ– ’** ಎಂಬುದಕ್ಕೆ ಪ್ರಾಪ್ತಿಯೇ ಇಲ್ಲ. ಅಂದ ಮೇಲೆ ಪ್ರತಿಷೇಧವು ಏತಕ್ಕಾಗಿ ಇಲ್ಲಿ ಬರಬೇಕು, ಆದ್ದರಿಂದ ಸಾಕ್ಷಾತ್ ಶ್ರುತವಾದ ರೂಪವೇ ಇರಬೇಕೆಂದು ನಿರ್ಬಂಧವಿಲ್ಲ ಎಂದು ಇಟ್ಟುಕೊಳ್ಳಬೇಕು. ಈಗ, ಶ್ವನ ಏಕದೇಶವಾದ ವಕಾರಕ್ಕೆ ಸಂಪ್ರಸಾರಣದಿಂದ ಉಕಾರ ಬಂದು ಏಕದೇಶಕ್ಕೆ ವಿಕಾರ ಬಂದಿದ್ದರೂ **‘ ಏಕದೇಶವಿಕೃತಮನನ್ಯವತ್ ’** ಎಂಬುದರಿಂದ ಶ್ವನ್ ಎಂಬುದೇ ಇದೆಯೆಂದು ಭಾವಿಸಿ **‘ ಸಾವೇಕಾಚಃ– ’** ಎಂಬುದು ಪ್ರಾಪ್ತವಾದರೆ, ಅದನ್ನು ತಪ್ಪಿಸುವುದಕ್ಕಾಗಿ ಶುನಃ, ಶುನಾ ಎಂಬ ಪ್ರತಿಷೇಧವಾದ ಉದಾಹರಣೆಯು ಸಂಗತವಾಗುತ್ತದೆ. ಏವಂಚ ದೋಷಭ್ಯಾಂ, ಎಂಬಲ್ಲಿ ಸ್ಥಾನಿವದ್ಭಾವದಿಂದ ದೋಃ, ಎಂಬ ರೂಪ

ವಿರುವುದರಿಂದ ವಿಭಕ್ತಿಗೆ ಉದಾತ್ತ ಬರಲಿ ಎಂದು ಆಕ್ಷೇಪಿಸಬಹುದು. ಇದಕ್ಕೆ ಸಮಾಧಾನ, ಲಕ್ಷ್ಯಾನುಸಾರವಾಗಿ **' ಏಕಾಚಃ '** ಎಂಬುದನ್ನು ಆವೃತ್ತಿ ಮಾಡಿಕೊಳ್ಳುತ್ತೇವೆ. ತಥಾಚ ಸುಪ್ರತ್ಯಯ ಪರದಲ್ಲಿರುವಾಗ ಯಾವ ಅರ್ಥ ಕೊಡುವ ಏಕಾಚ್ಕವಾದ ಶಬ್ದವು ಶ್ರುತವಾಗಿದೆಯೋ ಅಂತಹ ರೂಪದ ಮುಂದೆ ಇರುವ ವಿಭಕ್ತಿಯು ಏಕಾಚ್ಕದ ಮುಂದೆಯೇ ಇರುವ ಪಕ್ಷದಲ್ಲಿ ಅದಕ್ಕೆ ಉದಾತ್ತ ಬರುವುದು ಎಂದು ಸೂತ್ರನಿಷ್ಕರ್ಷಾರ್ಥವಾಗುವುದು, ದೋಷಭ್ಯಾಂ, ಎಂಬುದು ದೋಷ ಎಂಬ ಅನೇಕಾಚ್ಕದ ಮುಂದೆ ಇರುವುದರಿಂದ ಇಲ್ಲಿ ಉದಾತ್ತಸ್ವರ ಬರುವುದಿಲ್ಲ. ಸೌ ಎಂಬ ಪದವೇ ಇಲ್ಲದಿದ್ದರೆ, ಏಕಾಚಃ ಪರಂ, ತೃತೀಯಾದಿರ್ವಿಭಕ್ತಿರುದಾತ್ತಾ ಸ್ಯಾತ್, ಎಂದು ಅರ್ಥವಾಗುತ್ತೆ. ರಾಜ್ಞಾ ಎಂಬಲ್ಲಿ ಟಾವು **' ರಾಜ್ಞ್ '** ಎಂಬ ಏಕಾಚ್ಕದ ಮುಂದೆ ಇರುವುದರಿಂದ ಉದಾತ್ತವಾಗಬೇಕಾಗುತ್ತೆ. ಏಕಾಚಃ ಎಂದಿಲ್ಲದಿದ್ದರೆ, ಸೌ, ವರ್ತಮಾನಾತ್ ಶಬ್ದಾತ್ಪರಾ ತೃತೀಯಾದಿರ್ವಿಭಕ್ತಿರುದಾತ್ತಾಸ್ಯಾತ್, ಎಂದು **ಸಾವೇಕಾಚ** ಎಂಬ ಸೂತ್ರಾರ್ಥವಾಗುವುದು. ಈಗಲೂ ರಾಜ್ಞಾ ಎಂಬಲ್ಲಿ ಸೌ ವರ್ತಮಾನ ಶಬ್ದಾತ್ಪರವಾದ ಟಾ ಇರುವುದರಿಂದ ಉದಾತ್ತ ಬರಬೇಕಾಗುತ್ತೆ. ಸೌ ಎಂಬುದಕ್ಕೆ ಈ ಪಕ್ಷದಲ್ಲಿ **' ದ್ವಾಭ್ಯಾಂ '** ಎಂಬ ಸು ಪರಕತ್ವ ಸಂಭವಿಸದ ಶಬ್ದವು ವ್ಯಾವರ್ತವಾಗಬೇಕಾಗುತ್ತದೆ. ಏವಂಚ ಇಲ್ಲಿ ಸೌ, ಏಕಾಚಃ ಎಂದೆರಡೂ ಇರಲೇಬೇಕು. ಸೌ ಎಂಬುದರಿಂದ ಸಪ್ತಮೀಬಹುವಚನವನ್ನೇ ತೆಗೆದುಕೊಳ್ಳಬೇಕು, ರೂಪಗ್ರಹಣವನ್ನೂ ವಿವಕ್ಷಿಸಬೇಕು ಎಂದು ತೀರ್ಮಾನವು ಏರ್ಪಟ್ಟಿತು.

ಹೀಗಾದರೂ ಸ್ತ್ರೀಲಿಂಗದಲ್ಲಿ ಆಭ್ಯಾಂ, ಇತ್ಯಾದಿ ಶಬ್ದಗಳಲ್ಲೂ, ಏಭಿಃ, ಏಷಾಮ್, ಇತ್ಯಾದಿ ರೂಪಗಳಲ್ಲೂ **ಸಾವೇಕಾಚಃ** ಎಂಬುದರಿಂದ ವಿಭಕ್ತಿಗೆ ಉದಾತ್ತ ಬರಬೇಕಾಗುವುದು. ಆದ್ದರಿಂದ ಸರ್ವಾನುದಾತ್ತವು ಲಭಿಸಲಾರದು ಸ್ತ್ರೀಲಿಂಗದಲ್ಲಿ ಆಸು, ಎಂದು ಸಪ್ತಮೀರೂಪವು, ಆದ್ದರಿಂದ ಸು ಪರದಲ್ಲಿರುವಾಗ ಆ-ಎಂಬ ಏಕಾಚ್ಕ ರೂಪವು ಶ್ರುತವು, ಆಭ್ಯಾಂ, ಎಂಬಲ್ಲಿ ಅಂತಹ, ಆ ನ ಮುಂದೆ ಇರುವ ಭ್ಯಾಂ ಗೆ ಸಾವೇಕಾಚಃ ಎಂಬುದರಿಂದ ಉದಾತ್ತ ಬರಬೇಕಾಗುತ್ತದೆ, ಪುಲ್ಲಿಂಗ ನಪುಂಸಕಲಿಂಗಗಳಲ್ಲಿ ಏಷು, ಸಪ್ತಮಿಯಲ್ಲಿ ರೂಪ. ಆದ್ದರಿಂದ ಸು ಪರದಲ್ಲಿರುವಾಗ ಏ, ಎಂದು ಏಕಾಚ್ಕವಾದರೂ, ಏಭಿಃ, ಏಷಾಂ, ಎಂಬಲ್ಲಿ ಇಂತಹ ಏ ನ ಮುಂದೆ ಇರುವ, ಭಿಸ್ ಸಾಮ್‌ಗಳಿಗೆ ಸಾವೇಕಾಚಃ, ಎಂಬುದರಿಂದ ಉದಾತ್ತ ಬರಬೇಕಾಗುತ್ತದೆ.

ಈ ರೀತಿಯಲ್ಲಿ ವಿಭಕ್ತಿಗೆ ಉದಾತ್ತ ಬಂದರೆ **'ಅನುದಾತ್ತಂಪದಮೇಕವರ್ಜಂ'** (ಪಾ. ಸೂ. ೬-೧-೧೫೮) ಎಂಬ ಶೇಷಾನುದಾತ್ತಸ್ವರದಿಂದ ಪ್ರಕೃತಿಗೆ ಅನುದಾತ್ತವು ಸಿದ್ಧವೇ ಆಗುವುದು. ಹೀಗಿರುವಲ್ಲಿ **' ಇದಮೋನ್ವಾದೇಶೇಽಶನುದಾತ್ತಸ್ತೃತೀಯಾದೌ '** (ಪಾ. ಸೂ. ೨-೪-೩೨) ಎಂಬ ಸೂತ್ರದಲ್ಲಿ ಅಶ್‌ಗೆ ಅನುದಾತ್ತ ವಿಧಿಯು ವ್ಯರ್ಥವಾಗುತ್ತದೆ. ಅದು ವ್ಯರ್ಥವಾಗಿ, ಅನ್ವಾದೇಶದಲ್ಲಿ ಅಶ್ ಬಂದಿದ್ದರೆ ಅಲ್ಲಿ ವಿಭಕ್ತಿಗೆ ಉದಾತ್ತ ಬರುವುದಿಲ್ಲವೆಂದು ಜ್ಞಾಪಿಸಿಕೊಡುವುದು. ಆದ್ದರಿಂದ ಏಭಿಃ ಇತ್ಯಾದಿ ಸ್ಥಳಗಳಲ್ಲಿ ವಿಭಕ್ತಿಯು ಉದಾತ್ತವಾಗಲಾರದು ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸರ್ವಥಾ ಅಶ್‌ಗೆ ಅನುದಾತ್ತವಿಧಿಯು ವ್ಯರ್ಥವಾದರೆ **' ವ್ಯರ್ಥಂಸತ್ ಕಿಂಚಿದರ್ಥಂ ಜ್ಞಾಪಯತಿ '** ಎಂಬ ನ್ಯಾಯದಿಂದ ನಿರುಕ್ತಾರ್ಥವನ್ನು ಜ್ಞಾಪಿಸುವುದು ಎಂದು ಹೇಳಬಹುದು. ಆದರೆ ಅದು ಸರ್ವಥಾ ವ್ಯರ್ಥವಾಗುವುದಿಲ್ಲ. **ಎಲ್ಲಿ ಸಾವೇಕಾಚಃ** ಎಂದು ವಿಭಕ್ತಿಗೆ ಉದಾತ್ತ ಬರಬಾರದೋ ಅಲ್ಲಿ ಶೇಷನಿಘಾತದಿಂದ ಪ್ರಕೃತಿಯು ಅನುದಾತ್ತವಾಗಲಾರದು. ಅಲ್ಲಿ ಅನುದಾತ್ತ ವಿಧಿಯು ಸಾರ್ಥಕವು. ಉದಾಹರಣೆ-ಪುಲ್ಲಿಂಗ

ನಪುಂಸಕಲಿಂಗದಲ್ಲಿ ಆಭ್ಯಾಮ್ ಇತ್ಯಾದಿಗಳು, ಪುಂ, ನಪುಂಸಕಲಿಂಗಗಳಲ್ಲಿ ಸು ಪರದಲ್ಲಿರುವಾಗ ಏ, ಏಕಾಚ್ಕ ರೂಪ, ಆ ಎಂದಲ್ಲ ಆದ್ದರಿಂದ ಸಪ್ತಮೀ ಬಹುವಚನದಲ್ಲಿ ಎಂತಹ ಏಕಾಚ್ಕರೂಪವಿದೆಯೋ ಅದು ಇಲ್ಲವು. ಆಸು ಎಂಬ ಸ್ತ್ರೀಲಿಂಗದಲ್ಲಿ ಸಪ್ತಮೀ ಬಹುವಚನ ಪರದಲ್ಲಿರುವಾಗ ಆ ಎಂಬ ರೂಪವು ಯದ್ಯಪಿ ಇದೆ. ಆದರೇನು, ಅರ್ಥವು ಬೇರೆಯಾಗುತ್ತದೆ, ಸ್ತ್ರೀಲಿಂಗ ಬೋಧಕವಾದ ಆ, ಎಂಬ ಏಕಾಚ್ಕ ರೂಪವಿದು, ಪುಂನಪುಂಸಕದ ಆಭ್ಯಾಂ ನ ಆ ವು ಪುಂ. ನಪುಂಸಕ ಬೋಧಕವಾದ ಏಕಾಚ್ಕರೂಪವು. ಏವಂಚ ಸೌ ಯದರ್ಥ ವಿಶಿಷ್ಟಮೇಕಾಜ್ರೂಪಂತತಃಪರವಾಗುವು ದಿಲ್ಲವಾದ್ದರಿಂದ ಪು. ನ. ಲಿಂ. ಆಭ್ಯಾಂಗೆ ಉದಾತ್ತವು ಸಿದ್ಧಿಸದು, ಆದ್ದರಿಂದ ಶೇಷನಿಘಾತದಿಂದ ಪ್ರಕೃತಿಯು ಅನು ದಾತ್ತವಾಗುವುದಿಲ್ಲ. ಇಲ್ಲಿ ಅನುದಾತ್ತಸಿದ್ಧಿಗಾಗಿ ಅನುದಾತ್ತವಿಧಿಯು ಸಾರ್ಥಕವೇ ಆಗುತ್ತದೆ. ಆದ್ದರಿಂದ ಅನ್ವಾದೇಶವಿಷಯದಲ್ಲಿ ವಿಭಕ್ತಿಸ್ವರ ಬರುವುದಿಲ್ಲವೆಂದು ಅನುದಾತ್ತವಿಧಿಯು ಜ್ಞಾಪಿಸಲಾರದು. ಪ್ರಥಮೈಕವಚನ ದಲ್ಲಿ ಅವರ್ಣಾಂತವಾಗುವುದಿಲ್ಲವಾದ್ದರಿಂದ '**ನಗೋಶ್ವನ್**'-ಎಂಬುದರಿಂದ ಏಭಿಃ ಇತ್ಯಾದಿಯಲ್ಲಿ ಉದಾತ್ತಕ್ಕೆ ನಿಷೇಧಬರುವುದು ಎನ್ನಲಾಗುವುದಿಲ್ಲ. '**ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ**' (ಪಾ. ಸೂ. ೬-೧-೧೭೧) ಎಂಬಲ್ಲಿ ಅಂತೋದಾತ್ತಾತ್; ಎಂದು ಅನುವೃತ್ತವಾಗುತ್ತದೆ. ಆಭ್ಯಾಂನಲ್ಲಿ ಪ್ರಕೃತಿಯು ಅನುದಾತ್ತ. ಆದ್ದರಿಂದ ಅಂತೋದಾತ್ತಾತ್ಪರವಾದ ವಿಭಕ್ತಿ ಇಲ್ಲದಕಾರಣ '**ಊಡಿದಂ**' ಎಂಬುದರಿಂದ ವಿಭಕ್ತಿಗೆ ಉದಾತ್ತವು ಸಿದ್ಧಿಸ ಲಾರದು. ಏವಂಚ ವಿಭಕ್ತಿಗೆ ಉದಾತ್ತಸ್ವರವೇ ಇಷ್ಟವೆಂದು ಹೇಳಲಾಗುವುದಿಲ್ಲ. '**ಏಭಿರಗ್ನೇ ಪಿಬಸಿ ತ್ವಮೇ ಷಾಮ್**' '**ಏಭಿರಗ್ನೇ ದುವೋ ಗಿರಃ**'-(ಋ. ಸಂ. ೧-೧೪-೧) ಇತ್ಯಾದಿ ವೈದಿಕಪ್ರಯೋಗ ಗಳಲ್ಲಿ ಸರ್ವಾನುದಾತ್ತವೇ ಶ್ರುತವಾಗಿರುವುದು. ಇಲ್ಲಿ ಸಾವೇಕಾಚ ಎಂಬುದಕ್ಕೆ ಪರಿಷ್ಕೃತವಾದ ಅರ್ಥವನ್ನು ಇಟ್ಟುಕೊಂಡರೂ ವಿಭಕ್ತಿಗೆ ಉದಾತ್ತವೇ ಬರಬೇಕಾಗುತ್ತದೆ. ಆದ್ದರಿಂದ ಏಭಿಃ-ಇತ್ಯಾದಿ ಕಡೆಗಳಲ್ಲಿ ಸರ್ವಾನು ದಾತ್ತವು ಛಾಂದಸವೆಂದೇ ಇಟ್ಟುಕೊಳ್ಳಬೇಕಾಗುತ್ತೆ '**ಏಭಿರಗ್ನೇ ಇತ್ಯಾದೌ ಸರ್ವಾನುದಾತ್ತಪದಶ್ರವಣಂತು ಛಾಂದಸಮಿತಿ ತದ್ಭಾವಃ**' (ಉದ್ಯೋತ ೬-೧-೧೬೮) ಅನ್ಯೇತು, ಇತ್ಯಾದಿ ಪ್ರದೀಪಾಶಯವರ್ಣನಕಾಲದಲ್ಲಿ ಉದ್ಯೋತಕಾರರು ಹೇಳಿರುವರು ಪ್ರಕೃತಸೂತ್ರದ ಶೇಖರದಲ್ಲಿ ಚಂದ್ರಕಲೆಯನ್ನು ನೋಡಿದ ಸಮಾಧಾನಗ್ರಂಥವು ಲುಪ್ತವಾಗಿದೆ ಎಂದು ತೋರುತ್ತದೆ. ಈಗ ಉಪಲಬ್ಧಶೇಖರರೀತ್ಯಾ ಸಾವೇಕಾಚಃ ಎಂಬುದಕ್ಕೆ ಪರಿಷ್ಕೃತಾರ್ಥ ವನ್ನಿಟ್ಟುಕೊಂಡರೂ ಏಭಿಃ ಎಂಬಲ್ಲಿ ಇದಕ್ಕೆ ಪ್ರವೃತ್ತಿಯನ್ನು ತಡೆಯಲಾಗುವುದಿಲ್ಲ ಎಂದು ಏರ್ಪಡುವುದು. ಪ್ರಕೃತ ವನ್ನು ವಿಚಾರಿಸುವ, ಯಾಭಿಃ ಎಂಬಲ್ಲಿ ಸಾವೇಕಾಚಃ ಎಂಬುದರಿಂದ ವಿಭಕ್ತಿಗೆ ಉದಾತ್ತವು ಯದ್ಯಪಿ ಪ್ರಾಪ್ತವಾಗುತ್ತೆ. ಅದಕ್ಕೆ '**ನಗೋಶ್ವನ್ಸಾವವರ್ಣರಾಡಜ್ಕ್ರುಙ್ಕೃದ್ಭ್ಯಃ**' (ಪಾ. ಸೂ. ೬-೧-೧೮೨) ಗೋಶಬ್ದ, ಶ್ವನ್‌ಶಬ್ದ ಪ್ರಥಮೈಕವಚನದಲ್ಲಿ ಅವರ್ಣಾಂತವಾದ ಶಬ್ದ ಕ್ವಿಬಂತವಾದ ರಾಟ್ ಶಬ್ದ, ಅಞ್ಚ ಧಾತುವಿಗೆ ಕ್ವಿಪ್ ಬಂದು ನಿಷ್ಪನ್ನವಾದ ಅಜ್ ಶಬ್ದ, ಕ್ರುಞ್ಚ ಧಾತುವಿಗೆ ಕ್ವಿನ್ ಬಂದು ಸಿದ್ಧವಾದ ಕ್ರುಙ್ ಶಬ್ದ, ಕೃಧಾತುವಿಗೆ ಕ್ವಿಪ್ ಬಂದು ನಿಷ್ಪನ್ನವಾದ ಕೃತ್ ಶಬ್ದ ಇವುಗಳ ಮುಂದೆ ಇರುವ ವಿಭಕ್ತಿಗೂ ಮತುಪ್ಪಿಗೂ ಉದಾತ್ತಬರುವುದಿಲ್ಲ ಎಂಬುದರಿಂದ ಪ್ರಥಮೈಕವಚವದಲ್ಲಿ '**ಯಾ**' ಎಂದು ಅವರ್ಣಾಂತವಾದ ಯಾ ನ ಮುಂದಿರುವ ಭಿಸ್‌ಗೆ ಉದಾತ್ತಬರುವುದಿಲ್ಲ. ಮಿಕ್ಕ ಪ್ರಕ್ರಿಯೆಯು ಸ್ಪಷ್ಟವಾಗಿರುವುದು ॥ ೧೭ ॥

॥ ಸಂಹಿತಾಪಾಠಃ ॥

ಅಪೋ ದೇವೀರುಪ ಹ್ವಯೇ ಯತ್ರ ಗಾವಃ ಪಿಬಂತಿ ನಃ ।
ಸಿಂಧುಭ್ಯಃ ಕರ್ತ್ವಂ ಹವಿಃ ॥ ೧೮ ॥

॥ ಪದಪಾಠಃ ॥

ಅಪಃ । ದೇವೀಃ । ಉಪ । ಹ್ವಯೇ । ಯತ್ರ । ಗಾವಃ । ಪಿಬಂತಿ । ನಃ ।
ಸಿಂಧುಽಭ್ಯಃ । ಕರ್ತ್ವಂ । ಹವಿಃ ॥ ೧೮ ॥

॥ ಸಾಯಣಭಾಷ್ಯಂ ॥

ನೋಽಸ್ಮದೀಯಾ ಗಾವೋ ಯತ್ರ ಯಾಸ್ವಪ್ಸು ಪಿಬಂತಿ ಪಾನಂ ಕುರ್ವಂತಿ ತಾ ಅಪೋ ದೇವೀರುಪ ಹ್ವಯೇ । ಆಹ್ವಯಾಮಿ । ಸಿಂಧುಭ್ಯಃ ಸ್ಯಂದನಶೀಲಾಭ್ಯೋಽದ್ಭ್ಯೋ ದೇವತಾಭ್ಯೋ ಹವಿಃ ಕರ್ತ್ವಂ । ಅಸ್ಮಾಭಿಃ ಕರ್ತವ್ಯಂ ॥ ಅಪಃ । ಊಡಿದಮಿತ್ಯಾದಿನಾ ಶಸ ಉದಾತ್ತತ್ವಂ । ಪಿಬಂತಿ । ಪ್ರಾಘ್ರೇತ್ಯಾದಿನಾ ಪಿಬಾದೇಶಃ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರೇಣಾದ್ಯುದಾತ್ತತ್ವಂ ॥ ನಿಪಾತೈರ್ಯದ್ಯದೀತ್ಯಾದಿನಾ ನಿಘಾತಾಭಾವಃ । ಕರ್ತ್ವಂ । ಡುಕೃಞ್ ಕರಣೇ । ಕೃತ್ಯಾರ್ಥೇ ತವೈಕೇನ್ಕೇನ್ಯತ್ವನಃ । ಪಾ. ೩-೪-೧೪ । ಇತಿ ಕರ್ಮಣಿ ತ್ವನ್ಪ್ರತ್ಯಯಃ । ಗುಣಃ । ನಿತ್ಸ್ವರೇಣಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ನಃ**—ನಮ್ಮ । **ಗಾವಃ**—ಹಸುಗಳು । **ಯತ್ರ**—ಯಾವ ಜಲಾಶಯದಲ್ಲಿ । **ಪಿಬಂತಿ**—ನೀರು ಕುಡಿಯುವವೋ । (ಆ) **ಅಪೋ ದೇವೀಃ**—ಉತ್ತಮವಾದ ಆ ಉದಕವನ್ನು । **ಉಪ ಹ್ವಯೇ**—ಆಹ್ವಾನ ಮಾಡುವೆನು । **ಸಿಂಧುಭ್ಯಃ**—ಹರಿಯುತ್ತಿರುವ ಆ ಉದಕಗಳನ್ನುದ್ದೇಶಿಸಿ । **ಹವಿಃ**—ಹವಿಃಪ್ರದಾನವು । **ಕರ್ತ್ವಂ**—ಮಾಡಲ್ಪಡಬೇಕು.

॥ ಭಾವಾರ್ಥ ॥

ನದಿಯೇ ಮುಂತಾದ ಯಾವ ಜಲಾಶಯದಲ್ಲಿ ನಮ್ಮ ಗೋವುಗಳು ನೀರನ್ನು ಕುಡಿಯುವವೋ ಆ ಶ್ರೇಷ್ಠವಾದ ಉದಕವನ್ನು ಆಹ್ವಾನ ಮಾಡುವೆನು. ಹರಿಯುತ್ತಿರುವ ಆ ಉದಕವನ್ನುದ್ದೇಶಿಸಿ ನಾವು ಹವಿಃಪ್ರದಾನವನ್ನು ಅವಶ್ಯಕವಾಗಿ ಮಾಡಬೇಕು.

## English Translation.

I invoke hither the sacred waters at which our cows drink; our oblations are to be made to those streams.

॥ ವಿಶೇಷವಿಷಯಗಳು ॥

**ಸಿಂಧುಭ್ಯಃ—ಸ್ಯಂದನಶೀಲಾಭ್ಯೋ ದೇವತಾಭ್ಯಃ**— ಈ ಋಕ್ಕಿನಲ್ಲಿಯೂ ಇತರ ಉದಕಾಭಿಮಾನಿ ದೇವತೆಗಳನ್ನು ಪ್ರತಿಪಾದಿಸುವ ಋಕ್ಕುಗಳಲ್ಲಿಯೂ ಆಪೋ ದೇವೀಃ ಎಂದರೆ, ಶ್ರೇಷ್ಠವಾದ ಅಥವಾ ಪೂಜ್ಯವಾದ ಹರಿಯುವ ನೀರನ್ನುದ್ದೇಶಿಸಿಯೇ ಋಷಿಗಳು ಸ್ತೋತ್ರಮಾಡಿರುವರು. ಕೆಲವು ಸಂದರ್ಭಗಳಲ್ಲಿ ಹರಿಯದಿರುವ ಸರೋವರ, ತಟಾಕಾದಿಗಳ ಉದಕವೂ ನಿರ್ದೇಶಿಸಲ್ಪಡುವುದು. ಆದುದರಿಂದ ಪಾನಯೋಗ್ಯವಾದ ಸಿಹಿನೀರನ್ನೇ ವಿಶೇಷವಾಗಿ ಪ್ರಶಂಸೆಮಾಡಲಾಗಿರುವುದು. ಸಮುದ್ರದ ನೀರಿಗೆ ಅಷ್ಟು ಪ್ರಾಶಸ್ತ್ಯ ಕಂಡುಬರುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಅಪಃ**—ಅಪ್ ಶಬ್ದದ ಮುಂದೆ ದ್ವಿತೀಯಾಬಹುವಚನ ಶಸ್‌ಪ್ರತ್ಯಯ ಶ್‌ಗೆ '**ಲಶಕ್ವತದ್ಧಿತೇ**' (ಪಾ. ಸೂ. ೧–೩–೮) ಎಂಬುದರಿಂದ ಇತ್ಸಂಜ್ಞೆ ಬರಲು '**ತಸ್ಯಲೋಪಃ**' (ಪಾ. ಸೂ. ೧–೩–೯) ಎಂಬುದರಿಂದ ಲೋಪ, ಅಪ್+ಅಸ್–ಅಪಸ್, ಸ್, ಗೆ '**ಸಸಜುಷೋರುಃ**' (ಪಾ. ಸೂ- ೮–೨–೬೬) ಎಂಬುದರಿಂದ ರುತ್ವ, '**ಖರವಸಾನಯೋರ್ವಿಸರ್ಜನೀಯಃ**' (ಪಾ. ಸೂ. ೮–೩–೧೫) ಎಂಬುದರಿಂದ ವಿಸರ್ಗ, ಅಪಃ ಎಂದಾಗುತ್ತೆ. ಇಲ್ಲಿ '**ಊಡಿದಮ್‌ಪದಾದ್ಯಪ್ಪುಮ್ರೈದ್ಯುಭ್ಯಃ**' (ಪಾ. ಸೂ. ೬–೧–೧೭೧) '**ಸಾವೇಕಾಚಃ**'–(ಪಾ. ಸೂ. ೬–೧–೧೬೮) ಎಂಬುದರಿಂದ '**ಏಕಾಚಃ**' ಎಂದೂ, '**ಅಂತೋದಾದುತ್ತರಪದಾತ್**'–(ಪಾ. ಸೂ. ೬–೧–೧೬೯) ಎಂಬುದರಿಂದ ಅಂತೋದಾತ್ತ ಎಂದೂ, '**ಅಂಚೇಶ್ಛಂದಸ್ಯಸರ್ವನಾಮಸ್ಥಾನಮ್**' (ಪಾ. ಸೂ. ೬–೧–೧೭೦) ಎಂಬುದರಿಂದ ಅಸರ್ವನಾಮಸ್ಥಾನಂ ಎಂದೂ ಅನುವೃತ್ತವಾಗುತ್ತದೆ. ಊಠ್ ಏಕಾಚ್ರೂಪವು ಆಗಿದೆ. ಏಕಾಚ್ಕವಾಗಿಲ್ಲದಕಾರಣ ಏಕಾಚಃ ಎಂಬುದು ಅದಕ್ಕೆ ವಿಶೇಷಣ ಅಲ್ಲ, ಅಸಂಭವಾತ್. '**ಸಂಭವವ್ಯಭಿಚಾರಾಭ್ಯಾಂಸ್ಯಾದ್ವಿಶೇಷಣಮರ್ಥವತ್**' ಎಂದು ನ್ಯಾಯವು. ಸಂಭವ–ಯೋಗ್ಯತಾ, ವ್ಯಭಿಚಾರಃ–ಇತರಾವೃತ್ತಿಃ ಈಗ ಅಂತೋದಾತ್ತವೂ ಉಪಾಂತ್ಯದಲ್ಲಿರುವುದೂ ಆದ ಊಠ್, ಅಂತೋದಾತ್ತಗಳೂ ಏಕಾಚ್ಕಗಳೂ ಆದ ಇದಮ್ ಶಬ್ದ, ಆರು ಪಾದಾದಿಗಳು, ಅಪ್, ಪುಮ್, ರೈ, ದಿವ್ ಇವುಗಳ ಮುಂದೆ ಇರುವ ಅಸರ್ವನಾಮಸ್ಥಾನ ವಿಭಕ್ತಿಯು ಉದಾತ್ತವಾಗುತ್ತೆ ಎಂದು ಸೂತ್ರಾರ್ಥ. ಊಠ್‌ಘಟಿತಸಮುದಾಯವನ್ನು ಊಠ್ ಎಂಬುದರಿಂದ ವಿವಕ್ಷಿಸಿದರೆ ಏಕಾಚಃ ಎಂಬುದು ಊಠಿನಲ್ಲಿಯೂ ವಿಶೇಷಣವಾಗುತ್ತದೆ. ಆಗ ಅಂತೋದಾತ್ತವೂ ಉಪಾಂತ್ಯದಲ್ಲಿರುವುದೂ ಆದ ಊಠ್‌ಘಟಿತವಾದ ಏಕಾಚ್ಕಶಬ್ದದ ಮುಂದೆ ಇರುವ ಅಸರ್ವನಾಮಸ್ಥಾನ ವಿಭಕ್ತಿಯು ಉದಾತ್ತವಾಗುತ್ತದೆ, ಎಂದು ಊಠ್ ಎಂಬ ಭಾಗಕ್ಕೆ ಅರ್ಥವು. ಪ್ರಷ್ಠೌಹಃ, ವಿಶ್ವೌಹಃ ಇತ್ಯಾದಿ ಉದಾಹರಣೆಗಳು. ಏಕಾಚಃ ಎಂಬುದು ಸೂತ್ರೋಪಾತ್ತವಾದುದಕ್ಕೆ ವಿಶೇಷಣವು '**ಶ್ರುತಾನುಮಿತಯೋಃ ಶ್ರುತಸಂಬಂಧೋ ಬಲೀಯಾನ್**' ಎಂಬುದರಿಂದ ಪ್ರಕೃತಿಗೆ ವಿಶೇಷಣವಲ್ಲ. ಏವಂಚ, ಪ್ರಷ್ಠೌಹ್, ವಿಶ್ವೌಹ್ ಎಂಬ ಪ್ರಕೃತಿಯು ಅನೇಕಾಚ್ಕವಾದರೂ, ಊಠ್ ಎಂಬುದು ಏಕಾಚ್ಕವೇ ಆಗಿರುವುದರಿಂದ ಸ್ವರವು ಪ್ರವರ್ತಿಸುವುದು, ಏವಂಚ, ಬ್ರಾಹ್ಮಣಪದಾ ಇತ್ಯಾದಿ

ಗಳಲ್ಲೂ ಅಂತೋದಾತ್ತಸಿದ್ಧವಾಗುತ್ತದೆ. ಪ್ರಕೃತ ಅಪ್ ಶಬ್ದವು ಅಂತೋದಾತ್ತವೂ ಏಕಾಚ್ಕವೂ ಆಗಿದೆ. ಆದ್ದರಿಂದ ಅದರ ಮುಂದೆ ಇರುವ ಶಸ್ ಎಂಬ ಅಸರ್ವಸ್ಥಾನವಿಭಕ್ತಿಯು ಉದಾತ್ತವಾಗುವುದು.

**ಪಿಬಂತಿ**—'**ಪಾ ಪಾನೇ**' ಧಾತು, ಇದರ ಮುಂದೆ ಲಟ್ ಪ್ರಥಮಪುರುಷ ಬಹುವಚನ ಝಿಪ್ರತ್ಯಯ, '**ಝೋಽನ್ತಃ**' (ಪಾ. ಸೂ. ೭-೧-೩) ಎಂಬುದರಿಂದ ಝ್‌ಗೆ ಅನ್ತ್ ಆದೇಶ ಪಾ+ಅನ್ತಿ '**ಕರ್ತರಿಶಪ್**' (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣ ಪಾ+ಅ+ಅನ್ತಿ ಈಗ '**ಪಾಘ್ರಾಧ್ಮಾಸ್ಥಾಮ್ನಾದಾಣ್ದೃಶ್ಯರ್ತಿಸರ್ತಿಶದಸದಾಂ ಪಿಬಜಿಘ್ರಧಮತಿಷ್ಠಮನಯಚ್ಛಪಶ್ಯರ್ಚ್ಛಧೌಶೀಯಸೀದಾಃ** | (ಪಾ. ಸೂ. ೭-೩-೭೮) ಇತ್ಸಂಜ್ಞಕಶಕಾರಾದಿಪ್ರತ್ಯಯ ಪರದಲ್ಲಿರುವಾಗ ಪಾ ಮೊದಲಾದ ೧೧ ಧಾತುಗಳಿಗೆ ಪಿಬ ಮೊದಲಾದ ೧೧ ಆದೇಶಗಳು ಬರುವುವು. ಪಿಬ ಎಂದು ಅಕಾರಾಂತವೇ ಅಥವಾ ಪಿಬ್ ಎಂದು ಬಾಂತವೇ ಎಂಬುದನ್ನು (ಋ. ಸಂ. ೧-೧೮-೧೧) ಸೂಕ್ತದಲ್ಲಿ ವಿವರಿಸಿರುವೆವು. ಪಿಬ ಆದೇಶ ಬಂದರೆ ಪಿಬ+ಅ+ಅನ್ತಿ, ಎರಡಾವರ್ತಿ '**ಅತೋ ಗುಣೇ**' (ಪಾ. ಸೂ. ೬-೧-೯೭) ಪದದ ಕೊನೆಯಲ್ಲಿಲ್ಲದ ಹ್ರಸ್ವಾಕಾರಕ್ಕೆ ಅ, ಏ, ಓ ಎಂಬ ಗುಣಸಂಜ್ಞಕವರ್ಣಗಳ ಪರದಲ್ಲಿದ್ದರೆ ಪೂರ್ವಪರಸ್ಥಾನಗಳಿಗೆ ಪರರೂಪ ಒಂದೇ ಏಕಾದೇಶವಾಗಿ ಬರುವುದು ಎಂಬುದರಿಂದ ಪರರೂಪ ಪಿಬನ್ತಿ ಎಂದಾಗುತ್ತದೆ. ಈ ಪಕ್ಷದಲ್ಲಿ '**ಪಿಬಾವಾನಿಪಾತನಾತ್**' (ಪಾ. ಸೂ. ವಾ. ೬-೧-೧೬೨) ಎಂದು '**ಧಾತೋಃ**' ಎಂಬ ಸೂತ್ರಪಠಿತವಾದ ವಾರ್ತಿಕದಿಂದ ಪಿಯ ಇಕಾರ ಉದಾತ್ತ, ಬ ನ ಅಕಾರ ಶೇಷಾನುದಾತ್ತದಿಂದ ಅನುದಾತ್ತ, ಶಪ್ ವಿಕರಣದ ಅಕಾರ ಪಿತ್ತಾದ್ದರಿಂದ '**ಅನುದಾತ್ತೌ ಸುಪ್ಪಿತೌ**' (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ, ಈ ಅನುದಾತ್ತ ಅಕಾರಗಳ ಸ್ಥಾನದಲ್ಲಿ ಪರರೂಪದಿಂದ ಬಂದ ಅಕಾರ ಸ್ಥಾನಿವದ್ಭಾವದಿಂದ ಅನುದಾತ್ತ, '**ತಾಸ್ಯನುದಾತ್ತೇತ್**'-(ಪಾ. ಸೂ. ೬-೧-೧೮೬) ಎಂಬ ಲಸ್ಥಾನಿಕಸಾರ್ವಧಾತುಕಸ್ವರದಿಂದ ಅನ್ತಿಯ ಅಕಾರ ಅನುದಾತ್ತ. ಪುನಃ ಪರರೂಪವು ಸ್ಥಾನಿವದ್ಭಾವದಿಂದ ಅನುದಾತ್ತ. ಈ ಅನುದಾತ್ತವು ಇ ಎಂಬ ಉದಾತ್ತದ ಮುಂದೆ ಇದೆ. ಆದ್ದರಿಂದ '**ಉದಾತ್ತಾದನುದಾತ್ತಸ್ಯ ಸ್ವರಿತಃ**' (ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತ ಎಂದು ಅದಂತಾದೇಶದಪಕ್ಷದ ಸ್ಥಿತಿ, ಪಿಬ್ ಎಂದು ಹಲಂತಾದೇಶ ಪಕ್ಷದಲ್ಲಿ '**ಧಾತೋಃ**' (ಪಾ. ಸೂ. ೬-೧-೧೬೨) ಎಂಬುದರಿಂದ ಪಿ ಯ ಇಕಾರ ಉದಾತ್ತ, ಶಪ್ ಮೊದಲಿನಂತೆ ಅನುದಾತ್ತ. ಅನ್ತಿಯೂ ಮೊದಲಿನಂತೆಯೇ ಪರರೂಪವೂ ಮೊದಲಿನಂತೆಯೇ ಸ್ವರಿತವೂ ಮೊದಲಿನಂತೆಯೇ ಮೊದಲನೇ ಪಕ್ಷದಲ್ಲಿ '**ಪುಗಂತಲಘೂಪಧಸ್ಯ ಚ**' (ಪಾ. ಸೂ. ೭-೩-೮೬) ಎಂಬುದಕ್ಕೆ ಪ್ರಾಪ್ತಿಯೇ ಇಲ್ಲ. ಪಿ ಬ ಎಂದು ಅಕಾರಾಂತವಾದ್ದರಿಂದ ಬ್ ಉಪಧೆಯಾಗುತ್ತೆ. ಲಘುವು ಉಪಧೆಯಾಗುವುದಿಲ್ಲ. ಎರಡನೇ ಪಕ್ಷದಲ್ಲಿ '**ಅಂಗವೃತ್ತೇಪುನರ್ವೃತ್ತಾವವಿಧಿರ್ನಿಷ್ಠಿತಸ್ಯ**' (ಪರಿಭಾ ೯೦) ಅಂಗಾಧಿಕಾರಶಾಸ್ತ್ರ ಬಂದು ಒಂದು ರೂಪವು ಪರಿನಿಷ್ಠಿತವಾದಮೇಲೆ ಮತ್ತೊಂದು ಅಂಗಾಧಿಕಾರೀಯ ಶಾಸ್ತ್ರಬರುವುದಿಲ್ಲ ಎಂಬುದರಿಂದ ಪಿಬಾದೇಶ ಬಂದನಂತರ ಉಪಾಂತ್ಯವರ್ಣಕ್ಕೆ ಗುಣಬರುವುದಿಲ್ಲವೆಂದು ಗುಣಕ್ಕೆ ವಾರಣೆ, ೬ನೇ ಅಧ್ಯಾಯ ೪ನೇ ಪಾದ ಮತ್ತು ೭ನೇ ಅಧ್ಯಾಯ ಪೂರ್ತಾ ಅಂಗಾಧಿಕಾರವು ಎಂದು ತಿಳಿಯಬೇಕು. '**ನಿಪಾತೈರ್ಯದ್ಯದಿಹನ್ತಕುವಿನ್ನೇಚ್ಚೇಚ್ಚಣಕಚ್ಚಿದ್ಯತ್ರ ಯುಕ್ತಮ್**' (ಪಾ. ಸೂ. ೮-೧-೩೦) ಯದಿತ್ಯಾದಿ ಯತ್ರ ಎಂಬಲ್ಲಿಗೆ ಪೂರ್ತ ಒಂದೇ ಪದ ಲುಪ್ತತೃತೀಯಾಂತ, ಇಲ್ಲಿ ಯುಕ್ತಶಬ್ದದೊಂದಿಗೆ ಸಮಾಸವನ್ನು ವಿವಕ್ಷಿಸಿದರೆ ನಿಪಾತೈಃ ಎಂಬ ವಿಶೇಷಣವು ಅನನ್ವಿತವಾಗುವುದು. ಸಮಾಸವೆಂದು ಒಪ್ಪಿದರೆ ಯತ್ರಾಂತಪದವು ಸಮಾಸದ ಏಕದೇಶವಾಗುವುದು. ಆಗ '**ಪದಾರ್ಥಃ ಪದಾರ್ಥೇನಾನ್ವೇತಿ ನತು ತದೇಕದೇಶೇನ**' ಒಂದು

ಪದ, ಪದದ ಅರ್ಥವು ಮತ್ತೊಂದು ಪದದಿಂದ ಉಪಸ್ಥಿತವಾದ ವಿಶೇಷ್ಯವಾದ ಅರ್ಥದಲ್ಲಿಯೇ ಅನ್ವಯಿಸುವುದು ಏಕ ದೇಶದಲ್ಲಿ ಅನ್ವಯಿಸುವುದಿಲ್ಲ ಎಂಬುದರಿಂದ '**ನಿಪಾತೈಃ**' ಎಂಬುದಕ್ಕೆ ಸಮಾಸೈಕದೇಶವಾದ ಯತ್ರಾಂತ ಪದದಲ್ಲಿ ಅನ್ವಯಬರುವುದಿಲ್ಲ. ಹಾಗೆ ಅನ್ವಯವನ್ನು ವಿವಕ್ಷಿಸಿದರೆ ಸಾಮರ್ಥ್ಯವಿಲ್ಲದೇ ಇರುವುದರಿಂದ ಸಮಾಸ ಬರಲಾರದು. ಆದ್ದರಿಂದಲೇ '**ಋದ್ಧಸ್ಯ ರಾಜಪುರುಷಃ**' ಎಂಬಲ್ಲಿ ಋದ್ಧಸ್ಯ ಎಂಬುದಕ್ಕೆ ಸಮಾಸೈಕದೇಶವಾದ ರಾಜ್ಞಃ ಎಂಬಲ್ಲಿ ಅನ್ವಯಬರುವುದಿಲ್ಲವೆಂದು ಸರ್ವತಾಂತ್ರಿಕರೂ ಒಪ್ಪಿರುವರು. ಏವಂಚ ಸೂತ್ರಾರ್ಥವು ಹೀಗೆ ಏರ್ಪಡುತ್ತ ನಿಪಾತ ಗಳಾದ ಯತ್, ಯದಿ, ಹನ್ತ, ಕುವಿತ್, ನೇತ್, ಚೇತ್, ಚಣ್, ಕಚ್ಚಿತ್, ಯತ್ರ, ಇವುಗಳಿಂದ ಯುಕ್ತವಾದ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ಈ ಸೂತ್ರದಿಂದ ನಿಷೇಧಬರುವುದರಿಂದ '**ಪಿಬನ್ತಿ**' ಎಂಬುದಕ್ಕೆ '**ತಿಙ್ಙತಿಙಃ**' (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಕರ್ತ್ವಮ್**—'(ಡು) **ಕೃಞ್ ಕರಣೇ**' ಧಾತು, ಕೃತ್ಯಾರ್ಥೇ **ತವೈಕೇನ್ಕೇನ್ಯತ್ವನಃ** (ಪಾ. ಸೂ. ೩-೪-೧೪) '**ತಯೋರೇವಕೃತ್ಯಕ್ತಖಲರ್ಥಾಃ**' (ಪಾ. ಸೂ. ೩-೪-೭೦) ಎಂಬ ಸೂತ್ರದಲ್ಲಿ ಕೃತ್ಯಪ್ರತ್ಯಯಕ್ತ-ಪ್ರತ್ಯಯ, ಖಲರ್ಥಪ್ರತ್ಯಯ ಇವು ಭಾವ, ಕರ್ಮ ಈ ಎರಡು ಅರ್ಥಗಳಲ್ಲಿಯೇ ಬರುವುವು ಎಂದು ಹೇಳಲಾಗಿದೆ. ಆದ್ದರಿಂದ ಭಾವ, ಕರ್ಮ ಈ ಎರಡೂ ಕೃತ್ಯಾರ್ಥಗಳು, '**ಕೃತ್ಯಾಃ**' (ಪಾ. ಸೂ. ೩-೧-೯೫) ಈ ಸೂತ್ರವು '**ಣ್ವುಲ್ ತೃಚೌ**' (ಪಾ. ಸೂ. ೩-೧-೧೩೩) ಸೂತ್ರದವರಿಗೆ (ಸಂಬಂಧಿಸುವುದು) ಅಧಿಕೃತವಾದುದು. ಈ ಅಧಿ ಕಾರಕ್ಕೆ ಸೇರಿದ ಪ್ರತ್ಯಯಗಳಿಗೆ ಕೃತ್ಯಪ್ರತ್ಯಯವೆಂದು ವ್ಯಾಕರಣಶಾಸ್ತ್ರದಲ್ಲಿ ವ್ಯವಹರಿಸುವರು. ಏವಂಚ, ಭಾವ ಕರ್ಮ ರೂಪವಾದ ಕೃತ್ಯಪ್ರತ್ಯಯಾರ್ಥದಲ್ಲಿ ತವೈ,'ಕೇನ್, ಕೇನ್ಯ' ತ್ವನ್ ಪ್ರತ್ಯಯಗಳು ಧಾತುವಿನ ಮುಂದೆ ಬರುವುವು ಎಂದು ಸೂತ್ರಾರ್ಥ. ಇದರಿಂದ ಕೃ ಧಾತುವಿನ ಮುಂದೆ ಕರ್ಮಾರ್ಥದಲ್ಲಿ ತ್ವನ್ ಬಂದರೆ ಕೃ+ತ್ವನ್ '**ಸಾರ್ವಧಾತುಕಾರ್ಧ ಧಾತುಕಯೋಃ**' (ಪಾ. ಸೂ. ೭-೭-೮೪) ಸಾರ್ವಧಾತುಕ, ಆರ್ಧಧಾತುಕ ಪ್ರತ್ಯಯಗಳು ಪರದಲ್ಲಿರುವಾಗ ಇದಂತಾಂ ಗಕ್ಕೆ ಗುಣವಿರುವುದು ಎಂಬುದರಿಂದ ತ್ವ ಎಂಬ ಆರ್ಧಧಾತುಕ ಪರದಲ್ಲಿರುವಾಗ ಋಗೆ ಗುಣ. ಅದು ರ ಪರವಾಗಿ ಬರು ತ್ತದೆ. ಕರ್+ತ್ವನ್, ನ್‌ಗೆ ಇತ್ಸಂಜ್ಞೆ ನಿವೃತ್ತಿ, ಕರ್ತ್ವ, ಇದು '**ಞ್ನಿತ್ಯಾದಿರ್ನಿತ್ಯಂ**' (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ. ಪ್ರಥಮೈಕವಚನದಲ್ಲಿ ಕರ್ತ್ವಮ್ ಎಂದಾಗುತ್ತದೆ. ॥ ೧೮ ॥

॥ ಸಂಹಿತಾಪಾಠಃ ॥

ಅಪ್ಸ್ವ೧ನ್ತರಮೃತಮಪ್ಸು ಭೇಷಜಮಪಾಮುತ ಪ್ರಶಸ್ತಯೇ ।
ದೇವಾ ಭವತ ವಾಜಿನಃ ॥ ೧೯ ॥

॥ ಪದಪಾಠಃ ॥

ಅಪ್ ऽ ಸು । ಅನ್ತಃ । ಅಮೃತಂ । ಅಪ್ ऽ ಸು । ಭೇಷಜಂ । ಅಪಾಂ । ಉತ ।

ಪ್ರ ऽ ಶಸ್ತಯೇ ।

ದೇವಾಃ । ಭವತ । ವಾಜಿನಃ ॥ ೧೯ ॥

॥ ಸಾಯಣಭಾಷ್ಯಂ ॥

ಅಪ್ಸು ಜಲೇಷ್ವಂತರ್ಮಧ್ಯೇಽಮೃತಂ ಪೀಯೂಷಂ ವರ್ತತೇ । ತಸ್ಯಾಬ್ವಿಕಾರತ್ವಾತ್ । ಅಮೃತಂ ವಾ ಆಪ ಇತಿ ಶ್ರುತ್ಯಂತರಾಚ್ಚ । ತಥೈವಾಪ್ಸು ಭೇಷಜಮೌಷಧಂ ವರ್ತತೇ । ಕ್ಷುದ್ರೋಗನಿವರ್ತಕಸ್ಯಾನ್ನಸ್ಯಾಪ್ಕಾರ್ಯತ್ವಾತ್ । ಉತಾಪಿ ಚ ತಾದೃಶೀನಾಮಪಾಂ ದೇವತಾನಾಂ ಪ್ರಶಸ್ತಯೇ ಪ್ರಶಂಸಾರ್ಥಂ ಹೇ ದೇವಾ ಋತ್ವಿಜಾದಯೋ ಬ್ರಾಹ್ಮಣಾಃ । ಏತೇ ವೈ ದೇವಾಃ ಪ್ರತ್ಯಕ್ಷಂ ಯದ್ಬ್ರಾಹ್ಮಣಾ ಇತಿ ಶ್ರುತ್ಯಂತರಾತ್ । ವಾಜಿನೋ ವೇಗವಂತೋ ಭವತ । ಶೀಘ್ರಂ ಸ್ತುತಿಂ ಕುರುತೇತ್ಯರ್ಥಃ ॥ ಅಪ್ಸು । ಊಡಿದಮಿತ್ಯಾದಿನಾ ಸಪ್ತಮ್ಯಾ ಉದಾತ್ತತ್ವಂ । ಸಂಹಿತಾಯಾಮುದಾತ್ತಸ್ವರಿತಯೋರ್ಯಣಃ ಸ್ವರಿತ ಇತಿ ಸ್ವರಿತತ್ವಂ । ಅಮೃತಂ । ನಞೋ ಜರಮರಮಿತ್ರಮೃತಾಃ । ಪಾ. ೬-೨-೧೧೬ । ಇತ್ಯುತ್ತರಪದಾದ್ಯುದಾತ್ತತ್ವಂ । ಪ್ರಶಸ್ತಯೇ । ತಾದೌ ಚ ನಿತಿ । ಪಾ. ೬-೨-೫೦ । ಇತಿ ಗತೇಃ ಪ್ರಕೃತಿಸ್ವರತ್ವಂ । ಭವತ । ಆಮಂತ್ರಿತಂ ಪೂರ್ವಮವಿದ್ಯಮಾನವದಿತಿ ಪೂರ್ವಸ್ಯಾಮಂತ್ರಿತಸ್ಯಾವಿದ್ಯಮಾನವತ್ತ್ವೇನ ಪಾದಾದಿತ್ವಾನ್ನ ನಿಘಾತಃ ॥

॥ ಪ್ರತಿಪದಾರ್ಥ ॥

**ಅಪ್ಸು ಅಂತಃ**—ನೀರಿನ ಮಧ್ಯದಲ್ಲಿ (ನೀರಿನಲ್ಲಿ) । **ಅಮೃತಂ**—ಅಮೃತವಿರುವುದು । **ಅಪ್ಸು**—ನೀರಿನಲ್ಲಿ । **ಭೇಷಜಂ**—ವ್ಯಾಧಿನಾಶಕವಾದ ಔಷಧವು ಇರುವುದು । **ಉತ**—ಮತ್ತು । (ಹೇ) **ದೇವಾಃ**—ಎಲೈ ದೇವತೆಗಳೇ (ಮತ್ತು ಋತ್ವಿಗ್ಯಜಮಾನರಾದಿ ಜನಗಳೇ) । **ಅಪಾಂ**—ಉದಕಗಳ (ನೀರಿನ) । **ಪ್ರಶಸ್ತಯೇ**—ಪ್ರಶಂಸಾರ್ಥವಾಗಿ ಅಥವಾ ಸ್ತೋತ್ರಮಾಡುವುದಕ್ಕಾಗಿ । **ವಾಜಿನಃ**—ತ್ವರಿತಯುಕ್ತರಾಗಿ (ಬೇಗನೆ ಸಿದ್ಧರಾಗಿ) । **ಭವತ**—ಆಗಿರಿ.

॥ ಭಾವಾರ್ಥ ॥

ನೀರಿನಲ್ಲಿ ಅಮೃತವಿರುವುದು, ನೀರಿನಲ್ಲಿ ವ್ಯಾಧಿಯನ್ನು ಗುಣಪಡಿಸುವ ಔಷಧ ಎಂದರೆ ಸಾಮರ್ಥ್ಯವಿರುವುದು. ಆದುದರಿಂದ ಎಲೈ ದೇವತೆಗಳೇ ಮತ್ತು ಋತ್ವಿಗ್ಯಜಮಾನಾದಿಜನರೇ, ನೀವು ಬೇಗನೆ ಆ ಉದಕಗಳನ್ನು ಸ್ತೋತ್ರಮಾಡಲು ಸಿದ್ಧರಾಗಿ.

## English Translation.

(There is) ambrosia in the waters, (there is) medicine in the waters; therefore divine priests, be prompt in their praise.

॥ ವಿಶೇಷವಿಷಯಗಳು ॥

ನೀರಿನ ಗುಣಗಳನ್ನೂ ಪ್ರಾಧಾನ್ಯತೆಯನ್ನೂ ತೈತ್ತಿರೀಯೋಪನಿಷತ್ತಿನ ಶ್ರುತಿವಾಕ್ಯವು ಬಹು ಚೆನ್ನಾಗಿ ವರ್ಣಿಸಿರುವುದು—**ಆಪೋ ವಾ ಇದಗ್ಂ ಸರ್ವಂ ವಿಶ್ವಾ ಭೂತಾನ್ಯಾಪಃ ಪ್ರಾಣಾ ವಾ ಆಪಃ ಪಶವ ಆಪೋಽನ್ನಮಾಪೋಽಮೃತಮಾಪಃ ಸಂರಾಡಾಪೋ ವಿರಾಡಾಪಃ ಸ್ವರಾಡಾಪಶ್ಛಂದಾಗ್ಂಸ್ಯಾಪೋ ಜ್ಯೋತೀಗ್ಂಷ್ಯಾಪೋ ಯಜೂಗ್ಂಷ್ಯಾಪಃ ಸತ್ಯಮಾಪಃ ಸರ್ವಾ ದೇವತಾ ಆಪೋ ಭೂರ್ಭುವಸ್ಸುವರಾಪ ಓಂ ॥**

ಎಂದರೆ ಸಮಸ್ತವೂ ನೀರಿನಿಂದಲೇ ಉಂಟಾಗಿರುವುದು. ಸಮಸ್ತ ಪ್ರಾಣಿಗಳೂ ಪಶುಗಳೂ ನೀರಿನಿಂದಲೇ ಜೀವಿಸುವವು ಎಂದರೆ ನೀರೇ ಸಮಸ್ತ ಜೀವಜಂತು ವನಸ್ಪತಿಗಳಿಗೂ ಆಧಾರಭೂತವಾದುದು. ನೀರಿಲ್ಲದಿದ್ದರೆ ಯಾವ ಪ್ರಾಣಿಯೂ ಜೀವಿಸಲಾಗುವುದಿಲ್ಲ. ಆದುದರಿಂದ ನೀರೇ ಪ್ರಾಣವೆಂದು ಹೇಳಲ್ಪಟ್ಟಿರುವುದು. ನೀರಿನಿಂದ ಓಷಧಿ ವನಸ್ಪತಿಗಳೂ ಸಸ್ಯವರ್ಗವೂ ಬೆಳೆಯುವುದರಿಂದ ಪ್ರಾಣಿಗಳಿಗೆ ನೀರು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಆಹಾರ (ಅನ್ನ) ವಾಗಿರುವುದು. ಆಹಾರವಿಲ್ಲದಿದ್ದರೂ ಕೆಲವು ದಿವಸ ಜೀವಿಸಬಹುದು. ನೀರಿಲ್ಲದಿದ್ದರೆ ಜೀವಿಸಲು ಸಾಧ್ಯವಿಲ್ಲ. ನಮ್ಮ ಶರೀರದಲ್ಲಿ ಬಹುಭಾಗ ನೀರು ರಕ್ತ ಮುಂತಾದವು ದ್ರವರೂಪದಲ್ಲಿರುವುದರಿಂದ ಜೀವಿಸುವುದಕ್ಕೆ ನೀರು ಅತ್ಯವಶ್ಯಕವು. ಆದುದರಿಂದಲೇ ನೀರನ್ನು ಅಮೃತವೆಂದು ಹೇಳುವುದು ಅತಿಶಯೋಕ್ತಿಯಲ್ಲ. ನೀರು ಪಂಚಭೂತಗಳಲ್ಲಿ ಒಂದಾಗಿರುವುದರಿಂದಲೂ, **"ಆಪೋವಾ ಇದಮಗ್ರೇ ಸಲಿಲಮಾಸೀತ್'** ಎಂದು ಶ್ರುತಿವಾಕ್ಯವಿರುವುದರಿಂದಲೂ ನೀರಿನಿಂದಲೇ ಇತರ ವಸ್ತುಗಳು ಸೃಷ್ಟಿಸಲ್ಪಟ್ಟಿರುವುದೆಂದು ಶ್ರುತಿಯು ಹೇಳುವುದರಿಂದ ಎಲ್ಲವೂ ನೀರಿನ ಸ್ವರೂಪವೇ ಅಥವಾ ಎಲ್ಲಾ ವಸ್ತುಗಳಿಗೂ ನೀರೇ ಮೂಲಭೂತವೆಂದು ಹೇಳುವುದು ಯುಕ್ತವಾಗಿರುವುದು. ಆದುದರಿಂದ ನೀರು ಸಮಸ್ತ ದೇವತಾಸ್ವರೂಪವೆಂದು ಶ್ರುತಿಯು ಸಾರುತ್ತಿರುವುದು.

**ಅಮೃತಂ ಭೇಷಜಂ**—ಪ್ರಾಣಿಗಳಿಗೆ ನೀರು ಅತ್ಯವಶ್ಯಕವಾಗಿಯೂ ಜೀವನಾಧಾರವಾಗಿಯೂ ಇರುವುದರಿಂದ ಅಮೃತವೆಂದು ಹೇಳಲ್ಪಡುವುದು. ಅಮೃತವು ದ್ರವರೂಪದಲ್ಲಿರುವುದರಿಂದ ದ್ರವರೂಪವಾದ ವಸ್ತುಗಳೆಲ್ಲವೂ ಆಪಃ—ನೀರು ಎಂಬ ಶಬ್ದದಿಂದ ಸೂಚಿಸಲ್ಪಡುವುದರಿಂದಲೂ ನೀರನ್ನು ಅಮೃತವೆಂದು ಹೇಳುವುದು ನ್ಯಾಯವಾಗಿಯೇ ಇದೆ. ನೀರಿನಿಂದ ಅನೇಕ ವ್ಯಾಧಿಗಳನ್ನು ಗುಣಪಡಿಸಬಹುದು. ಮತ್ತು ಔಷಧಿಗಳು ಸಾಧಾರಣವಾಗಿ ನೀರು ಮಿಶ್ರಿತವಾಗಿ ದ್ರವರೂಪದಲ್ಲಿರುವುದರಿಂದ ಔಷಧಿಗಳು ನೀರಿನಲ್ಲಿರುವುದೆಂದು ಹೇಳುವುದೂ ಯುಕ್ತವಾಗಿದೆ. ವ್ಯಾಧಿ ನಿವಾರಣೆ ಮಾಡುವ ವಿಷಯದಲ್ಲಿ ನೀರಿನ ಪ್ರಾಧಾನ್ಯತೆಯು ಎಷ್ಟುಮಟ್ಟಿಗೆ ಇರುವುದೆಂಬುದನ್ನು ಆಯುರ್ವೇದ ಮೊದಲಾದ ವೈದ್ಯ ಗ್ರಂಥಗಳಲ್ಲಿ ವಿಶೇಷವಾಗಿ ವರ್ಣಿಸಲಾಗಿದೆ.

**ದೇವಾಃ**—ಇಲ್ಲಿ ದೇವಾಃ ಎಂದು ದೇವತೆಗಳನ್ನು ಸಂಬೋಧನೆ ಮಾಡಿದ್ದರೂ ಋತ್ವಿಗ್ಯಜಮಾನರಾದಿ ಜನರೆಂದೂ, ದೇವತೆಗಳೆಂದೂ ಹೇಳಬಹುದು. ಅಥವಾ ಬ್ರಾಹ್ಮಣರಾದ ಋತ್ವಿಕ್ಕುಗಳು ಪ್ರತ್ಯಕ್ಷದೇವತೆಗಳೆಂದು—

**“ಏತೇ ವೈ ದೇವಾಃ ಪ್ರತ್ಯಕ್ಷಂ ಯದ್ಬ್ರಾಹ್ಮಣಾಃ”** ಎಂದು ಮೊದಲಾದ ಶ್ರುತಿವಾಕ್ಯಗಳು ಹೇಳುವುದರಿಂದ ಬ್ರಾಹ್ಮಣರನ್ನು ದೇವ ಶಬ್ದದಿಂದ ಸಂಬೋಧನೆ ಮಾಡಿರುವುದು.

**ವಾಜಿನಃ—ವೇಗವಂತಃ, ಶೀಘ್ರಗಾಮಿನಃ**—ಬೇಗನೆ, ತ್ವರಿತಯುಕ್ತರಾಗಿ, ಕಾಲವಿಳಂಬವಿಲ್ಲದೆ, ಇತ್ಯಾದಿ. ಅಥವಾ **“ಅನ್ನಂ ವೈ ವಾಜಃ”** ವಾಜ ಎಂದರೆ ಅನ್ನವೆಂದೂ ಶ್ರುತಿವಾಕ್ಯವಿರುವದರಿಂದ ಅನ್ನ ಅಥವಾ ಹವಿಸ್ಸಿನಿಂದ ಯುಕ್ತರಾಗಿ ಎಂದರೆ ಹವಿಃಪ್ರದಾನಾದಿಗಳಿಂದ ಸ್ತೋತ್ರಮಾಡಿರಿ ಎಂದು ಬೇಕಾದರೂ ಅರ್ಥವನ್ನು ಹೇಳಬಹುದು.

॥ ವ್ಯಾಕರಣಪ್ರಕ್ರಿಯ ॥

**ಅಪ್ಸು**—ಅಪ್ ಶಬ್ದದ ಮುಂದೆ ಸಪ್ತಮೀ ಬಹುವಚನ ಸುಪ್ರತ್ಯಯ, **‘ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ’** (ಪಾ. ಸೂ. ೬-೧-೧೭೧) ಇದಕ್ಕೆ ಅರ್ಥ ಪೂರ್ವಮಂತ್ರದಲ್ಲಿ ನೋಡಿ. ಇದರಿಂದ ಸು ವಿಭಕ್ತಿಯು ಉದಾತ್ತ. ಇಲ್ಲಿಯ ಉದಾತ್ತ ಉಕಾರಸ್ಥಾನದಲ್ಲಿ ಸಂಹಿತಾಕಾಲದಲ್ಲಿ ಅಂತಃ ಪದದ ಸ್ವರ ಪರದಲ್ಲಿರುವಾಗ **‘ಇಕೋ ಯಣಚಿ’** (ಪಾ. ಸೂ. ೬-೧-೭೭) ಎಂಬುದರಿಂದ ವ್ ಎಂಬ ಯಣ್ ಬರುತ್ತೆ. ಏವಂಚ ಈ ವ್-ಕಾರವು ಉದಾತ್ತಸ್ಥಾನದಲ್ಲಿ ಬಂದ ಯಣ್, **‘ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ’** (ಪಾ. ಸೂ. ೮-೨-೪) ಉದಾತ್ತ ಅಥವಾ ಸ್ವರಿತ ಇವುಗಳ ಸ್ಥಾನದಲ್ಲಿ ಬಂದ ಯಣ್‌ನ ಮುಂದೆ ಇರುವ ಅನುದಾತ್ತಕ್ಕೆ ಸ್ವರಿತ ಬರುವುದು ಎಂಬುದರಿಂದ ಅನ್ತಃ ಶಬ್ದದ ಅನುದಾತ್ತ ಅ-ಗೆ ಸ್ವರಿತ ಬರುತ್ತದೆ.

**ಅಮೃತಂ**—ಮೃತ ಶಬ್ದದೊಂದಿಗೆ ನಞ್‌ಗೆ ಬಹುವ್ರೀಹಿಸಮಾಸ ಬಂದರೆ, ನ್‌ಗೆ ಲೋಪ ಬಂದು ಅ, ಮಾತ್ರ ಉಳಿಯುತ್ತದೆ. **‘ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ.’** (ಪಾ. ಸೂ. ೬-೨-೧) ಎಂಬುದರಿಂದ ಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **‘ನಞೋ ಜರಮರ ಮಿತ್ರ ಮೃತಾಃ’** (ಪಾ. ಸೂ- ೬-೨-೧೧೬) ಬಹುವ್ರೀಹಿಸಮಾಸದಲ್ಲಿ ನಞ್‌ನ ಮುಂದೆ ಇರುವ ಜರ, ಮರ, ಮಿತ್ರ, ಮೃತ, ಈ ನಾಲ್ಕು ಶಬ್ದಗಳು ಆದ್ಯುದಾತ್ತವನ್ನು ಹೊಂದುವುವು ಎಂಬುದರಿಂದ ಉತ್ತರಪದವಾದ ಮೃತ ಶಬ್ದಕ್ಕೆ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಶಸ್ತಯೇ**—ಪ್ರ ಉಪಸರ್ಗ, **‘ಶಂಸು ಸ್ತುತೌ’** ಧಾತು. **‘ಸ್ತ್ರಿಯಾಂ ಕ್ತಿನ್’** (ಪಾ. ಸೂ. ೩-೩-೯೪) ಎಂದು ಕ್ತಿನ್ ಪ್ರತ್ಯಯ, ನಕಾರಕ್ಕೆ **‘ಅನಿದಿತಾಂ ಹಲ ಉಪಧಾಯಾಃ ಕ್ಣಿತಿ’** (ಪಾ. ಸೂ. ೬-೪-೨೪) ಎಂಬುದರಿಂದ ಲೋಪ ‘ಪ್ರಶಸ್ತಿ’ ಚತುರ್ಥೀ ಏಕವಚನ, ಪ್ರಶಸ್ತಯೇ ಇಲ್ಲಿ **‘ತಾದೌಚ ನಿತಿ ಕೃತ್ಯತೌ’** (ಪಾ. ಸೂ. ೬-೨-೫೦) ತು, ವನ್ನು ಬಿಟ್ಟು ನಕಾರೇಂತ್ಸಂಜ್ಞಕವಾಗಿಯೂ, ತಕಾರಾದಿಯಾಗಿಯೂ ಇರುವ ಕೃತ್ ಪ್ರತ್ಯಯ ಪರದಲ್ಲಿರದಿದ್ದರೆ ಅವ್ಯವಹಿತವಾದ ಗತಿಯು ಪ್ರಕೃತಿ ಸ್ವರವನ್ನು ಹೊಂದುವುದು ಎಂಬುದರಿಂದ ಪ್ರ ಎಂಬ ಗತಿಗೆ ಪ್ರಕೃತಿಸ್ವರವೇ ಬರುತ್ತದೆ. **‘ಗತಿಕಾರಕೋಪಪದಾತ್ಕೃತ್’** (ಪಾ. ಸೂ. ೬-೨-೧೩೯) ಎಂದು ವಿಹಿತವಾಗಿರುವ ಕೃತ್ಸ್ವರಕ್ಕೆ ಇದು ಅಪವಾದ, ಪ್ರ, **‘ಉಪಸರ್ಗಾಶ್ಚಾಭಿವರ್ಜಂ’** (ಫಿ. ಸೂ. ೮೧) ಎಂಬುದರಿಂದ ಆದ್ಯುದಾತ್ತ. ಇದೇ ಸ್ವರವು ಸಮಾಸಾನಂತರವೂ ಪೂರ್ವಪ್ರದರ್ಶಿತ ರೀತಿಯಲ್ಲಿ ನಿಲ್ಲುವುದು.

**ಭವತ**—ಇದರ ಹಿಂದೆ **‘ದೇವಾಃ’** ಎಂಬ ಆಮನ್ತ್ರಿತವಿದೆ, **‘ಆಮನ್ತ್ರಿತಂ ಪೂರ್ವಮವಿದ್ಯಮಾನವತ್’** (ಪಾ. ಸೂ. ೮-೧-೭೨) ಪೂರ್ವದಲ್ಲಿ ಸಂಬೋಧನಪ್ರಥಮಾ ವಿಭಕ್ತ್ಯಂತವು ಅವಿದ್ಯಮಾನದಂತೆ ಆಗುತ್ತೆ ಎಂದು ಅವಿದ್ಯಮಾನವದ್ಭಾವ ಬರುತ್ತೆ. ಏವಂಚ ಭವತ, ಎಂಬುದು ಪದಾತ್ಪರವಾಗುವುದಿಲ್ಲ. ಪಾದದ ಆದಿಯಲ್ಲಿರ

ತಕ್ಕುದೂ ಆಗುವುದು ಅನುದಾತ್ತವಿಧಿಯಲ್ಲಿ '**ಪದಾತ್**' (ಪಾ. ಸೂ. ೮-೧-೧೭) ಎಂದು ಅಧಿಕಾರ ಇರುವುದರಿಂದ ಪದದ ಮುಂದೆ ಇರುವುದಕ್ಕೇ ಅನುದಾತ್ತ ಬರುತ್ತದೆ. '**ಅನುದಾತ್ತಂ ಸರ್ವಮಪಾದಾದೌ**' (ಪಾ. ಸೂ. ೮-೧-೧೮) ಎಂದಿರುವುದರಿಂದ ಪಾದದ ಆದಿಯಲ್ಲಿರುವುದಕ್ಕೂ ಅನುದಾತ್ತ ಬರುವುದಿಲ್ಲ ಆದ್ದರಿಂದ ಭವತ ಶಬ್ದಕ್ಕೆ '**ತಿಙ್ಙತಿಙಃ**' (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ॥ ೧೯ ॥

॥ ಸಂಹಿತಾಪಾಠಃ ॥

ಅಪ್ಸು ಮೇ ಸೋಮೋ ಅಬ್ರವೀದನ್ತರ್ವಿಶ್ವಾನಿ ಭೇಷಜಾ ।
ಅಗ್ನಿಂ ಚ ವಿಶ್ವಶಂಭುವಮಾಪಶ್ಚ ವಿಶ್ವಭೇಷಜೀಃ ॥ ೨೦ ॥

॥ ಪದಪಾಠಃ ॥

ಅಪ್ಽಸು । ಮೇ । ಸೋಮಃ । ಅಬ್ರವೀತ್ । ಅನ್ತಃ । ವಿಶ್ವಾನಿ । ಭೇಷಜಾ ।
ಅಗ್ನಿಂ । ಚ । ವಿಶ್ವಽಶಂಭುವಂ । ಆಪಃ । ಚ । ವಿಶ್ವಽಭೇಷಜೀಃ ॥ ೨೦ ॥

॥ ಸಾಯಣಭಾಷ್ಯಂ ॥

ಕಾರೀರ್ಯಾಮುತ್ತರಸ್ಯಾಜ್ಯಭಾಗಸ್ಯಾಪ್ಸು ಮ ಇತ್ಯೇಷಾನುವಾಕ್ಯಾ । ವರ್ಷಕಾಮೇಷ್ಟಿರಿತಿ ಖಂಡೇಽಪ್ಸ್ವಗ್ನೇ ಸಧಿಷ್ಟವಾಪ್ಸು ಮೇ ಸೋಮೋ ಅಬ್ರವೀತ್ । ಆ. ೨-೧೩ । ಇತಿ ಸೂತ್ರಿತಂ ॥

ಅಪ್ಸು ಜಲೇಷ್ವಂತರ್ಮಧ್ಯೇ ವಿಶ್ವಾನಿ ಭೇಷಜಾ ಸರ್ವಾಣ್ಯೌಷಧಾನಿ ಸಂತೀತಿ ಮೇ ಮಹ್ಯಂ ಮಂತ್ರದರ್ಶಿನೇ ಮುನಯೇ ಸೋಮೋ ದೇವೋಽಬ್ರವೀತ್ । ತಥಾ ವಿಶ್ವಶಂಭುವಂ ಸರ್ವಸ್ಯ ಜಗತಃ ಸುಖಕರಮೇತನ್ನಾಮಕಂ ಚಾಗ್ನಿಂ ಚಾಪ್ಸು ವರ್ತಮಾನಂ ಸೋಮೋಽಬ್ರವೀತ್ । ತಥಾ ಚ ತೈತ್ತಿರೀಯಾ ಅಗ್ನೇಸ್ತ್ರಯೋ ಜ್ಯಾಯಾಂಸ ಇತ್ಯನುವಾಕೇ ಸೋಽಪಃ ಪ್ರಾವಿಶದಿತ್ಯಗ್ನೇರಪ್ಸು ಪ್ರವೇಶಮಾಮನಂತಿ । ತೈ. ಸಂ. ೨-೬-೬-೧ । ಲತಾಗುಲ್ಮವೃಕ್ಷಮೂಲಾದೀನಾಮೌಷಧಾನಾಂ ವೃಷ್ಟಿಜನ್ಯತ್ವೇನ ಜಲವರ್ತಿತ್ವಂ ಪ್ರಸಿದ್ಧಂ । ವಿಶ್ವಭೇಷಜೀಃ । ವಿಶ್ವಾನಿ ಭೇಷಜಾನಿ ಯಾಸು ತಥಾವಿಧಾ ಅಪೋಽಪ್ಯಬ್ರವೀತ್ ॥ ಭೇಷಜಾ । ಸುಪಾಂ ಸುಲುಗಿತ್ಯಾಕಾರಃ । ವಿಶ್ವಶಂಭುವಂ । ಭವತೇರಂತರ್ಭಾವಿತಣ್ಯರ್ಥಾತ್ ಕ್ವಿಪ್ । ವ್ಯತ್ಯಯೇನ ಪೂರ್ವಪದಪ್ರಕೃತಿಸ್ವರತ್ವಂ । ಯದ್ವಾ । ವಿಶ್ವೇ ಸರ್ವೇಽಪಿ ವ್ಯಾಪಾರಾಃ ಸುಖಕರಾ ಯಸ್ಯ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ । ಪಾ. ೬-೨-೧೦೬ ಇತಿ ಪೂರ್ವಪದಾಂತೋದಾತ್ತತ್ವಂ । ಆಪಃ । ಕರ್ಮಣಿ ಶಸಿ ಪ್ರಾಪ್ತೇ ವ್ಯತ್ಯಯೇನ ಜಸ್ । ಅಪ್ತೃನ್ನಿತ್ಯಾದಿನೋಪಧಾದೀರ್ಘಃ । ವಿಶ್ವಭೇಷಜೀಃ । ವಿಶ್ವಶಂಭುರಿತಿವತ್ ॥ ೧೧ ॥

॥ ಪ್ರತಿಪದಾರ್ಥ ॥

**ಅಪ್ಸು ಅಂತಃ**—ಜಲಮಧ್ಯದಲ್ಲಿ । **ವಿಶ್ವಾನಿ**—ಸಮಸ್ತವಾದ । **ಭೇಷಜಾ**—ವ್ಯಾಧಿನಾಶಕವಾದ ಔಷಧಗಳು ಇರುವುವೆಂದೂ । **ಅಗ್ನಿಂ ಚ**—ಅಗ್ನಿಯನ್ನು । **ವಿಶ್ವಶಂಭುವಂ**—ಸಮಸ್ತ ಜಗತ್ತಿಗೂ ಸುಖವನ್ನುಂಟುಮಾಡುವವನನ್ನಾಗಿಯೂ । **ಆಪಃ**—ಉದಕಗಳು । **ವಿಶ್ವಭೇಷಜೀಃ**—ವ್ಯಾಧಿನಾಶಕವಾದ ಸಮಸ್ತ ಔಷಧಿಯುಕ್ತಗಳೆಂದೂ । **ಸೋಮಃ**—ಸೋಮದೇವತೆಯು । **ಮೇ**—ನನಗೆ । **ಅಬ್ರವೀತ್**—ಹೇಳಿದನು.

॥ ಭಾವಾರ್ಥ ॥

ಜಲಮಧ್ಯದಲ್ಲಿ ವ್ಯಾಧಿಗಳನ್ನು ಪರಿಹರಿಸುವ ಸಮಸ್ತ ಔಷಧಗಳೂ ಇರುವವು. ಅಗ್ನಿಯು ಸಮಸ್ತ ಜಗತ್ತಿಗೂ ಸುಖವನ್ನುಂಟುಮಾಡುವವನು ಉದಕಗಳು (ಜಲವು) ಸಮಸ್ತ ಔಷಧಿಗಳಿಂದ ಕೂಡಿರುವವು. ಹೀಗೆಂದು ನನಗೆ ಸೋಮದೇವತೆಯು ಹೇಳಿದನು.

## English Translation.

Soma has revealed to me that in the waters are all medicaments; that Agni is the benefactor of the Universe, the waters contain all the healing medicines.

॥ ವಿಶೇಷವಿಷಯಗಳು ॥

ಕಾರೀರಿಯಾಗದಲ್ಲಿ ಈ **ಅಪ್ಸುಮೇ** ಎಂಬ ಋಕ್ಕನ್ನು ಆಜ್ಯಭಾಗ ಹೋಮಮಾಡುವಾಗ ಪುರೋನುವಾಕ್ಯಾ ಮಂತ್ರವನ್ನಾಗಿ ಪಠಿಸುವರು. ಈ ವಿಷಯದಲ್ಲಿ ಆಶ್ವಲಾಯನ ಶ್ರೌತಸೂತ್ರದ **ವರ್ಷಕಾಮೇಷ್ಟಿ** ಎಂಬ ಖಂಡದಲ್ಲಿ **ಅಪ್ಸ್ವಗ್ನೇ ಸಧಿಷ್ಟವ** (೮-೪೩-೯) **ಅಪ್ಸು ಮೇ ಸೋಮೋ ಅಬ್ರವೀತ್** (೧-೨೩-೨೦) ಎಂಬ ಋಕ್ಕುಗಳನ್ನು ಯಾಜ್ಯಾ ಪುರೋನುವಾಕ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಹೇಳಿರುವುದು (ಆ. ೨-೧೩). ಈ ಋಕ್ಕಿನ ಮುಖ್ಯಾಭಿಪ್ರಾಯವು-ನೀರಿನಲ್ಲಿ ಸಮಸ್ತ ಜಗತ್ತಿಗೂ ಸುಖವನ್ನುಂಟುಮಾಡುವ ಅಗ್ನಿಯು ವಿದ್ಯುದ್ರೂಪದಿಂದಿರುವನು. ಮತ್ತು ಪ್ರಾಣಿಗಳ ವ್ಯಾಧಿಗಳನ್ನು ಪರಿಹಾರ ಮಾಡುವ ಸಮಸ್ತ ಔಷಧಿಗಳೂ ನೀರಿನಲ್ಲಿಯೇ ಇರುವವು ಎಂದು ಸೋಮನೇ ನನಗೆ ಹೇಳಿರುವನು ಎಂದು. ನೀರಿನಲ್ಲಿ ಅಗ್ನಿಯು ಇರುವನೆಂಬ ವಿಚಾರದಲ್ಲಿ ಭಾಷ್ಯಕಾರರು (ತೈ. ಸಂ. ೨-೬-೬-೧) ಯಲ್ಲಿರುವ **ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್** ಎಂಬ ಅನುವಾಕದಲ್ಲಿರುವ **'ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್'** ಎಂಬ ವಾಕ್ಯವನ್ನು ಉದಹರಿಸಿರುವರು. ಇದರ ವಿವರಣೆಯನ್ನು ಋಗ್ವೇದದಲ್ಲಿ ಈ ವಿಷಯವಾಗಿ ಇರುವ ವಿವರಣೆಯನ್ನು ನಾವು ಹಿಂದೆಯೇ (                ) ವಿವರಿಸಿದ್ದೇವೆ.

**ಅಗ್ನಿಂ ಚ ವಿಶ್ವಶಂಭುವಂ**—ಅಗ್ನಿಯಿಂದ ಸಮಸ್ತ ಜಗತ್ತಿಗೂ ಉಂಟಾಗುವ ಪ್ರಯೋಜನವನ್ನು ಹೆಚ್ಚಾಗಿ ವಿವರಿಸುವ ಅವಶ್ಯಕತೆಯಿಲ್ಲ. ಅಗ್ನಿಯು ನಮಗೆ ಚಳಿಯಾಗಿರುವಾಗ ಶಾಖವನ್ನು ಕೊಡುವುದಲ್ಲದೆ, ಆಹಾರಾದಿಗಳನ್ನು ಬೇಯಿಸುವುದಕ್ಕೂ ಇನ್ನೂ ಅನೇಕ ಉಪಯೋಗವಾದ ಅಥವಾ ಅತ್ಯವಶ್ಯಕವಾದ ಕಾರ್ಯಗಳಲ್ಲಿ ನಾವು ಅಗ್ನಿಯನ್ನು

ಉಪಯೋಗಿಸುತ್ತೇವೆ. ಈ ವಿಷಯವು ಸರ್ವರ ಅನುಭವವೇದ್ಯವಾಗಿರುವುದರಿಂದ ಹೆಚ್ಚು ಹೇಳಬೇಕಾದ ಅವಶ್ಯಕತೆ ಇಲ್ಲ.

**ಆಪಶ್ಚ ವಿಶ್ವಭೇಷಜೀಃ**—ವ್ಯಾಧಿಗಳನ್ನು ಪರಿಹಾರಮಾಡುವುದರಲ್ಲಿ ನೀರಿನ ಪಾತ್ರವೇನೆಂಬುದನ್ನು ನಾವು ಹಿಂದಿನ ಋಕ್ಕಿನಲ್ಲಿಯೇ ವಿವರಿಸಿದೇವೆ

**ಸೋಮಃ**—ಸೋಮಶಬ್ದಕ್ಕೆ ಭಾಷ್ಯಕಾರರು ಸೋಮದೇವಃ ಸೋಮದೇವತೆಯು ಎಂದು ಹೇಳಿರುವರು. ಸೋಮನೆಂದರೆ ಓಷಧಿ ವನಸ್ಪತಿಗಳಿಗೆ ಅಭಿಮಾನದೇವತೆಯಾದ ಚಂದ್ರನೆಂದು ತಿಳಿಯಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಭೇಷಜಾ—' ಸುಪಾಂಸುಲುಕ್ '**-(ಪಾ.ಸೂ. ೭-೧-೩೯) ಎಂಬುದರಿಂದ ಪ್ರಥಮಾಬಹುವಚನ ಜಸ್‌ಗೆ ಆಕಾರಾದೇಶ.

**ವಿಶ್ವಶಂಭುವಮ್**--ವಿಶ್ವಸ್ಯ ಶಂ ಭವತೀತಿ (ಭಾವಯತೀತಿ) ವಿಶ್ವಶಂಭೂಃ, ತಂ. ಎಂದು ವಿಗ್ರಹವು ಇಲ್ಲಿ ಅಂತರ್ಭಾವಿತ ಣಿಚ್ ಪ್ರತ್ಯಯಾರ್ಥಕ ಭೂ-ಧಾತುವಿನ ಮುಂದೆ **' ಕ್ವಿಪ್ ಚ '** (ಪಾ.ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರಾತಿಪದಿಕಾವಯವ ಸುಪ್‌ಗೆ ಲುಕ್, ವಿಶ್ವಶಂಭೂ, ಇದರ ಮುಂದೆ ದ್ವಿತೀಯಾ ಏಕವಚನ ಅಮ್ **' ನ ಭೂಸುಧಿಯೋಃ '** (ಪಾ. ಸೂ. ೬-೪-೮೫) ಎಂಬುದರಿಂದ ಯಣ್‌ಗೆ ನಿಷೇಧ. **' ಅಚಿಶ್ನುಧಾತು '**-(ಪಾ. ಸೂ. ೬-೪-೭೭) ಎಂಬುದರಿಂದ ಉವಙ್ ಆದೇಶ. ವಿಶ್ವಶಂಭುವಂ, ಎಂದಾಗುತ್ತದೆ. ಇಲ್ಲಿ ಯದ್ಯಪಿ **' ಸಮಾಸಸ್ಯ '** (ಪಾ. ಸೂ. ೬-೧-೨೨೩) ಎಂಬುದರಿಂದ (ಸತಿಶಿಷ್ಟವಾದ) ಅಂತೋದಾತ್ತವು ನ್ಯಾಯವು, ಆದರೂ ಪ್ರತ್ಯಯದಿಂದ ಪೂರ್ವಪದವಾದ ವಿಶ್ವ-ಶಬ್ದಕ್ಕೆ ಅಂತೋದಾತ್ತಬರುವುದು. ಶೇಷನಿಘಾತದಿಂದ ಮಿಕ್ಕ ವರ್ಣಗಳು ಅನುದಾತ್ತಗಳು. ಅವುಗಳಲ್ಲಿ ಶಕಾರದ ಅನುದಾತ್ತಕ್ಕೆ **' ಉದಾತ್ತಾದನುದಾತ್ತಸ್ಯ '**-(ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತ ಬರುತ್ತೆ. ಮಿಕ್ಕ ಎರಡು ವರ್ಣಗಳೂ, **' ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ '** (ಪಾ. ಸೂ. ೧-೨-೩೯) ಎಂಬುದರಿಂದ ಪ್ರಚಯಗಳು ಎಂದು ಸ್ಥಿತಿ. ಇಲ್ಲಿ ವಿಶ್ವಶಬ್ದವು **' ಅಶೂಪ್ರುಷಿಲಟಿ '**-(ಉ. ಸೂ. ೧-೧೧೪) ಎಂಬುದರಿಂದ ಕ್ವನ್‌ಪ್ರತ್ಯಯ ಬಂದು ನಿಷ್ಪನ್ನವಾಗಿದೆ. ಆದ್ದರಿಂದ ಇದು **' ಞ್ನಿತ್ಯಾದಿ-ರ್ನಿತ್ಯಮ್ '** (ಪಾ. ಸೂ. ೬-೧-೧೯೭) ಎಂದು ಆದ್ಯುದಾತ್ತ ಎಂದು (ಋ. ಸಂ. ೧-೯-೧) ವರ್ಣಿಸಿರುವರು. ಅಂದಮೇಲೆ ವ್ಯತ್ಯಯದಿಂದ ಪೂರ್ವಪದ ಪ್ರಕೃತಿಸ್ವರವನ್ನು ಇಲ್ಲಿ ಹೇಳಿದರೆ ಆದ್ಯುದಾತ್ತವೇ ಬರಬೇಕಾಗುತ್ತದೆ. ಆಗ ವಿಶ್ವಶಂಭುವಂ, ಎಂದು ರೂಪವಾಗುವುದಿಲ್ಲ. ವಿಶ್ವಶಂಭುವಂ ಎಂದಾಗಬೇಕಾಗುತ್ತದೆ. ಏವಂಚ ವೇದಭಾಷ್ಯದಲ್ಲಿ **' ವ್ಯತ್ಯಯೇನ ಪೂರ್ವಪದಾಂತೋದಾತ್ತತ್ವಮ್ '** ಎಂದು ಇರುವುದು ಯುಕ್ತವು. ಹೀಗಿದ್ದರೂ ಶೋಧಕಾದಿಗಳ ಪ್ರಮಾದದಿಂದ ವ್ಯತ್ಯಯೇನ ಪೂರ್ವಪದಪ್ರಕೃತಿಸ್ವರತ್ವಂ ಎಂದು ಬಿದ್ದಿರಬಹುದು. ಇದು ಹೇಗಾದರೂ ಇರಲಿ ಅರ್ಥವರ್ಣನಕಾಲದಲ್ಲಿ ಈ ವ್ಯುತ್ಪತ್ತಿಗೆ ಅನುಗುಣವಾದ ಅರ್ಥಕ್ಕೆ ಭಾಷ್ಯಕಾರರ ವರ್ಣನೆಯೇ ಇಲ್ಲವು. ಅಂದಮೇಲೆ ಭಾಷ್ಯಕಾರರಿಗೆ ಈ ವ್ಯುತ್ಪತ್ತಿಯಲ್ಲಿ ಅರುಚಿ ಇದೆ ಎಂದು ವ್ಯಕ್ತವು. ಆದುದರಿಂದಲೇ **' ಯದ್ವಾ '** ಎಂದು ಆರಂಭಿಸಿ ಬೇರೆ ವ್ಯುತ್ಪತ್ತಿಯನ್ನು ಹೇಳುವರು. ವಿಶ್ವೇ-ಸರ್ವವ್ಯಾಪಾರಗಳೂ ಶಂಭುವಃ-ಸುಖಕರಗಳಾಗಿ, ಯಸ್ಯ-ಯಾವನಿಗೆ ಇದೆಯೋ ಸಃ-ಅವನು ವಿಶ್ವಶಂಭೂಃ, ತಂ, ಎಂದು ಬಹುವ್ರೀಹಿಸಮಾಸ. ಈ ಪಕ್ಷದಲ್ಲಿ ಸಮಾಸಾಂತೋ

ದಾತ್ತವನ್ನು ಬಾಧಿಸಿ '**ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ**' (ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾಗುತ್ತದೆ. ಆದರೆ ಇದು '**ಬಹುವ್ರೀಹೌ ವಿಶ್ವಂ ಸಂಜ್ಞಾಯಾಮ್**' (ಪಾ. ಸೂ. ೬-೨-೧೦೬) ಇಲ್ಲಿ '**ಬಹುವ್ರೀಹೌಪ್ರಕೃತ್ಯಾಪೂರ್ವಪದಂ**' (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಂ ಎಂದು ಅನುವೃತ್ತವಾಗುತ್ತದೆ. ಪ್ರಕೃತ ವಾಕ್ಯಾರ್ಥಕ್ಕೆ ಅನುಗುಣವಾಗಿ ಅದನ್ನು ಷಷ್ಠ್ಯಂತವಾಗಿ ವಿಪರಿಣಾಮಮಾಡಿ ಕೊಳ್ಳಬೇಕು, '**ಅನ್ತಃ**' (ಪಾ. ಸೂ. ೬-೨-೯೨) ಎಂಬುದು ಅಧಿಕೃತವಾಗುತ್ತದೆ. ತಥಾಚ ಪೂರ್ವಪದಸ್ಯ ಅಂತಃ, ಎಂದಾಯಿತು, '**ಆದಿರುದಾತ್ತಃ**' (ಪಾ. ಸೂ. ೬-೨-೬೪) ಎಂಬುದರಿಂದ ಉದಾತ್ತಃ ಎಂದು ಅನುವೃತ್ತವಾಗುತ್ತೆ. **ಸಂಜ್ಞಾಯಾಂ** ಎಂಬುದು ಸಮುದಾಕ್ಕೆ ವಿಶೇಷಣ, ಏವಂಚ ಸಮುದಾಯದಿಂದ ಸಂಜ್ಞೆ ತೋರುವಾಗ ಬಹುವ್ರೀಹಿ ಸಮಾಸದ ಪೂರ್ವಪದವಾದ ವಿಶ್ವ-ಶಬ್ದದ ಅಂತವು ಉದಾತ್ತವಾಗುವುದು, ಎಂಬುದರಿಂದ ವಿಶ್ವ-ಎಂಬುದು ಅಂತೋ ದಾತ್ತವೇ ಆಗುತ್ತೆ. ಈ ಪಕ್ಷದಲ್ಲಿ ವ್ಯತ್ಯಯದಿಂದ ಸ್ವರೋಪಪಾದನೆ ಮಾಡಬೇಕಾದ ಕ್ಲೇಶವಿಲ್ಲ.

**ಅಪಃ**—ಇದು ಅಬ್ರವೀತ್-ಎಂಬ ಧಾತುವನ್ನು ಕುರಿತು ಕರ್ಮ ಪದ. ಆದ್ದರಿಂದ ಕರ್ಮಾರ್ಥವನ್ನು ವಿವಕ್ಷಿಸಿ ದಾಗ '**ಕರ್ಮಣಿ ದ್ವಿತೀಯಾ**' (ಪಾ. ಸೂ. ೨-೩-೨) ಎಂಬ ಅನುಶಾಸನದಂತೆ ದ್ವಿತೀಯಾ ವಿಭಕ್ತಿಯು, ಅಪ್ ಶಬ್ದ ನಿತ್ಯ ಬಹುವಚನಾಂತವಾದ್ದರಿಂದ ಕರ್ಮಾರ್ಥಗತಬಹುತ್ವವನ್ನು ವಿವಕ್ಷಿಸಿದಾಗ '**ಬಹುಷು ಬಹುವಚನಂ**' (ಪಾ ಸೂ. ೧-೪-೨೧) ಎಂದು ದ್ವಿತೀಯಾ ಬಹುವಚನ ಶಸ್-ಬರುವುದು ಯುಕ್ತವು. ಆದರೂ '**ವ್ಯತ್ಯಯೋ ಬಹುಲಂ**' (ಪಾ. ಸೂ. ೩-೧-೮೫) ಎಂಬುದರಿಂದ ವ್ಯತ್ಯಾಸದಿಂದ ಇಲ್ಲಿ ಪ್ರಥಮಾ ಬಹುವಚನ ಜಸ್-ವಿಭಕ್ತಿ ಬಂದಿದೆ, ಅಪ್+ಅಸ್, ಈಗ ಅಸ್ ಎಂಬ ಸರ್ವನಾಮಸ್ಥಾನ ಸಂಜ್ಞಕವಾದ ಪ್ರತ್ಯಯ ಪರದಲ್ಲಿರುವುದರಿಂದ '**ಅಪ್ತೃನ್ತೃಚ್**' (ಪಾ. ಸೂ ೬-೪-೧೧) ಸಂಬುದ್ಧಿಭಿನ್ನಸರ್ವನಾಮಸ್ಥಾನ ಪರದಲ್ಲಿರುವಾಗ, ಅಪ್ ಶಬ್ದ ತೃನ್ ಮೊದಲಾದ ಪ್ರತ್ಯಯಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದ, ಇವುಗಳ ಉಪಾಂತ್ಯವರ್ಣಕ್ಕೆ ದೀರ್ಘ ಬರು ವುದು ಎಂಬುದರಿಂದ ದೀರ್ಘ, ಆಪಸ್, ಸ್ ಗೆ ರುತ್ವ ವಿಸರ್ಗಗಳು.

**ವಿಶ್ವಭೇಷಜೀಃ**—ವಿಶ್ವಾನಿ ಭೇಷಜಾನಿ ಯಾಸು ತಾಃ । ಎಂದು ವಿಗ್ರಹ, ಇಲ್ಲಿ ಬಹುವ್ರೀಹಿನಿಮಿತ್ತಕ ವಾದ ಪೂರ್ವಪದಪ್ರಕೃತಿಸ್ವರವನ್ನು ಬಾಧಿಸಿ ವಿಶ್ವಶಂಭುವಂ, ಎಂಬಲ್ಲಿ ಹೇಳಿದ ರೀತಿ ಪೂರ್ವಪದಕ್ಕೆ ಅಂತೋದಾತ್ತ ಬರುತ್ತದೆ '**ಭಿಯಃಷುಗ್ಘ್ರಸ್ವಶ್ಚ**' (ಉ. ಸೂ. ೧-೧೩೫) ಞಿಭೀ ಭಯೇ ಧಾತುವಿನ ಮುಂದೆ ಅಜಿಪ್ರತ್ಯಯವೂ ಧಾತುವಿಗೆ ಷುಕ್ ಆಗಮವೂ ಬರುವುದು ಎಂಬುದರಿಂದ ಭೀ ಧಾತುವಿನ ಮುಂದೆ ಅಜ್ ಪ್ರತ್ಯಯವೂ ಧಾತುವಿಗೆ ಹ್ರಸ್ವವೂ ಷುಕ್ ಆಗಮವೂ ಬಂದರೆ ಭಿಷಜ್ ಎಂದಾಗುತ್ತದೆ. ಭಿಷಜಃ ಇಮಾಃ ಎಂದು ವಿಗ್ರಹ. '**ತಸ್ಯೇದಮ್**' (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ, ಎಭಿಷಜ್+ಅ- ಈಗ ಪ್ರತ್ಯಯವು ಣಿತ್ ಆದ್ದರಿಂದ **ತದ್ಧಿತೇಷ್ವಚಾಮಾದೇ** (ಪ್ರಾ. ಸೂ. ೭-೨-೧೧೭) ಎಂಬುದರಿಂದ ಭೀ ಎಂಬಲ್ಲಿ ವೃದ್ಧಿಬಂದು ಭೈ ಎಂದು ಯದ್ಯಪಿ ಆಗಬೇಕಾಗುವುದು ಆದರೆ ನಿಪಾತನದಿಂದ ಭೀ ಯ ಈಕಾರಕ್ಕೆ ಏಕಾರ ಬರುತ್ತದೆ. ಸ್ತ್ರೀತ್ವವಿವಕ್ಷೆಮಾಡಿದಾಗ. ಙೀಷ್ ಬಂದು ಭೇಷಜೀಃ ಎಂದಾಗುತ್ತೆ. ಙೀಷ್ ನ ಈಕಾರ ಪ್ರತ್ಯಯಸ್ವರದಿಂದ ಉದಾತ್ತ.

॥ ಸಂಹಿತಾಪಾಠಃ ॥

ಆಪಃ ಪೃಣೀತ ಭೇಷಜಂ ವರೂಥಂ ತನ್ವೇ೩ ಮಮ ।
ಜ್ಯೋಕ್ ಚ ಸೂರ್ಯಂ ದೃಶೇ ॥ ೨೧ ॥

॥ ಪದಪಾಠಃ ॥

ಆಪಃ । ಪೃಣೀತ । ಭೇಷಜಂ । ವರೂಥಂ । ತನ್ವೇ । ಮಮ ।
ಜ್ಯೋಕ್ । ಚ । ಸೂರ್ಯಂ । ದೃಶೇ ॥ ೨೧ ॥

॥ ಸಾಯಣಭಾಷ್ಯಂ ॥

ಹೇ ಆಪೋ ಮಮ ತನ್ವೇ ಶರೀರಾರ್ಥಂ ವರೂಥಂ ರೋಗನಿವಾರಕಂ ಭೇಷಜಮೌಷಧಂ ಪೃಣೀತ । ಪೂರಯತ । ಕಿಂಚ ಜ್ಯೋಕ್ ಚಿರಂ ಸೂರ್ಯಂ ದೃಶೇ ದ್ರಷ್ಟುಂ ನಿರೋಗಾ ವಯಂ ಶಕ್ನುವಾಮೇತಿ ಶೇಷಃ ॥ ಪೃಣೀತ । ಪೄ ಪಾಲನಪೂರಣಯೋಃ । ಲೋಣ್ಮಧ್ಯಮಬಹುವಚನಂ ಥ । ತಸ್ಯ ತಸ್ಥಸ್ಥಮಿಪಾಮಿತಿ ತಾದೇಶಃ । ಕ್ರ್ಯಾದಿಭ್ಯಃ ಶ್ನಾ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವಃ । ಈ ಹಲ್ಯಘೋರಿತೀತ್ವಂ । ಋವರ್ಣಾಚ್ಚೇತಿ ಣತ್ವಂ । ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ತಿಙಃ ಸ್ವರಃ ಶಿಷ್ಯತೇ । ಆಪ ಇತ್ಯಸ್ಯಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವೇ ಪಾದಾದಿತ್ವಾನ್ನಿಘಾತಾಭಾವಃ । ವರೂಥಂ । ವೃಞ್ ವರಣೇ । ಜ್ರೂವೃಞ್ಭ್ಯಾಮೂಥನ್ । ಉ. ೨-೬ । ನಿತ್ತ್ವಾದಾದ್ಯುದಾತ್ತಃ । ತನ್ವೇ । ಙಿತಿ ಹ್ರಸ್ವಶ್ಚ । ಪಾ. ೧-೪-೬ । ಇತಿ ನದೀಸಂಜ್ಞಾ ಪಾಕ್ಷಿಕೀತ್ಯಾಡಾಗಮಾಭಾವಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತ್ಯುದಾತ್ತತ್ವೇ ಪ್ರಾಪ್ತೇಽವ್ಯತ್ಯಯೇನೋದಾತ್ತಸ್ವರಿತಯೋರಿತಿ ಸ್ವರಿತತ್ವಂ । ದೃಶೇ । ದೃಶೇ ವಿಖ್ಯೇ ಚ । ಪಾ. ೩-೪-೧೧ । ಇತಿ ತುಮರ್ಥೇ ನಿಪಾತ್ಯತೇ ॥

॥ ಪ್ರತಿಪದಾರ್ಥ ॥

**ಆಪಃ**—ಎಲೈ ಉದಕಗಳೇ, ಅಥವಾ ಉದಕಾಭಿಮಾನಿದೇವತೆಗಳೇ । **ಮಮ**—ನನ್ನ । **ತನ್ವೇ**—ಶರೀರಕ್ಕಾಗಿ । **ವರೂಥಂ**—ರೋಗನಿವಾರಕವಾದ । **ಭೇಷಜಂ**—ಔಷಧವನ್ನು । **ಪೃಣೀತ**—ಪೂರ್ಣಮಾಡಿ (ಎಂದರೆ ಶರೀರವು ರೋಗವಿಲ್ಲದಂತೆ ಪೂರ್ಣವಾಗಿರುವಂತೆ ಮಾಡಿರಿ) । (ಹೀಗೆ ಮಾಡುವುದರಿಂದ ನಾನು) **ಸೂರ್ಯಂ**—ಸೂರ್ಯನನ್ನು । **ಜ್ಯೋಕ್**—ಬಹಳಕಾಲದವರೆಗೆ । **ದೃಶೇ**—ನೋಡುವೆನು (ನೋಡಲು ಸಮರ್ಥನಾಗುವೆನು ಎಂದರೆ ಬಹುಕಾಲ ಜೀವಿಸಲು ಸಮರ್ಥನಾಗುವೆನು).

॥ ಭಾವಾರ್ಥ ॥

ಎಲೈ ಉದಕಗಳೇ (ಅಥವಾ ಉದಕಾಭಿಮಾನಿ ದೇವತೆಗಳೇ), ನನ್ನ ಶರೀರವು ರೋಗವಿಲ್ಲದಂತೆ ಇರುವುದಕ್ಕಾಗಿ ಉತ್ತಮವಾದ ಔಷಧವನ್ನು ಪೂರ್ಣಮಾಡಿ (ಸಿದ್ಧಪಡಿಸಿ) ಅದರಿಂದ ನಾನು ರೋಗರಹಿತನಾಗಿ ಬಹುಕಾಲ ಸೂರ್ಯನನ್ನು ನೋಡುವಂತಾಗಲಿ ಎಂದರೆ ಬಹುಕಾಲ ಜೀವಿಸುವಂತಾಗಲಿ.

## English Translation.

Waters, grant me a medicament that shall be an armour to my body that I may long behold the Sun.

॥ ವಿಶೇಷವಿಷಯಗಳು ॥

**ಪೃಣೀತ—ಪೃ ಪಾಲನಪೂರಣಯೋಃ ॥** ಪೂರ್ಣಮಾಡಿರಿ ಎಂದರೆ ಶರೀರದಲ್ಲಿ ರೋಗಾದಿಗಳಿಲ್ಲದಂತೆ, ಶರೀರವು ತನ್ನ ಕೆಲಸಗಳನ್ನು ಕ್ರಮವಾಗಿ ಮಾಡಲು ಶಕ್ತವಾಗುವಂತೆ ಮಾಡಿರಿ ಎಂದಭಿಪ್ರಾಯವು.

**ವರೂಥಂ—ವರಣೀಯಂ, ರೋಗನಿವಾರಕಂ ॥** ಅಪೇಕ್ಷಣೀಯವಾದ ಎಂದರೆ ರೋಗನಿವಾರಕವಾದ.

**ಜ್ಯೋಕ್ ಚ ಸೂರ್ಯಂ ದೃಶೇ**—ಸೂರ್ಯನನ್ನು ಬಹುಕಾಲ ನೋಡುತ್ತಿರುವುದು ಎಂದರೆ ಬಹುಕಾಲ ಜೀವಿಸಿರುವುದು ಎಂದರ್ಥವು. ಇದೇ ಅಭಿಪ್ರಾಯವನ್ನು ಸೂಚಿಸುವ ಕೆಲವು ಋಕ್ಕುಗಳು ಋಗ್ವೇದದಲ್ಲಿ ಕೆಲವಿವೆ.—

**ತಸ್ಮಾ ಅಗ್ನಿರ್ಭಾರತಃ ಶರ್ಮ ಯಂಸಜ್ಜ್ಯೋಕ್ ಪಶ್ಯಾತ್ಸೂರ್ಯಮುಚ್ಚರಂತಂ ।**

( ಋ. ಸಂ. ೪–೨೫–೪. )

**ತವ ಕ್ರತ್ವಾ ತವೋತಿಭಿರ್ಜ್ಯೋಕ್ ಪಶ್ಯೇಮ ಸೂರ್ಯಂ ॥**

( ಋ. ಸಂ. ೯–೪–೬ )

**ಶಂ ನಃ ಕ್ಷೇತ್ರಮುರು ಜ್ಯೋತೀಂಷಿ ಸೋಮ ಜ್ಯೋಙ್ನಃ ಸೂರ್ಯಂ ದೃಶಯೇ ರಿರೀಹಿ ॥**

( ಋ. ಸಂ. ೯–೯೧–೬)

**ಉದ್ಯಂತಂ ತ್ವಾ ಮಿತ್ರಮಹೋ ದಿವೇದಿವೇ ಜ್ಯೋಗ್ಜೀವಾಃ ಪ್ರತಿ ಪಶ್ಯೇಮ ಸೂರ್ಯ ॥**

( ಋ. ಸಂ. ೧೦–೩೭–೭ )

**ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ॥**

( ಋ. ಸಂ. ೧೦–೫೯–೬ )

ಇವುಗಳಲ್ಲದೆ ಯಜುರ್ವೇದದಲ್ಲಿಯೂ— "**ಪಶ್ಯೇಮ ಶರದಃ ಶತಂ .... ಜ್ಯೋಕ್ ಚ ಸೂರ್ಯಂ ದೃಶೇ, ಜ್ಯೋಕ್ ಚ ಪಶ್ಯಾಮಿ ಸೂರ್ಯಂ**" ಮೊದಲಾದ ಈ ಅಭಿಪ್ರಾಯವನ್ನು ಸೂಚಿಸುವ ಅನೇಕವಾಕ್ಯಗಳಿವೆ.

॥ ವ್ಯಾಕರಣಪ್ರಕ್ರಿಯಾ ॥

**ಪೃಣೀತ**—ಪೃ--ಪಾಲನ ಪೂರಣಯೋಃ ಧಾತು. ಲೋಟ್ ಮಧ್ಯಮಪುರುಷ ಬಹುವಚನ ಥ ಪ್ರತ್ಯಯ, ಪೃ+ಥ. '**ಲೋಟೋ ಲಙ್ವತ್**' (ಪಾ. ಸೂ ೩–೪–೮೫) ಲೋಟಿಗೆ ಲಙ್ಙಿಗೆ ಕಾರ್ಯ ಬರುವಂತೆ ಕಾರ್ಯ ಬರು

ವುದು ಎಂದು ಲಙ್ವದ್ಭಾವ ಇದೆ. **'ತಸ್ಥಸ್ಥಮಿಪಾಂ ತಾಂತಂತಾಮಃ'** (ಪಾ. ಸೂ. ೩-೪-೧೦೧) ತಸ್-ಥಸ್-ಥ-ಮಿಪ್ ಈ ನಾಲ್ಕು ಪ್ರತ್ಯಯಗಳಿಗೆ ಕ್ರಮವಾಗಿ ತಾಮ್-ತಮ್-ತ-ಅಮ್ ಈ ಆದೇಶಗಳು ಬರುವುವು ಎಂಬುದರಿಂದ ಥ ಗೆ ತ ಆದೇಶ ಪೄ+ತ. **' ಕ್ರ್ಯಾದಿಭ್ಯಃ ಶ್ನಾ '** (ಪಾ., ಸೂ. ೩-೧-೮೧) ಕರ್ತ್ರರ್ಥಕಸಾರ್ವಧಾತುಕಪ್ರತ್ಯಯವು ಪರ ದಲ್ಲಿರುವಾಗ ಕ್ರ್ಯಾದಿಗಣದ ಧಾತುವಿನ ಮುಂದೆ ಶ್ನಾ (ನಾ) ವಿಕರಣಪ್ರತ್ಯಯ ಬರುವುದು. ಇದರಿಂದ ಶ್ನ ಬಂದರೆ ಪೄ+ನಾ+ತ. **' ಪ್ವಾದೀನಾಂ ಹ್ರಸ್ವಃ '** (ಪಾ. ಸೂ. ೭-೩-೮೦) ಪೂಙ್ ಪವನೇ ಮೊದಲಾಗಿ ಧಾತುಪಾಠದಲ್ಲಿ ಪಠಿಸಿರುವ ಧಾತುಗಳಿಗೆ ಹ್ರಸ್ವ ಬರುವುದು ಎಂಬುದರಿಂದ ಪೄ-ಎಂಬಲ್ಲಿರುವ ಋೂಕಾರಕ್ಕೆ ಹ್ರಸ್ವವಾದ ಋ ಆದೇಶ-ಪೃ+ನಾ+ತ, **' ಈಹಲ್ಯಘೋಃ '** (ಪಾ. ೬-೪-೧೧೩) ಕಿತ್ ಅಥವಾ ಙಿತ್ ಆದ ಹಲಾದಿಯಾದ ಸಾರ್ವಧಾತುಕವು ಪರದಲ್ಲಿರುವಾಗ ಶ್ನಾ ಪ್ರತ್ಯಯದ ಆ ಗೂ ಅಭ್ಯಸ್ತದ ಆ ಗೂ ಈಕಾರ ಆದೇಶ ಬರುವುದು ಎಂಬುದರಿಂದ ಈಕಾರಾದೇಶ ಬಂದರೆ ಪೃ+ನೀ+ತ, **' ಋವರ್ಣಾಚ್ಚೇತಿವಕ್ತವ್ಯಂ '** ಇದು **' ರಷಾಭ್ಯಾಂ ಣತ್ವೇ ಋಕಾರಗ್ರಹಣಮ್ '** (ಪಾ. ಸೂ. ೮-೪-೧ ವಾರ್ತಿಕ ೧) ಎಂಬುದರ ಅರ್ಥಾನುವಾದ. ಋಕಾರದ ಮುಂದೆ ಇರುವ ನಕಾರಕ್ಕೆ ಣಕಾರಾದೇಶ ಬರುವುದು ಎಂದು ಇದರ ಅರ್ಥ. ಇದರಿಂದ ನಕಾರಕ್ಕೆ ಣಕಾರಾದೇಶ ಪೃಣೀತ ಎಂದಾಗುವುದು.

**ಅಪಃ**— ಎಂಬುದು ಸಂಬೋಧನಪ್ರಥಮಾವಿಭಕ್ತ್ಯಂತ. ಆದುದರಿಂದ **' ಸಾಮಂತ್ರಿತಮ್ '** (ಪಾ. ಸೂ. ೨-೩-೪೮) ಸಂಬೋಧನಪ್ರಥಮಾವಿಭಕ್ತ್ಯಂತವು ಆಮನ್ತ್ರಿತಸಂಜ್ಞೆಯನ್ನು ಹೊಂದುವುದು ಎಂಬುದರಿಂದ ಆಮನ್ತ್ರಿತಸಂಜ್ಞೆ ಇದೆ. ಆದ್ದರಿಂದ **' ಆಮಂತ್ರಿತಂ ಪೂರ್ವಮವಿದ್ಯಮಾನವತ್ '** (ಪಾ. ಸೂ. ೮-೧-೭೨) ಹಿಂದಿರುವ ಆಮಂತ್ರಿತವು ಅವಿದ್ಯಮಾನವತ್ ಅಂದರೆ ಇದ್ದರೂ ಇಲ್ಲದಂತೆ ಆಗುವುದು ಎಂಬುದರಿಂದ ಅವಿದ್ಯಮಾನ ವದ್ಭಾವ ಬರುವುದು. ಆದ್ದರಿಂದ ಪೃಣೀತ ಎಂಬುದು ಪದಾತ್ಪರವಾಗುವುದಿಲ್ಲ. ಪಾದಾದಿಯಲ್ಲಿರುವುದೂ ಆಗುವುದು. ಆದ್ದರಿಂದ ಅತಿಙಂತಪದದ ಮುಂದೆ ಇಲ್ಲದ ಕಾರಣ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. **ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರವಿಕರಣೇಭ್ಯಃ** ವಿಕರಣ ವಿಚಾರದಲ್ಲಿ ಅದು ಸತಿಶಿಷ್ಟವಾದರೂ ಅಂದರೆ ಕೊನೆಯಲ್ಲಿ ಬಂದರೂ ಆ ಸ್ವರವು ಬಲವಾದುದಲ್ಲ ಎಂದು **' ಅನ್ಯತ್ರವಿಕರಣೇಭ್ಯಃ** ಎಂದು ಹೇಳಿರುವರು. ತಿಙ್ ಪ್ರತ್ಯಯವಾದ ತ ಎಂಬುದಕ್ಕೆ ಪ್ರತ್ಯಯಸ್ವರ ಆದ್ಯುದಾತ್ತ ಬರುವುದು. ಮಿಕ್ಕವು ಶೇಷಾನುದಾತ್ತ ಸ್ವರದಿಂದ ಅನುದಾತ್ತಗಳು.

**ವರೂಥಮ್**—ವೃಞ್ ವರಣೇ ಧಾತು. **' ಜ್ಯಾವೃಞ್ಭ್ಯಾಮೂಥನ್ '** (ಉ. ಸೂ. ೨-೧೬೩) ಜ್ಯಾ ವಯೋಹಾನೌ, ಕ್ರ್ಯಾದಿ-ಜ್ಯಾಷ್ ವಯೋಹಾನೌ ದಿವಾದಿ, ವೃಞ್ ವರಣೇ ಈ ಧಾತುಗಳ ಮುಂದೆ ಊಥನ್‌ಪ್ರತ್ಯಯ ಬರುವುದು ಎಂದು ಊಥನ್ ಬಂದರೆ ವೃ+ಊಥ. ಋಗೆ ಗುಣ ಬಂದು ಅರ್ ಆಗುತ್ತ ವರೂಥ ಎಂದಾಗುತ್ತದೆ. ಪ್ರತ್ಯಯವು ನಿತ್, ಆದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು.

**ತನ್ವೇ**—ತನು ವಿಸ್ತಾರೇ ಧಾತು. **' ಭೃಮೃಶೀ ತೄ ಚರಿತ್ಸರಿ ತನಿ ಧನಿ ಮಿ ಮಸ್ಜಿ ಭ್ಯಉಃ '** (ಉ. ಸೂ. ೧-೭) ಭೃಞ್ ಭರಣೇ, ಮೃಙ್ ಪ್ರಾಣತ್ಯಾಗೇ ಶೀಙ್ ಸ್ವಪ್ನೇ, ತೄ ಪ್ಲವನತರಣಯೋಃ, ಚರ ಗತಿಭಕ್ಷಣಯೋಃ ತ್ಸರ ಛದ್ಮಗತೌ, ತನು ವಿಸ್ತಾರೇ, ಧನ ಧಾನ್ಯೇ, ಡುಮಿಞ್ ಪ್ರಕ್ಷೇಪಣೇ, ಟುಮಸ್ಜೋ ಶುದ್ಧೌ, ಈ ಧಾತುಗಳ ಮುಂದೆ ಉಪ್ರತ್ಯಯ ಬರುವುದು ಎಂಬುದರಿಂದ ತನ್ ಧಾತುವಿನ ಮುಂದೆ ಉಪ್ರತ್ಯಯ ತನ್+ಉ=ತನು, ಪ್ರತ್ಯಯಸ್ವರದಿಂದ ಅಂತೋದಾತ್ತ ಇದರ ಮುಂದೆ ಚತುರ್ಥೀವಿಭಕ್ತಿ ಙೇ ಪ್ರತ್ಯಯ ತನು+ಏ **' ಙಿತಿ ಹ್ರಸ್ವಶ್ಚ '** (ಪಾ. ಸೂ. ೧-೪-೬)

ಇಲ್ಲಿ ಚಕಾರವಿರುವುದರಿಂದ ಎರಡು ವಾಕ್ಯಗಳು ಏರ್ಪಡುವುವು. **ಯೂಸ್ತ್ರ್ಯಾಖ್ಯೌ ನದೀ** ಎಂಬ ಸೂತ್ರವು ಅನುವೃತ್ತವಾಗುವುದು, ಈಶ್ಚ–ಊಶ್ಚ=ಯೂ ಎಂದಾಗುತ್ತೆ. ದೀರ್ಘದ ಮುಂದೆ ಇಚ್ ವರ್ಣ ಇದ್ದರೂ ಸೂತ್ರವಾದ್ದರಿಂದ **'ದೀರ್ಘಾಜ್ಜಸಿಚ'** (ಪಾ. ಸೂ. ೬–೧–೧೦೫) ಎಂಬುದರಿಂದ ಪೂರ್ವಸವರ್ಣದೀರ್ಘಕ್ಕೆ ನಿಷೇಧ ಬರುವುದಿಲ್ಲ. ಸ್ತ್ರಿಯಮೇವಾಚಕ್ಷತೇ ಇತಿ ಸ್ತ್ರ್ಯಾಖ್ಯಾ=ಸ್ತ್ರೀಲಿಂಗವನ್ನೇ ಬೋಧಿಸತಕ್ಕವು ಎಂದರೆ ನಿತ್ಯ ಸ್ತ್ರೀಲಿಂಗಗಳು ಎಂದರ್ಥ. **'ನೇಯಙುವಙ್‌ಸ್ಥಾನಾವಸ್ತ್ರೀ'** (ಪಾ. ಸೂ. ೧–೪–೪) ನವನ್ನು ಬಿಟ್ಟು ಸಂಪೂರ್ಣಸೂತ್ರಕ್ಕೆ ಅನುವೃತ್ತಿ, ಇಯಙುವಙೋಃ ಸ್ಥಾನಂ=ಸ್ಥಿತಿಃ ಯಯೋಸ್ತೌ. ಇಯಙ್ ಉವಙ್ ಆದೇಶ ಪ್ರಾಪ್ತಿಯೋಗ್ಯಗಳು ಎಂದರ್ಥ. **'ವಾಮಿ'** (ಪಾ. ಸೂ. ೧–೪–೫) ಎಂಬುದರಿಂದ ವಾ ಎಂದು ಬರುತ್ತೆ, ಏವಂಚ ಙಕಾರೇತ್ಸಂಜ್ಞಕವಾದ ಪ್ರತ್ಯಯವು ಪರದಲ್ಲಿರುವಾಗ ನಿತ್ಯ ಸ್ತ್ರೀಲಿಂಗಗಳೂ ಇಯಙುವಙಾದೇಶಪ್ರಾಪ್ತಿಯೋಗ್ಯಗಳೂ ಸ್ತ್ರೀ ಶಬ್ದಕ್ಕಿಂತ ಬೇರೆಯಾದವೂ ಆದ ಈಕಾರಾಂತ ಊಕಾರಾಂತ ಶಬ್ದಗಳು ವಿಕಲ್ಪವಾಗಿ ನದೀಸಂಜ್ಞೆಯನ್ನು ಹೊಂದುವುವು ಎಂದು **ಙಿತಿ** ಎಂಬ ಮೊದಲನೇ ವಾಕ್ಯಕ್ಕೆ ಅರ್ಥ. **ಹ್ರಸ್ವಶ್ಚ** ಎಂದು ಎರಡನೇ ವಾಕ್ಯ. ಇಲ್ಲಿ ಯೂಸ್ತ್ರ್ಯಾಖ್ಯೌನದೀ ವಾ–ಙಿತಿ ಎಂಬ ಪದಗಳು ಅನುವರ್ತಿಸುವುವು. ಏವಂಚ ಙಕಾರೇತ್ಸಂಜ್ಞಕಪ್ರತ್ಯಯ ಪರದಲ್ಲಿರುವಾಗ ಹ್ರಸ್ವಗಳಾದ ಇಕಾರಾಂತ ಅಥವಾ ಹ್ರಸ್ವವಾದ ಉಕಾರಾಂತವಾದ ಶಬ್ದಗಳು ವಿಕಲ್ಪದಿಂದ ನದೀಸಂಜ್ಞೆಯನ್ನು ಹೊಂದುವುವು ಎಂದು ಇದರ ಅರ್ಥ, ಮೊದಲನೆಯ ವಾಕ್ಯಾರ್ಥವು ಇಲ್ಲಿಗೆ ಸಂಬಂಧಿಸುವುದಿಲ್ಲ. ಯದ್ಯಪಿ ಎರಡನೇ ವಾಕ್ಯಾರ್ಥಕ್ಕೆ ಪ್ರವೃತ್ತಿ ಇದೆ. ಆದರೂ ಅಲ್ಲಿ ವಿಕಲ್ಪವಾಗಿ ಎಂದಿರುವುದರಿಂದ ಇಲ್ಲಿ ತನು ಶಬ್ದಕ್ಕೆ ನದೀಸಂಜ್ಞೆ ಇಲ್ಲ. ಆದ್ದರಿಂದ **'ಆಣ್ನದ್ಯಾಃ'** (ಪಾ. ಸೂ. ೭–೩–೧೧೨) ಎಂಬುದರಿಂದ ಆಟ್ ಆಗಮ ಬರುವುದಿಲ್ಲ, ಯಣಾದೇಶದಿಂದ ಉಗೆವ್ ಬಂದರೆ ತನ್ವೇ ಎಂದಾಗುತ್ತೆ. ಇಲ್ಲಿ ಏ ಎಂಬುದು ಸುಪ್ಪಾದ್ದರಿಂದ **'ಅನುದಾತ್ತೌ ಸುಪ್ಪಿತೌ'** ಎಂಬುದರಿಂದ ಅನುದಾತ್ತವು ಪ್ರಾಪ್ತವಾಯಿತು. ಇದನ್ನು ಬಾಧಿಸಿ **'ಉದಾತ್ತಯಣೋ ಹಲ್ಪೂರ್ವಾತ್'** (ಪಾ. ಸೂ. ೬–೧–೧೭೪) ಯ್–ವ್–ಲ್ ಗಳು ಉದಾತ್ತವಾದ ವರ್ಣದ ಸ್ಥಾನದಲ್ಲಿ ಬಂದವುಗಳಾಗಿ ವ್ಯಂಜನದ ಮುಂದೆ ಇರುವುವು ಆದರೆ ಅಂತಹ ಯ್–ವ್–ಲ್ ಗಳ ಮುಂದೆ ಬರುವ ನದೀಸಂಜ್ಞಕವರ್ಣಗಳೂ, ಶಸ್ ಮೊದಲಾದ ವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ, ವ್ ನ ಮುಂದೆ ಇರುವ ಏಗೆ ಉದಾತ್ತವು ಪ್ರಾಪ್ತವಾಯಿತು. ಆದರೂ **'ವ್ಯತ್ಯಯೋ ಬಹುಲಂ'** ಎಂದು ಹೇಳಿರುವುದರಿಂದ ಇಲ್ಲಿ ಇದಕ್ಕೆ ವ್ಯತ್ಯಾಸವಾಗಿ **'ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ'** (ಪಾ. ಸೂ. ೮–೨–೪) ಉದಾತ್ತ ಅಥವಾ ಸ್ವರಿತದ ಸ್ಥಾನದಲ್ಲಿ ಬಂದ ಯಣ್ ನ ಮುಂದೆ ಇರುವ ಅನುದಾತ್ತಕ್ಕೆ ಸ್ವರಿತ ಬರುವುದು ಎಂಬುದರಿಂದ, ಅನುದಾತ್ತವಾದ ಏ ಗೆ ಸ್ವರಿತ ಬರುವುದು. ಈ ಸ್ವರಿತವನ್ನು ತಿಳಿಸುವುದಕ್ಕಾಗಿಯೇ ಇದರ ಮುಂದೆ ೩ ಎಂಬ ಅಂಕವು ನಿರ್ದಿಷ್ಟವಾಗಿದೆ.

**ದೃಶೇ**—ದೃಶಿರ್ ಪ್ರೇಕ್ಷಣೇ ಧಾತು **'ದೃಶೇ ವಿಖ್ಯೇ ಚ'** (ಪಾ. ಸೂ. ೩–೪–೧೧) ತುಮುನ್ ಪ್ರತ್ಯಯದ ಅರ್ಥದಲ್ಲಿ ಅಂದರೆ ಭಾವ ಎಂಬ ಅರ್ಥದಲ್ಲಿ ದೃಶೇ ಎಂದೂ, ವಿಖ್ಯೇ ಎಂದೂ ಎರಡು ರೂಪಗಳು ನಿಪಾತಿಸಲ್ಪಡುವುವು ಎಂದು ಅರ್ಥ. ಇಲ್ಲಿ ದೃಶ್ ಧಾತುವಿನ ಮುಂದೆಯೂ, ವಿ ಉಪಸರ್ಗಪೂರ್ವಕವಾದ ಖ್ಯಾ ಧಾತುವಿನ ಮುಂದೆಯೂ ತುಮುನ್ ಪ್ರತ್ಯಯಾರ್ಥದಲ್ಲಿ ಕೇ ಪ್ರತ್ಯಯವು ನಿಪಾತಿಸಲ್ಪಡುವುವು. ದೃಶ್+ಏ. ಪ್ರತ್ಯಯ ಕಿತ್. ದೃಶ್ ಗೆ ಲಘೂಪಧಗುಣ ಬರುವುದಿಲ್ಲ. ವಿಖ್ಯಾ+ಏ ಎಂಬಲ್ಲಿ ಪ್ರತ್ಯಯ ಕಿತ್ತಾದ್ದರಿಂದ **'ಆತೋ ಲೋಪ ಇಟಿಚ'** (ಪಾ. ಸೂ. ೬–೪–೬೪) ಎಂಬುದರಿಂದ ಆ ಗೆ ಲೋಪ ಬರುವುದು. ॥ ೨೧ ॥

॥ ಸಂಹಿತಾಪಾಠಃ ॥

ಇದಮಾಪಃ ಪ್ರ ವಹತ ಯತ್ಕಿಂ ಚ ದುರಿತಂ ಮಯಿ ।
ಯದ್ವಾಹಮಭಿದುದ್ರೋಹ ಯದ್ವಾ ಶೇಪ ಉತಾನೃತಂ ॥೨೨॥

॥ ಪದಪಾಠಃ ॥

ಇದಂ । ಆಪಃ । ಪ್ರ । ವಹತ । ಯತ್ । ಕಿಂ । ಚ । ದುಃऽಇತಂ । ಮಯಿ ।
ಯತ್ । ವಾ । ಅಹಂ । ಅಭಿऽದುದ್ರೋಹ । ಯತ್ । ವಾ । ಶೇಪೇ । ಉತ ।
ಅನೃತಂ ॥ ೨೨ ॥

॥ ಸಾಯಣಭಾಷ್ಯಂ ॥

ಪಶೌ ಮಾರ್ಜನ ಇದಮಾಪಃ ಪ್ರ ವಹತೇತ್ಯೇಷಾ ವಿನಿಯುಕ್ತಾ । ಹುತಾಯಾಂ ವಪಾಯಾಮಿತಿ ಖಂಡೇ ಸೂತ್ರಿತಂ । ಇದಮಾಪಃ ಪ್ರವಹತ । ಆ. ೩-೫ । ಇತಿ ॥ ಏಷೈವಾವಭೃಥೇಷ್ಟ್ಯಾ ಸ್ನಾನೇ ವಿನಿಯುಕ್ತಾ । ಪತ್ನೀಸಂಯಾಜೈಶ್ಚರಿತ್ವೇತಿ ಖಂಡ ಇದಮಾಪಃ ಪ್ರ ವಹತ ಸುಮಿತ್ರ್ಯಾ ನ ಆಪ ಓಷಧಯಃ ಸಂತು । ಆ. ೬-೧೩ । ಇತಿ ಸೂತ್ರಿತಂ ॥

ಮಯಿ ಯಜಮಾನೇ ಯತ್ಕಿಂ ಚ ದುರಿತಮಜ್ಞಾನಾನ್ನಿಷ್ಪನ್ನಂ । ವಾಥವಾಹಂ ಯಜಮಾನೋಽಭಿದುದ್ರೋಹ ಸರ್ವತೋ ಬುದ್ಧಿಪೂರ್ವಕಂ ದ್ರೋಹಂ ಕೃತವಾನಸ್ಮಿ ವಾಥವಾ ಶೇಪೇ ಸಾಧುಜನಂ ಶಪ್ತವಾನಸ್ಮೀತಿ ಯದಸ್ತಿ । ಉತಾಪಿ ಚಾನೃತಮುಕ್ತವಾನಿತಿ ಯದಸ್ತಿ । ತದಿದಂ ಸರ್ವಮಪರಾಧಜಾತಂ ಪ್ರ ವಹತ । ಮತ್ತೋಽಪನೀಯ ಪ್ರವಾಹೇಣಾನ್ಯತೋ ನಯತ॥ ಮಯಿ । ಮಪರ್ಯಂತಸ್ಯ ತ್ವಮಾವೇಕವಚನ ಇತಿ ಮಾದೇಶೇ ಕೃತೇಽತೋ ಗುಣ ಇತಿ ಪರರೂಪೇ ಚ ಸತಿ ಯೋಽಚೀತಿ ದಕಾರಸ್ಯ ಯಕಾರಾದೇಶಃ । ಏಕಾದೇಶಸ್ವರೇಣ ಮಕಾರಾತ್ಪರಸ್ಯಾಕಾರಸ್ಯೋದಾತ್ತತ್ವಂ । ದುದ್ರೋಹ । ದ್ರುಹ ಜಿಘಾಂಸಾಯಾಂ । ಣಲಿ ಗುಣೇ ದ್ವಿರ್ವಚನಹ್ರಸ್ವಹಲಾದಿಶೇಷಾಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ.। ಯದ್ವೃತ್ತಯೋಗಾನ್ನಿಘಾತಾಭಾವಃ । ಶೇಪೇ । ಶಪ ಆಕ್ರೋಶೇ । ಲಿಟ ವ್ಯತ್ಯಯೇನ ತಙ್ । ಉತ್ತಮೈಕವಚನಮಿಟ್ । ಟೇರೇತ್ವಂ । ಅತ ಏಕಹಲ್ಮಧ್ಯೇ । ಪಾ. ೬-೪-೧೨೦ । ಇತ್ಯೇತ್ವಾಭ್ಯಾಸಲೋಪೌ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಪೂರ್ವವನ್ನಿಘಾತಾಭಾವಃ ॥

॥ ಪ್ರತಿಪದಾರ್ಥ ॥

**ಮಯಿ**—ಯಜಮಾನನಾದ ನನ್ನಲ್ಲಿ । **ಯತ್ಕಿಂಚ**—ಯಾವುದಾದರೂ । **ದುರಿತಂ**—ಅಜ್ಞಾನದಿಂದ ಮಾಡಿದ ಪಾಪಗಳಿವೆಯೋ । **ವಾ**—ಅಥವಾ । **ಅಹಂ**—ನಾನು । **ಯತ್ ಅಭಿದುದ್ರೋಹ**—ಬುದ್ಧಿಪೂರ್ವಕವಾಗಿ (ಯಾರಿಗಾದರೂ) ದ್ರೋಹವೆಣಿಸಿದ್ದರೂ । **ವಾ**—ಅಥವಾ । **ಯತ್ ಶೇಪೇ**—ಯಾರ ವಿಚಾರವಾಗಿ ಕೆಟ್ಟ ಮಾತನ್ನಾಡಿದ್ದರೂ । **ಉತ**—ಮತ್ತು । **ಅನೃತಂ**—ಸುಳ್ಳನ್ನು (ಹೇಳಿದ್ದರೂ) । **ಇದಂ**—ಅಂತಹ ಪಾಪವನ್ನು । **ಆಪಃ**—ಉದಕಗಳು । **ಪ್ರ ವಹತ**—(ನನ್ನಿಂದ ಬೇರ್ಪಡಿಸಿ) ಪ್ರವಾಹರೂಪದಿಂದ ಕೊಚ್ಚಿಕೊಂಡು ಹೋಗಲಿ.

॥ ಭಾವಾರ್ಥ ॥

ನನ್ನಲ್ಲಿರಬಹುದಾದ ಅಜ್ಞಾನವಶದಿಂದ ಮಾಡಿದ ಪಾಪಗಳು, ಅಥವಾ ನಾನು ಯಾರಿಗಾದರೂ ದ್ರೋಹವೆಣಿಸಿದ್ದರೂ, ಅಥವಾ ಕೆಟ್ಟಮಾತನ್ನಾಡಿದ್ದರೂ ಮತ್ತು ಸುಳ್ಳನ್ನು ಹೇಳಿದ್ದರೂ ಅಂತಹ ಪಾಪಗಳೆಲ್ಲವನ್ನೂ ಉದಕಗಳು (ಹರಿಯುವ ನೀರು) ಪ್ರವಾಹರೂಪದಲ್ಲಿ ಕೊಚ್ಚಿಕೊಂಡು ಹೋಗಲಿ.

English Translation.

O Waters, whatever sin there is in me, whatever ill-will I may have borne to others, whatever imprecations I may have uttered, and whatever falsehood I may have told, wash it away all from me.

॥ ವಿಶೇಷವಿಷಯಗಳು ॥

ಪಶುಯಾಗದಲ್ಲಿ ಮಾರ್ಜನ (ಪ್ರೋಕ್ಷಣ) ಮಾಡುವುದಕ್ಕಾಗಿ **ಇದಮಾಪಃ ಪ್ರವಹತ** ಎಂಬ ಋಕ್ಕನ್ನು ಪಠಿಸುವರು. ಆಶ್ವಲಾಯನಶ್ರೌತಸೂತ್ರದ **ಹುತಾಯಾಂ ವಪಾಯಾಂ** ಎಂಬ ಖಂಡವಲ್ಲಿ ಇದಮಾಪಃ **ಪ್ರವಹತ** ಎಂಬ ಋಕ್ಕನ್ನು ಮಾರ್ಜನಮಂತ್ರವನ್ನಾಗಿ ಪಠಿಸಬೇಕೆಂದು ಹೇಳಿರುವುದು (ಆ. ೩-೫). ಇದಲ್ಲದೆ ಯಜ್ಞಾಂತ್ಯದಲ್ಲಿ ಮಾಡುವ ಅವಭೃಥೇಷ್ಟಿಯಲ್ಲಿಯೂ ಸ್ನಾನಕಾಲದಲ್ಲಿ ಈ ಮಂತ್ರದ ಉಪಯೋಗವಿರುವುದು. ಈ ವಿಷಯವು **ಪತ್ನೀಸಂಯಾಜೈಶ್ಚರಿತ್ವಾ** ಎಂಬ ಖಂಡದಲ್ಲಿ **ಇದಮಾಪಃ ಪ್ರವಹತ** ಮತ್ತು **ಸುಮಿತ್ರ್ಯಾ ನ ಆಪ ಓಷದಯಃ ಸಂತು** ಎಂಬ ಮಂತ್ರಗಳನ್ನು ಪಠಿಸಬೇಕೆಂದು ಹೇಳಿರುವುದು (ಆ. ೬-೧೩).

**ದುರಿತಂ**—ಅಜ್ಞಾನಾನ್ನಿಷ್ಪನ್ನಂ ಕಾಯಿಕಂ ಪಾಪಂ। ಅಜ್ಞಾನದಿಂದ ಅಥವಾ ಬುದ್ಧಿಪೂರ್ವಕವಾಗಿ ಮಾಡಿದ ಕಾರ್ಯರೂಪವಾದ ಪಾಪವು ಎಂದರೆ ಯಾರನ್ನಾದರೂ ಹೊಡೆಯುವುದು ಮೊದಲಾದ ಬಲಪ್ರಯೋಗಮಾಡಿ ಮಾಡುವ ಪಾಪಗಳು ಎಂದರ್ಥವು.

**ಅಭಿದುದ್ರೋಹ**—ಮನಸ್ಸಿನಿಂದ ಕೆಟ್ಟದ್ದನ್ನು ಯೋಚಿಸುವದಕ್ಕೆ ದ್ರೋಹವೆಂದು ಹೆಸರು. ಇದು ಮಾನಸಿಕವಾದ ಪಾಪವು.

**ಶೇಪೇ, ಅನೃತಂ**—ಬೈಯ್ಯುವುದು ಮತ್ತು ಸುಳ್ಳು ಹೇಳುವುದು ಮೊದಲಾದವು ಮಾತಿನಿಂದ ಮಾಡುವ ಪಾಪವು. ಇದು ವಾಚಿಕವು ಈ ಮೂರು ವಿಧವಾದ ಪಾಪಗಳನ್ನು ಹರಿಯುವ ನೀರು ಕೊಚ್ಚಿಕೊಂಡು ಹೋಗಲೆಂದು ಪ್ರಾರ್ಥನೆಯು.

॥ ವ್ಯಾಕರಣಪ್ರಕ್ರಿಯಾ ॥

**ಮಯಿ**—ಯುಸ್ಮದ್ ಶಬ್ದ ಸಪ್ತಮ್ಯೇಕವಚನ ಯುಷ್ಮ್ ಎಂಬ ಮಪರ್ಯಂತ ಭಾಗಕ್ಕೆ **'ತ್ವಮಾವೇಕವಚನೇ'** (ಪಾ. ಸೂ. ೭-೨-೯೨) ಎಂಬುದರಿಂದ ಮ-ಆದೇಶ ಮ+ಅದ್-ಇ. **'ಅತೋ ಗುಣೇ'** (ಪಾ. ಸೂ. ೬-೧-೮೨) ಪರರೂಪ. ಮದ್+ಇ. **'ಯೋಽಚಿ'** (ಪಾ. ಸೂ. ೭-೨-೮೯) ಆದೇಶವನ್ನು ಹೊಂದದ ಅಜಾದಿ ವಿಭಕ್ತಿ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ದ್‌ಗೆ ಯ್ ಬರುತ್ತೆ. ಇದರಿಂದ ಯ್ ಬಂದರೆ ತ್ವಯಿ ಆಗುತ್ತೆ.

**ದುದ್ರೋಹ**—ದ್ರುಹ ಜಿಘಾಂಸಾಯಾಂ ಧಾತು. ಲಿಟ್ ಪರಸ್ಮೈಪದ ಪ್ರ-ಪು-ಏ-ತಿ ಪ್ರತ್ಯಯ, **'ಪರಸ್ಮೈಪದಾನಾಂ'** (ಪಾ. ಸೂ. ೩-೪-೮೨) ಎಂಬುದರಿಂದ ಣಲ್ ದ್ರುಹ್+ಅ. **ಲಿಟಿಧಾತೋಃ-'** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ. **'ಹ್ರಸ್ವಃ'** (ಪಾ. ಸೂ. ೭-೪-೫೯) ಎಂಬುದರಿಂದ ಹ್ರಸ್ವ-ಯದ್ಯಪಿ ಇಲ್ಲಿ ಹ್ರಸ್ವವೇ ಇದೆ. ಆದರೂ **'ಪರ್ಜನ್ಯವಲ್ಲಕ್ಷಣಂ ಪ್ರವರ್ತತೇ'** (ಪರಿಭಾ. ೧೨೦) ಎಂದು ಇರುವುದರಿಂದ ಹ್ರಸ್ವ ಬರುತ್ತೆ. **'ಹಲಾದಿಃ ಶೇಷಃ'** (ಪಾ. ಸೂ. ೭-೪-೬೦) ಎಂಬುದರಿಂದ ಮೊದಲನೇ ದ್ರುಹ್‌ನ ರ್‌ಹ್‌ಗಳಿಗೆ ಲೋಪ. ದುದ್ರುಹ್+ಅ ಲಘೂಪಧಗುಣ. **'ಯದ್ವೃತ್ತಾನ್ನಿತ್ಯಮ್'** (ಪಾ. ಸೂ. ೮-೧-೬೬) ಯಾವ ಪದದಲ್ಲಿ ಯಚ್ಛಬ್ದವಿದೆಯೋ ಅದರ ಮುಂದೆ ಇರುವ ತಿಙಂತವು ಅನುದಾತ್ತವಾಗುವುದಿಲ್ಲ. ಇಲ್ಲಿ **'ಪೂಜನಾತ್ಪೂಜಿತಂ'** (ಪಾ. ೮-೧-೬೭) ಎಂಬಲ್ಲಿ ಪುನಃ ಪೂಜಿತಗ್ರಹಣದಿಂದ **'ಅತ್ರ ಪ್ರಕರಣೇ ಪಂಚಮೀ ನಿರ್ದೇಶೇಪಿ ನಾನಂತರ್ಯಮಿಷ್ಯತೇ'** ಎಂದು ಜ್ಞಾಪಿತವಾಗಿದೆ. ಆದ್ದರಿಂದ ವ್ಯವಧಾನವಿದ್ದರೂ ಇದರಿಂದ ಅನುದಾತ್ತಕ್ಕೆ ನಿಷೇಧ ಬರುವುದು. ಇದೇರೀತಿ **'ಶೇಪೇ'** ಎಂಬಲ್ಲಿಯೂ ಅನುದಾತ್ತಕ್ಕೆ ನಿಷೇಧ.

**ಶೇಪೇ**—ಶಪ ಆಕ್ರೋಶೇ ಧಾತು, ಲಿಟ್, ಇದು ಪರಸ್ಮೈಪದಿಧಾತುವಾದರೂ ವ್ಯತ್ಯಯದಿಂದ ಆತ್ಮನೇಪದಪ್ರತ್ಯಯ ಬರುವುದು. ಉತ್ತಮಪುರುಷ ಏಕವಚನ, ಇಟ್-ಶಪ್+ಇ. **'ಟಿತ ಆತ್ಮನೇ'**-(ಪಾ. ೩-೪-೭೯) ಇಗೆ ಏ ದ್ವಿತ್ವ, **'ಅತಏಕಹಲ್ಮಧ್ಯೇಽನಾದೇಶಾದೇರ್ಲಿಟಿ'** (ಪಾ. ಸೂ. ೬-೪-೧೨೦) ಕಿತ್ತಾದ ಲಿಟ್ ಪರದಲ್ಲಿರುವಾಗ ಲಿಣ್ನಿಮಿತ್ತಕವೈರೂಪ್ಯಸಂಪಾದಕಾದೇಶಾದ್ಯವಕವಲ್ಲದ ಅಂಗಸಂಬಂಧಿಯಾದ ಅಸಂಯುಕ್ತಹಲ್ಮಧ್ಯದಲ್ಲಿರುವ ಹ್ರಸ್ವಾಕಾರಕ್ಕೆ ಏತ್ವವೂ ಅಭ್ಯಾಸಕ್ಕೆ ಲೋಪವೂ ಬರುವುದು, ಎಂದು ಏತ್ವಾಭ್ಯಾಸಲೋಪಗಳು ಬಂದರೆ ಶೇಪೇ ಎಂದಾಗುತ್ತೆ. ॥ ೨೨ ॥

॥ ಸಂಹಿತಾಪಾಠಃ ॥

ಆಪೋ ಅದ್ಯಾನ್ವಚಾರಿಷಂ ರಸೇನ ಸಮಗಸ್ಮಹಿ ।
ಪಯಸ್ವಾನಗ್ನ ಆ ಗಹಿ ತಂ ಮಾ ಸಂ ಸೃಜ ವರ್ಚಸಾ ॥ ೨೩ ॥

॥ ಪದಪಾಠಃ ॥

ಆಪಃ । ಅದ್ಯ । ಅನು । ಅಚಾರಿಷಂ । ರಸೇನ । ಸಂ । ಅಗಸ್ಮಹಿ ।

ಪಯಸ್ವಾನ್ । ಅಗ್ನೇ । ಆ । ಗಹಿ । ತಂ । ಮಾ । ಸಂ । ಸೃಜ । ವರ್ಚಸಾ ॥ ೨೩ ॥

॥ ಸಾಯಣಭಾಷ್ಯಂ ॥

ಪಶಾವಾಹವನೀಯೋಪಸ್ಥಾನ ಆಪೋ ಅದ್ಯಾನ್ವಚಾರಿಷಮಿತ್ಯೇಷಾ । ಮನೋತಾಯೈ ಸಂಪ್ರೇಷಿತ ಇತಿ ಖಂಡೇ ಸೂತ್ರಿತಂ । ಏತ್ಯೋಪತಿಷ್ಠಂತೆ ಆಪೋ ಅದ್ಯಾನ್ವಚಾರಿಷಂ । ಅ. ೩-೬ । ಇತಿ ॥

ಅದ್ಯಾಸ್ಮಿನ್ದಿನೇಽವಭೃಥಾರ್ಥಮಾಪೋಽನ್ವಚಾರಿಷಂ । ಜಲಾನ್ಯನುಪ್ರವಿಷ್ಟೋಽಸ್ಮಿ । ಪ್ರವಿಶ್ಯ ಚ ರಸೇನ ಜಲಸಾರೇಣ ಸಮಗಸ್ಮಹಿ । ಸಂಗತಾಃ ಸ್ಮಃ । ಹೇ ಅಗ್ನೇ ಪಯಸ್ವಾನ್ ಜಲೇ ವರ್ತಮಾನತ್ವೇನ ಪಯೋಯುಕ್ತಸ್ತ್ವಮಾ ಗಹಿ । ಅಸ್ಮಿನ್ಕರ್ಮಣ್ಯಾಗಚ್ಛ । ತಂ ಮಾ ತಾದೃಶಂ ಸ್ನಾತಂ ಮಾಂ ವರ್ಚಸಾ ತೇಜಸಾ ಸಂ ಸೃಜ । ಸಂಯೋಜಯ ॥ ಆಪಃ । ಕರ್ಮಣಿ ಶಸಿ ಪ್ರಾಪ್ತೇ ವ್ಯತ್ಯಯೇನ ಜಸ್ । ಅಚಾರಿಷಂ । ಚರ ಗತ್ಯರ್ಥಃ । ಲುಙಿ ಚ್ಲೇಃ ಸಿಚ್ । ಆರ್ಧಧಾತುಕಸ್ಯೇಡ್ವಲಾದೇಃ । ಪಾ. ೭-೨-೩೫ । ಇತೀಟ್ । ನೇಟಿ । ಪಾ. ೭-೨-೪ । ಇತಿ ವೃದ್ಧಿಪ್ರತಿಷೇಧೇಪ್ರಾಪ್ತೇ ತದಪವಾದತಯಾತೋ ಲ್ರಾಂತಸ್ಯ । ಪಾ. ೭-೨-೨ । ಇತ್ಯುಪಧಾಯಾ ವೃದ್ಧಿಃ । ಅಗಸ್ಮಹಿ । ಸಮೋ ಗಮ್ಯೃಚ್ಛೀತ್ಯಾತ್ಮನೇಪದಂ । ಪಾ. ೧-೩-೨೯ । ಚ್ಲೇಃ ಸಿಚ್ । ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಗಭಾವಶ್ಛಾಂದಸಃ । ಏಕಾಚ ಉಪದೇಶೇಽನುದಾತ್ತಾದಿತೀಟ್ಪ್ರತಿಷೇಧಃ । ವಾ ಗಮಃ । ಪಾ. ೧-೨-೧೩ । ಇತಿ ಸಿಚಃ ಕಿತ್ತ್ವಾದನುದಾತ್ತೋಪದೇಶೇತ್ಯಾದಿದಾನುನಾಸಿಕಲೋಪಃ । ಗಹಿ । ಲೋಟಿ ಗಮೇಃ ಸಿಪೋ ಹಿಃ । ಅಪಿತ್ತ್ವೇನ ಙಿತ್ತ್ವಾದನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಅತೋ ಹೇರಿತಿ ಲುಗ್ನ ಭವತಿ । ಅಸಿದ್ಧವದತ್ರಾಭಾದಿತಿ ಮಲೋಪಸ್ಯಾಸಿದ್ಧತ್ವಾತ್ ॥

॥ ಪ್ರತಿಪದಾರ್ಥ ॥

**ಅದ್ಯ**—ಈಗ (ಈ ದಿನದಲ್ಲಿ) । **ಆಪಃ**—ಉದಕಗಳನ್ನು (ನೀರನ್ನು) । **ಅನ್ವಚಾರಿಷಂ**—(ಅವಭೃಥ ಸ್ನಾನಾರ್ಥವಾಗಿ) ಪ್ರವೇಶಿಸಿರುವೆನು । (ಬಳಿಕ) । **ರಸೇನ**—ಜಲದ ಸಾರದಿಂದ । **ಸಮಗಸ್ಮಹಿ**—ಕೂಡಿರುವೆವು । (ಹೇ) **ಅಗ್ನೇ**—ಎಲೈ ಅಗ್ನಿಯೇ । **ಪಯಸ್ವಾನ್**—ನೀರಿನಿಂದ ಯುಕ್ತನಾದ ಎಂದರೆ ನೀರಿನಲ್ಲಿ ಇರುವ ನೀನು । **ಆ ಗಹಿ**—(ಈ ಸ್ನಾನಕರ್ಮದಲ್ಲಿ) ಬಾ । (ಮತ್ತು) **ತಂ ಮಾ**—(ಸ್ನಾನಮಾಡಿದ) ನನ್ನನ್ನು । **ವರ್ಚಸಾ**—ತೇಜಸ್ಸಿನಿಂದ । **ಸಂಸೃಜ**—ಸೇರಿಸು.

॥ ಭಾವಾರ್ಥ ॥

(ಅವಭೃಥ) ಸ್ನಾನಾರ್ಥವಾಗಿ ಈಗ ನೀರನ್ನು ಪ್ರವೇಶಿಸಿರುವೆನು. ನೀರಿನಲ್ಲಿರುವ ಸಾರವೆಲ್ಲವೂ ನಮ್ಮೊಡನೆ ಸೇರಲಿ. ಎಲೈ ಅಗ್ನಿಯೇ ನೀನು ನೀರಿನಲ್ಲಿ ಇರುವವನಾದುದರಿಂದ ಈ ಸ್ನಾನಕರ್ಮಕ್ಕೆ ಬಂದು ಸ್ನಾನಮಾಡಿದ ನನ್ನನ್ನು ತೇಜಸ್ವಿಯನ್ನಾಗಿ ಮಾಡು.

## English Translation.

I have this day entered into the waters; we have mingled with their essence; O Agni, existing in the waters, approach and fill me with vigour.

॥ ವಿಶೇಷವಿಷಯಗಳು ॥

ಪಶುಯಾಗದಲ್ಲಿ ಆಹವನೀಯಾಗ್ನಿಯ ಉಪಸ್ಥಾನಕಾಲದಲ್ಲಿ **ಆಪೋ ಅದ್ಯಾನ್ವಚಾರಿಷಂ** ಎಂಬ ಋಕ್ಕನ್ನು ಪಠಿಸುವರು. ಆಶ್ವಲಾಯನಶ್ರೌತಸೂತ್ರದ **ಮನೋತಾಯೈ ಸಂಪ್ರೇಷಿತ** ಎಂಬ ಖಂಡದಲ್ಲಿ **ಏತ್ಯೋಪತಿಷ್ಠಂತ ಆಪೋ ಅದ್ಯಾನ್ವಚಾರಿಷಂ** ಎಂಬ ಸೂತ್ರದಲ್ಲಿ ಈ ವಿಷಯವು ಹೇಳಲ್ಪಟ್ಟಿರುವುದು (ಆ. ೩-೬).

**ಅಪಃ--ದ್ವಿತೀಯಾರ್ಥೇ ಪ್ರಥಮಾ** ಎಂದು ಸ್ಕಂದಸ್ವಾಮಿಯು ಹೇಳಿರುವರು. ಎಂದರೆ ಅಪಃ ಎಂಬ ಪ್ರಥಮಾವಿಭಕ್ತಿಯ ಶಬ್ದಕ್ಕೆ ಅಪಃ ಎಂಬ ದ್ವಿತೀಯಾವಿಭಕ್ತಿಯ ಅರ್ಥವನ್ನು ಹೇಳಬೇಕು.

**ರಸೇನ—ಜಲಸಾರೇಣ**, ಜಲಸಾರದಿಂದ, essence of water. ಎಂದರೆ ಶುದ್ಧವಾದ ಜಲವು ನನ್ನ ಶರೀರದ ಅಂತರ್ಬಾಹ್ಯದೋಷಗಳನ್ನು (ಕೊಳೆಯನ್ನು) ಪರಿಹರಿಸಲಿ ಎಂದಭಿಪ್ರಾಯವು.

**ಪಯಸ್ವಾನ್—ಪಯಸಾ ಜಲೇನ ಯುಕ್ತಃ ಅಥವಾ ಪಯಸಿ ತಿಷ್ಠತೀತಿ ಪಯಸ್ವಾನ್.** ನೀರಿನಲ್ಲಿ ಇರುವನು. ಯಜುರ್ವೇದದಲ್ಲಿ **'ಸೋಽಪಃ ಪ್ರಾವಿಶತ್'** ಮೊದಲಾದ ವಾಕ್ಯಗಳು, ಅಗ್ನಿಯು ನೀರಿನಲ್ಲಿ ಅಡಗಿಕೊಂಡಿದ್ದನೆಂದು ಹೇಳುವವು. ಆದುದರಿಂದ ಅಗ್ನಿಯು ನೀರಿನಲ್ಲಿ ಇರುವನು ಎಂದು ಅನೇಕ ಸಂದರ್ಭಗಳಲ್ಲಿ ಹೇಳಿರುವುದು. ಈ ಋಕ್ಕಿನ ಉತ್ತರಾರ್ಧವು ಅಗ್ನಿದೇವತಾಕವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಅಪಃ—**ಕರ್ಮಾರ್ಥದಲ್ಲಿ ಶಸ್ ಪ್ರತ್ಯಯ ಬಂದು ಅಪಃ ಎಂದು ನ್ಯಾಯವಾಗಿರುವುದು. ಆದರೂ ಇಲ್ಲಿ **'ವ್ಯತ್ಯಯೋ ಬಹುಲಮ್'** (ಪಾ. ಸೂ. ೩-೧-೮೫) ಎಂಬುದರಿಂದ ಕರ್ಮಾರ್ಥದಲ್ಲಿ ಶಸ್‌ಗೆ ಬದಲಾಗಿ ಜಸ್ ವಿಭಕ್ತಿಯೇ ಬರುತ್ತೆ.

**ಅಚಾರಿಷಂ—'ಚರ ಗತೌ'** ಧಾತು, **'ಲುಙ್ ಚ್ಲೇಃ ಸಿಚ್'** ಎಂಬುದರಿಂದ ಸಿಚ್, ಮಿಪ್-ಅಮಾದೇಶ-ಅಡಾಗಮ ಅಚರ್+ಸ್+ಅಮ್, **'ಆರ್ಧಧಾತುಕಸ್ಯೇಡ್ವಲಾದೇಃ'** (ಪಾ. ಸೂ. ೭-೨-೩೫) ಯಕಾರವನ್ನುಳಿದ ವ್ಯಂಜನಾದಿಯಾದ ಆರ್ಧಧಾತುಕಕ್ಕೆ ಇಟ್ ಆಗಮ ಬರುತ್ತೆ. ಇಟ್ ಬಂದರೆ ಅಚರ್-ಇಸ್+ಅಮ್, **'ಸಿಚಿವೃದ್ಧಿಃ ಪರಸ್ಮೈಪದೇಷು** (ಪಾ. ಸೂ. ೭-೨-೧) ವೃದ್ಧಿಪ್ರಾಪ್ತವಾದರೆ **'ನೇಟಿ'** (ಪಾ. ಸೂ. ೭-೨-೪) ಇಡಾದಿಯಾದ ಸಿಚ್ ಪರದಲ್ಲಿರುವಾಗ ವೃದ್ಧಿಬರುವುದಿಲ್ಲ ಎಂದು ಯದ್ಯಪಿ ವೃದ್ಧಿನಿಷೇಧ ಪ್ರಾಪ್ತವಾಗುತ್ತೆ. ಆದರೂ ಇದಕ್ಕೆ ಅಪವಾದವಾದ **'ಅತೋಲ್ರಾಂತಸ್ಯ'** (ಪಾ. ಸೂ. ೭-೨-೨) ಪರಸ್ಮೈಪದಪರಕ ಸಿಚ್ ಪರದಲ್ಲಿರುವಾಗ ಹ್ರಸ್ವಾಕಾರದ ಪರದಲ್ಲಿರುವ ರೇಫ ಅಥವಾ ಲಕಾರಗಳನ್ನು ಕೊನೆಯಲ್ಲಿ ಹೊಂದಿರುವ ಅಂಗದ ಹ್ರಸ್ವಾಕಾರಕ್ಕೆ ವೃದ್ಧಿ ಬರುತ್ತೆ ಎಂದು ವೃದ್ಧಿಬರುತ್ತೆ, ಷತ್ವ. ಅಚಾರಿಷಂ ಆಗುತ್ತೆ.

**ಅಗಸ್ಮಹಿ**—'**ಸಮೋಗಮ್ಯೃಚ್ಛಿಭ್ಯಾಂ**' (ಪಾ; ಸೂ. ೧-೩-೨೯) ಸಮ್ ಉಪಸರ್ಗದ ಮುಂದೆ ಇರುವ ಅಕರ್ಮಕಗಳಾದ ಗಮ್-ಋ ಧಾತುಗಳ ಮುಂದೆ ಇರುವ ಲಕಾರಸ್ಥಾನದಲ್ಲಿ ಆತ್ಮನೇಪದ ಬರುವುದು ಎಂದು ಆತ್ಮನೇಪದಪ್ರತ್ಯಯ ಬರುತ್ತೆ. ಲುಙ್ ಉ. ಪು. ಬ. ಮಹಿಙ್-ಚ್ಲಿಗೆ ಸಿಚ್-ಗಮ್+ಸ್+ಮಹಿ, ಅಡಾಗಮ. '**ಮಂತ್ರೇಘಸಹ್ವರಣ**' (ಪಾ. ಸೂ. ೨-೪-೮೩) ಎಂಬುದರಿಂದ ಚ್ಲಿಗೆ ಲುಕ್ ಪ್ರಾಪ್ತವಾಗುತ್ತೆ. ಆದರೂ ಇದು ಛಂದಸ್ಸಾದ್ದರಿಂದ '**ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ**' ಎಂದು ಚ್ಲಿಗೆ ಲುಕ್ ಬರುವುದಿಲ್ಲ '**ಏಕಾಚಉಪದೇಶೇಽನುದಾತ್ತಾತ್**' (ಪಾ. ಸೂ. ೭-೨-೧೦) ಉಪದೇಶದಲ್ಲಿ ಏಕಾಚ್ಕವಾಗಿಯೂ ಉಪದೇಶದಲ್ಲಿ ಅನುದಾತ್ತವಾಗಿಯೂ ಇರುವ ಧಾತುವಿನ ಮುಂದೆ ಬರುವ ವಲಾದ್ಯಾರ್ಧಧಾತುಕಕ್ಕೆ ಇಟ್ ಆಗುಮ ಬರುವುದಿಲ್ಲ ಎಂದು ಇಟ್ಟಿಗೆ ನಿಷೇಧ. '**ವಾ ಗಮಃ**' (ಪಾ. ಸೂ. ೧-೨-೧೩) ಗಮ್ ಧಾತುವಿನ ಮುಂದಿರುವ ಝಲಾದಿಯಾದ ಲಿಙ್‌ಸಿಚ್‌ಗಳು ವಿಕಲ್ಪದಿಂದ ಕಿತ್ ಆಗುವುವು ಎಂದು ಸಿಚ್ ಕಿತ್. ಆದ್ದರಿಂದ '**ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋ ಝಲಿ ಕ್ಙಿತಿ**' (ಪಾ. ಸೂ. ೬-೪-೩೭) ಎಂದು ಅನುನಾಸಿಕ, ಮ್‌ಗೆ ಲೋಪ, ಅಡಾಗಮ, ಅಗಸ್ಮಹಿ ಎಂದು ಆಗುತ್ತೆ. ॥ ೨೩ ॥

॥ ಸಂಹಿತಾಪಾಠಃ ॥

ಸಂ ಮಾಗ್ನೇ ವರ್ಚಸಾ ಸೃಜ ಸಂ ಪ್ರಜಯಾ ಸಮಾಯುಷಾ ।
ವಿದ್ಯುರ್ಮೇ ಅಸ್ಯ ದೇವಾ ಇಂದ್ರೋ ವಿದ್ಯಾತ್ಸಹ ಋಷಿಭಿಃ ॥೨೪॥

॥ ಪದಪಾಠಃ ॥

ಸಂ । ಮಾ । ಅಗ್ನೇ । ವರ್ಚಸಾ । ಸೃಜ । ಸಂ । ಪ್ರಽಜಯಾ । ಸಂ । ಆಯುಷಾ ।
ವಿದ್ಯುಃ । ಮೇ । ಅಸ್ಯ । ದೇವಾಃ । ಇಂದ್ರಃ । ವಿದ್ಯಾತ್ । ಸಹ । ಋಷಿಽಭಿಃ ॥ ೨೪ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ವರ್ಚಃ ಪ್ರಜಾಯುರ್ಭಿರ್ಮಾಂ ಸಂಯೋಜಯ । ದೇವಾಃ ಸೋಮಪಾತಾರೋಽಸ್ಯ ಮೇ ಯಜಮಾನಸ್ಯ ವಿದ್ಯುಃ । ಅನುಷ್ಠಾನಂ ಜಾನೀಯುಃ । ಕಿಂಚ ಇಂದ್ರಶ್ಚ ಋಷಿಗಣೈಃ ಸಹ ಮಮಾನುಷ್ಠಾನಂ ವಿದ್ಯಾತ್ । ಜಾನೀಯಾತ್ ॥ ವಿದ್ಯುಃ । ವಿದ ಜ್ಞಾನೇ । ಲಿಙಿ ಝೇರ್ಜುಸ್ । ಪಾ.**

**೩-೪-೧೦೮ । ಯಾಸುಟ್ । ಲಿಙಃ ಸಲೋಪಃ । ಪಾ. ೭-೨-೭೯ । ಇತಿ ಸಕಾರಲೋಪಃ । ಉಸ್ಯಪದಾಂತಾತ್ । ಪಾ. ೬-೧-೯೬ । ಇತಿ ಪರರೂಪತ್ವಂ । ಯಾಸುಟ ಉದಾತ್ತತ್ವೇನೈಕಾದೇಶ ಉಕಾರೋಽಪ್ಯುದಾತ್ತಃ ॥ ಅಸ್ಯ । ಇದಮೋಽನ್ವಾದೇಶ ಇತ್ಯಶನುದಾತ್ತಃ । ವಿಭಕ್ತಿರಪಿ ಸುಪ್ತ್ವೇನಾನುದಾತ್ತಾ । ಸಹ ಋಷಿಭಿರಿತ್ಯತ್ರ ಋತ್ಯಕಃ । ಪಾ. ೬-೧-೧೨೮ । ಇತಿ ಪ್ರಕೃತಿಭಾವಃ ॥ ೧೨ ॥ ॥ ೫ ॥**

॥ ಪ್ರತಿಪದಾರ್ಥ ॥

**ಹೇ ಅಗ್ನೇ**—ಎಲೈ ಅಗ್ನಿಯೇ । **ಮಾ**—ನನ್ನನ್ನು । **ವರ್ಚಸಾ**—ವರ್ಚಸ್ಸಿನಿಂದಲೂ (ಶಕ್ತಿಯಿಂದಲೂ) । **ಪ್ರಜಯಾ**—ಪುತ್ರಸಂತಾನಾದಿಗಳಿಂದಲೂ । **ಆಯುಷಾ**—ಆಯುಸ್ಸಿನಿಂದಲೂ । **ಸಂ ಸೃಜ**—ಸೇರಿಸು । **ದೇವಾಃ**—(ಸೋಮಪಾನಮಾಡಿದ) ದೇವತೆಗಳು । **ಅಸ್ಯ ಮೇ**—ನನ್ನ ಯಜ್ಞಾನುಷ್ಠಾನವನ್ನು (ತಿಳಿಯಲಿ) । **ಇಂದ್ರಃ**—ಇಂದ್ರನು । **ಋಷಿಭಿಃ ಸಹ**—ಋಷಿಗಳಿಂದ ಸಹಿತನಾಗಿ । **ವಿದ್ಯಾತ್**—ನಾನು ಮಾಡಿದ ಯಜ್ಞಾನುಷ್ಠಾನವನ್ನು ತಿಳಿಯಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನನಗೆ ವರ್ಚಸ್ಸನ್ನೂ, ಪುತ್ರಸಂತಾನವನ್ನೂ, ದೀರ್ಘಾಯುಸ್ಸನ್ನೂ ಕರುಣಿಸು. ನಾನು ಮಾಡಿದ ಯಜ್ಞವನ್ನು ದೇವತೆಗಳೂ ಋಷಿಗಳಿಂದ ಸಹಿತನಾದ ಇಂದ್ರನೂ ತಿಳಿಯಲಿ.

## English Translation.

O Agni, confer upon me vigour, progeny and long life ; the gods may know of this my sacrifice and Indra, with the Rishis may know it.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧ ಅರ್ಥವು ಸುಲಭವಾಗಿ ತಿಳಿಯುವಂತೆ ಇರುವುದು. ವರ್ಚಸ್ಸು, ಪುತ್ರಸಂತಾನ, ದೀರ್ಘಾಯುಸ್ಸು ಇವುಗಳನ್ನು ಕೊಡುವಂತೆ ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಉತ್ತರಾರ್ಧದ ಅರ್ಥವು ಅಷ್ಟು ಸ್ಪಷ್ಟವಾಗಿಲ್ಲ, **ವಿದ್ಯುರ್ಮೇ ಅಸ್ಯ** ಎಂಬ ಶಬ್ದಗಳಿಗೆ "ನಾನು ಮಾಡುವ ಯಜ್ಞಾನುಷ್ಠಾನವನ್ನು" ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು. **ಇಂದ್ರೋ ವಿದ್ಯಾತ್ಸಹ ಋಷಿಭಿಃ** ಎಂಬ ವಾಕ್ಯದಲ್ಲಿ ಋಷಿಭಿಃ ಎಂಬ ಶಬ್ದವು ಏತಕ್ಕಾಗಿ ಉಪಯೋಗಿಸಲ್ಪಟ್ಟಿರುವುದೆಂಬುದೂ ಅಸ್ಪಷ್ಟವಾಗಿಯೇ ಇದೆ. ದೇವತೆಗಳನ್ನುದ್ದೇಶಿಸಿ ಮಾಡುವ ಈ ಯಜ್ಞವು ಅಥವಾ ಸ್ತೋತ್ರವು ಇಂದ್ರನಿಗೂ, ದೇವತೆಗಳಿಗೂ, ಇತರ ಋಷಿಗಳಿಗೂ ತಿಳಿಯಲಿ ಎಂದು ಋಷಿಯ ಆಶಯವಿದ್ದಂತೆ ತೋರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ವಿದ್ಯುಃ**—ವಿದ ಜ್ಞಾನೇ ಲಿಙ್ ಪ್ರ-ಪು-ಬ-ಝಿ '**ಝೋರ್ಜುಸ್**' (ಪಾ. ಸೂ. ೬-೧-೯೬) ಲಿಙ್‌ಸ್ಥಾನದಲ್ಲಿ ಬಂದ ಝಿಗೆ ಜುಸ್. ಬರುವುದು ಎಂದು ಜುಸ್ ಯಾಸುಟ್ ಆಗಮ, ವಿದ್+ಯಾಸ್+ಉಸ್, ಸಲೋಪ,

ವಿದ್ಯಾ+ಉಸ್ '**ಉಸ್ಯಪದಾಂತಾತ್**' (ಪಾ. ಸೂ. ೬-೧೬೬) ಪದದ ಕಡೆಯಲ್ಲಿಲ್ಲದ ಅವರ್ಣದ ಮುಂದೆ ಉಸ್ ಇದ್ದರೆ ಪರರೂಪವು ಏಕಾದೇಶವಾಗಿ ಬರುವುದು, ಎಂದು ಪರರೂಪ ಬಂದರೆ, ವಿದ್ಯುಸ್. ರುತ್ವವಿಸರ್ಗಗಳು.

**ಸಹ ಋಷಿಭಿಃ**—'**ಋತ್ಯಕಃ**' (ಪಾ. ಸೂ. ೬-೧-೧೨೮) ಹ್ರಸ್ವ ಋ ಪರದಲ್ಲಿದ್ದರೆ ಪದದ ಕೊನೆಯಲ್ಲಿರುವ ಅ-ಇ-ಉ-ಋಗಳು ಹ್ರಸ್ವವನ್ನು ಹೊಂದುವುವು, ಪ್ರಕೃತಿಭಾವವನ್ನೂ ಹೊಂದುವುವು ಎಂದು ಹ್ರಸ್ವ ಬಂದು ಪ್ರಕೃತಿಭಾವ ಬರುತ್ತೆ. ಆದ್ದರಿಂದ ಗುಣಬರುವುದಿಲ್ಲ. || ೨೪ ||

# ಇಪ್ಪತ್ತನಾಲ್ಕನೆಯ ಸೂಕ್ತವು

**ಪ್ರಥಮಮಂಡಲಸ್ಯ ಷಷ್ಠೇನುವಾಕೇ ಸಪ್ತ ಸೂಕ್ತಾನಿ । ತತ್ರ ಕಸ್ಯ ನೂನಮಿತಿ ಪಂಚದಶರ್ಚಂ ಪ್ರಥಮಂ ಸೂಕ್ತಂ । ಅಜೀಗರ್ತಪುತ್ರಸ್ಯ ಶುನಃಶೇಪಸ್ಯಾರ್ಷಂ । ತ್ರೈಷ್ಟುಭಂ । ಅಭಿ ತ್ವಾ ದೇವೇತಿ ತೃಚೋ ಗಾಯತ್ರಃ । ಆದ್ಯಾಯಾ ಅನಿರುಕ್ತತ್ವಾತ್ಪ್ರಜಾಪತಿರ್ದೇವತಾ । ಅಗ್ನೇರ್ವಯಮಿತ್ಯಸ್ಯಾಗ್ನಿಃ । ಅಭಿ ತ್ವಾ ದೇವೇತ್ಯಸ್ಯ ತೃಚಸ್ಯ ಸವಿತಾ । ಭಗಭಕ್ತಸ್ಯೇತ್ಯೇಷಾ ಭಗದೇವತಾಕಾ ವಾ । ಶೇಷಾ ವಾರುಣ್ಯಃ । ತಥಾ ಚಾನುಕ್ರಾಂತಂ । ಕಸ್ಯ ಪಂಚೋನಾಜೀಗರ್ತಿಃ ಶುನಃಶೇಪಃ ಸ ಕೃತ್ರಿಮೋ ವೈಶ್ವಾಮಿತ್ರೋ ದೇವರಾತೋ ವಾರುಣಂ ತು ತ್ರೈಷ್ಟುಭಮಾದೌ ಕಾಯ್ಯಾಗ್ನೇಯ್ಯೌ ಸಾವಿತ್ರಸ್ತೃಚೋ ಗಾಯತ್ರೋಽಸ್ಯಾಂತ್ಯಾ ಭಾಗೀ ಚೇತಿ ॥ ರಾಜಸೂಯೇಽಭಿಷೇಚನೀಯೇಽಹನಿ ಮರುತ್ವತೀಯೇ ಪರಿಸಮಾಪ್ತೇ ಸತ್ಯೇತದಾದಿಕಂ ಸೂಕ್ತಸಪ್ತಕಮಭಿಷಿಕ್ತಸ್ಯ ಪುತ್ರಾದಿಭಿಃ ಪರಿವೃತಸ್ಯ ರಾಜ್ಞಃ ಪುರಸ್ತಾ-ದ್ಧೋತ್ರಾಖ್ಯಾತವ್ಯಂ । ತಥಾ ಚ ಸೂತ್ರೇಽಭಿಹಿತಂ । ಸಂಸ್ಥಿತೇ ಮರುತ್ವತೀಯೇ ದಕ್ಷಿಣತ ಆಹವನೀ-ಯಸ್ಯ ಹಿರಣ್ಯಕಶಿಪಾವಾಸೀನೋಽಭಿಷಿಕ್ತಾಯ ಪುತ್ರಾಮಾತ್ಯಪರಿವೃತಾಯ ರಾಜ್ಞೇ ಶೌನಃಶೇಪಮಾ-ಚಕ್ಷೀತ । ಆ. ೯-೩ । ಇತಿ । ಬ್ರಾಹ್ಮಣಂ ಚ ಭವತಿ । ತದೇತತ್ಪರಋಕ್ಶತಗಾಥಂ ಶೌನಃಶೇಪಮಾಖ್ಯಾನಂ ತದ್ಧೋತಾ ರಾಜ್ಞೇಽಭಿಷಿಕ್ತಾಯಾಚಷ್ಟೇ ಹಿರಣ್ಯಕಶಿಪಾವಾಸೀನ ಆಚಷ್ಟೇ ಹಿರಣ್ಯಕಶಿಪಾವಾಸೀನಃ ಪ್ರತಿಗೃಣಾತಿ । ಐ. ಬ್ರಾ. ೭-೧೮ । ಇತಿ ॥**

॥ ಅನುವಾದವು ॥

ಈ ಸೂಕ್ತದಿಂದ ಪ್ರಥಮಮಂಡಲದ ಆರನೆಯ ಅನುವಾಕವು ಪ್ರಾರಂಭವಾಗುವುದು. ಇದರಲ್ಲಿ ಏಳು ಸೂಕ್ತಗಳಿರುವವು. **ಕಸ್ಯ ನೂನಂ** ಎಂಬ ಮೊದಲನೆಯ ಸೂಕ್ತದಲ್ಲಿ ಹದಿನೈದು ಋಕ್ಕುಗಳಿರುವವು. ಈ ಅನುವಾಕದಲ್ಲಿರುವ ಏಳು ಸೂಕ್ತಗಳಿಗೂ ಅಜೀಗರ್ತಪುತ್ರನಾದ ಶುನಃಶೇಪನೆಂಬುವನು ಋಷಿಯು. **ಅಭಿ ತ್ವಾ ದೇವ ಸವಿತಃ** ಎಂದು ಪ್ರಾರಂಭವಾಗುವ ಮೂರು ಋಕ್ಕುಗಳು ಗಾಯತ್ರೀ ಛಂದಸ್ಸಿನವು. ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಮೊದಲನೆಯ ಋಕ್ಕಿನಲ್ಲಿ ಯಾವ ದೇವತೆಯನ್ನೂ ನಿರ್ದಿಷ್ಟವಾಗಿ ಪ್ರತಿಪಾದನೆಮಾಡಿಲ್ಲವಾದುದರಿಂದ

ಇದಕ್ಕೆ ಪ್ರಜಾಪತಿಯೇ ದೇವತೆಯು; **ಅಗ್ನೇರ್ವಯಂ** ಎಂಬ ಋಕ್ಕಿಗೆ ಅಗ್ನಿಯು ದೇವತೆಯು; **ಅಭಿತ್ವಾ** ಎಂಬ ಮೂರು ಋಕ್ಕುಗಳಿಗೆ ಸವಿತೃವು ದೇವತೆಯು. ಆದರೆ ಈ ಮೂರು ಋಕ್ಕುಗಳಲ್ಲಿ ಮೂರನೆಯ ಋಕ್ಕಾದ **ಭಗಭಕ್ತಸ್ಯ** ಎಂಬ ಋಕ್ಕಿಗೆ ಸವಿತೃ ಅಥವಾ ಭಗನು ದೇವತೆಯು; ಉಳಿದ ಋಕ್ಕುಗಳಿಗೆಲ್ಲಾ ವರುಣನು ದೇವತೆಯು. ಈ ವಿಷಯವಾಗಿ ಅನುಕ್ರಮಣಿಕೆಯಲ್ಲಿ ಹೀಗೆ ಹೇಳಿರುವುದು—

> **ಕಸ್ಯ ಪಂಚೋನಾಜೀಗರ್ತಿಃ ಶುನಶೇಪಃ ಸ ಕೃತ್ರಿಮೋ ವೈಶ್ವಾಮಿತ್ರೋ ದೇವರಾತೋ ವಾರುಣಂ ತು ತ್ರೈಷ್ಟುಭಮಾದೌ ಕಾಯ್ಯಾಗ್ನೇಯ್ಯೌ ಸಾವಿತ್ರಸ್ತ್ರೃಚೋ ಗಾಯತ್ರೋಽಸ್ಯಾಂತ್ಯಾ ಭಾಗೀ ವೇತಿ ॥**

ಎಂದರೆ—**ಕಸ್ಯ ನೂನಂ** ಎಂಬ ಹದಿನೈದು ಋಕ್ಕುಗಳನ್ನೊಳಗೊಂಡಿರುವ ಸೂಕ್ತಕ್ಕೆ ಅಜೀಗರ್ತಪುತ್ರನಾದ ಶುನಃಶೇಪನು ಋಷಿಯು. ಈ ಶುನಶ್ಶೇಪನು ವಿಶ್ವಾಮಿತ್ರಋಷಿಯ ಕೃತ್ರಿಮಪುತ್ರನೆಂದು ದೇವರಾತ ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿರುವನು. ಈ ಸೂಕ್ತವು ವರುಣದೇವತಾಕವು ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳಿಂದ ಕೂಡಿರುವುದು. ಆದರೆ ಮೊದಲಿನ ಎರಡು ಋಕ್ಕುಗಳಿಗೆ ಕಃ ಅಥವಾ ಪ್ರಜಾಪತಿ ಮತ್ತು ಅಗ್ನಿಯು ದೇವತೆಗಳು. ಅದರ ಮುಂದಿನ ಎಂದರೆ ೩-೫ ಋಕ್ಕುಗಳಿಗೆ ಸವಿತೃವು ದೇವತೆಯು, ಐದನೇ ಋಕ್ಕಿಗೆ ಸವಿತೃ ಅಥವಾ ಭಗನು ದೇವತೆಯೆಂದೂ ಹೇಳಲ್ಪಟ್ಟಿರುವುದು. ಈ ಮೂರು ಋಕ್ಕುಗಳು ಗಾಯತ್ರೀ ಛಂದಸ್ಸಿನವು. ಉಳಿದ ಋಕ್ಕುಗಳಿಗೆಲ್ಲಾ ವರುಣನು ದೇವತೆಯು, ತ್ರಿಷ್ಟುಪ್ ಛಂದಸ್ಸು—ಎಂದು.

ಇದರ ವಿನಿಯೋಗವು—ರಾಜಸೂಯಯಾಗದಲ್ಲಿ ಅಭಿಷೇಚನ ಮಾಡುವ ದಿವಸ ಮರುತ್ವತೀಯ ಶಸ್ತ್ರಮಂತ್ರ ಪಠನಾನಂತರದಲ್ಲಿ **ಕಸ್ಯ ನೂನಂ** ಮೊದಲಾದ ಏಳು ಸೂಕ್ತಗಳನ್ನೂ (ಈ ಅನುವಾಕದ ಏಳು ಸೂಕ್ತಗಳು) ಅಭಿಷಿಕ್ತನಾದ ಮತ್ತು ಪುತ್ರಾದಿಬಂಧುಜನಗಳಿಂದ ಪರಿವೃತನಾದ ರಾಜನ ಅಭಿಮುಖವಾಗಿ ಹೋತೃವು ಪಠಿಸಬೇಕು. ಈ ವಿಷಯದಲ್ಲಿ ಆಶ್ವಲಾಯನಶ್ರೌತಸೂತ್ರದಲ್ಲಿ ಹೀಗೆ ಹೇಳಿರುವುದು—

> **ಸಂಸ್ಥಿತೇ ಮರುತ್ವತೀಯೇ ದಕ್ಷಿಣತ ಆಹವನೀಯಸ್ಯ ಹಿರಣ್ಯಕಶಿಪಾವಾಸೀನೋಽಭಿಷಿಕ್ತಾಯ ಪುತ್ರಾಮಾತ್ಯಪರಿವೃತಾಯ ರಾಜ್ಞೇ ಶೌನಶ್ಶೇಪಮಾಚಕ್ಷೀತ (ಆ. ೯-೩).**
>
> **ಬ್ರಾಹ್ಮಣಂ ಚ ಭವತಿ — ತದೇತತ್ಪರಋಕ್ಶತಗಾಥಂ ಶೌನಃಶೇಪಮಾಖ್ಯಾನಂ ತದ್ಧೋತಾ ರಾಜ್ಞೇಽಭಿಷಿಕ್ತಾಯಾಚಷ್ಟೇ ಹಿರಣ್ಯಕಶಿಪಾವಾಸೀನ ಆಚಷ್ಟೇ ಹಿರಣ್ಯಕಶಿಪಾವಾಸೀನ ಪ್ರತಿಗೃಣಾತಿ (ಐ. ಬ್ರಾ. ೭-೧೮).**

ಎಂದರೆ—

ರಾಜಸೂಯಯಾಗದಲ್ಲಿ ಮರುತ್ವತೀಯಶಸ್ತ್ರಮಂತ್ರಪಠನವಾದ ಬಳಿಕ ಅಭಿಷಿಕ್ತನಾದ ರಾಜನು ಪುತ್ರಾಮಾತ್ಯರೊಡಗೂಡಿ ಆಹವನೀಯಾಗ್ನಿಯ ದಕ್ಷಿಣಭಾಗದಲ್ಲಿ **ಚಿನ್ನದ ಚಾಪೆಯ** (ಆಸನದ) **ಮೇಲೆ** ಕುಳಿತುಕೊಳ್ಳಬೇಕು. ಆಗ ಹೋತೃವು ಶುನಃಶೇಪಸಂಬಂಧಿಯಾದ ಎಂದರೆ ಶುನಃಶೇಪನು ಋಷಿಯಾಗಿರುವ **ಕಸ್ಯಂ ನೂನಂ** ಎಂದ ಮೊದಲಾಗುವ ಏಳು ಸೂಕ್ತಗಳನ್ನು ಪಠಿಸಬೇಕು (ಆ. ೯-೩).

ಐತರೇಯ ಬ್ರಾಹ್ಮಣದಲ್ಲಿಯೂ ಈ ವಿಷಯದಲ್ಲಿ ಹೀಗೆ ಹೇಳಿರುವುದು—ಶುನಃಶೇಪಸಮಾಖ್ಯಾನವನ್ನೊಳಗೊಂಡ **ಕಸ್ಯ ನೂನಂ** ಎಂದು ಮೊದಲಾಗುವ ಏಳು ಸೂಕ್ತಗಳ ನೂರು ಋಕ್ಕುಗಳನ್ನು (೯೭ ಋಕ್ಕುಗಳು) ಹೋತೃವು, ಚಿನ್ನದ ಆಸನದ ಮೇಲೆ ಅಭಿಷಿಕ್ತನಾಗಿ ಕುಳಿತಿರುವ ರಾಜನನ್ನು ಪ್ರೋಕ್ಷಣೆಮಾಡುತ್ತಾ ಪಠಿಸಬೇಕು (ಐ. ಬ್ರಾ. ೭-೧೮).

## ಸೂಕ್ತ—೨೪

|| ಮಂಡಲ—೧ || ಅನುವಾಕ—೬ || ಸೂಕ್ತ—೨೪ ||

|| ಅಷ್ಟಕ—೧ || ಅಧ್ಯಾಯ—೨ || ವರ್ಗ, ೧೩-೧೫ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ||

|| ಋಷಿಃ—ಶುನಃಶೇಪ ಆಜೀಗರ್ತಿಃ || ಕೃತ್ರಿಮೋ ವೈಶ್ವಾಮಿತ್ರೋ ದೇವರಾತಃ ||

ದೇವತಾ—೧. ಕಃ (ಪ್ರಜಾಪತಿಃ) | ೨, ಅಗ್ನಿಃ | ೩-೪, ಸವಿತಾ | ೫. ಸವಿತಾ ಭಗೋ ವಾ | ೬-೧೫. ವರುಣಃ ||

ಛಂದಃ ೧-೨, ೬-೧೫ ತ್ರಿಷ್ಟುಪ್ | ೩-೫. ಗಾಯತ್ರೀ ||

|| ಸಂಹಿತಾಪಾಠಃ ||

ಕಸ್ಯ ನೂನಂ ಕತಮಸ್ಯಾಮೃತಾನಾಂ ಮನಾಮಹೇ ಚಾರು
ದೇವಸ್ಯ ನಾಮ |
ಕೋ ನೋ ಮಹ್ಯಾ ಅದಿತಯೇ ಪುನರ್ದಾತ್ಪಿತರಂ ಚ
ದೃಶೇಯಂ ಮಾತರಂ ಚ || ೧ ||

|| ಪದಪಾಠಃ ||

ಕಸ್ಯ | ನೂನಂ | ಕತಮಸ್ಯ | ಅಮೃತಾನಾಂ | ಮನಾಮಹೇ | ಚಾರು |
ದೇವಸ್ಯ | ನಾಮ |

ಕಃ । ನಃ । ಮಹ್ಯೈ । ಅದಿತಯೇ । ಪುನಃ । ದಾತ್ । ಪಿತರಂ । ಚ । ದೃಶೇಯಂ । ಮಾತರಂ । ಚ ॥ ೧ ॥

॥ ಸಾಯಣಭಾಷ್ಯಂ ॥

ಕಸ್ಯೇತ್ಯನಯರ್ಚಾ ಶುನಃಶೇಪೋ ಯೂಪೇ ಬದ್ಧಃ ಕಾಂದಿಶೀಕಃ ಕಂ ದೇವಮುಪಧಾವಾನೀತಿ ವಿಚಿಕಿತ್ಸತಿ । ತಥಾ ಚಾಮ್ನಾಯತೇ । ಹಂತಾಹಂ ದೇವತಾ ಉಪಧಾವಾಮೀತಿ ಸ ಪ್ರಜಾಪತಿಮೇವ ಪ್ರಥಮಂ ದೇವತಾನಾಮುಪಸಸಾರ । ಐ. ಬ್ರಾ. ೭-೧೬ । ಇತಿ । ವಯಂ ಶುನಃಶೇಪನಾಮಕಾ ಅಮೃತಾನಾಂ ದೇವತಾನಾಂ ಮಧ್ಯೇ ಕತಮಸ್ಯ ಕಿಂಜಾತೀಯಸ್ಯ ಕಸ್ಯ ದೇವಸ್ಯ ಚಾರು ಶೋಭನಂ ನಾಮ ಮನಾಮಹೇ । ಉಚ್ಚಾರಯಾಮಃ । ಕೋ ದೇವೋ ಮಾಂ ಮುಮೂರ್ಷುಂ ಪುನರಪಿ ಮಹ್ಯೈ ಮಹತ್ಯೈ ಅದಿತಯೇ ಪೃಥಿವ್ಯೈ ದಾತ್ । ದದ್ಯಾತ್ । ತೇನ ದಾನೇನಾಹಮಮೃತಃ ಸನ್ ಪಿತರಂ ಮಾತರಂ ಚ ದೃಶೇಯಂ । ಪಶ್ಯೇಯಂ । ಕೋ ಹ ವೈ ನಾಮ ಪ್ರಜಾಪತಿರಿತಿ ಶ್ರುತೇಃ ಕಸ್ಯೇತಿ ಶಬ್ದಸಾಮಾನ್ಯಾದನಯಾ ಪ್ರಜಾಪತಿರೇವೋಪಸೃತ ಇತಿ ಗಮ್ಯತೇ ॥ ಕತಮಸ್ಯ । ಕಿಂಶಬ್ದಾದ್ವಾ ಬಹೂನಾಂ ಜಾತಿಪರಿಪ್ರಶ್ನೇ ಡತಮಚ್ । ಪಾ. ೫-೩-೯೩ । ಚಿತ ಇತ್ಯಂತೋದಾತ್ತತ್ವಂ । ಅಮೃತಾನಾಂ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವೇ ಪ್ರಾಪ್ತೇ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ। ಮನಾಮಹೇ । ಮನ ಜ್ಞಾನೇ । ವ್ಯತ್ಯಯೇನ ಶಪ್ । ಪಾದಾದಿತ್ವಾದನಿಘಾತಃ । ಮಹ್ಯೈ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ದಾತ್ । ಗಾತಿಸ್ಥಾ । ಪಾ. ೨-೪-೭೭ । ಇತಿ ಸಿಚೋ ಲುಕ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಾಗಮಾಭಾವಃ । ದೃಶೇಯಂ ದೃಶಿರ್ ಪ್ರೇಕ್ಷಣೇ । ಆಶೀರ್ಲಿಙಿ ಮಿಪೋಽಮ್ । ದೃಶೇರಗ್ವಕ್ತವ್ಯಃ । ಮ. ೩-೧-೮೬-೨ । ಇತ್ಯಙ್ಪ್ರತ್ಯಯಃ । ಶಪೋಽಪವಾದಃ । ಕಿತ್ತ್ವಾಲ್ಲಘೂಪಧಗುಣಾಭಾವಃ । ಲಿಙ್ಯಾಶಿಷ್ಯಙ್ । ಪಾ. ೩-೧-೮೬ । ಇತ್ಯಙಿ ಹಿ ಸತಿ ಋದೃಶೋಽಙಿ ಗುಣಃ । ಪಾ. ೭-೪-೧೬ । ಇತಿ ಗುಣಃ ಸ್ಯಾತ್ । ಯಾಸುಟ್ । ಸಲೋಪಃ । ಅತೋ ಯೇಯಃ । ಆದ್ಗುಣಃ । ಯಾಸುಟಃ ಸ್ವರೇಣೈಕಾರ ಉದಾತ್ತಃ । ಮಾತರಂ ಚೇತ್ಯತ್ರ ಚ ಶಬ್ದಾದ್ದೃಶೇಯಮಿತ್ಯನುಷಜ್ಯತೇ । ಅತಸ್ತದಪೇಕ್ಷಯೈಷಾ ತಿಙ್ವಿಭಕ್ತಿಃ ಪ್ರಥಮೇತಿ ಚವಾಯೋಗೇ ಪ್ರಥಮೇತಿ ನ ನಿಹನ್ಯತೇ ॥

॥ ಪ್ರತಿಪದಾರ್ಥ ॥

(**ವಯಂ**—ಶುನಶ್ಶೇಪನೆಂಬ ಹೆಸರಿನ ನಾವು) **ಅಮೃತಾನಾಂ**— ದೇವತೆಗಳ ಮಧ್ಯದಲ್ಲಿ । **ಕತಮಸ್ಯ**—ಯಾವ ವರ್ಗಕ್ಕೆ ಸೇರಿದ । **ಕಸ್ಯ ದೇವಸ್ಯ**—ಯಾವ ದೇವನ । **ಚಾರು**—ಶೋಭನಕರವಾದ । **ನಾಮ**—ಹೆಸರನ್ನು । **ಮನಾಮಹೇ**—ಉಚ್ಚರಿಸೋಣ? । **ಕಃ**—ಯಾವ ದೇವನು । **ನಃ**—ನಮ್ಮನ್ನು । **ಮಹ್ಯೈ**—ವಿಶಾಲವಾದ । **ಅದಿತಯೇ**—ಭೂಮಿಗೆ (ಭೂಮಿಯಲ್ಲಿ ಇರುವಂತೆ ಎಂದರೆ ಜೀವಿಸಿರುವಂತೆ) । **ದಾತ್**—ಕೊಡುವನು ? (ಹಾಗೆ ಕೊಡುವುದರಿಂದ ನಾನು) । **ಪಿತರಂ ಚ**—(ನನ್ನ) ತಂದೆಯನ್ನೂ । **ಮಾತರಂ ಚ**—(ನನ್ನ) ತಾಯಿಯನ್ನು । **ಪುನಃ**—ಮತ್ತೆ । **ದೃಶೇಯಂ**— ನೋಡೇನು ?

॥ ಭಾವಾರ್ಥ ॥

ದೇವತೆಗಳಲ್ಲಿ ಯಾರು ಶ್ರೇಷ್ಠರು ? ಯಾವ ದೇವನನ್ನು ನೆನೆದರೆ (ಸ್ತೋತ್ರಮಾಡಿದರೆ) ನನ್ನ ಈ ಕಷ್ಟವು ಪರಿಹಾರವಾಗಿ ಬಂಧವಿಮೋಚನೆಯಾಗುವುದು ಮತ್ತು ಭೂಮಿಯಲ್ಲಿ ಎಲ್ಲರಂತೆ ವಾಸಿಸಲು ಅನುಗ್ರಹಮಾಡುವನು ? ನನ್ನ ತಂದೆಯನ್ನೂ ಮತ್ತು ತಾಯಿಯನ್ನೂ ಮತ್ತೆ ಯಾವಾಗ ನೋಡುವೆನು ?

॥ ವಿಶೇಷಾರ್ಥ ॥

ಹರಿಶ್ಚಂದ್ರನೆಂಬ ರಾಜನು ಮಾಡುವ ಯಜ್ಞದಲ್ಲಿ ಪಶುವಾಗಿ ಯೂಪಸ್ತಂಭಕ್ಕೆ ಕಟ್ಟಲ್ಪಟ್ಟು ದಿಕ್ಕುಕಾಣದೆ ಮರಣವನ್ನು ಎದರುನೋಡುತ್ತಿರುವ ಶುನಃಶೇಪನೆಂಬ ಋಷಿಯು ಯಾವ ದೇವನನ್ನು ಮರೆಹೊಕ್ಕರೆ ತನಗೆ ಬಂಧ ವಿಮೋಚನೆಯಾಗುವುದೆಂದು ಆರ್ತನಾದದಿಂದ ಈ ರೀತಿ ಹೇಳುವನು:—ದೇವತೆಗಳು ಅನೇಕರಿರುವರು. ಅವರಲ್ಲಿ ಯಾರು ಶ್ರೇಷ್ಠರು ? ಯಾರ ಹೆಸರನ್ನ ಉಚ್ಚರಿಸಿದರೆ ಅಥವಾ ಯಾರನ್ನು ಸ್ತೋತ್ರಮಾಡಿದರೆ ಮರಣೋನ್ಮುಖನಾದ ನನ್ನನ್ನು ಪಾಶದಿಂದ ಬಿಡಿಸಿ ಪುನಃ ಭೂಮಿಯಲ್ಲಿರುವ ಇತರ ಜನರಿಗೆ ಸಮಾನರಂತೆ ಜೀವಿಸಲು ನನ್ನನ್ನು ಕಾಪಾಡುವನು ? ಈ ಕಷ್ಟದಿಂದ ಪಾರಾಗಿ ನನ್ನ ತಂದೆಯನ್ನೂ ತಾಯಿಯನ್ನೂ ಯಾವಾಗ ನೋಡೇನು ? ಈ ರೀತಿ ವಿಲಾಪನೆಮಾಡಿ ಮೊದಲು ಪ್ರಜಾಪತಿಯನ್ನು ನೆನೆಯುವನು. ಬಳಿಕ ಅಗ್ನಿಯನ್ನು ನೆನೆದರೆ ತನಗೆ ಬಂಧವಿಮೋ ಚನೆಯಾಗುವುದೆಂದು ಅವನಿಂದ ತಿಳಿದು ಮುಂದಿನ ಋಕ್ಕಿನಲ್ಲಿ ಅಗ್ನಿಯನ್ನು ಸ್ತೋತ್ರಮಾಡುವನು.

## English Translation.

Of many immortal gods whose good name should we contemplate? Who will deliver us back to the vast earth that I may again behold my father and mother?

॥ ವಿಶೇಷವಿಷಯಗಳು ॥

ಈ ಅನುವಾಕದಲ್ಲಿರುವ ಏಳು ಸೂಕ್ತಗಳೂ ರಾಜಸೂಯಯಾಗದಲ್ಲಿ ಯಜಮಾನನಾದ ಅಭಿಷಕ್ತರಾಜನನ್ನು ಪ್ರೋಕ್ಷಣೆಮಾಡುವುದಕ್ಕಾಗಿ ಉಪಯೋಗಿಸಲ್ಪಡುವುವೆಂದು ಹಿಂದೆಯೇ ಹೇಳಿರುವುದಷ್ಟೆ. ಈ ವಿಷಯದಲ್ಲಿ ಶುನಃ ಶೇಪನ ವಿಚಾರವಾದ ಇತಿಹಾಸವು ಪುರಾಣಾದಿಗಳಲ್ಲಿಯೂ ಐತರೇಯಬ್ರಾಹ್ಮಣದಲ್ಲಿಯೂ ವಿಸ್ತಾರವಾಗಿ ವರ್ಣಿತ ವಾಗಿದೆ. ಪುರಾಣಾದಿಗಳಲ್ಲಿರುವ ಇತಿಹಾಸವು ವ್ಯತ್ಯಾಸವಾಗಿರುವುದರಿಂದಲೂ ಅಷ್ಟು ಪ್ರಮಾಣಾರ್ಹವಲ್ಲದ್ದ ರಿಂದಲೂ ಐತರೇಯ ಬ್ರಾಹ್ಮಣದಲ್ಲಿರುವ ಇತಿಹಾಸವನ್ನೇ ನಾವು ಇಲ್ಲಿ ವಿವರಿಸುತ್ತೇವೆ. ಈ ಉಪಾಖ್ಯಾನವು ಐತರೇಯ ಬ್ರಾಹ್ಮಣದ ೩೩ ನೆಯ ಅಧ್ಯಾಯದಲ್ಲಿ ಈ ರೀತಿ ವರ್ಣಿತವಾಗಿದೆ—

**ಹರಿಶ್ಚಂದ್ರೋ ಹ ವೈಧಸ ಐಕ್ಷ್ವಾಕೋ ರಾಜಾಽಪುತ್ರ ಆಸ । ತಸ್ಯ ಹ ಶತಂ ಜಾಯಾ ಬಭೂ-ವುಸ್ತಾಸು ಪುತ್ರಂ ನ ಲೇಭೇ । ತಸ್ಯ ಹ ಪರ್ವತನಾರದೌ ಗೃಹ ಊಷತುಃ ಸ ಹ ನಾರದಂ ಪಪ್ರಚ್ಛ— ಯಂ ನ್ವಿಮಂ ಪುತ್ರಮಿಚ್ಛಂತಿ ಯೇ ವಿಜಾನಂತಿ ಯೇ ಚ ನ । ಕಿಂಸ್ವಿತ್ಪುತ್ರೇಣ ವಿಂದತೇ ತನ್ಮ ಆಚಕ್ಷ್ವ ನಾರದೇತಿ ॥ ಸ ಏಕಯಾ :ಪೃಷ್ಟೋ ದಶಭಿಃ ಪ್ರತ್ಯುವಾಚ ಋಣಮಸ್ಮಿನ್ ಸಂನಯತ್ಯಮೃತತ್ವಂ ಚ**

ಗಚ್ಛತಿ । ಪಿತಾ ಪುತ್ರಸ್ಯ ಜಾತಸ್ಯ ಪಶ್ಯೇಚ್ಚೇಜ್ಜೀವತೋ ಮುಖಂ ॥ ಯಾವಂತಃ ಪೃಥಿವ್ಯಾಂ ಭೋಗಾ ಯಾವಂತೋ ಜಾತವೇದಸಿ । ಯಾವಂತೋ ಅಪ್ಸು ಪ್ರಾಣಿನಾಂ ಭೂಯಾನ್ಪುತ್ರೇ ಪಿತುಸ್ತತಃ ॥ ಶಶ್ವತ್ಪು-ತ್ರೇಣ ಪಿತರೋಽತ್ಯಾಯನ್ಬಹುಲಂ ತಮಃ । ಆತ್ಮಾ ಹಿ ಜಜ್ಞ ಆತ್ಮನಃ ಸ ಇರಾವತ್ಯತಿತಾರಿಣೀ ॥ ಕಿಂ ನು ಮಲಂ ಕಿಮಜಿನಂ ಕಿಮು ಶ್ಮಶ್ರೂಣಿ ಕಿಂ ತಪಃ । ಪುತ್ರಂ ಬ್ರಹ್ಮಾಣ ಇಚ್ಛಧ್ವಂ ಸ ವೈ ಲೋಕೋಽ-ವದಾವದಃ ॥ ಅನ್ನಂ ಹ ಪ್ರಾಣಃ ಶರಣಂ ಹ ವಾಸೋ ರೂಪಂ ಹಿರಣ್ಯಂ ಪಶವೋ ವಿವಾಹಾಃ । ಸಖಾ ಹ ಜಾಯಾ ಕೃಪಣಂ ಹ ದುಹಿತಾ ಜ್ಯೋತಿರ್ಹ ಪುತ್ರಃ ಪರಮೇ ವ್ಯೋಮನ್ ॥ ಪತಿರ್ಜಾಯಾಂ ಪ್ರವಿಶತಿ ಗರ್ಭೋ ಭೂತ್ವಾ ಸ ಮಾತರಂ । ತಸ್ಯಾಂ ಪುನರ್ನವೋ ಭೂತ್ವಾ ದಶಮೇ ಮಾಸಿ ಜಾಯತೇ ॥ ತಜ್ಜಾಯಾ ಜಾಯಾ ಭವತಿ ಯದಸ್ಯಾಂ ಜಾಯತೇ ಪುನಃ । ಆಭೂತಿರೇಷಾ ಭೂತಿರ್ಬೀಜಮೇತನ್ನಿಧೀ-ಯತೇ ॥ ದೇವಾಶ್ಚೈತಾಮೃಷಯಶ್ಚ ತೇಜಃ ಸಮಭರನ್ಮಹತ್ । ದೇವಾ ಮನುಷ್ಯಾನಬ್ರುವನ್ನೇಷಾ ವೋ ಜನನೀ ಪುನಃ ॥ ನಾಪುತ್ರಸ್ಯ ಲೋಕೋಽಸ್ತೀತಿ ತತ್ಸರ್ವೇ ಪಶವೋ ವಿದುಃ । ತಸ್ಮಾತ್ತು ಪುತ್ರೋ ಮಾತರಂ ಸ್ವಸಾರಂ ಚಾಧಿರೋಹತಿ । ಏಷ ಪನ್ಥಾ ಉರುಗಾಯಃ ಸುಶೇವೋ ಯಂ ಪುತ್ರಿಣ ಆಕ್ರಮನ್ತೇ ವಿಶೋಕಾಃ । ತಂ ಪಶ್ಯಂತಿ ಪಶವೋ ವಯಾಂಸಿ ಚ ತಸ್ಮಾತ್ತೇ ಮಾತ್ರಾಪಿ ಮಿಥುನೀ ಭವಂತಿ । ಇತಿ ಹಾಸ್ಮಾ ಆಖ್ಯಾಯ ॥ ೧ ॥

ಅಥೈನಮುವಾಚ ವರುಣಂ ರಾಜಾನಮುಪಧಾವ ಪುತ್ರೋ ಮೇ ಜಾಯತಾಂ ತೇನ ತ್ವಾ ಯಜಾ ಇತಿ । ತಥೇತಿ ಸ ವರುಣಂ ರಾಜಾನಮುಪಸಸಾರ ಪುತ್ರೋ ಮೇ ಜಾಯತಾಂ ತೇನ ತ್ವಾ ಯಜಾ ಇತಿ ತಥೇತಿ ತಸ್ಯ ಪುತ್ರೋ ಜಜ್ಞೇ ರೋಹಿತೋ ನಾಮ । ತಂ ಹೋವಾಚಾಜನಿ ವೈ ತೇ ಪುತ್ರೋ ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ ಪಶುರ್ನಿರ್ದಶೋ ಭವತ್ಯಥ ಸ ಮೇಧ್ಯೋ ಭವತಿ ನಿರ್ದಶೋ ನ್ವಸ್ತ್ವಥ ತ್ವಾ ಯಜಾ ಇತಿ ತಥೇತಿ । ಸ ಹ ನಿರ್ದಶ ಆಸ ತಂ ಹೋವಾಚ ನಿರ್ದಶೋ ನ್ವಭೂದ್ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ ಪಶೋರ್ದಂತಾ ಜಾಯಂತೇಽಥ ಮೇಧ್ಯೋ ಭವತಿ ದಂತಾ ನ್ವಸ್ಯ ಜಾಯಂತಾಮಥ ತ್ವಾ ಯಜಾ ಇತಿ ತಥೇತಿ । ತಸ್ಯ ಹ ದಂತಾ ಜಜ್ಞಿರೇ ತಂ ಹೋವಾಚಾಜ್ಞತ ವಾ ಅಸ್ಯ ದಂತಾ ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ ಪಶೋರ್ದಂತಾಃ ಪದ್ಯಂತೇಽಥ ಸ ಮೇಧ್ಯೋ ಭವತಿ ದಂತಾ ನ್ವಸ್ಯ ಪದ್ಯಂತಾಮಥ ತ್ವಾ ಯಜಾ ಇತಿ ತಥೇತಿ । ತಸ್ಯ ಹ ದಂತಾಃ ಪೇದಿರೇ ತಂ ಹೋವಾಚಾಪತ್ಸತ ವಾ ಅಸ್ಯ ದಂತಾ ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ ಪಶೋರ್ದಂತಾಃ ಪುನರ್ಜಾಯಂತೇಽಥ ಸ ಮೇಧ್ಯೋ ಭವತಿ ದಂತಾ ನ್ವಸ್ಯ ಪುನರ್ಜಾಯಂತಾಮಥ ತ್ವಾ ಯಜಾ ಇತಿ ತಥೇತಿ । ತಸ್ಯ ಹ ದಂತಾಃ ಪುನರ್ಜಜ್ಞಿರೇ ತಂ ಹೋವಾಚಾಜ್ಞತ ವಾ ಅಸ್ಯ ಪುನರ್ದಂತಾ ಯಜಸ್ವ ಮಾಽನೇನೇತಿ ಸ ಹೋವಾಚ ಯದಾ ವೈ ಕ್ಷತ್ರಿಯಃ ಸಾಂನಾಹುಕೋ ಭವತ್ಯಥ ಸ ಮೇಧ್ಯೋ ಭವತಿ ಸಂನಾಹಂ ನು ಪ್ರಾಪ್ನೋತ್ವಥ ತ್ವಾ ಯಜಾ ಇತಿ ತಥೇತಿ । ಸ ಹ ಸಂನಾಹಂ ಪ್ರಾಪತ್ತಂ ಹೋವಾಚ ಸಂನಾಹಂ ನು ಪ್ರಾಪ್ನೋದ್ಯಜಸ್ವ ಮಾಽನೇನೇತಿ ಸ ತಥೇತ್ಯುಕ್ತ್ವಾ ಪುತ್ರಮಾ-ಮಂತ್ರಯಾಮಾಸ ತತಾಯಂ ವೈ ಮಹ್ಯಂ ತ್ವಾಮದದಾದ್ಧಂತ ತ್ವಯಾಹಮಿಮಂ ಯಜಾ ಇತಿ । ಸ ಹ ನೇತ್ಯುಕ್ತ್ವಾ ಧನುರಾದಾಯಾರಣ್ಯಮುಪಾತಸ್ಥೌ ಸ ಸಂವತ್ಸರಮರಣ್ಯೇ ಚಚಾರ ॥ ೨ ॥

ಅಥ ಹೈಕ್ಷ್ವಾಕಂ ವರುಣೋ ಜಗ್ರಾಹ ತಸ್ಯ ಹೋದರಂ ಜಜ್ಞೇ ತದು ಹ ರೋಹಿತಃ ಶುಶ್ರಾವ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ—ನಾನಾಶ್ರಾಂತಾಯ ಶ್ರೀರಸ್ತೀತಿ ರೋಹಿತ ಶುಶ್ರುಮ। ಪಾಪೋ ನೃಷದ್ವರೋ ಜನ ಇಂದ್ರ ಇಚ್ಚರತಃ ಸಖಾ ಚರೈವೇತಿ॥ ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ದ್ವಿತೀಯಂ ಸಂವತ್ಸರಮರಣ್ಯೇ ಚಚಾರ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ— ಪುಷ್ಪಿಣ್ಯೌ ಚರತೋ ಜಂಘೇ ಭೂಷ್ಣುರಾತ್ಮಾ ಫಲಗ್ರಹಿಃ। ಶೇರೇಽಸ್ಯ ಸರ್ವೇ ಪಾಪ್ಮಾನಃ ಶ್ರಮೇಣ ಪ್ರಪಥೇ ಹತಶ್ಚರೈವೇತಿ॥ ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ತೃತೀಯಂ ಸಂವತ್ಸರಮರಣ್ಯೇ ಚಚಾರ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ— ಆಸ್ತೇ ಭಗ ಆಸೀನಸ್ಯೋರ್ಧ್ವಸ್ತಿಷ್ಠತಿ ತಿಷ್ಠತಃ। ಶೇತೇ ನಿಪದ್ಯಮಾನಸ್ಯ ಚರಾತಿ ಚರತೋ ಭಗಶ್ಚರೈವೇತಿ॥ ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಚತುರ್ಥಂ ಸಂವತ್ಸರಮರಣ್ಯೇ ಚಚಾರ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ—ಕಲಿಃ ಶಯಾನೋ ಭವತಿ ಸಂಜಿಹಾನಸ್ತು ದ್ವಾಪರಃ। ಉತ್ತಿಷ್ಠಂಸ್ತ್ರೇತಾ ಭವತಿ ಕೃತಂ ಸಂಪದ್ಯತೇ ಚರಂಶ್ಚರೈವೇತಿ॥ ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಪಂಚಮಂ ಸಂವತ್ಸರಮರಣ್ಯೇ ಚಚಾರ ಸೋಽರಣ್ಯಾದ್ಗ್ರಾಮಮೇಯಾಯ ತಮಿಂದ್ರಃ ಪುರುಷರೂಪೇಣ ಪರ್ಯೇತ್ಯೋವಾಚ—ಚರನ್ವೈ ಮಧುವಿಂದತಿ ಚರನ್ಸ್ವಾದುಮುದುಂಬರಂ। ಸೂರ್ಯಸ್ಯ ಪಶ್ಯ ಶ್ರೇಮಾಣಂ ಯೋ ನ ತಂದ್ರಯತೇ ಚರಂಶ್ಚರೈವೇತಿ॥ ಚರೈವೇತಿ ವೈ ಮಾ ಬ್ರಾಹ್ಮಣೋಽವೋಚದಿತಿ ಹ ಷಷ್ಠಂ ಸಂವತ್ಸರಮರಣ್ಯೇ ಚಚಾರ ಸೋಽಜೀಗರ್ತಂ ಸೌಯವಸಿಮೃಷಿಮಶನಯಾ ಪರೀತಮರಣ್ಯ ಉಪೇಯಾಯ। ತಸ್ಯ ಹ ತ್ರಯಃ ಪುತ್ರಾ ಆಸುಃ ಶುನಃಪುಚ್ಛಃ ಶುನಃಶೇಪಃ ಶುನೋಲಾಂಗೂಲ ಇತಿ ತಂ ಹೋವಾಚ ಋಷೇಽಹಂ ತೇ ಶತಂ ದದಾಮ್ಯಹಮೇಷಾಮೇಕೇನಾಽಽತ್ಮಾನಂ ನಿಷ್ಕ್ರೀಣಾ ಇತಿ ಸ ಜ್ಯೇಷ್ಠಂ ಪುತ್ರಂ ನಿಗೃಹ್ಣಾನ ಉವಾಚ ನನ್ವಿಮಮಿತಿ ನೋ ಏವೇಮಮಿತಿ ಕನಿಷ್ಠಂ ಮಾತಾ ತೌ ಹ ಮಧ್ಯಮೇ ಸಂಪಾದಯಾಂಚಕ್ರತುಃ ಶುನಃಶೇಪೇ ತಸ್ಯ ಹ ಶತಂ ದತ್ವಾ ಸ ತಮಾದಾಯ ಸೋಽರಣ್ಯಾದ್ಗ್ರಾಮಮೇಯಾಯ। ಸ ಪಿತರಮೇತ್ಯೋವಾಚ ತತ ಹಂತಾಹಮನೇನಾಽಽತ್ಮಾನಂ ನಿಷ್ಕ್ರೀಣಾ ಇತಿ ಸ ವರುಣಂ ರಾಜಾನಮುಪಸಸಾರಾನೇನ ತ್ವಾ ಯಜಾ ಇತಿ ತಥೇತಿ ಭೂಯಾನ್ವೈ ಬ್ರಾಹ್ಮಣಃ ಕ್ಷತ್ರಿಯಾದಿತಿ ವರುಣ ಉವಾಚ ತಸ್ಮಾ ಏತಂ ರಾಜಸೂಯಂ ಯಜ್ಞಕ್ರತುಂ ಪ್ರೋವಾಚ ತಮೇತಮಭಿಷೇಚನೀಯೇ ಪುರುಷಂ ಪಶುಮಾಲೇಭೇ ॥೩॥

ತಸ್ಯ ಹ ವಿಶ್ವಾಮಿತ್ರೋ ಹೋತಾಽಽಸೀಜ್ಜಮದಗ್ನಿರಧ್ವರ್ಯುರ್ವಸಿಷ್ಠೋ ಬ್ರಹ್ಮಾಽಯಾಸ್ಯ ಉದ್ಗಾತಾ ತಸ್ಮಾ ಉಪಾಕೃತಾಯ ನಿಯೋಕ್ತಾರಂ ನ ವಿವಿದುಃ ಸ ಹೋವಾಚಾಜೀಗರ್ತಃ ಸೌಯವಸಿರ್ಮಹ್ಯಮಪರಂ ಶತಂ ದತ್ತಾಹಮೇನಂ ನಿಯೋಕ್ಷ್ಯಾಮೀತಿ ತಸ್ಮಾ ಅಪರಂ ಶತಂ ದದುಸ್ತಂ ಸ ನಿನಿಯೋಜ। ತಸ್ಮಾ ಉಪಾಕೃತಾಯ ನಿಯುಕ್ತಾಯಾಽಽಪ್ರೀತಾಯ ಪರ್ಯಗ್ನಿಕೃತಾಯ ವಿಶಸಿತಾರಂ ನ ವಿವಿದುಃ ಸ ಹೋವಾಚಾಜೀಗರ್ತಃ ಸೌಯವಸಿರ್ಮಹ್ಯಮಪರಂ ಶತಂ ದತ್ತಾಹಮೇನಂ ವಿಶಸಿಷ್ಯಾಮೀತಿ ತಸ್ಮಾ ಅಪರಂ ಶತಂ ದದುಃ ಸೋಽಸಿಂ ನಿಃಶಾನ ಏಯಾಯ। ಅಥ ಹ ಶುನಃಶೇಪ ಈಕ್ಷಾಂಚಕ್ರೇ-

ಮಾನುಷಮಿವ ವೈ ಮಾ ವಿಶಸಿಷ್ಯಂತಿ ಹಂತಾಹಂ ದೇವತಾ ಉಪಧಾವಾಮೀತಿ ಸ ಪ್ರಜಾಪತಿಮೇವ ಪಥಮಂ ದೇವತಾನಾಮುಪಸಸಾರ-ಕಸ್ಯ ನೂನಂ ಕತಮಸ್ಯಾಮೃತಾನಾಮಿತ್ಯೇತಯರ್ಚಾ । ತಂ ಪ್ರಜಾ-ಪತಿರುವಾಚಾಗ್ನಿರ್ವೈ ದೇವಾನಾಂ ನೇದಿಷ್ಠಸ್ತಮೇವೋಪಧಾವೇತಿ ಸೋಽಗ್ನಿಮುಪಸಸಾರಾಗ್ನೇರ್ವಯ ಪ್ರಥಮಸ್ಯಾಮೃತಾನಾಮಿತ್ಯೇತಯರ್ಚಾ । ತಮಗ್ನಿರುವಾಚ ಸವಿತಾ ವೈ ಪ್ರಸವಾನಾಮೀಶೇ ತಮೇವೋ-ಪಧಾವೇತಿ ಸ ಸವಿತಾರಮುಪಸಸಾರಾಭಿ ತ್ವಾ ದೇವ ಸವಿತರಿತ್ಯೇತೇನ ತೃಚೇನ । ತಂ ಸವಿತೋವಾಚ ವರುಣಾಯ ವೈ ರಾಜ್ಞೇ ನಿಯುಕ್ತೋಽಸಿ ತಮೇವೋಪಧಾವೇತಿ ಸ ವರುಣಂ ರಾಜಾನಮುಪಸಸಾರಾತ ಉತ್ತರಾಭಿರೇಕತ್ರಿಂಶತಾ । ತಂ ವರುಣ ಉವಾಚಾಗ್ನಿರ್ವೈ ದೇವಾನಾಂ ಮುಖಂ ಸುಹೃದಯತಮಸ್ತಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸೋಽಗ್ನಿಂ ತುಷ್ಟಾವಾತ ಉತ್ತರಾಭಿರ್ದ್ವಾವಿಂಶತ್ಯಾ । ತಮಗ್ನಿ-ರುವಾಚ ವಿಶ್ವಾನ್ನು ದೇವಾನ್ ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸ ವಿಶ್ವಾನ್ದೇವಾಂಸ್ತುಷ್ಟಾವ ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯ ಇತ್ಯೇತಯರ್ಚಾ । ತಂ ವಿಶ್ವೇ ದೇವಾ ಊಚುರಿಂದ್ರೋ ವೈ ದೇವಾನಾಮೋಜಿಷ್ಠೋ ಬಲಿಷ್ಠಃ ಸಹಿಷ್ಠಃ ಸತ್ತಮಃ ಪಾರಯಿಷ್ಣುತಮಸ್ತಂ ನು ಸ್ತುಹ್ಯಥ ತ್ವೋತ್ಸ್ರ-ಕ್ಷ್ಯಾಮ ಇತಿ ಸ ಇಂದ್ರಂ ತುಷ್ಟಾವ ಯಚ್ಚಿದ್ಧಿ ಸತ್ಯ ಸೋಮಪಾ ಇತಿ ಚೈತೇನ ಸೂಕ್ತೇನೋತ್ತರಸ್ಯ ಚ ಪಂಚದಶಭಿಃ । ತಸ್ಮಾ ಇಂದ್ರಃ ಸ್ತೂಯಮಾನಃ ಪ್ರೀತೋ ಮನಸಾ ಹಿರಣ್ಯರಥಂ ದದೌ ತಮೇತಯಾ ಪ್ರತೀಯಾಯ ಶಶ್ವದಿಂದ್ರ ಇತಿ । ತಮಿಂದ್ರ ಉವಾಚಾಶ್ವಿನೌ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸೋಽಶ್ವಿನೌ ತುಷ್ಟಾವಾತ ಉತ್ತರೇಣ ತೃಚೇನ । ತಮಶ್ವಿನಾ ಊಚತುರುಷಸಂ ನು ಸ್ತುಹ್ಯಥ ತ್ವೋತ್ಸ್ರ-ಕ್ಷ್ಯಾಮ ಇತಿ ಸ ಉಷಸಂ ತುಷ್ಟಾವಾತ ಉತ್ತರೇಣ ತೃಚೇನ । ತಸ್ಯ ಹ ಸ್ಮರ್ಚ್ಯೃಚ್ಯುಕ್ತಾಯಾಂ ವಿ ಪಾಶೋ ಮುಮುಚೇ ಕನೀಯ ಐಕ್ಷ್ವಾಕಸ್ಯೋದರಂ ಭವತ್ಯುತ್ತಮಸ್ಯಾಮೇವರ್ಚ್ಯುಕ್ತಾಯಾಂ ವಿಪಾಶೋ ಮುಮುಚೇಽಗದ ಐಕ್ಷ್ವಾಕ ಆಸ ॥ ೪ ॥

ತಮೃತ್ವಿಜ ಊಚುಸ್ತ್ವಮೇವ ನೋಽಸ್ಯಾಹ್ನಃ ಸಂಸ್ಥಾಮಧಿಗಚ್ಛೇತ್ಯಥ ಹೈತಂ ಶುನಃಶೇಪೋ-ಽಂಜಃಸವಂ ದದರ್ಶ ತಮೇತಾಭಿಶ್ಚತಸೃಭಿರಭಿಸುಷಾವ ಯಚ್ಚಿದ್ಧಿ ತ್ವಂ ಗೃಹೇ ಗೃಹ ಇತ್ಯಥೈನಂ ದ್ರೋಣ-ಕಲಶಮಭ್ಯವನಿನಾಯೋಚ್ಛಿಷ್ಟಂ ಚಮ್ವೋರ್ಭರೇತ್ಯೇತಯರ್ಚಾಥ ಹಾಸ್ಮಿನ್ನನ್ವಾರಬ್ಧೇ ಪೂರ್ವಾಭಿಶ್ಚತಸೃಭಿಃ ಸ ಸ್ವಾಹಾಕಾರಾಭಿರ್ಜುಹವಾಂಚಕಾರಾಥೈನಮವಭೃಥಮಭ್ಯವನಿನಾಯ ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನಿತ್ಯೇತಾಭ್ಯಾಮಥೈನಮತ ಊರ್ಧ್ವಮಗ್ನಿಮಾಹವನೀಯಮುಪಸ್ಥಾಪಯಾಂಚಕಾರ ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾದಿತಿ । ಅಥ ಹ ಶುನಶ್ಶೇಪೋ ವಿಶ್ವಾಮಿತ್ರಸ್ಯಾಂಕಮಾಸಸಾದ ಸ ಹೋವಾಚಾಜೀಗರ್ತಃ ಸೌಯವಸಿರ್ಋಷೇ ಪುನರ್ಮೇ ಪುತ್ರಂ ದೇಹೀತಿ ನೇತಿ ಹೋವಾಚ ವಿಶ್ವಾ-ಮಿತ್ರೋ ದೇವಾ ವಾ ಇಮಂ ಮಹ್ಯಮರಾಸತೇತಿ ಸ ಹ ದೇವರಾತೋ ವೈಶ್ವಾಮಿತ್ರ ಆಸ ತಸ್ಯೈತೇ ಕಾಪಿಲೇಯಬಾಭ್ರವಾಃ । ಸ ಹೋವಾಚಾಜೀಗರ್ತಃ ಸೌಯವಸಿಸ್ತ್ವಂ ವೇಹಿ ವಿಹ್ವಯಾವಹಾ ಇತಿ ಸ ಹೋವಾಚಾಜೀಗರ್ತಃ ಸೌಯವಸಿರಾಂಗಿರಸೋ ಜನ್ಮನಾಽಸ್ಯಾಜೀಗರ್ತಿಃ ಶ್ರುತಃ ಕವಿಃ । ಋಷೇ ಪೈತಾಮಹಾತ್ತಂತೋರ್ಮಾಽಪಗಾಃ ಪುನರೇಹಿ ಮಾಮಿತಿ ಸ ಹೋವಾಚ ಶುನಃಶೇಪೋಽದರ್ಶುಸ್ತ್ವಾ ಶಾಸಹಸ್ತಂ ನ ಯಚ್ಛೂದ್ರೇಷ್ವಲಪ್ಸತ । ಗವಾಂ ತ್ರೀಣಿ ಶತಾನಿ ತ್ವಮವೃಣೀಥಾ ಮದಂಗಿರ ಇತಿ । ಸ ಹೋವಾಚಾಜೀಗರ್ತಃ ಸೌಯವಸಿಸ್ತದ್ವೈ ಮಾ ತಾತ ತಪತಿ ಪಾಪಂ ಕರ್ಮ ಮಯಾ ಕೃತಂ । ತದಹಂ

ನಿಷ್ನುವೇ ತುಭ್ಯಂ ಪ್ರತಿಯಂತು ಶತಾ ಗವಾಮಿತಿ ಸ ಹೋವಾಚ ಶುನಃಶೇಪೋ ಯಃ ಸಕೃತ್ಪಾಪಕಂ ಕುರ್ಯಾತ್ಕುರ್ಯಾದೇನತ್ತತೋಽಪರಂ । ನಾಪಾಗಾಃ ಶೌದ್ರಾನ್ನ್ಯಾಯಾದಸಂಧೇಯಂ ತ್ವಯಾ ಕೃತ-ಮಿತಿ । ಅಸಂಧೇಯಮಿತಿ ಹ ವಿಶ್ವಾಮಿತ್ರ ಉಪಸಸಾದ ಸ ಹೋವಾಚ ವಿಶ್ವಾಮಿತ್ರೋ ಭೀಮ ಏವ ಸೌಯವಸಿಃ ಶಾಸೇನ ವಿಶಿಶಾಸಿಷುಃ । ಅಸ್ಥಾನ್ಯೈತಸ್ಯ ಪುತ್ರೋ ಭೂರ್ಮಮೈವೋಪೇಹಿ ಪುತ್ರತಾಮಿತಿ । ಸ ಹೋವಾಚ ಶುನಃಶೇಪಃ ಸ ವೈ ಯಥಾ ನೋ ಜ್ಞಪಯಾಽಽರಾಜಪುತ್ರ ತಥಾ ವದ । ಯಥೈವಾಽಽಂಗಿರಸಃ ಸನ್ನುಪೇಯಾಂ ತವ ಪುತ್ರತಾಮಿತಿ ಸ ಹೋವಾಚ ವಿಶ್ವಾಮಿತ್ರೋ ಜ್ಯೇಷ್ಠೋ ಮೇ ತ್ವಂ ಪುತ್ರಾಣಾಂ ಸ್ಯಾಸ್ತವ ಶ್ರೇಷ್ಠಾ ಪ್ರಜಾ ಸ್ಯಾತ್ । ಉಪೇಯಾ ದೈವಂ ಮೇ ದಾಯಂ ತೇನ ವೈ ತ್ವೋಪಮಂತ್ರಯ ಇತಿ । ಸ ಹೋವಾಚ ಶುನಃಶೇಪಃ ಸಂಜ್ಞಾನಾನೇಷು ವೈ ಬ್ರೂಯಾತ್ಸೌಹಾರ್ದ್ಯಾಯ ಮೇ ಶ್ರಿಯೈ । ಯಥಾಹಂ ಭರತಋಷಭೋಪೇಯಾಂ ತವ ಪುತ್ರತಾಮಿತ್ಯಥ ಹ ವಿಶ್ವಾಮಿತ್ರಃ ಪುತ್ರಾನಾಮಂತ್ರಯಾ-ಮಾಸ ಮಧುಚ್ಛಂದಾಃ ಶೃಣೋತನ ಋಷಭೋ ರೇಣುರಷ್ಟಕಃ । ಯೇ ಕೇ ಚ ಭ್ರಾತರಃ ಸ್ಥ ನಾಸ್ಮೈ ಜ್ಯೈಷ್ಠ್ಯಾಯ ಕಲ್ಪಧ್ವಮಿತಿ ॥ ೫ ॥

ತಸ್ಯ ಹ ವಿಶ್ವಾಮಿತ್ರಸ್ಯೈಕಶತಂ ಪುತ್ರಾ ಆಸುಃ ಪಂಚಾಶದೇವ ಜ್ಯಾಯಾಂಸೋ ಮಧುಚ್ಛಂದಸಃ ಪಂಚಾಶತ್ಕನೀಯಾಂಸಃ । ತದ್ಯೇ ಜ್ಯಾಯಾಂಸೋ ನ ತೇ ಕುಶಲಂ ಮೇನಿರೇ ತಾನನು ವ್ಯಾಜಹಾರಾ-ನ್ತಾನ್ವಃ ಪ್ರಜಾ ಭಕ್ಷೀಷ್ಟೇತಿ ತ ಏತೇಽನ್ಧ್ರಾಃ ಪುಂಡ್ರಾಃ ಶಬರಾಃ ಪುಲಿಂದಾ ಮೂತಿಬಾ ಇತ್ಯುದಂತ್ಯಾ ಬಹವೋ ವೈಶ್ವಾಮಿತ್ರಾ ದಸ್ಯೂನಾಂ ಭೂಯಿಷ್ಠಾಃ । ಸ ಹೋವಾಚ ಮಧುಚ್ಛಂದಾಃ ಪಂಚಾಶತಾ ಸಾರ್ಧಂ ಯನ್ನಃ ಪಿತಾ ಸಂಜಾನೀತೇ ತಸ್ಮಿಂಸ್ತಿಷ್ಠಾಮಹೇ ವಯಂ । ಪುರಸ್ತ್ವಾ ಸರ್ವೇ ಕುರ್ಮಹೇ ತ್ವಾಮನ್ವಂಚೋ ವಯಂ ಸ್ಮಸೀತಿ । ಅಥ ಹ ವಿಶ್ವಾಮಿತ್ರಃ ಪ್ರತೀತಃ ಪುತ್ರಾಂಸ್ತುಷ್ಟಾವ । ತೇ ವೈ ಪುತ್ರಾಃ ಪಶುಮಂತೋ ವೀರವಂತೋ ಭವಿಷ್ಯಥ । ಯೇ ಮಾನಂ ಮೇಽನುಗೃಹ್ಣಂತೋ ವೀರವಂತಮಕರ್ತ ಮಾ। ಪುರ ಏತ್ರಾ ವೀರವಂತೋ ದೇವರಾತೇನ ಗಾಥಿನಾಃ । ಸರ್ವೇ ರಾಧ್ಯಾಃ ಸ್ಥ ಪುತ್ರಾ ಏಷ ವಃ ಸದ್ವಿವಾಚನಂ। ಏಷ ವಃ ಕುಶಿಕಾ ವೀರೋ ದೇವರಾತಸ್ತಮನ್ವಿತ । ಯುಷ್ಮಾಂಶ್ಚ ದಾಯಂ ಮ ಉಪೇತಾ ವಿದ್ಯಾಂ ಯಾಮು ಚ ವಿದ್ಮಸಿ । ತೇ ಸಮ್ಯಂಚೋ ವೈಶ್ವಾಮಿತ್ರಾಃ ಸರ್ವೇ ಸಾಕಂ ಸರಾತಯಃ । ದೇವರಾತಾಯ ತಸ್ಥಿರೇ ಧೃತ್ಯೈ ಶ್ರೈಷ್ಠ್ಯಾಯ ಗಾಥಿನಾಃ । ಅಧೀಯತ ದೇವರಾತೋ ರಿಕ್ಥಯೋರುಭಯೋರೃಷಿಃ । ಜಹ್ನೂನಾಂ ಚಾಧಿಪತ್ಯೇ ದೈವೇ ವೇದೇ ಚ ಗಾಥಿನಾಂ । ತದೇತತ್ಪರಋಕ್ಶತಗಾಥಂ ಶೌನಃಶೇಪಮಾಖ್ಯಾ-ನಂ । ತದ್ಧೋತಾ ರಾಜ್ಞೇಽಭಿಷಿಕ್ತಾಯಾಽಽಚಷ್ಟೇ । ಹಿರಣ್ಯಕಶಿಪಾವಾಸೀನ ಆಚಷ್ಟೇ ಹಿರಣ್ಯಕಶಿಪಾವಾ-ಸೀನಃ ಪ್ರತಿಗೃಣಾತಿ ಯಶೋ ವೈ ಹಿರಣ್ಯಂ ಯಶಸೈವೈನಂ ತತ್ಸಮರ್ಧಯತಿ । ಓಮಿತ್ಯೃಚಃ ಪ್ರತಿಗರ ಏವಂ ತಥೇತಿ ಗಾಥಾಯಾ ಓಮಿತಿ ವೈ ದೈವಂ ತಥೇತಿ ಮಾನುಷಂ ದೈವೇನ ಚೈವೈನಂ ತನ್ಮಾನುಷೇಣ ಚ ಪಾಪಾದೇನಸಃ ಪ್ರಮುಂಚತಿ । ತಸ್ಮಾದ್ಯೋ ರಾಜಾ ವಿಜಿತೀ ಸ್ಯಾದಪ್ಯಯಜಮಾನ ಆಖ್ಯಾಪಯೇತೈವೈತ-ಚ್ಛೌನಃಶೇಪಮಾಖ್ಯಾನಂ ನ ಹಾಸ್ಮಿನ್ನಲ್ಪಂ ಚನೈನಃ ಪರಿಶಿಷ್ಯತೇ । ಸಹಸ್ರಮಾಖ್ಯಾತ್ರೇ ದದ್ಯಾಚ್ಛತಂ ಪ್ರತಿಗರಿತ್ರ ಏತೇ ಚೈವಾಽಽಸನೇ ಶ್ವೇತಶ್ಚಾಶ್ವತರೀರಥೋ ಹೋತುಃ । ಪುತ್ರಕಾಮಾ ಹಾಪ್ಯಾಖ್ಯಾಪ-ಯೇರಂಲ್ಲಭಂತೇ ಹ ಪುತ್ರಾಂಲ್ಲಭಂತೇ ಹ ಪುತ್ರಾನ್ ॥

# ಶುನಶ್ಶೇಪಾಖ್ಯಾನವು

[ದೊರೆಯಾದ ಹರಿಶ್ಚಂದ್ರನ ಪುತ್ರೇಚ್ಛೆ—ಪುತ್ರಸಂಪತ್ತಿನ ಪ್ರಶಂಸೆ.]

ಇಕ್ಷ್ವಾಕುವಂಶದಲ್ಲಿ ಹುಟ್ಟಿದ ವೇಧಸ್ಸಿನ ಮಗನಾದ ಹರಿಶ್ಚಂದ್ರನಿಗೆ ನೂರುಜನ ಹೆಂಡತಿಯರಿದ್ದರೂ ಸಹ ಪುತ್ರೋತ್ಪತ್ತಿಯಾಗಲಿಲ್ಲ. ಒಂದುಸಲ ಹರಿಶ್ಚಂದ್ರನ ಮನೆಗೆ ಪರ್ವತನಾರದರೆಂಬ ಋಷಿಗಳು ಬಂದಾಗ ಹರಿಶ್ಚಂದ್ರನು ನಾರದನನ್ನು ಕುರಿತು ಎಲೈ ನಾರದನೇ, ವಿವೇಚನಾಶಕ್ತಿಯಿರುವ ಮಾನವನೂ ಅವನಂತೆಯೇ ಆ ಶಕ್ತಿಯಿಲ್ಲದಿರುವ ಇತರ ಪ್ರಾಣಿಗಳೂ ಸಹ ಸಂತಾನಕ್ಕಾಗಿ ಉತ್ಕಟವಾದ ಆಸೆಪಡುತ್ತವೆ. ಸಂತಾನೋತ್ಪತ್ತಿಯಿಂದ ಆಗತಕ್ಕ ಲಾಭವೇನು ? ಎಂದು ಕೇಳಿದನು.

ಹೀಗೆ ಒಂದು ಮಾತಿನಲ್ಲಿ ಹರಿಶ್ಚಂದ್ರನು ಕೇಳಿದ ಪ್ರಶ್ನೆಗೆ ನಾರದನು ಮುಂದೆ ವರ್ಣಿತವಾದಂತೆ ಹತ್ತು ವಾಕ್ಯಗಳಲ್ಲಿ ಉತ್ತರವನ್ನು ಹೇಳುವನು—

(೧) ತಂದೆಯಾದವನು ತನಗೆ ಹುಟ್ಟಿದ ಮಗನ ಮುಖದರ್ಶನದಿಂದ ಅನುಭವಿಸುವ ಆನಂದದ ಜೊತೆಯಲ್ಲಿ ಆ ಮಗನ ಮೂಲಕ ತನ್ನ ಪಿತೃಋಣವನ್ನೂ ತೀರಿಸಿ ಅಮೃತತ್ವವನ್ನು ಹೊಂದುತ್ತಾನೆ.

(೨) ಮಗನನ್ನು ಪಡೆಯುವ ತಂದೆಯ ಸಂತೋಷವು ಪೃಥ್ವಿಯಿಂದ ಸಿಕ್ಕುವ ಭೋಗಕ್ಕಿಂತಲೂ ಅಧಿಕವಾಗುದು. ಅಗ್ನಿಯಿಂದಾಗತಕ್ಕ ಉಪಕಾರಕ್ಕಿಂತಲೂ ಹೆಚ್ಚಿನದು. ಮತ್ತು ಜಲದಿಂದಾಗತಕ್ಕ ಪ್ರಯೋಜನಕ್ಕಿಂತಲೂ ಮೀರಿದುದು. ಈ ಎಲ್ಲಾ ಭೋಗಗಳಿಗಿಂತಲೂ ಪುತ್ರಪ್ರಾಪ್ತಿಯಿಂದಾಗುವ ಭೋಗವು ಅತ್ಯಧಿಕವಾದುದು.

(೩) ಪುತ್ರನ ಮೂಲಕ ತಂದೆಯಾದವನು ಅನೇಕ ದೊಡ್ಡ ದೊಡ್ಡ ಆಪತ್ತುಗಳನ್ನು ದಾಟಿದ್ದಾನೆ. ತಂದೆಯಾದವನು ತನ್ನಲ್ಲಿ ತಾನೇ ಪುತ್ರರೂಪದಿಂದ ಹುಟ್ಟುವುದರಿಂದ ಆಹಾರಸಾಮಗ್ರಿಗಳನ್ನು ಮುಂಜಾಗ್ರತೆಯಾಗಿಯೇ ಸಿದ್ಧಮಾಡಿಕೊಂಡಿರುವ ದೋಣಿಯು, ಮನುಷ್ಯನನ್ನು ನದಿ ಅಥವಾ ಸಾಗರಗಳ ಮೇಲೆ ದಾಟಿಸುವಂತೆ ತಂದೆಯನ್ನು ಮಗನಾದವನು ಸಂಸಾರಸಾಗರದ ಐಹಿಕ ಮತ್ತು ಆಮುಷ್ಮಿಕವಾದ ದುಃಖಗಳಿಂದ ಪಾರುಮಾಡುತ್ತಾನೆ.

(೪) ಪುತ್ರಸಂತಾನವಿಲ್ಲದಿರುವ ಗಾರ್ಹಸ್ಥ್ಯಜೀವನದಿಂದೇನು ಪ್ರಯೋಜನ ? ಬ್ರಹ್ಮಚರ್ಯವೇತಕ್ಕೆ ? ವಾನಪ್ರಸ್ಥಾಶ್ರಮವೇತಕ್ಕೆ ? ಪರಿವ್ರಾಜಕನೇತಕ್ಕಾಗಬೇಕು ? ಇವುಗಳಿಂದೇನು ಪ್ರಯೋಜನ ? **ಎಲೈ ಬ್ರಾಹ್ಮಣೋತ್ತಮರೇ, ಸಂತಾನವನ್ನಪೇಕ್ಷಿಸಿರಿ** ಎಂಬುದಾಗಿ ವೈದಿಕಕರ್ಮಾಚರಣೆಗಾಗಿ ದಾಂಪತ್ಯಜೀವನವನ್ನು ತ್ಯಾಗಮಾಡತಕ್ಕ ಜನರನ್ನು ಕುರಿತು ಲೋಕವು ಹೇಳುತ್ತದೆ.

(೫) ಅನ್ನವು ಜೀವವನ್ನು ರಕ್ಷಿಸುತ್ತದೆ. ಬಟ್ಟೆಗಳು ಚಳಿಯಿಂದ ಕಾಪಾಡುತ್ತವೆ. ಚಿನ್ನವು ಆಭರಣದ ಪ್ರಯೋಜನವನ್ನು ಕೊಡುತ್ತದೆ. ವಿವಾಹಾದಿಗಳು ಗೋರೂಪದ ಐಶ್ವರ್ಯವನ್ನು ತರುತ್ತದೆ. ಭಾರ್ಯೆಯು ಸುಹೃತ್ತಾಗುತ್ತಾಳೆ. ಮಗಳು ಪ್ರೀತಿಪಾತ್ರಳಾಗುತ್ತಾಳೆ. ಆದರೆ ಪುತ್ರನೊಬ್ಬನು ಮಾತ್ರ ಅತ್ಯುತ್ತಮವಾದ ದೇವಲೋಕದಲ್ಲಿ ಆತ್ಮಪ್ರಕಾಶಕನಾದ ದೀಪವಾಗಿ ಬೆಳಗುತ್ತಾನೆ.

(೬) ಪತಿಯು ಹೆಂಡತಿಯಲ್ಲಿ ಬೀಜದ ರೂಪದಲ್ಲಿ ಪ್ರವೇಶಿಸುತ್ತಾನೆ. ಬೀಜವು ಗರ್ಭದ ರೂಪಕ್ಕೆ ಪರಿವರ್ತಿತವಾಗುವಾಗ ಅವಳನ್ನು ತಾಯಿಯಾಗಿ ಮಾಡುತ್ತಾನೆ. ಅನಂತರ ಅವಳಿಂದ ಪುನರುತ್ಪನ್ನನಾಗಿ ಹತ್ತನೆಯ ತಿಂಗಳಲ್ಲಿ ಜನಿಸುತ್ತಾನೆ.

(೭) ಹೆಂಡತಿಯ ಗರ್ಭದಲ್ಲಿ ಪತಿಯು ಜನಿಸಿದಾಗ ಮಾತ್ರ ಅವಳು ನಿಜವಾಗಿಯೂ **'ಜಾಯಾ'** ಎಂಬ ಅನ್ವರ್ಥನಾಮವನ್ನು ಪಡೆಯುತ್ತಾಳೆ. ಅವಳಲ್ಲಿ ಉಪ್ತವಾದ ಬೀಜವನ್ನು ಅವಳು ಪುತ್ರರೂಪದಲ್ಲಿ ಬೆಳೆಸಿ ಅದನ್ನು ಪ್ರಕಾಶಿಸುವಂತೆ ಮಾಡಿ ಅಂದಗೊಳಿಸುತ್ತಾಳೆ.

(೮) ದೇವತೆಗಳೂ ಮತ್ತು ಋಷಿಗಳೂ ಸಹ ಜಾಯೆಯಾದವಳಿಗೆ ಅತ್ಯುತ್ತಮವಾದ ಕಾಂತಿಯನ್ನನು ಗ್ರಹಿಸಿದ್ದಾರೆ. ಅನಂತರ ದೇವತೆಗಳು ಮಾನವರನ್ನು ಕುರಿತು **'ಇವಳು ನಿಮ್ಮ ಜನನಿಯಾಗುತ್ತಾಳೆ'** ಎಂದು ಪ್ರಕಟಿಸಿದ್ದಾರೆ.

(೯) ಸಂತಾನವಿಲ್ಲದವನಿಗೆ ಶಾಶ್ವತವಾದ ಸ್ಥಿತಿಯಿಲ್ಲ ಎಂಬುದನ್ನು ಪಶ್ವಾದಿಗಳೂ ತಿಳಿದು ಅವುಗಳಲ್ಲಿ ಸ್ವಂತ ಗಂಡು ಮರಿಯೂ ಸಹ ತಾಯಿಯನ್ನಾಗಲಿ ಅಥವಾ ಸಹೋದರಿಯನ್ನಾಗಲಿ ಧರ್ಷಿಸುತ್ತದೆ

(೧೦) ಇದು ಪುತ್ರಸಂತಾನವುಳ್ಳವರು ದುಃಖರಹಿತರಾಗಿ ತಿರುಗಾಡುವ ದಾರಿ. ಪಶುಪಕ್ಷ್ಯಾದಿಗಳಿಗೂ ಸಹ ಇದು ಗೊತ್ತು ಎಂಬುದಾಗಿ ಪುತ್ರಸಂತಾನದ ಪ್ರಶಂಸೆಯನ್ನು ಮಾಡಿದನು.

[ಹರಿಶ್ಚಂದ್ರನಿಗೆ ಪುತ್ರೋತ್ಪತ್ತಿಯಾಗುವುದು. ವರುಣನು ಪುನಃ ಪುನಃ ಬಂದು ಅವನ ಮಗನನ್ನು ತನಗೆ ಯಜ್ಞದಲ್ಲಿ ಆಹುತಿಯನ್ನಾಗಿ ಕೊಡಬೇಕೆಂದು ನಿರ್ಬಂಧಿಸುವುದು. ಆದರೆ ಹರಿಶ್ಚಂದ್ರನು ಬೇರೆ ಬೇರೆ ಕಾರಣಗಳನ್ನು ಮುಂದೆಮಾಡಿ ಯಜ್ಞವನ್ನು ಮುಂದಕ್ಕೆ ಹಾಕಿ ನುಣುಚಿಕೊಳ್ಳುವುದು.]

ಅನಂತರ ನಾರದನು—ವರುಣನಲ್ಲಿಗೆ ಹೋಗಿ ನಿನಗೆ ಒಬ್ಬ ಪುತ್ರನನ್ನನುಗ್ರಹಿಸುವಂತೆ ಪ್ರಾರ್ಥಿಸು. ಮತ್ತು ಮಗನು ಹುಟ್ಟಿದನಂತರ ಅವನಿಗೇ ಪುನಃ ಯಜ್ಞದಲ್ಲಿ ಆಹುತಿಯಾಗಿ ಅರ್ಪಿಸುವಂತೆ ಭರವಸೆ ಕೊಡು ಎಂದು ಹರಿಶ್ಚಂದ್ರನಿಗೆ ಸಲಹೆಯನ್ನು ಕೊಟ್ಟನು. ಹರಿಶ್ಚಂದ್ರನು ಅದೇಪ್ರಕಾರ ವರುಣನಲ್ಲಿಗೆ ಹೋಗಿ ನನಗೆ ಒಬ್ಬ ಪುತ್ರನನ್ನನುಗ್ರಹಿಸು. ಅವನನ್ನು ನಿನಗೆ ಆಹುತಿಯನ್ನಾಗಿ ಕೊಡುತ್ತೇನೆ. ಎಂದು ಪ್ರಾರ್ಥಿಸಿದನು. ಕೂಡಲೇ ರೋಹಿತನೆಂಬ ಮಗನು ಹುಟ್ಟಿದನು. ವರುಣನು ಬಂದು ನಿನಗೆ ಮಗನು ಹುಟ್ಟಿದ್ದಾನೆ. ಅವನನ್ನು ಆಹುತಿಯಾಗಿ ಕೊಡು ಎಂದನು. ಅದಕ್ಕೆ ಹರಿಶ್ಚಂದ್ರನು ಯಾವ ಪ್ರಾಣಿಗಳಾಗಲಿ, ಆಹುತಿಯಾಗಬೇಕಾದ ಅಧಿಕಾರ ಬರಬೇಕಾದರೆ ಹತ್ತು ದಿನಗಳು ಕಳೆಯಬೇಕು. ನನ್ನ ಮಗನಿಗೂ ಹತ್ತು ದಿನಗಳು ಕಳೆಯಲಿ. ಅನಂತರ ನಿನಗರ್ಪಿಸುತ್ತೇನೆ ಎಂದನು. ರೋಹಿತನಿಗೆ ಹತ್ತು ದಿನಗಳು ಕಳೆದನಂತರ ವರುಣನು ಬಂದು ಅವನನ್ನಪೇಕ್ಷಿಸಿದನು. ಆಗ ಹರಿಶ್ಚಂದ್ರನು ಯಾವ ಪ್ರಾಣಿಯನ್ನಾಗಲಿ, ಆಹುತಿಯಾಗಿ ಕೊಡಬೇಕಾದರೆ ಅದಕ್ಕೆ ದಂತೋತ್ಪತ್ತಿಯಾಗಬೇಕು, ನನ್ನ ಮಗನಿಗೂ ದಂತೋತ್ಪತ್ತಿಯಾದನಂತರ ಅರ್ಪಿಸುತ್ತೇನೆ ಎಂದನು. ರೋಹಿತನಿಗೆ ಹಲ್ಲು ಹುಟ್ಟಿದ ಮೇಲೆ ವರುಣನು ಬಂದು ಅವನನ್ನು ಅಪೇಕ್ಷಿಸಿದನು. ಆಗ ಹರಿಶ್ಚಂದ್ರನು ದಂತಪಾತವಾಗುವವರೆಗೂ ಯಾವ ಪ್ರಾಣಿಯನ್ನೂ ಆಹುತಿಯಾಗಿ ಕೊಡಕೂಡದು. ಇವನಿಗೂ ದಂತಪಾತವಾಗಲಿ ಎಂದನು. ವರುಣನು ಪುನಃ ಬಂದು, ರೋಹಿತನಿಗೆ ದಂತಪಾತವಾಗುತ್ತಿದೆ, ಅವನನ್ನು ಆಹುತಿಯಾಗಿ ಕೊಡೆಂದನು. ಹರಿಶ್ಚಂದ್ರನು ಅವನಿಗೆ ಪುನಃ ದಂತವು ಬೆಳೆಯುವವರೆಗೂ

ಅವಕಾಶವನ್ನು ಬೇಡಿದನು. ಅನಂತರ ವರುಣನು ಬಂದಾಗ ಯೋಧವಂಶದಲ್ಲಿ ಹುಟ್ಟಿದವನು ಯೋಧಕವಚವನ್ನು ತೊಡುವವರೆಗೂ ಆಹುತಿಯಾಗುವ ಅರ್ಹತೆ ಬರುವುದಿಲ್ಲ. ಅಲ್ಲಿಯವರೆಗೂ ತಡೆ ಎಂದನು. ಆ ಕಾಲವೂ ಬಂದು ವರುಣನು ರೋಹಿತನನ್ನು ಕಡ್ಡಾಯವಾಗಿ ಅಪೇಕ್ಷಿಸಿದಾಗ ಹರಿಶ್ಚಂದ್ರನು ಮಗನನ್ನು ಕರೆದು "ಮಗುವೇ, ನಿನ್ನನ್ನು ನನಗೆ ಅನುಗ್ರಹಿದ ವರುಣನಿಗೆ ಪುನಃ ನಿನ್ನನ್ನು ಆಹುತಿಯಾಗಿ ಕೊಡಬೇಕಾಗಿದೆ" ಎನ್ನಲು ರೋಹಿತನು "ಅದೆಲ್ಲಾ ಆಗುವುದಿಲ್ಲ" ಎಂದು ತನ್ನ ಧನುಸ್ಸನ್ನು ತೆಗೆದುಕೊಂಡು ನಿರ್ಜನವಾದ ಕಾಡೊಂದಕ್ಕೆ ತಲೆತಪ್ಪಿಸಿಕೊಂಡು ಓಡಿಹೋಗಿ ಅಲ್ಲಿ ಒಂದು ವರ್ಷ ಕಾಲ ಅಲೆದಾಡುತ್ತಿದ್ದನು.

[ರೋಹಿತನು ನಿಷ್ಪ್ರಯೋಜಕನಾಗಿ ಆರು ವರ್ಷಗಳ ಕಾಲ, ಕಾಡಿನಲ್ಲಿ ಅಲೆದುದು. ಅನಂತರ ತನಗೆ ಬದಲಾಗಿ ವರುಣನಿಗೆ ಆಹುತಿಕೊಡುವುದಕ್ಕಾಗಿ ಶುನಃಶೇಪನೆಂಬ ಒಬ್ಬ ಬ್ರಾಹ್ಮಣಪುತ್ರನನ್ನು ಅವನ ತಂದೆತಾಯಿಗಳಿಂದ ಬೆಲೆಗೆ ಕೊಂಡುದು.]

ರೋಹಿತನು ತಲೆತಪ್ಪಿಸಿಕೊಂಡು ಹೊರಟು ಹೋದನೇಲೆ ವರುಣನು ಹರಿಶ್ಚಂದ್ರನನ್ನು ಬಂಧಿಸಿದನು. ಹರಿಶ್ಚಂದ್ರನಿಗೆ ಮಹೋದರವು ಪ್ರಾಪ್ತವಾಯಿತು. ರೋಹಿತನು ಈ ವಾರ್ತೆಯನ್ನು ಕೇಳಿ ಕಾಡನ್ನು ಬಿಟ್ಟು ಒಂದು ಗ್ರಾಮಕ್ಕೆ ಬಂದಾಗ ಇಂದ್ರನು ಮನುಷ್ಯರೂಪದಿಂದ ಬಂದು ಅವನನ್ನು ಸಂಧಿಸಿ—ಎಲೈ ರೋಹಿತನೇ, ದೇಶಾಟನೆ ಮಾಡದವನಿಗೆ ಸುಖವಿಲ್ಲ. ಒಂದೇ ಜಾತಿಯ ಜನರ ನಡುವೆ ಬೆಳೆದರೆ ಎಂತಹ ಉತ್ತಮನಾದ ಪುರುಷನೂ ಸಹ ದುರ್ಮಾರ್ಗಕ್ಕೆ ಬಿದ್ದು ಕೆಡುತ್ತಾನೆ. ಆದ್ದರಿಂದ ನಿರ್ಜನವಾದ ಪ್ರದೇಶದಲ್ಲಿ ಸಂಚರಿಸು. ಈ ರೀತಿ ಪರ್ಯಟನೆ ಮಾಡುವ ಮನುಷ್ಯನಿಗೆ ಇಂದ್ರನು ಸ್ನೇಹಿತನಾಗುತ್ತಾನೆ. ನೀನೂ ಸಂಚರಿಸು ಎಂದು ಸಲಹೆಯನ್ನು ಕೊಟ್ಟನು

ರೋಹಿತನು—ಒಬ್ಬ ಬ್ರಾಹ್ಮಣನು ನನಗೆ ಪರ್ಯಟನೆಮಾಡು ಎಂದು ಸಲಹೆಯನ್ನು ಕೊಟ್ಟಿರುವನು ಎಂದು ತಿಳಿದು ಎರಡನೆಯ ವರ್ಷವೂ ಕಾಡಿನಲ್ಲಿ ಅಲೆದು ಅನಂತರ ಒಂದು ಗ್ರಾಮಕ್ಕೆ ಬರುತ್ತಿರುವಾಗ ಇಂದ್ರನು ಪುನಃ ಮನುಷ್ಯರೂಪದಲ್ಲಿ ಬಂದು ಪರ್ಯಟನೆಮಾಡುವನ ಮನುಷ್ಯನ ಪಾದಗಳು ಪುಷ್ಪರಸಕ್ಕೆ ಸಮಾನವಾದವು. ಆ ಪುಷ್ಪದಿಂದ ಆತ್ಮನು ಬೆಳೆದು ಆರೋಗ್ಯರೂಪವಾದ ಫಲವನ್ನು ಪಡೆಯುತ್ತಾನೆ. ಅವನ ಪಾಪವೆಲ್ಲವೂ ಆ ಪರ್ಯಟನದ ಶ್ರಮದಿಂದ ಪರಿಹಾರವಾಗುತ್ತದೆ. ಆದುದರಿಂದ ಸಂಚರಿಸು ಎಂದನು.

ಆ ಮಾತಿನಂತೆಯೇ ರೋಹಿತನು ಮೂರನೆಯ ವರ್ಷವೂ ಸಂಚರಿಸಿ ಪುನಃ ಗ್ರಾಮವನ್ನು ಪ್ರವೇಶಿಸುವ ಸಮಯಕ್ಕೆ ಸರಿಯಾಗಿ ಇಂದ್ರನು ಬಂದು ಒಂದೇಕಡೆ ಕುಳಿತಿರುವ ಮನುಷ್ಯನ ಭಾಗ್ಯವು ಅವನಂತೆಯೇ ಒಂದೇಕಡೆ ಕುಳಿತಿರುತ್ತದೆ ಅವನು ಸಂಚರಿಸಿದರೆ ಅದೂ ಸಂಚರಿಸಿ ಬೆಳೆಯುತ್ತದೆ. ಆದುದರಿಂದ ಸಂಚರಿಸು ಎಂದನು.

ಹಾಗೆಯೇ ನಾಲ್ಕನೆಯ ವರ್ಷವೂ ಆಗಿ ಪುನಃ ಗ್ರಾಮಪ್ರವೇಶ ಕಾಲದಲ್ಲಿ ಇಂದ್ರನು ಬಂದು—ಚತುರ್ಯುಗಗಳ ಸ್ವರೂಪವನ್ನು ವರ್ಣಿಸಿ ರೋಹಿತನನ್ನು ಮತ್ತೆ ಸಂಚರಿಸುವಂತೆ ಹೇಳಿದನು. ರೋಹಿತನು ಐದನೇ ವರ್ಷವನ್ನೂ ಹಾಗೆಯೇ ಮುಗಿಸಿ ಗ್ರಾಮಕ್ಕೆ ಪ್ರವೇಶಿಸುವ ಕಾಲಕ್ಕೆ ಸರಿಯಾಗಿ ಇಂದ್ರನು ಬಂದು ಪರ್ಯಟನೆಮಾಡುವ ಮನುಷ್ಯನಿಗೆ ಮಧುವೂ, ಮಧುರವಾದ ಉದುಂಬರಫಲವೂ ಪ್ರಾಪ್ತವಾಗುತ್ತವೆ. ತನ್ನ ಸಂತತವಾದ ಸಂಚಾರದಿಂದಲೂ ಶ್ರಾಂತನಾಗದಿರುವ ಸೂರ್ಯನ ಕಾಂತಿಯನ್ನು ನೋಡು. ಅವನಂತೆಯೇ ನೀನೂ ಸಂಚರಿಸು ಎಂಬುದಾಗಿ ಹೇಳಿದನು.

ರೋಹಿತನು ಆರನೆಯ ವರ್ಷವೂ ಕಾಡಿನಲ್ಲಿ ಅಲೆದು ಅನಂತರ ಸುಯವಸ್ಸೆಂಬುವನ ಮಗನಾದ ಅಜೀಗರ್ತ ನೆಂಬ ಋಷಿಯನ್ನು ಸಂಧಿಸಿದನು. ಆ ಅಜೀಗರ್ತನು ದಾರಿದ್ರ್ಯದಿಂದ ಕಾಡಿನಲ್ಲಿ ಅನ್ನಾಹಾರವಿಲ್ಲದೇ ಉಪವಾಸ ಮಾಡುತ್ತಿದ್ದನು. ಅವನಿಗೆ ಶುನಃಪುಚ್ಛ, ಶುನಃಶೇಪ ಮತ್ತು ಶುನೋಲಾಂಗೂಲ ಎಂಬ ಮೂವರು ಮಕ್ಕಳಿದ್ದರು. ರೋಹಿತನು ಆ ಋಷಿಯಲ್ಲಿ ಹೋಗಿ—ಎಲೈ ಋಷಿಯೇ, ನಿನಗೆ ನೂರು ಗೋವುಗಳನ್ನು ಕೊಡುತ್ತೇನೆ. ನಿನ್ನ ಮೂವರು ಪುತ್ರರಲ್ಲಿ ಒಬ್ಬನನ್ನು ಕೊಡು. ನನಗೆ ಬದಲು ಅವನನ್ನು ವರುಣನಿಗೆ ಆಹುತಿಯನ್ನಾಗಿ ಕೊಟ್ಟು ನಾನು ತಪ್ಪಿಸಿಕೊಳ್ಳುತ್ತೇನೆ ಎನ್ನಲು ಅದಕ್ಕೆ ಅಜೀಗರ್ತನು ಒಪ್ಪಿಕೊಂಡನು, ದೊಡ್ಡ ಮಗನನ್ನು ಮಾತ್ರ ಕಳುಹಲಿಷ್ಟಪಡ ಲಿಲ್ಲ. ಅವನ ಹೆಂಡತಿಯು ಚಿಕ್ಕ ಮಗನನ್ನು ಬಿಡಲೊಪ್ಪಲಿಲ್ಲ. ಅವರಿಬ್ಬರನ್ನೂ ಬಿಟ್ಟು ಮಧ್ಯದವನೊಬ್ಬನು ಮಾತ್ರ ಸಿಕ್ಕಿಕೊಂಡನು. ಒಪ್ಪಂದದಂತೆ ರೋಹಿತನು ಅಜೀಗರ್ತನಿಗೆ ನೂರುಗೋವುಗಳನ್ನು ಕೊಟ್ಟು ಶುನಃಶೇಪನನ್ನು ತನ್ನ ತಂದೆಯ ಹತ್ತಿರ ಕರೆದುಕೊಂಡು ಬಂದು ತಾನು ಮಾಡಿದ ಏರ್ಪಾಡನ್ನು ತಿಳಿಸಿದನು. ಹರಿಶ್ಚಂದ್ರನು ವರುಣನಲ್ಲಿಗೆ ಹೋಗಿ—ನನ್ನ ಮಗನಿಗೆ ಬದಲಾಗಿ ಇವನನ್ನು ನಿನಗೆ ಆಹುತಿಯನ್ನಾಗಿ ಕೊಡುತ್ತೇನೆ ಎಂದು ಹೇಳಿದನು. ಅದಕ್ಕೆ ವರುಣನು ಕ್ಷತ್ರಿಯನಿಗಿಂತ ಬ್ರಾಹ್ಮಣನು ಅಧಿಕನಾದುದರಿಂದ ಹಾಗೆಯೇ ಆಗಬಹುದೆಂದೊಪ್ಪಿಕೊಂಡನು. ಅನಂತರ ವರುಣನು ದೊರೆಗೆ ರಾಜಸೂಯಯಾಗದ ವಿಧಿಯನ್ನು ವಿವರಿಸಿ ಯಾಗದ ದಿನ ಪಶುಯಜ್ಞಕ್ಕೆ ಬದಲಾಗಿ ನರಯಜ್ಞಕ್ಕೆ ಅಣಿಮಾಡಿದನು.

[ನಾಲ್ಕು ಮಂದಿ ಮಹಾಋಷಿಗಳು ಋತ್ವಿಕ್ಕುಗಳಾಗುವುದು—ಉದ್ದೇಶಿಸಿದ ನರಯಜ್ಞಕಾಲವು ಸಮೀಪಿಸು ವುದು—ಭೀಕರವಾದ ಮರಣದಿಂದ ತಪ್ಪಿಸುವಂತೆ ಶುನಃಶೇಪನು ದೇವತೆಗಳಿಗೆ ಮೊರೆಯಿಡುವುದು—ಅವನು ಮೊರೆಯಿಟ್ಟ ದೇವತೆಗಳು ಮತ್ತು ಉಚ್ಚರಿಸಿದ ಮಂತ್ರಗಳು.]

ಈ ನರಯಜ್ಞಕ್ಕೆ ವಿಶ್ವಾಮಿತ್ರನು ಹೋತೃವಾಗಿಯೂ ಜಮದಗ್ನಿಯು ಅಧ್ವರ್ಯುವಾಗಿಯೂ ವಸಿಷ್ಠನು ಬ್ರಹ್ಮನಾಗಿಯೂ ಆಯಾಸ್ಯನು ಉದ್ಗಾತೃವಾಗಿಯೂ ನಿಯಮಿತರಾದರು. ಯಜ್ಞಕ್ಕೆ ಪೂರ್ವಭಾವಿಯಾದ ವಿಧಿಯು ಜರುಗಿದ ಮೇಲೆ ಶುನಃಶೇಪನನ್ನು ಯೂಪಸ್ತಂಭಕ್ಕೆ ಕಟ್ಟಲು ಯಾರೂ ಒಪ್ಪಲಿಲ್ಲ. "ನನಗೆ ಇನ್ನೂ ನೂರು ಗೋವು ಗಳನ್ನು ಕೊಟ್ಟರೆ ನಾನು ಕಟ್ಟುತ್ತೇನೆ" ಎಂದು ಅಜೀಗರ್ತನು ಮುಂದೆ ಬಂದನು. ಅವರು ಹಾಗೆಯೇ ಆಗಲೆಂದು ಅವನಿಗೆ ನೂರು ಗೋವುಗಳನ್ನು ಕೊಟ್ಟರು. ಬಳಿಕ ಮಗನನ್ನು ಅಜೀಗರ್ತನು ಸ್ತಂಭಕ್ಕೆ ಕಟ್ಟಿದನು. ಅನಂತರ ಆಪ್ರೀಸೂಕ್ತವನ್ನು ಪಠಿಸಿ ಅಗ್ನಿಯನ್ನು ಅವನ ಸುತ್ತಲೂ ತೆಗೆದುಕೊಂಡುಹೋದಮೇಲೆ ಅವನನ್ನು ಕಡಿಯಲು ಯಾರೂ ಒಪ್ಪಲಿಲ್ಲ.—ನನಗೆ ಪುನಃ ನೂರುಗೋವುಗಳನ್ನು ಕೊಟ್ಟರೆ ನಾನೇ ಕಡಿಯುವೆನು ಎಂದು ಅಜೀಗರ್ತನು ಅದಕ್ಕೂ ಮುಂದೆ ಬಂದನು. ಹಾಗೆಯೇ ನೂರುಗೋವುಗಳನ್ನು ಸ್ವೀಕರಿಸಿ ತನ್ನ ಚಾಕುವನ್ನು ಹರಿತಮಾಡಿಕೊಂಡು ಪುತ್ರವಧೆಗೆ ಸಿದ್ಧನಾದನು. ಶುನಃಶೇಪನು ಎಚ್ಚತ್ತು ತನ್ನನ್ನು ಪಶುವಿನಂತೆ ಕಡಿಯುತ್ತಾರೆಂದರಿತು---ನಾನು ದೇವತೆ ಗಳಲ್ಲಿ ಮರೆಹೋಗುತ್ತೇನೆಂದು ಮನಸ್ಸುಮಾಡಿ "**ಕಸ್ಯ ನೂನಂ ಕತಮಸ್ಯ**" (ಋ. ಸಂ. ೧-೨೪-೧) ಎಂಬ ಸೂಕ್ತದಿಂದ ಪ್ರಜಾಪತಿಗೆ ಮೊರೆಯಿಟ್ಟನು. ಪ್ರಜಾಪತಿಯು ಆವಿರ್ಭೂತನಾಗಿ "ಅಗ್ನಿಯು ನಿಮಗೆಲ್ಲರಿಗೂ ಅತ್ಯಂತ ಸಮೀಪಸ್ಥನಾದ ದೇವತೆಯಾದುದರಿಂದ ಅವನನ್ನು ಮರೆಹೊಗು" ಎಂದು ಹೇಳಿದನು. ಅನಂತರ ಶುನಃಶೇಪನು "**ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ**" ಎಂಬ ಋಕ್ಕಿನಿಂದ ಅಗ್ನಿಪ್ರಾರ್ಥನೆಮಾಡಿದಾಗ ಅಗ್ನಿಯು ಬಂದು—ಸವಿತೃವು ಸಕಲಭೂತಗಳಿಗೂ ಒಡೆಯನಾದುದರಿಂದ ಅವನನ್ನು ಮರೆಹೊಗು ಎಂದನು. ಆಗ

ಅವನು—“ **ಅಭಿತ್ವಾದೇವಸವಿತಃ** ” ಎಂಬ ಋಕ್ಕಿನಿಂದ ಪ್ರಾರಂಭವಾಗುವ ಮೂರು ಋಕ್ಕುಗಳಿಂದ ಪ್ರಾರ್ಥಿಸಿದನು ಆಗ ಸವಿತೃವು ಬಂದು—“ನೀನು ಪ್ರಭುವಾದ ವರುಣನಿಂದ ಬಂಧಿತನಾದುದರಿಂದ ಅವನನ್ನು ಮರೆಹೊಗು” ಎಂದು ಹೇಳಿದನು. ಆಗ ಮೂವತ್ತೊಂದು ಋಕ್ಕುಗಳಿಂದ ವರುಣನನ್ನು ಪ್ರಾರ್ಥಿಸಿದಾಗ ವರುಣನು ಬಂದು—“ಅಗ್ನಿಯು ಸಕಲ ದೇವತೆಗಳಿಗೂ ಮುಖಪ್ರಾಯನು ಮತ್ತು ಅತ್ಯಂತ ದಯಾಶಾಲಿ–ನೀನು ಈಗ ಅವನನ್ನು ಪ್ರಾರ್ಥಿಸಿದರೆ ನಾವೆಲ್ಲ ನಿನ್ನ ಬಂಧನವನ್ನು ಬಿಡಿಸುವೆವು” ಎಂದನು. ಪುನಃ ಇಪ್ಪತ್ತೆರಡು ಋಕ್ಕುಗಳಿಂದ ಅಗ್ನಿಯನ್ನು ಪ್ರಾರ್ಥಿಸಲು ಅಗ್ನಿಯು ಬಂದು—“ವಿಶ್ವೇದೇವರನ್ನು ಪ್ರಾರ್ಥಿಸಿದರೆ ನಿನ್ನ ಬಿಡುಗಡೆಯಾಗುವುದು” ಎಂದನು. ಆಗ ಶುನಶ್ಶೇಪನು—**“ನಮೋ ಮಹದ್ಭ್ಯೋ ನಮ ಅರ್ಭಕೇಭ್ಯಃ”** (ಋ. ಸಂ. ೧–೨೭–೧೩) ಎಂದು ಅವರನ್ನು ಬೇಡಿದನು. ಅವರು ಬಂದು—“ಇಂದ್ರನು ಎಲ್ಲರಿಗಿಂತಲೂ ಅತ್ಯಂತ ಶಕ್ತನು; ಪ್ರಬಲನು; ಸಹಿಷ್ಣುವು–ದೇವತೆಗಳಿಗೆಲ್ಲಾ ಸತ್ಯಪ್ರಾಯನು–ವ್ಯವಹಾರಗಳನ್ನೆಲ್ಲಾ ಕೊನೆಗಾಣಿಸುವ ಉಪಾಯವನ್ನು ತಿಳಿದವನು. ಅವನನ್ನು ಪ್ರಾರ್ಥಿಸಿದರೆ ನಿನ್ನನ್ನು ಬಿಡುಗಡೆ ಮಾಡುವೆವು” ಎಂದರು. ಆಗ ಶುನಃಶೇಪನು **“ಯಚ್ಚಿದ್ಧಿ ಸತ್ಯ ಸೋಮಪಾ”** ಎಂಬ ಸೂಕ್ತದಿಂದಲೂ ಅದರ ಮುಂದಿನ ಸೂಕ್ತದ ಹದಿನೈದು ಋಕ್ಕುಗಳಿಂದಲೂ ಪ್ರಾರ್ಥಿದಾಗ ಇಂದ್ರನು ಬಂದು ಅವನ ಸ್ತೋತ್ರಕ್ಕೆ ಮೆಚ್ಚಿ ಅವನಿಗೆ ಒಂದು ಸುವರ್ಣನಿರ್ಮಿತವಾದ ರಥವನ್ನು ಅನುಗ್ರಹಿಸಿದನು ಅದನ್ನು ಶುನಃಶೇಪನು “ಶಶ್ವದಿಂದ್ರ” ಎಂಬ ಹೇಳಿ ಸ್ವೀಕರಿಸಿದನು. ಇಂದ್ರನು ಪುನಃ “ಅಶ್ವಿನೀದೇವತೆಗಳನ್ನು ಪ್ರಾರ್ಥಿಸು. ಅನಂತರ ನಾವು ನಿನ್ನನ್ನು ಬಿಡುಗಡೆ ಮಾಡುವೆವು” ಎಂದುಪದೇಶಿಸಿದನು. ಅಶ್ವಿನೀದೇವತೆಗಳು ಪ್ರಾರ್ಥಿತರಾಗಿ ಬಂದು “ಉಷೋದೇವಿಯನ್ನು ಪ್ರಾರ್ಥಿಸು. ನಾವು ನಿನ್ನನ್ನು ಬಿಡಿಸುವೆವು” ಎಂದರು. ಉಷೋದೇವಿಯು ಪ್ರಾರ್ಥನೆಯಾಗುತ್ತಿದ್ದಾಗ ಒಂದೊಂದಾಗಿ ಮೂರು ಋಕ್ಕುಗಳನ್ನು ಹೇಳುತ್ತಿದ್ದಾಗಲೇ ವರುಣನ ಬಂಧನದ ಪಾಶವು ಕ್ರಮಕ್ರಮವಾಗಿ ಸಡಿಲವಾಗಿ ಹರಿಶ್ಚಂದ್ರನ ಮಹೋದರವು ಗುಣವಾಗುತ್ತಾ ಬಂದಿತು. ಕೊನೆಯ ಋಕ್ಕನ್ನು ಉಚ್ಚರಿಸಿದಾಗ ಪಾಶವು ಸಂಪೂರ್ಣವಾಗಿ ತೆಗೆಯಲ್ಪಟ್ಟು ಹರಿಶ್ಚಂದ್ರನು ತನ್ನ ಆರೋಗ್ಯವನ್ನು ಹಿಂದಿನಂತೆ ಪಡೆದನು.

[ಶುನಃಶೇಪನ ವಿಮೋಚನೆ, ಅವನ ಅಂಜಃಸವರೂಪದ ಸೋಮರಸದ ನಿಷ್ಪೀಡನದ ಕ್ರಮ. ವಿಶ್ವಾಮಿತ್ರನು ಅವನನ್ನು ಮಗನನ್ನಾಗಿ ಅಂಗೀಕರಿಸುವುದು.]

ಅನಂತರ ಋತ್ವಿಕ್ಕುಗಳು ಶುನಃಶೇಪನನ್ನು ಕುರಿತು, “ಈಗ ನೀನೂ ನಮ್ಮಂತೆಯೇ ಋತ್ವಿಕ್ಕಾಗಿರುತ್ತೀಯೆ. ಈ ವಿಶೇಷ ವಿಧಿಯಲ್ಲಿ ನಮ್ಮಂತೆ ನೀನೂ ಭಾಗವಹಿಸು” ಎಂದರು. ಅನಂತರ ಅವನು ಅಂಜಃಸವರೂಪದಲ್ಲಿ ಅತಿ ಜಾಗ್ರತೆಯಾಗಿಯೇ ಆಗುವ ಸೋಮರಸನಿಷ್ಪೀಡನಕ್ರಮವನ್ನು ತಿಳಿದನು. ಅದನ್ನು ಹಿಂಡಿದ ಮೇಲೆ **“ಯಚ್ಚಿದ್ಧಿತ್ವಂ ಗೃಹೇ ಗೃಹೇ”** ಎಂಬ ನಾಲ್ಕು ಋಕ್ಕುಗಳನ್ನು ಪಠಿಸುತ್ತಾ ತೆಗೆದುಕೊಂಡು ಹೋದನು. **“ಉಚ್ಛಿಷ್ಟಂ ಚಮ್ವೋಃ”** ಎಂಬ ಋಕ್ಕನ್ನು ಉಚ್ಚರಿಸಿ ದ್ರೋಣಕಲಶದೊಳಕ್ಕೆ ತಂದನು. ಹರಿಶ್ಚಂದ್ರನ ಸ್ಪರ್ಶವಾದೊಡನೆ **“ಯತ್ರಗ್ರಾವಾ”** ಎಂಬ ಮಂತ್ರವನ್ನುಚ್ಚರಿಸಿ “ಸ್ವಾಹಾ”ಕಾರದೊಡನೆ ಹವಿಸ್ಸನ್ನರ್ಪಿಸಿದನು. ಅನಂತರ ಅವನು ಅವಭೃಥಕ್ಕೆ ಬೇಕಾದ ಸಲಕರಣಗಳೊಡನೆ ಬಂದು **“ತ್ವಂ ನೋ ಅಗ್ನೇ ವರುಣಸ್ಯ”** ಎಂಬ ಋಕ್ಕನ್ನು ಪಠಿಸಿ ಅವಭೃಥವನ್ನು ನೆರವೇರಿಸಿದನು. ಇದಾದ ಮೇಲೆ ಹರಿಶ್ಚಂದ್ರನನ್ನು ಆಹವನೀಯಾಗ್ನಿಯ ಹತ್ತಿರ ಕರೆದು **“ಶುನಶ್ಚಿಚ್ಛೇಪಂ ನಿದಿತಂ”** ಎಂಬ ಮಂತ್ರವನ್ನು ಪಠಿಸಿದನು.

ಕೊನೆಗೆ ಶುನಃಶೇಪನು ವಿಶ್ವಾಮಿತ್ರನ ಸಮೀಪಕ್ಕೆ ಹೋದನು. ಅಜೀಗರ್ತನೂ ಸಹ ಅವನನ್ನು ಸಮೀಪಿಸಿ "ಎಲೈ ಋಷಿಯೇ, ನನ್ನ ಮಗನನ್ನು ಹಿಂದಕ್ಕೆ ಕೊಡು" ಎನ್ನಲು, ವಿಶ್ವಾಮಿತ್ರನು—"ಅದಾಗುವುದಿಲ್ಲ; ಇವನನ್ನು ದೇವತೆಗಳು ನನಗೆ ದಾನಮಾಡಿದ್ದಾರೆ" ಎಂದನು. ಅಲ್ಲಿಂದ ಮೊದಲು ಅವನು ದೇವರಾತನೆಂಬ (ದೇವತೆಗಳಿಂದ ಕೊಡಲ್ಪಟ್ಟವನು) ವಿಶ್ವಾಮಿತ್ರನ ಮಗನಾದನು. (ಮುಂದೆ ಅವನಿಂದ ಕಾಪಿಲೇಯರೂ, ಬಭ್ರುಗಳೂ ಉತ್ಪನ್ನರಾದರು.) ಬಳಿಕ ಅಜೀಗರ್ತನು ಶುನಃಶೇಪನನ್ನು ಕುರಿತು "ಎಲೈ, ನೀನು ಅಜೀಗರ್ತನ ಸಂಸಾರಕ್ಕೆ ಸಂಬಂಧಪಟ್ಟ ಋಷಿಯಾಗಿದ್ದೀಯೆ. ಆದುದರಿಂದ ನಿನ್ನ ವಂಶವನ್ನು ಮರೆಯದೆ ಪುನಃ ನಮ್ಮಲ್ಲಿಗೆ ಬಾ" ಎಂದು ಕರೆಯಲು ಶುನಃಶೇಪನು ತಂದೆಗೆ ಎತ್ತರವಾಗಿ "ಚಂಡಾಲನೂ ಸಹ ಪುತ್ರವಧಕ್ಕಾಗಿ ಕೈಯಲ್ಲಿ ಕತ್ತಿಯನ್ನು ಹಿಡಿಯುವುದಿಲ್ಲ. ನಿನಗೆ ನನಗಿಂತಲೂ ಮುನ್ನೂರು ಗೋವುಗಳೇ ಹೆಚ್ಚಾದವು. ಅವಕ್ಕಾಗಿ ಆಸೆಪಟ್ಟು ನಿನ್ನ ಪುತ್ರನಾದ ನನ್ನನ್ನು ಕತ್ತರಿಸಲು ಕತ್ತಿಯನ್ನು ಹಿಡಿದೆ" ಎಂದು ಮೂದಲಿಸಿದಾಗ ಅಜೀಗರ್ತನು—"ಮಗುವೇ, ನಾನು ಹಿಂದೆ ಮಾಡಿದುದು ತಪ್ಪಾಯಿತು. ಈ ಪಾಪವನ್ನು ನೀಗಿಸಿಕೊಳ್ಳುತ್ತೇನೆ. ನಿನಗೂ ನೂರು ಗೋವುಗಳನ್ನು ಕೊಡುತ್ತೇನೆ. ಮನೆಗೆ ಬಾ" ಎಂದನು. ಅದಕ್ಕೆ ಬದಲಾಗಿ ಶುನಃಶೇಪನು—ಒಂದು ಸಲ ಈ ಪಾಪಕೃತ್ಯಕ್ಕೆ ಹೇಸದ ನೀನು ಇಂತಹ ಕೃತ್ಯವನ್ನು ಪುನಃ ಪುನಃ ಮಾಡುವುದಕ್ಕೂ ಹಿಂಜರಿಯುವುದಿಲ್ಲ. ನಿನ್ನ ಈ ಕೃತ್ಯಕ್ಕೆ ಸಮಾಧಾನವೇ ಇಲ್ಲ" ಎನ್ನಲಾಗಿ ವಿಶ್ವಾಮಿತ್ರನೂ ಸಹ—"ಹೌದು, ಈ ಕೃತ್ಯಕ್ಕೆ ಪ್ರಾಯಶ್ಚಿತ್ತವೇ ಇಲ್ಲ" ಎಂದನು.

ವಿಶ್ವಾಮಿತ್ರನು ಶುನಃಶೇಪನನ್ನು ಕುರಿತು "ನಿನ್ನ ವಧಕ್ಕಾಗಿ ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದಾಗ ಅಜೀಗರ್ತನು ಭೀಕರಸ್ವರೂಪನಾಗಿದ್ದನು. ಪುನಃ ಅವನ ಮಗನಾಗಬೇಡ. ನನ್ನ ಮನೆಗೆ ಬಂದು ನನ್ನ ಮಗನಾಗಿರು" ಎಂದನು. ಆಗ ಶುನಃಶೇಪನು—"ಅಂಗಿರಸ್ಸಿನ ವಂಶದಲ್ಲಿ ಹುಟ್ಟಿದವನು ವಿಶ್ವಾಮಿತ್ರನ ಬಂಧುವಾಗುವುದು ಹೇಗೆ?" ಎಂದು ಸಂಶಯವನ್ನು ವ್ಯಕ್ತಪಡಿಸಿದಾಗ ವಿಶ್ವಾಮಿತ್ರನು ತನ್ನ ಮಕ್ಕಳನ್ನೆಲ್ಲಾ ಕರೆದು—ಎಲೈ ಮಧುಚ್ಛಂದಾದಿಗಳೇ, ಇಂದಿನಿಂದ ನಿಮಗೆ ನನ್ನ ಆಸ್ತಿಯಲ್ಲಿ ಜ್ಯೇಷ್ಠತ್ವದ ಅಧಿಕಾರವಿರುವುದಿಲ್ಲ. ಇಂದಿನಿಂದ ಅದೆಲ್ಲವೂ ಶುನಃಶೇಪನದು. ಅವನೇ ಎಲ್ಲರಿಗೂ ಜ್ಯೇಷ್ಠನು ಎಂದು ಪ್ರಕಟಿಸಿದನು.

[ವಿಶ್ವಾಮಿತ್ರನ ಸಂತತಿ. ಶುನಃಶೇಪನ ಕಥೆಯನ್ನು ಪಠಿಸಿದವರಿಗೆ ಪ್ರತಿಫಲ.]

ವಿಶ್ವಾಮಿತ್ರಋಷಿಗೆ ನೂರುಜನ ಮಕ್ಕಳಿದ್ದರು. ಮಧುಚ್ಛಂದನಿಗೆ ಹಿರಿಯವರು ಐವತ್ತು ಜನವೂ ಮತ್ತು ಉಳಿದವರು ಕಿರಿಯವರೂ ಆಗಿದ್ದರು. ವಿಶ್ವಾಮಿತ್ರನ ಆಸ್ತಿಗೆ ಶುನಃಶೇಪನು ಹಕ್ಕುದಾರನಾಗಿರುವುದು ಹಿರಿಯ ಐವತ್ತು ಜನಕ್ಕೆ ಒಪ್ಪಿಗೆಯಾಗಲಿಲ್ಲ. ಅವರು ವಿರೋಧಿಸಿದಾಗ ವಿಶ್ವಾಮಿತ್ರನು ಅವರಿಗೆ ನೀಚಸಂತತಿಯುಂಟಾಗಲೆಂದು ಶಪಿಸಿದನು. ಆ ಶಾಪಕ್ಕೆ ಪ್ರತಿಫಲವಾಗಿ ಶಬರ, ಪುಲಿಂದರಾದಿಯಾಗಿ ನಾನಾ ನೀಚ ಕುಲಗಳು ಹುಟ್ಟಿದವು. ಮಧುಚ್ಛಂದಾದಿ ಕಿರಿಯ ಐವತ್ತು ಜನವೂ ವಿಶ್ವಾಮಿತ್ರನ ತೀರ್ಮಾನಕ್ಕೆ ತಲೆಬಾಗಿ "ಎಲೈ ಶುನಃಶೇಪನೇ, ನಮ್ಮ ತಂದೆಯ ಅಪ್ಪಣೆಗೆ ನಾವು ಯಾವಾಗಲೂ ವಿಧೇಯರಾಗಿ, ಅವನ ಇಷ್ಟದಂತೆ ನಿನಗೆ ಅಗ್ರಮರ್ಯಾದೆಯನ್ನು ಸಲ್ಲಿಸುತ್ತೇವೆ" ಎಂದು ಅವನನ್ನು ಆದರಿಸಿದರು. ವಿಶ್ವಾಮಿತ್ರನು ಅವರ ವಿಧೇಯತೆಗೆ ಸಂತೋಷಪಟ್ಟು, "ಎಲೈ ಮಕ್ಕಳೇ, ನೀವು ನನ್ನ ಇಷ್ಟಕ್ಕೆ ಸಮ್ಮತಿಸಿ ನನ್ನನ್ನು ಗೌರವಿಸಿ ನನ್ನ ಪಿತೃತ್ವವನ್ನು ಸಾರ್ಥಕಪಡಿಸಿದುದಕ್ಕಾಗಿ ನಿಮಗೆ ಪ್ರಭೂತವಾದ ಗೋವುಗಳೂ, ಸಂತತಿಗಳೂ ಪ್ರತಿಫಲಗಳಾಗಲಿ. "ಈ ದೇವರಾತನನ್ನು ನಿಮ್ಮ ನಾಯಕನನ್ನಾಗಿಟ್ಟುಕೊಂಡು

ಜಯಶಾಲಿಗಳಾಗಿ ಜಹ್ನುಸಂತತಿಯ ಮೇಲ್ಮೆಯನ್ನೂ, ಗಾಧಿವಂಶದ ದಿವ್ಯಜ್ಞಾನವನ್ನೂ ಹೊಂದಿ ಈ ದೇವರಾತನು ಋಷಿಯೆಂದು ಪ್ರಖ್ಯಾತನಾಗಿದ್ದಾನೆ. ಈ ಋಷಿಯ ನಾಯಕತ್ವದಲ್ಲಿ ನಡೆಯುವ ನೀವೂ ನಿಮ್ಮ ಮಕ್ಕಳೂ ಸಕಲ ಸಂಪತ್ತನ್ನೂ ಹೊಂದಿರಿ" ಎಂಬುದಾಗಿ ಆಶೀರ್ವಾದಮಾಡಿದನು.

ಈ ಶುನಃಶೇಪನ ಕಥೆಯು ನೂರಕ್ಕಿಂತಲೂ ಅಧಿಕವಾದ ಋಕ್ಕುಗಳಿಂದ ವರ್ಣಿತವಾಗಿದೆ. ರಾಜನಿಗೆ ಪವಿತ್ರವಾದ ನೀರನ್ನು ಪ್ರೋಕ್ಷಿಸಿದನಂತರ ಸ್ವರ್ಣಕಸೂತಿಯಿಂದ ಅಲಂಕೃತವಾದ ರತ್ನಗಂಬಳಿಯ ಮೇಲೆ ಕುಳಿತು ಹೋತೃವು ಇದನ್ನು ಪಠಿಸಿ ಹೇಳುತ್ತಾನೆ. "ಓಂ ತಥಾ" ಎಂದು ಪ್ರತ್ಯಂಗೀಕಾರಮಾಡುವ ಅಧ್ವರ್ಯುವೂ ಸಹ ಅದೇ ರೀತಿ ಕುಳಿತು ರಾಜನ ಪ್ರಭಾವವನ್ನು ಹೆಚ್ಚುಮಾಡುತ್ತಾನೆ. ಅಪೌರುಷೇಯಗಳಾದ ಋಕ್ಕುಗಳಿಗೆ ಸಂಬಂಧಿಸಿದಂತೆ "ಓಂ" ಎಂಬ ದಿವ್ಯವಾಣಿಯಿಂದಲೂ "ತಥಾ" ಎಂಬ ಮಾನುಷವಾದ ಅಂಗೀಕಾರದಿಂದಲೂ ಸಹ ಅಧ್ವರ್ಯುವು ರಾಜನನ್ನು ಪಾಪರಹಿತನನ್ನಾಗಿ ಮಾಡುತ್ತಾನೆ. ಆದುದರಿಂದ ಜಯಶಾಲಿಯಾಗಬೇಕೆಂದು ಅಪೇಕ್ಷಿಸುವ ಪ್ರತಿಯೊಬ್ಬ ರಾಜನೂ ಸಹ ತನ್ನ ಜಯಕ್ಕೂ ಅದರ ಅನುಷಂಗವಾಗಿ ಉಂಟಾಗತಕ್ಕ ಪಾಪಕೃತ್ಯಗಳ ಶುದ್ಧಿಗೂ ಸಹ ಈ ಶುನಃಶೇಪಾಖ್ಯಾನವನ್ನು ಶ್ರವಣಮಾಡಬೇಕು. ಈ ಕಥೆಯನ್ನು ಪಠಿಸತಕ್ಕವರಿಗೆ ಸಹಸ್ರಗೋವುಗಳನ್ನೂ—ಅವಶ್ಯವಾದ ಅಂಗೀಕಾರವಚನವನ್ನು ಕೊಟ್ಟು, ದೊರೆಗೆ ಪ್ರೋತ್ಸಾಹಿಸತಕ್ಕ ಅಧ್ವರ್ಯುವಿಗೆ ನೂರುಗೋವುಗಳನ್ನೂ ಕೊಡಬೇಕು. ಹೋತೃವಿಗೆ ಉತ್ತಮವಾದ ಕುದುರೆಗಳನ್ನು ಕಟ್ಟಿದ ಬೆಳ್ಳಿಯ ರಥವನ್ನು ಕೊಡಬೇಕು. ಪುತ್ರಸಂತಾನವಿಲ್ಲದವರು ಈ ಉಪಾಖ್ಯಾನವನ್ನು ಪಠಿಸಿದರೂ ಶ್ರವಣಮಾಡಿದರೂ ಅವರು ನಿಶ್ಚಯವಾಗಿಯೂ ಪುತ್ರರನ್ನು ಪಡೆಯುತ್ತಾರೆ.

**॥ ಶುನಶ್ಶೇಪಾಖ್ಯಾನವು ಮುಗಿದುದು ॥**

ಈ ಶುನಶ್ಶೇಪನ ಚರಿತ್ರೆಯು ವಾಲ್ಮೀಕಿ ರಾಮಾಯಣದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿದೆ. ಅಲ್ಲಿ ಶುನಶ್ಶೇಪನು ಋಚೀಕನೆಂಬ ಋಷಿಯ ಪುತ್ರನೆಂದು ಹೇಳಿದೆ. ಮತ್ತು ಹರಿಶ್ಚಂದ್ರನೆಂಬ ರಾಜನ ಹೆಸರಿಗೆ ಬದಲಾಗಿ ಅಯೋಧ್ಯಾಧಿಪತಿಯಾದ ಅಂಬರೀಷನೆಂಬ ರಾಜನ ಹೆಸರಿದೆ. ಭಾಗವತ ಮತ್ತು ವಿಷ್ಣುಪುರಾಣಗಳಲ್ಲಿಯೂ ಈ ಉಪಾಖ್ಯಾನದ ವಿವರಣೆ ಇದೆ. ಆದರೆ ಪುರಾಣಾದಿಗಳಲ್ಲಿ ಈ ಉಪಾಖ್ಯಾನವು ಅಲ್ಪಸ್ವಲ್ಪ ವ್ಯತ್ಯಾಸಗಳಿಂದ ಕೂಡಿದೆ. ಮುಖ್ಯ ವಿಷಯದಲ್ಲಿ ಇದರಂತೆಯೇ ಇದೆ.

**ಕಸ್ಯ ದೇವಸ್ಯ ಅಥವಾ ಕಸ್ಯ ಕತಮಸ್ಯ ದೇವಸ್ಯ**—ಯಾವ ದೇವನ ಎಂತಹ ದೇವನ ಎಂದರ್ಥವು. ಇಲ್ಲಿ ಶುನಶ್ಶೇಪನು ಯಜ್ಞಪಶುವನ್ನು ಕಟ್ಟುವ ಯೂಪಸ್ತಂಭದಿಂದ ಬಿಡುಗಡೆಯಾಗಲು ಯಾವ ದೇವನನ್ನು ಮರೆಹೋಗಬೇಕೆಂದು (ಅಥವಾ ಸ್ತುತಿಸಬೇಕೆಂದು) ತನ್ನಲ್ಲಿ ತಾನೇ ಆಲೋಚಿಸುತ್ತಾ ಈ ಋಕ್ಕನ್ನು ಪಠಿಸುವನು. **ಕಸ್ಯ** ಎಂಬ ಶಬ್ದಕ್ಕೆ ಯಾವ ಎಂಬ ಸಾಮಾನ್ಯಾರ್ಥವಿದ್ದರೂ ಇಲ್ಲಿ ಈ ಶಬ್ದಕ್ಕೆ ಪ್ರಜಾಪತಿಯೆಂದೂ ಅರ್ಥವಿರುವುದರಿಂದ ಭಾಷ್ಯಕಾರರು ಅದನ್ನು ವಿವರಿಸುತ್ತಾ—ಶುನಶ್ಶೇಪನು ಮೊದಲು ಪ್ರಜಾಪತಿಯ ನೆರವನ್ನು ಬೇಡುವನೆಂದು ಹೇಳಿರುವರು. ಈ ವಿಷಯದಲ್ಲಿ—**ಹಂತಾಹಂ ದೇವತಾ ಉಪಧಾವಾಮೀತಿ ಸ ಪ್ರಜಾಪತಿಮೇವ ಪ್ರಥಮಂ ದೇವತಾನಾಮುಪಸಸಾರ** । (ಐ. ಬ್ರಾ. ೭-೧೬) ಎಂಬ ಐತರೇಯ ಬ್ರಾಹ್ಮಣ ವಾಕ್ಯವನ್ನು ಉದಹರಿಸಿರುವರು.

**ಅಮೃತಾನಾಂ—ಮರಣರಹಿತಾನಾಂ ದೇವಾನಾಂ ।** ಮರಣರಹಿತರಾದ ದೇವತೆಗಳ.

**ಮಹ್ಯೈ ಅದಿತಯೇ**— ಗೌಃ ಗ್ಮಾ ಮೊದಲಾದ ಇಪ್ಪತ್ತೊಂದು ಪೃಥಿವೀನಾಮಗಳ ಮಧ್ಯದಲ್ಲಿ **ಮಹೀ ಅದಿತಿಃ** ಎಂಬ ಶಬ್ದಗಳು ಪಠಿತವಾಗಿರುವುದರಿಂದ (ನಿ. ೧-೧) ಈ ಶಬ್ದಗಳಿಗೆ ಪೃಥಿವೀ ಎಂದು ಹೆಸರು. ಇಲ್ಲಿ ಎರಡು ಶಬ್ದಗಳೂ ಒಂದೇ ಅರ್ಥವನ್ನು ಸೂಚಿಸುವುದರಿಂದ ಮಹೀಶಬ್ದಕ್ಕೆ ವಿಸ್ತಾರವಾದ, ದೊಡ್ಡದಾದ ಎಂಬರ್ಥವನ್ನು ಹೇಳಬಹುದು.

**ಪುನರ್ದಾತ್, ಪಿತರಂ ಚ ದೃಶೇಯಂ ಮಾತರಂ ಚ**— ಯೂಪಸ್ತಂಭಕ್ಕೆ ಕಟ್ಟಲ್ಪಟ್ಟು ಪಶುಸ್ಥಾನದಲ್ಲಿ ಇದ್ದ ಶುನಃಶೇಪನು ತನಗೆ ಮರಣವು ಸನ್ನಿಹಿತವಾಗಿರುವುದೆಂದು ತಿಳಿದು ಭಯದಿಂದ ದಿಕ್ಕುಕಾಣದೆ— ಪುನಃ ನಾನು ಎಂದಿನಂತೆ ಭೂಮಿಗೆ ಸೇರಿದ ಪ್ರಾಣಿಯಾಗುವೆನು ಎಂದರೆ ಭೂಮಿಯಲ್ಲಿ ನಾನು ಮತ್ತೆ ಜೀವಿಸುವಂತೆ ಯಾವ ದೇವತೆಯು ಅನುಗ್ರಹಿಸುವನು ? ಮತ್ತೆ ನಾನು ಈ ಮೃತ್ಯುಪಾಶದಿಂದ ಬಿಡುಗಡೆಯಾಗಿ ನನ್ನ ತಂದೆತಾಯಿಗಳನ್ನು ಹೇಗೆ ನೋಡುವೆನು ? ಎಂದು ಪ್ರಲಾಪಿಸುತ್ತಿರುವನು. ತನ್ನ ಬಂಧವಿಮೋಚನೆಗಾಗಿ ಮುಂದಿನ ಋಕ್ಕಿನಲ್ಲಿ ಅಗ್ನಿಯನ್ನು ಪ್ರಾರ್ಥಿಸುವನು.

॥ ವ್ಯಾಕರಣಪ್ರಕ್ರಿಯ ॥

**ಕತಮಸ್ಯ—'ವಾಬಹೂನಾಂ ಜಾತಿಪರಿಪ್ರಶ್ನೇ ಡತಮಚ್'** (ಪಾ. ಸೂ. ೫-೩-೯೩) ಬಹುಸಂಖ್ಯಾಕಗಳ ಮಧ್ಯದಲ್ಲಿ ಒಂದರ ನಿರ್ಧಾರಣದಲ್ಲಿ, ಜಾತಿ ತೋರುವಾಗ ಕಿಮ್–ಯತ್–ತದ್ ಶಬ್ದಗಳ, ಪರಿಪ್ರಶ್ನೆ ತೋರುವಾಗ ಕಿಮ್ ಶಬ್ದದ ಮುಂದೆಯೂ ಡತಮಚ್ ಪ್ರತ್ಯಯ ಬರುವುದು. **'ಕಿಮಾದೀನಾಂ ದ್ವಿಬಹ್ವರ್ಥೇ ಪ್ರತ್ಯಯವಿಧಾನಾದುಪಾಧ್ಯಾನರ್ಥಕ್ಯಂ '** ಎಂಬಲ್ಲಿ **' ಪೂರ್ವಸೂತ್ರೇ ದ್ವಯೋರಿತಿ ಅತ್ರ ಸೂತ್ರೇ ಜಾತಿಪರಿಪ್ರಶ್ನೇ ಇತಿ ಚ ನ ಕರ್ತವ್ಯಮಿತಿಭಾವಃ '** ಎಂದು ಕೈಯಟಕಾರರು ಹೇಳಿರುವರು. ಆದ್ದರಿಂದ ಕತಮ ಏಷಾಂ ಪಾಚಕಃ, ಶೂರೋ-ದೇವದತ್ತಃ, ಎಂದು ಕ್ರಿಯಾ ಗುಣ ಸಂಜ್ಞೆಗಳು ತೋರುವಾಗಲೂ ಈ ಪ್ರತ್ಯಯ ಬರುವುದು. ಕಿಮ್+ಅತಮ— ಟಿ ಲೋಪ.

**ಅಮೃತಾನಾಂ—ನಞ್‌ಸುಭ್ಯಾ**—(ಪಾ. ಸೂ. ೬–೨–೧೭೨) ಎಂದು ಉತ್ತರಪದದ ಕಡೆಯ ವರ್ಣಕ್ಕೆ ಉದಾತ್ತ ಪ್ರಾಪ್ತವಾದರೆ **' ನಞೋ ಜರಮರಮಿತ್ರಮೃತಾಃ '** (ಪಾ. ಸೂ. ೬–೨–೧೧೬) ನಞ್‌ನ ಮುಂದಿರುವ ಉತ್ತರಪದಗಳಾದ ಜರ–ಮರ–ಮಿತ್ರ–ಮೃತ ಈ ಶಬ್ದಗಳ ಆದಿಯು ಬಹುವ್ರೀಹಿ ಸಮಾಸದಲ್ಲಿ ಉದಾತ್ತವಾಗುವುದು ಎಂದು ಉದಾತ್ತ.

**ಮನಾಮಹೇ—**ಮನ ಜ್ಞಾನೇ–ಧಾತು ದಿವಾದಿಗಣ. ಆದ್ದರಿಂದ ಶ್ಯನ್ ವಿಕರಣನ್ಯಾಯ್ಯ, ಆದರೂ ವ್ಯತ್ಯಸ್ತವಾತ ಶಪ್ ಬರುತ್ತೆ. **ಲಟ್**–ಉ–ಪು–ಬ–ಮಹಿಜ್–ಏತ್ವ, **' ಅಕೃತ್ಸಾರ್ವ '** (ಪಾ. ಸೂ. ೭–೪–೨೫) ಎಂದು ದೀರ್ಘ.

**ದಾತ್—**ಡುದಾಞ್ ದಾನೇ, ಲುಜ್ ಪ್ರ-ಪು-ಏ-ತಿಪ್-ಚ್ಲಿ-ಇದಕ್ಕೆ ಸಿಚ್ ದಾ+ಸ್–ತಿ, **'ಇತಶ್ಚ ಲೋಪಃ'** (ಪಾ. ಸೂ. ೩–೪–೯೭) ಇಲೋಪ, **ಗಾತಿಸ್ಥಾಘುಪಾಭೂಭ್ಯಃ ಸಿಚಃಪರಸ್ಮೈಪದೇಷು** (ಪಾ. ಸೂ. ೨-೪-೭೭)

ಗೈ-ಸ್ಥಾ-ದಾ-ಧಾ-ಪಾ-ಭೂ ಧಾತುಗಳ ಮುಂದಿರುವ ಸಿಚ್ ಗೆ ಲುಕ್ ಬರುವುದು ಎಂದು ಸಿಚ್ ಗೆ ಲುಕ್, ಅಡಾಗಮ ಛಂದಸ್ಸಾದ್ದರಿಂದ ಬರುವುದಿಲ್ಲ.

**ದೃಶೇಯಂ**—ದೃಶಿರ್ ಪ್ರೇಕ್ಷಣೇ ಧಾತು. ಆಶೀರ್ಲಿಙ್ ಉ-ಪು-ಏ-ಮಿಪ್-ಅಮ್ ಆದೇಶ. **'ದೃಶೇರಗ್ವಕ್ತವ್ಯಃ'** (ಪಾ ಮ. ೩-೧-೮೭-೩) ದೃಶ್ ಧಾತುವಿನ ಮುಂದೆ ಆಶೀರರ್ಥ ಲಿಙ್ ಪರದಲ್ಲಿದ್ದರೆ ಅ ಬರುವುದು ಎಂದು ಶಪ್ ಗೆ ಬದಲಾಗಿ ಅಕ್. ಅಕ್ ಕಿತ್ ಆದ್ದರಿಂದ ಲಘೂಪಧಗುಣ ಬರುವುದಿಲ್ಲ. **'ಲಿಙ್ಯಾಶಿಷ್ಯಙ್'** (ಪಾ. ಸೂ. ೩-೧-೮೬) ಛಂದಸ್ಸಿನಲ್ಲಿ ಆಶೀರ್ಲಿಙ್ ಪರದಲ್ಲಿದ್ದರೆ ಧಾತುವಿನ ಮುಂದೆ ಅಙ್ ಬರುತ್ತೆ ಎಂದು. ಅಙ್ ಬಂದರೆ **'ಋದೃಶೋಽಙಿ ಗುಣಃ'** (ಪಾ. ಸೂ. ೭-೪-೧೬) ಅಙ್ ಪರದಲ್ಲಿದ್ದರೆ ಋವರ್ಣಾಂತ ಧಾತು ದೃಶ್ ಧಾತುಗಳಿಗೆ ಗುಣ ಬರುತ್ತೆ ಎಂದು ಗುಣ ಬರಬೇಕಾಗುತ್ತೆ. ಯಾಸುಟ್ ಆಗಮ. ದೃಶ್+ಯಾಸ್+ಅಮ್-ಸಕಾರ ಲೋಪ. **'ಅತೋಯೇಯಃ'** (ಪಾ. ಸೂ. ೭-೨-೮೦) ಹ್ರಸ್ವಾಕಾರದ ಮುಂದಿರುವ ಸಾರ್ವಧಾತುಕಾವಯವವಾದ ಯಾ ಗೆ ಇಯ್ ಬರುವುದು ಎಂದು ಇಯ್-ಗುಣ. ॥ ೧ ॥

॥ ಸಂಹಿತಾಪಾಠಃ ॥

ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ ಮನಾಮಹೇ ಚಾರು
ದೇವಸ್ಯ ನಾಮ ।
ಸ ನೋ ಮಹ್ಯಾ ಅದಿತಯೇ ಪುನರ್ದಾತ್ಪಿತರಂ ಚ ದೃಶೇಯಂ
ಮಾತರಂ ಚ ॥ ೨ ॥

॥ ಪದಪಾಠಃ ॥

ಅಗ್ನೇಃ । ವಯಂ । ಪ್ರಥಮಸ್ಯ । ಅಮೃತಾನಾಂ । ಮನಾಮಹೇ । ಚಾರು ।
ದೇವಸ್ಯ । ನಾಮ ।
ಸಃ । ನಃ । ಮಹ್ಯೈ । ಅದಿತಯೇ । ಪುನಃ । ದಾತ್ । ಪಿತರಂ । ಚ । ದೃಶೇಯಂ ।
ಮಾತರಂ । ಚ ॥ ೨ ॥

॥ ಸಾಯಣಭಾಷ್ಯಂ ॥

**ಇತ್ಥಂ ಪ್ರಥಮಯರ್ಚಾ ವಿಚಿಕಿತ್ಸಾಂ ಕೃತ್ವಾ ಪ್ರಜಾಪತೇಃ ಸಕಾಶಾತ್ತಂ ದೇವಮಗ್ನಿಂ ನಿಶ್ಚಿತ್ಯಾನಯಾ ತುಷ್ಟಾವ । ತಥಾ ಚ ಶ್ರೂಯತೇ । ತಂ ಪ್ರಜಾಪತಿರುವಾಚಾಗ್ನಿರ್ವೈ ದೇವಾನಾಂ ನೇದಿಷ್ಠಸ್ತಮೇವೋಪಧಾವೇತಿ ಸೋಽಗ್ನಿಮುಪಸಸಾರಾಗ್ನೇರ್ವಯಂ ಪ್ರಥಮಸ್ಯಾಮೃತಾನಾಮಿತ್ಯೇತಯರ್ಚಾ । ಐ. ಬ್ರಾ. ೭-೧೬ । ಇತಿ । ಪೂರ್ವವದ್ಯೋಜನಾ । ದಾದ್ದದಾತು ದೃಶೇಯಂ ಪಶ್ಯಾನೀತ್ಯೇವಮಾಶೀಃಪರತ್ವೇನ ಪದದ್ವಯಂ ಯೋಜ್ಯಂ ॥**

॥ ಪ್ರತಿಪದಾರ್ಥ ॥

**ವಯಂ**—(ಶುನಃಶೇಪರೆಂಬ) ನಾವು । **ಅಮೃತಾನಾಂ**—ಮರಣರಹಿತರಾದ (ದೇವತೆಗಳಲ್ಲಿ) । **ಪ್ರಥಮಸ್ಯ**—ಮೊದಲನೆಯವನಾದ । **ದೇವಸ್ಯ**—ದೇವತೆಯಾದ । **ಅಗ್ನೇಃ**—ಅಗ್ನಿಯ । **ಚಾರು**—ಮಂಗಳಕರವಾದ । **ನಾಮ**—ಹೆಸರನ್ನು । **ಮನಾಮಹೇ**—ಉಚ್ಚರಿಸೋಣ । **ಸಃ**—ಆ ಅಗ್ನಿದೇವತೆಯು । **ನಃ**—(ಮರಣೋನ್ಮುಖರಾದ) ನಮ್ಮನ್ನು । **ಮಹ್ಯೈ**—ಮಹನೀಯಳಾದ । **ಅದಿತಯೇ**—ಭೂಮಿಗೆ । **ಪುನಃ ದಾತ್**—ಪುನಃ ದಾನಮಾಡಲಿ । **ಪಿತರಂ ಮಾತರಂ ಚ**—ತಂದೆತಾಯಿಗಳನ್ನು । **ದೃಶೇಯಂ**—ನೋಡೋಣ.

॥ ಭಾವಾರ್ಥ ॥

ಅಗ್ನಿಯೇ ದೇವತೆಗಳಲ್ಲಿ ಪ್ರಥಮನೆಂದು ಪ್ರಜಾಪತಿಯಿಂದ ತಿಳಿದು (ಶುನಃಶೇಪನಾದ) ನಾನು ದೇವತೆಗಳಲ್ಲಿ ಮುಖಂಡನಾದ ಅಗ್ನಿಯ ಮಂಗಳಕರವಾದ ನಾಮವನ್ನು ಉಚ್ಚರಿಸುತ್ತೇನೆ. (ಅದರಿಂದ ತುಷ್ಟನಾದ) ಅಗ್ನಿಯು (ಮರಣೋನ್ಮುಖನಾದ) ನನ್ನನ್ನು ಮಹನೀಯಳಾದ ಭೂಮಿಗೆ ಪುನಃ ಕಳುಹಿಸಿಕೊಡಲಿ. (ಅಗ್ನಿಯ ಪ್ರಸಾದದಿಂದ ಅಮರನಾದ) ನಾನು ತಂದೆತಾಯಿಗಳನ್ನು ನೋಡುವೆನು.

## English Translation.

Of many immortal gods we shall contemplate the god Agni's name first; he will deliver us back to this vast earth that I may again behold my father and mother.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದಂತೆ ತನ್ನನ್ನು ಕಾಪಾಡಲು ಅಗ್ನಿಯು ಶಕ್ತನೆಂದು ಪ್ರಜಾಪತಿಯಿಂದ ತಿಳಿದು ಅಗ್ನಿಯೇ ದೇವತೆಗಳಲ್ಲಿ ಶ್ರೇಷ್ಠನೆಂದೂ ಅವನೇ ತನ್ನನ್ನು ಕಾಪಾಡಿ ಭೂಮಿಯಲ್ಲಿ ಮತ್ತೆ ಜೀವಿಸುವಂತೆಯೂ ತನ್ನ ತಂದೆತಾಯಿಗಳನ್ನು ಮತ್ತೆ ನೋಡಲು ಅನುಗ್ರಹಿಸುವಂತೆಯೂ ಅಗ್ನಿಯನ್ನು ಶುನಃಶೇಪನು ಮೊದಲು ಪ್ರಾರ್ಥಿಸುತ್ತಾನೆ.

ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಶೇಷವಿವರಣೆಯು ಈ ಋಕ್ಕಿಗೂ ಅನ್ವಯಿಸುವುದು.

**ವಯಂ**—ಇಲ್ಲಿ ನಾವು ಎಂದು ಬಹುವಚನಪ್ರಯೋಗವಿದ್ದರೂ ಅಗ್ನಿಯನ್ನು ಪ್ರಾರ್ಥಿಸುವ ಶುನಶ್ಶೇಪನಿಗೆ ಅನ್ವಯಿಸುವುದೆಂದ ತಿಳಿಯಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಮಹ್ಯೈ**—ಮಹತ್ಯೈ ಎಂದರ್ಥ. **'ವರ್ತಮಾನೇ ಪೃಷದ್ಬೃಹನ್ಮಹಜ್ಜಗಚ್ಛತೃವಚ್ಚ'** (ಉ. ಸೂ. ೨-೨೪೨) ಅತಿಪ್ರತ್ಯಯಾಂತವಾಗಿ ಇವು ನಿಪಾತಿಸಲ್ಪಡುವುವು. ಶತೃವದ್ಭಾವದಿಂದ **'ಉಗಿತಶ್ಚ'** (ಪಾ. ಸೂ. ೪-೧-೬) ಎಂದು ಙೀಪ್ ಅತ್ ಗೆ ಛಾಂದಸವಾಗಿ ಲೋಪ, **'ಬೃಹನ್ಮಹತೋರುಪಸಂಖ್ಯಾನಂ'** (ಪಾ. ಸೂ. ೬-೧-೧೭೩ವಾ. ೧) ಎಂದು ಙೀಪ್ ಉದಾತ್ತ. ಮಹೀ ಶಬ್ದದ ಮುಂದೆ ಙೇ ಪ್ರತ್ಯಯ. **'ಆಣ್ನದ್ಯಾಃ'** (ಪಾ. ಸೂ. ೭-೩-೧೧೨) ನದ್ಯಂತಾಂಗದ ಮುಂದಿರುವ ಙಿದ್ವಚನಕ್ಕೆ ಆಟ್-ಬರುತ್ತೆ ಎಂದು ಆಟ್-**'ಆಟಶ್ಚ'** (ಪಾ. ಸೂ. ೬-೧-೯೦) ಎಂದು ವೃದ್ಧಿ. ಮಹೀ+ಐ-ಯಣಾದೇಶ. **'ಉದಾತ್ತಯಣೋಹಲ್ಪೂರ್ವಾತ್'** (ಪಾ. ಸೂ. ೬-೧-೧೭೪) ಉದಾತ್ತ ಸ್ಥಾನದಲ್ಲಿ ಬಂದು ವ್ಯಂಜನಕ್ಕಿಂತಲೂ ಪರದಲ್ಲಿರುವ ಯಣ್‌ಗಿಂತಲೂ ಪರದಲ್ಲಿರುವ ನದೀಸಂಜ್ಞಕವೂ, ಶಸಾದಿ ವಿಭಕ್ತಿಯೂ ಉದಾತ್ತವಾಗುವುದು ಎಂದು, ವಿಭಕ್ತಿ ಉದಾತ್ತ.

**ದೃಶೀಯಂ**—ಇದರ ಪ್ರಕ್ರಿಯೆ ಪೂರ್ವಮಂತ್ರದಲ್ಲಿದೆ. ಮಾತರಂ ಚ-ಎಂಬಲ್ಲಿಯ ಚಕಾರದಿಂದ ದೃಶೀಯಂ ಎಂಬುದು ಅನುಕೃಷ್ಟವಾಗುವುದು. ಇದನ್ನಪೇಕ್ಷಿಸಿ ಮಂತ್ರದಲ್ಲಿರುವ ದೃಶೀಯಂ ಎಂಬುದು ಪ್ರಥಮೋಚ್ಚರಿತವಾಗುವುದು. **'ಚವಾಯೋಗೇ ಪ್ರಥಮಾ'** (ಪಾ. ಸೂ ೮-೧-೫೯) ಚ-ವಾ ಇವುಗಳ ಸಂಬಂಧ ಇದ್ದರೆ ಮೊದಲು ಉಚ್ಚರಿಸಿದ ತಿಙಂತವು ಅನುದಾತ್ತವಾಗುವುದಿಲ್ಲ, ಎಂದು ಸರ್ವಾನುದಾತ್ತಕ್ಕೆ ನಿಷೇಧ. ॥ ೨ ॥

॥ ಸಂಹಿತಾಪಾಠಃ ॥

ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಂ ।
ಸದಾವನ್ಭಾಗಮೀಮಹೇ ॥ ೩ ॥

॥ ಪದಪಾಠಃ ॥

ಅಭಿ । ತ್ವಾ । ದೇವ । ಸವಿತಃ । ಈಶಾನಂ । ವಾರ್ಯಾಣಾಂ ।
ಸದಾ । ಅವನ್ । ಭಾಗಂ । ಈಮಹೇ ॥ ೩ ॥

॥ ಸಾಯಣಭಾಷ್ಯಂ ॥

**ಪ್ರಥಮೇ ಛಂದೋಮೇ ವೈಶ್ವದೇವಶಸ್ತ್ರ ಅಭಿ ತ್ವಾ ದೇವ ಸವಿತರಿತಿ ಸಾವಿತ್ರಸ್ತೃಚಃ ಸೂಕ್ತಸ್ಥಾನೀಯಃ । ಅಥ ಛಂದೋಮಾ ಇತಿ ಖಂಡೇಽಭಿ ತ್ವಾ ದೇವ ಸವಿತಃ ಪ್ರೇಶಾಂ ಯಜ್ಞಸ್ಯ ಶಂಭುವಾ ।**

ಆ. ೮-೯ । ಇತಿ ಸೂತ್ರಿತಂ ॥ ಅಭಿತ್ವೇತ್ಯೇಷಾಗ್ನಿಮಂಥನೇಽಪಿ ವಿನಿಯುಕ್ತಾ । ಪ್ರಾತರ್ವೈಶ್ವದೇವ್ಯಾಮಿತಿ ಖಂಡೇಽಭಿ ತ್ವಾ ದೇವ ಸವಿತರ್ಮಹೀ ದ್ಯೌಃ ಪೃಥಿವೀ ಚ ನಃ । ಆ. ೨-೧೬ । ಇತಿ ಸೂತ್ರಿತಂ । ಶ್ರೂಯತೇ ಚ । ಅಭಿ ತ್ವಾ ದೇವ ಸವಿತರಿತಿ ಸಾವಿತ್ರೀಮನ್ವಾಹ । ಐ. ಬ್ರಾ. ೧-೧೬ । ಇತಿ ॥ ತಥಾ ಪ್ರವರ್ಗ್ಯೇಽಪ್ಯೇಷಾ ವಿನಿಯುಕ್ತಾ । ಅಥೋತ್ತರಮಿತಿ ಖಂಡೇಽಭಿ ತ್ವಾ ದೇವ ಸವಿತಃ ಸಮಿಾ ವತ್ಸಂ ನ ಮಾತೃಭಿಃ । ಆ. ೪-೭ । ಇತಿ ಸೂತ್ರಿತಂ ॥ ತಥಾ ಗ್ರಾವಸ್ತೋತ್ರೇಽಪಿ । ಏತಸ್ಮಿನ್ಕಾಲೇ ಗ್ರಾವಸ್ತುದಿತಿ ಖಂಡೇ ಮಧ್ಯಮಸ್ವರೇಣೇದಂ ಸವನಮಭಿ ತ್ವಾ ದೇವ ಸವಿತಃ । ಆ. ೫-೧೨ । ಇತಿ ಸೂತ್ರಿತಂ ॥

ಅಥಾಗ್ನಿನಾ ಪ್ರೇರಿತಃ ಸನ್ಸವಿತಾರಮಭಿ ತ್ವೇತ್ಯನೇನ ತೃಚೇನ ಪ್ರಾರ್ಥಯತೇ । ತಥೈವ ಶ್ರೂಯತೇ । ತಮಗ್ನಿರುವಾಚ ಸವಿತಾ ವೈ ಪ್ರಸವಾನಾಮೀಶೇ ತಮೇವೋಪಧಾವೇತಿ ಸ ಸವಿತಾರಮುಪಸಸಾರಾಭಿ ತ್ವಾ ದೇವ ಸವಿತರಿತ್ಯೇತೇನ ತೃಚೇನ । ಐ. ಬ್ರಾ. ೭-೧೬ । ಇತಿ । ಹೇ ಸದಾವನ್ ಸದಾ ಸರ್ವದಾ ರಕ್ಷಕ ಹೇ ಸವಿತರ್ದೇವ ವಾರ್ಯಾಣಾಂ ವರಣೀಯಾನಾಂ ಧನಾನಾಮೀಶಾನಂ ಸ್ವಾಮಿನಂ ತ್ವಾಂ ಪ್ರತಿ ಭಾಗಂ ಭಜನೀಯಂ ಧನಮಭಿ ಸರ್ವತ ಈಮಹೇ । ಯಾಚಾಮಹೇ ॥ ಈಶಾನಂ । ಈಶ ಐಶ್ವರ್ಯೇ ಲಟಃ ಶಾನಚ್ । ತಾಸ್ಯನುದಾತ್ತೇದಿತಿ ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ವಾರ್ಯಾಣಾಂ । ವೃಙ್ ಸಂಭಕ್ತೌ । ಋಹಲೋರ್ಣ್ಯತ್ । ಈಡವಂದೇತ್ಯಾದಿನಾದ್ಯುದಾತ್ತತ್ವಂ । ಅವನ್ । ಆಮಂತ್ರಿತನಿಘಾತಃ । ಭಾಗಂ । ಕರ್ಷಾತ್ವತ ಇತಿ ಘಞಂತೋಽಂತ ಉದಾತ್ತಃ ॥

॥ ಪ್ರತಿಪದಾರ್ಥ ॥

**ಸದಾವನ್**—ಸರ್ವದಾ ರಕ್ಷಕನಾದ । **ಸವಿತಃ ದೇವ**—ಸವಿತೃದೇವನೇ । **ವಾರ್ಯಾಣಾಂ**—ಅಪೇಕ್ಷಣೀಯವಾದ ಧನದ (ಪದಾರ್ಥಗಳ) । **ಈಶಾನಂ**—ಸ್ವಾಮಿಯಾದ (ನಿನ್ನನ್ನು) । **ಭಾಗಂ**—ಅಪೇಕ್ಷಿತವಾದ ಧನವನ್ನು । **ಅಭಿ ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಸರ್ವದಾ ರಕ್ಷಕನಾದ ಸವಿತೃದೇವನೇ, ಧನಸ್ವಾಮಿಯಾದ (ಧನ ಅಥವಾ ಅಪೇಕ್ಷಿತ ಪದಾರ್ಥಗಳಿಗೆ ಸ್ವಾಮಿಯಾದ) ನಿನ್ನನ್ನು (ನಮಗೆ) ಇಷ್ಟವಾದ ಧನಕ್ಕಾಗಿ ಯಾಚಿಸುತ್ತೇವೆ.

## English Translation.

Divine and ever protecting Savitri, the lord of all that is desirable, we ask for wealth·

॥ ವಿಶೇಷವಿಷಯಗಳು ॥

ಈ ಋಕ್ಕಿನ ವಿನಿಯೋಗವು ಈ ರೀತಿ ಇರುವುದು—

ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ಸವಿತೃದೇವತಾಕವಾದ **ಅಭಿತ್ವಾ ದೇವಸಹಿತಃ** ಎಂಬ ತೃಚ (ಮೂರು ಋಕ್ಕನ್ನು) ಪ್ರಥಮಛಂದೋಮಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಥ**

**ಛಂದೋಮಾ** ಎಂಬ ಖಂಡದ **ಅಭಿತ್ವಾ ದೇವ ಸವಿತಃ** (ಋ. ಸಂ. ೧-೨೪-೩) **ಪ್ರೇತಾಂ ಯಜ್ಞಸ್ಯ ಶಂಭುವಾ** (ಋ. ಸಂ. ೨-೪೧-೧೯) ಎಂಬ ಸೂತ್ರದಲ್ಲಿ ವಿವೃತವಾಗಿರುವುದು (ಆ. ೮-೯).

ಯಜ್ಞಾರಂಭದಲ್ಲಿ ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡುವ ಕಾಲದಲ್ಲಿಯೂ **ಅಭಿತ್ವಾ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಪ್ರಾತರ್ವೈಶ್ವದೇವಂ ಎಂಬ ಖಂಡದಲ್ಲಿ **ಅಭಿತ್ವಾ ದೇವ ಸವಿತಃ** (ಋ. ಸಂ. ೧-೨೪-೩) **ಮಹೀ ದ್ಯೌಃ ಪೃಥಿವೀ ಚ ನ** (ಋ. ಸಂ. ೧-೨೨-೧೩) ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೨-೧೬) ಈ ವಿಷಯದಲ್ಲಿ—**ಅಭಿತ್ವಾ ದೇವ ಸವಿತರಿತಿ ಸಾವಿತ್ರೀಮನ್ವಾಹ** ಎಂದು ಐತರೇಯಬ್ರಾಹ್ಮಣವಾಕ್ಯವಿರುವುದು (ಐ. ಬ್ರಾ. ೧-೧೬).

ಮತ್ತು ಪ್ರವರ್ಗ್ಯವೆಂಬ ಯಾಗದಲ್ಲಿಯೂ ಇದನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಥೋತ್ತರಂ** ಎಂಬ ಖಂಡದಲ್ಲಿ **ಅಭಿ ತ್ವಾ ದೇವ ಸವಿತಃ** (ಋ. ಸಂ. ೧-೨೪-೩) **ಸಮೀ ವತ್ಸಂ ನ ಮಾತೃಭಿಃ** (ಋ. ಸಂ. ೯-೧೦೪-೨) ಎಂಬ ಸೂತ್ರವು ವಿವರಿಸುವುದು (ಆ. ೪-೭).

ಮತ್ತು ಗ್ರಾವಸ್ತೋತ್ರದಲ್ಲಿಯೂ ಎಂದರೆ ಸೋಮರಸವನ್ನು ಜಜ್ಜುವುದಕ್ಕಾಗಿ ಉಪಯೋಗಿಸುವ ಕಲ್ಲುಗಳನ್ನು ಸ್ತೋತ್ರಮಾಡುವ ಕಾಲದಲ್ಲಿಯೂ ಈ ಮಂತ್ರವನ್ನು ಪಠಿಸಬೇಕೆಂದು **ಗ್ರಾವಸ್ತುತ್** ಎಂಬ ಖಂಡದಲ್ಲಿರುವ **ಮಧ್ಯಮಸ್ವರಣೇದಂ ಸವನಮಭಿತ್ವಾ ದೇವ ಸವಿತಃ** ಎಂಬ ಸೂತ್ರವು ತಿಳಿಸುವುದು (ಆ. ೫-೧೨).

ಪ್ರಜಾಪತಿಯಿಂದ ಪ್ರೇರಿತನಾದ ಶುನಃಶೇಪನು ಅಗ್ನಿಯನ್ನು ಸಮೀಪಿಸಿ ಅವನನ್ನು ಸ್ತೋತ್ರಮಾಡಿ ಬಳಿಕ ಅವನಿಂದ ಸವಿತೃವನ್ನು ಸ್ತೋತ್ರಮಾಡಬೇಕೆಂದು ಪ್ರೇರಿಸಲ್ಪಟ್ಟು **ಅಭಿತ್ವಾ ದೇವಸವಿತಃ** ಎಂದು ಮೊದಲಾದ ಮೂರು ಋಕ್ಕುಗಳಿಂದ ಸವಿತೃವನ್ನು ಸ್ತೋತ್ರಮಾಡುವನು. ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಶುನಃಶೇಪನು ತನಗೆ ಧನಾದಿಗಳನ್ನು ಕೊಡಬೇಕೆಂದು ಸವಿತೃವನ್ನು ಪ್ರಾರ್ಥಿಸಿರುವನು. ಯೂಪಸ್ತಂಭಕ್ಕೆ ಕಟ್ಟಲ್ಪಟ್ಟು ಮರಣೋನ್ಮುಖನಾಗಿರುವ ಶುನಃಶೇಪನು ತನ್ನ ಬಿಡುಗಡೆಗಾಗಿ ಪ್ರಾರ್ಥಿಸುವುದನ್ನು ಬಿಟ್ಟು ಮರಣಸನ್ನಿಹಿತನಾದ ತನಗೆ ಧನಾದಿ ಐಶ್ವರ್ಯಗಳು ಬೇಕೆಂದು ಪ್ರಾರ್ಥಿಸುವುದು ವಿಚಿತ್ರವಾಗಿ ಕಾಣುವುದು.

**ಈಶಾನಂ ವಾರ್ಯಾಣಾಂ**—ವರಣೀಯಾನಾಂ ಧನಾನಾಂ ಸ್ವಾಮಿನಂ । ಎಲ್ಲರೂ ಅಪೇಕ್ಷಿಸುವ ಧನಾದ್ಯೈಶ್ವರ್ಯಗಳಿಗೆ ಸ್ವಾಮಿಯಾದ ಎಂದರೆ ಧನಾದ್ಯೈಶ್ವರ್ಯಗಳನ್ನು ಕೊಡುವ ಎಂದರ್ಥವು.

**ಭಾಗಂ-ಭಜನೀಯಂ** । ಪೂಜಿಸಲ್ಪಡಲು ಅರ್ಹನಾದ.

ಈ ಋಕ್ಕಿನ ಮುಖ್ಯಾಭಿಪ್ರಾಯವು ಹೀಗಿರಬಹುದು—ಎಲೈ ಸವಿತೃದೇವನೇ, ನೀನು ಎಲ್ಲರಿಂದಲೂ ಅಪೇಕ್ಷಿಸುವ ಧನಾದ್ಯೈಶ್ವರ್ಯಗಳಿಗೆ ಸ್ವಾಮಿಯೂ ಪೂಜಾರ್ಹನೂ ಆಗಿರುವೆ. ಇಂತಹ ನಿನ್ನನ್ನು ಪ್ರಾರ್ಥಿಸುತ್ತೇನೆ. ಎಂದು ಇಲ್ಲಿ ಶುನಃಶೇಪನು ಸವಿತೃವನ್ನು ಇಷ್ಟಾರ್ಥದಾಯಕನೆಂದೂ, ಪೂಜಾರ್ಹನೆಂದೂ ಹೇಳಿ ಪ್ರಾರ್ಥಿಸಿರುವನೇ ಹೊರತು ತನಗೆ ಧನವನ್ನು ಕೊಡಬೇಕೆಂದು ಕೇಳಿರುವಂತೆ ಕಂಡುಬರುವುದಿಲ್ಲ. ಈ ಋಕ್ಕಿನಲ್ಲಿ ಧನವನ್ನು ಸೂಚಿಸುವ ಯಾವ ಶಬ್ದವೂ ಇರುವುದಿಲ್ಲ. ಭಾಷ್ಯಕಾರರು ವಾರ್ಯಾಣಾಂ ಎಂಬ ಶಬ್ದಕ್ಕೆ ಸರ್ವರಿಂದಲೂ ಅಪೇಕ್ಷಿತವಾದ ಧನಗಳ ಎಂದರ್ಥ ಮಾಡಿದ್ದರೂ ಇಲ್ಲಿ ಅಪೇಕ್ಷಿತವಸ್ತುವು ಧನವಲ್ಲವೆಂದೂ ಮರಣದಿಂದ ಬಿಡುಗಡೆಯೆಂದೂ ಧಾರಾಳವಾಗಿ ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ವಾರ್ಯಾಣಾಂ**—ವೃಙ್ ಸಂಭಕ್ತೌ. ‘**ಋಹಲೋರ್ಣ್ಯತ್**’ (ಪಾ. ಸೂ ೩-೧-೧೨೦) ಋಕಾರ ಅಥವಾ ವ್ಯಂಜನ, ಇವನ್ನು ಕೊನೆಯಲ್ಲಿ ಹೊಂದಿರುವ ಧಾತುವಿನ ಮುಂದೆ ಣ್ಯತ್ ಬರುವುದು ಎಂದು ವೃ ಧಾತುವಿನ ಮುಂದೆ ಣ್ಯತ್–ವೃ+ಯ. ‘**ಅಚೋಞ್ಣಿತಿ**’ (ಪಾ. ಸೂ. ೭–೨–೧೧೫) ಎಂದು ಋ ಗೆ ವೃದ್ಧಿ ಆರ್ ಬರುತ್ತ್ತೆ, ವಾರ್ಯ–ಎಂದಾಯಿತು. ‘**ಈಡವಂದವೃಶಂಸದುಹಾಂಣ್ಯತಃ**” (ಪಾ. ಸೂ. ೫–೧–೨೧೪) ಣ್ಯತ್ ಪ್ರತ್ಯಯಾಂತವಾದ ಈಡ್ ಮೊದಲಾದ ಧಾತುಗಳ ಆದಿಯು ಉದಾತ್ತವಾಗುವುದು ಎಂದು ವಾರ್ಯ ಎಂಬುದು ಆದ್ಯುದಾತ್ತ.

**ಭಾಗಂ**—ಭಜ ಸೇವಾಯಾಂ– ‘**ಹಲಶ್ಚ**’ (ಪಾ. ಸೂ. ೩–೩–೧೨೧) ವ್ಯಂಜನಾಂತ ಧಾತುವಿನ ಮುಂದೆ ಘಞ್ ಬರುತ್ತೆ ಎಂದು ಘಞ್, ಭಜ್+ಅ, ‘**ಚಜೋಃ ಕು ಘಿಣ್ಣ್ಯತೋಃ**’ (ಪಾ. ಸೂ. ೭–೩–೫೨) ಎಂದು ಜ್‌ಗೆ ಉಪಧಾವೃದ್ಧಿ. ‘**ಕರ್ಷಾತ್ವತೋ ಘಞಂತ ಉದಾತ್ತಃ**’ (ಪಾ. ಸೂ. ೬–೧–೫೯) ಘಞ್ ಪ್ರತ್ಯಯಾಂತ ವಾದ ೧ನೇ ಗಣದ ಕರ್ಷಧಾತು, ಆಕಾರವನ್ನು ಹೊಂದಿರುವ ಘಞಂತ ಧಾತು, ಇವುಗಳ ಕಡೆಯ ವರ್ಣ ಉದಾತ್ತ ವಾಗುವುದು ಎಂದು ಅಂತೋದಾತ್ತ ಬರುತ್ತೆ. ॥ ೩ ॥

॥ ಸಂಹಿತಾಪಾಠಃ ॥

ಯಶ್ಚಿದ್ಧಿ ತ ಇತ್ಥಾ ಭಗಃ ಶಶಮಾನಃ ಪುರಾ ನಿದಃ ।
ಅದ್ವೇಷೋ ಹಸ್ತಯೋರ್ದಧೇ ॥ ೪ ॥

॥ ಪದಪಾಠಃ ॥

**ಯಃ । ಚಿತ್ । ಹಿ । ತೇ । ಇತ್ಥಾ । ಭಗಃ । ಶಶಮಾನಃ । ಪುರಾ । ನಿದಃ ।**
**ಅದ್ವೇಷಃ । ಹಸ್ತಯೋಃ । ದಧೇ ॥ ೪ ॥**

॥ ಸಾಯಣಭಾಷ್ಯಂ ॥

**ಹೇ ಸವಿತರ್ಯೋ ಭಗೋ ಭಜನೀಯೋ ಧನವಿಶೇಷಸ್ತೇ ತವ ಹಸ್ತಯೋರ್ದಧೇ ಧೃತೋಽ ಭೂತ್ತಂ ಧನವಿಶೇಷಮೀಮಹ ಇತಿ ಪೂರ್ವತ್ರಾನ್ವಯಃ । ಚಿಚ್ಛಬ್ದಃ ಪೂಜಾರ್ಥೇ ಹಿಶಬ್ದಃ ಪ್ರಸಿದ್ಧೌ । ಧನಸ್ಯ ಪೂಜ್ಯತ್ವಂ ಸರ್ವತ್ರ ಪ್ರಸಿದ್ಧಂ । ತಾಮೇವ ಪೂಜ್ಯತ್ವಪ್ರಸಿದ್ಧಿಂ ವಿಶದಯತಿ । ಇತ್ಥಾ ಶಶಮಾನೋಽನೇನ ಪ್ರಕಾರೇಣ ಶಸ್ಯಮಾನಃ ಸ್ತೂಯಮಾನಃ । ಧನಸ್ತುತಿಪ್ರಕಾರಂ ಚ ಸರ್ವೇ ಜಾನಂತಿ । ನನು**

**ಸ್ವಕೀಯೇ ಧನೇ ವೈರಿಭಿರಪಹೃತೇ ಸತಿ ವೈರಿಗೃಹೀತಂ ಧನಂ ಸರ್ವೋ ಲೋಕೋ ನಿಂದತಿ ದ್ವೇಷ್ಟಿ ಚ । ಅತೋ ಧನಸ್ತುತಿರ್ನ ನಿಯತೇತ್ಯಾಶಂಕ್ಯಾಹ । ನಿದಃ ಪುರಾ ಅದ್ವೇಷೋ ನಿಂದಾಯಾಃ ಪೂರ್ವಂ ಸ್ವಕೀಯತ್ವೇನ ವ್ಯವಸ್ಥಿತೇ ಸತಿ ತದಾನೀಂ ದ್ವೇಷರಹಿತಃ । ತಸ್ಮಾತ್ಸ್ವಕೀಯತ್ವಾಭಿಪ್ರಾಯೇಣ ಸ್ತೂಯಮಾನತ್ವಮುಕ್ತಮಿತ್ಯರ್ಥಃ ॥ ಇತ್ಥಾ । ಪ್ರಕಾರವಚನ ಇದಮಸ್ಥಮುಃ । ಪಾ. ೫-೩-೨೪ । ಸುಪಾಂ ಸುಲುಗಿತಿ ವ್ಯತ್ಯಯೇನ ವಿಭಕ್ತೇರ್ಡಾದೇಶಃ । ಟಿಲೋಪ ಉದಾತ್ತನಿವೃತ್ತಿಸ್ವರೇಣಾಕಾರ ಉದಾತ್ತಃ । ಶಶಮಾನಃ । ಶಶ ಪ್ಲುತಗತೌ । ಇಹ ತು ಸ್ತುತ್ಯರ್ಥಃ । ತಾಚ್ಛೀಲ್ಯವಯೋವಚನೇತಿ । ಪಾ. ೩-೨-೧೨೯ । ತಾಚ್ಛೀಲಕಶ್ಚಾನಶ್ । ಕರ್ತರಿ ಶಪ್ । ಪಿತ ಇತ್ಯಂತೋದಾತ್ತತ್ವಂ । ನಿದಃ । ಣಿದಿ ಕುತ್ಸಾಯಾಂ । ಸಂಪದಾದಿಲಕ್ಷಣಃ ಕ್ವಿಪ್ । ಸಾವೇಕಾಚ ಇತಿ ಪಂಚಮ್ಯಾ ಉದಾತ್ತತ್ವಂ । ಅದ್ವೇಷಃ । ನ ವಿದ್ಯತೇ ದ್ವೇಷೋಽಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ದಧೇ । ಕರ್ಮಣಿ ಲಿಟ್ । ತಸ್ಯಾರ್ಧಧಾತುಕತ್ವೇನಾಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವೋ ನ ಭವತಿ । ಪ್ರತ್ಯಯಸ್ವರ ಏವ ಶಿಷ್ಯತೇ । ಯದ್ವೃತ್ತಯೋಗಾನ್ನಿಘಾತಾಭಾವಃ ॥**

॥ ಪ್ರತಿಪದಾರ್ಥ ॥

(**ಹೇ ಸವಿತಃ**—ಎಲೈ ಸವಿತೃದೇವನೇ) **ನಿದಃ ಪುರಾ**—ನಿಂದಿಸಲ್ಪಡುವುದಕ್ಕೆ ಮುಂಚೆ । **ಅದ್ವೇಷಃ**—ದ್ವೇಷಾರ್ಹವಲ್ಲದ । **ಇತ್ಥಾ**—ಈ ಪ್ರಕಾರವಾಗಿ । **ಶಶಮಾನಃ**—ಸ್ತುತ್ಯವಾದ । **ಯಃ ಭಗಃ**—ಯಾವ ಭಜನೀಯವಾದ ಧನವು । **ತೇ**—ನಿನ್ನ । **ಹಸ್ತಯೋಃ**—ಹಸ್ತಗಳಲ್ಲಿ । **ದಧೇ**—ಧರಿಸಲ್ಪಟ್ಟಿತೋ (ಆ ಧನವನ್ನು ಯಾಚಿಸುತ್ತೇವೆ) । **ಚಿತ್ ಹಿ**—(ಧನವು ಸ್ತುತ್ಯವೆಂದು) ಪ್ರಸಿದ್ಧವಷ್ಟೇ.?

॥ ಭಾವಾರ್ಥ ॥

ಎಲೈ ಸವಿತೃದೇವನೇ, (ಅಪಹೃತವಾದ, ನಷ್ಟವಾದ ಧನವು ನಿಂದಾರ್ಹವಾದರೂ) ಅದಕ್ಕೆ ಮುಂಚೆ ದ್ವೇಷಾರ್ಹವಲ್ಲದ, ಈ ಪ್ರಕಾರವಾಗಿ ಸ್ತುತಿಸಲ್ಪಡುವ ನಿನ್ನ ಹಸ್ತಗಳಲ್ಲಿರುವ (ಧನವನ್ನು ನಾವು ಯಾಚಿಸುತ್ತೇವೆ).

English Translation.

(We ask for) that wealth which has been retained in your hand and is so much praised against every envy or reproach

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ತೊಡಕಾಗಿರುವುದು. ಅಭಿಪ್ರಾಯವು ಸರಿಯಾಗಿ ಹೊಂದುವುದಿಲ್ಲ.

**ಚಿತ್**—ಈ ಶಬ್ದವು ಪೂಜಾರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದೆಂದೂ **ಹಿ** ಶಬ್ದವು ಪ್ರಸಿದ್ಧಾರ್ಥವಾಚಕವೆಂದೂ ಭಾಷ್ಯಕಾರರು ಹೇಳಿರುವರು.

**ಇತ್ಥಾ**—ಈ ಪ್ರಕಾರವಾಗಿ ; ಎಂದರೆ ಧನವನ್ನು ಎಲ್ಲರೂ ಉತ್ತಮ ವಸ್ತುವೆಂದು ಹೊಗಳುವರು. ಇಂತಹ **ಭಗಃ** ಎಂದರೆ **ಭಜನೀಯೋ ಧನವಿಶೇಷಃ**—ಆಸೆಪಡುವ ಧನವಿಶೇಷವು.

**ಶಶಮಾನಃ**—**ಶಶ ಪ್ಲುತಗತೌ । ಶಸ್ಯಮಾನಃ ಸ್ತೂಯಮಾನಃ** । ಪ್ರಶಂಸಿಸಲ್ಪಡುವ, ಹೊಗಳಲ್ಪಡುವ

**ಪುರಾ ನಿದಃ**—ಈ ಶಬ್ದಗಳಿಗೆ ಈ ಋಕ್ಕಿನಲ್ಲಿ ಉಪಯೋಗವೇನೆಂಬುದೂ ಅರ್ಥವೂ ಯಾವುದೂ ವಿಶದವಾಗಿಲ್ಲ. ನಿದಃ—ಣಿದಿ ಕುತ್ಸಾಯಾಂ । ನಿಂದಿಸಲ್ಪಡುವ; ಧನವನ್ನು ಯಾರೂ ನಿಂದಿಸುವುದಿಲ್ಲ ಅದನ್ನು ಎಲ್ಲರೂ ಪ್ರಶಂಸೆಮಾಡುವರು. ಆದರೆ ಅದನ್ನು ವೈರಿಗಳು ಎಂದರೆ ಶತ್ರುಗಳು ಅಪಹರಿಸಿದಾಗ ಅದನ್ನು ನಿಂದಿಸುವರು ಎಂದು ಭಾಷ್ಯಕಾರರ ವಿವರಣೆಯು. ಅಭಿಪ್ರಾಯವು ಸರಿಯಾಗಿ ಹೊಂದುವುದಿಲ್ಲ.

**ಭಗಃ—ಭಜನೀಯಃ ಧನವಿಶೇಷಃ** । ಅಪೇಕ್ಷಿತವಾದ ಧನವಿಶೇಷವೆಂದು ಭಾಷ್ಯಕಾರರು ಹೇಳಿದ್ದರೂ ಇಲ್ಲಿ ಅಪೇಕ್ಷಿತವಾದ ವಸ್ತುವು ಧನವಲ್ಲವೆಂದೂ, ಆಯುಸ್ಸು ಅಥವಾ ಜೀವಿತವೆಂದೂ ತಿಳಿಯಬೇಕು.

**ಅದ್ವೇಷಃ— ಅವಿದ್ಯಮಾನೋ ದ್ವೇಷೋ ಯಸ್ಮಿನ್ಸೋಽದ್ವೇಷಃ । ದ್ವೇಷವರ್ಜಿತಃ**— ದ್ವೇಷವಿಲ್ಲದಿರುವ, ಎಲ್ಲರಿಗೂ ಬೇಕಾಗಿರುವ, ಎಲ್ಲರೂ ಹೊಗಳುವ ಇತ್ಯಾದಿ.

ಈ ಋಕ್ಕಿನಲ್ಲಿ ಶುನಶ್ಶೇಪನು—ಎಲ್ಲರೂ ಅಪೇಕ್ಷಿಸುವ ಜೀವಿತವನ್ನು ಕೊಡಬೇಕೆಂದು ಸವಿತೃವನ್ನು ಪ್ರಾರ್ಥಿಸಿರಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಇತ್ಥಾ**— '**ಇದಮಸ್ಥಮುಃ**' (ಪಾ. ಸೂ. ೫-೩-೨೪) ಪ್ರಕಾರಾರ್ಥದಲ್ಲಿರುವ ಇದಮ್ ಶಬ್ದದ ಮುಂದೆ ಥಮು ಪ್ರತ್ಯಯ ಬರುತ್ತೆ, ಎಂದು ಥಮ್-ಇದಮ್+ಥಮ್, '**ಏತೇತೌ ರಥೋಃ**' (ಪಾ. ಸೂ. ೫-೩-೪) ರೇಫಾದಿ ಅಥವಾ ಥಕಾರಾದಿಯಾದ ಪ್ರತ್ಯಯ ಪರದಲ್ಲಿರುವಾಗ ಇದಮ್ ಶಬ್ದಕ್ಕೆ ಕ್ರಮವಾಗಿ ಏತ-ಇತ್ ಆದೇಶಗಳು ಬರುವುವು ಎಂದು ಇತ್ ಆದೇಶ-ಇತ್+ಥಮ್=ಇತ್ಥಮ್. ಇದು '**ತದ್ಧಿತಶ್ಚಾಸರ್ವವಿಭಕ್ತಿಃ**' (ಪಾ. ಸೂ. ೧-೧-೩೮) ಎಂದು ಅವ್ಯಯ. ಆದ್ದರಿಂದ ಇದರ ಮುಂದಿನ ವಿಭಕ್ತಿಗೆ ಲೋಪ ಬರುವುದು ನ್ಯಾಯ. ಆದರೂ ವ್ಯತ್ಯಯದಿಂದ '**ಸುಪಾಂಸುಲುಕ್**' (ಪಾ. ಸೂ. ೭-೧-೩೯) ಎಂದು ತೃತೀಯಾ ಏಕವಚನ ಟಾಗೆ ಡಾ ಆದೇಶ, ಅಮ್ ಎಂಬ ಟಿ ಗೆ ಲೋಪ ಇತ್ಥಾ-ಎಂದಾಗುವುದು.

**ಶಶಮಾನಃ**—ಶಶ ಪ್ಲುತಗತೌ, ಇಲ್ಲಿ ಸ್ತುತ್ಯರ್ಥವನ್ನು ಬೋಧಿಸುವುದು '**ತಾಚ್ಛೀಲ್ಯವಯೋವಚನ ಬಂಧುಷು ಚಾನಶ್**' (ಪಾ. ಸೂ. ೩-೨-೧೨೯) ಎಂದು ತಾಚ್ಛೀಲ್ಯಾರ್ಥದಲ್ಲಿ ಲಟ್ಟಿಗೆ ಚಾನಶ್, ಶಪ್ ವಿಕರಣ ಶಶ್+ಅ-ಆನ. '**ಆನೇಮುಕ್**' (ಪಾ. ಸೂ. ೭-೨-೮೨) ಎಂದು ಮುಕ್ ಆಗಮ. '**ಚಿತಃ**' ಎಂದು ಅಂತೋದಾತ್ತ. ॥ ೪ ॥

---

॥ ಸಂಹಿತಾಪಾಠಃ ॥

ಭಗಭಕ್ತಸ್ಯ ತೇ ವಯಮುದಶೇಮ ತವಾವಸಾ ।

ಮೂರ್ಧಾನಂ ರಾಯ ಆರಭೇ ॥ ೫ ॥

॥ ಪದಪಾಠಃ ॥

ಭಗಽಭಕ್ತಸ್ಯ । ತೇ । ವಯಂ । ಉತ್ । ಅಶೇಮ । ತವ । ಅವಸಾ ।
ಮೂರ್ಧಾನಂ । ರಾಯಃ । ಆಽರಭೇ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸವಿತಃ ತೇ ತ್ವದೀಯಾ ವಯಂ ಶುನಃಶೇಪನಾಮಾನೋ ಭಗಭಕ್ತಸ್ಯ ಧನೇನ ಸಂಯುಕ್ತಸ್ಯ ತವಾವಸಾ ರಕ್ಷಣೇನೋದಶೇಮ । ಉತ್ಕರ್ಷೇಣ ವ್ಯಾಪ್ನುಮಃ । ಕಿಂ ಕರ್ತುಂ । ರಾಯೋ ಧನಸ್ಯ ಮೂರ್ಧಾನಮುತ್ಕರ್ಷಮಾರಭೇ । ಪ್ರಾರಬ್ಧುಂ । ಧನಿಕತ್ವಪ್ರಸಿದ್ಧ್ಯಾ ವ್ಯಾಪ್ತಾ ಭೂಯಾಮೇತ್ಯರ್ಥಃ ಭಗಶಬ್ದೋ ವೃಷಾದಿತ್ವಾದಾದ್ಯುದಾತ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಅಶೇಮ । ಅಶೂ ವ್ಯಾಪ್ತೌ । ಲಿಜಿ ವ್ಯತ್ಯಯೇನ ಪರಸ್ಮೈಪದಂ । ಶಪ್ । ರಾಯಃ । ಊಡಿದಮಿತಿ ಷಷ್ಠ್ಯಾ ಉದಾತ್ತತ್ವಂ । ಆರಭೇ । ಕೃತ್ಯಾರ್ಥೇ ತವೈಕೇನಿತಿ ತುಮರ್ಥೇ ಕೇನ್ಪ್ರತ್ಯಯಃ । ನಿತ್ಸ್ವರೇಣಾದ್ಯುದಾತ್ತತ್ವಂ ॥ ೧೩ ॥

॥ ಪ್ರತಿಪದಾರ್ಥ ॥

(**ಹೇ ಸವಿತಃ**—ಸವಿತೃವೇ) । **ತೇ**—ನಿನ್ನವರಾದ । **ವಯಂ**—ನಾವು (ಶುನಃಶೇಪರು) । **ಭಗಭಕ್ತಸ್ಯ**—ಧನಯುಕ್ತನಾದ । **ತವ**—ನಿನ್ನ । **ಅವಸಾ**—ರಕ್ಷಣೆಯಿಂದ । **ರಾಯಃ**—ಧನದ । **ಮೂರ್ಧಾನಂ**—ಉತ್ಕರ್ಷಾವಸ್ಥೆಯನ್ನು । **ಆರಭೇ**—(ಅನುಭವಿಸಲು) ಆರಂಭಿಸುವುದಕ್ಕೆ । **ಉದಶೇಮ**—ವ್ಯಾಪಿಸೋಣ (ಪ್ರವರ್ತಿಸೋಣ).

॥ ಭಾವಾರ್ಥ ॥

ಎಲೈ ಸವಿತೃವೇ, ನಿನ್ನವರಾದ ನಾವು ಧನಯುಕ್ತನಾದ ನಿನ್ನ ರಕ್ಷಣೆಯಿಂದ ಧನದ ಉತ್ಕರ್ಷವನ್ನು (ಅತ್ಯಂತ ಧನಾಢ್ಯರೆಂಬ ಪ್ರಸಿದ್ಧಿಯನ್ನು) ಅನುಭವಿಸಲು ಪ್ರಾರಂಭಿಸೋಣ.

English Translation.

(O Savitri,) may we under the protection of you who are rich in wealth obtain the best of prosperity that we may enjoy it.

॥ ವಿಶೇಷವಿಷಯಗಳು ॥

**ಭಗಭಕ್ತಸ್ಯ—ಧನೇನ ಸಂಯುಕ್ತಸ್ಯ ।** ಧನದಿಂದ ಸಹಿತನಾದ; ಸ್ಕಂದಸ್ವಾಮಿಯು ಈ ಶಬ್ದಕ್ಕೆ— **ಭಗೋ ದೇವಃ ತೇನಾಪಿ ಸೇವಿತಸ್ಯ, ಭಜನೀಯೇನ ವಾ ಹವಿಷಾ ಸ್ತೋತ್ರೇಣ ವಾ ಸರ್ವಮನುಷ್ಯೈಃ ಸೇವಿತಸ್ಯ ॥** ಎಂದರೆ ಭಗನೆಂಬ ದೇವತೆಯಿಂದ ಸೇವಿಸಲ್ಪಡುವ; ಅಥವಾ ಪೂಜಾರ್ಹವಾದ ಹವಿಸ್ಸೇ ಮೊದಲಾದ ಪೂಜಾದ್ರವ್ಯಗಳಿಂದ ಸರ್ವಮನುಷ್ಯರಿಂದಲೂ ಸೇವಿಸಲ್ಪಡುವ ಎಂದು ಅರ್ಥವಿವರಣೆಮಾಡಿರುವರು.

**ಉತ್ ಅಶೇಮ—ಉತ್ಕರ್ಷೇಣ ವ್ಯಾಪ್ನುಮಃ ।** ವಿಶೇಷವಾಗಿ ವ್ಯಾಪಿಸುವೆವು ಎಂದರೆ ಪಡೆಯುವೆವು. **ತವ ಅವಸಾ**—ನಿನ್ನ ರಕ್ಷಣೆಯಿಂದ ವ್ಯಾಪಿಸುವೆವು ಎಂದರೆ ನಿನ್ನ ರಕ್ಷಣೆಯನ್ನು ಪಡೆಯುವೆವು, ನಿನ್ನ ರಕ್ಷಣೆಯನ್ನು ಅಪೇಕ್ಷಿಸುವೆವು ಎಂದಭಿಪ್ರಾಯವು.

**ಮೂರ್ಧಾನಂ ರಾಯಃ**—ಧನದ ಉತ್ಕೃಷ್ಟತೆಯನ್ನು ಎಂದರೆ ಬಹಳವಾದ ಧನವನ್ನು, Plenty of riches.

**ಆರಭೇ, ಆರಬ್ಧುಂ**—ಪ್ರಾರಂಭಿಸುವುದಕ್ಕೆ, ಅನುಭವಿಸುವುದಕ್ಕೆ.

॥ ವ್ಯಾಕರಣಪ್ರಕ್ರಿಯಾ ॥

**ಭಗಭಕ್ತಸ್ಯ—'ಘಞರ್ಥೇ ಕವಿಧಾನಮ್-'** ಎಂದು ಭಜ್ ಧಾತುವಿನ ಮುಂದೆ **ಕ**ಪ್ರತ್ಯಯ ಕೃತ್ತು. ಭಗೇನ ಭಕ್ತಃ ಎಂದು ತೃತೀಯಾತತ್ಪುರುಷ, ಭಗಶಬ್ದ ವೃಷಾದಿಯಾದ್ದರಿಂದ ಆದ್ಯುದಾತ್ತ. ಶೇಷನಿಘಾತದಿಂದ ಅನುದಾತ್ತವಾದ ಕಡೆಯವರ್ಣ ಸ್ವರಿತವಾಗುತ್ತೆ. ಸಮಾಸ ಬಂದ ಮೇಲೆಯೂ **'ತೃತೀಯಾ ಕರ್ಮಣಿ'** (ಪಾ. ಸೂ. ೬-೨-೪೮) ಕರ್ಮಾರ್ಥಕ ಕ್ತಪ್ರತ್ಯಯಾಂತವು ಪರದಲ್ಲಿದ್ದರೆ ತೃತೀಯಾಂತವು ಪ್ರಕೃತಿಸ್ವರವನ್ನು ಹೊಂದುವುದು ಎಂದು ಥಾಥಾದಿಸ್ವರಕ್ಕೆ ಅಪವಾದವಾಗಿ ಪೂರ್ವಪದ ಪ್ರಕೃತಿಸ್ವರ ಬಂದು ಅದೇ ನಿಲ್ಲುವುದು.

**ಆರಭೇ—'ಕೃತ್ಯಾರ್ಥೇ ತವೈಕೇನ್ಕೇನ್ಯತ್ವನಃ'** (ಪಾ. ಸೂ ೩-೪-೧೪) **'ತಯೋರೇವ ಕೃತ್ಯಕ್ತ ಖಲರ್ಥಾಃ'** ಎಂದು ಭಾವ-ಕರ್ಮಾರ್ಥಗಳಲ್ಲಿ ಕೃತ್ಯಪ್ರತ್ಯಯಗಳನ್ನು ವಿಧಿಸಿರುವುದರಿಂದ ಭಾವಕರ್ಮಗಳು ಕೃತ್ಯಾರ್ಥಗಳು-ಏವಂಚ ಭಾವ ಮತ್ತು ಕರ್ಮ ಎಂಬ ಅರ್ಥಗಳಲ್ಲಿ ತವೈ-ಕೇನ್-ಕೇನ್ಯ-ತ್ವನ ಎಂಬ ಪ್ರತ್ಯಯಗಳು ಬರುವುವು ಎಂದು ಇಲ್ಲಿ ಆಙ್‌ಪೂರ್ವಕ ರಭ್‌ಧಾತುವಿನ ಮುಂದೆ ಕೇನ್‌ಪ್ರತ್ಯಯ. ಇದರ ಏ ಮಾತ್ರ ಉಳಿಯುತ್ತೆ ಆ+ರಭ್+ಏ=ಆರಭೇ. ನಿತ್ಸ್ವರದಿಂದ ಇದು ಆದ್ಯುದಾತ್ತ. ॥ ೫ ॥

॥ ಸಂಹಿತಾಪಾಠಃ ॥

ನಹಿ ತೇ ಕ್ಷತ್ರಂ ನ ಸಹೋ ನ ಮನ್ಯುಂ ವಯಶ್ಚನಾಮೀ

ಪತಯಂತ ಆಪುಃ ।

ನೇಮಾ ಆಪೋ ಅನಿಮಿಷಂ ಚರಂತೀರ್ನ ಯೇ ವಾತಸ್ಯ

ಪ್ರಮಿನಂತ್ಯಭ್ವಂ ॥ ೬ ॥

॥ ಪದಪಾಠಃ ॥

ನಹಿ । ತೇ । ಕ್ಷತ್ರಂ । ನ । ಸಹಃ । ನ । ಮನ್ಯುಂ । ವಯಃ । ಚನ । ಅಮೀ

ಇತಿ । ಪತಯನ್ತಃ । ಆಪುಃ ।

ನ । ಇಮಾಃ । ಆಪಃ । ಅನಿಽಮಿಷಂ । ಚರನ್ತೀಃ । ನ । ಯೇ । ವಾತಸ್ಯ ।

ಪ್ರಽಮಿನನ್ತಿ । ಅಭ್ವಂ ॥ ೬ ॥

॥ ಸಾಯಣಭಾಷ್ಯಂ ॥

ಅಥ ಸವಿತ್ರಾ ಪ್ರೇರಿತಃ ಶುನಃಶೇಪ ಏತದಾದಿಸೂಕ್ತಶೇಷೇಣೋತ್ತರೇಣ ಚ ಸೂಕ್ತೇನ ವರುಣಂ ತುಷ್ಟಾವ । ತಥಾ ಚ ಶ್ರೂಯತೇ । ತಂ ಸವಿತೋವಾಚ ವರುಣಾಯ ವೈ ರಾಜ್ಞೇ ನಿಯುಕ್ತೋಽಸಿ ತಮೇವೋಪಧಾವೇತಿ ಸ ವರುಣಂ ರಾಜಾನಮುಪಸಸಾರಾತ ಉತ್ತರಾಭಿರೇಕವಿಂಶತಾ । ಐ. ಬ್ರಾ. ೭-೧೬ । ಇತಿ । ಹೇ ವರುಣ ಪತಯಂತಃ ಪ್ರೌಢೇ ವಿಯತ್ಯುತ್ಪತಂತೋಽಮೀ ದೃಶ್ಯಮಾನಾ ವಯಶ್ಚನ ಶ್ಯೇನಾದಯಃ ಪಕ್ಷಿಣೋಽಪಿ ತೇ ಕ್ಷತ್ರಂ ತ್ವದೀಯಂ ಶರೀರಬಲಂ ನ ಹ್ಯಾಪುಃ । ನೈವ ಪ್ರಾಪ್ತಾಃ । ತ್ವತ್ಸದೃಶಂ ಶರೀರಬಲಂ ಪಕ್ಷಿಣಾಮಪಿ ನಾಸ್ತೀತ್ಯರ್ಥಃ । ತಥಾ ಸಹಸ್ತ್ವದೀಯಂ ಪರಾಕ್ರಮಂ ತವ ಸಾಮರ್ಥ್ಯಮಪಿ ನ ಪ್ರಾಪುಃ । ತಥಾ ಮನ್ಯುಂ ತ್ವದೀಯಂ ಕೋಪಮಪಿ ನ ಪ್ರಾಪುಃ । ತ್ವಯಿ ಕ್ರುದ್ಧೇ ಸತಿ ಸೋಢುಮಶಕ್ತಾ ಇತ್ಯರ್ಥಃ । ಅನಿಮಿಷಂ ಸರ್ವದಾ ಚರಂತೀಃ ಪ್ರವಾಹರೂಪೇಣ ಗಚ್ಛಂತ್ಯ ಆಪಸ್ತ್ವದೀಯಂ ಬಲಂ ನ ಪ್ರಾಪುಃ । ವಾತಸ್ಯ ವಾಯೋರ್ಯೇ ಗತಿವಿಶೇಷಾಸ್ತ್ವದೀಯಮಭ್ವಂ ವೇಗಂ ನ ಪ್ರಮಿನಂತಿ ನ ಹಿಂಸಂತಿ । ಅತಿಕ್ರಮಂ ಕರ್ತುಂ ನ ಶಕ್ತಾ ಇತ್ಯರ್ಥಃ । ತೇಽಪಿ ನ ಪ್ರಾಪುರಿತಿ ಪೂರ್ವಾತ್ರಾನ್ವಯಃ ॥ ಪತಯಂತಃ । ಪತ ಗತೌ । ಚುರಾದಿರದಂತಃ । ಲಟಃ ಶತೃ । ಶಪ್ । ಗುಣಾಯಾದೇಶೌ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಣಿಚಃ ಸ್ವರಃ । ಆಪುಃ । ಆಪ್ಲೃ ಗತೌ । ಲಿಟ್ಯುಸಿ ದ್ವಿರ್ಭಾವಹಲಾದಿಶೇಷೌ । ಅತ ಆದೇಃ । ಪಾ. ೭-೪-೭೦ । ಇತ್ಯಾತ್ವಂ । ಅತ್ರ ನ ಸಹೋ ನ ಮನ್ಯುಮಿತ್ಯಾದಿಭಿರಾಪುರಿತ್ಯಸ್ಯ ಸಂಬಂಧಾತ್ತದಪೇಕ್ಷಯಾ ಪ್ರಾಥಮ್ಯಾಚ್ಛಾದಿ-

ಲೋಪೇ ವಿಭಾಷೇತಿ ಪ್ರಥಮಾ ತಿಙ್ವಿಭಕ್ತಿರ್ನ ನಿಹನ್ಯತೇ । ಚರಂತೀಃ । ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ಪ್ರಮಿನಂತಿ । ಮೀಞ್ ಹಿಂಸಾಯಾಂ । ಕ್ರ್ಯಾದಿಭ್ಯಃ ಶ್ನಾ । ಶ್ನಾಭ್ಯಸ್ತಯೋರಾತಃ । ಪಾ. ೬-೪-೧೧೨ । ಇತ್ಯಾಕಾರಲೋಪಃ । ಮೀನಾತೇರ್ನಿಗಮೇ । ಪಾ. ೭-೩-೮೧ । ಇತಿ ಹ್ರಸ್ವತ್ವಂ । ಪ್ರತ್ಯಯ । ಸ್ವರಃ । ತಿಙಿ ಚೋದಾತ್ತವತಿ । ಪಾ. ೮-೧-೭೧ । ಇತಿ ಗತಿರನುದಾತ್ತಃ । ಯದ್ವೃತ್ತಯೋಗಾದನಿಘಾತಃ ॥ ೬ ॥

॥ ಪ್ರತಿಪದಾರ್ಥ ॥

(**ಹೇ ವರುಣ**—ಎಲೈ ವರುಣನೇ) । **ಪತಯಂತಃ**—ಹಾರಾಡುತ್ತಿರುವ । **ಅಮೀ**—ಈ (ದೃಶ್ಯಮಾನವಾದ) । **ವಯಶ್ಚನ**—ಪಕ್ಷಿಗಳೂ । **ತೇ**—ನಿನ್ನ । **ಕ್ಷತ್ರಂ**—ಶರೀರ ಬಲವನ್ನು । **ನಹಿ ಆಪುಃ**—ಪಡೆದೇ ಇಲ್ಲ । (**ತಥಾ**—ಹಾಗೆಯೇ)। **ಸಹಃ**—(ನಿನ್ನ) ಪರಾಕ್ರಮವನ್ನೂ । **ನ** (**ಆಪುಃ**)—ಪಡೆಯಲಿಲ್ಲ । **ಮನ್ಯುಂ**—ಕೋಪವನ್ನೂ । **ನ**—ಪಡೆಯಲಿಲ್ಲ । **ಅನಿಮಿಷಂ**—ಸರ್ವದಾ । **ಚರಂತಃ**—ಪ್ರವಹಿಸುತ್ತಿರುವ । **ಆಪಃ**—ನೀರು । **ನ**—(ನಿನ್ನ ಬಲವನ್ನು) ಪಡೆಯಲಿಲ್ಲ । **ವಾತಸ್ಯ**—ವಾಯುವಿನ । **ಯೇ**—ಯಾವ ಗಮನವೋ (ಅದು) । **ಅಭ್ವಂ**—(ನಿನ್ನ) ವೇಗವನ್ನು । **ನ ಪ್ರಮಿನಂತಿ**—ಹಿಂಸಿಸುವುದಿಲ್ಲ (ಅತಿಕ್ರಮಿಸುವುದಿಲ್ಲ).

॥ ಭಾವಾರ್ಥ ॥

ಎಲೈ ವರುಣನೇ, ಈ ಮೇಲೆ ಹಾರಾಡುತ್ತಿರುವ ಪಕ್ಷಿಗಳೂ, ಸದಾ ಪ್ರವಹಿಸುವ ಉದಕವೂ, ನಿನ್ನ ಶರೀರ ಬಲವನ್ನಾಗಲೀ, ಪರಾಕ್ರಮವನ್ನಾಗಲೀ ಪಡೆದಿಲ್ಲ. ನಿನ್ನ ಕೋಪವನ್ನು ತಡೆಯಲಾರೆವು. ವಾಯುವಿನ ಗಮನವೂ ನಿನ್ನ ವೇಗವನ್ನು ಅತಿಕ್ರಮಿಸಲಾರದು. ವಾಯುವಿಗೆ ನಿನ್ನ ಬಲಾದಿಗಳೂ ಇಲ್ಲ.

## English Translation.

O Varuna, these birds that are flying have not obtained your strength or your power; they are not able to endure your wrath; these waters that flow without interruption or the winds have not surpassed your speed.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವು—ಎಲೈ ವರುಣನೇ, ನಿನ್ನ ಶಕ್ತಿಸಾಮರ್ಥ್ಯಗಳು ಅಪಾರವಾದವು. ಅಂತರಿಕ್ಷದಲ್ಲಿ ಹಾರಾಡುವ ಪಕ್ಷಿಗಳಿಗೂ ನಿನಗಿರುವ ಶೀಘ್ರಗಾಮಿತ್ವ ಮೊದಲಾದ ಗುಣಗಳಾಗಲಿ, ಬಲವಾಗಲಿ ಇಲ್ಲ. ಅವು ನಿನ್ನ ಕೋಪಕ್ಕೆ ಎದರಾಗುವಂತಿಲ್ಲ. ಸತತವಾಗಿ ಹರಿಯುವ ನೀರೂ ಎಂದರೆ ನದಿಯ ಪ್ರವಾಹವೂ, ಅಂತರಿಕ್ಷದಲ್ಲಿ ವೇಗವಾಗಿ ಬೀಸುವ ಗಾಳಿಯೂ ವೇಗದಲ್ಲಿ ನಿನ್ನನ್ನು ಸರಿಗಟ್ಟಲಾರವು.

ಶುನಶ್ಶೇಪನು ಅಭಿತ್ವಾ ದೇವ ಸವಿತಃ ಎಂದು ಮೊದಲಾದ ಮೂರು ಋಕ್ಕುಗಳಿಂದ ಸವಿತೃವನ್ನು ಸ್ತೋತ್ರ ಮಾಡಿ ಆ ಸ್ತೋತ್ರದಿಂದ ಪ್ರಸನ್ನನಾದ ಸವಿತೃವಿನ ಪ್ರೇರಣೆಯಿಂದ ವರುಣನನ್ನು, ಈ ಸೂಕ್ತದಲ್ಲಿ ಉಳಿದಿರುವ ಹತ್ತು

ಋಕ್ಕುಗಳು ಮುಂದಿನ ಸೂಕ್ತದ ಇಪ್ಪತ್ತೊಂದು ಋಕ್ಕುಗಳು ಒಟ್ಟು ಮೂವತ್ತೊಂದು ಋಕ್ಕುಗಳಿಂದ (ವರುಣನನ್ನು) ಸ್ತೋತ್ರಮಾಡುವನು. ಈ ವಿಷಯದಲ್ಲಿ—**ತಂ ಸವಿತೋವಾಚ ವರುಣಾಯ ವೈ ರಾಜ್ಞೇ ನಿಯುಕ್ತೋಽಸಿ ತಮೇವೋಪಧಾವೇತಿ ಸ ವರುಣಂ ರಾಜಾನಮುಪಸಸಾರಾತ ಉತ್ತರಾಭಿರೇಕತ್ರಿಂಶತಾ** (ಐ. ಬ್ರಾ. ೭-೧೬) ಎಂದು ಐತರೇಯ ಬ್ರಾಹ್ಮಣ್ಯವಾಕ್ಯವಿರುವುದು.

**ಕ್ಷತ್ರಂ**—**ತ್ವದೀಯಂ ಶರೀರಬಲಂ,** ನಿನಗೆ ಇರುವ ಶರೀರಬಲ, ಸಾಮರ್ಥ್ಯ, bodily strength.

**ಸಹಃ—ತ್ವದೀಯಂ ಪರಾಕ್ರಮಂ,** ನಿನ್ನ ಪರಾಕ್ರಮ, ಶೌರ್ಯ, valour, prowess &c.

**ಮನ್ಯುಂ—ಕೋಪಂ,** ಕೋಪವನ್ನು (ಎದುರಿಸುವ ಶಕ್ತಿಯಿಲ್ಲವೆಂದಭಿಪ್ರಾಯವು).

**ಅನಿಮಿಷಂ, ಚರಂತೀಃ**—ಸರ್ವದಾ ಚರಂತೀಃ ಪ್ರವಾಹರೂಪೇಣ ಗಚ್ಛಂತೀಃ । ಸದಾ ಕಾಲದಲ್ಲಿಯೂ ಅವಿಚ್ಛಿನ್ನವಾಗಿ ಹರಿಯುವ, flowing unceasingly.

**ನ ಪ್ರಮಿನಂತಿ ಅಭ್ವಂ—ವೇಗಂ ನ ಹಿಂಸಂತಿ । ನ ಪ್ರಾಪ್ನುವಂತಿ** ನಿನ್ನ ವೇಗವನ್ನು ಅತಿಕ್ರಮಿಸಲಾರವು ಎಂದರೆ ಸರಿಗಟ್ಟಲಾರವು.

॥ ವ್ಯಾಕರಣಪ್ರಕ್ರಿಯಾ ॥

**ಪತಯಂತಃ**—ಪತ್ಲೃ ಗತೌ-೧೦ ನೇ ಗಣದ ಧಾತು. ಅಕಾರಾಂತ-ಇದರ ಮುಂದೆ ಸ್ವಾರ್ಥಿಕಣಿಚ್ ಲಟ್-ಶತೃಶಪ್. ಪತ+ಇ+ಅ-ಅತ್ **' ಅತೋಲೋಪಃ '** ಎಂದು ಧಾತುವಿನ ಅ-ಗೆ **ಲೋಪ.** ಗುಣ-ಅಯಾದೇಶ ಪತಯ+ಅತ್ ಪರರೂಪ, ಪ್ರ-ಬ-ಜಸ್, ಉಗಿತ್ತಾದ್ದರಿಂದ ನುಮ್ ಆಗಮ-ರುತ್ವ ವಿಸರ್ಗಗಳು. ಇಲ್ಲಿ ಶಪ್ ಅನುದಾತ್ತ. ಅದುಪದೇಶದ ಮುಂದೆ ಇರುವುದರಿಂದ ಅತ್ ಅನುದಾತ್ತ ಣಿಚ್‌ಸ್ವರ ಉಳಿಯುವುದು.

**ಆಪುಃ—' ಆಪ್ಲೃ ವ್ಯಾಪ್ತೌ '** ಲಿಟ್-ಝಿ-**' ಪರಸ್ಮೈಪದಾನಾಂ '** (ಪಾ. ಸೂ. ೩-೪-೮೨) ಎಂದು ಝಿಗೆ ಉಸ್-ದ್ವಿತ್ವ-ಆಪ್+ಆಪ್+ಉಸ್, ಅಭ್ಯಾಸದ ಪ್‌ಗೆ ಲೋಪ **' ಹ್ರಸ್ವಃ '** (ಪಾ. ಸೂ. ೭-೪-೫೯) ಎಂದು ಅಭ್ಯಾಸಕ್ಕೆ ಹ್ರಸ್ವ. **' ಅತ ಆದೇಃ '** (ಪಾ. ಸೂ. ೭-೪-೭೦) ಅಭ್ಯಾಸದಲ್ಲಿರುವ ಮೊದಲನೆಯ ಅಕಾರಕ್ಕೆ ದೀರ್ಘ ಬರುವುದು ಎಂದು ದೀರ್ಘ. ಸವರ್ಣದೀರ್ಘ-ರುತ್ವ ವಿಸರ್ಗಗಳು. ಪುನಃ ಇಲ್ಲಿ ಆಪುಃ ಎಂಬ ಕ್ರಿಯಾಪದಕ್ಕೆ **ವಯಶ್ಚನ ಕ್ಷತ್ರಂ ನಾಪುಃ ವಯಶ್ಚನ ಸಹೋ ನಾಪುಃ, ವಯಶ್ಚನ ತೇ ಮನ್ಯುಂ ನಾಪುಃ, ಅನಿಮಿಷಂ ಚರಂತೀಃ ಇಮಾ ಆಪಃ ತೇ ಕ್ಷತ್ರಂ ನಾಪುಃ ಎಂದು** ಪ್ರತಿಯೊಂದು ವಾಕ್ಯದಲ್ಲಿಯೂ ಸಂಬಂಧವಿದೆ. ಏವಂಚ ಉತ್ತರವಾಕ್ಯದಲ್ಲಿ ಸಂಬಂಧಿಸಿದ ಆಪುಃ ಎಂಬುದಕ್ಕಿಂತಲೂ ಇದು ಪ್ರಥಮೋಚ್ಚರಿತವಾಗುವುದು. ಆದ್ದರಿಂದ **' ಚಾದಿಲೋಪೇ ವಿಭಾಷಾ '** (ಪಾ. ಸೂ. ೮-೧-೬೩) ಎಂದು ಅನುದಾತ್ತವಾಗುವುದಿಲ್ಲ.

**ಚರಂತೀಃ—' ವಾ ಛಂದಸಿ '** (ಪಾ. ಸೂ. ೬-೧-೧೦೬) ವೇದದಲ್ಲಿ ದೀರ್ಘದ ಜಸ್ ಅಥವಾ ಇಚ್ ಪ್ರತ್ಯಾಹಾರದ ವರ್ಣಗಳು ಇದ್ದರೆ ಪೂರ್ವಸವರ್ಣದೀರ್ಘ ವಿಕಲ್ಪವಾಗಿ ಬರುತ್ತೆ ಎಂದು ಪೂರ್ವಸವರ್ಣದೀರ್ಘ.

**ಪ್ರಮಿನಂತಿ—' ಮೀಞ್ ಹಿಂಸಾಯಾಂ '** ಕ್ರ್ಯಾದಿ. ಶ್ನಾ ವಿಕರಣಪ್ರತ್ಯಯ. **' ಶ್ನಾಭ್ಯಸ್ತಯೋರಾತಃ '** (ಪಾ. ಸೂ. ೬-೪-೧೧೨) ಕಿತ್ ಅಥವಾ ಙಿತ್ ಆದ ಸಾರ್ವಧಾತುಕ ಪರದಲ್ಲಿರುವಾಗ ಶ್ನಾಪ್ರತ್ಯಯ-

ಅಭ್ಯಸ್ತ ಇವುಗಳ ಆಕಾರಕ್ಕೆ ಲೋಪ ಬರುತ್ತೆ ಎಂದು ಶ್ನಾಪ್ರತ್ಯಯದ ಆಗೆ ಲೋಪ. ಲಟ್-ಝಿ–ಅನ್ತಾದೇಶ ಪ್ರ ಉಪಸರ್ಗ ಪ್ರ+ಮೀ+ನ್+ಅನ್ತಿ. **‘ಮೀನಾತೇರ್ನಿಗಮೇ’** (ಪಾ. ಸೂ. ೭–೩–೮೧) ವೇದದಲ್ಲಿ ಶಿತ್ತಾದ ಪ್ರತ್ಯಯ ಪರದಲ್ಲಿದ್ದರೆ ಮೀಞ್ ಧಾತುವಿಗೆ ಹ್ರಸ್ವ ಬರುತ್ತೆ ಎಂದು ಹ್ರಸ್ವ. ಪ್ರತ್ಯಯಸ್ವರ **‘ತಿಙಿಚೋದಾತ್ತವತಿ’** (ಪಾ. ಸೂ. ೮–೧–೭೧) ಉದಾತ್ತವನ್ನು ಹೊಂದಿರುವ ತಿಙಂತವು ಪರದಲ್ಲಿದ್ದರೆ ಅನಂತರವಾದ ಗತಿಸಂಜ್ಞಕವು ಅನುದಾತ್ತವಾಗುವುದು. ಎಂದು ಪ್ರ–ಅನುದಾತ್ತ. ಯೇ ವಾತಸ್ಯ ಎಂದು ಯದ್ವೃತ್ತಯೋಗವಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ || ೬ ||

|| ಸಂಹಿತಾಪಾಠಃ ||

ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದದತೇ
ಪೂತದಕ್ಷಃ |
ನೀಚೀನಾಃ ಸ್ಥುರುಪರಿ ಬುಧ್ನ ಏಷಾಮಸ್ಮೇ ಅನ್ತರ್ನಿಹಿತಾಃ
ಕೇತವಃ ಸ್ಯುಃ || ೭ ||

|| ಪದಪಾಠಃ ||

ಅಬುಧ್ನೇ | ರಾಜಾ | ವರುಣಃ | ವನಸ್ಯ | ಊರ್ಧ್ವಂ | ಸ್ತೂಪಂ | ದದತೇ |
ಪೂತಽದಕ್ಷಃ |
ನೀಚೀನಾಃ | ಸ್ಥುಃ | ಉಪರಿ | ಬುಧ್ನಃ | ಏಷಾಂ | ಅಸ್ಮೇ ಇತಿ | ಅನ್ತಃ |
ನಿಽಹಿತಾಃ | ಕೇತವಃ | ಸ್ಯುರಿತಿ ಸ್ಯುಃ || ೭ ||

|| ಸಾಯಣಭಾಷ್ಯಂ ||

**ಪೂತದಕ್ಷಃ ಶುದ್ಧಬಲೋ ವರುಣೋ ರಾಜಾಬುಧ್ನೇ ಮೂಲರಹಿತೇಽಂತರಿಕ್ಷೇ ತಿಷ್ಠನ್ವನಸ್ಯ ವನನೀಯಸ್ಯ ತೇಜಸಃ ಸ್ತೂಪಂ ಸಂಘಮೂರ್ಧ್ವಮುಪರಿದೇಶೇ ದದತೇ| ಧಾರಯತಿ| ನೀಚೀನಾಃ ಸ್ಥುಃ| ಊರ್ಧ್ವದೇಶೇ ವರ್ತಮಾನಸ್ಯ ವರುಣಸ್ಯ ರಶ್ಮಯ ಇತ್ಯಧ್ಯಾಹಾರ್ಯಂ | ತೇ ಹ್ಯಧೋಮುಖಾಸ್ತಿಷ್ಠಂತಿ|**

ಏಷಾಂ ರಶ್ಮೀನಾಂ ಬುಧ್ನೋ ಮೂಲಮುಪರಿ ತಿಷ್ಠತೀತಿ ಶೇಷಃ । ತಥಾ ಸತಿ ಕೇತವಃ ಪ್ರಜ್ಞಾಪಕಾಃ ಪ್ರಾಣಾ ಅಸ್ಮೇಽಸ್ಮಾಸ್ವಂತರ್ನಿಹಿತಾಃ ಸ್ಥಾಪಿತಾಃ ಸ್ಯುಃ । ಮರಣಂ ನ ಭವಿಷ್ಯತೀತ್ಯರ್ಥಃ ॥ ಅಬುಧ್ನೇ । ನ ವಿದ್ಯತೇ ಬುಧ್ನೋ ಮೂಲಮಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸ್ತೂಪಂ । ಸ್ತ್ಯೈ ಶಬ್ದಸಂಘಾತಯೋಃ । ಸ್ತ್ಯಃ ಸಂಪ್ರಸಾರಣಮೂಚ್ಚೇತಿ ಪಪ್ರತ್ಯಯಃ । ತತ್ಸಂ-ನಿಯೋಗೇನ ಯಕಾರಸ್ಯ ಸಂಪ್ರಸಾರಣಂ ಪರಪೂರ್ವತ್ವ ಊಕಾರಾದೇಶಶ್ಚ । ನಿದಿತ್ಯನುವೃತ್ತೇರಾದ್ಯು-ದಾತ್ತತ್ವಂ । ದಧತೇ । ಭೌವಾದಿಕಃ । ನೀಚೀನಾಃ । ನಿಪೂರ್ವಾದಂಚತೇರೃತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ನ್ಯಚ್‌ಶಬ್ದಾತ್ಸ್ವಾರ್ಥೇ ವಿಭಾಷಾಂಚೇರದಿಕ್ಸ್ತ್ರಿಯಾಂ । ಪಾ. ೫. ೪. ೮ । ಇತಿ ಖಃ ಆಯನ್ನಿತ್ಯಾದಿನಾ ತಸ್ಯೇನಾದೇಶಃ । ಆಯನಾದಿಷೂಪದೇಶಿವದ್ವಚನಂ ಸ್ವರಸಿದ್ಧ್ಯರ್ಥಂ । ಪಾ. ೭. ೧. ೨. ೧ । ಇತಿ ವಚನಾದೀಕಾರ ಉದಾತ್ತಃ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಸ್ಥುಃ । ಗಾತಿಸ್ಥೇತ್ಯಾದಿನಾ । ಪಾ. ೨. ೪. ೭೭ । ಸಿಚೋ ಲುಕ್ । ಆತಃ । ಪಾ ೩. ೪. ೧೧೦ । ಇತಿ ಝೇರ್ಜುಸಾ-ದೇಶಃ । ಉಸ್ಯಪದಾಂತಾತ್ । ಪಾ ೬. ೧. ೯೬ । ಇತಿ ಪರರೂಪತ್ವಂ । ಬಹುಲಂ ಛಂದಸ್ಯಮಾಙ್ಯೋ-ಗೇಽಪೀತ್ಯಡಾಗಮಾಭಾವಃ । ಅಸ್ಮೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇಆದೇಶಃ । ನಿಹಿತಾಃ । ಗತಿರ-ನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸ್ಯುಃ । ಅಸ್ತೇರ್ಲಿಙಿ ಶ್ನಸೋರಲ್ಲೋಪಃ ॥

॥ ಪ್ರತಿಪದಾರ್ಥ ॥

**ಪೂತದಕ್ಷಃ**—ಶುದ್ಧವಾದ ಬಲವುಳ್ಳ । **ರಾಜಾ**—ಪ್ರಕಾಶಮಾನನಾದ । **ವರುಣಃ**—ವರುಣನು । **ಅಬುಧ್ನೇ**—ಮೂಲರಹಿತವಾದ (ಅಂತರಿಕ್ಷದಲ್ಲಿ ನಿಂತು) । **ವನಸ್ಯ**—ಸ್ತುತ್ಯವಾದ ತೇಜಸ್ಸಿನ । **ಸ್ತೂಪಂ**—ರಾಶಿಯನ್ನು । **ಊರ್ಧ್ವಂ**—ಮೇಲೆ । **ದದತೇ**—ಉಂಟುಮಾಡುತ್ತಾನೆ (ಆ ತೇಜಸ್ಸಿನ ರಶ್ಮಿಗಳು)। **ನೀಚೀನಾಃ**—ಅಧೋಮುಖವಾಗಿ । **ಸ್ಥುಃ**—ಇರುತ್ತವೆ । **ಏಷಾಂ**—ಈ ರಶ್ಮಿಗಳ । **ಬುಧ್ನಂ**—ಮೂಲವು । **ಉಪರಿ**—ಮೇಲೆ (ಇದೆ ಹೀಗಿರಲು) । **ಕೇತವಃ**—(ನಮಗೆ) ಆಧಾರಭೂತವಾದ (ಪ್ರಾಣಗಳು) । **ಅಸ್ಮೇ**—ನಮ್ಮಲ್ಲಿ । **ಅಂತರ್ನಿಹಿತಾಃ ಸ್ಯುಃ**—ಸ್ಥಾಪಿತವಾಗುತ್ತವೆ.

॥ ಭಾವಾರ್ಥ ॥

ಶುದ್ಧವಾದ ಬಲವುಳ್ಳ, ಪ್ರಕಾಶಮಾನನಾದ ವರುಣನು ನಿರಾಧಾರವಾದ ಅಂತರಿಕ್ಷದಲ್ಲಿ ನಿಂತು ತೇಜೋರಾಶಿಗೆ ಆಶ್ರಯನಾಗಿರುತ್ತಾನೆ. ಈ ತೇಜೋರಾಶಿಯ ಕಿರಣಗಳು ಅಧೋ ಮುಖವಾಗಿ, ಊರ್ಧ್ವಮೂಲವಾಗಿವೆ. ಹೀಗಿರಲು ನಮಗೆ ಆಧಾರಭೂತವಾದ ಪ್ರಾಣವು ನಮ್ಮ ಶರೀರದಲ್ಲಿ ಸ್ಥಾಪಿತವಾಗಿದೆ.

## English Translatio

The king Varuna of pure strength being in baseless firmament, sustains on high a heap of light, the rays of which are pointed downwards while their base is above; may they become concentrated in us as the source of existence.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಕಠಿನವಾಗಿರುವುದು. ಅರ್ಥವು ಸಮಂಜಸವಾಗಿ ಹೊಂದುವುದಿಲ್ಲ. ಮುಖ್ಯಾಭಿಪ್ರಾಯವೇನೆಂದರೆ—ರಾಜನಾದ ವರುಣನು ಅಂತರಿಕ್ಷದಲ್ಲಿ ತೇಜೋಯುತನಾಗಿ ಬೆಳಗುತ್ತಿರುವನು. ಅವನ ಪ್ರಕಾಶಮಾನವಾದ ಕಿರಣಗಳು ಅಂತರಿಕ್ಷದಿಂದ ಅಧೋಮುಖವಾಗಿ ಹೊರಹೊರಟು ಈ ಭೂಮಿಯನ್ನು ವ್ಯಾಪಿಸುವುವು. ಆದುದರಿಂದ ಆ ಕಿರಣಗಳ ಮೂಲಸ್ಥಾನವು ವರುಣನಿರುವ ಅಂತರಿಕ್ಷದಲ್ಲಿಯೇ ಇದ್ದು ಅವುಗಳ ತೇಜಸ್ಸು ಒಟ್ಟುಗೂಡಿ ಭೂಮಿಯಲ್ಲಿ ವಾಸಿಸುತ್ತಿರುವ ನಮ್ಮ ಪ್ರಾಣಿಗಳಿಗೆ ಆಧಾರಭೂತವಾಗಿರಲಿ.

**ಪೂತದಕ್ಷಃ**—ಶುದ್ಧಬಲವುಳ್ಳವನು, of pure strength, mighty.

**ರಾಜಾ**—ವರುಣನನ್ನು ರಾಜನೆಂದು ಸಂಬೋಧನೆಮಾಡುವ ರೂಢಿ ಇರುವುದು. ಮುಂದಿನ ಋಕ್ಕಿನಲ್ಲಿಯೂ ಉರುಂ ಹಿ ರಾಜಾ ವರುಣಃ ಎಂದು ರಾಜಶಬ್ದದ ಪ್ರಯೋಗವೇ ಇರುವುದು. ಈ ಶಬ್ದಕ್ಕೆ ಪ್ರಕಾಶಮಾನನಾದ ಎಂಬರ್ಥವನ್ನು ಹೇಳಬಹುದಾಗಿದ್ದರೂ ವರುಣನಿಗೆ ರಾಜಾ-ಧೊರೆ ಎಂಬ ಅರ್ಥವೇ ಅನ್ವರ್ಥವಾಗಿರುವುದು.

**ಅಬುಧ್ನೇ**—ಬುಧ್ನವೆಂದರೆ ಮೂಲ. ಅಬುಧ್ನೇ ಎಂದರೆ ಮೂಲವಿಲ್ಲದ ಅಂತರಿಕ್ಷ. ಅಂತರಿಕ್ಷವು ಭೂಮಿಯಲ್ಲಿರುವ ಯಾವ ವಸ್ತುವಿನ ಆಧಾರದ ಮೇಲೆಯೂ ನಿಂತಿಲ್ಲವಾದ್ದರಿಂದ ಮೂಲ ಅಥವಾ ಆಧಾರ ರಹಿತವಾದ, ಆಶ್ರಯರಹಿತವಾದ ಎಂಬ ವಿಶೇಷಣವು ಯುಕ್ತವಾಗಿರುವುದು

**ವನಸ್ಯ—ವನನೀಯಸ್ಯ ತೇಜಸಃ**—ತೇಜಸ್ಸು ಅಥವಾ ರಶ್ಮಿಗಳು ಸುತ್ತಲೂ ಹರಡುವ ಸ್ವಭಾವವುಳ್ಳದ್ದರಿಂದ ವನಸ್ಯ ಎಂದರೆ ತೇಜಸ್ಸಿನ ಎಂದರ್ಥವು ಇಲ್ಲಿ ವನಸ್ಯ ಎಂದು ಏಕವಚನ ಪ್ರಯೋಗವಿದ್ದರೂ **ತೇಜಸಾಂ** ಎಂದು ಬಹುವಚನಾರ್ಥವನ್ನೇ ಹೇಳಬೇಕೆಂದು ಸ್ಕಂದಸ್ವಾಮಿಯ ಅಭಿಮತವು.

**ಸ್ತೂಪಂ ದದತೇ—ಸಂಘಂ ದಧತೇ ।** ಸಂಘವನ್ನು ಅಥವಾ ಸಮೂಹವನ್ನು ಧರಿಸುವನು ಎಂದರೆ ತೇಜಸ್ಸಿನಿಂದ ಆವೃತನಾಗಿರುವನು, ಇವನಿಂದ ತೇಜಸ್ಸು ಸುತ್ತಲೂ ಹೊರಟು ಎಲ್ಲೆಡೆಯಲ್ಲಿಯೂ ವ್ಯಾಪಿಸುವವು.

**ನೀಚೀನಾಃ—ಅಧೋಮುಖಾಃ ।** ಕೆಳಮುಖವಾಗಿ, ಅಂತರಿಕ್ಷದಲ್ಲಿರುವ ಕಿರಣಗಳು ಕೆಳಮುಖವಾಗಿ ಹೊರಟು ಕೆಳಭಾಗದಲ್ಲಿರುವ ಭೂಮಿಯನ್ನು ಸೇರುವವು.

**ಉಪರಿ ಬುಧ್ನ ಏಷಾಂ**—ಈ ಕಿರಣಗಳ ಮೂಲಸ್ಥಾನವು ಮೇಲುಭಾಗದಲ್ಲಿ ಎಂದರೆ ಅಂತರಿಕ್ಷದಲ್ಲಿರುವ ವರುಣನ ಸಮೀಪದಲ್ಲಿರುವವು ವರುಣನು ಅಂತರಿಕ್ಷದಲ್ಲಿರುವುದರಿಂದ ಅವನ ಕಿರಣಗಳ ಮೂಲಸ್ಥಾನವೂ ಅಂತರಿಕ್ಷದಲ್ಲಿಯೇ ಇರುವುದು.

**ಅಂತರ್ನಿಹಿತಾಃ—ಸ್ಥಾಪಿತಾಃ ।** ಶೇಖರಿಸಲ್ಪಟ್ಟ, ಸ್ಥಾಪಿಸಲ್ಪಟ್ಟ concentrated.

**ಕೇತವಃ—ಪ್ರಜ್ಞಾನಾನಿ ಪ್ರಾಣಾಃ ।** ಪ್ರಾಣಗಳು. ಕೇತುಶಬ್ದಕ್ಕೆ ರಶ್ಮಿ, ಕರ್ಮ ಮೊದಲಾದ ಅನೇಕಾರ್ಥಗಳಿರುವವು

॥ ವ್ಯಾಕರಣಪ್ರಕ್ರಿಯಾ ॥

**ಸ್ತೂಪಃ**—'**ಸ್ತ್ಯೈ ಷ್ಟ್ಯೈ ಶಬ್ದಸಂಘಾತಯೋಃ**' ಧಾತು. '**ಸ್ತ್ಯಾಯಸ್ಸಂಪ್ರಸಾರಣಮೂಚ್ಚ**' ಸ್ತ್ಯೈ ಧಾತುವಿನ ಮುಂದೆ ಪಪ್ರತ್ಯಯವೂ, ಧಾತುವಿನ ಯಕಾರಕ್ಕೆ ಸಂಪ್ರಸಾರಣ ಅಂದರೆ ಇಕಾರವೂ ಬರುತ್ತೆ ಅಲ್ಲದೆ ಊ ಆದೇಶವು ಕೊನೆಯ ವರ್ಣಕ್ಕೆ ಬರುತ್ತೆ ಎಂದು ಪಪ್ರತ್ಯಯ ಬಂದರೆ ಸ್ತ್ಯೈ+ಪ-'**ಆದೇಶ ಉಪದೇಶೇ ಶಿತಿ**' (ಪಾ. ಸೂ. ೬-೧-೪೫) ಎಂದು ಐಗೆ ಆಕಾರ ಯ್‌ಗೆ ಇ=ಸ್ತಿ+ಆ-ಪ. '**ಸಂಪ್ರಸಾರಣಾಚ್ಚ**' ಎಂದು ಪೂರ್ವರೂಪ ಸ್ತಿ+ಆ. ಕೊನೆಯ ವರ್ಣವಾದ ಇಗೆ ಊ ಆದೇಶ '**ಸ್ತುವೋದೀರ್ಘಶ್ಚ**' (ಉ. ಸೂ. ೩-೩೦೫) ಷ್ಟುಞ್ ಸ್ತುತೌ ಧಾತುವಿನ ಮುಂದೆ ಪ ಬರುತ್ತೆ ಅದು ನಿತ್ತಾಗುತ್ತೆ ಅಲ್ಲದೆ ಧಾತುವಿನ ಉಕಾರಕ್ಕೆ ದೀರ್ಘಬರುತ್ತೆ ಎಂದು ಸ್ತುಧಾತುವಿನ ಮುಂದೆ ಪಪ್ರತ್ಯಯಾದಿಗಳು ಬಂದರೆ ಸ್ತೂಪ ಎಂದಾಗುವುದು ಎಂದು ರೂಪನಿಷ್ಪತ್ತಿಯು ಉಣಾದಿಯಲ್ಲಿದೆ. ಎರಡು ಪಕ್ಷದಲ್ಲಿ ನಿತ್ಸ್ವರ ಆದ್ಯುದಾತ್ತ ಬರುತ್ತೆ. ಮೊದಲನೆಯದು ಈಗಿರುವ ಉಣಾದಿಪಾದದಲ್ಲಿ ಕಾಣಿಸುವುದಿಲ್ಲ. ಎರಡನೆಯ ರೀತಿಯಲ್ಲಿ ಭಾಷ್ಯದಲ್ಲಿ ಹೇಳಿರುವ ಅರ್ಥ ಸಿದ್ಧಿಸದು.

**ನೀಚೀನಾಃ**—'**ನಿ ಉಪಸರ್ಗಪೂರ್ವಕ ಅಞ್ಚು ಗತಿಪೂಜನಯೋಃ**' ಧಾತುವಿನ ಮುಂದೆ '**ಋತ್ವಿಕ್ ದಧೃಕ್-**' (ಪಾ. ಸೂ. ೩-೨-೫೯) ಎಂದು ಕ್ವಿನ್ '**ಅನಿದಿತಾಂ ಹಲ ಉಪಧಾಯಾಃ ಕ್ಙಿತಿ**' (ಪಾ. ಸೂ. ೬-೪-೨೪) ಕಿತ್ತು ಅಥವಾ ಙಿತ್ತು ಆದ ಪ್ರತ್ಯಯ ಪರದಲ್ಲಿರುವಾಗ ಇದಿತ್ತಲ್ಲದ ವ್ಯಂಜನಾಂತವಾದ ಅಂಗದ ಉಪಾಂತ್ಯ ನ್‌ಗೆ ಲೋಪ ಬರುತ್ತೆ ಎಂದು ನಲೋಪ. ನಿ+ಅಚ್-ಯಣಾದೇಶ-ನ್ಯಚ್. ಇದರ ಮುಂದೆ '**ವಿಭಾಷಾಂಚೇರದಿಕ್ಸ್ತ್ರಿಯಾಂ**' (ಪಾ. ಸೂ. ೫-೪-೮) ದಿಗ್ವಾಚಕ ಸ್ತ್ರೀಲಿಂಗ ಶಬ್ದವನ್ನುಳಿದು ಅಂಚತ್ಯಂತವಾದ ಶಬ್ದದ ಮುಂದೆ ಸ್ವಾರ್ಥದಲ್ಲಿ ಖ ಬರುತ್ತೆ ಎಂದು ಖಪ್ರತ್ಯಯ. ಖಗೆ '**ಆಯನೇಯೀನೀಯಿಯಃ-**' (ಪಾ. ಸೂ. ೭-೧-೨) ಎಂದು ಈನ್ ಆದೇಶ '**ಆಯನ್ನಾದಿಷೂಪದೇಶಿವದ್ವಚನಂ-**' (ಪಾ. ಸೂ. ೭-೧-೨-೧ ವಾ) ಫಾದಿ ಪ್ರತ್ಯಯೋಪದೇಶಾವಸ್ಥೆಯಲ್ಲಿಯೇ ಆಯನ್ ಮೊದಲಾದ ಆದೇಶಗಳು ಬರುವುವು ಎಂದು ಉಪದೇಶಾವಸ್ಥೆಯಲ್ಲಿ ಈನ್ ಬಂದು-ಈಕಾರ ಪ್ರತ್ಯಯಸ್ವರದಿಂದ ಆದ್ಯುದಾತ್ತವಾಗುತ್ತೆ '**ಅಚಃ**' (ಪಾ. ಸೂ. ೬-೪-೧೩೮) ಎಂದು ಅಕಾರ ಲೋಪ '**ಚೌ**' (ಪಾ. ಸೂ. ೬-೩-೧೩೮) ಎಂದು ನಿಗೆ ದೀರ್ಘ ನೀಚೀನಾಃ-ಸ್ತ್ರೀಲಿಂಗ ಪ್ರಥಮಾಬಹುವಚನ. ॥ ೭ ॥

॥ ಸಂಹಿತಾಪಾಠಃ ॥

ಉರುಂ ಹಿ ರಾಜಾ ವರುಣಶ್ಚಕಾರ ಸೂರ್ಯಾಯ ಪಂಥಾ-
ಮನ್ವೇತವಾ ಉ ।
ಅಪದೇ ಪಾದಾ ಪ್ರತಿಧಾತವೇಽಕರುತಾಪವಕ್ತಾ ಹೃದಯಾ-
ವಿಧಶ್ಚಿತ್ ॥ ೮ ॥

॥ ಪದಪಾಠಃ ॥

ಉರುಂ । ಹಿ । ರಾಜಾ । ವರುಣಃ । ಚಕಾರ । ಸೂರ್ಯಾಯ । ಪಂಥಾಂ ।
ಅನುऽಏತವೈ । ಊಂ ಇತಿ ।
ಅಪದೇ । ಪಾದಾ । ಪ್ರತಿऽಧಾತವೇ । ಅಕಃ । ಉತ । ಅಪऽವಕ್ತಾ ।
ಹೃದಯಃऽವಿಧಃ । ಚಿತ್ ॥ ೮ ॥

॥ ಸಾಯಣಭಾಷ್ಯಂ ॥

ವರುಣೋ ರಾಜಾ ಸೂರ್ಯಾಯ ಸೂರ್ಯಸ್ಯ ಪಂಥಾಂ ಮಾರ್ಗಮುರುಂ ವಿಸ್ತೀರ್ಣಂ ಚಕಾರ । ಹಿಶಬ್ದಃ ಪ್ರಸಿದ್ಧೌ । ಉತ್ತರಾಯಣದಕ್ಷಿಣಾಯನಮಾರ್ಗಸ್ಯ ವಿಸ್ತಾರಃ ಪ್ರಸಿದ್ಧಃ । ಕಿಮರ್ಥಮೇವಂ ಕೃತವಾನಿತಿ ತದುಚ್ಯತೇ । ಅನ್ವೇತವಾ ಉ । ಅನುಕ್ರಮೇಣೋದಯಾಸ್ತಮಯೌ ಗಂತುಮೇವ । ತಥಾಪದೇ ಪಾದರಹಿತೇಽಂತರಿಕ್ಷೇ ಪಾದಾ ಪ್ರತಿಧಾತವೇ । ಪಾದೌ ಪ್ರಕ್ಷೇಪ್ತುಂ । ಅಕಃ । ಮಾರ್ಗಂ ಕೃತವಾನ್ । ಪೂರ್ವತ್ರ ರಥಸ್ಯ ಮಾರ್ಗಃ ಅತ್ರ ಪಾದಯೋರಿತಿ ವಿಶೇಷಃ । ಯದ್ವಾ । ಅಪದೇ ಯೂಪೇ ಬದ್ಧೇನ ಮಯಾ ಗಂತುಮಶಕ್ಯೇ ಭೂಪ್ರದೇಶೇ ಪಾದೌ ಪ್ರಕ್ಷೇಪ್ತುಮುಪಾಯಂ ಬಂಧವಿಮೋಚನರೂಪಂ ಕರೋತ್ವಿತ್ಯರ್ಥಃ । ಉತಾಪಿ ಚ ಹೃದಯಾವಿಧಶ್ಚಿದಸ್ಮದೀಯವೇಧಕಸ್ಯ ಶತ್ರೋರಪ್ಯಪವಕ್ತಾಪವದಿತಾ ನಿರಾಕರ್ತಾ ಭವತು ॥ ಚಕಾರ । ಲಿತ್ಸ್ವರೇಣಾಕಾರ ಉದಾತ್ತಃ । ಹಿ ಚೇತಿ ನಿಘಾತಪ್ರತಿಷೇಧಃ । ಪಂಥಾಂ । ಪಥಿಮಥ್ಯೃಭುಕ್ಷಾಮಾತ್ । ಪಾ ೭. ೧. ೮೫ । ಇತಿ ದ್ವಿತೀಯಾಯಾಮಪಿ ವ್ಯತ್ಯಯೇನಾತ್ವಂ । ಪಥಿನ್ಶಬ್ದಸ್ಯ ಪತೇಸ್ಥ ಚ । ಉ. ೪. ೧೨ । ಇತಿ ಪ್ರತ್ಯಯಾಂತತ್ವೇನಾಂತೋದಾತ್ತತ್ವೇ ಪ್ರಾಪ್ತೇ ಪಥಿಮಥೋಃ ಸರ್ವನಾಮಸ್ಥಾನೇ । ಪಾ ೬. ೧. ೧೯೯ । ಇತ್ಯಾದ್ಯುದಾತ್ತತ್ವಂ । ಅನ್ವೇತ ವೈ । ಅನುಪೂರ್ವಾದೇತೇಸ್ತುಮರ್ಥೇ ಸೇಸೇನಿತಿ ತವೈಪ್ರತ್ಯಯಃ । ತವೈ ಚಾಂತಶ್ಚ ಯುಗಪತ್। ಪಾ. ೬. ೨. ೫೧ । ಇತ್ಯಾದ್ಯಂತಯೋರುದಾತ್ತತ್ವಂ । ಪಾದಾ । ಸುಪಾಂ ಸುಲುಗಿತ್ಯಾಕಾರಃ । ಪ್ರತಿಧಾತವೇ । ದಧಾತೇಸ್ತುಮರ್ಥ ಇತಿ ಸೂತ್ರೇಣೈವ ತವೇನ್ಪ್ರತ್ಯಯಃ । ಗತಿ ಚ ನಿತಿ । ಪಾ. ೬. ೨. ೫೦ । ಇತಿ ಗತೇಃ ಪ್ರಕೃತಿಸ್ವರತ್ವಂ । ಅಕಃ । ಕರೋತೇಶ್ಛಂದಸಿಲುಙ್‌ಲಙ್‌ಲಿಟ ಇತಿ ಲೋಡರ್ಥೇ ಲುಙ್ । ತಸ್ಯ ತಿಪ್ । ಮಂತ್ರೇ ಘಸೇತ್ಯಾದಿನಾ । ಪಾ. ೨. ೪. ೮೦ । ಚ್ಲೇರ್ಲುಕ್ । ಗುಣೋ ರಪರತ್ವಂ । ಹಲ್ಙ್ಯಾಬ್ಭ್ಯಃ । ಪಾ. ೬. ೧. ೬೮ । ಇತಿ ತಿಪೋ ಲೋಪಃ । ಅಡಾಗಮಃ । ಹೃದಯಾವಿಧಃ । ಹೃಞ್ ಹರಣೇ । ವೃಹ್ರೋಃ ಷುಗ್ದುಕೌ ಚ । ಉ. ೪. ೧೦೦ । ಇತಿ ಕಯನ್ । ವ್ಯಧ ತಾಡನೇ । ಕ್ವಿಪ್ । ನಹಿವೃತೀತ್ಯಾದಿನಾ । ಪಾ. ೬. ೩. ೧೧೬ । ಪೂರ್ವಪದಸ್ಯ ದೀರ್ಘತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ವರುಣಃ ರಾಜಾ**—ವರುಣರಾಜನು । **ಸೂರ್ಯಾಯ**—ಸೂರ್ಯನಿಗೋಸ್ಕರ । **ಪಂಥಾಂ**—ಸೂರ್ಯ ಪಥವನ್ನು । **ಅನ್ವೇತವಾ ಉ**—ಉದಯಾಸ್ತಗಳನ್ನು ಹೊಂದುವುದಕ್ಕಾಗಿಯೇ । **ಉರುಂ ಚಕಾರ**—ವಿಸ್ತೀರ್ಣ ವನ್ನಾಗಿ ಮಾಡಿದನು । **ಹಿ**—(ಸೂರ್ಯಪಥವು ಉತ್ತರಾಯಣ ದಕ್ಷಿಣಾಯನ ರೂಪವಾಗಿ ವಿಸ್ತೀರ್ಣವೆಂದು) ಪ್ರಸಿದ್ಧ ವಷ್ಟೇ । **ಅಪದೇ**—ಪಾದರಹಿತವಾದ ಅಂತರಿಕ್ಷದಲ್ಲಿ । **ಪಾದಾ**—ಪಾದಗಳನ್ನು । **ಪ್ರತಿಧಾತವೇ**—ಇಡುವುದ ಕ್ಕಾಗಿಯೇ । **ಅಕಃ**—(ಮಾರ್ಗವನ್ನು) ಮಾಡಿದನು । (ಅಥವಾ) **ಅಪದೇ**—(ಯೂಪದಲ್ಲಿ ಬದ್ಧನಾದ ನನ್ನಿಂದ) ಸಂಚರಿಸಲು ಅಶಕ್ಯವಾದ ಭೂಮಿಯ ಮೇಲೆ । (**ಪಾದಾ ಪ್ರತಿಧಾತವೇ**—ಪಾದಗಳನ್ನಿಡಲು ಬಂಧನ ಮೋಚನಕ್ಕೆ ಉಪಾಯವನ್ನು) । **ಅಕಃ**—ಮಾಡಲಿ । **ಉತ**—ಮತ್ತು । **ಹೃದಯಾವಿಧಶ್ಚಿತ್**—(ನನ್ನನ್ನು) ಹಿಂಸಿಸುತ್ತಿರುವ (ಶತ್ರುವನ್ನೂ) ಕೂಡ । **ಅಪವಕ್ತಾ**—ಪರಿಹರಿಸುವವನೂ (ಆಗಲಿ).

॥ ಭಾವಾರ್ಥ ॥

ವರುಣರಾಜನು ಸೂರ್ಯನ ಉದಯಾಸ್ತಗಳಿಗಾಗಿಯೇ ದಕ್ಷಿಣಾಯನೋತ್ತರಾಯಣಗಳೆಂದು ಪ್ರಸಿದ್ಧವಾದ ಮಾರ್ಗವನ್ನು ವಿಸ್ತೃತವನ್ನಾಗಿ ಮಾಡಿದನು. ಯಾವ ಆಧಾರವೂ ಇಲ್ಲದ ಅಂತರಿಕ್ಷದಲ್ಲಿ ಮಾರ್ಗವನ್ನು ಮಾಡಿದನು. (ಅಂತಹ ವರುಣನು) ಬದ್ಧನಾದ ನನಗೆ ಸಂಚಾರಯೋಗ್ಯವಾದ ಭೂಮಿಯ ಮೇಲೆ ಸಂಚರಿಸುವಂತೆ ಬಂಧ ಮೋಚನೋಪಾಯವನ್ನು ಮಾಡಿ, ನನ್ನ ಹಿಂಸಕನಾದ ಶತ್ರುವನ್ನೂ ಪರಿಹಾರಮಾಡಲಿ.

## English Translation.

The King Varuna made wide the path of the sun by which to travel on his daily course; a path to traverse in pathless space; may he be the repeller of every foe that breaks the heart.

॥ ವಿಶೇಷವಿಷಯಗಳು ॥

**ಅನ್ವೇತವೈ ಉ**—ಉದಯಾಸ್ತಮಯಗಳಲ್ಲಿ ಹೋಗುವುದಕ್ಕೆ ಅನುಕೂಲವಾಗುವಂತೆ.

**ಚಕಾರ ಸೂರ್ಯಾಯ ಪಂಥಾಂ**—ಸೂರ್ಯನು ಸಂಚರಿಸುವುದಕ್ಕೆ ಅನುಕೂಲವಾಗಿ ಮಾರ್ಗವನ್ನು (ವಿಸ್ತಾರವಾಗಿ) ಮಾಡಿದನು. ಇಲ್ಲಿ ವರುಣನು ಸೂರ್ಯನು ಸಂಚರಿಸುವ ಮಾರ್ಗವನ್ನು ವಿಸ್ತಾರಮಾಡುವುದು ಹೇಗೆ ಎಂಬುದನ್ನು ವಿಶದವಾಗಿ ತಿಳಿಸಿಲ್ಲ.

**ಅಪದೇ—ಪಾದರಹಿತೇಂತರಿಕ್ಷೇ ।** ಪಾದಗಳಿಂದ ನಡೆಯಲು ಸಾಧ್ಯವಾಗದ ಪ್ರದೇಶ ಎಂದರೆ ಅಂತರಿಕ್ಷ. ಅಥವಾ **ಅಪದೇ, ಯೂಪೇ ಬದ್ಧೇನ ಮಯಾ ಗಂತುಮಶಕ್ಯೇ ಭೂಪ್ರದೇಶೇ ।** ಯೂಪಸ್ತಂಭಕ್ಕೆ ಕಟ್ಟಲ್ಪಟ್ಟಿ ರುವ ನನ್ನಿಂದ (ಶುನಶ್ಶೇಪನಿಂದ) ಬಿಡಿಸಿಕೊಂಡು ಹೋಗಲು ಶಕ್ಯವಲ್ಲದ ಭೂಪ್ರದೇಶ, ಎಂದರೆ ಯೂಪಸ್ತಂಭದಿಂದ ಬಿಡಿಸಿಕೊಂಡು ಬೇರೆ ಪ್ರದೇಶಕ್ಕೆ ಹೋಗಲು ಅನುಕೂಲವಾಗುವಂತೆ.

**ಪಾದಾ ಪ್ರತಿಧಾತವೇ—ಪಾದೌ ಪ್ರಕ್ಷೇಪ್ತುಂ, ಪಾದೌ ಪ್ರತಿ ನಿಧಾತುಂ ।** ಪಾದಗಳನ್ನು ಇಡುವುದಕ್ಕೆ ನಡೆದುಕೊಂಡು ಹೋಗುವುದಕ್ಕೆ.

**ಅಕಃ**—(ಮಾರ್ಗವನ್ನು) ಮಾಡಿದನು.

**ಅಪವಕ್ತಾ—ಅಪವದಿತಾ ।** ಕೆಟ್ಟಮಾತನ್ನಾಡುವ

**ಹೃದಯಾವಿಧಃ—ಅಸ್ಮದೀಯವೇಧಕಸ್ಯ ಶತ್ರೋಃ । ಅಥವಾ ಪರುಷವಚನಾಯೋಗ್ಯವ್ಯವಹಾರಸಮಾಚರಣಾದಿಭಿರ್ಹೃದಯಂ ಯೋ ವಿಧ್ಯತಿ ಪೀಡಯತಿ ಸ ಹೃದಯಾವಿತ್ ತಸ್ಯ ।** ನಮ್ಮ ಮನಸ್ಸಿಗೆ ವ್ಯಥೆಯನ್ನುಂಟುಮಾಡುವ ಶತ್ರುವಿನ ಅಥವಾ ಕೆಟ್ಟಮಾತುಗಳು, ಕೆಟ್ಟನಡತೆ, ದುರ್ವ್ಯಾಪಾರ ಮೊದಲಾದವುಗಳ ಆಚರಣೆಯಿಂದ ಹೃದಯಕ್ಕೆ (ಮನಸ್ಸಿಗೆ) ವ್ಯಥೆಯನ್ನುಂಟುಮಾಡುವ ಪುರುಷನಿಗೆ ಹೃದಯಾವಿಧಃ ಎಂದು ಹೇಳುವರು. ಇಂತಹ ಪುರುಷನನ್ನು ನಿಗ್ರಹಿಸುವ ವರುಣನೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಪನ್ಥಾಂ**—ಪತ್ಲೃ ಗತೌ-'**ಪತೇಸ್ಥ ಚ**' (ಉ. ಸೂ. ೪-೪೫೨) ಪತ್ ಧಾತುವಿನ ಮುಂದೆ ಇನ್‌ಪ್ರತ್ಯಯವೂ ತ್‌ಗೆ ಥ್ ಆದೇಶವೂ ಬರುತ್ತೆ ಎಂದು ಇನ್‌ಬಂದು ಥ್‌ಬಂದರೆ ಪಥಿನ್ ಆಗುತ್ತೆ. ದ್ವಿತೀಯಾ ಏಕವಚನ ಅಮ್, '**ಪಥಿಮಥಿ ಋಭುಕ್ಷಾಮಾತ್**' (ಪಾ. ಸೂ. ೭-೧-೮೫) ಸು ಪರದಲ್ಲಿದ್ದರೆ ಪಥಿ ಮೊದಲಾದ ಶಬ್ದಗಳ ಕೊನೆಯ ವರ್ಣಕ್ಕೆ ಆಕಾರದೇಶ ಬರುತ್ತೆ ಎಂದು ಪ್ರಥಮೈಕವಚನದಲ್ಲಿ ವಿಧಿಸಿರುವ ಆತ್ವವು ಛಂದಸ್ಸಾದ್ದರಿಂದ ವ್ಯತ್ಯಾಸದಿಂದ ದ್ವಿತೀಯೈಕವಚನದಲ್ಲಿಯೂ ಬರುತ್ತೆ. ಪಥಿ+ಆ+ಅಮ್-'**ಇತೋಽತ್ಸರ್ವನಾಮಸ್ಥಾನೇ**' (ಪಾ. ಸೂ. ೭.೧-೮೬) ಸು ಮೊದಲಾಗಿ ೫ ವಿಭಕ್ತಿಗಳು ಪರದಲ್ಲಿದ್ದರೆ ಪಥಿ ಮೊದಲಾದ ಶಬ್ದಗಳ ಇಗೆ ಅ-ಬರುತ್ತೆ ಎಂದು ಅಕಾರ. '**ಥೋನ್ಥಃ**' (ಪಾ. ಸೂ. ೭-೧-೮೭) ಸು ಮೊದಲಾದ ೫ ಪ್ರತ್ಯಯಗಳು ಇರುವಾಗ ಪಥಿಮಥ್‌ಗಳ ಥ್‌ಗೆ ನ್ಥ್ ಬರುತ್ತೆ ಎಂದು ನ್ಥ್ ಬಂದರೆ ಪನ್ಥಾ+ಅಮ್ ಪೂರ್ವರೂಪ. '**ಪಥಿಮಥೋಸ್ಸರ್ವನಾಮಸ್ಥಾನೇ**' (ಪಾ. ಸೂ. ೬-೧-೧೯೯) ಸು ಮೊದಲಾದ ೫ ಪ್ರತ್ಯಯ ಇರುವಾಗ ಪಥಿ ಮಥ್‌ಗಳ ಆದಿಯು ಉದಾತ್ತವಾಗುವುದು ಎಂದು ಪ್ರತ್ಯಯಸ್ವರವನ್ನು ಬಾಧಿಸಿ ಆದಿಗೆ ಉದಾತ್ತ ಬರುತ್ತೆ.

**ಅಕಃ**—ಡುಕೃಞ್ ಕರಣೇ. '**ಛಂದಸಿ ಲುಙ್‌ಲಙ್‌ಲಿಟಃ**' (ಪಾ. ಸೂ. ೩-೪-೬) ಧಾತ್ವರ್ಥಗಳ ಸಂಬಂಧ ತೋರಿದರೆ ಕಾಲತ್ರಯದಲ್ಲಿ ಈ ಪ್ರತ್ಯಯಗಳು ವೇದದಲ್ಲಿ ಬರುವುವು ಎಂದು. ಲುಙ್-ತಿಪ್-ಕೃ+ತಿ '**ಮಂತ್ರೇಘಸಹ್ವರಣಶವೃದಹಾದ್ವೃಚ್ಕೃಗಮಿಜನಿಭ್ಯೋ ಲೇಃ**' (ಪಾ. ಸೂ. ೨-೪-೮೦) ಮಂತ್ರದಲ್ಲಿ ಇವುಗಳ ಮುಂದಿರುವ ಲಿಗೆ ಲುಕ್ ಬರುತ್ತೆ ಎಂದು '**ಚ್ಲಿ ಲುಙ್**' ಎಂದು ಬರುವ ಚ್ಲಿಗೆ ಲುಕ್, ಗುಣಬಂದು ಅರ್ ಆಗುತ್ತೆ. ಕರ್+ತಿ '**ಹಲ್ಙ್ಯಾಭ್ಯಃ-**' (ಪಾ. ಸೂ. ೬-೧-೬೮) ಎಂದು ಅಪೃಕ್ತವಾದ ತಿಗೆ ಲೋಪ. ಅಡಾಗಮ ರ್‌ಗೆ ವಿಸರ್ಗ.

**ಹೃದಯಾವಿಧಃ**—ಹೃಞ್ ಹರಣೇ, '**ವೃಹ್ರೋಃ ಷುಗ್ದುಕೌ**' (ಉ. ಸೂ. ೪-೫೪೦) ವೃಞ್ ವರಣೇ, ಹೃಞ್ ಧಾತುಗಳ ಮುಂದೆ ಕಯನ್ ಪ್ರತ್ಯಯವೂ ಯಥಾಕ್ರಮವಾಗಿ ಷುಕ್, ದುಕ್ ಆಗಮವೂ ಬರುತ್ತೆ ಎಂದು ಹೃನ ಮುಂದೆ ಕಯನ್ ಬಂದು, ಹೃ+ಅಯ ದ್ ಆಗಮ-ಹೃದ್+ಅಯ=ಹೃದಯ. ವ್ಯಧ ಧಾತು ಮುಂದೆ ಕ್ವಿಪ್, '**ನಹಿವೃತಿವೃಷಿವ್ಯಧಿ ರುಚಿಸಹಿತನಿಷು ಕ್ವೌ**' (ಪಾ. ಸೂ. ೬-೩-೧೧೬) ಎಂದು ಪೂರ್ವಪದಕ್ಕೆ ದೀರ್ಘ, ಷಷ್ಠೀ ಏಕವಚನ. ॥ ೮ ॥

॥ ಸಂಹಿತಾಪಾಠಃ ॥

ಶತಂ ತೇ ರಾಜನ್ಭಿಷಜಃ ಸಹಸ್ರಮುರ್ವೀ ಗಭೀರಾ ಸುಮತಿಷ್ಟೇ ಅಸ್ತು ।
ಬಾಧಸ್ವ ದೂರೇ ನಿರ್ಋತಿಂ ಪರಾಚೈಃ ಕೃತಂ ಚಿದೇನಃ ಪ್ರ ಮುಮುಗ್ಧ್ಯಸ್ಮತ್ ॥ ೯ ॥

॥ ಪದಪಾಠಃ ॥

ಶತಂ । ತೇ । ರಾಜನ್ । ಭಿಷಜಃ । ಸಹಸ್ರಂ । ಉರ್ವೀ । ಗಭೀರಾ । ಸುಽಮತಿಃ । ತೇ । ಅಸ್ತು ।
ಬಾಧಸ್ವ । ದೂರೇ । ನಿಃಽಋತಿಂ । ಪರಾಚೈಃ । ಕೃತಂ । ಚಿತ್ । ಏನಃ । ಪ್ರ । ಮುಮುಗ್ಧಿ । ಅಸ್ಮತ್ ॥ ೯ ॥

॥ ಸಾಯಣಭಾಷ್ಯಂ ॥

ಹೇ ರಾಜನ್ವರುಣ ತೇ ತವ ಶತಂ ಭಿಷಜೋ ಬಂಧನಿವಾರಕಾಣಿ ಶತಸಂಖ್ಯಾಕಾನ್ಯೌಷಧಾನಿ ವೈದ್ಯಾ ವಾ ಸಂತಿ । ತೇ ತವ ಸುಮತಿರಸ್ಮದನುಗ್ರಹಬುದ್ಧಿರುರ್ವೀ ವಿಸ್ತೀರ್ಣಾ ಗಭೀರಾ ಗಾಂಭೀರ್ಯೋಪೇತಾ ಸ್ಥಿರಾಸ್ತು। ನಿರ್ಋತಿಮಸ್ಮದನಿಷ್ಟಕಾರಿಣೀಂ ನಿರ್ಋತಿಂ ಪಾಪದೇವತಾಂ ಪರಾಚೈಃ ಪರಾಙ್ಮುಖಾಂ ಕೃತ್ವಾ ದೂರೇಽಸ್ಮತ್ತೋ ವ್ಯವಹಿತೇ ದೇಶೇ ಸ್ಥಾಪಯಿತ್ವಾ ತಾಂ ಬಾಧಸ್ವ। ಕೃತಂ ಚಿದಸ್ಮಾಭಿರನುಷ್ಠಿತಮಪ್ಯೇನಃ ಪಾಪಮಸ್ಮತ್ ಪ್ರ ಮುಮುಗ್ಧಿ। ಪ್ರಕರ್ಷೇಣ ಮುಕ್ತಂ ನಷ್ಟಂ ಕುರು ॥ ಸುಮತಿಃ । ತಾದೌ ಚೇತಿ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಮನ್ಕ್ತಿನ್ನಿತ್ಯಾದಿನೋತ್ತರಪದಾಂತೋದಾತ್ತತ್ವಂ । ಸಂಹಿತಾಯಾಂ ವಿಸರ್ಜನೀಯಸಕಾರಸ್ಯ ಯುಷ್ಮತ್ತತ್ತತಕ್ಷುಃಷ್ವಂತಃಪಾದಂ । ಪಾ ೮. ೩. ೧೦೩ । ಇತಿ ಷತ್ವಂ। ಬಾಧಸ್ವ ಬಾಧೃ ವಿಲೋಡನೇ । ಶಪಃ ಪಿತ್ತ್ವಾದನುದಾತ್ತತ್ವಂ। ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ ಶಿಷ್ಯತೇ । ನಿರ್ಋತಿಂ। ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಮುಮುಗ್ಧಿ । ಮುಚ್ಲೃ ಮೋಕ್ಷಣೇ । ಬಹುಲಂ ಛಂದಸೀತಿ ಶ್ಲುಃ। ಹುಝಲ್ಭ್ಯೋ ಹೇರ್ಧಿಃ । ಪಾ ೬. ೪. ೧೦೧ । ತಸ್ಯಾಪಿತ್ತ್ವೇನ ಙಿತ್ತ್ವಾದ್ಗುಣಾಭಾವಃ । ಚೋಃ ಕುಃ । ಪಾ. ೮. ೨. ೩೦ । ಇತಿ ಕುತ್ವಂ ॥

॥ ಪ್ರತಿಪದಾರ್ಥ ॥

**ಹೇ ರಾಜನ್**—ಎಲೈ ರಾಜನಾದ ವರುಣನೇ । **ತೇ**—ನಿನಗೆ (ನಿನ್ನಲ್ಲಿ) । **ಶತಂ**—ನೂರುಗಟ್ಟಲೆಯಾಗಿಯೂ । **ಸಹಸ್ರಂ**—ಸಾವಿರಗಟ್ಟಲೆಯಾಗಿಯೂ । **ಭಿಷಜಃ**—(ರೋಗನಿವಾರಕಗಳಾದ) ಔಷಧಿಗಳು ಇವೆ । **ತೇ**—ನಿನಗೆ । **ಸುಮತಿಃ**—(ನಮ್ಮಲ್ಲಿ ಅನುಗ್ರಹ) ಬುದ್ಧಿಯು । **ಉರ್ವೀ**—ಹೆಚ್ಚಾಗಿಯೂ । **ಗಭೀರಾ**—ಗಾಂಭೀರ್ಯಯುಕ್ತವಾಗಿಯೂ । **ಅಸ್ತು**—ಸ್ಥಿರವಾಗಿರಲಿ । **ನಿರ್ಋತಿಂ**—(ನಮಗೇ ಅನಿಷ್ಟಕಾರಕವಾದ) ಪಾಪದೇವತೆಯನ್ನು । **ಪರಾಚೈಃ**—ಪರಾಙ್ಮುಖವನ್ನಾಗಿ ಮಾಡಿ । **ದೂರೇ**—(ನಮಗೆ) ದೂರವಾದ ಸ್ಥಳದಲ್ಲಿ । **ಬಾಧಸ್ವ**—(ಆ ದೇವತೆಯನ್ನು) ಹಿಂಸಿಸು । **ಅಸ್ಮತ್**—ನಮ್ಮಿಂದ । **ಕೃತಂ**—ಮಾಡಲ್ಪಟ್ಟ । **ಏನಃ ಚಿತ್**—ಪಾಪವನ್ನೂ ಕೂಡ । **ಪ್ರ ಮುಮುಗ್ಧಿ**—ಚೆನ್ನಾಗಿ ನಾಶಪಡಿಸು.

॥ ಭಾವಾರ್ಥ ॥

ಎಲೈ ರಾಜನೇ, ನಿನ್ನ (ಅಧೀನದಲ್ಲಿ) ನೂರುಗಟ್ಟಲೆ, ಸಾವಿರಗಟ್ಟಲೆ ಔಷಧಿಗಳು ಇವೆ. ನಮ್ಮಲ್ಲಿ ನಿನ್ನ ಅನುಗ್ರಹ ಬುದ್ಧಿಯೂ ಹೆಚ್ಚಾಗಿಯೂ ಗಂಭೀರವಾಗಿಯೂ ಸ್ಥಿರವಾಗಿಯೂ ಇರಲಿ. ನಮಗೆ ಅನಿಷ್ಟಕಾರಕವಾದ ಪಾಪದೇವತೆಯನ್ನು ನಮ್ಮಿಂದ ಹಿಂತಿರುಗಿಸು. ದೂರವಾದ ಪ್ರದೇಶದಲ್ಲಿ ಆ ದೇವತೆಯನ್ನು ಹಿಂಸಿಸು. ನಾವು ಮಾಡಿದ ಪಾಪಗಳನ್ನೂ ಚೆನ್ನಾಗಿ ನಾಶಮಾಡು.

## English Translation.

O king, you have a hundred and a thousand medicaments ; may your kindness to us be great ; keep away from us Nirriti (the god of sin) and torture him ; liberate us from whatever sin we may have committed.

॥ ವಿಶೇಷವಿಷಯಗಳು ॥

**ಶತಂ ಸಹಸ್ರಂ ಭಿಷಜಃ**—ನಿನ್ನಲ್ಲಿರುವ ಔಷಧಿಗಳು ನೂರುಗಟ್ಟಲೆ ಸಾವಿರಗಟ್ಟಲೆ ಎಂದರೆ ಅಸಂಖ್ಯಾತವಾಗಿರುವವು ಎಂಬರ್ಥವು.

**ಉರ್ವೀ ಗಭೀರಾ ಸುಮತಿಃ**—ನಮ್ಮ ವಿಷಯದಲ್ಲಿ ನಿನ್ನ ಬುದ್ಧಿಯು ಬಹಳ ಒಳ್ಳೆಯದಾಗಿಯೂ ಉದಾರತೆಯಿಂದ ಕೂಡಿದುದೂ ಆಗಲಿ.

**ನಿರ್ಋತಿಂ**—ನಿರುಕ್ತದಲ್ಲಿ (೨-೫) ಯಾಸ್ಕರು ನಿರ್ಋತಿ ಶಬ್ದಕ್ಕೆ ಪೃಥಿವೀ ಎಂಬ ಅರ್ಥವನ್ನು ಹೇಳಿರುವರು. ಆದರೆ ಇಲ್ಲಿ ಭಾಷ್ಯಕಾರರು ಪಾಪದೇವತೆ ಎಂದು ಹೇಳಿರುವರು.

**ಮೋ ಷು ಣಃ ಪರಾಪರಾ ನಿರ್ಋತಿರ್ದುರ್ಹಣಾ ವಧೀತ್ ।**

(ಋ. ಸಂ; ೧-೩೮-೬)

ಎಂಬ ಋಕ್ಕಿನಲ್ಲಿ ನಿರ್ಋತಿಶಬ್ದಕ್ಕೆ ಭಾಷ್ಯಕಾರರು, ರಕ್ಷೋಜಾತಿದೇವತಾ ಎಂದು ಅರ್ಥವಿವರಣೆ ಮಾಡಿರುವರು. ಈ ಅರ್ಥವನ್ನೇ ಪ್ರಕೃತ ಋಕ್ಕಿನಲ್ಲಿಯೂ ಹೇಳಬೇಕು. ಏಕೆಂದರೆ ಇದಕ್ಕೆ ಸಂಬಂಧಪಟ್ಟಂತೆ ಬಾಧಸ್ವ-ಹಿಂಸೆಮಾಡು

ಎಂಬ ಶಬ್ದವಿರುವುದರಿಂದ ಅಚೇತನವಾದ ಭೂಮಿಯನ್ನಾಗಲಿ ಇತರ ವಸ್ತುವನ್ನಾಗಲಿ ಬಾಧೆಪಡಿಸುವುದು ಸಾಧ್ಯವಲ್ಲ ವಾದ್ದರಿಂದ ರಾಕ್ಷಸಜಾತಿಗೆ ಸೇರಿದ ದುಷ್ಟಸ್ವಭಾವದವನಾದ ಪಾಪದೇವತೆಯನ್ನು ಎಂದು ಅರ್ಥ ಹೇಳುವುದೇ ಸಮಂಜಸವಾಗಿರುವುದು. ಆಧುನಿಕ ಸಂಸ್ಕೃತದಲ್ಲಿಯೂ ಸಹ ನಿರ್ಋತಿ ಎಂದರೆ ಯಾತುಧಾನ, ರಕ್ಷೋವಿಶೇಷ ಎಂಬ ಅರ್ಥವು ರೂಢಿಯಲ್ಲಿರುವುದು. ಈ ನಿರ್ಋತಿಯು ರಾಕ್ಷಸಜಾತಿಗೆ ಸೇರಿದ್ದರೂ ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳ ನಡುವೆ ಇರುವ ವಿದಿಕ್ಕಿಗೆ ಅಧಿಪತಿಯೆನಿಸಿ ಅಷ್ಟದಿಕ್ಪಾಲಕರಲ್ಲಿ ಒಬ್ಬನೆಂದು ಪ್ರಸಿದ್ಧಿಯಾಗಿರುವುದು. ಋಗ್ವೇದದಲ್ಲಿ ನಿರ್ಋತಿಶಬ್ದವು, ದುಃಖ, ಪಾಪ, ರಾಕ್ಷಸ ಎಂದು ಮೊದಲಾದ ದುಷ್ಟವಾದ ಅರ್ಥವನ್ನು ಹೇಳುವ ಸಂದರ್ಭದಲ್ಲಿಯೇ ಉಪಯೋಗಿಸಲ್ಪಟ್ಟಿರುವುದು. ಋಗ್ವೇದದಲ್ಲಿ ನಿರ್ಋತಿಃ ಎಂಬ ಶಬ್ದದ ಪ್ರಯೋಗವು ಋ. ಸಂ. ೧-೩೮-೬; ೫-೪೧-೧೭; ೭-೩೭-೭; ೧೦-೧೦-೧೧; ೧೦-೩೬-೨; ೧೦-೫೯-೧; ರಲ್ಲಿಯೂ ನಿರ್ಋತಿಂ ಎಂಬ ಶಬ್ದ ಪ್ರಯೋಗವು ೧-೨೪-೯; ೧-೧೬೪-೩೨; ೬-೭೪-೨; ೧೦-೩೬-೪; ೧೦-೭೬-೪ ಎಂಬ ಋಕ್ಕುಗಳಲ್ಲಿಯೂ ಇರುವುದು. ಇದಲ್ಲದೆ ನಿರ್ಋತೀಃ, ನಿರ್ಋತೀನಾಂ, ನಿರ್ಋತೇಃ, ನಿರ್ಋತ್ಯಾಃ, ನಿರ್ಋತ್ಯೈ ಎಂಬ ಶಬ್ದಗಳ ಪ್ರಯೋಗವೂ ಅನೇಕ ಋಕ್ಕುಗಳಲ್ಲಿವೆ.

॥ ವ್ಯಾಕರಣಪ್ರಕ್ರಿಯಾ ॥

**ಸುಮತಿಷ್ವೇ**—'**ತಾದೌಚ ಕೃತಿನಿತ್ಯತೌ**' (ಪಾ. ಸೂ. ೬-೨-೫೦) ಎಂದು ತಕಾರಾದಿಯಾದ ಕ್ತಿನ್ ಪರದಲ್ಲಿರುವುದರಿಂದ ಪೂರ್ವಪದಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ಮನ್‌ಕ್ತಿನ್**—(ಪಾ. ಸೂ. ೬-೨-೧೫೧) ಎಂದು ಉತ್ತರಪದಕ್ಕೆ ಅಂತೋದಾತ್ತಬರುತ್ತೆ. **ಯುಷ್ಮತ್ತತ್ತತಕ್ಷುಃಷ್ವಂತಃಪಾದಂ**—(ಪಾ. ಸೂ. ೮-೩-೧೦೩) ತಕಾರಾದಿಯಾದ ಯುಷ್ಮತ್ ಶಬ್ದ, ತತ್- ತತಕ್ಷು ಇವು ಪರದಲ್ಲಿದ್ದರೆ ಪಾದಮಧ್ಯೆ ಇರುವ ಸ್ ಗೆ ಷ್ ಬರುತ್ತೆ ಎಂದು **ವಿಸರ್ಜನೀಯಸ್ಯ ಸಃ** (ಪಾ. ಸೂ. ೮-೩-೩೪) ಇದರಿಂದ ವಿಸರ್ಗಸ್ಥಾನದಲ್ಲಿ ಬಂದ ಸ್ ಗೆ ಷ್ ಸಂಹಿತಾಕಾಲದಲ್ಲಿ ಬರುತ್ತೆ.

**ಮುಮುಗ್ಧಿ**— '**ಮುಚ್ಲೃ ಮೋಕ್ಷಣೇ**' ಲೋಟ್-ಸಿಪ್ ಹಿ ಆದೇಶ ಮುಚ್+ಹಿ, ಶ ವಿಕರಣ ಅದಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಎಂದು ಶ್ಲು (ಲೋಪ) ಬರುತ್ತೆ. **ಹು ಝಲ್‌ಭ್ಯೋ ಹೇರ್ಧಿಃ** (ಪಾ. ಸೂ. ೬-೪-೧೦೧) ಹುಧಾತು, ಝಲಂತಗಳ ಮುಂದಿನ ಹಿಗೆ ಧಿ ಬರುತ್ತೆ ಎಂದು ಧಿ ಬರುತ್ತೆ. ಮುಚ್+ಧಿ **ಶ್ಲೌ** (ಪಾ. ಸೂ. ೬-೧-೧೦) ದ್ವಿತ್ವ ಮುಚ್+ಮುಚ್+ದಿ. **ಹಲಾದಿಃ ಶೇಷಃ** ಎಂದು ಅಭ್ಯಾಸದ ಚ್ ಗೆ ಲೋಪ. ಹಿಯು ಅಪಿತ್ತಾದ್ದರಿಂದ **ಸಾರ್ವಧಾತುಕಮಪಿತ್** ಎಂದು ಙಿತ್ ಆಗುತ್ತೆ. ಆದ್ದರಿಂದ ಲಘೂಪಧಗುಣ ಬರುವುದಿಲ್ಲ. **ಚೋಃಕುಃ** (ಪಾ. ಸೂ. ೮-೨-೩೦) ಝಲ್‌ಪರದಲ್ಲಿರುವಾಗಲೂ ಪದಾಂತವಿಷದಲ್ಲಿಯೂ ಚ ವರ್ಗಕ್ಕೆ ಕ್ರಮವಾಗಿ ಕವರ್ಗ ಬರುತ್ತೆ. ಮುಮುಕ್+ಧಿ, **ಝಲಾಂ ಜಶ್ ಝಶಿ** (ಪಾ. ಸೂ. ೮-೪-೫೩) ಎಂದು ಜಶ್ತ್ವದಿಂದ ಕ್‌ಗೆ-ಗ್ ಬಂದು ಮುಮುಗ್ಧಿ ಎಂದಾಗುತ್ತೆ. ॥ ೯ ॥

॥ ಸಂಹಿತಾಪಾಠಃ ॥

ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ ನಕ್ತಂ ದದೃಶ್ರೇ ಕುಹ ಚಿದ್ದಿವೇಯುಃ ।
ಅದಬ್ಧಾನಿ ವರುಣಸ್ಯ ವ್ರತಾನಿ ವಿಚಾಕಶಚ್ಚನ್ದ್ರಮಾ ನಕ್ತಮೇತಿ ॥ ೧೦ ॥

॥ ಪದಪಾಠಃ ॥

ಅಮೀ ಇತಿ । ಯೇ । ಋಕ್ಷಾಃ । ನಿಽಹಿತಾಸಃ । ಉಚ್ಚಾ । ನಕ್ತಂ । ದದೃಶ್ರೇ । ಕುಹ । ಚಿತ್ । ದಿವಾ । ಈಯುಃ ।
ಅದಬ್ಧಾನಿ । ವರುಣಸ್ಯ । ವ್ರತಾನಿ । ವಿಽಚಾಕಶತ್ । ಚನ್ದ್ರಮಾಃ । ನಕ್ತಂ । ಏತಿ ॥ ೧೦ ॥

॥ ಸಾಯಣಭಾಷ್ಯಂ ॥

ಅಮೀ ರಾತ್ರಾವಸ್ಮಾಭಿರ್ದೃಶ್ಯಮಾನಾ ಋಕ್ಷಾಃ ಸಪ್ತ ಋಷಯಃ । ತಥಾ ಚ ವಾಜಸನೇಯಿನ ಆಮನಂತಿ । ಋಕ್ಷಾ ಇತಿ ಹ ಸ್ಮ ವೈ ಪುರಾ ಸಪ್ತ ಋಷೀನಾಚಕ್ಷತ ಇತಿ । ಯದ್ವಾ । ಋಕ್ಷಾಃ ಸರ್ವೇಽಪಿ ನಕ್ಷತ್ರವಿಶೇಷಾಃ । ಋಕ್ಷಾಃ ಸ್ತೃಭಿರಿತಿ ನಕ್ಷತ್ರಾಣಾಂ । ನಿ. ೩-೨೦ । ಇತಿ ಯಾಸ್ಕೇನೋಕ್ತತ್ವಾತ್ । ಉಚ್ಚಾ ಉಚ್ಚೈರುಪರಿ ದ್ಯುಪ್ರದೇಶೇ ನಿಹಿತಾಸಃ ಸ್ಥಾಪಿತಾ ಯೇ ಸಂತಿ ತೇ ಋಕ್ಷಾ ನಕ್ತಂ ರಾತ್ರೌ ದದೃಶ್ರೇ । ಸರ್ವೈರಪಿ ದೃಶ್ಯಂತೇ । ದಿವಾಹನಿ ಕುಹ ಚಿದೀಯುಃ । ಕ್ವಾಪಿ ಗಚ್ಛೇಯುಃ । ನ ದೃಶ್ಯಂತ ಇತ್ಯರ್ಥಃ । ವರುಣಸ್ಯ ರಾಜ್ಞೋ ವ್ರತಾನಿ ಕರ್ಮಾಣಿ ನಕ್ಷತ್ರದರ್ಶನಾದಿರೂಪಾಣ್ಯದಬ್ಧಾನಿ ಕೇನಾಪ್ಯಹಿಂಸಿತಾನಿ । ಕಿಂಚ ವರುಣಸ್ಯಾಜ್ಞಯೈವ ಚಂದ್ರಮಾ ನಕ್ತಂ ರಾತ್ರೌ ವಿಚಾಕಶತ್ ವಿಶೇಷೇಣ ದೀಪ್ಯಮಾನ ಏತಿ । ಗಚ್ಛತಿ ॥ ನಿಹಿತಾಸಃ । ಆಜ್ಜಸೇರಸುಕ್ । ಥಾಥಾದಿಸ್ವರೇಣೋತ್ತರಪದಾಂತೋದಾತ್ತತ್ವೇ ಪ್ರಾಪ್ತೇ । ಪಾ. ೬-೨-೧೪೪ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ದದೃಶ್ರೇ । ದೃಶೇರ್ಲಿಟಿ ಇರಯೋ ರೇ । ಪಾ. ೬-೪-೭೬ । ಇತಿ ರೇಆದೇಶಃ । ವ್ಯತ್ಯಯೇನಾದ್ಯುದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ । ಕುಹ । ವಾ ಹ ಚ ಛಂದಸಿ । ಪಾ. ೫-೩-೧೩ । ಇತಿ ಕಿಂಶಬ್ದಾದು-

**ತ್ರ್ರಸ್ಯ ತ್ರಲೋಃ ಹಾದೇಶಃ । ಕು ತಿಹೋಃ । ಪಾ ೭-೨-೧೦೪ । ಇತಿ ಕಿಂಶಬ್ದಸ್ಯ ಕುಆದೇಶಃ । ಸ್ಥಾನಿವದ್ಭಾವಾಲ್ಲಿತ್ಸರ್ವೇಣಾದ್ಯುದಾತ್ತತ್ವಂ । ವಿಚಾಕಶತ್ । ಕಶೇರ್ದೀಪ್ತ್ಯರ್ಥಾದ್ಯಙ್ಲುಗಂತಾ-ಚ್ಛತೃಪ್ರತ್ಯಯಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಸಮಾಸೇ ಕೃತ್ಸ್ವರಃ । ಯದ್ವಾ । ಕಾಶ-ತೇರ್ವಾ ವ್ಯತ್ಯಯೇನೋಪಧಾಹ್ರಸ್ವತ್ವಂ । ಚಂದ್ರಮಾಃ । ಚಂದ್ರೇ ಮಾಙೋ ಡಿತ್ । ಉ. ೪-೨೨೭ । ಇತ್ಯಸಿಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತೇ ದಾಸೀಭಾರಾದಿತ್ವಾತ್ಪೂರ್ವಪದ-ಪ್ರಕೃತಿಸ್ವರತ್ವಂ ॥ ೧೪ ॥**

॥ ಪ್ರತಿಪದಾರ್ಥ ॥

**ಅಮೀ**—(ರಾತ್ರಿಯಲ್ಲಿ ಪರಿದೃಶ್ಯಮಾನವಾದ) ಈ । **ಋಕ್ಷಾಃ**—ಸಪ್ತರ್ಷಿಮಂಡಲವು (ನಕ್ಷತ್ರಗಳು) । **ಉಚ್ಚಾಃ**—ಮೇಲೆ (ಆಕಾಶದಲ್ಲಿ) । **ನಿಹಿತಾಸಃ**—ಸ್ಥಾಪಿಸಲ್ಪಟ್ಟ । **ಯೇ**—ಯಾವುವು (ಇವೆಯೋ ಅವು) । **ನಕ್ತಂ**—ರಾತ್ರಿಯಲ್ಲಿ । **ದದೃಶ್ರೇ**—ಕಾಣಿಸುತ್ತವೆ । **ದಿವಾ**—ಹಗಲಿನಲ್ಲಿ । **ಕುಹ ಚಿತ್**—ಎಲ್ಲಿಯೋ । **ಈಯುಃ**—ಹೋಗುವುವು । **ವರುಣಸ್ಯ**—(ರಾಜನಾದ) ವರುಣನ । **ವ್ರತಾನಿ**—(ನಕ್ಷತ್ರ ದರ್ಶನಾದರ್ಶನರೂಪ ವಾದ) ಕರ್ಮಗಳು । **ಅದಬ್ಧಾನಿ**—(ಯಾರಿಂದಲೂ ತಿಳಿಯಲಶಕ್ಯವು) ಅಪ್ರತಿಹತವಾದವು । (ಮತ್ತು ವರುಣನ ಅಪ್ಪಣೆಯಿಂದಲೇ) । **ಚಂದ್ರಮಾಃ**—ಚಂದ್ರನು । **ನಕ್ತಂ**—ರಾತ್ರಿಯಲ್ಲಿ । **ವಿಚಾಕಶತ್**—ವಿಶೇಷವಾಗಿ ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಅಂತರಿಕ್ಷದಲ್ಲಿ ಕಾಣಿಸುವ ನಕ್ಷತ್ರಗಳು ರಾತ್ರಿಯಲ್ಲಿ ಎಲ್ಲರಿಗೂ ಕಾಣಿಸುವುದೂ, ಹಗಲಿನಲ್ಲಿ ಎಲ್ಲಿಯೋ ಹೊರಟುಹೋಗುವುದೂ ವರುಣನ ಅಪ್ರತಿಹತವಾದ ಕರ್ಮಗಳೇ ಆಗಿರುವವು. ಇವನ ಆಜ್ಞೆಯಿಂದಲೇ ಚಂದ್ರನೂ ರಾತ್ರಿಯಲ್ಲಿ ವಿಶೇಷವಾಗಿ ಪ್ರಕಾಶಿಸುವನು.

## English Translation.

These constellations placed on high which are visible by night and go elsewhere by day are the undisturbed acts of Varuna and by his commands, the moon moves and shines brightly by night.

॥ ವಿಶೇಷವಿಷಯಗಳು ॥

**ಋಕ್ಷಾಃ**—ಆಕಾಶದಲ್ಲಿ ರಾತ್ರಿಕಾಲದಲ್ಲಿ ಕಾಣಿಸುವ ಸಪ್ತರ್ಷಿಮಂಡಲವೆಂಬ ನಕ್ಷತ್ರಮಂಡಲ-ಋಕ್ಷಾಃ ಎಂದರೆ ನಕ್ಷತ್ರಗಳು ಎಂದರ್ಥವಾದರೂ ಇಲ್ಲಿ ಭಾಷ್ಯಕಾರರು ಸಪ್ತರ್ಷಿಗಳೆಂದು ವಿವರಣೆಮಾಡಿರುವರು.

**ಅದಬ್ಧಾನಿ**—ಯಾರಿಂದಲೂ ತಡೆಯಲಸಾಧ್ಯವು ವರುಣನ ಕರ್ಮಗಳ ಅಪ್ರತಿಹತವಾದವು.

**ವ್ರತಾನಿ**--ಕರ್ಮಗಳು, ಕೆಲಸಗಳು, ಸಾಹಸಕೃತ್ಯಗಳು.

॥ ವ್ಯಾಕರಣಪ್ರಕ್ರಿಯಾ ॥

**ದದೃಶ್ರೇ**—**' ದೃಶಿರ್ ಪ್ರೇಕ್ಷಣೇ '** ಲಿಟ್-ಝ-ಇರೇಚ್-ದ್ವಿತ್ವ, ಅಭ್ಯಾಸಲೋಪ. ದದೃಶ್+ಇರೆ **ಇರಯೋರೇ** (ಪಾ. ಸೂ ೬-೪-೭೬) ಛಂದಸ್ಸಿನಲ್ಲಿ ಇರೇಗೆ ರೇ ಆದೇಶಬರುತ್ತೆ ಎಂದು ರೇ ಬಂದರೆ ದದೃಶ್ರೇ ಎಂದಾಗುತ್ತೆ. ಯೇ ಎಂಬ ಯದ್ವೃತ್ತಯೋಗವಿರುವುದರಿಂದ ಸರ್ವಾನುದಾತ್ತಬರುವುದಿಲ್ಲ. ಛಂದಸ್ಸಾದ್ದರಿಂದ ನ್ಯಾಯವಾದ ಅಂತೋದಾತ್ತ ಬರದೆ ವ್ಯತ್ಯಾಸವಾಗಿ ಆದ್ಯುದಾತ್ತ ಬರುತ್ತೆ.

**ಕುಹ**—ಕಿಮ್ ಶಬ್ದದ ಮುಂದೆ **' ಸಪ್ತಮ್ಯಾಸ್ತ್ರಲ್ '** (ಪಾ. ಸೂ. ೫-೩-೧೦) ಎಂದು ತ್ರಲ್. ಅದಕ್ಕೆ **' ವಾಹ ಚ ಛಂದಸಿ '** (ಪಾ. ಸೂ. ೫-೩-೧೩) ಛಂಧಸ್ಸಿನಲ್ಲಿ ತ್ರಲ್‌ಗೆ ಹ ಆದೇಶ ವಿಕಲ್ಪವಾಗಿ ಬರುತ್ತೆ ಎಂದು ಹ ಆದೇಶ. ಹೀಗೆ ವೇದಭಾಷ್ಯದಲ್ಲಿದೆ. ವೈಯಾಕರಣರು **' ವಾಹಚ '** ಎಂಬ ಸೂತ್ರಕ್ಕೆ ಸಪ್ತಮ್ಯಂತವಾದ ಕಿಮ್ ಶಬ್ದದ ಮುಂದೆ ಹಪ್ರತ್ಯಯವೂ ಚಕಾರದಿಂದ ಅತ್-ತ್ರಲ್ ಪ್ರತ್ಯಯಗಳೂ ಬರುವುವು ಎಂದು ಅರ್ಥ ಹೇಳುವರು. ಈ ಪಕ್ಷದಲ್ಲಿ ಸ್ವತಂತ್ರವಾದ ಹಪ್ರತ್ಯಯ ಬರುತ್ತೆ. ಕಿಮ್+ಹ-**' ಕುತಿಹೋಃ '** (ಪಾ. ಸೂ. ೭-೨-೧೦೪) ತಕಾರಾದಿ ಅಥವಾ ಹಕಾರಾದಿ ವಿಭಕ್ತಿ ಪರದಲ್ಲಿದ್ದರೆ ಕಿಮ್‌ಗೆ ಕು ಆದೇಶ ಬರುತ್ತೆ ಎಂದು ಕು-ಆದೇಶ. ಮೊದಲನೇ ಪಕ್ಷದಲ್ಲಿ ತ್ರಲ್ ಲಿತ್-ಆದ್ದರಿಂದ ಅದರ ಸ್ಥಾನದಲ್ಲಿ ಬರುವ ಹ-ವು ಸ್ಥಾನಿವದ್ಭಾವದಿಂದ ಲಿತ್-ಏವಂಚ **' ಲಿತಿ '** ಎಂದು ಪ್ರತ್ಯಯದ ಹಿಂದಿನ ವರ್ಣ ಉದಾತ್ತ. ಎರಡನೇ ಪಕ್ಷದಲ್ಲಿ ಛಾಂದಸವಾಗಿ ಸ್ವರವನ್ನು ಉಪಪಾದಿಸಬೇಕು.

**ವಿಚಾಕಶತ್**—**' ಕಶ ಗತಿಶಾಸನಯೋಃ- '** ಅದಾದಿ ಧಾತುಗಳಿಗೆ ಅನೇಕ ಅರ್ಥಗಳಿರುವುದರಿಂದ ಇಲ್ಲಿ ದೀಪ್ತಿ ಎಂಬ ಅರ್ಥವನ್ನಿಟ್ಟುಕೊಳ್ಳಬೇಕು. ಅಥವಾ ಕಾಶೃ ದೀಪ್ತೌ ಭ್ವಾದಿ. ಇಲ್ಲಿ ದೀರ್ಘಾಕಾರಕ್ಕೆ ಹ್ರಸ್ವವು ಛಾಂದಸವಾಗಿ ಬರುತ್ತೆ. ಅಂತು ಈ ರೂಪವು ಲೋಕವ್ಯವಹಾರಕ್ಕೆ ಸೇರದು. ಕಶ್ ಧಾತುವಿನ ಮುಂದೆ ಯಙ್-ಅದಕ್ಕೆ ಲುಕ್. **' ಸನ್ಯಙೋಃ '** (ಪಾ. ಸೂ. ೬-೧-೯) ದ್ವಿತ್ವ. **' ಹಲಾದಿಃ ಶೇಷಃ '** ಎಂದು ಅಭ್ಯಾಸ ಶ್‌ಗೆ ಲೋಪ. **' ಅಭ್ಯಾಸೇ ಚರ್ಚ '** ಎಂದು ಮೊದಲನೆ ಕಕಾರಕ್ಕೆ ಚಕಾರ. ಚ+ಕಶ್-**' ದೀರ್ಘೋಽಕಿತಃ '** (ಪಾ. ಸೂ. ೭-೪-೮೩) ಕಿತ್ ಅಲ್ಲದ ಅಭ್ಯಾಸದ ಕೊನೆಯ ಸ್ವರಕ್ಕೆ ದೀರ್ಘಬರುತ್ತೆ ಎಂದು ಚ-ಗೆ ದೀರ್ಘ. **' ಚರ್ಕರೀತಂ ಪರಸ್ಮೈ ಪದಮ್ ಅದಾದಿ ವಚ್ಚ ದ್ರಷ್ಟವ್ಯಂ '** ಎಂದು ಪರಸ್ಮೈಪದವಾದ್ದರಿಂದ ಇದರ ಮುಂದೆ ಲಟ್‌ಗೆ ಶತೃ ಆದೇಶ. ಶಪ್‌ಗೆ ಲುಕ್. ಚಾಕಶತ್ ಎಂದಾಯಿತು. **' ಅಭ್ಯಸ್ತಾನಾಮಾದಿಃ '** (ಪಾ. ಸೂ. ೬-೧-೧೮೯) ಇಥ್ಭಿನ್ನ ಅಜಾದಿಸಾರ್ವಧಾತುಕ ಪರದಲ್ಲಿದ್ದರೆ ಅಭ್ಯಸ್ತದ ಆದಿಯು ಉದಾತ್ತವಾಗುತ್ತೆ ಎಂದು ಚಾಕಶತ್ ಆದ್ಯುದಾತ್ತ. ವಿ ಉಪಸರ್ಗದೊಂದಿಗೆ ಸಮಾಸ ಬಂದರೆ ಕೃದುತ್ತರಪದ ಪ್ರಕೃತಿಸ್ವರದಿಂದ ಅದೇ ನಿಲ್ಲುತ್ತೆ.

**ಚಂದ್ರಮಾಃ**—**' ಚಂದ್ರೇ ಮಾಙೋ ಡಿತ್ '** (ಉ. ಸೂ. ೪-೬೬೭) ಚಂದ್ರಶಬ್ದೋಪಪದಕ ಮಾಙ್ ಧಾತುವಿನ ಮುಂದೆ ಅಸಿಪ್ರತ್ಯಯ ಬರುತ್ತೆ ಅದು ಡಿತ್ ಆಗುತ್ತೆ. ಎಂದು ಅಸ್-ಟಿಲೋಪ ಚಂದ್ರಮಸ್ ಇಲ್ಲಿ **' ಕುರುಗಾರ್ಹಪತ+ದಾಸೀಭಾರಾಣಾಂಚ '** (ಪಾ. ಸೂ. ೬-೨-೪೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತೆ. ॥ ೧೦ ॥

॥ ಸಂಹಿತಾಪಾಠಃ ॥

ತತ್ತ್ವಾ ಯಾಮಿ ಬ್ರಹ್ಮಣಾ ವನ್ದಮಾನಸ್ತದಾ ಶಾಸ್ತೇ ಯಜ-
ಮಾನೋ ಹವಿರ್ಭಿಃ ।
ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾನ ಆಯುಃ
ಪ್ರ ಮೋಷೀಃ ॥ ೧೧ ॥

॥ ಪದಪಾಠಃ ॥

ತತ್ । ತ್ವಾ । ಯಾಮಿ । ಬ್ರಹ್ಮಣಾ । ವನ್ದಮಾನಃ । ತತ್ । ಆ । ಶಾಸ್ತೇ । ಯಜ-
ಮಾನಃ । ಹವಿಃऽಭಿಃ ।
ಅಹೇಳಮಾನಃ । ವರುಣ । ಇಹ । ಬೋಧಿ । ಉರುऽಶಂಸ । ಮಾ । ನಃ । ಆಯುಃ ।
ಪ್ರ । ಮೋಷೀಃ ॥ ೧೧ ॥

॥ ಸಾಯಣಭಾಷ್ಯಂ ॥

ಏಕಾದಶಿನಸ್ಯ ವಾರುಣಸ್ಯ ಪಶೋರ್ವಪಾಪುರೋಡಾಶಯೋಸ್ತತ್ತ್ವಾ ಯಾಮೀತಿ ದ್ವೇ ಋಚೌ ಯಾಜ್ಯೇ । ಸೂತ್ರಿತಂ ಚ । ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನ ಇತಿ ದ್ವೇ ಅಸ್ತಭ್ನಾದ್ದ್ಯಾಂ । ಆ. ೩-೭ । ಇತಿ ॥ ವರುಣಪ್ರಘಾಸೇಷು ವಾರುಣಸ್ಯ ಹವಿಷೋ ಯಾಜ್ಯಾ ತತ್ತ್ವಾ ಯಾಮೀತ್ಯೇಷಾ ಪಂಚಮ್ಯಾಂ ಪೌರ್ಣಮಾಸ್ಯಾಮಿತ್ಯತ್ರ ಸೂತ್ರಿತಂ । ಇಮಂ ಮೇ ವರುಣ ಶ್ರುಧಿ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಃ । ಆ. ೨-೧೭ । ಇತಿ ॥

ಹೇ ವರುಣ ಮುಮೂರ್ಷುರಹಂ ತ್ವಾಂ ಪ್ರತಿ ತದಾಯುರ್ಯಾಮಿ । ಯಾಚೇ । ಕೀದೃಶಃ । ಬ್ರಹ್ಮಣಾ ಪ್ರೌಢೇನ ಸ್ತೋತ್ರೇಣ ವಂದಮಾನಃ ಸ್ತುವನ್ । ಸರ್ವತ್ರ ಯಜಮಾನೋಽಪಿ ಹವಿರ್ಭಿಸ್ತ-ದಾಯುರಾ ಶಾಸ್ತೇ । ಪ್ರಾರ್ಥಯತೇ । ತ್ವಂ ಚೇಹ ಕರ್ಮಣ್ಯಹೇಳಮಾನೋಽನಾದರಮಕುರ್ವ-ನ್ಬೋಧಿ । ಅಸ್ಮದಪೇಕ್ಷಿತಂ ಬುಧ್ಯಸ್ವ । ಹೇ ಉರುಶಂಸ ಬಹುಭಿಃ ಸ್ತುತ್ಯ ನೋಽಸ್ಮದೀಯಮಾ-ಯುರ್ಮಾ ಪ್ರ ಮೋಷೀಃ । ಪ್ರಮುಷಿತಂ ಮಾ ಕುರು । ಸಪ್ತದಶಸಂಖ್ಯಾಕೇಷು ಯಾಜ್ಯಾಕರ್ಮಸ್ವೇ-

**ಮಹೇ ಯಾಮೀತಿ ಪಠಿತಂ । ಚಾಶಬ್ದಲೋಪಶ್ಛಾಂದಸಃ ॥ ಅಹೇಳಮಾನಃ । ಹೇಡೃ ಅನಾದರೇ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶಪಶ್ಚ ಪಿತ್ತ್ವಾದನುದಾತ್ತತ್ವೇ ಸತಿ ಧಾತುಸ್ವರಃ ಶಿಷ್ಯತೇ । ತತೋ ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಬೋಧಿ । ಬುಧ ಅವಗಮನೇ । ಲೋಟಃ ಸೇರ್ಹಿಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ವಾ ಛಂದಸಿ । ಪಾ. ೩-೪-೮೮ । ಇತ್ಯಪಿತ್ತ್ವಾಭಾವೇನ ಙಿತ್ತ್ವಾಭಾವಾಲ್ಲಘೂಪಧಗುಣಃ । ಹುಝಲ್ಭ್ಯೋ ಹೇರ್ಧಿರಿತಿ ಹೇರ್ಧಿರಾದೇಶಃ । ಧಾತೋರಂತ್ಯಲೋಪಶ್ಛಾಂದಸಃ । ಮೋಷೀಃ । ಮುಷ ಸ್ತೇಯೇ । ಲೋಡರ್ಥೇ ಛಾಂದಸೋ ಲುಙ್ । ವದವ್ರಜೇತಿ ಪ್ರಾಪ್ತಾಯಾ ವೃದ್ಧೇರ್ನೇಟಿ । ಪಾ. ೭-೨-೩, ೪ । ಇತಿ ಪ್ರತಿಷೇಧೇ ಸತಿ ಲಘೂಪಧಗುಣಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ॥**

॥ ಪ್ರತಿಪದಾರ್ಥ ॥

**ಹೇ ವರುಣ**—ಎಲೈ ವರುಣನೇ (ಮರಣೋನ್ಮುಖನಾದ ನಾನು) । **ಬ್ರಹ್ಮಣಾ**—ಉತ್ತಮವಾದ ಸ್ತೋತ್ರದಿಂದ । **ವಂದಮಾನಃ**—ಸ್ತುತಿಸುವವನಾಗಿ । **ತ್ವಾ**—ನಿನ್ನನ್ನು । **ತತ್**—ಆಯುಸ್ಸನ್ನು । **ಯಾಮಿ**—ಯಾಚಿಸುತ್ತೇನೆ । **ಯಜಮಾನಃ**—ಯಜಮಾನನೂ (ಕೂಡ) । **ಹವಿರ್ಭಿಃ**—ಹವಿಸ್ಸುಗಳಿಂದ । **ತತ್**—ಆಯುಸ್ಸನ್ನು । **ಆ ಶಾಸ್ತೇ**—ಪ್ರಾರ್ಥಿಸುತ್ತಾನೆ (ನೀನೂ ಕೂಡ) । **ಇಹ**—ಈ ಕರ್ಮದಲ್ಲಿ । **ಅಹೇಳಮಾನಃ**—ಅನಾದರಮಾಡದೇ । **ಬೋಧಿ**—(ನಮ್ಮ ಇಷ್ಟವನ್ನು) ತಿಳಿದುಕೋ । **ಉರು ಶಂಸ**—ಅನೇಕರಿಂದ ಸ್ತುತ್ಯನಾದ ಎಲೈ ವರುಣನೇ । **ನಃ**—ನಮ್ಮ । **ಆಯುಃ**—ಆಯುಸ್ಸನ್ನು । **ಮಾ ಪ್ರಮೋಷೀಃ**—ಅಪಹರಿಸಬೇಡ.

॥ ಭಾವಾರ್ಥ ॥

ವರುಣನೇ, (ಮರಣೋನ್ಮುಖನಾದ) ನಾನು ಉತ್ತಮಸ್ತುತಿವಾಕ್ಯಗಳಿಂದ ಸ್ತುತಿಸಿ, ಆಯುಸ್ಸನ್ನು ಬೇಡುತ್ತೇನೆ. ಯಜಮಾನನೂ ಕೂಡ ಹವಿಸ್ಸುಗಳಿಂದ (ತುಷ್ಟಿಪಡಿಸಿ) ಆಯುಸ್ಸನ್ನು ಪ್ರಾರ್ಥಿಸುತ್ತಾನೆ. ಅನೇಕರಿಂದ ಸ್ತುತ್ಯನಾದ ನೀನು ಈ ಕರ್ಮದಲ್ಲಿ ನಮ್ಮ ಇಷ್ಟಾರ್ಥವನ್ನು ತಿಳಿದುಕೋ. ನಮ್ಮ ಆಯುಸ್ಸನ್ನು ಅಪಹರಿಸಬೇಡ.

## English Translation.

With adoration I ask you for that life which the sacrificer solicits vith oblations; Varuna, do not neglect us; praised by many, do not leprive us of our life.

॥ ವಿಶೇಷವಿಷಯಗಳು ॥

ವರುಣಸಂಬಂಧವಾದ ಪಶುಯಾಗದಲ್ಲಿ ಏಕಾದಶಪ್ರಯಾಜಗಳೆಂಬ ಪಶುವಿನ ವಪಾಹೋಮಮಾಡುವಾಗ **ತತ್ತ್ವಾಯಾಮಿ** ಎಂದು ಮೊದಲಾಗುವ ಎರಡು ಋಕ್ಕುಗಳನ್ನು ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕು. ಈ ವಿಷಯವು ಆಶ್ವಲಾಯನಶ್ರೌತಸೂತ್ರದಲ್ಲಿ **ತತ್ತ್ವಾಯಾಮಿ ಬ್ರಹ್ಮಣಾ ವಂದಮಾನ ಇತಿ ದ್ವೇ ಅಸ್ತಭ್ನಾದ್ದ್ಯಾಂ** ಎಂಬ ಸೂತ್ರದಿಂದ ನಿರೂಪಿಸಲ್ಪಟ್ಟಿರುವುದು (ಆ. ೩-೭).

ಮತ್ತು ವರುಣಪ್ರಘಾಸವೆಂಬ ಹೋಮದಲ್ಲಿಯೂ ಕೂಡ ವರುಣನಿಗೆ ಹವಿಃಪ್ರದಾನಮಾಡುವಾಗ **ಈ ತತ್ವಾ ಯಾಮಿ** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು **ಪಂಚಮ್ಯಾಂ ಪೌರ್ಣ-ಮಾಸ್ಯಾಂ** ಎಂಬ ಖಂಡದಲ್ಲಿ **ಇಮಂ ಮೇ ವರುಣ ಶ್ರುಧಿ ತತ್ವಾ ಯಾಮಿ ಬ್ರಹ್ಮಣಾ ವಂದಮಾನಃ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು (ಆ. ೨-೧೭)

**ತತ್**—ಅದನ್ನು ಎಂದರೆ ಇಲ್ಲಿ ಮರಣೋನ್ಮುಖನಾಗಿರುವ ಶುನಶ್ಶೇಪನಿಗೆ ಬೇಕಾದ ಆಯುಸ್ಸು ಎಂದರ್ಥವು

**ತದಾಶಾಸ್ತೇ ಯಜಮಾನಃ**—ಯಜ್ಞಮಾಡುವ ಯಜಮಾನನೂ ಸಹ ಹವಿಸ್ಸನ್ನರ್ಪಿಸಿ ವರುಣನಿಂದ ಆಯುಸ್ಸನ್ನೇ ಅಪೇಕ್ಷಿಸುವನು.

**ಬ್ರಹ್ಮಣಾ**--ಬ್ರಹ್ಮಶಬ್ದಕ್ಕೆ ಅನ್ನವೆಂದೂ (ನಿ. ೩-೯) ಧನವೆಂದೂ (ನಿ. ೩-೯) ಸ್ತೋತ್ರವೆಂದೂ ಅನೇಕ ಅರ್ಥಗಳಿದ್ದರೂ ಇಲ್ಲಿ ಸ್ತೋತ್ರವೆಂಬ ಅರ್ಥವನ್ನೇ ಹೇಳಬೇಕು.

**ಅಹೇಳಮಾನಃ**— **ಅನಾದರಮಕುರ್ವನ್ । ಹೇಡ ಅನಾದರೆ,** ಅಲಕ್ಷ್ಯಮಾಡದೆ.

**ಉರುಶಂಸ**—ಬಹುಭಿಃ ಸ್ತುತ್ಯ । ಅನೇಕರಿಂದ ಸ್ತೋತ್ರ ಮಾಡಲ್ಪಡುವವನು.

**ಮಾ ನ ಆಯುಃ ಪ್ರಮೋಷೀಃ**—**ಮೋಷೀಃ । ಮುಷ ಸ್ತೇಯೇ । ನ ಮೋಷೀಃ**—ಎಂದರೆ ಕದಿಯು ಬೇಡ ಎಂದರೆ ನಮ್ಮ ಆಯುಸ್ಸನ್ನು ಕಡಮೆ ಮಾಡಬೇಡ; ಮೊಟಕುಮಾಡಬೇಡ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅಹೇಳಮಾನಃ**—ಹೇಡೃ ಅನಾದರೆ ಧಾತು. ಭ್ವಾದಿ. ಅನುದಾತ್ತೇತ್. **'ಲಟಃ ಶತೃಶಾನಚಾ**—ಸೂತ್ರ ದಿಂದ ಶಾನಚ್ ಪ್ರತ್ಯಯು ಬರುತ್ತದೆ. ಮಧ್ಯೆ ಶಪ್ ವಿಕರಣ ಬಂದರೆ ಹೇಳಮಾನ ಎಂದು ರೂಪವಾಗುತ್ತದೆ. ಇಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಪ್ರತ್ಯಯು ಸ್ವರದಿಂದ ಶಾನಚ್ ಆದ್ಯುದಾತ್ತವಾದರೆ ಆದಕ್ಕೆ **'ತಾಸ್ಯನುದಾತ್ತೇತ್-'** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತ ಸ್ವರ ಬರುತ್ತದೆ. ಆಗ **'ಧಾತೋಃ'** (ಪಾ. ಸೂ. ೬-೧-೧೬೨) ಎಂಬುದರಿಂದ ಬಂದ ಧಾತುವಿನ ಅಂತೋದಾತ್ತಸ್ವರವೇ ಸತಿಶಿಷ್ಟವಾಗುತ್ತದೆ. ಹೇಳಮಾನಃ ಎಂಬುದರೊಡನೆ ನಞ್ ಸಮಾಸ ಮಾಡಿದ ಮೇಲೆ **'ನಲೋಪೋನಞಃ'** (ಪಾ. ಸೂ. ೬-೩-೭೩) ಸೂತ್ರದಿಂದ ನಞಿನ ನಕಾರಕ್ಕೆ ಲೋಪ ಬರುತ್ತದೆ. ಅಹೇಳಮಾನಃ ಎಂದು ರೂಪವಾಗುತ್ತದೆ. ಇದು ತತ್ಪುರುಷ ಸಮಾಸ. **'ತತ್ಪುರುಷೇ ತುಲ್ಯಾರ್ಥ'** (ಪಾ. ಸೂ. ೬-೨-೨) ಸೂತ್ರದಿಂದ ಅವ್ಯಯಪೂರ್ವಪದವಾಗಿರುವುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಅಹೇಳಮಾನಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

**ಬೋಧಿ**—ಬುಧ ಅವಗಮನೆ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬಂದರೆ ಅದಕ್ಕೆ ಹಿ ಆದೇಶ ಬರುತ್ತದೆ. ಶಪ್ ವಿಕರಣವು ಪ್ರಾಪ್ತವಾದರೆ **'ಬಹುಲಂ ಛಂದಸಿ'** (ಪಾ. ಸೂ. ೨-೪-೭೬) ಎಂಬುದರಿಂದ ಅದಕ್ಕೆ ಲುಕ್ ಬರುತ್ತದೆ. **'ವಾ ಛಂದಸಿ'** (ಪಾ. ಸೂ. ೩-೪-೮೮) ಛಂದಸ್ಸಿನಲ್ಲಿ ಹಿ ಆದೇಶವು ವಿಕಲ್ಪವಾಗಿ ಅಪಿತ್ತಾಗುತ್ತದೆ ಎಂಬುದರಿಂದ ಇಲ್ಲಿ **'ಸೇರ್ಹ್ಯಪಿಚ್ಚ'** (ಪಾ. ಸೂ. ೩-೪-೮೭) **ಸೂತ್ರದಿಂದ** ನಿತ್ಯ

ವಾಗಿ ಹಿಗೆ ಅಪಿತ್ವವು ಬರುವುದಿಲ್ಲ. ಅಪಿತ್ತಾಗದಿರುವುದರಿಂದ ಙಿತ್ವವೂ ಬರುವುದಿಲ್ಲ. ಆದುದರಿಂದ ಹಿ ಪರದಲ್ಲಿರುವಾಗ ಧಾತುವಿನ ಲಘೂಪಧಕ್ಕೆ ಗುಣ ಬರುತ್ತದೆ. ಬೋಧ್+ಹಿ ಎಂದಿರುವಾಗ **'ಹುಝಲ್ಭ್ಯೋ ಹೇರ್ಧಿಃ'** (ಪಾ. ಸೂ. ೬-೪-೧೦೧) ಎಂಬುದರಿಂದ ಝಲಂತದ ಪರದಲ್ಲಿರುವುದರಿಂದ ಹಿ ಗೆ ಧಿ ಎಂಬ ಆದೇಶವು ಬರುತ್ತದೆ. ಬೋಧ್+ಧಿ ಎಂದಿರುವಾಗ ಧಾತುವಿನ ಅಂತ್ಯಕ್ಕೆ ಛಾಂದಸವಾದ ಲೋಪವನ್ನು ಹೇಳಬೇಕು. ಬೋಧಿ ಎಂದು ರೂಪವಾಗುತ್ತದೆ, ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮೋಚಿಃ**—ಮುಷ ಸ್ತೇಯೆ ಧಾತು. ಕ್ರ್ಯಾದಿ. **'ಛಂದಸಿ ಲುಙ್‌ಲಙ್‌ಲಿಟಃ'** (ಪಾ. ಸೂ. ೩-೪-೬) ಸೂತ್ರದಿಂದ ಲೋಡರ್ಥದಲ್ಲಿ ಲುಙ್ ಬರುತ್ತದೆ. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬರುತ್ತದೆ. **ಇತಶ್ಚ** ಸೂತ್ರದಿಂದ ಸಿಪ್ಪಿನ ಇಕಾರಕ್ಕೆ ಲೋಪ ಬರುತ್ತದೆ. **'ಚ್ಲಿ ಲುಙಿ'** ಸೂತ್ರದಿಂದ ಚ್ಲಿವಿಕರಣವು ಪ್ರಾಪ್ತವಾದರೆ ಆದಕ್ಕೆ **ಚ್ಲೇಃ ಸಿಚ್** ಎಂಬುದರಿಂದ ಸಿಚ್ ಆದೇಶ ಬರುತ್ತದೆ. ವಲಾದಿಯಾದುದರಿಂದ ಅದಕ್ಕೆ ಇಡಾಗವು ಬರುತ್ತದೆ. **'ಅಸ್ತಿಸಿಚೋಽಪೃಕ್ತೇ'** (ಪಾ.ಸೂ. ೭-೩-೯೬) ಎಂಬುದರಿಂದ ಅಪೃಕ್ತವಾದ (ಏಕಾಲಾದ) ಪ್ರತ್ಯಯಕ್ಕೆ ಈಡಾಗಮ ಬರುತ್ತದೆ. **'ವದವ್ರಜಹಲಂತಸ್ಯಾಚಃ'** (ಪಾ. ಸೂ. ೭-೨-೩) ಎಂಬುದರಿಂದ ಸಿಚ್ ಪರದಲ್ಲಿರುವುದರಿಂದ ಹಲಂತವಾದ ಮುಷ್ ಎಂಬುದರ ಉಕಾರಕ್ಕೆ ವೃದ್ಧಿಯು ಪ್ರಾಪ್ತವಾಗುತ್ತದೆ **'ನೇಟಿ'** (ಪಾ. ಸೂ. ೭-೨-೪) ಇಡಾದಿಯಾದ ಸಿಚ್ ಪರದಲ್ಲಿರುವಾಗ ಹಲಂತಾಂಗಕ್ಕೆ ವೃದ್ಧಿ ಬರುವುದಿಲ್ಲವೆಂಬುದರಿಂದ ವೃದ್ಧಿನಿಷೇಧ ಬರುತ್ತದೆ. ಆಗ **ಪುಗಂತಲಘೂಪಧಸ್ಯಚ** ಸೂತ್ರದಿಂದ ಲಘೂಪಧಗುಣ ಬರುತ್ತದೆ. **'ಇಟ ಈಟಿ'** (ಪಾ. ಸೂ. ೮-೨-೨೮) ಸೂತ್ರದಿಂದ ಇಟನ ಪರದಲ್ಲಿರುವ ಸಿಚಿಗೆ ಈಚ್ ಪರದಲ್ಲಿರುವುದರಿಂದ ಸಿಚಿಗೆ ಲೋಪ ಬರುತ್ತದೆ. ಸಿಪ್ಪಿನ ಸಕಾರಕ್ಕೆ ರುತ್ವವಿಸರ್ಗಗಳು ಬರುತ್ತವೆ. **'ಬಹುಲಂ ಛಂದಸ್ಯಮಾಙ್‌ಯೋಗೇಽಪಿ'** (ಪಾ. ಸೂ. ೬-೪-೭೫) ಎಂಬುದರಿಂದ ಮಾಙ್ ಸಂಬಂಧವಿದ್ದರೂ ಇಲ್ಲದಿದ್ದರೂ ಅಂಗಕ್ಕೆ ಅಡಾಗಮವು ಬರುವುದಿಲ್ಲ ಎಂಬುದರಿಂದ ಇಲ್ಲಿ ಮಾಙ್ ಸಂಬಂಧವಿರುವುದರಿಂದ ಧಾತುವಿಗೆ ಅಡಾಗಮ ಬರುವುದಿಲ್ಲ. ಮೋಷೀಃ ಎಂದು ರೂಪವಾಗುತ್ತದೆ. ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ತದಿನ್ನಕ್ತಂ ತದ್ದಿವಾ ಮಹ್ಯಮಾಹುಸ್ತದಯಂ ಕೇತೋ ಹೃದ ಆ ವಿ ಚಷ್ಟೇ।

ಶುನಃಶೇಪೋ ಯಮಹ್ವದ್ಗೃಭೀತಃ ಸೋ ಅಸ್ಮಾನ್ರಾಜಾ ವರುಣೋ ಮುಮೋಕ್ತು ॥ ೧೨ ॥

॥ ಪದಪಾಠಃ ॥

ತತ್ । ಇತ್ । ನಕ್ತಂ । ತತ್ । ದಿವಾ । ಮಹ್ಯಂ । ಆಹುಃ । ತತ್ । ಅಯಂ । ಕೇತಃ । ಹೃದಃ । ಆ । ವಿ । ಚಷ್ಟೇ ॥

ಶುನಃಶೇಪಃ । ಯಂ । ಅಹ್ವತ್ । ಗೃಭೀತಃ । ಸಃ । ಅಸ್ಮಾನ್ । ರಾಜಾ । ವರುಣಃ ಮುಮೋಕ್ತು ॥ ೧೨ ॥

॥ ಸಾಯಣಭಾಷ್ಯಂ ॥

ತದಿತ್ತದೇವ ವರುಣವಿಷಯಂ ಸ್ತೋತ್ರಂ ನಕ್ತಂ ರಾತ್ರೌ ಮಹ್ಯಂ ಶುನಃಶೇಪಾಯಾಹುಃ । ಕರ್ತವ್ಯತ್ವೇನಾಭಿಜ್ಞಾಃ ಕಥಯಂತಿ । ತಥಾ ದಿವಾಪಿ ತದೇವಾಹುಃ । ಹೃದೋ ಮದೀಯಮನಸೋ ನಿಷ್ಪನ್ನೋಽಯಂ ಕೇತಃ ಪ್ರಜ್ಞಾವಿಶೇಷೋಽಪಿ ತದೇವ ಕರ್ತವ್ಯತ್ವೇನಾ ವಿ ಚಷ್ಟೇ । ಸರ್ವತೋ ವಿಶೇಷೇಣ ಪ್ರಕಾಶಯತಿ । ಗೃಭೀತೋ ಗೃಹೀತೋ ಯೂಪೇ ಬದ್ಧಃ ಶುನಃಶೇಪ ಏತನ್ನಾಮಕೋ ಜನೋ ಯಂ ವರುಣಮಹ್ವತ್ ಆಹೂತವಾನ್ ಸ ವರುಣೋ ರಾಜಾಸ್ಮಾನ್ ಶುನಃಶೇಪಾನ್ಮುಮೋಕ್ತು । ಬಂಧಾನ್ಮುಕ್ತಂ ಕರೋತು ॥ ಮಹ್ಯಂ । ಜಯಿ ಚೇತ್ಯಾದ್ಯುದಾತ್ತತ್ವಂ । ಆಹುಃ । ಬ್ರುವಃ । ಪಂಚಾನಾಂ । ಪಾ ೩.೪.೮೪ । ಇತಿ ಬ್ರೂಞೋ ಲಟಿ ಝೇರುಸಾದೇಶೋ ಧಾತೋರಾಹಾದೇಶಶ್ಚ । ಹೃದಃ । ಪದ್ದನ್ನಿತ್ಯಾದಿನಾ । ಪಾ. ೬.೧.೬೩ । ಹೃದಯಶಬ್ದಸ್ಯ ಹೃದಾದೇಶಃ । ಊಡಿದಂಪದಾದೀತಿ ಪಂಚಮ್ಯಾ ಉದಾತ್ತತ್ವಂ । ಶುನಃಶೇಪಃ । ಶುನ ಇವ ಶೇಪೋ ಯಸ್ಯೇತಿ ಸಮಾಸೇ ಶುನಃಶೇಪಪುಚ್ಛಲಾಂಗೂಲೇಷು ಸಂಜ್ಞಾಯಾಂ ಷಷ್ಠ್ಯಾ ಅಲುಗ್ವಕ್ತವ್ಯಃ । ಪಾ. ೬.೩.೨೧.೪ । ಇತ್ಯಲುಕ್ । ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೆ ಉಭೇ ವನಸ್ಪತ್ಯಾದಿಷು । ಪಾ. ೬-೨-೧೪೦ । ಇತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ । ಅಹ್ವತ್ । ಹ್ವೇಞೋ ಲುಙಿ ಲಿಪಿಸಿಚಿಹ್ವಶ್ಚ । ಪಾ. ೩-೧-೫೩ । ಇತಿ ಚ್ಲೇರಙಾದೇಶಃ । ಆತೋ ಲೋಪ ಇಟಿ ಚ । ಪಾ. ೬.೪.೬೪ । ಇತ್ಯಾಕಾರಲೋಪಃ । ಅಡಾಗಮ ಉದಾತ್ತಃ । ಯದ್ವೃತ್ತಯೋಗಾದನಿಘಾತಃ । ಗೃಭೀತಃ । ಹೃಗ್ರಹೋರ್ಭ ಇತಿ ಭತ್ವಂ । ಸೋ ಅಸ್ಮಾನ್ । ಪ್ರಕೃತ್ಯಾಂತಃಪಾದಮಿತಿ ಪ್ರಕೃತಿಭಾವಃ । ಮುಮೋಕ್ತು । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ ॥

॥ ಪ್ರತಿಪದಾರ್ಥ ॥

**ತದಿತ್**—ಅದನ್ನೇ (ವರುಣವಿಷಯಕವಾದ ಸ್ತುತಿಯನ್ನೇ) । **ನಕ್ತಂ**—ರಾತ್ರಿಯಲ್ಲಿ । **ಮಹ್ಯಂ**—(ಶುನಃಶೇಪನಾದ) ನನಗೆ । **ಆಹುಃ**—(ಕರ್ತವ್ಯವೆಂದು ತಿಳಿದವರು) ಹೇಳುತ್ತಾರೆ । **ತಥಾ**—(ಹಾಗೆಯೇ) । **ದಿವಾ (ಅಪಿ)**—ಹಗಲಿನಲ್ಲಿಯೂ । **ತತ್ (ಏವ)**—ಅದನ್ನೇ । **ಆಹುಃ**—(ಹೇಳುತ್ತಾರೆ) । **ಹೃದಃ**—ನನ್ನ ಮನಸ್ಸಿನಲ್ಲಿ (ನಿಷ್ಪನ್ನವಾದ) । **ಅಯಂ ಕೇತಃ**—ಈ ಜ್ಞಾನವೂ । **ಆ ವಿ ಚಷ್ಟೇ**—(ಕರ್ತವ್ಯವೆಂದು) ಪ್ರಕಾಶ

ಪಡಿಸುತ್ತದೆ । **ಗೃಭೀತಃ**—ಗೃಹೀತನಾದ (ಯೂಪಕ್ಕೆ ಬದ್ಧನಾದ) । **ಶುನಃಶೇಪಃ**—ಶುನಃಶೇಪನೆಂಬ (ಈ ಮನುಷ್ಯನು) । **ಯಂ**—ಯಾವ ವರುಣನನ್ನು । **ಅಹ್ವತ್**—ಆಹ್ವಾನಿಸಿದನೋ । **ಸಃ ವರುಣಃ ರಾಜಾ**—ಆ ವರುಣರಾಜನು । **ಅಸ್ಮಾನ್**—ನಮ್ಮನ್ನು (ಶುನಃಶೇಪನನ್ನು) । **ಮುಮೋಕ್ತು**—(ಬಂಧನದಿಂದ) ಬಿಡುಗಡೆ ಮಾಡಲಿ.

॥ ಭಾವಾರ್ಥ ॥

ಶುನಃಶೇಪನಾದ ನನಗೆ ವರುಣನ ಸ್ತೋತ್ರವನ್ನು ರಾತ್ರಿಯಲ್ಲಿ ಮತ್ತು ಹಗಲಿನಲ್ಲಿ ಮಾಡಬೇಕೆಂದು (ತಿಳಿದವರು) ಹೇಳುತ್ತಾರೆ. ನನ್ನ ಮನಸ್ಸೂ ಕೂಡ ಇದೇ ವಿಷಯವನ್ನೇ ಸ್ಪಷ್ಟಪಡಿಸುತ್ತದೆ. (ಯೂಪಕ್ಕೆ) ಬದ್ಧನಾದ ಶುನಃಶೇಪನಾದ ನನ್ನಿಂದ ಆಹೂತನಾದ ವರುಣನು ನನ್ನನ್ನು ಬಿಡುಗಡೆಮಾಡಲಿ.

## English Translation.

This (your praise) is what they have told me at night, this in the day-time; this knowledge speaks to my heart; may that king Varuna whom Sunashepa, invoked when fettered liberate us.

॥ ವಿಶೇಷವಿಷಯಗಳು ॥

**ತತ್ ಇತ್**—ಅದನ್ನೇ, ಆ ವರುಣನ ವಿಷಯವನ್ನೇ.

**ತತ್ ಅಯಂ ಕೇತಃ ಹೃದ ಆ ವಿ ಚಷ್ಟೇ**—ಈ ವಿಷಯವು ನನ್ನ ಮನಸ್ಸಿಗೆ ನಾಟಿದೆ. ಇಲ್ಲಿ ಕೇತಃ ಎಂದರೆ ಪ್ರಜ್ಞಾವಿಶೇಷ, ತಿಳುವಳಿಕೆ.

**ಶುನಃಶೇಪಃ ಯಂ ಅಹ್ವತ್ ಸಃ**—ಶುನಶ್ಶೇಪನೆಂಬ ನಾನು ಯಾವ ವರುಣನನ್ನು ಕರೆಯುತ್ತಿರುವೆನೋ ಆ ವರುಣನು.

**ಗೃಭೀತಃ—ಗೃಹೀತಃ ।** ಯೂಪಸ್ತಂಭಕ್ಕೆ ಕಟ್ಟುವುದಕ್ಕಾಗಿ ಹಿಡಿಯಲ್ಪಟ್ಟ ಶುನಶ್ಶೇಪನಾದ ನಾನು.

**ಅಸ್ಮಾನ್ ರಾಜಾ ವರುಣಃ ಮುಮೋಕ್ತು**—ನನ್ನಿಂದ ಕರೆಯಲ್ಪಟ್ಟ ವರುಣರಾಜನು ಈ ಯೂಪಸ್ತಂಭ ಬಂಧನದಿಂದ ನಮ್ಮನ್ನು (ನನ್ನನ್ನು) ಬಿಡುಗಡೆ ಮಾಡಲಿ, ಬಿಡಿಸಲಿ.

॥ ವ್ಯಾಕರಣಪ್ರಕ್ರಿಯಾ ॥

**ಮಹ್ಯಮ್**—ಅಸ್ಮಚ್ಛಬ್ದದ ಮೇಲೆ ಚತುರ್ಥೀ ಏಕವಚನವಿವಕ್ಷಾ ಮಾಡಿದಾಗ ಙೆ ಪ್ರತ್ಯಯ ಬರುತ್ತದೆ. **ಙೇಪ್ರಥಮಯೋರಮ್** ಎಂಬುದರಿಂದ ಅದಕ್ಕೆ ಅಮಾದೇಶ ಬರುತ್ತದೆ. **'ತುಭ್ಯಮಹ್ಯೌ ಙಯಿ'** (ಪಾ. ಸೂ. ೭-೨-೯೫) ಎಂಬುದರಿಂದ ಚತುರ್ಥೀ ಏಕವಚನದಲ್ಲಿ ಅಸ್ಮತ್ ಪ್ರಕೃತಿಯ ಮಪರ್ಯಂತಕ್ಕೆ ಮಹ್ಯ ಎಂಬ ಆದೇಶ ಬರುತ್ತದೆ. **ಶೇಷೇ ಲೋಪಃ** ಸೂತ್ರದಿಂದ ಉಳಿದಿರುವ ಅದ್ ಎಂಬುದಕ್ಕೆ ಲೋಪ ಬರುತ್ತದೆ. ಮಹ್ಯ+ಅಮ್ ಎಂದಿರುವಾಗ **ಅಮಿ ಪೂರ್ವಃ** ಎಂಬುದರಿಂದ ಪೂರ್ವರೂಪಬಂದರೆ ಮಹ್ಯಮ್ ಎಂದು ರೂಪವಾಗುತ್ತದೆ.

**'ಙಯಿ ಚ'** (ಪಾ. ಸೂ. ೬-೧-೨೧೨) ಚತುರ್ಥೀ ಏಕವಚನದಲ್ಲಿ ಯುಷ್ಮದ್ ಅಸ್ಮದ್ ಶಬ್ದಗಳಿಗೆ ಆದ್ಯುದಾತ್ತ ಸ್ವರ ಬರುತ್ತದೆ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಆಹುಃ**— ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಪರಸ್ಮೈ ಪದದ ಝಿ ಪ್ರತ್ಯಯ ಬರುತ್ತದೆ. **'ಬ್ರುವಃ ಪಂಚಾನಾಮಾದಿತ ಆಹೋ ಬ್ರುವಃ'** (ಪಾ ಸೂ. ೩-೪-೮೪) ಬ್ರೂಞ್ ಧಾತುವಿನ ಲಟ್ಟಿನ ಪರಸ್ಮೈಪದದ ಮೊದಲನೆಯ ಐದು ಪ್ರತ್ಯಯಗಳಿಗೆ ಲಿಟ್ಟಿನ ಆದೇಶವಾದ ಣಲಾದಿಗಳು ವಿಕಲ್ಪವಾಗಿ ಬರುತ್ತವೆ; ಪ್ರಕೃತಿಗೆ ಆಹ ಎಂಬ ಆದೇಶವು ಬರುತ್ತದೆ. ಇದರಿಂದ ಇಲ್ಲಿ ಝಿಗೆ ಉಸ್ ಎಂಬ ಆದೇಶವು ಬರುತ್ತದೆ. ಆಹ+ಉಸ್ ಎಂದಿರುವಾಗ **'ಉಸ್ಯಪದಾಂತಾತ್'** (ಪಾ. ಸೂ. ೬-೧-೯೬) ಸೂತ್ರದಿಂದ ಪರರೂಪ ಬಂದರೆ ಆಹುಃ ಎಂದು ರೂಪವಾಗುತ್ತದೆ.

**ಹೃದಃ**—ಹೃದಯ ಶಬ್ದದ ಪಂಚಮೀರೂಪ. ಹೃದಯ+ಙಸಿ ಎಂದಿರುವಾಗ **'ಪದ್ದನ್ನೋಮಾಸ್‌ಹೃ-'** (ಪಾ. ಸೂ. ೬-೧-೬೩) ಎಂಬುದರಿಂದ ಹೃದಯ ಶಬ್ದಕ್ಕೆ ಹೃದ್ ಎಂಬ ಆದೇಶ ಬರುತ್ತದೆ. ರುತ್ವವಿಸರ್ಗಗಳು ಬಂದರೆ ಹೃದಃ ಎಂದು ರೂಪವಾಗುತ್ತದೆ. **'ಊಡಿದಂಪದಾದಿ-'** (ಪಾ. ಸೂ. ೬-೧-೧೭೬) ಎಂಬುದರಿಂದ ಪಂಚಮಿಗೆ ಅನುದಾತ್ತವು ಬಾಧಿತವಾಗಿ ಉದಾತ್ತ ಸ್ವರ ಬರುತ್ತದೆ. **ಪದ್ದನ್ನೋಮಾಸ್** ಸೂತ್ರದ ಆರು ಆದೇಶಗಳನ್ನು ತೆಗೆದು ಕೊಳ್ಳಬೇಕು. ಆದುದರಿಂದ ಹೃದಃ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

**ಶುನಃಶೇಪಃ**—ಶುನ ಇವ ಶೇಪೋ ಯಸ್ಯ ಸಃ ಶುನಃಶೇಪಃ, ಇಲ್ಲಿ ವಿಭಕ್ತಿಗೆ **'ಸುಪೋಧಾತುಪ್ರಾತಿಪದಿಕಯೋಃ'** ಎಂಬುದರಿಂದ ಲೋಪವು ಪ್ರಾಪ್ತವಾಗುತ್ತದೆ. ಆದರೆ, **'ಶುನಃ ಶೇಪಪುಚ್ಛಲಾಂಗೂಲೇಷು ಸಂಜ್ಞಾಯಾಂ ಷಷ್ಠ್ಯಾ ಅಲುಗ್ವಕ್ತವ್ಯಃ'** (ಪಾ. ಸೂ. ೬-೩-೨೧-೪) ಶ್ವನ್ ಶಬ್ದದ ಷಷ್ಠಿಗೆ ಸಮಾಸದಲ್ಲಿ ಶೇಪಾದಿ ಮೂರು ಶಬ್ದಗಳು ಪರದಲ್ಲಿರುವಾಗ, ಸಮಾಸದಿಂದ ಸಂಜ್ಞಾ ತೋರುವಾಗ, ಅಲುಕ್ ಬರುತ್ತದೆ ಎಂಬುದರಿಂದ ಷಷ್ಠಿಗೆ ಅಲುಕ್ ಬರುತ್ತದೆ. ಶುನಃಶೇಪಃ ಎಂಬುದು ಇಲ್ಲಿ ಒಬ್ಬನಿಗೆ ಹೆಸರಾದುದರಿಂದ ಸಂಜ್ಞಾ ತೋರುತ್ತದೆ. ಬಹುವ್ರೀಹಿ ಸಮಾಸವಾದುದರಿಂದ **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ'** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾದರೆ **'ಉಭೇ ವನಸ್ಪತ್ಯಾದಿಷು ಯುಗಪತ್'** (ಪಾ. ಸೂ. ೬-೨-೧೪೦) ವನಸ್ಪತ್ಯಾದಿಗಣಪಠಿತವಾದವುಗಳಿಗೆ ಪೂರ್ವೋತ್ತರ ಪದಗಳಿಗೂ ಏಕಕಾಲದಲ್ಲಿ ಪ್ರಕೃತಿಸ್ವರವು ಬರುತ್ತದೆ ಎಂಬುದರಿಂದ ಈ ಶಬ್ದವು ಆ ಗಣದಲ್ಲಿ ಸೇರಿರುವುದರಿಂದ ಯುಗಪತ್ ಪ್ರಕೃತಿಸ್ವರವು ಬರುತ್ತದೆ. ಆಗ ಎರಡು ಉದಾತ್ತಗಳು ಇಲ್ಲಿ ಶ್ರುತವಾಗುತ್ತವೆ.

**ಅಹ್ವತ್**—ಹ್ವೇಞ್ ಸ್ಪರ್ಧಾಯಾಂ ಧಾತು. ಭ್ವಾದಿ, ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ ಬರುತ್ತದೆ. **'ಇತಶ್ಚ'** ಸೂತ್ರದಿಂದ ಇಕಾರ ಲೋಪ ಬರುತ್ತದೆ. ಲುಙಿನ ಚ್ಲಿ ವಿಕರಣಕ್ಕೆ **'ಲಿಪಿಸಿಚಿಹ್ವಶ್ಚ'** (ಪಾ. ಸೂ. ೩-೧-೫೩) ಎಂಬುದರಿಂದ ಅಙಾದೇಶ ಬರುತ್ತದೆ. ಅಙಾದಿ ಙಿತ್ ಪ್ರತ್ಯಯ ಪರದಲ್ಲಿರುವುದರಿಂದ **'ಆತೋಲೋಪ ಇಟಿಚ'** (ಪಾ. ಸೂ. ೬-೪-೬೪) ಎಂಬುದರಿಂದ **'ಆದೇಚ'** ಸೂತ್ರದಿಂದ ಬಂದಿರುವ ಧಾತುವಿನ ಆಕಾರಕ್ಕೆ ಲೋಪ ಬರುತ್ತದೆ. ಲುಙ್ ನಿಮಿತ್ತಕ ಅಡಾಗಮ ಬಂದರೆ ಅಹ್ವತ್ ಎಂದು ರೂಪ ಆಗುತ್ತದೆ

ಅಡಾಗಮವು ಉದಾತ್ತವೆಂದು ವಿಧಿಸಿರುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ಯಂ ಎಂದು ಯಚ್ಛಬ್ದದ ಸಂಬಂಧವಿರುವುದರಿಂದ **'ಯದ್ವೃತ್ತಯೋಗಾನ್ನಿತ್ಯಂ'** ಎಂಬುದರಿಂದ ನಿಘಾತಸ್ವರ ಬರುವುದಿಲ್ಲ.

**ಗೃಭೀತಃ—**ಗ್ರಹ ಉಪಾದಾನೆ ಧಾತು. ಕ್ರ್ಯಾದಿ, ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ ಬರುತ್ತದೆ. ಕಿತ್ತಾದುದ ರಿಂದ **'ಗ್ರಹಿಜ್ಯಾ'** ಸೂತ್ರದಿಂದ ಸಂಪ್ರಸಾರಣ ಬರುತ್ತದೆ. ಪ್ರತ್ಯಯವು ವಲಾದಿಯಾದುದರಿಂದ ಇಡಾಗಮವು ಬರುತ್ತದೆ. ಅದಕ್ಕೆ **'ಗ್ರಹೋಽಲಿಟಿ ದೀರ್ಘಃ'** (ಪಾ. ಸೂ. ೭-೨-೩೭) ಏಕಾಚಾದ ಗ್ರಹಧಾತುವಿನ ಪರದಲ್ಲಿ ವಿಹಿತವಾಗಿರುವ ಇಟ್ಟಿಗೆ ಲಿಟ್ ಭಿನ್ನವಾದದ್ದು ಪರದಲ್ಲಿರುವಾಗ ದೀರ್ಘ ಬರುತ್ತದೆ ಎಂಬುದರಿಂದ ದೀರ್ಘ ಬರುತ್ತದೆ. ಗೃಹೀತಃ ಎಂದಿರುವಾಗ **'ಹೃಗ್ರಹೋರ್ಭಃ ಛಂದಸಿ'** ಎಂಬುದರಿಂದ ಹಕಾರಕ್ಕೆ ಭಕಾರಾದೇಶವು ಬರುತ್ತದೆ. ಗೃಭೀತಃ ಎಂದು ರೂಪವಾಗುತ್ತದೆ.

**ಸೋ ಅಸ್ಮಾನ್— 'ಪ್ರಕೃತ್ಯಾಂತಃ ಪಾದಮವ್ಯಪರೇ'** (ಪಾ. ಸೂ. ೬-೧-೧೧೫) ಋಕ್‌ಪಾದದ ಮಧ್ಯದಲ್ಲಿರುವ ಏಙ್ (ಏ ಓ) ಹ್ರಸ್ವಾಕಾರ ಪರದಲ್ಲಿರುವಾಗ ಪ್ರಕೃತಿಭಾವವನ್ನು ಹೊಂದುತ್ತದೆ, ಎಂಬುದರಿಂದ ಇಲ್ಲಿ ಪೂರ್ವರೂಪಾದಿಗಳು ಬರುವುದಿಲ್ಲ.

**ಮುಮೋಕ್ತು—**ಮುಚ್ಲೃ ಮೋಕ್ಷಣೆ ಧಾತು. ತುದಾದಿ. ಲೋಟ್ ಪ್ರಥಮಪುರುಷ ಏಕವಚನಕ್ಕೆ **'ಏರುಃ'** (ಪಾ. ಸೂ. ೩-೪-೮೬) ಸೂತ್ರದಿಂದ ಉತ್ವಬಂದು ತು ಎಂದಾಗುತ್ತದೆ. **'ತುದಾದಿಭ್ಯಃ ಶಃ'** (ಪಾ. ಸೂ. ೩-೧-೭೭) ಎಂಬುದರಿಂದ ವಿಕರಣಪ್ರತ್ಯಯ ಪ್ರಾಪ್ತವಾದರೆ **'ಬಹುಲಂ ಛಂದಸಿ'** (ಪಾ. ಸೂ. ೨-೪-೭೬) ಸೂತ್ರದಿಂದ ಶ್ಲು ಬರುತ್ತದೆ. ಅದು ಪರದಲ್ಲಿರುವಾಗ ಧಾತುವಿಗೆ ದ್ವಿತ್ವವೂ ಹಲಾದಿಶ್ಶೇಷವೂ ಬರುತ್ತದೆ. ಲಘೂ ಪಧಗುಣ ಬಂದು ಕುತ್ವ ಬಂದರೆ ಮುಮೋಕ್ತು ಎಂದು ರೂಪವಾಗುತ್ತದೆ.

॥ ಸಂಹಿತಾಪಾಠಃ ॥

ಶುನಃಶೇಪೋ ಹ್ಯಹ್ವದ್ಗೃಭೀತಸ್ತ್ರಿಷ್ವಾದಿತ್ಯಂ ದ್ರುಪದೇಷು ಬದ್ಧಃ ।
ಅವೈನಂ ರಾಜಾ ವರುಣಃ ಸಸೃಜ್ಯಾದ್ವಿದ್ವಾँ ಅದಬ್ಧೋ ವಿ ಮುಮೋಕ್ತು ಪಾಶಾನ್ ॥ ೧೩ ॥

॥ ಪದಪಾಠಃ ॥

ಶುನಃಶೇಪಃ । ಹಿ । ಅಹ್ವತ್ । ಗೃಭೀತಃ । ತ್ರಿಷು । ಆದಿತ್ಯಂ । ದ್ರುಪದೇಷು । ಬದ್ಧಃ ।

ಅವ । ಏನಂ । ರಾಜಾ । ವರುಣಃ । ಸಸೃಜ್ಯಾತ್ । ವಿದ್ವಾನ್ । ಅದಬ್ಧಃ । ವಿ । ಮುಮೋಕ್ತು । ಪಾಶಾನ್ ॥ ೧೩ ॥

॥ ಸಾಯಣಭಾಷ್ಯಂ ॥

ಗೃಭೀತೋ ಬಂಧನಾಯ ಗೃಹೀತಸ್ತ್ರಿಸಂಖ್ಯಾಕೇಷು ದ್ರುಪದೇಷು ದ್ರೋಃ ಕಾಷ್ಠಸ್ಯ ಯೂಪಸ್ಯ ಪದೇಷು ಪ್ರದೇಶವಿಶೇಷೇಷು ಬದ್ಧಃ ಶುನಃಶೇಪ ಆದಿತ್ಯಮದಿತೇಃ ಪುತ್ರಂ ಯಂ ವರುಣಮಹ್ವತ್ ಆಹೂತವಾನ್ । ಹಿ ಯಸ್ಮಾದೇವಂ ತಸ್ಮಾತ್ಸ ವರುಣೋ ರಾಜೈನಂ ಶುನಃಶೇಪಮುವ ಸಸೃಜ್ಯಾತ್ । ಅವಸೃಷ್ಟಂ ಬಂಧನಾದ್ವಿಮುಕ್ತಂ ಕರೋತು । ವಿಮೋಕಪ್ರಕಾರ ಏವ ಸ್ಪಷ್ಟೀಕ್ರಿಯತೇ । ವಿದ್ವಾನ್ ವಿಮೋಕಪ್ರಕಾರಾಭಿಜ್ಞಃ ಅದಬ್ಧಃ ಕೇನಾಪ್ಯಹಿಂಸಿತೋ ವರುಣಃ ಪಾಶಾನ್ಬಂಧನರಜ್ಜುವಿಶೇಷಾನ್ವಿ ಮುಮೋಕ್ತು । ವಿಚ್ಛಿದ್ಯೈನಂ ಮುಕ್ತಂ ಕರೋತು ॥ ತ್ರಿಷು । ಷಟ್‌ತ್ರಿಚತುರ್ಭ್ಯೋ ಹಲಾದಿಃ । ಪಾ. ೬-೧-೧೭೯ । ಇತಿ ವಿಭಕ್ತೇರುದಾತ್ತತ್ವಂ । ಸಂಹಿತಾಯಾಮುದಾತ್ತಸ್ವರಿತಯೋರ್ಯಣ ಇತಿ ಪರ ಆಕಾರಃ ಸ್ವರ್ಯತೇ । ಸಸೃಜ್ಯಾತ್ । ಸೃಜ ವಿಸರ್ಗೇ । ಪ್ರಾರ್ಥನಾಯಾಂ ಲಿಙ್ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ವಿದ್ವಾನ್ । ವಿದ ಜ್ಞಾನೇ । ವಿದೇಃ ಶತುರ್ವಸುಃ । ಪಾ. ೭-೧-೩೬ । ಉಗಿದಚಾಮಿತಿ ನುಮ್ । ಹಲ್ಙ್ಯಾದಿಸಂಯೋಗಾಂತಲೋಪೌ । ಸಂಹಿತಾಯಾಂ ದೀರ್ಘಾದಟಿ ಸಮಾನಪಾದ ಇತಿ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ । ಅದಬ್ಧಃ । ದಸ್ಭು ದಂಭೇ । ನಿಷ್ಠಾಯಾಮನಿದಿತಾಮಿತಿ ನಲೋಪೇ ಝಷಸ್ತಥೋರ್ಧೋಽಧಃ । ಪಾ. ೮-೨-೪೦ । ಇತಿ ಧತ್ವಂ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಗೃಭೀತಃ**—(ಬಂಧನಕ್ಕಾಗಿ) ಹಿಡಿದು ತರಲ್ಪಟ್ಟ । **ತ್ರಿಷು**—ಮೂರು । **ದ್ರುಪದೇಷು**—ಯೂಪ ಪ್ರದೇಶಗಳಲ್ಲಿ । **ಬದ್ಧಃ**—ಬಂಧಿತನಾಗಿರುವ । **ಶುನಃಶೇಪಃ**—ಶುನಃಶೇಪನು । **ಆದಿತ್ಯಂ**—(ಯಾವ) ಅದಿತಿ ಪುತ್ರನಾದ (ವರುಣನನ್ನು) । **ಅಹ್ವತ್ ಹಿ**—(ಯಾವ ಕಾರಣದಿಂದ) ಆಹ್ವಾನಿಸಿದನೋ (ಆ ಕಾರಣದಿಂದ) । **ಸಃ**—(ಅಂಥ) । **ವರುಣಃ ರಾಜಾ**—ವರುಣರಾಜನು । **ಏನಂ**—ಈ ಶುನಶ್ಶೇಪನನ್ನು । **ಅವ ಸಸೃಜ್ಯಾತ್**—ಬಂಧನದಿಂದ ವಿಮುಕ್ತನನ್ನಾಗಿ ಮಾಡಲಿ । **ವಿದ್ವಾನ್**—(ಬಂಧನವಿಮೋಚನ ಪ್ರಕಾರವನ್ನು) ತಿಳಿದ । **ಅದಬ್ಧಃ**—ಅಪ್ರತಿಹತನಾದ (ವರುಣನು) । **ಪಾಶಾನ್**—ಬಂಧನರಜ್ಜುಗಳನ್ನು । **ವಿ ಮುಮೋಕ್ತು**—ಬಿಡಿಸಲಿ.

॥ ಭಾವಾರ್ಥ ॥

ಮೂರು ಪಾದಗಳುಳ್ಳ ಯೂಪಪ್ರದೇಶದಲ್ಲಿ ಬಂಧಿತನಾಗಿರುವ ಶುನಃಶೇಪನನ್ನು, ಅವನಿಂದ ಆಹೂತನಾದ, ಅದಿತಿ ಪುತ್ರನಾದ, ವರುಣನು ಬಂಧವಿಮುಕ್ತನನ್ನಾಗಿ ಮಾಡಲಿ. ಬಂಧನವಿಮೋಚನ ಪ್ರಕಾರವನ್ನು ತಿಳಿದ, ಅಪ್ರತಿಹತನಾದ ವರುಣನು ಬಂಧನರಜ್ಜುಗಳನ್ನು ಬಿಡಿಸಲಿ.

## English Translation.

Sunashepa, seized and bound to the three-fold post has invoked the Son of Aditi (Varuna); may the King Varuna who knows all and whom none can deceive liberate him and loosen his bonds.

॥ ವಿಶೇಷವಿಷಯಗಳು ॥

**ಗೃಭೀತಃ**—ಯೂಪಸ್ತಂಭಕ್ಕೆ ಕಟ್ಟಲ್ಪಡುವುದಕ್ಕಾಗಿ ಹಿಡಿಯಲ್ಪಟ್ಟ.

**ಆದಿತ್ಯಂ—ಅದಿತೇಃ ಪುತ್ರಂ ಆದಿತ್ಯಂ ।** ದೇವಮಾತೆಯಾದ ಅದಿತಿಯ ಮಗನಾದುದರಿಂದ ಇಲ್ಲಿ ವರುಣನನ್ನು ಆದಿತ್ಯಶಬ್ದದಿಂದ ಸ್ತುತಿಸಲಾಗಿದೆ.

**ದ್ರುಪದೇಷು—ದ್ರುಮಮಯೇಷು, ದಾರುಮಯೇಷು ।** ವೃಕ್ಷ ಅಥವಾ ಮರದ ಸಂಬಂಧವಾದ ಎಂದರೆ ಮರದ ಕಂಭಗಳು. Wooden pillar or post to which the animal to be sacrificed is tied before being killed.

**ಕನೀನಕೇವ ವಿದ್ರಧೆ ನವೇ ದ್ರುಪದೇ ಅರ್ಭಕೇ ॥**

(ಋ. ಸಂ. ೪–೩೨–೨೩).

ಎಂಬ ಋಕ್ಕಿಗೆ ನಿರ್ವಚನವನ್ನು ಹೇಳುವಾಗ ಯಾಸ್ಕರು ವಿದ್ರಧೇ, ದ್ರುಪದೇ ಎಂಬ ಎರಡು ಶಬ್ದಗಳೂ ಸಮಾನಾರ್ಥಕ ಶಬ್ದಗಳೆಂದೂ ದ್ರುಪದಶಬ್ದಕ್ಕೆ-**ದಾರು ದೃಣಾತೇರ್ವಾ ದ್ರೂಣಾತೇರ್ವಾ । ತಸ್ಮಾದೇವ ದ್ರು ।** ಎಂದು ರೂಪ ನಿಷ್ಪತ್ತಿಯನ್ನೂ ಹೇಳಿರುವರು (ನಿ. ೪–೧೫).

**ಅವ ಸಸೃಜ್ಯಾತ್—ಅವಸೃಷ್ಟಂ, ಬಂಧನಾದ್ವಿಮುಕ್ತಂ ಕರೋತು ।** ಬಂಧನದಿಂದ ಮುಕ್ತನನ್ನಾಗಿ ಮಾಡಲಿ, ಬಿಡಿಸಲಿ.

**ವಿದ್ವಾನ್—ವಿದ ಜ್ಞಾನೇ । ವಿಮೋಕಪ್ರಕಾರಾಭಿಜ್ಞಃ ।** ತಿಳುವಳಿಕೆಯುಳ್ಳವನು ಎಂದರೆ ಬಂಧವನ್ನು ಬಿಡಿಸುವುದನ್ನು ತಿಳಿದವನು.

**ಅದಬ್ಧಃ—ದಭ್ನು ದಂಭೇ । ಕೇನಾಪ್ಯಹಿಂಸಿತಃ ।** ಯಾರಿಂದಲೂ ಹಿಂಸಿಸಲ್ಪಡಲಸಾಧ್ಯನು ಅಪ್ರತಿಹತನು.

**ಪಾಶಾನ್—**ಶುನಶ್ಶೇಪನನ್ನು ಯೂಪಸ್ತಂಭಕ್ಕೆ ಬಿಗಿದು ಕಟ್ಟಿರುವ ಹಗ್ಗಗಳನ್ನು.

॥ ವ್ಯಾಕರಣಪ್ರಕ್ರಿಯಾ ॥

**ತ್ರಿಷು**— ತ್ರಿ ಶಬ್ದದ ಸಪ್ತಮೀ ಬಹುವಚನದ ರೂಪ. **' ಷಟ್ತ್ರಿಚತುರ್ಭ್ಯೋ ಹಲಾದಿಃ '** (ಪಾ. ಸೂ. ೬-೧-೧೭೯) ಷಟ್ ಮುಂತಾದ ಮೂರು ಶಬ್ದಗಳ ಪರದಲ್ಲಿರುವ ಹಲಾದಿ ವಿಭಕ್ತಿಯು ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ವಿಭಕ್ತಿಯ ಅನುದಾತ್ತಸ್ವರವು ಬಾಧಿತವಾಗಿ ಉದಾತ್ತ ಬರುತ್ತದೆ. ಸಂಹಿತಾಪಾಠದಲ್ಲಿ ತ್ರಿಷು+ಆದಿತ್ಯಂ ಎಂದಿರುವಾಗ ಯಣಾದೇಶ ಬರುತ್ತದೆ. ತ್ರಿಷು ಎಂಬುದು ಅಂತೋದಾತ್ತವಾದ ಪದ. **' ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ '** (ಪಾ. ಸೂ. ೮-೨-೪) ಉದಾತ್ತಸ್ಥಾನದಲ್ಲಿಯೂ ಸ್ವರಿತಸ್ಥಾನದಲ್ಲಿಯೂ ಬಂದಿರುವ ಯಣಿನ ಪರದಲ್ಲಿರುವ ಅನುದಾತ್ತಕ್ಕೆ ಸ್ವರಿತವು ಬರುತ್ತದೆ ಎಂಬುದರಿಂದ ತ್ರಿಷ್ವಾದಿತ್ಯಂ ಎಂಬಲ್ಲಿ ಉದಾತ್ತ ಸ್ಥಾನದಲ್ಲಿ ಯಣ್ ಬಂದಿರುವುದರಿಂದ ಆಕಾರವು ಸ್ವರಿತವಾಗುತ್ತದೆ.

**ಸಸೃಜ್ಯಾತ್**—ಸೃಜ ವಿಸರ್ಗೇ ಧಾತು. ತುದಾದಿ. **' ವಿಧಿನಿಮಂತ್ರಣ-'** (ಪಾ. ಸೂ. ೩-೩-೧೬೧) ಸೂತ್ರದಿಂದ ಪ್ರಾರ್ಥನಾರೂಪ ಅರ್ಥದಲ್ಲಿ ಲಿಙ್ ಬರುತ್ತದೆ. ಶವಿಕರಣವು ಪ್ರಾಪ್ತವಾದರೆ **' ಬಹುಲಂ ಛಂದಸಿ '** (ಪಾ. ಸೂ. ೩-೪-೧೦) ಸೂತ್ರದಿಂದ ತಿಪ್ಪಿನ ಇಕಾರಕ್ಕೆ ಲೋಪ ಬರುತ್ತದೆ. ಶ್ಲು ಪರದಲ್ಲಿರುವಾಗ **' ಶ್ಲೌ '** (ಪಾ. ಸೂ. ೬-೧-೧೦) ಸೂತ್ರದಿಂದ ಧಾತುವಿಗೆ ದ್ವಿತ್ವ ಬರುತ್ತದೆ. **' ಯಾಸುಟ್‌ಪರಸ್ಮೈಪದೇಷೂದಾತ್ತೋ ಙಿಚ್ಚ '** (ಪಾ. ಸೂ. ೩-೪-೧೦೩) ಸೂತ್ರದಿಂದ ಲಙಿಗೆ ಯಾಸುಟಾಗಮ ಬರುತ್ತದೆ, ಅಭ್ಯಾಸದಲ್ಲಿ ಹಲಾದಿಶೇಷವು ಉರದತ್ವವೂ ಪ್ರಾಪ್ತವಾದರೆ ಸಸೃಜ್ಯಾತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿದ್ವಾನ್**—ವಿದ ಜ್ಞಾನೇ ಧಾತು. ಅದಾದಿ **' ಲಟಃಶತೃಶಾನಚಾ '** (ಪಾ. ಸೂ. ೨-೨-೧೨೪) ಸೂತ್ರದಿಂದ ಶತೃ ಬರುತ್ತದೆ. ಅದಕ್ಕೆ **' ವಿದೇಃ ಶತುರ್ವಸುಃ '** (ಪಾ. ಸೂ. ೭-೧-೩೬) ವಿದ ಧಾತುವಿನ ಪರದಲ್ಲಿರುವ ಶತೃ ಪ್ರತ್ಯಯಕ್ಕೆ ವಸು ಎಂಬ ಆದೇಶವು ವಿಕಲ್ಪವಾಗಿ ಬರುತ್ತದೆ ಎಂಬುದರಿಂದ ವಸುರಾದೇಶ ಬರುತ್ತದೆ. ವಿದ್ವಸ್ ಎಂದು ಸಾಂತವಾದ ಪದವಾಗುತ್ತದೆ. ಪ್ರಥಮಾ ಸು ಪರದಲ್ಲಿರುವಾಗ **' ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ '** (ಪಾ. ಸೂ. ೭-೧-೭೦) ಸೂತ್ರದಿಂದ ವಸು ಎಂಬುದು ಉಗಿತ್ತಾದುದರಿಂದ ನುಮಾಗಮ ಬರುತ್ತದೆ. ವಿದ್ವನ್ಸ್+ಸ್ ಎಂದಾಗುತ್ತದೆ. **' ಹಲ್‌ಙ್ಯಾದಿ '** ಸೂತ್ರದಿಂದ ಸುಲೋಪ ಬರುತ್ತದೆ. ಸಂಯೋಗಾಂತಲೋಪದಿಂದ ಅಂತ್ಯದ ಸಕಾರಕ್ಕೆ ಲೋಪ ಬರುತ್ತದೆ. **' ಅತ್ವಸಂತಸ್ಯ'** (ಪಾ. ಸೂ ೬-೪-೧೪) ಸೂತ್ರದಿಂದ ಉಪಧಾ ದೀರ್ಘ ಬರುತ್ತದೆ. ವಿದ್ವಾನ್ ಎಂದು ರೂಪವಾಗುತ್ತದೆ. ಸಂಹಿತಾಪಾಠದಲ್ಲಿ **'ದೀರ್ಘಾದಟಿ ಸಮಾನಪಾದೇ '** (ಪಾ. ಸೂ. ೮-೩-೯) ಸೂತ್ರದಿಂದ ದೀರ್ಘದ ಪರದಲ್ಲಿರುವ ನಕಾರಕ್ಕೆ ರುತ್ವ ಬರುತ್ತದೆ. ಮುಂದೆ ಅದಬ್ಧಃ ಎಂಬುದು ಪರದಲ್ಲಿರುವುದರಿಂದ ರುತ್ವಕ್ಕೆ ಯಕಾರಾದೇಶ ಬರುತ್ತದೆ. ಅದಕ್ಕೆ ಅಶ್ ಪರದಲ್ಲಿರುವುದರಿಂದ ಲೋಪ ಬರುತ್ತದೆ. **' ಆತೋಽಟಿ ನಿತ್ಯಂ "** (ಪಾ. ಸೂ. ೮-೩-೩) ಸೂತ್ರದಿಂದ ರುತ್ವಾವಸ್ಥೆಯಲ್ಲಿ ಅದರ ಹಿಂದಿರುವ ಆಕಾರಕ್ಕೆ ಅನುನಾಸಿಕವು ಬರುತ್ತದೆ. ವಿದ್ವಾँ ಎಂದು ರೂಪವಾಗುತ್ತದೆ.

**ಅದಬ್ಧಃ**— ದಂಭು ದಂಭೇ ಧಾತು. ಸ್ವಾದಿ. ನಕಾರೋಪಧೆಯುಳ್ಳ ಧಾತು. ಇದಕ್ಕೆ ಕ್ತ ಪ್ರತ್ಯಯ ಪರದಲ್ಲಿರುವಾಗ **' ಅನಿದಿತಾಂ ಹಲ '** (ಪಾ. ಸೂ . ೬-೪-೨೪) ಸೂತ್ರದಿಂದ ಕಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ

ಉಪಧಾಭೂತ ನಕಾರಕ್ಕೆ ಲೋಪ ಬರುತ್ತದೆ ದಭ್+ತ ಎಂದಾಗುತ್ತದೆ **'ಝಷಸ್ತಥೋರ್ಧೋಽಧಃ'** (ಪಾ. ಸೂ. ೮-೨-೪೦) ಝ ನ ಪರದಲ್ಲಿರುವ ತಕಾರ ಥಕಾರಗಳಿಗೆ ಧಕಾರ ಬರುತ್ತದೆ ಎಂಬುದರಿಂದ ಇಲ್ಲಿ ಭಕಾರದ ಪರದಲ್ಲಿರುವ ತಕಾರಕ್ಕೆ ಧಕಾರ ಬರುತ್ತದೆ. **'ಝಲಾಂ ಜಶ್ ಝಶಿ'** (ಪಾ. ಸೂ. ೮-೪-೫೩) ಎಂಬುದರಿಂದ ಭಕಾರಕ್ಕೆ ಜಸ್ತ್ವ ಬಂದರೆ ಬಕಾರ ಬರುತ್ತದೆ ದಬ್ಧಃ ಎಂದು ರೂಪವಾಗುತ್ತದೆ; ನಞ್‌ತತ್ಪುರುಷದಲ್ಲಿ ಅದಬ್ಧ ಎಂದು ರೂಪವಾಗುತ್ತದೆ. **'ತತ್ಪುರುಷೇ ತುಲ್ಯಾರ್ಥ'** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವ ಪದ ಪ್ರಕೃತಿ ಸ್ವರವು ಬರುತ್ತದೆ. ಆಗ ಅದಬ್ಧಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ

---

॥ ಸಂಹಿತಾಪಾಠಃ ॥

ಅವ ತೇ ಹೇಳೋ ವರುಣ ನಮೋಭಿರವ ಯಜ್ಞೇಭಿರೀಮಹೇ
ಹವಿರ್ಭಿಃ ।
ಕ್ಷಯನ್ನಸ್ಮಭ್ಯಮಸುರ ಪ್ರಚೇತಾ ರಾಜನ್ನೇನಾಂಸಿ ಶಿಶ್ರಥಃ
ಕೃತಾನಿ ॥ ೧೪ ॥

॥ ಪದಪಾಠಃ ॥

ಅವ । ತೇ । ಹೇಳಃ । ವರುಣ । ನಮಃಽಭಿಃ । ಅವ । ಯಜ್ಞೇಭಿಃ । ಈಮಹೇ ।
ಹವಿಃಽಭಿಃ ।
ಕ್ಷಯನ್ । ಅಸ್ಮಭ್ಯಂ । ಅಸುರ । ಪ್ರಚೇತ ಇತಿ ಪ್ರಽಚೇತಃ । ರಾಜನ್ । ಏನಾಂಸಿ ।
ಶಿಶ್ರಥಃ । ಕೃತಾನಿ ॥ ೧೪ ॥

॥ ಸಾಯಣಭಾಷ್ಯಂ ॥

ಅವಭೃಥೇಽವ ತೇ ಹೇಳ ಇತಿ ದ್ವೇ ಋಚೌ ವಾರುಣಸ್ಯ ಹವಿಷೋ ಯಾಜ್ಯಾನುವಾಕ್ಯೇ । ಪತ್ನೀಸಂಯಾಜ್ಯೈಶ್ಚರಿತ್ವೇತಿ ಖಂಡೇ ಸೂತ್ರಿತಂ । ಅವ ತೇ ಹೇಳೋ ವರುಣ ನಮೋಭಿರಿತಿ ದ್ವೇ । ಆ ೬-೧೩ । ಇತಿ ॥

ಹೇ ವರುಣ ತೇ ತವ ಹೇಳಃ ಕ್ರೋಧಂ ನಮೋಭಿರ್ನಮಸ್ಕಾರೈರವೇಮಹೇ । ಅವನಯಾಮಃ । ತಥಾ ಯಜ್ಞೈಃ ಸಾಂಗಾನುಷ್ಠಾನೇನ ಪೂಜ್ಯೈರ್ಹವಿರ್ಭಿರವೇಮಹೇ । ವರುಣಂ ಪರಿತೋಷ್ಯ ಕ್ರೋಧಮಪನಯಾಮಃ । ಹೇ ಅಸುರಾನಿಷ್ಟಕ್ಷೇಪಣಶೀಲ ಪ್ರಚೇತಃ ಪ್ರಕರ್ಷೇಣ ಪ್ರಜ್ಞಾಯುಕ್ತ ರಾಜನ್ ದೀಪ್ಯಮಾನ ವರುಣಾಸ್ಮಭ್ಯಮಸ್ಮದರ್ಥಂ ಕ್ಷಯನ್ನಸ್ಮಿನ್ಕರ್ಮಣಿ ನಿವಸನ್ಕೃತಾನ್ಯಸ್ಮಾಭಿರನುಷ್ಠಿತಾನ್ಯೇನಾಂಸಿ ಪಾಪಾನಿ ಶಿಶ್ರಥಃ । ಶ್ರಥಿತಾನಿ ಶಿಥಿಲಾನಿ ಕುರು ॥ ಹೇಳಃ । ಅಸುನೋ ನಿತ್ತ್ವಾದಾದ್ಯುದಾತ್ತತ್ವಂ. ಯಜ್ಞೇಭಿಃ । ಬಹುಲಂ ಛಂದಸೀತ್ಯೈಸಭಾವಃ । ಈಮಹೇ । ಈಙ್ ಗತೌ । ವಿಕರಣಸ್ಯ ಲುಕ್ । ಕ್ಷಯನ್ । ಕ್ಷಿ ನಿವಾಸಗತ್ಯೋಃ । ಲಟಃ ಶತೃ । ವ್ಯತ್ಯಯೇನ ಶಪ್ । ಆಮಂತ್ರಿತಾದ್ಯುದಾತ್ತತ್ವಂ । ಅಸುರ । ಅಸೇರುರನ್ । ಉ. ೧-೪೩ । ಆಮಂತ್ರಿತನಿಘಾತಃ । ಶಿಶ್ರಥಃ । ಶ್ರಥ ದೌರ್ಬಲ್ಯೇ । ಚುರಾದಿರದಂತಃ । ಛಾಂದಸೇ ಲುಙಿ ಣಿಶ್ರಿದ್ರುಸ್ರುಭ್ಯಃ । ಪಾ ೩-೧-೪೮ । ಇತಿ ಚ್ಲೇಶ್ಚಙ್ । ದ್ವಿರ್ಭಾವಹಲಾದಿಶೇಷೌ । ಅಗ್ಲೋಪಿತ್ವಾತ್ ಸನ್ವದ್ಭಾವಾಭಾವೇಽಪಿ । ಪಾ. ೭-೪-೯೩ । ಬಹುಲಂ ಛಂದಸಿ । ಪಾ. ೭-೪-೭೮ । ಇತ್ಯಭ್ಯಾಸಸ್ಯೇತ್ವಂ । ಪೂರ್ವವದಡಭಾವಃ ॥

॥ ಪ್ರತಿಪದಾರ್ಥ ॥

ಹೇ ವರುಣ—ಎಲೈ ವರುಣನೇ । ತೇ—ನಿನ್ನ ಹೇಳಃ—ಕ್ರೋಧವನ್ನು । ನಮೋಭಿಃ—ನಮಸ್ಕಾರಗಳಿಂದ । ಅವ ಈಮಹೇ—ಇಳಿಸುತ್ತೇವೆ । (ತಥಾ—ಹಾಗೆಯೇ) । ಯಜ್ಞೈಃ—ಪೂಜ್ಯವಾದ । ಹವಿರ್ಭಿಃ—ಹವಿಸ್ಸುಗಳಿಂದ । ಅವ(ಈಮಹೇ)—ಕಡಿಮೆಮಾಡುತ್ತೇವೆ । ಹೇ ಅಸುರ—ಎಲೈ ಅನಿಷ್ಟವನ್ನು ಪರಿಹರಿಸುವ ಸ್ವಭಾವವುಳ್ಳ । ಪ್ರಚೇತಃ—ಜ್ಞಾನಿಯಾದ । ರಾಜನ್—ದೀಪ್ಯಮಾನನಾದ (ವರುಣನೇ) । ಅಸ್ಮಭ್ಯಂ—ನಮಗಾಗಿ । ಕ್ಷಯನ್—(ಈ ಕರ್ಮದಲ್ಲಿ) ವಾಸಿಸುವವನಾಗಿ । ಕೃತಾನಿ—ನಮ್ಮಿಂದ ಮಾಡಲ್ಪಟ್ಟ । ಏನಾಂಸಿ—ಪಾಪಗಳನ್ನು । ಶಿಶ್ರಥಃ—ಶಿಥಿಲವನ್ನಾಗಿ ಮಾಡು ॥

॥ ಭಾವಾರ್ಥ ॥

ಹೇ ವರುಣ, ನಿನ್ನ ಕ್ರೋಧವನ್ನು ನಮಸ್ಕಾರಗಳಿಂದಲೂ, ಯಜ್ಞಗಳಿಂದಲೂ, ಹವಿಸ್ಸುಗಳಿಂದಲೂ ಕಡಿಮೆಯಾಗುವಂತೆ ಮಾಡುತ್ತೇವೆ. ಎಲೈ ಅನಿಷ್ಟಪರಿಹಾರಕ, ಜ್ಞಾನಿ ಮತ್ತು ದೇದೀಪ್ಯಮಾನನಾದ ವರುಣ, ನಮಗಾಗಿ, ನಮ್ಮ ಈ ಕರ್ಮದಲ್ಲಿ ಇರುವವನಾಗಿ, ನಮ್ಮಿಂದ ಮಾಡಲ್ಪಟ್ಟ ಪಾಪಗಳನ್ನು ಪರಿಹರಿಸು.

## English Translation.

Varuna, we propitiate your anger with prostrations, with sacrifices, with oblations ; averter of misfortunes and the wise, be present amongst us and slacken the sins we have committed.

॥ ವಿಶೇಷವಿಷಯಗಳು ॥

ಯಜ್ಞಸಮಾಪ್ತಿಕಾಲದಲ್ಲಿ ಮಾಡುವ ಅವಭೃಥವೆಂಬ ಸ್ನಾನಕರ್ಮದಲ್ಲಿ ವರುಣನಿಗೆ ಹವಿಃಪ್ರದಾನ ಮಾಡುವಾಗ **ಅವ ತೇ ಹೇಳ** ಎಂಬ ಋಕ್ಕು **ಉದುತ್ತಮಂ** ಎಂಬ ಮುಂದಿನ ಋಕ್ಕು ಯಾಜ್ಯಾನುವಾಕ್ಯಗಳೆಂದು ಆಶ್ವಲಾಯನ ಶ್ರೌತಸೂತ್ರದ **ಪತ್ನೀಸಂಯಾಜೈಶ್ಚರಿತ್ವಾ** ಎಂಬ ಖಂಡದಲ್ಲಿ **ಅವ ತೇ ಹೇಳೋ ವರುಣ ನಮೋಭಿರಿತಿ ದ್ವೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೬-೧೩)

**ಹೇಳಃ—ಕ್ರೋಧಂ ।** ಕೋಪವನ್ನು; ಹೇಳಃ ಹರಃ ಮೊದಲಾದ ಹನ್ನೊಂದು ಕ್ರೋಧನಾಮಗಳ ಮಧ್ಯದಲ್ಲಿ ಹೇಳಃ ಎಂಬ ಶಬ್ದವು ಪಠಿತವಾಗಿರುವುದರಿಂದ ಹೇಳಃ ಎಂದರೆ ಕೋಪವೆಂದರ್ಥವು (ನಿ. ૩-೯).

**ಅವ ಈಮಹೇ—ಅವನಯಾಮಃ ।** ಶಮನ ಮಾಡುತ್ತೇವೆ; ಸಮಾಧಾನಮಾಡುತ್ತೇವೆ.

**ನಮೋಭಿಃ—**ನಮಸ್ಕಾರಗಳಿಂದ । **ಯಜ್ಞೇಭಿಃ**—ಯಜ್ಞಾನುಷ್ಠಾನಕರ್ಮಗಳಿಂದ । **ಹವಿರ್ಭಿಃ**—ಹವಿಸ್ಸನ್ನು ಅರ್ಪಿಸುವುದರಿಂದ ನಿನ್ನ ಕೋಪವನ್ನು ಸಮಾಧಾನಗೊಳಿಸುವೆವು ಎಂದಭಿಪ್ರಾಯವು.

**ಕ್ಷಯನ್—ನಿವಸನ್ ।** ವಾಸಮಾಡುತ್ತಾ । **ಕ್ಷಿ ನಿವಾಸಗತ್ಯೋಃ**-ಕ್ಷಯವೆಂದರೆ ವಾಸಸ್ಥಾನ (ನಿ. ೮-೧೮

**ಪ್ರಚೇತಃ**—ಚೆನ್ನಾಗಿ ತಿಳುವಳಿಕೆಯುಳ್ಳವನು, ಪ್ರಜ್ಞಾಶಾಲಿ

**ಶಿಶ್ರಥಃ—ಶ್ರಥ ದೌರ್ಬಲ್ಯೇ । ಶ್ರಥಿತಾನಿ ಶಿಥಿಲಾನಿ** । ಕಮ್ಮಿಯಾಗುವಂತೆ ಮಾಡು, ನಿವಾರಣೆಮಾಡು.

॥ ವ್ಯಾಕರಣಪ್ರಕ್ರಿಯಾ ॥

**ಹೇಳಃ**—ಹೇಡೃ ಅನಾದರೇ ಧಾತು. ಭ್ವಾದಿ **' ಸರ್ವಧಾತುಭ್ಯೋಽಸುನ್ '** (ಉ. ಸೂ. ೪-೬-೨೮) ಎಂಬುದರಿಂದ ಅಸುನ್ ಪ್ರತ್ಯಯ ಬರುತ್ತದೆ. ಹೇಳಸ್ ಎಂದು ಸಾಂತ ನಪುಂಸಕ ಶಬ್ದವಾಗುತ್ತದೆ. ಅಸುನ್ ನಿತ್ತಾದುದರಿಂದ **' ಞ್ನಿತ್ಯಾದಿರ್ನಿತ್ಯಂ '** (ಪಾ. ಸೂ. ೬-೧-೧೯೭) ಸೂತ್ರದಿಂದ ಆದ್ಯುದಾತ್ತ ಸ್ವರವು ಬರುತ್ತದೆ

**ಯಜ್ಞೇಭಿಃ—**ತೃತೀಯಾ ಬಹುವಚನದಲ್ಲಿ ಭಿಸ್ ಪ್ರತ್ಯಯ ಬರುತ್ತದೆ. ಅದಕ್ಕೆ ಅದಂತದ ಪರದಲ್ಲಿರುವುದರಿಂದ ಐಸಾದೇಶವು ಪ್ರಾಪ್ತವಾದರೆ **' ಬಹುಲಂ ಛಂದಸಿ '** (ಪಾ. ಸೂ. ೭-೧-೧೦) ಛಂದಸ್ಸಿನ ಐಸಾದೇಶವು ವಿಕಲ್ಪವಾಗಿ ಬರುತ್ತದೆ ಎಂಬುದರಿಂದ ಇಲ್ಲಿ ಬರುವುದಿಲ್ಲ. **' ಬಹುವಚನೇ ಝಲ್ಯೇತ್ '** (ಪಾ. ಸೂ. ೭-೩-೧೦೩) ಸೂತ್ರದಿಂದ ಅದಂತಾಂಗಕ್ಕೆ ಏತ್ವ ಬಂದು ರುತ್ವವಿಸರ್ಗಗಳು ಬಂದರೆ ಯಜ್ಞೇಭಿಃ ಎಂದು ರೂಪವಾಗುತ್ತದೆ

**ಈಮಹೇ**—ಈಙ್ ಗತೌ ಧಾತು ದಿವಾದಿ **' ಟಿತಆತ್ಮನೇಪದಾನಾಂ ಟೇರೇ '** (ಪಾ. ಸೂ ೩-೪-೭೯) ಎಂಬುದರಿಂದ ಲಟ್ಟಿನ ಉತ್ತಮಪುರುಷ ಬಹುವಚನದ ಮಹಿಙ್ ಪ್ರತ್ಯಯದ ಟಿಗೆ ಏತ್ವ ಬರುತ್ತದೆ ಶ್ಯನ್ ವಿಕರಣ ಪ್ರಾಪ್ತವಾದರೆ **' ಬಹುಲಂ ಛಂದಸಿ '** ಎಂಬುದರಿಂದ ಲುಕ್ ಬರುತ್ತದೆ. ಈಮಹೇ ಎಂದು ರೂಪವಾಗುತ್ತದೆ.

**ಕ್ಷಯನ್**—ಕ್ಷಿ ನಿವಾಸಗತ್ಯೋಃ ಧಾತು. ತುದಾದಿ. ವರ್ತಮಾನಾರ್ಥದಲ್ಲಿ ಪ್ರಾಪ್ತವಾದ ಲಟ್ಟಿಗೆ ಶತ್ರಾದೇಶ ಬರುತ್ತದೆ. **' ವ್ಯತ್ಯಯೋ ಬಹುಲಂ '** ಎಂಬುದರಿಂದ ಶಪ್ ವಿಕರಣ ಬರುತ್ತದೆ ಸಾರ್ವಧಾತುಕನಿಮಿತ್ತಕವಾದ

ಗುಣವು ಧಾತುವಿಗೆ ಬರುತ್ತದೆ. ಕ್ಷಯತ್ ಎಂದು ರೂಪವಾಗುತ್ತದೆ. ಸಂಬುದ್ಧಿಯಲ್ಲಿ ನುಮಾಗವು ಹಲ್ಙ್ಯಾದಿ ಲೋಪ, ಸಂಯೋಗಾಂತಲೋಪಗಳು ಬಂದರೆ ಕ್ಷಯನ್ ಎಂದು ರೂಪವಾಗುತ್ತದೆ. **' ಆಮಂತ್ರಿತಸ್ಯ ಚ '** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಅಸುರ**—ಅಸು ಕ್ಷೇಪಣೇ ಧಾತು. ದಿವಾದಿ. **' ಅಸೇರುರನ್ '** (ಉ. ಸೂ. ೧-೪೨) ಎಂಬುದರಿಂದ ಉರನ್ ಪ್ರತ್ಯಯ ಬರುತ್ತದೆ. ಸಂಬುದ್ಧಿಯಲ್ಲಿ ಅಸುರ ಎಂದು ರೂಪವಾಗುತ್ತದೆ. **' ಆಮಂತ್ರಿತಸ್ಯ ಚ '** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಶಿಶ್ರಥಃ**—ಶ್ರಥ ದೌರ್ಬಲ್ಯೇ ಧಾತು. ಚುರಾದಿ. ಇದು ಅದಂತವಾದ ಧಾತು. ಚುರಾದಿಗೆ ಸ್ವಾರ್ಥಿಕವಾದ ಣಿಚ್ ಬರುತ್ತದೆ. ಣಿಚ್ ಪರದಲ್ಲಿರುವಾಗ **' ಅತೋ ಲೋಪಃ '** (ಪಾ. ಸೂ. ೬-೪-೪೮) ಸೂತ್ರದಿಂದ ಧಾತುವಿನ ಅಕಾರಕ್ಕೆ ಲೋಪ ಬರುತ್ತದೆ. ಶ್ರಥಿ ಎಂಬುದು **' ಸನಾದ್ಯಂತಾ ಧಾತವಃ '** (ಪಾ. ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದರ ಮೇಲೆ **' ಛಂದಸಿ ಲುಙ್‌ಲಙ್‌ಲಿಟಃ '** ( ಪಾ. ಸೂ. ೩-೪-೬ ) ಸೂತ್ರದಿಂದ ಪ್ರಾರ್ಥನಾರ್ಥದಲ್ಲಿ ಲುಙ್ ಬರುತ್ತದೆ. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಬರುತ್ತದೆ. **' ಇತಶ್ಚ "** (ಪಾ. ಸೂ. ೩-೪-೧೦೦) ಎಂಬುದರಿಂದ ಇಕಾರ ಲೋಪ ಬರುತ್ತದೆ. ಲುಙನಲ್ಲಿ ಚ್ಲಿ ಪ್ರಾಪ್ತವಾದರೆ ಅದಕ್ಕೆ **' ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್ '** (ಪಾ. ಸೂ. ೩-೧-೪೮) ಣ್ಯಂತಾದಿಗಳ ಮೇಲೆ ಇರುವ ಚ್ಲಿಗೆ ಚಙ್ ಬರುತ್ತದೆ ಎಂಬುದರಿಂದ ಚಙ್ ಬರುತ್ತದೆ. ಚಙ್‌ನ ಅಕಾರ ಪರದಲ್ಲಿರುವಾಗ **' ಣೇರನಿಟಿ '** (ಪಾ. ಸೂ. ೬-೪-೫೧) ಸೂತ್ರದಿಂದ ಣಿಗೆ ಲೋಪ ಬರುತ್ತದೆ. ಶ್ರಥ+ಅ-ಸ್, ಎಂದಿರುವಾಗ **' ಚಙಿ '** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿನ ಏಕಾಚಿಗೆ ದ್ವಿತ್ವ ಬರುತ್ತದೆ ಆಗ ಅಭ್ಯಾಸಕ್ಕೆ **' ಹಲಾದಿಃ ಶೇಷಃ '** (ಪಾ. ಸೂ. ೭-೪-೬೦) ಸೂತ್ರದಿಂದ ಆದಿ ಹಲ್ ಶೇಷವು ಬರುತ್ತದೆ. ಶಶ್ರಥ್+ಅ+ಸ್ ಎಂದಿರುವಾಗ ಣಿಚ್ ನಿಮಿತ್ತಕ ಅಕ್ ಲೋಪವು ಬಂದುದರಿಂದ ಇನ್ನು ಯಾವ ಕಾರ್ಯವೂ ಪ್ರಾಪ್ತವಾಗುವುದಿಲ್ಲ **' ಸನ್ವಲ್ಲಘುನಿ ಚಙ್ ಪರೇ '** (ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವವು ಅಗ್ಲೋಪವಾದರೆ ಬರುವುದಿಲ್ಲ ಎಂದು ನಿಷೇಧ ಮಾಡಿರುತ್ತಾರೆ. ಆದರೆ **' ಬಹುಲಂ ಛಂದಸಿ '** (ಪಾ. ಸೂ. ೭-೪-೭೮) ಎಂಬುದರಿಂದ ಸನ್ವದ್ಭಾವ ಇಲ್ಲದೇ ಇದ್ದರೂ ಅಭ್ಯಾಸಕ್ಕೆ ಇತ್ವವು ಛಂದಸ್ಸಿನಲ್ಲಿ ಬರುತ್ತದೆ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಶಿಶ್ರಥಃ ಎಂದು ರೂಪವಾಗುತ್ತದೆ. **' ಬಹುಲಂ ಛಂದಸ್ಯಮಾಙ್‌ಯೋಗೇಽಪಿ '** (ಪಾ. ಸೂ ೬-೪-೭೫) ಎಂಬುದರಿಂದ ಅಂಗಕ್ಕೆ ಲುಙ್ ನಿಮಿತ್ತಕವಾದ ಅಡಾಗಮವು ಬರುವುದಿಲ್ಲ ತಿಙಂತ ನಿಘಾತಸ್ವರವು ಬರುತ್ತದೆ.

॥ ಸಂಹಿತಾಪಾಠಃ ॥

ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿ ಮಧ್ಯಮಂ
ಶ್ರಥಾಯ ।
ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ
ಸ್ಯಾಮ ॥ ೧೫ ॥

॥ ಪದಪಾಠಃ ॥

ಉತ್ । ಉತ್ಽತಮಂ । ವರುಣ । ಪಾಶಂ । ಅಸ್ಮತ್ । ಅವ । ಅಧಮಂ । ವಿ ।
ಮಧ್ಯಮಂ । ಶ್ರಥಯ ।
ಅಥ । ವಯಂ । ಆದಿತ್ಯ । ವ್ರತೇ । ತವ । ಅನಾಗಸಃ । ಅದಿತಯೇ ।
ಸ್ಯಾಮ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ವರುಣ ಉತ್ತಮಮುತ್ಕೃಷ್ಟಂ ಶಿರಸಿ ಬದ್ಧಂ ಪಾಶಮಸ್ಮದಸ್ಮತ್ತ ಉಚ್ಛ್ರಥಾಯ । ಉತ್ಕೃಷ್ಯ ಶಿಥಿಲಂ ಕುರು । ಅಧಮಂ ನಿಕೃಷ್ಟಂ ಪಾದೇಽವಸ್ಥಿತಂ ಪಾಶಮವ ಶ್ರಥಾಯ । ಅಧಸ್ತಾದವಕೃಷ್ಯ ಶಿಥಿಲೀಕುರು । ಮಧ್ಯಮಂ ನಾಭಿಪ್ರದೇಶಗತಂ ಪಾಶಂ ವಿ ಶ್ರಥಾಯ । ವಿಯುಜ್ಯ ಶಿಥಿಲೀಕುರು । ಅಥಾನಂತರಂ ಹೇ ಆದಿತ್ಯ ಅದಿತೇಃ ಪುತ್ರ ವರುಣ ವಯಂ ಶುನಃಶೇಪಾಸ್ತವ ವ್ರತೇ ತ್ವದೀಯೇ ಕರ್ಮಣ್ಯದಿತಯೇ ಖಂಡನರಾಹಿತ್ಯಾಯಾನಾಗಸೋಽಪರಾಧರಹಿತಾಃ ಸ್ಯಾಮ । ಭವೇಮ ॥ ಉತ್ತಮಂ । ತಮಪಃ ಪಿತ್ತ್ವಾದನುದಾತ್ತತ್ವೇನಾದ್ಯುದಾತ್ತತ್ವೇ ಪ್ರಾಪ್ತ ಉತ್ತಮಶಶ್ವತ್ತಮೌ ಸರ್ವತ್ರೇತ್ಯುಂಛಾದಿಷು ಪಾಠಾದಂತೋದಾತ್ತತ್ವಂ । ಪಾ. ೬-೧-೧೬೦ । ಅಧಮಂ । ಅವದ್ಯಾವಮಾಧಮಾರ್ವರೇಫಾಃ ಕುತ್ಸಿತೇ । ಉ. ೫-೫೪ । ಇತ್ಯವತೇರಮಚ್ । ವಸ್ಯ ಧಃ । ಶ್ರಥಾಯ । ಶ್ರಥ ದೌರ್ಬಲ್ಯೇ । ಸಂಹಿತಾಯಾಂ ಛಾಂದಸೋ ದೀರ್ಘಃ । ತವ । ಯುಷ್ಮದಸ್ಮದೋರ್ಙಸೀತ್ಯಾದ್ಯುದಾತ್ತತ್ವಂ । ಅನಾಗಸಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ನಞ್ಸುಭ್ಯಾಮಿತಿ ತು ವ್ಯತ್ಯಯೇನ ಪ್ರವರ್ತತೇ ।

ಯದ್ವಾ । ಅಗಸ್‌ಶಬ್ದಾದಸ್ಮಾಯೋಮೇಧೇತಿ । ಪಾ. ೫-೨-೧೨೧ । ಮತ್ವರ್ಥೀಯೋ ವಿನಿಃ । ತಸ್ಯ ವಿನ್ಮತೋರ್ಲುಕ್' । ಪಾ. ೫-೩-೬೫ । ಇತಿ ಲುಕ್ । ನಞ್‌ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥ ೧೫ ॥

॥ ಪ್ರತಿಪದಾರ್ಥ ॥

**ಹೇ ವರುಣ**—ಎಲೈ ವರುಣನೇ । **ಉತ್ತಮಂ**—(ಶಿರಸ್ಸಿನಲ್ಲಿ) ಮೇಲೆ ಕಟ್ಟಿರುವ । **ಪಾಶಂ**—ಹಗ್ಗವನ್ನು । **ಅಸ್ಮತ್**—ನಮ್ಮಿಂದ । **ಉತ್ ಶ್ರಥಾಯ**—ಮೇಲಿನಿಂದ (ತೆಗೆದು) ಬಿಡಿಸು । **ಅಧಮಂ**—ಕೆಳಗಡೆ (ಪಾದಪ್ರದೇಶದಲ್ಲಿ) ಕಟ್ಟಿರುವ (ಹಗ್ಗವನ್ನು) । **ಅವ (ಶ್ರಥಾಯ)**—ಕೆಳಗಡೆಯಿಂದ ಬಿಡಿಸು । **ಮಧ್ಯಮಂ**—ಮಧ್ಯೆ (ನಾಭಿ ಪ್ರದೇಶದಲ್ಲಿ) ಇರುವ (ಹಗ್ಗವನ್ನು) । **ವಿ ಶ್ರಥಾಯ**—ಕತ್ತರಿಸಿ ಬಿಡಿಸು । **ಅಥ**—ಅನಂತರ । **ಆದಿತ್ಯ**—ಅದಿತಿ ಪುತ್ರನಾದ ವರುಣನೇ । **ವಯಂ**—(ಶುನಃಶೇಪರಾದ) ನಾವು । **ತವ ವ್ರತೇ**—ನಿನ್ನ ಕರ್ಮದಲ್ಲಿ । **ಅದಿತಯೇ**—ವಿಚ್ಛೇದವಿಲ್ಲದೇ ಇರುವುದಕ್ಕೋಸ್ಕರ । **ಅನಾಗಸಃ**—ದೋಷರಹಿತರಾಗಿ (ಶುದ್ಧರಾಗಿ) । **ಸ್ಯಾಮ**—ಆಗೋಣ.

॥ ಭಾವಾರ್ಥ ॥

ಎಲೈ ವರುಣ, ನನ್ನ ತಲೆಯ ಭಾಗದಲ್ಲಿರುವ ಹಗ್ಗವನ್ನು ಮೇಲಿನಿಂದಲೂ, ಪಾದಪ್ರದೇಶದಲ್ಲಿರುವುದನ್ನು ಕೆಳಗಡೆಯಿಂದಲೂ, ಮಧ್ಯಪ್ರದೇಶದಲ್ಲಿರುವುದನ್ನು ಕತ್ತರಿಸಿಯೂ, ಬಿಡಿಸು. ಅನಂತರ ನಾವು (ಶುನಃಶೇಪರು) ನಿನ್ನ ಕರ್ಮಗಳು ವಿಚ್ಛೇದವಿಲ್ಲದೇ ಇರುವುದಕ್ಕಾಗಿ, ದೋಷರಹಿತ (ಶುದ್ಧ)ರಾಗೋಣ.

English Translation.

Loosen up, Varuna, the upper bond from us, loosen down the lower bond, and loosen the middle bond, that we may then O Aditya (son of Aditi or Varuna) be free from sin in your worship.

॥ ವಿಶೇಷವಿಷಯಗಳು ॥

**ಉತ್ತಮಂ, ಅಧಮಂ ಮಧ್ಯಮಂ**—ಮೇಲಿನ, ಕೆಳಗಿನ, ಮಧ್ಯದ ಪಾಶಗಳನ್ನು ಅಥವಾ ಹಗ್ಗವನ್ನು ಬಿಡಿಸು. ಪಶುವನ್ನು ಯೂಪಸ್ತಂಭಕ್ಕೆ ಕಟ್ಟುವಾಗ ಅದು ತಪ್ಪಿಸಿಕೊಂಡು ಹೋಗದಂತೆಯೂ ಅದನ್ನು ಕೊಲ್ಲುವಾಗ ಅಲುಗಾಡದಂತೆಯೂ ಇರುವುದಕ್ಕಾಗಿ ಪಶುವಿನ ಶರೀರದ ಮೇಲುಭಾಗ (ಎಂದರೆ ಕತ್ತು) ಕೆಳಭಾಗ (ಪಾದಗಳು) ಮಧ್ಯಭಾಗ (ಉದರ) ಗಳನ್ನು ಹಗ್ಗದಿಂದ ಚೆನ್ನಾಗಿ ಬಿಗಿದಿರುವುದನ್ನು ಬಿಡಿಸಬೇಕೆಂದು ಮೂರು ವಿಧವಾದ ಪಾಶಬಂಧನ ಸ್ಥಳಗಳನ್ನು ಋಷಿಯು ನಿರ್ದೇಶಿಸಿರುವನು.

**ಅವ ಶ್ರಥಾಯ**—ವಿಯುಜ್ಯ ಶಿಥಿಲೀಕುರು । ಹಗ್ಗವನ್ನು ಬಿಚ್ಚಿ ವಿಮೋಚನೆಮಾಡು.

**ಆದಿತ್ಯ—ಅದಿತೇಃ ಪುತ್ರ, ವರುಣ** । ದೇವಮಾತೆಯಾದ ಅದಿತಿಯ ಪುತ್ರನಾದ ವರುಣ.

**ವ್ರತೇ—ತ್ವದೀಯೇ ಕರ್ಮಣಿ ।** ನಿನ್ನನ್ನು ಆರಾಧಿಸುವುದಕ್ಕಾಗಿ ಮಾಡುವ ಯಜ್ಞಕರ್ಮದಲ್ಲಿ (ಭಾಗ ವಹಿಸುವಂತೆ ಮಾಡು).

**ಅನಾಗಸಃ—ಅಪರಾಧರಹಿತಾಃ ।** ತಪ್ಪುಗಳಿಲ್ಲದವರನ್ನಾಗಿ, ಪಾಪರಹಿತರನ್ನಾಗಿ ಇತ್ಯಾದಿ.

॥ ವ್ಯಾಕರಣಪ್ರಕ್ರಿಯಾ ॥

**ಉತ್ತಮಮ್—** ಅತಿಶಯಾರ್ಥವು ತೋರುವಾಗ ತಮಪ್ ಪ್ರತ್ಯಯ ಬರುತ್ತದೆ. **'ಅನುದಾತ್ತೌ ಸುಪ್ಪಿತೌ'** (ಪಾ. ಸೂ. ೩-೧-೪) ಸೂತ್ರದಿಂದ ತಮಪ್ ಪಿತ್ತಾದುದರಿಂದ ಅನುದಾತ್ತಸ್ವರವು ಪ್ರಾಪ್ತವಾಗುತ್ತದೆ. ಇದಕ್ಕೆ ಬಾಧಕವಾಗಿ ಉಂಛಾದಿಗಳಿಗೆ ಅಂತೋದಾತ್ತ ಸ್ವರವನ್ನು ಹೇಳುವಾಗ **'ಉತ್ತಮಶಶ್ವತ್ತಮೌ ಸರ್ವತ್ರ'** (ಪಾ. ಸೂ. ೬-೧-೧೬೦ ಗ) ಎಂದು ಉಂಛಾದಿಗಳಲ್ಲಿ ಪಾಠಮಾಡಿರುವುದರಿಂದ ಅಂತೋದಾತ್ತ ಸ್ವರವು ಬರುತ್ತದೆ.

**ಅಧಮಮ್—'ಅವದ್ಯಾವಮಾಧಮಾರ್ವರೇಫಾಃ ಕುತ್ಸಿತೇ'** (ಉ. ಸೂ. ೫-೭೩೨) ಎಂಬುದರಿಂದ ಅವ ರಕ್ಷಣೆ ಧಾತುವಿಗೆ ಅಮಚ್ ಪ್ರತ್ಯಯ ಬರುತ್ತದೆ. ತತ್ಸಂನ್ನಿಯೋಗದಿಂದ ಧಾತುವಿನ ವಕಾರಕ್ಕೆ ಧಕಾರವು ಬರುತ್ತದೆ. ಅಧಮ ಎಂದು ರೂಪವಾಗುತ್ತದೆ. ಪ್ರತ್ಯಯವು ಚಿತ್ತಾದುದರಿಂದ **'ಚಿತಃ'** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರವು ಬರುತ್ತದೆ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ರಕ್ಷಣಾಭಿನ್ನಾರ್ಥದಲ್ಲಿದೆ.

**ಶ್ರಥಾಯ—**ಶ್ರಥ ದೌರ್ಬಲ್ಯೇ ಧಾತು ಚುರಾದಿ. ಲೋಟ್‌ಮಧ್ಯಮಪುರುಷದ ಸಿಪ್ಪಿಗೆ ಹಿ ಆದೇಶ ಬರುತ್ತದೆ. ಣಿಜಂತವು ಧಾತುವಾದುದರಿಂದ ಕರ್ತ್ರರ್ಥದಲ್ಲಿ ಶಪ್ ವಿಕರಣವು ಬರುತ್ತದೆ. ಅಕಾರದ ಪರದಲ್ಲಿರುವುದರಿಂದ **'ಅತೋ ಹೇಃ'** (ಪಾ ಸೂ. ೬-೪-೧೦೫) ಸೂತ್ರದಿಂದ ಹೀಗೆ ಲುಕ್ ಬರುತ್ತದೆ. ಣಿಚ್ಚಿಗೆ ಗುಣ ಅಯಾದೇಶವು ಬಂದರೆ ಶ್ರಥಯ ಎಂದು ರೂಪವಾಗುತ್ತದೆ. ಸಂಹಿತಾಪಾಠದಲ್ಲಿ ಛಾಂದಸವಾಗಿ ದೀರ್ಘ ಬಂದುದರಿಂದ ಶ್ರಥಾಯ ಎಂದು ರೂಪವಾಗುತ್ತದೆ. ತಿಜಂತ ನಿಘಾತಸ್ವರ ಬರುತ್ತದೆ

**ತವ**—ಯುಷ್ಮಚ್ಛಬ್ದದ ಷಷ್ಠೀ ಏಕವಚನದಲ್ಲಿ ತವ ಎಂದು ರೂಪವಾಗುತ್ತದೆ. **'ಯುಷ್ಮದಸ್ಮದೋ-ರ್ಙಸಿ'** (ಪಾ. ಸೂ. ೬-೧-೨೧೧) ಎಂಬುದರಿಂದ ಆದ್ಯುದಾತ್ತ ಸ್ವರವು ಬರುತ್ತದೆ.

**ಅನಾಗಸಃ**—ನ ವಿದ್ಯತೇ ಆಗಃ ಏಷಾಂ ತೇ ಅನಾಗಸಃ ಅಪರಾಧವಿಲ್ಲದವರು ಎಂದರ್ಥ. ನಞ್‌ನ ನಕಾರಕ್ಕೆ ಲೋಪವಾದರೆ ಅದರ ಪರದಲ್ಲಿರುವ ಅಚ್ಚಿಗೆ ನುಡಾಗಮ ಬರುತ್ತದೆ. ಇದು ಬಹುವ್ರೀಹಿಸಮಾಸವಾದುದರಿಂದ **'ಬಹುವ್ರೀಹೌ ಪ್ರ-'** (ಪಾ. ೬-೨-೧) ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಅನಾಗಸಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ವ್ಯತ್ಯಯದಿಂದ **'ನಞ್ ಸುಭ್ಯಾಂ'** (ಪಾ. ಸೂ. ೬-೨-೧೭೨) ಸೂತ್ರದಿಂದ ಉತ್ತರಪದಾಂತೋದಾತ್ತಸ್ವರವು ಬರುವುದಿಲ್ಲ. ಅಥವಾ ಆಗಃ ಶಬ್ದವು ಸಕಾರಾಂತವಾದುದರಿಂದ **'ಅಸ್ಮಾಯಾ ಮೇಧಾ ಸ್ರಜೋ ವಿನಿಃ'** (ಪಾ. ಸೂ. ೫-೨-೧೨೧) ಎಂಬುದರಿಂದ ಮತ್ವರ್ಥದಲ್ಲಿ (ಅಪರಾಧ ಉಳ್ಳವರು) ವಿನಿ ಪ್ರತ್ಯಯವು ಬರುತ್ತದೆ. ಅದಕ್ಕೆ **'ವಿನ್ಮತೋರ್ಲುಕ್'** (ಪಾ. ಸೂ. ೫-೩-೫) ಸೂತ್ರದಿಂದ ಲುಕ್ ಬರುತ್ತದೆ. ಆಗಸ್ ಎಂದೇ ಉಳಿಯುತ್ತದೆ. ಅದರೊಡನೆ ನಞ್ ಸಮಾಸಮಾಡಿದರೆ ತತ್ಪುರುಷಸಮಾಸವಾಗುತ್ತದೆ. ಆಗ, **ತತ್ಪುರುಷೇ ತುಲ್ಯಾರ್ಥ-** (ಪಾ. ಸೂ. ೬-೨-೨) ಸೂತ್ರದಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಆದ್ಯುದಾತ್ತವಾಗುತ್ತದೆ.

# ಇಪ್ಪತ್ತೈದನೆಯ ಸೂಕ್ತವು

---

**ಯಚ್ಚಿದಿತ್ಯೇಕವಿಂಶತ್ಯೃಚಂ ದ್ವಿತೀಯಂ ಸೂಕ್ತಂ । ತಥಾ ಚಾನುಕ್ರಾಂತಂ । ಯಚ್ಚಿತ್ಸೈಕೇತಿ । ಋಷಿಶ್ಚಾನ್ಯಸ್ಮಾದಿತಿ ಪರಿಭಾಷಯಾ ಶುನಃಶೇಪ ಏವ ಋಷಿಃ । ಆದೌ ಗಾಯತ್ರಮಿತಿ ಪರಿಭಾಷಿತ-ತ್ವಾದ್ಗಾಯತ್ರೀ ಛಂದಃ । ವಾರುಣಂ ತ್ವಿತಿ ಪೂರ್ವೋಕ್ತತ್ವಾತ್ತುಹ್ಯಾದಿಪರಿಭಾಷಯಾ । ಅನು. ೧೨-೩ । ವರುಣೋ ದೇವತಾ ॥ ವಿನಿಯೋಗ ಉಕ್ತಃ ಶೌನಃಶೇಪಾಖ್ಯಾನೇ ॥ ವಿಶೇಷವಿನಿಯೋಗಸ್ತು । ಅಭಿಪ್ಲವ-ಷಡಹ ಇದಂ ಸೂಕ್ತಂ ಹೋತ್ರಕಶಸ್ತ್ರೇ ಸ್ತೋಮನಿಮಿತ್ತಮಾವಾಪಾರ್ಥಂ । ಅಭಿಪ್ಲವಪೃಷ್ಠ್ಯಾಹಾನೀತಿ ಖಂಡೇ ತಥೈವ ಸೂತ್ರಿತಂ ॥ ಯಚ್ಚಿದ್ಧಿ ತೇ ವಿಶ ಇತಿ ವಾರುಣಮೇತಸ್ಯ ತೃಚಮಾವಪೇತ ಮೈತ್ರಾ-ವರುಣಃ । ಆ. ೭-೫ । ಇತಿ ॥**

ಅನುವಾದವು—**ಯಚ್ಚಿದ್ಧಿ ತೇ** ಎಂಬುದು ಆರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿಯೂ **ಯಚ್ಚಿತ್** ಎಂಬ ಸೂಕ್ತದಲ್ಲಿ ಇಪ್ಪತ್ತೊಂದು ಋಕ್ಕುಗಳಿರುವುವೆಂದು ಹೇಳಿದೆ. ಈ ಸೂಕ್ತಕ್ಕೆ ಶುನಃಶೇಪನು ಋಷಿಯು. ಗಾಯತ್ರೀ ಛಂದಸ್ಸು. ಹಿಂದೆ ಹೇಳಿರುವಂತೆಯೇ ಈ ಸೂಕ್ತಕ್ಕೆ ವರುಣನೇ ದೇವತೆಯು. ಶೌನಶ್ಶೇಪಸಂಬಂಧವಾದ ಎಂದರೆ ಶುನಶ್ಶೇಪಾಖ್ಯಾನವನ್ನು ಹೇಳುವಾಗ ಇದರ ವಿನಿಯೋಗವಿರುವುದು. ಇದಲ್ಲದೆ ಇದಕ್ಕೆ ವಿಶೇಷ ವಿನಿಯೋಗವೂ ಇರುವುದು—ಅಭಿಪ್ಲವಷಡಹವೆಂಬ ಯಾಗದಲ್ಲಿ ಹೋತ್ರಕಶಸ್ತ್ರಮಂತ್ರಪಠನಮಾಡುವಾಗ ಸ್ತೋಮಾವಾಪನಿಮಿತ್ತವಾಗಿ ಮೈತ್ರಾವರುಣನೆಂಬ ಋತ್ವಿಜನು ಈ ಸೂಕ್ತವನ್ನು ಹೇಳಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಅಭಿಪ್ಲವಪೃಷ್ಠ್ಯಾಹಾನಿ** ಎಂಬ ಖಂಡದಲ್ಲಿ **ಯಚ್ಚಿದ್ಧಿ ತೇ ವಿಶ ಇತಿ ವಾರುಣಮೇತಸ್ಯ ತೃಚಮಾವಪೇತ ಮೈತ್ರಾವರುಣಃ** ಎಂಬ ಸೂತ್ರವಿರುವುದು (ಆ. ೭-೫).

## ಸೂಕ್ತ—೨೫

॥ ಮಂಡಲ—೧ ॥ ಅನುವಾಕ—೬ ॥ ಸೂಕ್ತ—೨೫ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ, ೧೬, ೧೭, ೧೮, ೧೯ ॥

॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೨೧** ॥

॥ **ಋಷಿಃ—ಶುನಃಶೇಪ ಆಜೀಗರ್ತಿಃ** ॥

**ದೇವತಾ—ವರುಣಃ** ॥

**ಛಂದಃ—ಗಾಯತ್ರೀ** ॥

॥ ಸಂಹಿತಾಪಾಠಃ ॥

ಯಚ್ಚಿದ್ಧಿ ತೇ ವಿಶೋ ಯಥಾ ಪ್ರ ದೇವ ವರುಣ ವ್ರತಂ ।
ಮಿನೀಮಸಿ ದ್ಯವಿದ್ಯವಿ ॥ ೧ ॥

॥ ಪದಪಾಠಃ ॥

**ಯತ್ । ಚಿತ್ । ಹಿ । ತೇ । ವಿಶಃ । ಯಥಾ । ಪ್ರ । ದೇವ । ವರುಣ । ವ್ರತಂ ।**
**ಮಿನೀಮಸಿ । ದ್ಯವಿಽದ್ಯವಿ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ವರುಣ ಯಥಾ ಲೋಕೇ ವಿಶಃ ಪ್ರಜಾಃ ಕದಾಚಿತ್ಪ್ರಮಾದಂ ಕುರ್ವಂತಿ ತಥಾ ವಯಮಪಿ ತೇ ತವ ಸಂಬಂಧಿ ಯಚ್ಚಿದ್ಧಿ ಯದೇವ ಕಿಂಚಿದ್ವ್ರತಂ ಕರ್ಮ ದ್ಯವಿ ದ್ಯವಿ ಪ್ರತಿದಿನಂ ಪ್ರ ಮಿನೀಮಸಿ ಪ್ರಮಾದೇನ ಹಿಂಸಿತವಂತಃ । ತದಪಿ ವ್ರತಂ ಪ್ರಮಾದಪರಿಹಾರೇಣ ಸಾಂಗಂ ಕುರ್ವಿತಿ ಶೇಷಃ ॥ ಯಥಾ । ಲಿತ್ಸರ್ವೇಣಾದ್ಯುದಾತ್ತತ್ವೇ ಪ್ರಾಪ್ತೇ ಯಥೇತಿ ಪಾದಾಂತೇ । ಫಿ. ೪-೧೭ । ಇತಿ ಸರ್ವಾನುದಾತ್ತತ್ವಂ । ಮಿನೀಮಸಿ । ಮೀಞ್ ಹಿಂಸಾಯಾಂ । ಇದಂತೋ ಮಸಿಃ । ಕ್ರ್ಯಾದಿಭ್ಯಃ ಶ್ನಾ । ಮೀನಾತೇರ್ನಿಗಮೇ । ಪಾ. ೭-೩-೮೧ । ಇತಿ ಹ್ರಸ್ವತ್ವಂ । ಈ ಹಲ್ಯಘೋರಿತೀಕಾರಃ । ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ವಚನಾತ್ತಿಜ ಏವ ಸ್ವರಃ ಶಿಷ್ಯತೇ । ಯದ್ವೃತ್ತಯೋಗಾನ್ನಿಘಾತಾಭಾವಃ ॥**

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣದೇವನೇ । **ವಿಶಃ ಯಥಾ**—(ಲೋಕದ) ಪ್ರಜೆಗಳು (ಕೆಲವುಸಲ) ತಪ್ಪು ಮಾಡುವಂತೆ ನಾವು ಮನುಷ್ಯಮಾತ್ರದವರಾದ್ದರಿಂದ (ನಾವೂ ಸಹ) । **ತೇ**—ನಿನ್ನ (ನಿನ್ನನ್ನು ಉದ್ದೇಶಿಸಿದ) । **ಯಚ್ಚಿದ್ಧಿ**—ಯಾವುದೇ ಆದರೂ । **ವ್ರತಂ**—ಕರ್ಮವನ್ನು (ಕರ್ಮದಲ್ಲಿ) । **ದ್ಯವಿದ್ಯವಿ**—ಪ್ರತಿದಿನವೂ । **ಪ್ರ ಮಿನೀಮಸಿ**—ಅಜ್ಞಾನದಿಂದ ತಪ್ಪುಮಾಡುತ್ತೇವೆ (ಆ ನ್ಯೂನತೆಯನ್ನು ಸರಿಪಡಿಸು).

॥ ಭಾವಾರ್ಥ ॥

ಎಲೈ ವರುಣದೇವನೇ, ಲೋಕದ ಪ್ರಜೆಗಳು ಸ್ವಾಭಾವಿಕವಾಗಿ ಕೆಲವು ವೇಳೆ ತಪ್ಪುಮಾಡುವಂತೆ ನಾವು ಸಹ ಪ್ರತಿದಿನವೂ ನಿನ್ನನ್ನು ಉದ್ದೇಶಿಸಿ ನೆರವೇರಿಸುವ ಕರ್ಮದಲ್ಲಿ ಅಜ್ಞಾನದಿಂದ ನ್ಯೂನತೆಯನ್ನು ಉಂಟುಮಾಡಿದರೆ ಅದನ್ನು ನೀನು ಸರಿಪಡಿಸಿ ನಮ್ಮ ಕರ್ಮವು ಸಾಂಗವಾಗಿ ನೆರವೇರುವಂತೆ ಮಾಡು

## English Translation.

O Varuna, inasmuch as all people commit errors so do we; daily we cause imperfections to be made in your worships.

॥ ವಿಶೇಷವಿಷಯಗಳು ॥

**ವಿಶಃ ಯಥಾ**—ಪ್ರಜೆಗಳು ಅಥವಾ ಸಾಮಾನ್ಯಜನರು ತಪ್ಪುಮಾಡುವಂತೆ ನಾವೂ ಮಾಡುವೆವು. ಅದು ಸಹಜವು.

**ಮಿನೀಮಸಿ—ಪ್ರಮಾದೇನ ಹಿಂಸಿತವಂತಃ ।** ಪ್ರಮಾದದಿಂದ, ತಿಳಿಯದೆ, ಬುದ್ಧಿಪೂರ್ವಕವಲ್ಲದೆ ತಪ್ಪುಮಾಡುವೆವು. ಕರ್ಮದಲ್ಲಿ ಎಂದರೆ ನಿಮ್ಮನ್ನು ಸ್ತೋತ್ರಮಾಡುವ ಕರ್ಮದಲ್ಲಿ ನ್ಯೂನತೆ ಉಂಟಾಗುವಂತೆ ಮಾಡುವೆವು.

**ದ್ಯವಿದ್ಯವಿ**—ಪ್ರತಿದಿನವೂ.

॥ ವ್ಯಾಕರಣಪ್ರಕ್ರಿಯಾ ॥

**ಯಥಾ**—'**ಪ್ರಕಾರವಚನೇ ಥಾಲ್**' (ಪಾ. ಸೂ. ೫-೩-೨೩) ಎಂಬುದರಿಂದ ಯಚ್ಛಬ್ದದ ಮೇಲೆ ಥಾಲ್ ಪ್ರತ್ಯಯು ಬರುತ್ತದೆ. '**ಪ್ರಾಗ್ದಿಶೋ ವಿಭಕ್ತಿಃ**' (ಪಾ. ಸೂ. ೫-೩-೧) ಎಂಬುದರಿಂದ ಇದಕ್ಕೆ ವಿಭಕ್ತಿಸಂಜ್ಞಾ ಇರುವುದರಿಂದ '**ತ್ಯತಾದೀನಾಮಃ**' (ಪಾ. ಸೂ. ೭-೨-೧೦೨) ಸೂತ್ರದಿಂದ ಅತ್ವವು ಪ್ರಕೃತಿಗೆ ಬರುತ್ತದೆ ಯಥಾ ಎಂದು ರೂಪವಾಗುತ್ತದೆ '**ಲಿತಿ**' ಎಂಬುದರಿಂದ ಆದ್ಯುದಾತ್ತಸ್ವರವು ಪ್ರಾಪ್ತವಾದರೆ '**ಯಥೇತಿ ಪಾದಾಂತೇ**' (ಫಿ. ಸೂ. ೮೫) ಎಂಬುದರಿಂದ ಪಾದದ ಕೊನೆಯಲ್ಲಿರುವುದರಿಂದ ಸರ್ವಾನುದಾತ್ತಸ್ವರವು ಬರುತ್ತದೆ.

**ಮಿನೀಮಸಿ**—ಮೀಞ್ ಹಿಂಸಾಯಾಂ ಧಾತು ಕ್ರ್ಯಾದಿ. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯು ಬರುತ್ತದೆ. ಅದಕ್ಕೆ '**ಇದಂತೋ ಮಸಿಃ**' (ಪಾ. ಸೂ. ೭-೧-೪೬) ಎಂಬುದರಿಂದ ಇಕಾಗಮವು ಬರುತ್ತದೆ. ಮಸಿಪರದಲ್ಲಿರುವಾಗ '**ಕ್ರ್ಯಾದಿಭ್ಯಃ ಶ್ನಾ**' (ಪಾ. ಸೂ. ೩-೧-೮೧) ಎಂಬುದರಿಂದ ವಿಕರಣಶ್ನಾ ಪ್ರತ್ಯಯವು ಬರುತ್ತದೆ. ಮೀನಾಮಸಿ ಎಂದಿರುವಾಗ '**ಈಹಲ್ಯಘೋಃ**' (ಪಾ. ಸೂ ೬-೪-೧೧೩) ಎಂಬುದರಿಂದ ಶ್ನಾಪ್ರತ್ಯಯದ ಆಕಾರಕ್ಕೆ ಈಕಾರಾದೇಶವು ಬರುತ್ತದೆ. ಧಾತುವಿನ ಈಕಾರಕ್ಕೆ, '**ಮೀನಾತೇರ್ನಿಗಮೇ**' (ಪಾ. ಸೂ. ೭-೩-೮೧) ಛಂದಸ್ಸಿನಲ್ಲಿ ಮೀಞ್ ಧಾತುವಿನ ಈಕಾರಕ್ಕೆ ಶಿತ್ತಾದ ಪ್ರತ್ಯಯವು ಪರದಲ್ಲಿರುವಾಗ ಹ್ರಸ್ವವು ಬರುತ್ತದೆ ಎಂಬುದರಿಂದ ಹ್ರಸ್ವವು ಬರುತ್ತದೆ. ಮಿನೀಮಸಿ ಎಂದು ರೂಪವಾಗುತ್ತದೆ. ಇಲ್ಲಿ ಧಾತುಸ್ವರವನ್ನು ಬಾಧಿಸಿ ಮಸಿನ ಪ್ರತ್ಯಯ ಸ್ವರವು (ಪ್ರತಿಶಿಷ್ಟವಾಗುವುದರಿಂದ) ಬರುತ್ತದೆ. ಅದನ್ನು ಬಾಧಿಸಿ ಶ್ನಾ ವಿಕರಣವು ಕೊನೆಗೆ ಬರುವುದರಿಂದ ಅದರ ಸ್ವರವು ಬರಬೇಕಾಗುತ್ತದೆ ಆದರೆ '**ಸತಿಶಿಷ್ಟಸ್ವರಬಲೀಯಸ್ತ್ವಂ ಅನ್ಯತ್ರ ವಿಕರಣೇಭ್ಯಃ**' (ವಾ. ೩೬೫೦) ಎಂಬಲ್ಲಿ ವಿಕರಣವನ್ನು ಬಿಟ್ಟು ಬೇರೆ ಕಡೆಯಲ್ಲಿ ಈ ಬಾಧ್ಯಬಾಧಕಭಾವವನ್ನು ಹೇಳಬೇಕು ಎಂಬುದರಿಂದ ಶ್ನಾ ವಿಕರಣವಾದುದರಿಂದ ಇದಕ್ಕೆ ಪ್ರಾಬಲ್ಯ ಇರುವುದಿಲ್ಲ. ಆದುದರಿಂದ ತಿಙ್‌ನ ಸ್ವರವೇ ಸತಿಶಿಷ್ಟವಾಗುವುದರಿಂದ

ಆದ್ಯುದಾತ್ತಸ್ವರವು ಬಂದರೆ ಮಕಾರದ ಮೇಲಿರುವ ಅಕಾರವು ಉದಾತ್ತವಾಗುತ್ತದೆ. ಪೂರ್ವದಲ್ಲಿ ಯಥಾ ಎಂಬ ಯಚ್ಛಬ್ದದ ಯೋಗವಿರುವುದರಿಂದ '**ಯದ್ವೃತ್ತಯೋಗಾನ್ನಿತ್ಯಂ**' (ಪಾ. ಸೂ. ೮-೧-೬೬) ಎಂಬುದರಿಂದ ತಿಙಂತನಿಘಾತಸ್ವರ ಪ್ರತಿಷೇಧವು ಬರುತ್ತದೆ. ‖ ೧ ‖

‖ ಸಂಹಿತಾಪಾಠಃ ‖

ಮಾ ನೋ ವಧಾಯ ಹತ್ನವೇ ಜಿಹೀಳಾನಸ್ಯ ರೀರಧಃ ।
ಮಾ ಹೃಣಾನಸ್ಯ ಮನ್ಯವೇ ‖ ೨ ‖

‖ ಪದಪಾಠಃ ‖

ಮಾ । ನಃ । ವಧಾಯ । ಹತ್ನವೇ । ಜಿಹೀಳಾನಸ್ಯ । ರೀರಧಃ ।
ಮಾ । ಹೃಣಾನಸ್ಯ । ಮನ್ಯವೇ ‖ ೨ ‖

‖ ಸಾಯಣಭಾಷ್ಯಂ ‖

ಹೇ ವರುಣ ಜಿಹೀಳಾನಸ್ಯಾನಾದರಂ ಕೃತವತೋ ಹತ್ನವೇ ಹಂತುಃ ಪಾಪಿಹನನಶೀಲಸ್ಯ ತವ ಸಂಬಂಧಿನೇ ತ್ವತ್ಕರ್ತೃಕಾಯ ವಧಾಯ ನೋಽಸ್ಮಾನ್ಮಾ ರೀರಧಃ । ಸಂಸಿದ್ಧಾನ್ವಿಷಯಭೂತಾನ್ಮಾ ಕುರು । ಹೃಣಾನಸ್ಯ । ಹೃಣೀಯಮಾನಸ್ಯ ಕ್ರುದ್ಧಸ್ಯ ತವ ಮನ್ಯವೇ ಕ್ರೋಧಾಯ ಮಾ ಅಸ್ಮಾನ್ ರೀರಧಃ ‖ ವಧಾಯ । ಹನಶ್ಚ ವಧಃ । ಪಾ. ೩-೩-೭೬ । ಇತ್ಯಬಂತೋ ವಧಶಬ್ದಃ । ಉಂಛಾದಿಷು ಪಾಠಾದಂತೋದಾತ್ತಃ । ಹತ್ನವೇ । ಹನ ಹಿಂಸಾಗತ್ಯೋಃ । ಕೃಹನಿಭ್ಯಾಂ ಕ್ನುಃ । ಉ. ೩-೩೦ । ಇತಿ ಕ್ನುಪ್ರತ್ಯಯಃ । ಧಾತೋರ್ನಕಾರಸ್ಯ ತಕಾರಃ । ಜಿಹೀಳಾನಸ್ಯ । ಹೇಡೃ ಅನಾದರೇ । ಅಸ್ಮಾಲ್ಲಿಟಃ ಕಾನಚ್ । ದ್ವಿರ್ಭಾವಹಲಾದಿಶೇಷಹ್ರಸ್ವಚುತ್ವಜಶ್ತ್ವಾನಿ । ಏಕಾರಸ್ಯ ಈಕಾರಾದೇಶಶ್ಛಾಂದಸಃ । ಚಿತ ಇತ್ಯಂತೋದಾತ್ತತ್ವಂ । ರೀರಧಃ । ರಾಧ ಸಾಧ ಸಂಸಿದ್ಧೌ । ಚಙಿ ಣಿಲೋಪೇ ಉಪಧಾಹ್ರಸ್ವತ್ವಂ । ದ್ವಿರ್ವಚನ ಹಲಾದಿಶೇಷಃ । ಹ್ರಸ್ವತ್ವಸನ್ವದ್ಭಾವೇತ್ವಾಭ್ಯಾಸದೀರ್ಘಾಃ । ನ ಮಾಙ್ಯೋಗ ಇತ್ಯಡಭಾವಃ । ಹೃಣಾನಸ್ಯ । ಹೃಣೀಙ್ ಲಜ್ಜಾಯಾಂ । ಅಸ್ಮಾಚ್ಛಾನಚಿ ಪೃಷೋದರಾದಿತ್ವಾದಭಿಮತರೂಪಸಿದ್ಧಿಃ ‖

॥ ಪ್ರತಿಪದಾರ್ಥ ॥

**(ವರುಣ**—ಎಲೈ ವರುಣನೇ) । **ಜಿಹೀಳಾನಸ್ಯ**—(ನಿನಗೆ) ಅನಾದರವನ್ನು ತೋರಿಸತಕ್ಕವನ । **ಹತ್ನವೇ**—ನಾಶಕನಾದ ನಿನ್ನ (ಕರ್ತೃಕವಾದ) । **ವಧಾಯ**—ನಾಶಕ್ಕೆ । **ನಃ**—ನಮ್ಮನ್ನು । **ಮಾ ರೀರಧಃ**—ವಿಷಯುಗಳನ್ನಾಗಿ ಮಾಡಬೇಡ । **ಹೃಣಾನಸ್ಯ**—ಕ್ರುದ್ಧನಾದ ನಿನ್ನ । **ಮನ್ಯವೇ**—ಕೋಪಕ್ಕೂ । **ಮಾ**—(ನಮ್ಮನ್ನು ವಿಷಯುಗಳನ್ನಾಗಿ) ಮಾಡಬೇಡ.

॥ ಭಾವಾರ್ಥ ॥

ಎಲೈ ವರುಣದೇವನೇ, ನಿನಗೆ ಅನಾದರವನ್ನು ತೋರಿಸುವವರನ್ನು ನೀನು ಖಂಡಿತ ನಾಶಮಾಡತಕ್ಕವನು. ಆದರೆ ನಮ್ಮನ್ನು ಆ ನಾಶಕ್ಕೆ ವಿಷಯರನ್ನಾಗಿ ಮಾಡಬೇಡ. ಕ್ರುದ್ಧನಾದ ನಿನ್ನ ಕ್ರೂರವಾದ ಕೋಪಕ್ಕೂ ಪಾತ್ರರನ್ನಾಗಿ ಮಾಡಬೇಡ.

## English Translation.

Make us not the objects of death through your wrath, though your wrath is directed towards a person who neglects (to worship) you.

॥ ವಿಶೇಷವಿಷಯಗಳು ॥

**ವಧಾಯ ಹತ್ನವೇ**—ಪಾಪಿಗಳನ್ನು ಶಿಕ್ಷೆಮಾಡುವುದಕ್ಕೆ ಅವರನ್ನು ನೀನು ಕೊಲ್ಲುವಕಾರ್ಯಕ್ಕೆ (ನಮ್ಮನ್ನು ಈಡುಮಾಡಬೇಡ) ಈ ಎರಡು ಶಬ್ದಗಳೂ ಒಂದೇ ಅರ್ಥವನ್ನು ಸೂಚಿಸುವವು. ಆದರೂ ಪಾಪಿಗಳನ್ನು ಅಥವಾ ದುಷ್ಟರನ್ನು ಸಂಹಾರಮಾಡಲುದ್ಯುಕ್ತನಾದ ನಿನ್ನ ಶಿಕ್ಷಾರೂಪವಾದ ವಧ (ಸಂಹಾರ) ಕರ್ಮಕ್ಕೆ ಎಂದು ಈ ಶಬ್ದಗಳ ಅಭಿಪ್ರಾಯವು.

**ಜಿಹೀಳಾನಸ್ಯ**—**ಅನಾದರಂ ಕೃತವತಃ** । ನಿನ್ನನ್ನು ಅಲಕ್ಷ್ಯಮಾಡಿದವನ (ವಧಾಯ).

**ಹೃಣಾನಸ್ಯ**—**ಹೃಣೀಯಮಾನಸ್ಯ ಕ್ರುದ್ಧಸ್ಯ ರುಷ್ಟಸ್ಯ** । ಕೋಪವುಳ್ಳ ನಿನ್ನ.

**ಮುಖ್ಯಾಭಿಪ್ರಾಯವು**—ಎಲೈ ವರುಣನೇ ನಿನ್ನ ವಿಷಯದಲ್ಲಿ ತಿರಸ್ಕಾರಬುದ್ಧಿಯಿಂದ ವರ್ತಿಸುವ ದುಷ್ಟಜನರನ್ನು ನೀನು ಸಂಹಾರಮಾಡುವೆಯಷ್ಟೆ. ದುಷ್ಟರನ್ನು ಸಂಹಾರಮಾಡುವ ಕಾಲದಲ್ಲಿ ನೀನು ಕೋಪಯುಕ್ತನಾಗಿರುವೆ. ಅಂತಹ ಕೋಪಕ್ಕೆ ನಮ್ಮನ್ನು ಈಡುಮಾಡಬೇಡ. ನಿನ್ನ ಕೋಪಕ್ಕೆ ನಾವು ಪಾತ್ರರಾಗದಂತೆ ಅನುಗ್ರಹಿಸು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ವಧಾಯ**—ಹನ ಹಿಂಸಾಗತ್ಯೋಃ ಧಾತು. ಅದಾದಿ. '**ಹನಶ್ಚ ವಧಃ**' (ಪಾ. ಸೂ. ೩-೩-೭೬) ಅನುಪಸರ್ಗದ ಪರದಲ್ಲಿರುವ ಹನ್ ಧಾತುವಿಗೆ ಭಾವಾರ್ಥದಲ್ಲಿ ಅಪ್ ಪ್ರತ್ಯಯ ಬರುತ್ತದೆ. ಇದರೊಡನೆ ಪ್ರಕೃತಿಗೆ ವಧಾದೇಶವು ಬರುತ್ತದೆ. ಚತುರ್ಥೀ ಏಕವಚನದಲ್ಲಿ ವಧಾಯ ಎಂದು ರೂಪವಾಗುತ್ತದೆ. '**ಉಂಛಾದೀನಾಂ ಚ**'

(ಪಾ. ಸೂ. ೬-೧-೧೬೦) ಎಂಬುದರಿಂದ ಉಂಛಾದಿಯಲ್ಲಿ ಇದನ್ನು ಪಾಠಮಾಡಿರುವುದರಿಂದ ಅಂತೋದಾತ್ತಸ್ವರವು ಬರುತ್ತದೆ. ವಧಾಯ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ.

**ಹತ್ನವೇ**—ಪೂರ್ವೋಕ್ತವಾದ ಧಾತುವಿಗೆ **' ಕುಹನಿಭ್ಯಾಂಕ್ನುಃ '** (ಉ. ಸೂ. ೩-೩೧೦) ಎಂಬುದರಿಂದ ಕ್ನು ಪ್ರತ್ಯಯು ಬರುತ್ತದೆ. ಅದರೊಡನೆ ಧಾತುವಿನ ನಕಾರಕ್ಕೆ ತಕಾರಾದೇಶವು ಬರುತ್ತದೆ. ಹತ್ನು ಎಂದು ರೂಪ ವಾಗುತ್ತದೆ ಚತುರ್ಥೀ ಏಕವಚನದ ರೂಪ. ವಿಭಕ್ತಿಯು ಅನುದಾತ್ತವಾದುದರಿಂದ ಪ್ರತ್ಯಯಸ್ವರವು ಬರುತ್ತದೆ.

**ಜಿಹೀಳಾನಸ್ಯ**—ಹೇಡೃ ಅನಾದರೆ ಧಾತು. ಭ್ವಾದಿ. **' ಛಂದಸಿ ಲಿಟ್ '** (ಪಾ. ಸೂ. ೩-೨-೧೦೫) ಎಂದು ಅನುವೃತ್ತವಾಗುವಾಗ **' ಲಿಟಃ ಕಾನಜ್ವಾ'** (ಪಾ ಸೂ. ೩-೨-೧೦೬) ಎಂಬುದರಿಂದ ಲಿಟಿಗೆ ಕಾನಚ್ ಆದೇಶ ಬರುತ್ತದೆ. ಕಾನಚ್ ಪರದಲ್ಲಿರುವಾಗ ಧಾತುವಿಗೆ ದ್ವಿತ್ವ ಬರುತ್ತದೆ ಹೇಡ್ ಹೇಡ್+ಆನ ಎಂದಿರುವಾಗ ಅಭ್ಯಾಸಕ್ಕೆ ಹಲಾದಿಶೇಷ, ಹ್ರಸ್ವ. ಚುತ್ವ, ಜಸ್ತ್ವಕಾರ್ಯಗಳು ಬರುತ್ತವೆ. ಧಾತುವಿನ ಏಕಾರಕ್ಕೆ ಛಾಂದಸವಾದ ಈಕಾರವು ಆದೇಶವಾಗಿ ಬರುತ್ತದೆ. ಜಿಹೀಳಾನ ಎಂದು ರೂಪವಾಗುತ್ತದೆ. ಪ್ರತ್ಯಯವು ಚಿತ್ತಾದುದರಿಂದ **' ಚಿತಃ '** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರವು ಬರುತ್ತದೆ. ಷಷ್ಠೀ ಏಕವಚನದಲ್ಲಿ ಜಿಹೀಳಾನಸ್ಯ ಎಂದು ರೂಪವಾಗುತ್ತದೆ.

**ರೀರಧಃ**—ರಾಧ ಸಾಧ ಸಂಸಿದ್ಧೌ ಧಾತು. ಸ್ವಾದಿ. ಪ್ರೇರಣಾರ್ಥದಲ್ಲಿ ಣಿಚ್ ಬರುತ್ತದೆ. ಣಿಜಂತದ ಮೇಲೆ ಲುಙ್ ಬರುತ್ತದೆ. **' ಣಿಶ್ರಿದ್ರು-'** (ಪಾ. ಸೂ. ೩-೧-೪೮) ಸೂತ್ರದಿಂದ ಚ್ಲಿ ವಿಕರಣಕ್ಕೆ ಚಙ್ ಬರುತ್ತದೆ. **'ಣೌಚಙ್ಯು-'** (ಪಾ. ಸೂ. ೭-೪-೧) ಸೂತ್ರದಿಂದ ಚಙ್ ಪರಕವಾದ ಣಿ ಪರದಲ್ಲಿರುವುದರಿಂದ ಧಾತುವಿನ ಉಪಧೆಗೆ ಹ್ರಸ್ವ ಬರುತ್ತದೆ. **' ಚಙಿ '** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಹಲಾದಿಶೇಷ ಹ್ರಸ್ವಗಳು ಅಭ್ಯಾಸಕ್ಕೆ ಬಂದರೆ ಲುಙಿನ ಮಧ್ಯಮಪುರುಷ ಏಕವಚನದಲ್ಲಿ ರರಧ್+ಇ+ಅ+ಸ್ ಎಂದಿರುತ್ತದೆ. **' ಣೇರನಿಟಿ '** (ಪಾ. ಸೂ. ೬-೪-೫೧) ಸೂತ್ರದಿಂದ ಣಿಗೆ ಲೋಪ ಬರುತ್ತದೆ. **' ಸನ್ವಲ್ಲಘುನಿ-'** (ಪಾ. ಸೂ. ೭-೪-೯೩) ಸೂತ್ರದಿಂದ ಸನ್ವದ್ಭಾವವು ಬರುವುದರಿಂದ **' ಸನ್ಯತಃ '** (ಪಾ. ಸೂ. ೭-೪-೭೯) ಸೂತ್ರದಿಂದ ಅಭ್ಯಾಸದ ಅಕಾರಕ್ಕೆ ಇತ್ವವು ಬರುತ್ತದೆ. ಅದಕ್ಕೆ **' ದೀರ್ಘೋಲಘೋಃ '** (ಪಾ. ಸೂ. ೭-೪-೯೪) ಎಂಬುದರಿಂದ ದೀರ್ಘವು ಬರುತ್ತದೆ. **' ನಾಮಾಙ್ಯೋಗೇ '** (ಪಾ. ಸೂ. ೬-೪-೭೪) ಎಂಬುದರಿಂದ ಮಾಙ್ ಸಂಬಂಧವಿರುವುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಪ್ರತ್ಯಯಕ್ಕೆ ರುತ್ವವಿಸರ್ಗಗಳು ಬಂದರೆ ರೀರಧಃ ಎಂದು ರೂಪವಾಗುತ್ತದೆ.

**ಹೃಣಾನಸ್ಯ**—ಹೃಣೀಙ್ ರೋಷಣೇ ಲಜ್ಜಾಯಾಂ ಚ, ಧಾತು. ಕಂಡ್ವಾದಿ. ಇದಕ್ಕೆ ಲಡರ್ಥದಲ್ಲಿ ಚಾನಚ್ ಪ್ರತ್ಯಯ ಬರುತ್ತದೆ. **' ಪೃಷೋದರಾದೀನಿ ಯಥೋಪದಿಷ್ಟಮ್ '** (ಪಾ. ಸೂ. ೬-೩-೧೦೯) ಎಂಬುದರಿಂದ ಇದು ಪೃಷೋದರಾದಿಯಲ್ಲಿ ಪಠಿತವಾದುದರಿಂದ ವರ್ಣಲೋಪದಿಂದ ಹೃಣಾನ ಎಂದು ರೂಪವಾಗುತ್ತದೆ. ಆದುದ ರಿಂದಲೇ ಸ್ವಾರ್ಥಿಕವಾದ ಯಕ್ ಪ್ರತ್ಯಯವೂ ಬರುವುದಿಲ್ಲ. ಷಷ್ಠೀ ಏಕವಚನದ ರೂಪ. ಚಿತ್ತಾದುದರಿಂದ ಅಂತೋ ದಾತ್ತಸ್ವರವನ್ನು ಹೊಂದುವುದರಿಂದ ನಕಾರಾಕಾರವು ಉದಾತ್ತವಾಗುತ್ತದೆ. ॥ ೨ ॥

॥ ಸಂಹಿತಾಪಾಠಃ ॥

ವಿ ಮೃಳೀಕಾಯ ತೇ ಮನೋ ರಥೀರಶ್ವಂ ನ ಸಂದಿತಂ।
ಗೀರ್ಭಿರ್ವರುಣ ಸೀಮಹಿ ॥ ೩ ॥

॥ ಪದಪಾಠಃ ॥

ವಿ । ಮೃಳೀಕಾಯ । ತೇ । ಮನಃ । ರಥೀಃ । ಅಶ್ವಂ । ನ । ಸಂऽದಿತಂ ।
ಗೀಃऽಭಿಃ । ವರುಣ । ಸೀಮಹಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ವರುಣ ಮೃಳೀಕಾಯಾಸ್ಮತ್ಸುಖಾಯ ತೇ ತವ ಗೀರ್ಭಿಃ ಸ್ತುತಿಭಿರ್ವಿ ಸೀಮಹಿ । ವಿಶೇಷೇಣ ಬಧ್ನೀಮಃ । ಪ್ರಸಾದಯಾಮ ಇತ್ಯರ್ಥಃ । ತತ್ರ ದೃಷ್ಟಾಂತಃ । ರಥೀಃ ರಥಸ್ವಾಮೀ ಸಂದಿತಂ ಸಮ್ಯಕ್ ಖಂಡಿತಂ ದೂರಗಮನೇನ ಶ್ರಾಂತಮಶ್ವಂ ನ ಅಶ್ವಮಿವ । ಯಥಾ ಸ್ವಾಮೀ ಶ್ರಾಂತಮಶ್ವಂ ಘಾಸಪ್ರದಾನಾದಿನಾ ಪ್ರಸಾದಯತಿ ತದ್ವತ್ ॥ ರಥೀಃ । ಮತ್ವರ್ಥೀಯ ಈಕಾರಃ । ಸಂದಿತಂ । ದೋ ಅವಖಂಡನೇ । ನಿಷ್ಠೇತಿ ಕ್ತಃ । ದ್ಯತಿಸ್ಯತಿಮಾಸ್ಥಾಂ । ಪಾ. ೭-೪-೪೦ । ಇತೀಕಾರಾಂತಾದೇಶಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಗೀರ್ಭಿಃ । ಸಾವೇಕಾಚ ಇತಿ ಭಿಸ ಉದಾತ್ತತ್ವಂ । ಸೀಮಹಿ । ಷಿವು ತಂತುಸಂತಾನೇ । ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ವಲಿ ಲೋಪಃ । ಪಾ. ೬-೧-೬೬ । ಯದ್ವಾ । ಷಿಞ್ ಬಂಧನ ಇತ್ಯಸ್ಮಾದ್ವಿಕರಣಸ್ಯ ಲುಕ್ । ದೀರ್ಘಶ್ಛಾಂದಸಃ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ರಥೀಃ**—ರಥದ ಯಜಮಾನನು (ಸಾರಥಿಯು) । **ಸಂದಿತಂ**—(ದೂರ ಪ್ರಯಾಣದಿಂದ) ಬಳಲಿದ । **ಅಶ್ವಂ ನ**—ಕುದುರೆಯನ್ನು (ಹುಲ್ಲುಹಾಕಿ ನೀರುಕುಡಿಸುವುದೇ ಮೊದಲಾದವುಗಳಿಂದ) ಸಮಾಧಾನ ಪಡಿಸುವಂತೆ (ನಾವೂ ಸಹ) । **ಮೃಳೀಕಾಯ**—ನಮ್ಮ ಸುಖಕ್ಕಾಗಿ । **ತೇ**—ನಿನ್ನ । **ಮನಃ**—ಮನಸ್ಸನ್ನು । **ಗೀರ್ಭಿಃ**—ಸ್ತುತಿವಾಕ್ಯಗಳಿಂದ । **ವಿ ಸೀಮಹಿ**—ಸಂತೈಸುತ್ತೇವೆ.

॥ ಭಾವಾರ್ಥ ॥

ಎಲೈ ವರುಣನೇ, ಸಾರಥಿಯು ಬಳಲಿದ ತನ್ನ ಕುದುರೆಗೆ ನೀರುಕುಡಿಸಿ ಹುಲ್ಲುಹಾಕಿ ಸಮಾಧಾನಪಡಿಸುವಂತೆ ನಾವೂ ಸಹ ನಮ್ಮ ಸುಖಕ್ಕಾಗಿ ನಿನ್ನ ಮನಸ್ಸನ್ನು ನಮ್ಮ ಸ್ತುತಿವಾಕ್ಯಗಳಿಂದ ಸಂತೈಸುತ್ತೇವೆ.

## English Translation.

O Varuna, We soothe your mind by our praises for our good as a charioteer soothes (or unties) his weary horse.

॥ ವಿಶೇಷವಿಷಯಗಳು ॥

**ಮೃಳೀಕಾಯ**—ಸುಖಕ್ಕಾಗಿ.

**ರಥೀಃ ಅಶ್ವಂ ನ ಸಂದಿತಂ**—ರಥದ ಸಾರಥಿಯು ಬಳಲಿ ಬಂದ ತನ್ನ ಕುದುರೆಯನ್ನು ಹಸ್ತದಿಂದ ಮೆಲ್ಲನೆ ತಟ್ಟಿ ಸಮಾಧಾನಮಾಡುವಂತೆ ನಾವು ವರುಣನನ್ನು ಸ್ತೋತ್ರರೂಪವಾದ ವಾಕ್ಯಗಳಿಂದ ಸಂತೈಸುತ್ತೇವೆ ಎಂದರೆ ಸಂತೋಷಪಡಿಸುತ್ತೇವೆ ಎಂದಭಿಪ್ರಾಯವು.

**ಸಂದಿತಂ-ದೋ ಅವಖಂಡನೇ । ಸಮ್ಯಕ್ ಖಂಡಿತಂ ದೂರಗಮನೇನ ಶ್ರಾಂತಂ** । ದೂರಪ್ರಯಾಣ ದಿಂದ ಬಹಳವಾಗಿ ಆಯಾಸಗೊಂಡ, ಬಳಲಿದ ಇತ್ಯಾದಿ.

॥ ವ್ಯಾಕರಣಪ್ರಕ್ರಿಯಾ ॥

**ರಥೀಃ**—ರಥ ಅಸ್ಯ ಅಸ್ತಿ ಇತಿ ರಥೀಃ. ಮತ್ವರ್ಥದಲ್ಲಿ ಈ ಪ್ರತ್ಯಯ ಬರುತ್ತದೆ. ಪ್ರಥಮೈಕವಚನದಲ್ಲಿ ರಥೀಃ ಎಂದು ರೂಪವಾಗುತ್ತದೆ.

**ಸಂದಿತಮ್**—ದೋ ಅವಖಂಡನೇ ಧಾತು. ದಿವಾದಿ. ಸಂ ಉಪಸರ್ಗ. '**ನಿಷ್ಠಾ**' (ಪಾ. ಸೂ. ೩-೨-೧೦೨) ಎಂಬುದರಿಂದ ಭೂತಾರ್ಥದಲ್ಲಿ ಕ್ತ ಪ್ರತ್ಯಯ ಬರುತ್ತದೆ. '**ದ್ಯತಿಸ್ಯತಿಮಾಸ್ಥಾಮಿತ್ತಿಕಿತಿ**' (ಪಾ. ಸೂ. ೭-೪-೪೦) ಈ ಧಾತುಗಳಿಗೆ ತಕಾರಾದಿಯಾದ ಕಿತ್ತಾದ ಪ್ರತ್ಯಯವು ಪರದಲ್ಲಿರುವಾಗ ಇತ್ವವು ಬರುತ್ತದೆ ಎಂಬುದರಿಂದ ಇಕಾರವು ಅಂತಾದೇಶವಾಗಿ ಬರುತ್ತದೆ. ಸಂದಿತ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನ ರೂಪ. '**ಗತಿರನಂತರಃ**' (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರವು ಬರುತ್ತದೆ. ಆದ್ಯುದಾತ್ತ ವಾದ ಪದವಾಗುತ್ತದೆ.

**ಗೀರ್ಭಿಃ**—ಗಿರ್ ಶಬ್ದಕ್ಕೆ ತೃತೀಯಾ ಬಹುವಚನ ಪರದಲ್ಲಿರುವಾಗ '**ರ್ವೋರುಪಧಾಯಾಃ**' ಸೂತ್ರ ದಿಂದ ಇಕ್ಕಿಗೆ ದೀರ್ಘಬಂದರೆ ಗೀರ್ಭಿಃ ಎಂದು ರೂಪವಾಗುತ್ತದೆ. '**ಸಾವೇಕಾಚಃ**' (ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚಿನ ಪರದಲ್ಲಿರುವುದರಿಂದ ಭಿಸಿಗೆ ಉದಾತ್ತಸ್ವರವು ಬರುತ್ತದೆ

**ಸೀಮಹಿ**—ಷಿವು ತಂತುಸಂತಾನೇ ಧಾತು ದಿವಾದಿ. ಧಾತ್ವಾದಿ ಷಕಾರಕ್ಕೆ ಸಕಾರಾದೇಶ ಬರುತ್ತದೆ. ಇದು ಪರಸ್ಮೈಪದಿ ಧಾತುವಾದರೂ ವ್ಯತ್ಯಯದಿಂದ ಆತ್ಮನೇಪದ ಪ್ರತ್ಯಯವನ್ನು ಹೊಂದುತ್ತದೆ. ಉತ್ತಮಪುರುಷ ಬಹುವಚನ ಪರದಲ್ಲಿರುವಾಗ '**ಬಹುಲಂ ಛಂದಸಿ**' ಎಂಬುದರಿಂದ ವಿಕರಣದ ಶ್ಯನ್ನಿಗೆ ಲುಕ್ ಬರುತ್ತದೆ. ವಾಂತ ವಾದುದರಿಂದ ಉಪಧಾದೀರ್ಘ ಬರುತ್ತದೆ. ವಕಾರಕ್ಕೆ '**ಲೋಪೋ ವ್ಯೋರ್ವಲಿ**' (ಪಾ. ಸೂ. ೬-೧-೬೬) ಎಂಬುದರಿಂದ ವಲ್‌ಪರದಲ್ಲಿರುವುದರಿಂದ ಲೋಪಬರುತ್ತದೆ. ಅಥವಾ ಷಿಞ್ ಬಂಧನೇ ಧಾತು ಉಭಯಪದಿ ಸ್ವಾದಿ '**ಬಹುಲಂ ಛಂದಸಿ**' ಎಂಬುದರಿಂದ ಶ್ನು ವಿಕರಕ್ಕೆ ಲುಕ್ ಬರುತ್ತದೆ. ಛಾಂದಸವಾಗಿ ದೀರ್ಘ ಬರುತ್ತದೆ ಸೀಮಹಿ ಎಂದು ರೂಪವಾಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ. ॥ ೩ ॥

॥ ಸಂಹಿತಾಪಾಠಃ ॥

ಪರಾ ಹಿ ಮೇ ವಿಮನ್ಯವಃ ಪತಂತಿ ವಸ್ಯಇಷ್ಟಯೇ ।
ವಯೋ ನ ವಸತೀರುಪ ॥ ೪ ॥

॥ ಪದಪಾಠಃ ॥

ಪರಾ । ಹಿ । ಮೇ । ವಿऽಮನ್ಯವಃ । ಪತಂತಿ । ವಸ್ಯಃऽಇಷ್ಟಯೇ ।
ವಯಃ । ನ । ವಸತೀಃ । ಉಪ ॥ ೪ ॥

॥ ಸಾಯಣಭಾಷ್ಯಂ ॥

ಹೇ ವರುಣ ಮೇ ಮಮ ಶುನಃಶೇಪಸ್ಯ ವಿಮನ್ಯವಃ ಕ್ರೋಧರಹಿತಾ ಬುದ್ಧಯೋ ವಸ್ಯಇಷ್ಟಯೇ ವಸೀಯಸೋಽತಿಶಯೇನ ವಸುಮತೋ ಜೀವನಸ್ಯ ಪ್ರಾಪ್ತಯೇ ಪರಾ ಪತಂತಿ । ಪರಾಙ್ಮುಖಾಃ ಪುನರಾವೃತ್ತಿರಹಿತಾಃ ಪ್ರಸರಂತಿ। ಹಿಶಬ್ದೋಽಸ್ಮಿನ್ನರ್ಥೇ ಸರ್ವಜನಪ್ರಸಿದ್ಧಿಮಾಹ । ಪರಾಪತನೇ ದೃಷ್ಟಾಂತಃ । ವಯೋ ನ । ಪಕ್ಷಿಣೋ ಯಥಾ ವಸತೀರ್ನಿವಾಸಸ್ಥಾನಾನ್ಯುಪ ಸಾಮೀಪ್ಯೇನ ಪ್ರಾಪ್ನುವಂತಿ ತದ್ವತ್ ॥ ಪತಂತಿ । ಪಾದಾದಿತ್ವಾನ್ನಿಘಾತಾಭಾವಃ ವಸ್ಯಇಷ್ಟಯೇ ವಸುಮಚ್ಛಬ್ದಾದ್ವಿನ್ಮತೋರ್ಲುಗಿತಿ ಮತುಪೋ ಲುಕಿ ಟಿಲೋಪೇ ಈಯಸುನೋ ಯಕಾರಲೋಪಶ್ಛಾಂದಸಃ । ವಸತೀಃ । ಶತುರನುಮ ಇತಿ ಙೀಪ ಉದಾತ್ತತ್ವಂ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಮೇ**—(ಶುನಃಶೇಪನಾದ) ನನ್ನ । **ವಿಮನ್ಯವಃ**—ಕ್ರೋಧರಹಿತ (ಪ್ರಶಾಂತ) ಗಳಾದ ಮನಶ್ಚಿಂತನೆಗಳು । **ವಸ್ಯ ಇಷ್ಟಯೇ ಹಿ**—ಬೆಲೆಬಾಳುವ ಜೀವನದ ಪ್ರಾಪ್ತಿಗಾಗಿಯೇ । **ವಸತೀಃ ಉಪ**—(ತಮ್ಮ ತಮ್ಮ) ಗೂಡುಗಳ ಸುತ್ತಲೂ । **ವಯೋ ನ**—ಪಕ್ಷಿಗಳು ಸುಳಿದಾಡುವಂತೆ । **ಪರಾ ಪತಂತಿ** (ಉತ್ಕಟೇಚ್ಛೆಯಿಂದ) ಅಲೆದಾಡುತ್ತಿವೆ ॥

॥ ಭಾವಾರ್ಥ ॥

ಎಲೈ ವರುಣನೇ, ಪಕ್ಷಿಗಳು ತಮ್ಮ ತಮ್ಮ ಗೂಡುಗಳ ಸುತ್ತಲೂ ಅಭಿಮಾನದಿಂದ ಸುಳಿದಾಡುವಂತೆ ನನ್ನ ಪ್ರಶಾಂತಗಳಾದ ಮನಶ್ಚಿಂತನೆಗಳೂ ಸಹ ಅತ್ಯಂತ ಬೆಲೆಬಾಳುವ ಜೀವನದ ಪ್ರಾಪ್ತಿಗಾಗಿಯೇ ಉತ್ಕಟವಾದ ಇಚ್ಛೆಯಿಂದ ಅಲೆದಾಡುತ್ತಿವೆ.

## English Translation.

My peaceful meditations revert to the desire of life as birds hover around their nests.

॥ ವಿಶೇಷವಿಷಯಗಳು ॥

**ಮೇ--ಮಮ ಶುನಃಶೇಪಸ್ಯ ।** ಶುನಶ್ಶೇಪನಾಮಕನಾದ ನನ್ನ.

**ವಿಮನ್ಯವಃ—**ಕ್ರೋಧರಹಿತವಾದ, peaceful thoughts ಕೆಟ್ಟ ಆಲೋಚನೆಗಳಿಂದ ದೂರವಾದ ಇತ್ಯಾದಿ.

**ವಸ್ಯ ಇಷ್ಟಯೇ—ಅತಿಶಯೇನ ವಸುಮತೋ ಜೀವನಸ್ಯ ಪ್ರಾಪ್ತಯೇ ।** ಧನಾದಿಗಳಿಂದ ಸಹಿತ ವಾದ ಉತ್ತಮ ಜೀವನಾರ್ಥವಾಗಿ ಈಗ ನಾನು ಯೂಪಬದ್ಧನಾಗಿ ಮರಣೋನ್ಮುಖನಾಗಿದ್ದರೂ ನನ್ನ ಆಸೆಗಳು ಭೂಮಿಯ ಮೇಲೆ ದೊರೆಯುವ ನಾನಾವಿಧ ಉಪಭೋಗಗಳಲ್ಲಿ ಪ್ರವರ್ತಿಸುತ್ತವೆ ಎಂದು ಶುನಶ್ಶೇಪನು ತನ್ನ ಮನಸ್ಸಿ ನಲ್ಲಿರುವ ಅಪೇಕ್ಷೆಯನ್ನು ವ್ಯಕ್ತಪಡಿಸುವನು.

**ವಯೋ ನ ವಸತೀರುಪ—**ಪಕ್ಷಿಗಳು ತಮ್ಮ ಪ್ರೀತಿಪಾತ್ರವಾದ ಗೂಡನ್ನು ಸಮೀಪಿಸಿದಾಗ ಸ್ವಲ್ಪಹೊತ್ತು ಸುತ್ತಲೂ ಹಾರಾಡಿ ಬಳಿಕ ಒಳಹೊಗುವಂತೆ ನನ್ನ ಮನಸ್ಸಿನ ವೃತ್ತಿಗಳು ಉಪಭೋಗಗಳ ಕಡೆಗೆ ಪ್ರವರ್ತಿಸುವುವು ಎಂದು ದೃಷ್ಟಾಂತಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಪತಂತಿ**--ಪತ್ಲೃ ಗತೌ ಧಾತು. ಭ್ವಾದಿ. ಪ್ರಥಮಪುರುಷ ಬಹುವಚನದಲ್ಲಿ ಪತಂತಿ ಎಂದು ರೂಪವಾಗು ತ್ತದೆ. ಅತಿಙಂತದ ಪರದಲ್ಲಿದ್ದರೂ **'-ಅಪಾದಾದೌ'** ಎಂದು ನಿಷೇಧಮಾಡಿರುವುದರಿಂದ ಇಲ್ಲಿ ಪಾದದ ಆದಿಯಲ್ಲಿ ಬಂದಿರುವುದರಿಂದ ಸರ್ವಾನುದಾತ್ತವು ಬರುವುದಿಲ್ಲ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ವಸ್ಯ ಇಷ್ಟಯೇ**—ವಸು ಶಬ್ದದ ಮೇಲೆ **'ತದಸ್ಯಾಸ್ತ್ಯ'** ಸೂತ್ರದಿಂದ ಮತುಪ್ ಪ್ರತ್ಯಯ ಬರುತ್ತದೆ. ಅತಿಶಯೇನ ವಸುಮತ್ ಎಂಬ ಅರ್ಥದಲ್ಲಿ **'ದ್ವಿವಚನ-'** (ಪಾ.ಸೂ. ೫-೩-೫೭) ಸೂತ್ರದಿಂದ ಈಯಸುನ್ ಪ್ರತ್ಯಯ ಬರುತ್ತದೆ. ವಸುಮತ್+ಈಯಸ್ ಎಂದಿರುವಾಗ **'ವಿನ್ಮತೋರ್ಲುಕ್'** (ಪಾ ಸೂ. ೫-೩-೬೫) ಎಂಬುದರಿಂದ ಈಯಸುನ್ ಪರದಲ್ಲಿರುವುದರಿಂದ ಮತುಪಿಗೆ ಲುಕ್ ಬರುತ್ತದೆ. ವಸು+ಈಯಸ್ ಎಂದು ಆಗುತ್ತದೆ. ಈಯಸುನಿನ ಯಕಾರಕ್ಕೆ ಛಾಂದಸವಾಗಿ ಲೋಪ ಬರುತ್ತದೆ. ಅಜಾದಿ ಪ್ರತ್ಯಯ ಪರದಲ್ಲಿರುವುದರಿಂದ ಟಿಲೋಪ ಬಂದರೆ ವಸ್ಯಸ್ ಎಂದು ರೂಪವಾಗುತ್ತದೆ. ವಸ್ಯಸಃ ಇಷ್ಟಿಃ ಎಂದು ಸಮಾಸಮಾಡಿದಾಗ ವಸ್ಯಇಷ್ಟಿಃ ಎಂದಾಗುತ್ತದೆ. ಚತುರ್ಥೀ ಏಕವಚನದಲ್ಲಿ ವಸ್ಯ ಇಷ್ಟಯೇ ಎಂದು ರೂಪವಾಗುತ್ತದೆ.

**ವಸತೀಃ**--ವಸ ನಿವಾಸೇ ಧಾತು. ಭ್ವಾದಿ ಲಡರ್ಥದಲ್ಲಿ ಶತೃಪ್ರತ್ಯಯ ಬರುತ್ತದೆ ವಸತ್ ಎಂದು ತಾಂತ ಶಬ್ದವಾಗುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ **'ಉಗಿತಶ್ಚ'** (ಪಾ. ಸೂ. ೪-೧-೬) ಸೂತ್ರದಿಂದ ಶತೃನಲ್ಲಿ ಋಕಾರ

ಇತ್ತ್ವಾದುದರಿಂದ ಜೀಪ್ ಬರುತ್ತದೆ. ದ್ವಿತೀಯಾ ಬಹುವಚನದಲ್ಲಿ ಶಸ್ ಪ್ರತ್ಯಯು ಬರುತ್ತದೆ. ವಸತೀ+ಅಸ್ ಎಂದಿರುವಾಗ ಪೂರ್ವಸವರ್ಣದೀರ್ಘ ಬಂದು ರುತ್ವವಿಸರ್ಗಗಳು ಬಂದರೆ ವಸತೀಃ ಎಂದು ರೂಪವಾಗುತ್ತದೆ. **'ಶತುರನುಮೋ ನದ್ಯಜಾದೀ'** (ಪಾ. ಸೂ. ೬-೧-೧೭೩) ಎಂಬುದರಿಂದ ಜೀಪ್ ಪಿತ್ತ್ವಾದುದರಿಂದ ಅನುದಾತ್ತ ಸ್ವರವು ಪ್ರಾಪ್ತವಾದರೆ ಉದಾತ್ತಸ್ವರವೇ ಬರುತ್ತದೆ. ವಸತೀಃ ಎಂಬುದರಿಂದ ಅಂತೋದಾತ್ತವಾದ ಪದವಾಗುತ್ತದೆ.

॥ ಸಂಹಿತಾಪಾಠಃ ॥

ಕದಾ ಕ್ಷತ್ರಶ್ರಿಯಂ ನರಮಾ ವರುಣಂ ಕರಾಮಹೇ ।
ಮೃಳೀಕಾಯೋರುಚಕ್ಷಸಂ ॥ ೫ ॥

॥ ಪದಪಾಠಃ ॥

ಕದಾ । ಕ್ಷತ್ರऽಶ್ರಿಯಂ । ನರಂ । ಆ । ವರುಣಂ । ಕರಾಮಹೇ ।
ಮೃಳೀಕಾಯ । ಉರುऽಚಕ್ಷಸಂ ॥ ೫ ॥

॥ ಸಾಯಣಭಾಷ್ಯಂ ॥

ಮೃಳೀಕಾಯಾಸ್ಮತ್ಸುಖಾಯ ವರುಣಂ ಕದಾ ಕಸ್ಮಿನ್ಕಾಲ ಆ ಕರಾಮಹೇ । ಅಸ್ಮಿನ್ಕರ್ಮಣ್ಯಾಗತಂ ಕರವಾಮ । ಕೀದೃಶಂ । ಕ್ಷತ್ರಶ್ರಿಯಂ । ಬಲಸೇವಿನಂ ನರಂ ನೇತಾರಂ ಉರುಚಕ್ಷಸಂ ಬಹೂನಾಂ ದ್ರಷ್ಟಾರಂ ॥ ಕ್ಷತ್ರಶ್ರಿಯಂ । ಕ್ಷತ್ರಾಣಿ ಶ್ರಯತೀತಿ ಕ್ಷತ್ರಶ್ರೀಃ । ಕ್ವಿಪ್ । ವಚೀತ್ಯಾದಿನಾ । ಪಾ. ೩-೨-೧೭೮-೨ । ಕ್ವಿಪ್ ದೀರ್ಘಶ್ಚ । ಕೃದುತ್ತರಪದಪ್ರಕೃತಿಸ್ವರತ್ವಂ । ನರಂ । ಋದೋರಬಿತ್ಯಬಂತ ಆದ್ಯುದಾತ್ತಃ । ಕರಾಮಹೇ । ಕರೋತೇರ್ವ್ಯತ್ಯಯೇನ ಶಪ್ । ಉರುಚಕ್ಷಸಂ । ಚಕ್ಷೇರ್ಬಹುಲಂ ಶಿಚ್ಚ । । ಉ. ೪-೨೩೨ । ಇತ್ಯಸುನ್ । ಶಿದ್ವದ್ಭಾವಾತ್ಖ್ಯಾಜಾದೇಶಾಭಾವಃ ॥೧೬॥

॥ ಪ್ರತಿಪದಾರ್ಥ ॥

**ಕ್ಷತ್ರಶ್ರಿಯಂ**—ಬಲದಿಂದ ಸೇವಿತನೂ, (ಕೂಡಿದವನೂ) । **ನರಂ**—ಮಾರ್ಗದರ್ಶಕನೂ । **ಉರುಚಕ್ಷಸಂ**—ಬಹು ಜನರನ್ನು ನೋಡುವವನೂ ಆದ । **ವರುಣಂ**—ವರುಣದೇವನನ್ನು । **ಮೃಳೀಕಾಯ**—(ನಮ್ಮ) ಸುಖಕ್ಕಾಗಿ । **ಕದಾ**—ಯಾವಾಗ । **ಆ ಕರಾಮಹೇ**—(ನಮ್ಮ ಈ ಯಜ್ಞಕರ್ಮದಲ್ಲಿ) ಬರಮಾಡೋಣ ?

|| ಭಾವಾರ್ಥ ||

ಬಲಶಾಲಿಯೂ ಸಕಲರ ಮಾರ್ಗದರ್ಶಕನೂ ಬಹು ಜನರನ್ನು ಗಮನಿಸುವವನೂ ಆದ ವರುಣದೇವನನ್ನು ನಾವು ನಮ್ಮ ಸುಖಸಂಪಾದನೆಗಾಗಿ ಯಾವಾಗ ಈ ಯಜ್ಞಕರ್ಮಕ್ಕೆ ಬರಮಾಡೋಣ ?

English Translation

When, for our happiness shall we bring Varuna, the mighty, the guide of men, and beholder of many ?

|| ವಿಶೇಷವಿಷಯಗಳು ||

**ಕ್ಷತ್ರಶ್ರಿಯಂ**—ಕ್ಷತ್ರವೆಂದರೆ ಶರೀರಬಲವೆಂದು ಭಾಷ್ಯಕಾರರು ೨೪ ನೇ ಸೂಕ್ತದ ೬ ನೆಯ ಋಕ್ಕಿನಲ್ಲಿ ವಿವರಿಸಿರುವರು. ಕ್ಷತ್ರಶ್ರಿಯಂ ಎಂದರೆ ಬಲಸಂಪತ್ತುಳ್ಳ, ಅಧಿಕಬಲವುಳ್ಳ ಎಂದರ್ಥವು.

**ಉರುಚಕ್ಷಸಂ—ಬಹೂನಾಂ ದ್ರಷ್ಟಾರಂ ।** ಬಹಳ ಜನರನ್ನು ನೋಡುವ ಎಂದರೆ ಬಹುಜನರಿಂದ ನೋಡಲ್ಪಡುವ ಅಥವಾ ಸ್ತುತಿಸಲ್ಪಡುವ ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ಕ್ಷತ್ರಶ್ರಿಯಮ್**—ಕ್ಷತ್ರಾಣಿ ಶ್ರಯತಿ ಇತಿ ಕ್ಷತ್ರಶ್ರೀಃ. **'ಕ್ವಿಬ್ವಚಿಪ್ರಚ್ಛಿಯಾಯು '** (ಪಾ. ೩-೨-೧೭೮-೩) ಎಂಬುದರಿಂದ ಉಪಪದವಿರುವಾಗ ಶ್ರಿಞ್ ಧಾತುವಿಗೆ ಕ್ವಿಪ್ ಪ್ರತ್ಯಯ ಬರುತ್ತದೆ. ತತ್ಸಂನಿಯೋಗದಿಂದ ದೀರ್ಘವೂ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ಕ್ಷತ್ರಶ್ರಿಯಂ ಎಂದು ರೂಪವಾಗುತ್ತದೆ. **'ಗತಿಕಾರಕೋಪಪದಾತ್ ಕೃತ್ '** (ಪಾ. ಸೂ. ೬-೨-೧೩೯) ಸೂತ್ರದಿಂದ ಕಾರಕವು ಉಪಪದವಾಗಿರುವುದರಿಂದ ಕೃದುತ್ತರಪದ ಪ್ರಕೃತಿ ಸ್ವರವು ಬರುತ್ತದೆ. ಶ್ರಿ ಎಂಬಲ್ಲಿರುವ ಇಕಾರವು ಉದಾತ್ತವಾಗುತ್ತದೆ

**ನರಮ್—**ಣೃ ನಯೇ ಧಾತು. ಕ್ರ್ಯಾದಿ. **'ಋದೋರಪ್ '** (ಪಾ. ಸೂ. ೩-೩-೫೭) ಋವರ್ಣಾಂತ, ಉವರ್ಣಾಂತ ಧಾತುಗಳ ಮೇಲೆ ಅಪ್ ಪ್ರತ್ಯಯ ಬರುತ್ತದೆ ಅ ಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. ಋಕಾರದ ಸ್ಥಾನದಲ್ಲಿ ಬರುವುದರಿಂದ ರ ಪರವಾಗಿ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ನರಂ ಎಂಬ ರೂಪವಾಗುತ್ತದೆ. ಅಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ **'ಧಾತೋಃ '** ಎಂಬುದರಿಂದ ಬಂದಿರುವ ಧಾತುವಿನ ಅಂತೋದಾತ್ತ ಸ್ವರವು ಸತಿಶಿಷ್ಟವಾಗುವುದರಿಂದ ನರಂ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

**ಕರಾಮಹೇ**—ಡುಕೃಞ್ ಕರಣೇ ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ ಬರುತ್ತದೆ. **' ಟಿತ ಆತ್ಮನೇ-'** (ಪಾ. ಸೂ. ೩-೪-೭೯) ಸೂತ್ರದಿಂದ ಅದಕ್ಕೆ ಏತ್ವ ಬರುತ್ತದೆ **' ತನಾದಿಕೃಞ್ಭ್ಯಃ ಉಃ '** (ಪಾ. ಸೂ. ೩-೧-೭೯) ಎಂಬುದರಿಂದ ಉ ವಿಕರಣವು ಪ್ರಾಪ್ತವಾದರೆ ವ್ಯತ್ಯಯದಿಂದ ಶಪ್ ಬರುತ್ತದೆ. ಶಪ್ ಪರದಲ್ಲಿರುವಾಗ ಧಾತುವಿಗೆ ಸಾರ್ವಧಾತುಕನಿಮಿತ್ತಕವಾದ ಗುಣ ಬರುತ್ತದೆ. ಕರ+ಮಹೇ ಎಂದಿರುವಾಗ **'ಅತೋದೀರ್ಘೋಯಞಿ '** (ಪಾ. ಸೂ. ೭-೩-೧೦೧) ಸೂತ್ರದಿಂದ ಅದಂತಾಂಗಕ್ಕೆ ದೀರ್ಘ ಬರುತ್ತದೆ. ಕರಾಮಹೇ ಎಂದು ರೂಪ ಆಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

**ಉರುಚಕ್ಷಸಮ್**— ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. **' ಚಕ್ಷೇರ್ಬಹುಲಂ ಶಿಚ್ಚ '** (ಉ. ಸೂ ೪-೬೭೨) ಎಂಬುದರಿಂದ ಅಸುನ್ ಪ್ರತ್ಯಯ ಬರುತ್ತದೆ. ಅದು ಶಿದ್ವದ್ಭಾವವನ್ನು ಹೊಂದುತ್ತದೆ. ಉರುಚಕ್ಷಸ್ ಎಂದು ಸಾಂತವಾದ ಪದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಉರುಚಕ್ಷಸಂ ಎಂದು ರೂಪವಾಗುತ್ತದೆ. ಪ್ರತ್ಯಯ ಶಿತ್ತಾದುದರಿಂದ **' ಚಕ್ಷಿಙಃ ಖ್ಯಾಞ್ '** (ಪಾ. ಸೂ. ೨-೪-೫೪) ಎಂಬುದರಿಂದ ಆರ್ಧಧಾತುಕನಿಮಿತ್ತಕ ವಾದ ಖ್ಯಾಞಾದೇಶವು ಬರುವುದಿಲ್ಲ. ನಿತ್ತಾದುದರಿಂದ ಚಕ್ಷಸಂ ಎಂಬಲ್ಲಿ ಆದ್ಯುದಾತ್ತಸ್ವರವು ಬರುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ತದಿತ್ಸಮಾನಮಾಶಾತೇ ವೇನಂತಾ ನ ಪ್ರ ಯುಚ್ಛತಃ ।
ಧೃತವ್ರತಾಯ ದಾಶುಷೇ ॥ ೬ ॥

॥ ಪದಪಾಠಃ ॥

ತತ್ । ಇತ್ । ಸಮಾನಂ । ಆಶಾತೇ ಇತಿ । ವೇನಂತಾ । ನ । ಪ್ರ । ಯುಚ್ಛತಃ ।
ಧೃತಽವ್ರತಾಯ । ದಾಶುಷೇ ॥ ೬ ॥

॥ ಸಾಯಣಭಾಷ್ಯಂ ॥

**ಧೃತವ್ರತಾಯಾನುಷ್ಠಿತಕರ್ಮಣೇ ದಾಶುಷೇ ಹವಿರ್ದತ್ತವತೇ ಯಜಮಾನಾಯ ವೇನಂತೌ ಕಾಮಯಮಾನೌ ಮಿತ್ರಾವರುಣಾವಿತಿ ಶೇಷಃ । ತಾವುಭೌ ಸಮಾನಂ ಸಾಧಾರಣಂ ತದಿದಮಸ್ಮಾಭಿರ್ದತ್ತಂ ತದೇವ ಹವಿರಾಶಾತೇ । ಅಶ್ನುವಾತೇ। ನ ಪ್ರ ಯುಚ್ಛತಃ । ಕದಾಚಿದಪಿ ಪ್ರಮಾದಂ ನ ಕುರುತಃ ॥ ಆಶಾತೇ। ಅಶ್ನೋತೇರ್ಲಿಟಿ ದ್ವಿರ್ಭಾವಹಲಾದಿಶೇಷೌ । ಅತ ಆದೇಃ । ಪಾ. ೭.೪.೭೦ । ಇತ್ಯಾತ್ವಂ । ಅನಿತ್ಯಮಾಗ ಮಶಾಸನಮಿತಿ ವಚನಾದಶ್ನೋತೇಶ್ಚ । ಪಾ. ೭. ೪. ೭೨ । ಇತಿ ನುಡಭಾವಃ । ವೇನಂತಾ । ವೇನತಿಃ ಕಾಂತಿ-ಕರ್ಮಾ । ಸುಪಾಂ ಸುಲುಗಿತ್ಯಾಕಾರಃ । ಪ್ರ ಯುಚ್ಛತಃ । ಯುಚ್ಛ ಪ್ರಮಾದೇ । ದಾಶುಷೇ । ದಾಶೃ ದಾನ ಇತ್ಯಸ್ಮಾದ್ದಾಶ್ವಾನ್ ಸಾಹ್ವಾನಿತಿ ಕ್ವಸುಪ್ರತ್ಯಯೋ ನಿಪಾತಿತಃ । ವಸೋಃ ಸಂಪ್ರಸಾರಣಮಿತಿ ಸಂಪ್ರ ಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ ॥**

॥ ಪ್ರತಿಪದಾರ್ಥ ॥

**ಧೃತವ್ರತಾಯ**— ಯಜ್ಞಕರ್ಮವನ್ನು ಆಚರಿಸುವವನೂ । **ದಾಶುಷೇ**— ಹವಿಸ್ಸನ್ನು ಅರ್ಪಿಸುವವನೂ ಆದ ಯಜಮಾನನಿಗೆ । **ವೇನಂತಾ**— ಪ್ರಸನ್ನರಾದ ಮಿತ್ರಾವರುಣರಿಬ್ಬರೂ । **ಸಮಾನಂ**— (ಅವರಿಬ್ಬರಿಗೂ) ಸಾಧಾರಣವಾದ । **ತದಿತ್**— (ನಮ್ಮಿಂದ ಅರ್ಪಿತವಾದ) ಅದೇ ಹವಿಸ್ಸನ್ನು । **ಆಶಾತೇ**— ಸೇವಿಸುತ್ತಾರೆ **ನ ಪ್ರಯುಚ್ಛತಃ**— (ಯಾವಾಗಲೂ) ಕೆಡಕನ್ನುಂಟುಮಾಡುವುದಿಲ್ಲ.

॥ ಭಾವಾರ್ಥ ॥

ಯಜ್ಞವನ್ನು ಆಚರಿಸುವವನೂ ಮತ್ತು ಹವಿಸ್ಸನ್ನು ಅರ್ಪಿಸುವವನೂ ಆದ ಯಜಮಾನನಿಗೆ ಮಿತ್ರಾವರುಣರಿಬ್ಬರೂ ಯಾವಾಗಲೂ ಪ್ರಸನ್ನರಾಗಿ ಅವರಿಬ್ಬರಿಗೂ ಸಮಷ್ಟಿಯಲ್ಲಿ ಅರ್ಪಿಸಿದ ಹವಿಸ್ಸನ್ನು ಇಬ್ಬರೂ ಒಟ್ಟಿಗೆ ಸೇವಿಸುತ್ತಾರೆ. ಮತ್ತು ಯಜ್ಞಕರ್ತನಿಗೆ ಯಾವಾಗಲೂ ಕೆಡಕನ್ನುಂಟುಮಾಡುವುದಿಲ್ಲ.

## English Translation.

(Mitra and Varuna,) partake of the common oblation ; this offering is propitious to the giver and celebrator of this sacrifice.

॥ ವಿಶೇಷವಿಷಯಗಳು ॥

**ಸಮಾನಂ**— ಮಿತ್ರಾವರುಣರಿಬ್ಬರಿಗೂ ಸಮಾನವಾದ ಎಂದರೆ ಇಬ್ಬರನ್ನೂ ಒಟ್ಟಿಗೆ ಉದ್ದೇಶಿಸಿ ಸಮರ್ಪಿಸುವ, ಪ್ರತ್ಯೇಕವಲ್ಲದ ಎಂದರ್ಥವು.

**ವೇನಂತಾ— ಕಾಮಯಮಾನೌ ।** ಹವಿಸ್ಸನ್ನು ಅಪೇಕ್ಷಿಸುವ ಮಿತ್ರಾವರುಣರು.

**ನ ಪ್ರ ಯುಚ್ಛತಃ— ಯುಚ್ಛ ಪ್ರಮಾದೇ । ಕದಾಚಿದಪಿ ನ ಪ್ರಮಾದಂ ಕುರ್ವತಃ ।** ಯಾವಾಗಲೂ ಪ್ರಮಾದವನ್ನು (ತಪ್ಪನ್ನು) ಮಾಡುವುದಿಲ್ಲ.

**ಧೃತವ್ರತಾಯ— ಅನುಷ್ಠಿತಕರ್ಮಣೇ ।** ಯಜ್ಞಾದ್ಯನುಷ್ಠಾನಗಳನ್ನು ಮಾಡಿರುವ, ಮಿತ್ರಾವರುಣರನ್ನು ಯಜ್ಞಾದಿಗಳಿಂದ ಆರಾಧಿಸುವ.

**ದಾಶುಷೇ— ಹವಿರ್ದತ್ತವತೇ ಯಜಮಾನಾಯ ।** ಹವಿಃಪ್ರದಾನವನ್ನು ಮಾಡುವ ಯಜಮಾನನಿಗೆ.

ಈ ಋಕ್ಕಿಗೆ ಈ ವಿಧವಾದ ಅರ್ಥವಿವರಣೆಯನ್ನು ಸ್ಕಂದಸ್ವಾಮಿಯು ಮಾಡಿರುವುದಲ್ಲದೆ **ಧೃತವ್ರತಾಯ, ದಾಶುಷೇ** ಎಂಬ ಶಬ್ದಗಳಿಗೆ ಬೇರೆ ಅರ್ಥವಿವರಣೆಯನ್ನೂ ಮಾಡಿರುವರು. ಧೃತವ್ರತಶಬ್ದಕ್ಕೆ **ಸ್ವಕರ್ಮಣಾಮಪರಿತ್ಯಕ್ತತ್ವಾತ್ ಧೃತವ್ರತೋ ವರುಣಃ**— ತನ್ನ ಸ್ವಕರ್ಮವಾದ ಯಜಮಾನರಕ್ಷಣಾದಿಗಳನ್ನು ಬಿಡದೇ ಮಾಡುವವನೂ, **ದಾಶುಷೇ**— ಯಜಮಾನನ ಇಷ್ಟಾರ್ಥಗಳನ್ನು ಕೊಡುವವನೂ ಆದ ವರುಣನಿಗೆ ಎಂದು ಅರ್ಥಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಆಶಾತೇ**—ಅಶ ಭೋಜನೇ ಧಾತು. ಕ್ರ್ಯಾದಿ. ಲಿಟ್ ಪ್ರಥಮಪುರುಷ ದ್ವಿವಚನದಲ್ಲಿ ಆತಾಂ ಪ್ರತ್ಯಯ ಬರುತ್ತದೆ. **‘ಟಿತಆತ್ಮ–’** (ಪಾ. ಸೂ. ೩–೪–೭೯) ಸೂತ್ರದಿಂದ ಏತ್ವ ಬರುತ್ತದೆ ಧಾತುವಿಗೆ ದ್ವಿತ್ವ ಬಂದು ಹಲಾದಿ ಶೇಷ ಬಂದರೆ ಅಶ್+ಆತೆ ಎಂದಿರುತ್ತದೆ **‘ಅತ ಆದೇಃ’** (ಪಾ. ಸೂ. ೭–೪–೭೦) ಅಭ್ಯಾಸದ ಆದಿಯ ಅಕಾರಕ್ಕೆ ದೀರ್ಘ ಬರುತ್ತದೆ ಎಂಬುದರಿಂದ ಪರರೂಪವು ಬಾಧಿತವಾಗಿ ದೀರ್ಘ ಬರುತ್ತದೆ. ಸವರ್ಣದೀರ್ಘ ಬಂದರೆ ಆಶಾತೇ ಎಂದು ರೂಪವಾಗುತ್ತದೆ. **‘ಆಗಮಶಾಸ್ತ್ರಮನಿತ್ಯಂ’** (ಪರಿಭಾ. ೯೫) ಎಂದು ವಚನವಿರುವುದರಿಂದ ಇಲ್ಲಿ **‘ಅಶ್ನೋತೇಶ್ಚ’** (ಪಾ. ಸೂ. ೭–೪–೭೨) ಎಂಬುದರಿಂದ ನುಡಾಗಮವು ಬರುವುದಿಲ್ಲ.

**ವೇನಂತಾ**—ವೇನೃ ಗತಿಜ್ಞಾನಚಿಂತಾನಿಶಾಮನವಾದಿತ್ರಗ್ರಹಣೇಷು ಧಾತು. ಭ್ವಾದಿ. ಇಲ್ಲಿ ಕಾಂತಿ ಕರ್ಮ (ಕಾಂತಿ=ಇಚ್ಛಾ) ಕವಾಗಿ ಸ್ವೀಕರಿಸಬೇಕು. ಶತೃಪ್ರತ್ಯಯ ಬರುತ್ತದೆ ಪ್ರಥಮಾ ದ್ವಿವಚನದಲ್ಲಿ ಔ ಪ್ರತ್ಯಯವು ಪ್ರಾಪ್ತವಾದರೆ ಅದಕ್ಕೆ **‘ಸುಪಾಂ ಸುಲುಕ್’** (ಪಾ. ಸೂ. ೭–೧–೩೯) ಎಂಬುದರಿಂದ ಆಕಾರವು ಆದೇಶವಾಗಿ ಬರುತ್ತದೆ. ಉಗಿತ್ತಾದುದರಿಂದ ನುಮಾಗಮ ಬರುತ್ತದೆ. ವೇನಂತಾ ಎಂದು ರೂಪವಾಗುತ್ತದೆ.

**ಪ್ರ ಯುಚ್ಛತಃ**––ಯುಚ್ಛ ಪ್ರಮಾದೇ ಧಾತು. ಭ್ವಾದಿ. ಪ್ರಥಮಪುರುಷದ್ವಿವಚನದ ರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ದಾಶುಷೇ**—ದಾಶೃ ದಾನೇ ಧಾತು ಭ್ವಾದಿ. **‘ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ’** (ಪಾ. ಸೂ. ೬–೧–೧೨) ಎಂಬುದರಿಂದ ಕ್ವಸು ಪ್ರತ್ಯಯವು ನಿಪಾತಿತವಾಗಿದೆ. ದಾಶ್ವಸ್ ಎಂದು ಸಕಾರಾಂತವಾದ ಪದವಾಗುತ್ತದೆ. ಚತುರ್ಥೀ ಏಕವಚನ ಪರದಲ್ಲಿರುವಾಗ ಭಸಂಜ್ಞೆಯು ಇರುವುದರಿಂದ **‘ವಸೋಃ ಸಂಪ್ರಸಾರಣಂ’** (ಪಾ. ಸೂ. ೬–೪–೧೩೧) ಎಂಬುದರಿಂದ ಭಸಂಜ್ಞೆಯುಳ್ಳ ಅಂಗಕ್ಕೆ ಸಂಪ್ರಸಾರಣವು ಬರುತ್ತದೆ. ಪರದ ಅಚ್ಚಿಗೆ ಪೂರ್ವರೂಪ ಬಂದರೆ ದಾಶುಸ್+ಎ ಎಂದಾಗುತ್ತದೆ. **‘ಶಾಸಿವಸಿಘಸೀನಾಂ ಚ’** (ಪಾ. ಸೂ. ೮–೩–೬೦) ಎಂಬುದರಿಂದ ಸಕಾರಕ್ಕೆ ಷತ್ವ ಬರುತ್ತದೆ ದಾಶುಷೇ ಎಂದು ರೂಪವಾಗುತ್ತದೆ. ॥ ೬ ॥

॥ ಸಂಹಿತಾಪಾಠಃ ॥

ವೇದಾ ಯೋ ವೀನಾಂ ಪದಮಂತರಿಕ್ಷೇಣ ಪತತಾಂ ।

ವೇದ ನಾವಃ ಸಮುದ್ರಿಯಃ ॥ ೭ ॥

॥ ಪದಪಾಠಃ ॥

ವೇದ । ಯಃ । ವೀನಾಂ । ಪದಂ । ಅನ್ತರಿಕ್ಷೇಣ । ಪತತಾಂ ।
ವೇದ । ನಾವಃ । ಸಮುದ್ರಿಯಃ ॥ ೭ ॥

॥ ಸಾಯಣಭಾಷ್ಯಂ ॥

ಅಂತರಿಕ್ಷೇಣ ಪತತಾಮಾಕಾಶಮಾರ್ಗೇಣ ಗಚ್ಛತಾಂ ವೀನಾಂ ಪಕ್ಷಿಣಾಂ ಪದಂ ಯೋ ವರುಣೋ ವೇದ । ತಥಾ ಸಮುದ್ರಿಯಃ ಸಮುದ್ರೇಽವಸ್ಥಿತೋ ವರುಣೋ ನಾವೋ ಜಲೇ ಗಚ್ಛಂತ್ಯಾಃ ಪದಂ ವೇದ ಜಾನಾತಿ ಸೋಽಸ್ಮಾನ್ಬಂಧನಾನ್ಮೋಚಯತ್ವಿತಿ ಶೇಷಃ । ವೇದ । ವಿದ ಜ್ಞಾನೇ । ವಿದೋ ಲಟೋ ವಾ । ಪಾ. ೩-೪-೮೩ । ಇತಿ ತಿಪೋ ಣಲ್ । ಲಿತ್ಸ್ವರೇಣಾದ್ಯುದಾತ್ತತ್ವಂ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ವೀನಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ಪತತಾಂ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ । ನಾವಃ । ಸಾವೇಕಾಚ ಇತಿ ಷಷ್ಠ್ಯಾ ಉದಾತ್ತತ್ವಂ । ಸಮುದ್ರಿಯಃ । ಭವಾರ್ಥೇ ಸಮುದ್ರಾಭ್ರಾದ್ಘಃ । ಪಾ. ೪. ೪. ೧೧೮ । ಇತಿ ಘಪ್ರತ್ಯಯಃ ।

॥ ಪ್ರತಿಪದಾರ್ಥ ॥

**ಅಂತರಿಕ್ಷೇಣ**—ಆಕಾಶಮಾರ್ಗದಲ್ಲಿ । **ಪತತಾಂ**—ಹಾರಾಡತಕ್ಕ । **ವೀನಾಂ**—ಪಕ್ಷಿಗಳ । **ಪದಂ**—ಸಂಚಾರಮಾರ್ಗವನ್ನು । **ಯಃ**—ಯಾವ ವರುಣನು । **ವೇದ**—ತಿಳಿಯುತ್ತಾನೆಯೋ । **ಸಮುದ್ರಿಯಃ**—ಸಮುದ್ರದಲ್ಲಿ ಅಡಗಿರುವ (ಅದೇ) ವರುಣನು । **ನಾವಃ**—(ನೀರಿನಲ್ಲಿ ಓಡಾಡತಕ್ಕ) ದೋಣಿಯ । **ಪದಂ**—ಸಂಚಾರಮಾರ್ಗವನ್ನೂ । **ವೇದ**—ತಿಳಿಯುತ್ತಾನೆಯೋ (ಅಂತಹ........)

॥ ಭಾವಾರ್ಥ ॥

ವರುಣನು ಆಕಾಶದಲ್ಲಿ ಹಾರಾಡತಕ್ಕ ಪಕ್ಷಿಗಳ ಸಂಚಾರಮಾರ್ಗವನ್ನೂ ಹಾಗೆಯೇ ಸಮುದ್ರದಲ್ಲಿ ಅಡಗಿದ್ದು ದೋಣಿಯ ಸಂಚಾರಮಾರ್ಗವನ್ನೂ ಸಹ ಚೆನ್ನಾಗಿ ತಿಳಿದುಕೊಳ್ಳುತ್ತಾನೆ. (ಅಂತಹ ವರುಣನು ನಮ್ಮ ಪಾಶಗಳನ್ನು ವಿಮೋಚನಮಾಡಲಿ).

## English Translation.

He who knows the path of the birds flying through the air, he who knows the course of the ship in the ocean ; (may he loosen our bonds).

॥ ವಿಶೇಷವಿಷಯಗಳು ॥

ವರುಣನು ಅಂತರಿಕ್ಷದಲ್ಲಿ ಪ್ರಕಾಶಮಾನನಾಗಿರುವುದರಿಂದ ಯಾರಿಂದಲೂ ತಿಳಿಯಲಶಕ್ಯವಾದ ಪಕ್ಷಿಗಳು ಹಾರಾಡುವ ಮಾರ್ಗಗಳನ್ನು ತಿಳಿಯಬಲ್ಲನು. ಹಾಗೆಯೇ ವರುಣನು ಜಲಾಧಿಪತಿಯಾದ್ದರಿಂದ ಸಮುದ್ರದ ಮೇಲೆ ಸಂಚರಿಸುವ ನಾವೆಗಳ (ಹಡಗುಗಳ) ಮಾರ್ಗವನ್ನು ತಿಳಿಯಬಲ್ಲನು. ಭೂಮಿಯ ಮೇಲೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವ ಮಾರ್ಗವು ಸ್ಪಷ್ಟವಾಗಿ ಎಲ್ಲರಿಗೂ ಕಾಣಿಸುವುದು. ಅದನ್ನು ನೋಡಿ ತಿಳಿಯುವುದು ಕಷ್ಟವಲ್ಲ. ಆದರೆ ಅಂತರಿಕ್ಷದಲ್ಲಿಯೂ ಸಮುದ್ರದ ಮೇಲೆಯೂ ಸಂಚರಿಸುವ ಮಾರ್ಗಗಳು ನಿರ್ದಿಷ್ಟವಾಗಿಲ್ಲವಾದ್ದರಿಂದ ಅದನ್ನು ತಿಳಿಯಲು ಮನುಷ್ಯಮಾತ್ರದವರಿಗೆ ಸಾಧ್ಯವಿಲ್ಲ. ವರುಣನಿಗೆ ಮಾತ್ರ ಅದನ್ನು ತಿಳಿಯುವ ಸಾಮರ್ಥ್ಯವಿದೆ. ಅಂತಹ ವರುಣನು ನಮ್ಮ ಪಾಶವಿಮೋಚನೆಯನ್ನು ಮಾಡಲಿ ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ವೇದ**—ವಿದ ಜ್ಞಾನೇ ಧಾತು. ಅದಾದಿ ಲಟ್ ವಿವಕ್ಷಾಮಾಡಿದಾಗ **'ವಿದೋಲಟೋ ವಾ'** (ಪಾ. ಸೂ. ೩-೪-೮೩) ವಿದ್ ಧಾತುವಿನ ಪರದಲ್ಲಿರುವ ಲಟ್ಟಿನ ತಿಙಿಗೆ ಲಿಟ್ ಪರಸ್ಮೈಪದದ ಣಲಾದಿಗಳು ವಿಕಲ್ಪವಾಗಿ ಬರುತ್ತವೆ ಎಂಬುದರಿಂದ ಪ್ರಥಮಪುರುಷದಲ್ಲಿ ಣಲ್ ಬರುತ್ತದೆ. ಲಘೂಪಧಗುಣಬಂದರೆ ವೇದ ಎಂದು ರೂಪವಾಗುತ್ತದೆ. ಣಲ್ ಲಿತ್ತಾದುದರಿಂದ **'ಲಿತಿ'** (ಪಾ. ಸೂ. ೬-೧-೯೩) ಸೂತ್ರದಿಂದ ಆದ್ಯುದಾತ್ತ ಸ್ವರವು ಬರುತ್ತದೆ. **'ದ್ವ್ಯಚೋತಸ್ತಿಙಃ'** (ಪಾ.ಸೂ. ೬-೩-೧೩೫) ದ್ವ್ಯಚ್ಕವಾದ ತಿಙಂತದ ಅಕಾರಕ್ಕೆ ದೀರ್ಘ ಬರುತ್ತದೆ ಎಂಬುದರಿಂದ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ.

**ವೀನಾಮ್**—ವಿಶಬ್ದದ ಷಷ್ಠ್ಯಂತರೂಪ **'ನಾಮಿ'** ಸೂತ್ರದಿಂದ ಅಂಗಕ್ಕೆ ದೀರ್ಘ ಬರುತ್ತದೆ **'ನಾಮನ್ಯತರಸ್ಯಾಂ'** (ಪಾ. ಸೂ. ೬-೧-೧೭೭) ಸೂತ್ರದಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಪತತಾಮ್**—ಪತ್ಲೃ ಗತೌ. ಧಾತು ಭ್ವಾದಿ. ಇದಕ್ಕೆ ಶತೃಪ್ರತ್ಯಯ ಬಂದಾಗ ಪತತ್ ಎಂದಾಗುತ್ತದೆ. ಇಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಶಪ್ಪಿನ ಪರದಲ್ಲಿರುವ ಶತೃಪ್ರತ್ಯಯವು ಲಸಾರ್ವಧಾತುಕವಾದುದರಿಂದ **'ತಾಸ್ಯನುದಾತ್ತೇತ್'** (ಪಾ. ಸೂ. ೬-೧-೧೮೬) ಎಂಬ ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರವೇ ಉಳಿಯುತ್ತದೆ. ಪತತಾಂ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

**ನಾವಃ**—ನೌ ಶಬ್ದದ ಷಷ್ಠೀ ಏಕವಚನದಲ್ಲಿ ಆವಾದೇಶ ಬಂದು ರುತ್ವವಿಸರ್ಗಗಳು ಬಂದರೆ ನಾವಃ ಎಂದು ರೂಪವಾಗುತ್ತದೆ. ಇದು ಏಕಾಚ್ಕಾದ ಶಬ್ದವಾದುದರಿಂದ **'ಸಾವೇಕಾಚಃ'** (ಪಾ. ಸೂ. ೬-೧-೧೬೮) ಎಂಬ ಸೂತ್ರದಿಂದ ಷಷ್ಠೀ ವಿಭಕ್ತಿಗೆ ಉದಾತ್ತಸ್ವರವು ಬರುತ್ತದೆ.

**ಸಮುದ್ರಿಯಃ**—ಸಮುದ್ರೇ ಭವಃ (ಅವಸ್ಥಿತಃ) ಸಮುದ್ರಿಯಃ ಸಮುದ್ರದಲ್ಲಿ ಇರುವುದು ಎಂದರ್ಥ. **'ತತ್ರ ಭವಃ'** ಎಂಬರ್ಥದಲ್ಲಿ **'ಸಮುದ್ರಾಭ್ರಾದ್ಘಃ'** (ಪಾ. ಸೂ. ೪-೪-೧೧೮) ಎಂಬುದರಿಂದ ಸಮುದ್ರ ಶಬ್ದದ ಮೇಲೆ ಘಪ್ರತ್ಯಯ ಬರುತ್ತದೆ. **'ಆಯನೇಯೀ ನಿಯಃ'** (ಪಾ. ಸೂ. ೭-೧-೨) ಎಂಬ ಸೂತ್ರದಿಂದ

ಘಪ್ರತ್ಯಯದ ಘಕಾರಕ್ಕೆ ಇಯಾದೇಶ ಬರುತ್ತದೆ. '**ಯಸ್ಯೇತಿ ಚ**' (ಪಾ. ಸೂ. ೬-೪-೧೪೮) ಸೂತ್ರದಿಂದ ಸಮುದ್ರಶಬ್ದದ ಕೊನೆಯ ಅಕಾರಕ್ಕೆ ಲೋಪಬರುತ್ತದೆ. ಸಮುದ್ರಿಯಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಇಕಾರವು ಉದಾತ್ತವಾಗುತ್ತದೆ. ॥ ೭ ॥

---

॥ ಸಂಹಿತಾಪಾಠಃ ॥

ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ ।

ವೇದಾ ಯ ಉಪಜಾಯತೇ ॥ ೮ ॥

॥ ಪದಪಾಠಃ ॥

ವೇದ । ಮಾಸಃ । ಧೃತಽವ್ರತಃ । ದ್ವಾದಶ । ಪ್ರಜಾಽವತಃ ।

ವೇದ । ಯಃ । ಉಪಽಜಾಯತೇ ॥ ೮ ॥

॥ ಸಾಯಣಭಾಷ್ಯಂ ॥

ಧೃತವ್ರತಃ ಸ್ವೀಕೃತಕರ್ಮವಿಶೇಷೋ ಯಥೋಕ್ತಮಹಿಮೋಪೇತೋ ವರುಣಃ ಪ್ರಜಾವತಸ್ತದಾ ತದೋತ್ಪದ್ಯಮಾನಪ್ರಜಾಯುಕ್ತಾನ್ದ್ವಾದಶಮಾಸಶ್ಚೈತ್ರಾದೀನ್ಫಾಲ್ಗುನಾಂತಾನ್ವೇದ । ಜಾನಾತಿ । ಯಸ್ತ್ರಯೋದಶೋಽಧಿಕಮಾಸ ಉಪಜಾಯತೇ ಸಂವತ್ಸರಸಮೀಪೇ ಸ್ವಯಮೇವೋತ್ಪದ್ಯತೇ ತಮಪಿ ವೇದ । ವಾಕ್ಯಶೇಷಃ ಪೂರ್ವವತ್ ॥ ಮಾಸಃ । ಪದ್ದನ್ನಿತ್ಯಾದಿನಾ । ಪಾ. ೬-೧-೬೩ । ಮಾಸಶಬ್ದಸ್ಯ ಮಾಸಿತ್ಯಾದೇಶಃ । ಊಡಿದಮಿತ್ಯಾದಿನಾ ಶಸ ಉದಾತ್ತತ್ವಂ । ದ್ವಾದಶ । ದ್ವೌ ಚ ದಶ ಚೇತಿ ದ್ವಂದ್ವಃ । ದ್ವ್ಯಷ್ಟನಃ ಸಂಖ್ಯಾಯಾಂ । ಪಾ. ೬-೩-೪೭ । ಇತ್ಯಾತ್ವಂ । ಸಂಖ್ಯಾ । ಪಾ. ೬-೨-೩೫ । ಇತಿ ಸೂತ್ರೇಣ ಪೂರ್ವಪದಪ್ರಕೃತಿಸ್ವರತ್ವಂ । ಪ್ರಜಾವತಃ । ಜನೀ ಪ್ರಾದುರ್ಭಾವೇ ಪ್ರಪೂರ್ವಾಜ್ಜನಸನಖನಕ್ರಮಗಮೋ ವಿಟ್‌ಪ್ರತ್ಯಯಃ । ಪಾ. ೩-೨-೬೭ । ವಿಡ್ವನೋರಿತ್ಯಾತ್ವಂ । ಪಾ. ೬-೪-೪೧ । ಕೃದುತ್ತರಪದಪ್ರಕೃತಿಸ್ವರತ್ವಂ । ಪ್ರಜಾ ಏಷಾಂ ಸಂತೀತಿ ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ । ಪಾ. ೫-೨-೯೪ । ಮಾದುಪಧಾಯಾಃ । ಪಾ. ೮-೨-೯ । ಇತಿ ಮತುಪೋ ವತ್ವಂ । ಉಪಜಾಯತೇ । ಜನೇಃ ಕರ್ಮಕರ್ತರಿ ಲಟ್ । ಕರ್ಮವದ್ಭಾವಾದಾತ್ಮನೇಪದಂ ಯಕ್ । ಪಾ. ೩-೧-೮೭ । ಜನಾದೀನಾಮುಪದೇಶ ಏವಾತ್ವಂ ವಕ್ತವ್ಯಂ ।

ಪಾ. ೬-೧-೧೯೫. ೩ | ಇತಿ ವಚನಾದಚಃ ಕರ್ತೃಯಕಿ | ಪಾ. ೬-೧-೧೯೫ | ಇತ್ಯಾದ್ಯುದಾತ್ತತ್ವಂ | ತಿಙ್ ಚೋದಾತ್ತವತಿ | ಪಾ. ೮-೧-೭೧ | ಇತ್ಯುಪಸರ್ಗಸ್ಯ ನಿಘಾತಃ | ನ ಚ ತಿಙ್ಙತಿಙ ಇತಿ ನಿಘಾತಃ | ಯದ್ವೃತ್ತಾನ್ನಿತ್ಯಮಿತಿ ಪ್ರತಿಷೇಧಾತ್ |

॥ ಪ್ರತಿಪದಾರ್ಥ ॥

**ಧೃತವ್ರತಃ**—ಯಜ್ಞಕರ್ಮವನ್ನು ಸ್ವೀಕರಿಸತಕ್ಕ ವರುಣನು | **ಪ್ರಜಾವತಃ**—ಉತ್ಪನ್ನರಾದ ಸಕಲ ಪ್ರಜೆಗಳಿಂದೊಡಗೂಡಿದ | **ದ್ವಾದಶ ಮಾಸಃ**—ಹನ್ನೆರಡು ತಿಂಗಳನ್ನೂ | **ವೇದ**—ತಿಳಿಯುತ್ತಾನೆ | **ಯಃ**—ಯಾವುದು (ಹದಿಮೂರನೆಯ ಅಧಿಕ ಮಾಸವಾಗಿ) | **ಉಪಜಾಯತೇ**—(ಅನುಬಂಧವಾಗಿ) ಹುಟ್ಟುತ್ತದೆಯೋ (ಅದನ್ನೂ ಸಹ) | **ವೇದ**—ತಿಳಿಯುತ್ತಾನೆ.

॥ ಭಾವಾರ್ಥ ॥

ವರುಣದೇವನು ವರ್ಷದ ಹನ್ನೆರಡು ತಿಂಗಳನ್ನೂ ಆ ಕಾಲದಲ್ಲಿ ಉತ್ಪನ್ನರಾದ ಸಕಲ ಪ್ರಜೆಗಳ ಸ್ವರೂಪವನ್ನೂ ಮತ್ತು ಹನ್ನೆರಡು ತಿಂಗಳಿಗೆ ಅನುಬಂಧವಾಗಿ ಹುಟ್ಟಿದ ವರ್ಷದ ಹದಿಮೂರನೆಯ ತಿಂಗಳನ್ನೂ ಚೆನ್ನಾಗಿ ತಿಳಿಯುತ್ತಾನೆ. (ಅಂತಹ ವರುಣನು ನಮ್ಮ ಬಂಧವಿಮೋಚನೆ ಮಾಡಲಿ)

## English Translation.

He who accepts the worship of the sacrificer knows the twelve months and the progeny they produce ; and he who knows also the supplimentary month ; (may he loosen our bonds).

॥ ವಿಶೇಷವಿಷಯಗಳು ॥

ವರುಣನು ಕಾಲಸ್ವರೂಪವನ್ನು ಚೆನ್ನಾಗಿ ಅರಿತವನು ಹನ್ನೆರಡು ತಿಂಗಳುಗಳ ಪರಿಮಿತಿಯನ್ನೂ, ಮೂರು ವರ್ಷಕ್ಕೆ ಒಂದಾವರ್ತಿ ಬರುವ ಅಧಿಕಮಾಸವೆಂಬ ಹದಿಮೂರನೆಯ ತಿಂಗಳ ಪರಿಮಾಣವನ್ನೂ ತಿಳಿದವನೆಂದಭಿಪ್ರಾಯವು. ಜ್ಯೋತಿಶ್ಶಾಸ್ತ್ರರೀತಿಯಾಗಿ ಸಂವತ್ಸರ ಪರಿಮಾಣವನ್ನು ಕ್ರಮಪಡಿಸುವುದು ಎರಡು ವಿಧವಾಗಿರುವುದು. ಸೂರ್ಯಗತಿಯಿಂದ ಎಂದರೆ ದ್ವಾದಶರಾಶಿಗಳಲ್ಲಿ ಸೂರ್ಯನ ಗತಿಯನ್ನು ಗಮನಿಸಿ ಅದರಂತೆ ದ್ವಾದಶ ಮಾಸಗಳನ್ನು ವಿಂಗಡಿಸಿ ಒಂದು ಸಂವತ್ಸರದ ವರೆಗೆ ಆಗುವ ಕಾಲಪರಿಮಿತಿಗೆ ಸೌರಮಾನ ಸಂವತ್ಸರವೆನ್ನುವರು. ಈ ಸೌರಮಾನ ಕ್ರಮದಲ್ಲಿ ಹನ್ನೆರಡು ತಿಂಗಳುಗಳು ಮಾತ್ರವಿರುವವು. ಹದಿಮೂರನೆಯ ತಿಂಗಳು ಇರುವುದಿಲ್ಲ. ಪ್ರತಿ ತಿಂಗಳಲ್ಲಿಯೂ ಮೂವತ್ತು ಅಥವಾ ಮೂವತ್ತೊಂದು ದಿನಗಳಿರುವವು. ಈ ದಿನಗಳಿಗೆ ತೇದಿ ಎನ್ನುವರು. ಮತ್ತೊಂದು ವಿಧವಾದ ಸಂವತ್ಸರ ಪರಿಮಿತಿಯ ಕ್ರಮಕ್ಕೆ ಚಾಂದ್ರಮಾನವೆನ್ನುವರು. ಇದನ್ನು ಚಂದ್ರನ ಗತಿಯಿಂದ ಪರಿಗಣಿಸುವರು. ಚಂದ್ರನ ವೃದ್ಧಿಕ್ಷಯಗಳಿಗೆ ಅನುಸಾರವಾಗಿ ೧೪ ಅಥವಾ ೧೫ ದಿನಗಳಿಗೆ ಒಂದು ಸಲ ಪೂರ್ಣಚಂದ್ರನಿರುವ ದಿನಕ್ಕೆ ಪೌರ್ಣಮಾಸ್ಯಾ ಎನ್ನುವರು. ಪೌರ್ಣಮಾಸಿಗೆ ಅಂತ್ಯವಾಗುವ ೧೫ ದಿವಸ ಅಥವಾ ಪಕ್ಷಕ್ಕೆ ಶುಕ್ಲಪಕ್ಷ ಎನ್ನುವರು. ಪೌರ್ಣಮಾಸಿಯಿಂದ ಮುಂದೆ ೧೫

ದಿನಗಳ ವರೆಗೆ ಕೃಷ್ಣಪಕ್ಷ ಎನ್ನುವರು. ಈ ಕೃಷ್ಣಪಕ್ಷದ ಅಂತ್ಯದಿನಕ್ಕೆ ಅಮಾವಾಸ್ಯಾ ಎನ್ನುವರು. ಅಮಾವಾಸ್ಯೆಯಲ್ಲಿ ಚಂದ್ರೋದಯವಿರುವುದಿಲ್ಲ ಆದಿನ **ದರ್ಶಃ ಸೂರ್ಯೇಂದುಸಂಗಮಃ** ಎಂದರೆ ಸೂರ್ಯಚಂದ್ರರ ಸಂಗವುವೆಂದು ಪ್ರಸಿದ್ಧಿಯಾಗಿರುವುದು. ಈ ಅಮಾವಾಸ್ಯೆಯೇ ಚಾಂದ್ರಮಾನ ಸಂವತ್ಸರದ ಪ್ರತಿಮಾಸಕ್ಕೂ ಕೊನೆಯ ದಿನ ಆದುದರಿಂದ ಪ್ರತಿಮಾಸದಲ್ಲಿಯೂ ಒಂದು ಪೌರ್ಣಮಾಸಿ ಒಂದು ಅಮಾವಾಸ್ಯಾ ಎಂಬ ಕ್ರಮದಂತೆ ಒಂದು ಚಾಂದ್ರ ಮಾನಸಂವತ್ಸರದಲ್ಲಿ ಹನ್ನೆರಡು ಪೌರ್ಣಮಾಸಿಗಳು, ಹನ್ನೆರಡು ಅಮಾವಾಸ್ಯೆಗಳು ಇರುವವು. ಪೌರ್ಣಮಾಸಿಯ ದಿನ. ಯಾವ ನಕ್ಷತ್ರವಿರುವುದೋ ಆ ನಕ್ಷತ್ರದ ಹೆಸರಿನಿಂದ ಚಾಂದ್ರಮಾನ ಮಾಸವನ್ನು ಕರೆಯುವುದು ರೂಢಿಯಾಗಿದೆ. ಎಂದರೆ ಪ್ರಥಮಮಾಸದಲ್ಲಿ ಪೌರ್ಣಮಾಸಿಯ ದಿನ ಚಿತ್ರಾ ನಕ್ಷತ್ರವಿರುವುದರಿಂದ ಆ ಮಾಸಕ್ಕೆ ಚೈತ್ರಮಾಸವೆಂದು ಹೆಸರು. ಅದರಂತೆ ವಿಶಾಖಾ ನಕ್ಷತ್ರವಿರುವ ಪೌರ್ಣಮಾಸಿಯನ್ನೊಳಗೊಂಡ ಮಾಸಕ್ಕೆ ವೈಶಾಖಮಾಸವೆಂದೂ ಜ್ಯೇಷ್ಠಾ ನಕ್ಷತ್ರವಿರುವ ಪೌರ್ಣಮಾಸಿಯುಕ್ತವಾದ ಮಾಸಕ್ಕೆ ಜ್ಯೇಷ್ಠಮಾಸವೆಂದೂ ಹೆಸರು. ಇತ್ಯಾದಿ ಈ ಕ್ರಮದಲ್ಲಿ ಎರಡು ಪಕ್ಷಗಳಿಂದ ಕೂಡಿದ ಮಾಸದಲ್ಲಿ ಯಾವಾಗಲೂ ಮೂವತ್ತು ದಿನಗಳು ಅಥವಾ ತಿಥಿಗಳಿರುವುದಿಲ್ಲ. ೨೭ ನಕ್ಷತ್ರ ವಿರುವುದರಿಂದ ಚಂದ್ರನ ಗತಿಯು ಚಾಂದ್ರಮಾನ ಮಾಸದಲ್ಲಿ ಮೂವತ್ತು ದಿನಗಳಿಗಿಂತ ಕಮ್ಮಿಯಾಗಿಯೇ ಇರು ವುದು ಈ ರೀತಿ ಪರಿಗಣನೆ ಮಾಡುವಾಗ ಪ್ರತಿಸಂವತ್ಸರದಲ್ಲಿಯೂ ೮–೧೦ ದಿನಗಳು ಕಮ್ಮಿಯಾಗುವವು. ಆದುದರಿಂದ ಸೌರಮಾನ ಸಂವತ್ಸರ ಪರಿಮಾಣಕ್ಕೆ ಸರಿಯಾಗಿ ಹೊಂದುವುದಕ್ಕಾಗಿ ೩ ವರ್ಷಗಳಿಗೊಂದು ಸಲ ಒಂದು ಚಾಂದ್ರಮಾನ ಮಾಸವನ್ನು ಸೇರಿಸುವರು. ಹೆಚ್ಚಾಗಿ ಸೇರಿಸುವ ಈ ಮಾಸಕ್ಕೆ ಅಧಿಕಮಾಸವೆಂದು ಹೆಸರು. ಈ ಅಧಿಕಮಾಸವು ಚಾಂದ್ರಮಾನ ಕ್ರಮದಲ್ಲಿ ಮಾತ್ರವಿರುವುದು ಪ್ರಸಕ್ತವಾದ ಋಕ್ಕಿನಲ್ಲಿ ಹನ್ನೆರಡು ಚಾಂದ್ರಮಾನ ಮಾಸಗಳೆಂದೂ ಆಗಾಗ ಬರುವ ಅಧಿಕಮಾಸವೆಂದೂ ಒಟ್ಟು ಹದಿಮೂರು ಮಾಸಗಳ ಕಾಲಪರಿಮಿತಿಯನ್ನು ವರುಣನು ತಿಳಿದವ ನೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಮಾಸಃ**—ಮಾಸ ಶಬ್ದಕ್ಕೆ ತೃತೀಯಾ ಬಹುವಚನ ಪರದಲ್ಲಿರುವಾಗ **'ಪದ್ದನ್ನೋಮಾಸ್–'** (ಪಾ. ಸೂ. ೬–೧–೬೩) ಎಂಬುದರಿಂದ ಮಾಸ್ ಎಂಬ ಆದೇಶ ಬರುತ್ತದೆ. ರುತ್ವ ವಿಸರ್ಗಗಳು ಬಂದರೆ ಮಾಸಃ ಎಂದು ರೂಪ ವಾಗುತ್ತದೆ. **' ಊಡಿದಂಪದಾದಿ–'** (ಪಾ. ಸೂ. ೬–೧–೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಮಾಸಃ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

**ದ್ವಾದಶ**—ದ್ವೌ ಚ ದಶ ಚ ದ್ವಾದಶ. ಇದು ದ್ವಂದ್ವ ಸಮಾಸ. **' ದ್ವ್ಯಷ್ಟನಃ ಸಂಖ್ಯಾಯಾಂ '** (ಪಾ. ಸೂ. ೬–೩–೪೭) ಸಂಖ್ಯಾವಾಚಕ ಶಬ್ದವು ಪರದಲ್ಲಿರುವಾಗ ದ್ವಿ ಮತ್ತು ಅಷ್ಟನ್ ಶಬ್ದಗಳಿಗೆ ಆತ್ವವು ಬರುತ್ತದೆ ಎಂಬುದರಿಂದ ಇಲ್ಲಿ ದ್ವಿ ಶಬ್ದಕ್ಕೆ ಆತ್ವವು ಬರುತ್ತದೆ. ದ್ವಾದಶ ಎಂದು ರೂಪವಾಗುತ್ತದೆ. **' ಸಂಖ್ಯಾ'** (ಪಾ. ಸೂ. ೬–೨–೩೫) ದ್ವಂದ್ವದಲ್ಲಿ ಸಂಖ್ಯಾವಾಚಿಯಾದ ಪೂರ್ವಪದವು ಪ್ರಕೃತಿ ಸ್ವರವನ್ನು ಹೊಂದುತ್ತದೆ ಎಂಬುದರಿಂದ ಇಲ್ಲಿ ಪೂರ್ವಪದ ಪ್ರಕೃತಿ ಸ್ವರವು ಬರುತ್ತದೆ.

**ಪ್ರಜಾವತಃ**—ಜನೀ ಪ್ರಾದುರ್ಭಾವೇ ಧಾತು. ದಿವಾದಿ. **'ಜನಸನಖನಕ್ರಮಗಮೋ ವಿಟ್ '** (ಪಾ. ಸೂ. ೩–೨–೬೭) ಎಂಬುದರಿಂದ ಇದಕ್ಕೆ ವಿಟ್ ಪ್ರತ್ಯಯ ಬರುತ್ತದೆ. **'ವಿಡ್ವನೋರನುನಾಸಿಕಸ್ಯಾತ್ "** (ಪಾ.

ಸೂ. ೬-೪-೪೧) ಎಂಬುದರಿಂದ ವಿಚ್ ಪರದಲ್ಲಿರುವಾಗ ಧಾತುವಿನ ನಕಾರಕ್ಕೆ ಆತ್ವವು ಬರುತ್ತದೆ ವಿಟ್‌ನಲ್ಲಿ ಸರ್ವವೂ ಲೋಪವಾಗುತ್ತದೆ. ಪ್ರ ಉಪಸರ್ಗ ಸಂಬಂಧವಿರುವಾಗ ಪ್ರಜಾ ಎಂದು ಶಬ್ದವಾಗುತ್ತದೆ. **'ಗತಿಕಾರಕೋಪಪದಾತ್ ಕೃತ್'** (ಪಾ. ಸೂ. ೬-೨-೧೩೯) ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಜಾ ಏಷಾಂ ಸಂತಿ ಇತಿ ಪ್ರಜಾವಂತಃ **'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್'** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ ಬರುತ್ತದೆ. ಪ್ರಜಾ+ಮತ್ ಎಂದಿರುವಾಗ **'ಮಾದುಪಧಾಯಾಃ-'** (ಪಾ. ಸೂ. ೮-೨-೯) ಸೂತ್ರದಿಂದ ಅಕಾರದ ಪರದಲ್ಲಿರುವುದರಿಂದ ಮತುಪಿನ ಮಕಾರಕ್ಕೆ ವಕಾರ ಬರುತ್ತದೆ. ಪ್ರಜಾವಚ್ಛಬ್ದದ ದ್ವಿತಿ ಯಾ ಬಹುವಚನದಲ್ಲಿ ಪ್ರಜಾವತಃ ಎಂದು ರೂಪವಾಗುತ್ತದೆ ಮತುಪ್ ಪಿತ್ತಾದುದರಿಂದ ಶಸ್ ಸುಪ್ಪಾದುದರಿಂದ ಅನುದಾತ್ತವಾಗುತ್ತವೆ.

**ಉಪಜಾಯತೇ**—ಪೂರ್ವೋಕ್ತವಾದ ಧಾತು. ಕರ್ಮ ಕರ್ತೃ ಅರ್ಥದಲ್ಲಿ ಲಟ್ ಬರುತ್ತದೆ. **'ಕರ್ಮವತ್ಕರ್ಮಣಾತುಲ್ಯಕ್ರಿಯಃ'** (ಪಾ. ಸೂ. ೩-೧-೮೭) ಎಂಬುದರಿಂದ ಕರ್ಮವದ್ಭಾವವನ್ನು ಕರ್ಮಕರ್ತೃವಿಗೆ ವಿಧಿಸಿರುವುದರಿಂದ ಆತ್ಮನೇ ಪದ ಪ್ರತ್ಯಯಗಳು ಬರುತ್ತವೆ. **'ಸಾರ್ವಧಾತುಕೇ ಯಕ್'** (ಪಾ. ಸೂ ೩-೧-೬೭) ಸೂತ್ರದಿಂದ ಸಾರ್ವಧಾತುಕವು ಪರದಲ್ಲಿರುವಾಗ ಧಾತುವಿಗೆ ಯಕ್ ಬರುತ್ತದೆ. ಜನ್+ಯ+ತೆ, ಎಂದಿರುವಾಗ **'ಜನಾದೀನಾಂ ಉಪದೇಶೇ ಏವ ಆತ್ವಂ ವಕ್ತವ್ಯಮ್'** (ಪಾ. ಸೂ. ೬-೧-೧೯೫-೩) ಎಂಬ ವಚನದಿಂದ ಆತ್ವವು ಬರುತ್ತದೆ. ಉಪಜಾಯತೇ ಎಂದು ರೂಪವಾಗುತ್ತದೆ. **'ಅಚಃ ಕರ್ತೃಯಕಿ'** (ಪಾ. ಸೂ. ೬-೧-೧೯೫) ಉಪದೇಶದಲ್ಲಿ ಅಜಂತದವಾದ ಧಾತುಗಳಿಗೆ ಕರ್ತ್ರರ್ಥದಲ್ಲಿ ಬಂದಿರುವ ಯಕ್ ಪರದಲ್ಲಿರುವಾಗ ಆದ್ಯುದಾತ್ತ ಸ್ವರವು ಬರುತ್ತದೆ. ಇಲ್ಲಿ ಉಪದೇಶಕಾಲವಲ್ಲಿಯೇ ಜನ್ ಧಾತುವಿಗೆ ಆತ್ವವನ್ನು ಹೇಳಿರುವುದರಿಂದ ಅಜಂತವಾಗುತ್ತದೆ. ಯಕ್ ಪರದಲ್ಲಿರುವುದರಿಂದ ಆದ್ಯುದಾತ್ತ ಸ್ವರವು ಬರುತ್ತದೆ. **'ತಿಙಿಚೋದಾತ್ತವತಿ'** (ಪಾ. ಸೂ. ೮-೧-೭೧) ಎಂಬುದರಿಂದ ಉದಾತ್ತವುಳ್ಳ ತಿಙಂತವು ಪರದಲ್ಲಿರುವುದರಿಂದ ಗತಿಗೆ (ಉಪ) ಸರ್ವಾನುದಾತ್ತಸ್ವರವು ಬರುತ್ತದೆ. ಯಃ ಎಂದು ಪೂರ್ವದಲ್ಲಿ ಯಚ್ಛಬ್ದದ ಸಂಬಂಧವಿರುವುದರಿಂದ **'ಯದ್ವೃತ್ತಾನ್ನಿತ್ಯಂ'** ಎಂಬುದರಿಂದ ತಿಙಂತಕ್ಕೆ ನಿಘಾತಸ್ವರ ಪ್ರತಿಷೇಧ ಬರುತ್ತದೆ.

---

॥ ಸಂಹಿತಾಪಾಠಃ ॥

ವೇದ ವಾತಸ್ಯ ವರ್ತನಿಮುರೋರ್ಋಷ್ವಸ್ಯ ಬೃಹತಃ ।

ವೇದಾ ಯೇ ಅಧ್ಯಾಸತೇ ॥ ೯ ॥

॥ ಪದಪಾಠಃ ॥

ವೇದ । ವಾತಸ್ಯ । ವರ್ತನಿಂ । ಉರೋಃ । ಋಷ್ವಸ್ಯ । ಬೃಹತಃ ।

ವೇದ । ಯೇ । ಅಧಿಽಆಸತೇ ॥ ೯ ॥

॥ ಸಾಯಣಭಾಷ್ಯಂ ॥

ಉರೋರ್ವಿಸ್ತೀರ್ಣಸ್ಯ ಋಷ್ವಸ್ಯ ದರ್ಶನೀಯಸ್ಯ ಬೃಹತೋ ಗುಣೈರಧಿಕಸ್ಯ ವಾತಸ್ಯ ವಾಯೋರ್ವರ್ತನಿಂ ಮಾರ್ಗಂ ವೇದ । ವರುಣೋ ಜಾನಾತಿ । ಯೇ ದೇವಾ ಅಧ್ಯಾಸತೇ ಉಪರಿ ತಿಷ್ಠಂತಿ ತಾನಪಿ ವೇದ । ಜಾನಾತಿ ॥ ವಾತಸ್ಯ । ಅಸಿಹಸೀತ್ಯಾದಿನಾ । ಉ. ೩-೮೬ । ತನ್ಪ್ರತ್ಯಯಾಂತೋ ವಾತಶಬ್ದೋ ನಿತ್ತ್ವಾದಾದ್ಯುದಾತ್ತಃ । ವರ್ತನಿಂ । ವರ್ತತೇಽನೇನೇತಿ ವರ್ತನಿಃ ಸ್ತೋತ್ರ ಇತಿ ಸ್ತೋತ್ರವಾಚಕಸ್ಯ ವರ್ತನಿಶಬ್ದಸ್ಯಾಂತೋದಾತ್ತತ್ವಸಿದ್ಧ್ಯರ್ಥಮುಂಛಾದಿಷು ಪಾಠಾದಸ್ಯ ಪ್ರತ್ಯಯ-ಸ್ವರೇಣ ಮಧ್ಯೋದಾತ್ತತ್ವೇ ಪ್ರಾಪ್ತೇ ವ್ಯತ್ಯಯೇನಾಂತೋದಾತ್ತತ್ವಂ । ಬೃಹತಃ । ಬೃಹನ್ಮಹತೋರುಪ-ಸಂಖ್ಯಾನಮಿತಿ ಜಸ ಉದಾತ್ತತ್ವಂ । ಅಧ್ಯಾಸತೇ । ಲಸಾರ್ವಧಾತುಕಾನುದಾತ್ತತ್ವೇ ಸತಿ ಧಾತುಸ್ವರಃ ॥

॥ ಪ್ರತಿಪದಾರ್ಥ ॥

**ವರುಣಃ**—ವರುಣನು । **ಉರೋಃ**—ವಿಸ್ತಾರವಾಗಿ ಹರಡಿಯೂ । **ಋಷ್ವಸ್ಯ**—ಆಕರ್ಷಕವಾಗಿಯೂ । **ಬೃಹತಃ**—ಶ್ರೇಷ್ಠಗುಣಗಳಿಂದ ಕೂಡಿಯೂ ಇರುವ । **ವಾತಸ್ಯ**—ವಾಯುವಿನ । **ವರ್ತನಿಂ**—ಮಾರ್ಗವನ್ನು । **ವೇದ**—ತಿಳಿಯುತ್ತಾನೆ । (ಮತ್ತು) **ಯೇ**—ಯಾವ ದೇವತೆಗಳು । **ಅಧ್ಯಾಸತೇ**—ಮೇಲುಭಾಗದಲ್ಲಿರುತ್ತಾರೋ (ಅವರನ್ನೂ ಸಹ) **ವೇದ**—ತಿಳಿಯುತ್ತಾನೆ ॥

॥ ಭಾವಾರ್ಥ ॥

ವರುಣದೇವನು ವಿಸ್ತಾರವಾಗಿ ಹರಡಿಯೂ, ಚಿತ್ತಾಕರ್ಷಕವಾಗಿಯೂ ಮತ್ತು ಶ್ರೇಷ್ಠಗುಣಗಳಿಂದ ದೊಡ್ಡವನಾಗಿಯೂ ಇರುವ ವಾಯುವಿನ ಮಾರ್ಗವನ್ನೂ ಮತ್ತು ಮೇಲುಭಾಗದಲ್ಲಿ ಇರತಕ್ಕ ದೇವತೆಗಳ ಸ್ವರೂಪವನ್ನೂ ತಿಳಿಯುತ್ತಾನೆ.

## English Translation.

He who knows the path of the vast, the graceful and the excellent wind and who knows those (gods) who reside above. (may he remove our bonds)

॥ ವಿಶೇಷವಿಷಯಗಳು ॥

**ವಾತಸ್ಯ, ಋಷ್ವಸ್ಯ. ಬೃಹತಃ**—ವಾಯುಸಂಚಾರ ಮಾರ್ಗವಾದ ಅಂತರಿಕ್ಷವು (ಆಕಾಶವು) ಬಹಳ ವಿಸ್ತಾರವಾಗಿಯೂ ನೋಡುವುದಕ್ಕೆ ಅಂದವಾಗಿಯೂ ಇರುವುದು ಪ್ರಸಿದ್ಧವಾಗಿಯೇ ಇರುವುದು.

**ಯೇ ಅಧ್ಯಾಸತೇ**—ಮೇಲೆ ಎಂದರೆ ಅಂತರಿಕ್ಷಕ್ಕಿಂತಲೂ ಮೇಲೆ ಸ್ವರ್ಗಲೋಕದಲ್ಲಿ ಇರುವ ದೇವತೆಗಳೆಂದರ್ಥವು. ಇವರುಗಳ ಸ್ವರೂಪವನ್ನು ತಿಳಿದ ವರುಣನೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ವಾತಸ್ಯ**—ವಾ ಗತಿಗಂಧನಯೋಃ ಧಾತು ಅದಾದಿ. '**ಅಸಿಹಸಿ**' ಎಂಬುದರಿಂದ ತನ್ ಪ್ರತ್ಯಯು ಬರುತ್ತದೆ. ಷಷ್ಠೀ ಏಕವಚನದ ರೂಪ. ನಿತ್ತಾದುದರಿಂದ '**ಞ್ನಿತ್ಯಾದಿರ್ನಿತ್ಯಂ**' (ಪಾ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ವರ್ತನಿಮ್**—ವೃತು ವರ್ತನೇ ಧಾತು. ಭ್ವಾದಿ. '**ವೃತೇಶ್ಚ**, (ಉ. ಸೂ. ೨-೨೬೩) ಎಂಬುದರಿಂದ ಅನಿ ಪ್ರತ್ಯಯವು ಬರುತ್ತದೆ. ಲಘೂಪಧ ಗುಣವು ಧಾತುವಿಗೆ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ವರ್ತನಿಂ ಎಂದು ರೂಪವಾಗುತ್ತದೆ. ವರ್ತತೇ ಅನೇನ ಇತಿ ವರ್ತನಿಃ '**ವರ್ತನಿಃ ಸ್ತೋತ್ರೇ**' (ಪಾ. ಸೂ. ೬-೧-೧೬೦ ಗ) ಎಂಬುದರಿಂದ ಸ್ತೋತ್ರವಾಚಕವಾದ ವರ್ತನಿ ಶಬ್ದಕ್ಕೆ ಅಂತೋದಾತ್ತವು ಸಿದ್ಧವಾಗುವುದಕ್ಕೋಸ್ಕರ ಈ ಶಬ್ದವನ್ನು ಉಂಛಾದಿಯಲ್ಲಿ ಪಾಠಮಾಡಿರುತ್ತಾರೆ. '**ಉಂಛಾದೀನಾಂ ಚ**' (ಪಾ. ಸೂ. ೬-೧-೧೬೦) ಎಂಬುದರಿಂದ ಅಂತೋದಾತ್ತಸ್ವರವು ಬರುತ್ತದೆ. ಇದನ್ನು ಬಾಧಿಸಿ ಪ್ರತ್ಯಯ ಸ್ವರವು (ಅನಿಯ ಅಕಾರಕ್ಕೆ ಉದಾತ್ತವು) ಬಂದು ಮಧ್ಯೋದಾತ್ತತ್ವವು ಪ್ರಾಪ್ತವಾದರೆ ವ್ಯತ್ಯಯದಿಂದ ಅಂತೋದಾತ್ತ ಸ್ವರವೇ ಬರುತ್ತದೆ.

**ಬೃಹತಃ**—ಬೃಹಿ ವೃದ್ಧೌ ಧಾತು. ಶತೃ ಪ್ರತ್ಯಯ ಬರುತ್ತದೆ. ಷಷ್ಠೀ ಏಕವಚನದ ರೂಪ. '**ಬೃಹನ್ಮಹತೋರುಪಸಂಖ್ಯಾನಮ್**' ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಂತೋದಾತ್ತದಾದ ಪದವಾಗುತ್ತದೆ.

**ಅಧ್ಯಾಸತೇ**—ಆಸ ಉಪವೇಶನೇ ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನಕ್ಕೆ ಅನಕಾರದ ಪರದಲ್ಲಿರುವುದರಿಂದ '**ಆತ್ಮನೇಪದೇಷ್ವನತಃ**' (ಪಾ. ಸೂ. ೭-೧-೫) ಎಂಬುದರಿಂದ ಅತಾದೇಶ ಬರುತ್ತದೆ. ಆಸತೇ ಎಂದು ರೂಪವಾಗುತ್ತದೆ. ಧಾತುವು ಅನುದಾತ್ತೇತ್ತಾದುದರಿಂದ ಅದರ ಪರದಲ್ಲಿರುವ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತ ಸ್ವರವೇ ಉಳಿಯುತ್ತದೆ. '**ತಿಙಿಚೋದಾತ್ತವತಿ**' (ಪಾ. ಸೂ. ೮-೧-೭೧) ಎಂಬುದರಿಂದ ಅಧಿ ಎಂಬ ಗತಿಗೆ ನಿಘಾತಸ್ವರ ಬರುತ್ತದೆ. ॥ ೯ ॥

॥ ಸಂಹಿತಾಪಾಠಃ ॥

ನಿ ಷಸಾದ ಧೃತವ್ರತೋ ವರುಣಃ ಪಸ್ತ್ಯಾಸ್ವಾ ।
ಸಾಮ್ರಾಜ್ಯಾಯ ಸುಕ್ರತುಃ ॥ ೧೦ ॥

॥ ಪದಪಾಠಃ ॥

ನಿ । ಸಸಾದ । ಧೃತಽವ್ರತಃ । ವರುಣಃ । ಪಸ್ತ್ಯಾಸು । ಆ ।
ಸಾಂಽರಾಜ್ಯಾಯ । ಸುಽಕ್ರತುಃ ॥ ೧೦ ॥

॥ ಸಾಯಣಭಾಷ್ಯಂ ॥

**ಧೃತವ್ರತಃ ಪೂರ್ವೋಕ್ತೋ ವರುಣಃ ಪಸ್ತ್ಯಾಸು ದೈವೀಷು ಪ್ರಜಾಸ್ವಾ ನಿ ಷಸಾದ । ಆಗತ್ಯ ನಿಷಣ್ಣವಾನ್ । ಕಿಮರ್ಥಂ । ಪ್ರಜಾನಾಂ ಸಾಮ್ರಾಜ್ಯಸಿದ್ಧ್ಯರ್ಥಂ ಸುಕ್ರತುಃ ಶೋಭನಕರ್ಮಾ ॥ ನಿ ಷಸಾದ । ಸದೇರಪ್ರತೇಃ । ಪಾ. ೮-೩-೬೬ । ಇತಿ ಷತ್ವಂ । ಸಾಮ್ರಾಜ್ಯಾಯ । ಸಮ್ರಾಜೋ ಭಾವಃ ಸಾಮ್ರಾಜ್ಯಂ । ಗುಣವಚನಬ್ರಾಹ್ಮಣಾದಿಭ್ಯಃ । ಪಾ. ೫-೧-೧೨೪ । ಇತಿ ಷ್ಯಞ್ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ಸುಕ್ರತುಃ । ಕ್ರತ್ವಾದಯಶ್ಚೇತ್ಯುತ್ತರಪದಾದ್ಯುದಾತ್ತತ್ವಂ ॥ ೧೭ ॥**

॥ ಪ್ರತಿಪದಾರ್ಥ ॥

**ಧೃತವ್ರತಃ**—ಯಜ್ಞಕರ್ಮವನ್ನು ಸ್ವೀಕರಿಸುವವನೂ । **ಸುಕ್ರತುಃ**—ಶ್ರೇಷ್ಠವಾದ ಕರ್ಮಕಾರಿಯೂ ಆದ । **ವರುಣಃ**—ವರುಣನು । **ಪಸ್ತ್ಯಾಸು**—ದೇವಲೋಕದ ಪ್ರಜೆಗಳ ನಡುವೆ । **ಸಾಮ್ರಾಜ್ಯಾಯ**—ಪ್ರಭುತ್ವ ಮಾಡುವುದಕ್ಕಾಗಿ । **ನಿಷಸಾದ**—(ಬಂದು) ಕುಳಿತಿದ್ದಾನೆ ॥

॥ ಭಾವಾರ್ಥ ॥

ಯಜ್ಞಕರ್ಮವನ್ನು ಸ್ವೀಕರಿಸುವವನೂ ಮತ್ತು ಶ್ರೇಷ್ಠವಾದ ಕರ್ಮಗಳನ್ನು ಮಾಡತಕ್ಕವನೂ ಆದ ವರುಣನು ದೇವಸಂತತಿಗಳ ನಡುವೆ ಪ್ರಭುತ್ವವನ್ನು ಮಾಡುವುದಕ್ಕಾಗಿ ಬಂದು ಕುಳಿತಿದ್ದಾನೆ.

## English Translation.

Varuna, the acceptor of sacrifices, the performer of good deeds is sitting amongst the divine progeny to exercise dominion over them.

॥ ವಿಶೇಷವಿಷಯಗಳು ॥

**ಪಸ್ತ್ಯಾಸು—ದೈವೀಷು ಪ್ರಜಾಸು ।** ದೇವಲೋಕದ ಪ್ರಜೆಗಳ ಮಧ್ಯದಲ್ಲಿ, ದೇವತೆಗಳ ಮಧ್ಯದಲ್ಲಿ.

**ಸಾಮ್ರಾಜ್ಯಾಯ—ಸಮ್ರಾಜೋ ಭಾವಃ ಸಾಮ್ರಾಜ್ಯಂ ।** ಸಮ್ರಾಟ್ ಎಂದರೆ ರಾಜನು, ಸಾಮ್ರಾಜ್ಯ ವೆಂದರೆ ರಾಜನು ನಡೆಸುವ ರಾಜ್ಯಾಡಳಿತ ಅಥವಾ ಪ್ರಭುತ್ವ.

॥ ವ್ಯಾಕರಣಪ್ರಕ್ರಿಯಾ ॥

**ನಿ ಷಸಾದ**—ಷದ್ಲೃ ವಿಶರಣಗತ್ಯವಸಾದನೇಷು ಧಾತು. ಭ್ವಾದಿ. **'ಧಾತ್ವಾದೇಃ ಷಃ ಸಃ'** (ಪಾ. ಸೂ. ೬-೧-೬೪) ಎಂಬ ಸೂತ್ರದಿಂದ ಆದಿಗೆ ಸಕಾರ ಬರುತ್ತದೆ. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಸಸಾದ ಎಂದು ರೂಪವಾಗುತ್ತದೆ. **'ಸಾತ್‌ಪದಾದ್ಯೋಃ'** (ಪಾ. ಸೂ. ೮-೩-೧೧೧) ಸೂತ್ರದಿಂದ ಷತ್ವ ನಿಷೇಧವು ಪ್ರಾಪ್ತ ವಾದರೆ **'ಸದಿರಪ್ರತೇಃ'** (ಪಾ. ಸೂ. ೮-೩-೬೬) ಪ್ರತಿಭಿನ್ನವಾದ ಉಪಸರ್ಗದ ನಿಮಿತ್ತದ ಪರದಲ್ಲಿರುವ ಸದ ಧಾತುವಿನ ಸಕಾರಕ್ಕೆ ಷತ್ವ ಬರುತ್ತದೆ ಎಂಬುದರಿಂದ ನಿ ಪರದಲ್ಲಿರುವ ಸಕಾರಕ್ಕೆ ಷತ್ವವು ಬರುತ್ತದೆ. ನಿಷಸಾದ ಎಂದು ರೂಪವಾಗುತ್ತದೆ.

**ಸಾಮ್ರಾಜ್ಯಾಯ**—ಸಮ್ರಾಜೋ ಭಾವಃ ಸಾಮ್ರಾಜ್ಯಮ್, ಭಾವಾರ್ಥದಲ್ಲಿ **'ಗುಣವಚನಬ್ರಾಹ್ಮಣಾ ದಿಭ್ಯಃ ಷ್ಯಞ್'** (ಪಾ. ಸೂ. ೫-೧-೧೨೪) ಎಂಬುದರಿಂದ ಷ್ಯಞ್ ಪ್ರತ್ಯಯ ಬರುತ್ತದೆ. ಞಿತ್ತಾದುದರಿಂದ ಆದಿ ವೃದ್ಧಿ ಬರುತ್ತದೆ. ಸಾಮ್ರಾಜ್ಯಂ ಎಂದು ರೂಪವಾಗುತ್ತದೆ. ಞಿತ್ ಪ್ರತ್ಯಯಾಂತವಾದುದರಿಂದ **'ಞ್ನಿತ್ಯಾದಿರ್ನಿ ತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಸುಕ್ರತುಃ— 'ನಞ್‌ಸುಭ್ಯಾಂ'** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ, **'ಕೃತ್ವಾದಯಶ್ಚ'** (ಪಾ. ಸೂ. ೬-೨-೧೧೮) ಸುವಿನ ಪರದಲ್ಲಿರುವ ಕ್ರತು ಮುಂತಾದವುಗಳು ಆದ್ಯುದಾತ್ತಗಳಾಗುತ್ತವೆ ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರವು ಬರುತ್ತದೆ ಸುಕ್ರತುಃ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ. ॥ ೧೦ ॥

॥ ಸಂಹಿತಾಪಾಠಃ ॥

ಅತೋ॒ ವಿಶ್ವಾ॒ನ್ಯದ್ಭು॑ತಾ ಚಿ॒ಕಿ॒ತ್ವಾँ ಅ॒ಭಿ ಪ॑ಶ್ಯತಿ ।

ಕೃ॒ತಾನಿ॒ ಯಾ ಚ॒ ಕರ್ತ್ವಾ॑ ॥ ೧೧ ॥

॥ ಪದಪಾಠಃ ॥

ಅತಃ । ವಿಶ್ವಾನಿ । ಅದ್ಭುತಾ । ಚಿಕಿತ್ವಾನ್ । ಅಭಿ । ಪಶ್ಯತಿ ।

ಕೃತಾನಿ । ಯಾ । ಚ । ಕರ್ತ್ವಾ ॥ ೧೧ ॥

॥ ಸಾಯಣಭಾಷ್ಯಂ ॥

ಅತೋಽಸ್ಮಾದ್ವರುಣಾದ್ವಿಶ್ವಾನ್ಯದ್ಭುತಾ ಸರ್ವಾಣ್ಯಾಶ್ಚರ್ಯಾಣಿ ಚಿಕಿತ್ವಾನ್ ಪ್ರಜ್ಞಾವಾನಭಿ ಪಶ್ಯತಿ । ಸರ್ವತೋಽವಲೋಕಯತಿ । ಯಾ ಕೃತಾನಿ ಯಾನ್ಯಾಶ್ಚರ್ಯಾಣಿ ಪೂರ್ವಂ ವರುಣೇನ ಸಂಪಾದಿತಾನಿ । ಚಕಾರಾದನ್ಯಾನಿ ಯಾನ್ಯಾಶ್ಚರ್ಯಾಣಿ ಕರ್ತ್ವಾ ಇತಃ ಪರಂ ಕರ್ತವ್ಯಾನಿ । ತಾನಿ ಸರ್ವಾಣ್ಯಭಿಪಶ್ಯತೀತಿ ಪೂರ್ವತ್ರಾನ್ವಯಃ ॥ ಅದ್ಭುತಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಪ್ರತ್ಯಯಲಕ್ಷಣೇನ ನಪುಂಸಕಸ್ಯ ಝಲಚಃ । ಪಾ. ೭-೧-೭೨ । ಇತಿ ನುಮ್ । ನಲೋಪಃ । ಚಿಕಿತ್ವಾನ್ । ಕಿತ ಜ್ಞಾನೇ । ಲಿಟಃ ಕ್ವಸುಃ । ಅಭ್ಯಾಸಹಲಾದಿಶೇಷಚುತ್ವಾನಿ । ವಸ್ವೇಕಾಜಾದ್ಘಸಾಮಿತಿ ನಿಯಮಾದಿಡಭಾವಃ । ರುತ್ವಾನುನಾಸಿಕಾವುಕ್ತೌ ಸಂಹಿತಾಯಾಂ । ಪಶ್ಯತಿ । ಪಾಘ್ರೇತ್ಯಾದಿನಾ ದೃಶೇಃ ಪಶ್ಯಾದೇಶಃ । ಕರ್ತ್ವಾ । ಕೃತ್ಯಾರ್ಥೇ ತವೈಕೇನ್ಕೇನ್ಯತ್ವನಃ । ಪಾ. ೩-೪-೧೪ । ಇತಿ ಕರೋತೇಸ್ತ್ವನ್ । ನಿತ್ತ್ವಾದಾದ್ಯುದಾತ್ತತ್ವಂ । ಪೂರ್ವವಚ್ಛೇರ್ಲೋಪಃ ॥

॥ ಪ್ರತಿಪದಾರ್ಥ ॥

ಅತಃ—ಈ ವರುಣದೇವನ ಮೂಲಕವಾಗಿಯೇ । ಚಿಕಿತ್ವಾನ್—ಪ್ರಜ್ಞಾವಂತನು (ಮುನಿಯು) । ಯಾ ಕೃತಾನಿ—ಯಾವುವು ಹಿಂದೆ ನಡೆದವೋ । ಚ—ಮತ್ತು । ಕರ್ತ್ವಾ—ಯಾವುವು ಮುಂದೆ ನಡೆಯುವುವೋ ಅಂತಹ । ವಿಶ್ವಾನಿ—ಸಮಸ್ತವಾದ । ಅದ್ಭುತಾ—(ಮತ್ತು) ಆಶ್ಚರ್ಯಕರವಾದ ವ್ಯವಹಾರಗಳೆಲ್ಲವನ್ನೂ । ಅಭಿ ಪಶ್ಯತಿ—ಸಂಪೂರ್ಣವಾಗಿ ನೋಡುತ್ತಾನೆ.

॥ ಭಾವಾರ್ಥ ॥

ಪ್ರಾಜ್ಞನಾದ ಮುನಿಯು ಯಾವ ಯಾವ ಆಶ್ಚರ್ಯಕರವಾದ ವ್ಯವಹಾರಗಳು ಹಿಂದೆ ನಡೆದವೋ ಮತ್ತು ಯಾವುವು ಮುಂದೆ ನಡೆಯುವುವೋ ಅವೆಲ್ಲವನ್ನೂ ಸಹ ಈ ವರುಣನ ಮೂಲಕವಾಗಿಯೇ ತಿಳಿಯುತ್ತಾನೆ..

## English Translation.

Through him (Varuna) the wise man sees (or knows) all the wonderful things that have been or will in future be done.

॥ ವಿಶೇಷವಿಷಯಗಳು ॥

**ಚಿಕಿತ್ವಾನ್—ಕಿತ ಜ್ಞಾನೇ |** ಜ್ಞಾನಿಯು, ತಿಳುವಳಿಕೆಯುಳ್ಳವನು, ಪ್ರಜ್ಞಾಶಾಲಿಯು, the wise, the sage &c.

**ಕೃತಾನಿ—ಪೂರ್ವಂ ಕೃತಾನಿ |** ಹಿಂದೆ ಮಾಡಲ್ಪಟ್ಟ ಅಥವಾ ಹಿಂದೆ ನಡೆದ.

**ಕರ್ತ್ವಾ—ಇತಃ ಪರಂ ಕರ್ತವ್ಯಾನಿ |** ಮುಂದೆ ಮಾಡಬಹುದಾದ ಮುಂದೆ ನಡೆಯುವ, acts to be done in future &c.

॥ ವ್ಯಾಕರಣಪ್ರಕ್ರಿಯಾ ॥

**ಅದ್ಭುತಾ—**ಅದ್ಭುತಶಬ್ದದ ಮೇಲೆ ದ್ವಿತೀಯಾ ಬಹುವಚನ ಶಸ್ ಪ್ರತ್ಯಯು ಬರುತ್ತದೆ ಅದಕ್ಕೆ ನಪುಂಸಕದಲ್ಲಿ **'ಜಶ್ಶಸೋಃ ಶಿಃ'** (ಪಾ. ಸೂ. ೭-೧-೨೦) ಎಂಬುದರಿಂದ ಶಿ ಆದೇಶವು ಬರುತ್ತದೆ ಅದಕ್ಕೆ **'ಶೇಶ್ಛಂದಸಿ ಬಹುಲಂ'** (ಪಾ. ಸೂ. ೬-೧-೭೦) ಎಂಬುದರಿಂದ ಸಂಹಿತಾದಲ್ಲಿ ಲೋಪ ಬರುತ್ತದೆ. **'ಪ್ರತ್ಯಯ ಲೋಪೇ ಪ್ರತ್ಯಯಲಕ್ಷಣಂ'** (ಪಾ. ಸೂ. ೧-೧-೬೨) ಎಂಬುದರಿಂದ ಶಿ ಪರದಲ್ಲಿರುವ ಕಾರ್ಯವು ಬರುತ್ತದೆ. ಆಗ **'ನಪುಂಸಕಸ್ಯ ಝಲಚಃ'** (ಪಾ. ಸೂ. ೭-೧-೭೨) ಎಂಬುದರಿಂದ ಅಂಗಕ್ಕೆ ನುಮಾಗಮ ಬರುತ್ತದೆ. ಸರ್ವನಾಮಸ್ಥಾನಸಂಜ್ಞೆಯು ಶಿಗೆ ಇರುವುದರಿಂದ **'ಸರ್ವನಾಮಸ್ಥಾನೇ ಚಾಸಂಬುದ್ಧೌ'** (ಪಾ. ಸೂ. ೬-೪-೮) ಎಂಬ ಸೂತ್ರದಿಂದ ನಾಂತದ ಉಪಧೆಗೆ ದೀರ್ಘ ಬರುತ್ತದೆ. ಅದ್ಭುತಾನ್ ಎಂದಿರುವಾಗ **'ನ ಲೋಪಃ ಪ್ರಾತಿಪದಿಕಾಂತಸ್ಯ'** (ಪಾ. ಸೂ. ೮-೨-೭) ಎಂಬ ಸೂತ್ರದಿಂದ ನಲೋಪ ಬಂದರೆ ಅದ್ಭುತಾ ಎಂದು ರೂಪವಾಗುತ್ತದೆ.

**ಚಿಕಿತ್ವಾನ್—**ಕಿತ ಜ್ಞಾನೇ ಧಾತು. ಭ್ವಾದಿ. **'ಕ್ವಸುಶ್ಚ'** (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟ್ಟಿಗೆ ಕ್ವಸು ಆದೇಶವು ಬರುತ್ತದೆ. ಧಾತುವಿಗೆ ದ್ವಿತ್ವವೂ ಅಭ್ಯಾಸದಲ್ಲಿ ಹಲಾದಿಶೇಷವೂ ಚುತ್ವವೂ ಬಂದರೆ, ಚಿಕಿತ್ವಸ್ ಎಂದು ಸಾಂತಪದವಾಗುತ್ತದೆ. **'ವಸ್ವೇಕಾಜಾದ್ಘಸಾಂ'** (ಪಾ. ಸೂ. ೭-೨-೬೭) ಎಂಬುದರಿಂದ ನಿಯಮಮಾಡಿರುವುದರಿಂದ ವಸುವಿಗೆ ಇಡಾಗಮ ಬರುವುದಿಲ್ಲ. ಪ್ರಥಮಾ ಏಕವಚನದಲ್ಲಿ ನುಮ್, ದೀರ್ಘ ಸಂಯೋಗಾಂತಲೋಪಗಳು ಬಂದರೆ ಚಿಕಿತ್ವಾನ್ ಎಂದು ರೂಪವಾಗುತ್ತದೆ. **'ದೀರ್ಘಾದಟಿ ಸಮಾನಪಾದೇ'** (ಪಾ. ಸೂ. ೮-೩-೯) ಎಂಬುದರಿಂದ ರುತ್ವವೂ **'ಆತೋಽಟಿನಿತ್ಯಂ'** (ಪಾ. ಸೂ. ೮-೩-೩) ಎಂಬುದರಿಂದ ಆಕಾರಕ್ಕೆ ಅನುನಾಸಿಕತ್ವವೂ ಸಂಹಿತಾಪಾಠದಲ್ಲಿ ಬರುತ್ತದೆ.

**ಪಶ್ಯತಿ—**ದೃಶಿರ್ ಪ್ರೇಕ್ಷಣೇ ಧಾತು. ಭ್ವಾದಿ, ಲಟ್ ಪ್ರಥಮಪುರುಷ ಏಕವಚನ ಪ್ರತ್ಯಯವು ಪರದಲ್ಲಿರುವಾಗ ಶಪ್ ವಿಕರಣವು ಬರುತ್ತದೆ. ಆಗ ಧಾತುವಿಗೆ **'ಪಾಘ್ರಾಧ್ಮಾಸ್ಥಾ-'** (ಪಾ. ಸೂ. ೭-೩-೭೮) ಎಂಬುದರಿಂದ ಪಶ್ಯ ಎಂಬುದು ಆದೇಶವಾಗಿ ಬರುತ್ತದೆ. ಪಶ್ಯತಿ ಎಂದು ರೂಪವಾಗುತ್ತದೆ.

**ಕರ್ತ್ವಾ—**ಡುಕೃಞ್ ಕರಣೇ ಧಾತು. **'ಕೃತ್ಯಾರ್ಥೇ ತವೈಕೇನ್ ಕೇನ್ಯತ್ವನಃ'** (ಪಾ. ಸೂ. ೩-೪-೧೪) ಎಂಬುದರಿಂದ ಇದಕ್ಕೆ ತ್ವನ್ ಪ್ರತ್ಯಯು ಬರುತ್ತದೆ. ತ್ವನ್ ಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. ಕರ್ತ್ವ ಶಬ್ದದ ಮೇಲೆ ನಪುಂಸಕದಲ್ಲಿ ದ್ವಿತೀಯಾ ಬಹುವಚನ ವಿವಕ್ಷಾಮಾಡಿದಾಗ ಶಸ್ಸಿಗೆ ಶಿ ಆದೇಶ ಬರುತ್ತದೆ. ಅದಕ್ಕೆ

'ಶೇಶ್ಛಂದಸಿ ಬಹುಲಂ' ಎಂಬುದರಿಂದ ಲೋಪಬರುತ್ತದೆ ಪ್ರತ್ಯಯಲಕ್ಷಣದಿಂದ ನುಮ್ ದೀರ್ಘ ನಲೋಪಗಳು ಬರುತ್ತವೆ. ಕರ್ತ್ವಾ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧೧ ॥

॥ ಸಂಹಿತಾಪಾಠಃ ॥

ಸ ನೋ ವಿಶ್ವಾಹಾ ಸುಕ್ರತುರಾದಿತ್ಯಃ ಸುಪಥಾ ಕರತ್ ।
ಪ್ರ ಣ ಆಯೂಂಷಿ ತಾರಿಷತ್ ॥ ೧೨ ॥

॥ ಪದಪಾಠಃ ॥

ಸಃ । ನಃ । ವಿಶ್ವಾಹಾ । ಸುಽಕ್ರತುಃ । ಆದಿತ್ಯಃ । ಸುಽಪಥಾ । ಕರತ್ ।
ಪ್ರ । ನಃ । ಆಯೂಂಷಿ । ತಾರಿಷತ್ ॥ ೧೨ ॥

॥ ಸಾಯಣಭಾಷ್ಯಂ ॥

ಸುಕ್ರತುಃ ಶೋಭನಪ್ರಜ್ಞಃ ಸ ಆದಿತ್ಯೋ ವರುಣೋ ವಿಶ್ವಾಹಾ ಸರ್ವೇಷ್ವಹಃಸು ನೋಽಸ್ಮಾನ್ ಸುಪಥಾ ಶೋಭನಮಾರ್ಗೇಣ ಸಹಿತಾನ್ಕರತ್ । ಕರೋತು । ಕಿಂಚ ನೋಽಸ್ಮಾಕಮಾಯೂಂಷಿ ಪ್ರ ತಾರಿಷತ್ । ಪ್ರವರ್ಧಯತು । ಸುಪಥಾ । ಸ್ವತೀ ಪೂಜಾಯಾಂ । ಪಾ. ೨-೨-೧೮ । ಇತಿ ಸಮಾಸೇ ನ ಪೂಜನಾತ್ । ಪಾ. ೫-೪-೬೯ । ಇತಿ ಸಮಾಸಾಂತಪ್ರತಿಷೇಧಃ । ಅವ್ಯಯಪೂರ್ವಪದಪ್ರಕೃತಿಸ್ವರೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಕ್ರತ್ವಾದಯಶ್ಚೇತ್ಯೇತನ್ನ ಭವತಿ ಅಬಹುವ್ರೀಹಿತ್ವಾತ್ । ಬಹುವ್ರೀಹೌ ಹಿ ತದ್ವಿಧೀಯತೇ । ಆದ್ಯುದಾತ್ತಂ ದ್ವ್ಯಚ್ಛಂದಸಿ । ಪಾ. ೬-೨-೧೧೯ । ಇತ್ಯೇತದಪಿ ನ ಭವತಿ । ಪಥಿನ್‌ಶಬ್ದಸ್ಯಾಂತೋದಾತ್ತತ್ವಾತ್ । ಕರತ್ । ಕರೋತೇರ್ಲೇಟಿ ವ್ಯತ್ಯಯೇನ ಶಪ್ । ಶಪೋ ಲುಕಿ ಲೇಟೋಽಡಾಟಾವಿತ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಯದ್ವಾ । ಛಾಂದಸೇ ಲುಙಿ ಕೃಮೃದೃರುಹಿಭ್ಯಃ । ಪಾ. ೩-೧-೫೯ । ಇತಿ ಚ್ಲೇರಙ್ । ಋದೃಶೋಽಙಿ ಗುಣಃ । ಪಾ. ೭-೪-೧೬ । ಇತಿ ಗುಣಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡ-

**ಭಾವಃ । ಪ್ರ ಣಃ । ಉಪಸರ್ಗಾದ್ಬಹುಲಂ । ಪಾ. ೮-೪-೨೮ । ಇತಿ ನಸೋಽ ಣತ್ವಂ । ತಾರಿಷತ್ । ತಾರಯತೇರ್ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ಆದೇಶಪ್ರತ್ಯಯಯೋರಿತಿ ಷತ್ವಂ ॥**

॥ ಪ್ರತಿಪದಾರ್ಥ ॥

**ಸುಕ್ರತುಃ**—ಶ್ರೇಷ್ಠವಾದ ಪ್ರಜ್ಞೆಯುಳ್ಳ । **ಸಃ ಆದಿತ್ಯಃ**– ಅದಿತಿಪುತ್ರನಾದ ಆ ವರುಣನು । **ವಿಶ್ವಾಹಾ**—ಎಲ್ಲಾ ದಿನಗಳಲ್ಲೂ । **ನಃ**—ನಮ್ಮನ್ನು । **ಸುಪಥಾ**—ಒಳ್ಳೆಯ ದಾರಿಯಲ್ಲಿ ಹೋಗುವವರನ್ನಾಗಿ । **ಕರತ್**—ಮಾಡಲಿ । (ಮತ್ತು) **ನಃ**—ನಮಗೆ । **ಆಯೂಂಷಿ**—ಆಯುಸ್ಸುಗಳನ್ನು । **ಪ್ರ ತಾರಿಷತ್**—ಚೆನ್ನಾಗಿ ಬೆಳೆಯುವಂತೆ ಮಾಡಲಿ.

॥ ಭಾವಾರ್ಥ ॥

ಶ್ರೇಷ್ಠವಾದ ಪ್ರಜ್ಞೆಯುಳ್ಳವನೂ ಮತ್ತು ಅದಿತಿ ಪುತ್ರನೂ ಆದ ಆ ವರುಣನು ನಮ್ಮನ್ನು ಎಲ್ಲಾ ದಿನಗಳಲ್ಲೂ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಲಿ ಮತ್ತು ನಮ್ಮ ಆಯಸ್ಸುಗಳನ್ನು ವೃದ್ಧಿಪಡಿಸಲಿ.

English Translation.

May the wise son of Aditi (Varuna) keep us, all our days in the right path and prolong our lives.

॥ ವಿಶೇಷವಿಷಯಗಳು ॥

**ವಿಶ್ವಾಹಾ—ವಿಶ್ವೇಷು ಸರ್ವೇಷ್ವಹಸ್ಸು ।** ಎಲ್ಲಾ ದಿವಸಗಳಲ್ಲಿಯೂ, all our days, always &c.

**ಸುಪಥಾ ಕರತ್**—ಒಳ್ಳೆಯ ಮಾರ್ಗದಲ್ಲಿ ನಡೆಯುವಂತೆ ಮಾಡಲಿ.

**ತಾರಿಷತ್—ಪ್ರವರ್ಧಯತು ।** ಅಭಿವೃದ್ಧಿಪಡಿಸಲಿ, ಹೆಚ್ಚಿಸಲಿ.

॥ ವ್ಯಾಕರಣಪ್ರಕ್ರಿಯಾ ॥

**ಸುಪಥಾ**—ಶೋಭನಶ್ಚಾಸೌ ಪಂಥಾಶ್ಚ ಸುಪಂಥಾಃ **'ನ ಪೂಜನಾತ್'** (ಪಾ, ಸೂ ೫-೪-೬೯) ಪೂಜನಾರ್ಥದ ಪರದಲ್ಲಿರುವ ಶಬ್ದಗಳಿಗೆ ಸಮಾಸಾಂತವು ಬರುವುದಿಲ್ಲ ಎಂಬುದರಿಂದ, **'ಸ್ವತೀ ಪೂಜಾಯಾಂ'** (ಪಾ. ವಾ. ೨-೨-೧೮-೪) ಎಂಬುದರಿಂದ ಸಮಾಸವಾದಾಗ ಪರದಲ್ಲಿರುವ ಪಥಿನ್ ಶಬ್ದಕ್ಕೆ ಸಮಾಸಾಂತವಾದ ಅಪ್ ಪ್ರತ್ಯಯವು ಬರುವುದಿಲ್ಲ. ಪೂಜ್ಯಾರ್ಥದಲ್ಲಿ ಸು ಎಂಬುದು ಬಂದಿದೆ. ತೃತೀಯಾ ಏಕವಚನದಲ್ಲಿ **'ಭಸ್ಯಟೇರ್ಲೋಪಃ'** (ಪಾ. ಸೂ. ೭-೧-೮೮) ಎಂಬುದರಿಂದ ಟಿ ಲೋಪವಾಗುವುದರಿಂದ ಸುಪಥಾ ಎಂದು ರೂಪವಾಗುತ್ತದೆ. **'ತತ್ಪುರುಷೇ ತುಲ್ಯಾರ್ಥ–'** (ಪಾ. ಸೂ ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾಗುತ್ತದೆ. ಅದನ್ನು ಬಾಧಿಸಿ **'ಪರಾದಿಶ್ಛಂದಸಿ ಬಹುಲಂ'** (ಪಾ. ಸೂ. ೬-೨-೧೯೯) ಎಂಬುದರಿಂದ ಬಹುಲಗ್ರಹಣದಿಂದ ಉತ್ತರಪದ ಆದ್ಯುದಾತ್ತ ಸ್ವರವು ಬರುತ್ತದೆ. ಸುವಿನ ಪರದಲ್ಲಿರುವುದರಿಂದ **'ಕೃತ್ವಾದಯಶ್ಚ'** (ಪಾ. ಸೂ. ೬-೨-೧೧೮) ಎಂಬುದರಿಂದಲೇ ಸಿದ್ಧವಾಗುವಾಗ ಹಿಂದಿನ ಬಹುಲಗ್ರಹಣದಿಂದ ಏಕೆ ಸಿದ್ಧಿಮಾಡಬೇಕು?

ಎಂದು ಆಶಂಕಿಸಬಾರದು. ಬಹುವ್ರೀಹಿ ಸಮಾಸದಲ್ಲಿ ಮಾತ್ರ ಆ ಸೂತ್ರಕ್ಕೆ ಪ್ರವೃತ್ತಿ ಇರುವುದರಿಂದ ಇಲ್ಲಿ ತತ್ಪುರುಷ ವಾದುದರಿಂದ ಅದರಿಂದ ಉಕ್ತಸ್ವರವು ಬರುವುದಿಲ್ಲ. **'ಆದ್ಯುದಾತ್ತಂ ದ್ವ್ಯಚ್ ಛಂದಸಿ'** (ಪಾ.ಸೂ. ೬-೨-೧೧೯) ಸುವಿನ ಉತ್ತರದಲ್ಲಿರುವ ಆದ್ಯುದಾತ್ತವಾದ ದ್ವ್ಯಚ್ಕ ಶಬ್ದವು ಆದ್ಯುದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಬರುತ್ತದೆ ಎಂದು ಹೇಳಲೂ ಅವಕಾಶವಿಲ್ಲ. ಪಥಿನ್ ಶಬ್ದವು ಅಂತೋದಾತ್ತವಾದುದರಿಂದ ನಿಮಿತ್ತವೇ ಇರುವುದಿಲ್ಲ.

**ಕರತ್**—ಡುಕೃಞ್ ಕರಣೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ ಬರುತ್ತದೆ. **'ಇತಶ್ಚಲೋಪಃ ಪರಸ್ಮೈಪದೇಷು'** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ ಬರುತ್ತದೆ. **'ವ್ಯತ್ಯಯೋ ಬಹುಲಂ'** (ಪಾ. ಸೂ. ೩-೧-೮೫) ಎಂಬುದರಿಂದ ಶಪ್ ವಿಕರಣಪ್ರತ್ಯಯ ಬರುತ್ತದೆ. ಅದು ಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. **'ಬಹುಲಂ ಛಂದಸಿ'** ಎಂಬುದರಿಂದ ಶಪ್ಪಿಗೆ ಲುಕ್ ಬಂದರೆ **'ಲೇಟೋಡಾಟೌ'** (ಪಾ. ಸೂ. ೩-೪-೯೪) ಎಂಬುದರಿಂದ ಲೇಟಿನ ತಿಪ್‌ಗೆ ಅಡಾಗಮ ಬರುತ್ತದೆ. ಕರತ್ ಎಂದು ರೂಪವಾಗುತ್ತದೆ. ಅಥವಾ ಲುಙ್ ಏಕವಚನದಲ್ಲಿ ಹಿಂದಿನಂತೆ ತ್ ಬರುತ್ತದೆ. ಸರ್ವಕಾಲದಲ್ಲಿಯೂ ಲುಙಾದಿತ್ರಯವನ್ನು ಹೇಳಿರುವುದರಿಂದ ಅರ್ಥವ್ಯತ್ಯಾಸವಾಗುವುದಿಲ್ಲ. **'ಕೃಮೃದೃರುಹಿಭ್ಯಃ ಛಂದಸಿ'** (ಪಾ. ಸೂ. ೩-೧-೫೯) ಎಂಬುದರಿಂದ ಲುಙ್‌ನಲ್ಲಿ ಪ್ರಾಪ್ತವಾಗುವ ಚ್ಲಿಗೆ ಅಙ್ ಆದೇಶ ಬರುತ್ತದೆ. ಅಙ್ ಪರದಲ್ಲಿರುವಾಗ **'ಋದೃಶೋಽಙಿ ಗುಣಃ'** (ಪಾ. ಸೂ. ೭-೪-೧೬) ಎಂಬುದರಿಂದ ಋಕಾರಾಂತವಾದುದರಿಂದ ಧಾತುವಿಗೆ ಗುಣ ಬರುತ್ತದೆ. **'ಬಹುಲಂ ಛಂದಸ್ಯಮಾಙ್‌ಯೋಗೇಽಪಿ'** (ಪಾ. ಸೂ. ೬-೪-೭೫) ಎಂಬುದರಿಂದ ಮಾಙ್ ಸಂಬಂಧವಿಲ್ಲದಿದ್ದರೂ ಅಡಾಗಮ ಬರುವುದಿಲ್ಲ. ಆಗ ಕರತ್ ಎಂದು ರೂಪವಾಗುತ್ತದೆ.

**ಪ್ರಣಃ**—ಭಿನ್ನಪದವಾದುದರಿಂದ ಇಲ್ಲಿ ಣತ್ವವು ಬರಲು ನಿಮಿತ್ತವಿರುವುದಿಲ್ಲ. **'ಉಪಸರ್ಗಾದ್ಬಹುಲಂ'** (ಪಾ. ಸೂ. ೮-೪-೨೮) ಉಪಸರ್ಗದ ನಿಮಿತ್ತದ ಪರದಲ್ಲಿರುವ ನಸ್ಸಿನ ನಕಾರಕ್ಕೆ ಣತ್ವವು ಬರುತ್ತದೆ. ಎಂಬುದರಿಂದ ಇಲ್ಲಿ ಣತ್ವವು ಬರುತ್ತದೆ.

**ತಾರಿಷತ್**—ತೄ ಪ್ಲವನತರಣಯೋಃ ಧಾತು. ಪ್ರೇರಣಾರ್ಥ ತೋರುವುದರಿಂದ ಣಿಚ್ ಬರುತ್ತದೆ ತಾರಿ ಎಂದು ಣ್ಯಂತವಾದುದು ಧಾತುವಾಗುತ್ತದೆ. ಇದಕ್ಕೆ ಲೇಟಿನಲ್ಲಿ ಪ್ರಥಮಪುರುಷ ಏಕವಚನದಲ್ಲಿ ತಿಪ್ ಬರುತ್ತದೆ. ಅದರ ಇಕಾರಕ್ಕೆ ಲೋಪವೂ ಅಡಾಗಮವೂ ಹಿಂದಿನಂತೆ ಬರುತ್ತವೆ. **'ಸಿಬ್ಬಹುಲಂ ಲೇಟಿ'** (ಪಾ ಸೂ. ೩-೪-೮೪) ಎಂಬುದರಿಂದ ಸಿಪ್ ಬರುತ್ತದೆ. **'ಸಿಪ್ ಬಹುಲಂ ಣಿದ್ವಕ್ತವ್ಯಃ'** ಎಂದುದರಿಂದ ಣಿಚ್ ಮಾಡದಿದ್ದರೂ ಣಿದ್ವದ್ಭಾವವು ಬರುವುದರಿಂದ ಇಲ್ಲಿ ಣಿತ್ತಿನ ಕಾರ್ಯವು ಬರುತ್ತದೆ. ಸಿಪ್ಪಿಗೆ ಇಡಾಗಮ ಬರುತ್ತದೆ. **'ಆದೇಶ ಪ್ರತ್ಯಯಯೋಃ'** (ಪಾ ಸೂ. ೮-೩-೫೯) ಎಂಬ ಸೂತ್ರದಿಂದ ಸಿಪ್ಪಿನ ಸಕಾರಕ್ಕೆ ಷತ್ವ ಬಂದರೆ ತಾರಿಷತ್ ಎಂದು ರೂಪವಾಗುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ಬಿಭ್ರ॒ದ್ದ್ರಾ॒ಪಿಂ ಹಿ॑ರ॒ಣ್ಯಯಂ॒ ವರು॑ಣೋ ವಸ್ತ॒ ನಿ॒ರ್ಣಿಜಂ॑ ।
ಪರಿ॒ ಸ್ಪಶೋ॒ ನಿ ಷೇ॑ದಿರೇ ॥ ೧೩ ॥

॥ ಪದಪಾಠಃ ॥

ಬಿಭ್ರ॑ತ್ । ದ್ರಾ॒ಪಿಂ । ಹಿ॒ರ॒ಣ್ಯಯ॑ಂ । ವರು॑ಣಃ । ವ॒ಸ್ತ॒ । ನಿಃ॒ಽನಿಜಂ॑ ।
ಪರಿ॑ । ಸ್ಪಶಃ॑ । ನಿ । ಸೇ॒ದಿ॒ರೇ॒ ॥ ೧೩ ॥

॥ ಸಾಯಣಭಾಷ್ಯಂ ॥

ಹಿರಣ್ಯಯಂ ಸುವರ್ಣಮಯಂ ದ್ರಾಪಿಂ ಕವಚಂ ಬಿಭ್ರದ್ಧಾರಯನ್ವರುಣೋ ನಿರ್ಣಿಜಂ ಪುಷ್ಟಂ ಸ್ವಶರೀರಂ ವಸ್ತ । ಆಚ್ಛಾದಯತಿ । ಸ್ಪಶೋ ಹಿರಣ್ಯಸ್ಪರ್ಶಿನೋ ರಶ್ಮಯಃ ಪರಿ ನಿ ಷೇದಿರೇ । ಸರ್ವತೋ ನಿಷಣ್ಣಾಃ ॥ ಬಿಭ್ರತ್ । ಬಿಭರ್ತೇಃ ಶತರಿ ನಾಭ್ಯಸ್ತಾಚ್ಛತುಃ । ಪಾ. ೭-೧-೭೮ । ಇತಿ ನುಮಭಾವಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ದ್ರಾಪಿಂ । ದ್ರಾ ಕುತ್ಸಾಯಾಂ ಗತೌ । ದ್ರಾಪಯತೀಷೂನ್ಕು-ತ್ಸಿತಾಂ ಗತಿಂ ಪ್ರಾಪಯತೀತಿ ದ್ರಾಪಿಃ ಕವಚಂ । ಅರ್ತಿಹ್ರೀತ್ಯಾದಿನಾ । ಪಾ. ೭-೩-೩೬ । ಪುಗಾಗಮಃ । ಔಣಾದಿಕ ಇಪ್ರತ್ಯಯೇ ಣಿಲೋಪಃ । ಹಿರಣ್ಯಯಂ । ಋತ್ವ್ಯವಾಸ್ತ್ವ್ಯವಾಸ್ತ್ವಮಾಧ್ವೀಹಿರಣ್ಯಯಾನಿ ಛಂದಸಿ । ಪಾ. ೬-೪-೧೭೫ । ಇತಿ ಹಿರಣ್ಯಶಬ್ದಾದ್ವಿಕಾರಾರ್ಥೇ ವಿಹಿತಸ್ಯ ಮಯಟೋ ಮಶಬ್ದಲೋಪೋ ನಿಪಾತಿತಃ । ವಸ್ತ । ವಸ ಆಚ್ಛಾದನೇ । ಲಜ್ಯದಾದಿತ್ವಾಚ್ಛಪೋ ಲುಕ್ । ಪೂರ್ವವದಡಭಾವಃ । ನಿರ್ಣಿಜಂ । ಣಿಜಿರ್ ಶೌಚಪೋಷಣಯೋಃ । ಸ್ಪಶಃ । ಸ್ಪಶ ಬಾಧನಸ್ಪರ್ಶನಯೋಃ । ಕ್ವಿಪ್ಚೇತಿ ಕ್ವಿಪ್ । ನಿ ಷೇದಿರೇ । ಷದ್ಲೃ ವಿಶರಣಗತ್ಯವಸಾದನೇಷು । ಅಸ್ಮಾದ್ಗತ್ಯರ್ಥಾತ್ಕರ್ಮಣಿ ಲಿಟ್ಯೇತ್ವಾಭ್ಯಾಸಲೋಪೌ । ಸದೇರಪ್ರತೇರಿತಿ ಷತ್ವಂ ॥

॥ ಪ್ರತಿಪದಾರ್ಥ ॥

**ಹಿರಣ್ಯಯಂ**—ಸುವರ್ಣಮಯವಾದ । **ದ್ರಾಪಿಂ**—ಕವಚವನ್ನು । **ಬಿಭ್ರತ್**—ಧರಿಸಿಕೊಂಡು । **ವರುಣಃ**—ವರುಣದೇವನು । **ನಿರ್ಣಿಜಂ**—ಪುಷ್ಟವಾಗಿ ಬೆಳೆದ ತನ್ನ ಶರೀರವನ್ನು । **ವಸ್ತ**—ಮುಚ್ಚಿಕೊಳ್ಳುತ್ತಾನೆ । **ಸ್ಪಶಃ**—(ಸುವರ್ಣಕವಚದ) ಕಿರಣಗಳು । **ಪರಿ ನಿಷೇದಿರೇ**—ಸುತ್ತಲೂ ಹರಡಿವೆ.

॥ ಭಾವಾರ್ಥ ॥

ವರುಣದೇವನು ಸುವರ್ಣಮಯವಾದ ಕವಚವನ್ನು ಧರಿಸಿಕೊಂಡು ತನ್ನ ಪುಷ್ಟವಾಗಿ ಬೆಳೆದ ದೇಹವನ್ನು ಮುಚ್ಚಿಕೊಳ್ಳುತ್ತಾನೆ. ಮತ್ತು ಸುವರ್ಣಕವಚದ ಆ ಕಿರಣಗಳು ಸುತ್ತಲೂ ಹರಡುತ್ತಿವೆ.

## English Translation

Varuna covers his well-nourished body with clothes ; he wears golden armour, from it the rays are reflected and are spread around.

॥ ವಿಶೇಷವಿಷಯಗಳು ॥

**ದ್ರಾಪಿಂ—ಕವಚಂ ।** ಯುದ್ಧಕಾಲದಲ್ಲಿ ಶರೀರಕ್ಕೆ ಬಾಣಗಳು ತಾಕದಿರುವಂತೆ ತೊಡುವ ಕವಚ, Armour.

**ಹಿರಣ್ಯಯಂ—ಹಿರಣ್ಮಯಂ ।** ಸುವರ್ಣಮಯವಾದ, ಸುವರ್ಣದಿಂದ ನಿರ್ಮಿಸಲ್ಪಟ್ಟ.

**ವಸ್ತ—ವಸ ಆಚ್ಛಾದನೇ । ಆಚ್ಛಾದಯತಿ ।** (ಕವಚದಿಂದ ಶರೀರವನ್ನು) ಆಚ್ಛಾದನೆಮಾಡುತ್ತಾನೆ, ತೊಟ್ಟುಕೊಳ್ಳುತ್ತಾನೆ, ಧರಿಸುತ್ತಾನೆ.

**ನಿರ್ಣಿಜಂ—ಣಿಜಿರ್ ಶೌಚಪೋಷಣಯೋಃ ।** ಪುಷ್ಟವಾದ, ಚೆನ್ನಾಗಿ ಬೆಳೆಸಿದ (ಶರೀರವನ್ನು)

**ಸ್ಪಶಃ—ಸ್ಪಶಬಾಧನಸ್ಪರ್ಶನಯೋಃ । ಹಿರಣ್ಯಸ್ಪರ್ಶಿನೋ ರಶ್ಮಯಃ ।** ಸ್ಪರ್ಶನಮಾಡುವ, ಹೊರ ಹೊರಡುವ (ರಶ್ಮಿಗಳು).

**ಪರಿ ನಿಷೇದಿರೇ**—ಸುತ್ತಲೂ ಅಥವಾ ಎಲ್ಲೆಡೆಗಳಲ್ಲಿಯೂ ಪಸರಿಸುತ್ತವೆ, ವ್ಯಾಪಿಸುತ್ತವೆ.

॥ ವ್ಯಾಕರಣಪ್ರಕ್ರಿಯಾ ॥

**ಬಿಭ್ರತ್—**ಡುಭೃಞ್ ಭರಣೇ ಧಾತು. ಜುಹೋತ್ಯಾದಿ. ಶತೃ ಪ್ರತ್ಯಯ ಬರುತ್ತದೆ. ಶ್ಲು ವಿಕರಣ ಬಂದು ಧಾತುವಿಗೆ ದ್ವಿತ್ವವು ಬರುತ್ತದೆ. **'ಭೃಞಾಮಿತ್'** (ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವವು ಬರುತ್ತದೆ. ಉಗಿತ್ತಾದುದರಿಂದ ನುಮ್ ಪ್ರಾಪ್ತವಾದರೆ **'ನಾಭ್ಯಸ್ತಾಚ್ಛತುಃ'** (ಪಾ. ಸೂ. ೭-೧-೭೮) ಎಂಬುದರಿಂದ ಇಲ್ಲಿ ಅಭ್ಯಸ್ತಸಂಜ್ಞೆ ಇರುವುದರಿಂದ ನುಮ್ ಬರುವುದಿಲ್ಲ. **'ಅಭ್ಯಸ್ತಾನಾಮಾದಿಃ'** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ದ್ರಾಪಿಮ್**—ದ್ರಾ ಕುತ್ಸಾಯಾಂ ಗತೌ ಧಾತು. ಅದಾದಿ. ದ್ರಾಪಯತಿ ಇಷೂನ್ ಕುತ್ಸಿತಾಂ ಗತಿಂ ಪ್ರಾಪಯತಿ ಇತಿ ದ್ರಾಪಿಃ ಕವಚಮ್ ॥ ಬಾಣಗಳ ಗತಿಯನ್ನು ವ್ಯರ್ಥವನ್ನಾಗಿ ಮಾಡುವುದರಿಂದ ದ್ರಾಪಿಯೆಂದು ಕವಚಕ್ಕೆ ಹೆಸರು. ದ್ರಾ ಧಾತುವಿಗೆ ಣಿಚ್ ಪರದಲ್ಲಿರುವಾಗ **'ಅರ್ತಿಹ್ರೀವ್ಲೀ-'** (ಪಾ. ಸೂ. ೭-೩-೩೬) ಎಂಬುದರಿಂದ ಆದಂತವಾದುದರಿಂದ ಧಾತುವಿಗೆ ಪುಕಾಗಮ ಬರುತ್ತದೆ. ದ್ರಾಪಿ ಎಂದು ರೂಪವಾಗುತ್ತದೆ. ಇದರ ಮೇಲೆ ಉಣಾದಿ ಸಿದ್ಧವಾದ ಇ ಪ್ರತ್ಯಯವು ಬರುತ್ತದೆ. **'ಣೇರನಿಟಿ'** (ಪಾ. ಸೂ. ೬-೪-೫೧) ಎಂಬುದರಿಂದ ಣೇ ಲೋಪವಾದರೆ ಪುನಃ ದ್ರಾಪಿ ಎಂದೇ ರೂಪವಾಗುತ್ತದೆ.

**ಹಿರಣ್ಯಯಮ್**—ಹಿರಣ್ಯಸ್ಯ ವಿಕಾರಃ ಇತ್ಯರ್ಥೇ ಮಯಟ್ ಪ್ರತ್ಯಯಃ. ವಿಕಾರಾರ್ಥದಲ್ಲಿ ಮಯಟ್ ಪ್ರತ್ಯಯ ಬರುತ್ತದೆ. ಅದಕ್ಕೆ **'ಋತ್ವ್ಯವಾಸ್ತ್ವ್ಯವಾಸ್ತ್ವಮಾಧ್ವೀಹಿರಣ್ಯಯಾನಿ ಛಂದಸಿ'** (ಪಾ. ಸೂ ೬-೪-೧೭೫) ಎಂಬುದರಿಂದ ವಿಕಾರಾರ್ಥದಲ್ಲಿ ವಿಹಿತವಾದ ಮಯಟಿನ ಮಕಾರಕ್ಕೆ ಲೋಪವು ನಿಪಾತಿತವಾಗಿದೆ.

**ವಸ್ತ**—ವಸ ಆಚ್ಛಾದನೇ ಧಾತು. ಆತ್ಮನೇಪದಿ. **'ಛಂದಸಿ ಲುಙ್ ಲಙ್ ಲಿಟಃ'** ಎಂಬುದರಿಂದ ಲಙ್ ಬರುತ್ತದೆ. ಏಕವಚನ ಪರದಲ್ಲಿರುವಾಗ ಶಪ್ಪಿಗೆ ಆದಾದಿಯಾದುದರಿಂದ ಲುಕ್ ಬರುತ್ತದೆ **'ಬಹುಲಂ ಛಂದಸ್ಯ–'** ಎಂಬುದರಿಂದ ಅಡಾಗಮ ಬರುವುದಿಲ್ಲ. ವಸ್ತ ಎಂದು ರೂಪವಾಗುತ್ತದೆ.

**ನಿರ್ಣಿಜಮ್**—ಣಿಜಿರ್ ಶೌಚಪೋಷಣಯೋಃ ಧಾತು. ಜುಹೋತ್ಯಾದಿ.

**ಸ್ಪಶಃ**—ಸ್ಪಶ ಬಾಧನಸ್ಪರ್ಶನಯೋಃ ಧಾತು. ಭ್ವಾದಿ. **'ಕ್ವಿಪ್ ಚ'** (ಪಾ. ಸೂ. ೩–೨–೭೬) ಎಂಬುದರಿಂದ ಕ್ವಿಪ್ ಬರುತ್ತದೆ. ಸರ್ವಲೋಪವಾಗುತ್ತದೆ. ಪ್ರಥಮಾ ಬಹುವಚನದಲ್ಲಿ ಸ್ಪಶಃ ಎಂದು ರೂಪ ವಾಗುತ್ತದೆ

**ನಿ ಷೇದಿರೇ**—ಷದಲ್ಯ ವಿಶರಣಗತ್ಯವಸಾದನೇಷು ಧಾತು. ಗತ್ಯರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿದೆ. ಕರ್ಮಾರ್ಥದಲ್ಲಿ ಲಿಟ್ ಬರುತ್ತದೆ. ದ್ವಿತ್ವ ಏತ್ವಾಭ್ಯಾಸಲೋಪಗಳು ಬರುತ್ತವೆ. **'ಸದಿರಪ್ರತೇಃ'** (ಪಾ. ಸೂ. ೮–೩–೬೬) ಎಂಬುದರಿಂದ ಪಾದದ ಆದಿಯೂ ಪ್ರತಿಭಿನ್ನ ಉಪಸರ್ಗದ ಪರದಲ್ಲಿರುವುದರಿಂದ ಷತ್ವ ಬರುತ್ತದೆ. ॥ ೧೩ ॥

॥ ಸಂಹಿತಾಪಾಠಃ ॥

ನ ಯಂ ದಿಪ್ಸಂತಿ ದಿಪ್ಸವೋ ನ ದ್ರುಹ್ವಾಣೋ ಜನಾನಾಂ ।
ನ ದೇವಮಭಿಮಾತಯಃ ॥ ೧೪ ॥

॥ ಪದಪಾಠಃ ॥

ನ । ಯಂ । ದಿಪ್ಸಂತಿ । ದಿಪ್ಸವಃ । ನ । ದ್ರುಹ್ವಾಣಃ । ಜನಾನಾಂ ।
ನ । ದೇವಂ । ಅಭಿऽಮಾತಯಃ ॥ ೧೪ ॥

॥ ಸಾಯಣಭಾಷ್ಯಂ ॥

**ದಿಪ್ಸವೋ ಹಿಂಸಿತುಮಿಚ್ಛಂತೋ ವೈರಿಣೋ ಯಂ ವರುಣಂ ನ ದಿಪ್ಸಂತಿ ಭೀತಾಃ ಸಂತೋ ಹಿಂಸಿತುಮಿಚ್ಛಾಂ ಪರಿತ್ಯಜಂತಿ । ಜನಾನಾಂ ಪ್ರಾಣಿನಾಂ ದ್ರುಹ್ವಾಣೋ ದ್ರೋಗ್ಧಾರೋಽಪಿ ಯಂ ವರುಣಂ ಪ್ರತಿ ನ ದ್ರುಹ್ಯಂತಿ । ಅಭಿಮಾತಯಃ ಪಾಪ್ಮಾನಃ । ಪಾಪ್ಮಾ ವಾ ಅಭಿಮಾತಿಃ । ತೈ. ಸಂ.– ೨–೧–೩–೫ । ಇತಿ ಶ್ರುತ್ಯಂತರಾತ್ । ದೇವಂ ತಂ ವರುಣಂ ನ ಸ್ಪೃಶಂತಿ ॥ ದಿಪ್ಸಂತಿ । ದನ್ಭು ದಂಭೇ ।**

ಅಸ್ಮಾತ್ಸನಿ ಸನೀವಂತರ್ಧೇತ್ಯಾದಿನಾ । ಪಾ. ೭-೨-೪೯ । ಇಡಭಾವಃ । ಹಲಂತಾಚ್ಚ । ಪಾ. ೧-೨-೧೦ । ಇತ್ಯತ್ರ ಹಲ್ಗ್ರಹಣಸ್ಯ ಜಾತಿವಾಚಿತ್ವಾತ್ಸನಃ ಕಿತ್ತ್ವಾದ್ದಂಭ ಇಚ್ಚ । ಪಾ. ೭-೪-೫೬ । ಇತಿ ದಕಾರಾತ್ಪರಸ್ಯಾಕಾರಸ್ಯೇಕಾರಃ । ಅನಿದಿತಾಮಿತಿ ನಲೋಪಃ । ಭಷ್ಭಾವಾಭಾವಶ್ಛಾಂದಸಃ । ಪಾ. ೮-೨-೩೭ । ಅತ್ರ ಲೋಪೋಽಭ್ಯಾಸಸ್ಯ । ಪಾ. ೭-೪-೫೮ । ಇತ್ಯಭ್ಯಾಸಲೋಪಃ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಸನೋ ನಿತ್ತ್ವಾನ್ನಿತ್ಸ್ವರೇಣಾದ್ಯುದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ । ದಿಪ್ಸವಃ । ಸನಂತಾದ್ದಂಭೇಃ ಸನಾಶಂಸಭಿಕ್ಷ ಉಃ । ಪಾ. ೩-೨-೧೬೮ । ಇತ್ಯುಪ್ರತ್ಯಯಃ । ಪ್ರತ್ಯಯಸ್ವರಃ । ದ್ರುಹ್ವಾಣಃ । ದ್ರುಹ ಜಿಘಾಂಸಾಯಾಂ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಕ್ವನಿಪ್ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರೇಣಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ದಿಪ್ಸವಃ**—ಹಿಂಸಿಸಲು ಇಷ್ಟಪಡುವ ಶತ್ರುಗಳು (ಕೂಡ) । **ಯಂ**—ಯಾವ ವರುಣನನ್ನು । **ನ ದಿಪ್ಸಂತಿ**—ಬೆದರಿಕೆಯಿಂದ ಹಿಂಸಿಸಲಿಚ್ಛಿಸುವುದಿಲ್ಲ । **ಜನಾನಾಂ**—ಪ್ರಾಣಿಗಳಿಗೆ । **ದ್ರುಹ್ವಾಣಃ**—ಕೇಡು ಬಯಸುವ ದ್ರೋಹಿಗಳೂ । **ನ ದ್ರುಹ್ಯಂತಿ**—ಕೇಡನ್ನುಂಟುಮಾಡುವುದಿಲ್ಲ । **ಅಭಿಮಾತಯಃ**—ಪಾಪಿಗಳೂ ಕೂಡ । **ದೇವಂ**—ದೇವತಾತ್ಮನಾದ ವರುಣನನ್ನು । **ನ**—ಮುಟ್ಟುವುದಿಲ್ಲ.

॥ ಭಾವಾರ್ಥ ॥

ಸ್ವಭಾವದಿಂದಲೇ ಹಿಂಸಾತ್ಮಕರಾದ ಶತ್ರುಗಳು ವರುಣನಿಗೆ ಹೆದರಿ ಅವನನ್ನು ಹಿಂಸಿಸಲಿಚ್ಛಿಸುವುದಿಲ್ಲ. ಪ್ರಾಣಿಗಳಿಗೆ ಸಾಧಾರಣವಾಗಿ ಕೇಡು ಬಯಸಿ ತೊಂದರೆಕೊಡುವ ದ್ರೋಹಿಗಳೂ ಕೂಡ ವರುಣನಿಗೆ ಕೇಡನ್ನುಂಟು ಮಾಡುವುದಿಲ್ಲ. ಪಾಪಿಗಳೂ ಸಹ ಇವನನ್ನು ಮುಟ್ಟಲು ಧೈರ್ಯವಿಲ್ಲದೆ ಹಿಂದೆಗೆಯುತ್ತಾರೆ.

## English Translation.

Enemies dare not offend him (Varuna); the oppressors of men dare not harm him; and the persons of sinful nature dare not approach him.

॥ ವಿಶೇಷವಿಷಯಗಳು ॥

**ದಿಪ್ಸವಃ—ದನ್ಭು ದಂಭೇ । ಹಿಂಸಿತುಮಿಚ್ಛಂತೋ ವೈರಿಣಃ ।** ಜನರನ್ನು ಹಿಂಸಿಸುವುದೇ ಸ್ವಭಾವವಾಗಿ ವುಳ್ಳ ಶತ್ರುಗಳು ಅಥವಾ ದುಷ್ಟರು.

**ನ ದಿಪ್ಸಂತಿ—** ಹಿಂಸೆಮಾಡಲಿಚ್ಛಿಸುವುದಿಲ್ಲ.

**ದ್ರುಹ್ವಾಣಃ—ದ್ರುಹ ಜಿಘಾಂಸಾಯಾಂ ।** ಹಿಂಸೆಮಾಡುವ ದುಷ್ಟಜನರು.

**ಅಭಿಮಾತಯಃ—ಪಾಪ್ಮಾನಃ ।** ಪಾಪಿಷ್ಠರು, ಕೆಟ್ಟಕೆಲಸಗಳನ್ನು ಮಾಡುವ ನೀಚಜನರು.

॥ ವ್ಯಾಕರಣಪ್ರಕ್ರಿಯಾ ॥

**ದಿಪ್ಸಂತಿ**—ದನ್ಭು ದಂಭೇ ಧಾತು. **'ಧಾತೋಃ ಕರ್ಮಣಃ-'** (ಪಾ. ಸೂ. ೩-೧-೭) ಸೂತ್ರದಿಂದ ಇಚ್ಛಾರ್ಥದಲ್ಲಿ ಸನ್ ಬರುತ್ತದೆ. ದಂಭ್+ಸ, ಎಂದಿರವಾಗ ವಲಾದಿಯಾದುದರಿಂದ ಇಡಾಗಮವು ಪ್ರಾಪ್ತವಾದರೆ **'ಸನೀವಂತರ್ಧ-'** (ಪಾ. ಸೂ. ೭-೨-೪೯) ಎಂಬುದರಿಂದ ಇಟ್ ನಿಷೇಧ ಬರುತ್ತದೆ. **'ಸನ್ಯಙೋಃ'** (ಪಾ. ಸೂ. ೬-೧-೯) ಎಂಬುದರಿಂದ ಸನ್ ಪರದಲ್ಲಿರುವಾಗ ಧಾತುವಿಗೆ ದ್ವಿತ್ವ ಬರುತ್ತದೆ. **'ಅತ್ರ ಲೋಪೋಽಭ್ಯಾಸಸ್ಯ'** (ಪಾ. ಸೂ. ೭-೪-೫೮) ಎಂಬುದರಿಂದ ಅಭ್ಯಾಸಕ್ಕೆ (ಸಂಪೂರ್ಣ) ಲೋಪ ಬರುತ್ತದೆ. **'ದಂಭ ಇಚ್ಚ'** (ಪಾ. ಸೂ. ೭-೪-೫೬) ಎಂಬುದರಿಂದ ಸಾದಿ ಸನ್ ಪರದಲ್ಲಿರುವುದರಿಂದ ದಂಭು ಧಾತುವಿನ ಅಚ್ಚಿಗೆ ಇತ್ವವು ಬರುತ್ತದೆ. **'ಹಲಂತಾಚ್ಚ'** (ಪಾ. ಸೂ. ೧-೨-೧೦) ಇಕ್ ಸಮೀಪದಲ್ಲಿರುವ ಹಲ್ಲಿನ ಪರದಲ್ಲಿರುವ ಝಲಾದಿಯಾದ ಸನ್ ಕಿತ್ತಾಗುತ್ತದೆ ಎಂಬಲ್ಲಿ ಹಲ್ ಪದದಿಂದ ಜಾತಿಗ್ರಹಣವನ್ನು ಸ್ವೀಕರಿಸಬೇಕು ಎಂದು ವಚನವಿರುವುದರಿಂದ ಇಲ್ಲಿ ಇಕಾರದ ಪರದಲ್ಲಿ ನಕಾರ ಭಕಾರಗಳು ಇದ್ದರೂ ಜಾತಿಗ್ರಹಣದಿಂದ ದೋಷವಿಲ್ಲ. ಆದುದರಿಂದ ಸನ್ನಿಗೆ ಕಿತ್ವವು ಬರುತ್ತದೆ. ಆಗ **'ಅನಿದಿತಾಂ ಹಲ ಉ-'** (ಪಾ. ಸೂ ೬-೪-೨೪) ಎಂಬ ಸೂತ್ರದಿಂದ ಕಿತ್ ಪ್ರತ್ಯಯ ಪರದಲ್ಲಿರುವುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ ಬರುತ್ತದೆ. ದಿಭ್+ಸ ಎಂದಿರುವಾಗ ಚರ್ತ್ವದಿಂದ ಭಕಾರಕ್ಕೆ ಪಕಾರ ಬರುತ್ತದೆ. ಲಟ್ ಬಹುವಚನದಲ್ಲಿ ಝಿಗೆ ಅಂತಾದೇಶ ಬರುತ್ತದೆ. ಶಪ್ ವಿಕರಣ ಬರುತ್ತದೆ. ಪರದ ಅಕಾರಕ್ಕೆ ಪರರೂಪ ಬರುತ್ತದೆ. ದಿಪ್ಸಂತಿ ಎಂದು ರೂಪವಾಗುತ್ತದೆ. ಸಕಾರ ಪರದಲ್ಲಿರುವುದರಿಂದ ಭಕಾರ ಇರುವ ಅವಸ್ಥೆಯಲ್ಲಿ **'ಏಕಾಚೋ ಬಶೋ-'** (ಪಾ. ಸೂ. ೮-೨-೩೭) ಎಂಬುದರಿಂದ ವಾಸ್ತವವಾಗಿ ದಕಾರಕ್ಕೆ ಧಕಾರಾದೇಶವು ಬರಬೇಕಾಗುತ್ತದೆ. ಆದರೆ ಛಂದಸ್ಸಿನಲ್ಲಿ ಎಲ್ಲಾ ಕಾರ್ಯಗಳೂ ವಿಕಲ್ಪವೆಂದು ಸ್ವೀಕರಿಸುವುದರಿಂದ ಭಷ್ ಭಾವವು ಬರುವುದಿಲ್ಲ. ಇಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ತಿಙ್ ಲಸಾರ್ವಧಾತುಕವಾದುದರಿಂದ **'ತಾಸ್ಯನುದಾತ್ತೇತ್-'** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುತ್ತದೆ. ಸನ್ ನಿತ್ತಾದುದರಿಂದ ಆದ್ಯುದಾತ್ತ ಸ್ವರವು ಬರುತ್ತದೆ. ಪೂರ್ವದಲ್ಲಿ ಯಂ ಎಂದು ಯಚ್ಛಬ್ದಸಂಬಂಧವಿರುವುದರಿಂದ **'ಯದ್ವೃತ್ತಯೋಗಾನ್ನಿತ್ಯಂ'** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ದಿಪ್ಸವಃ**—ಸನ್ನಂತವಾದ ಪೂರ್ವೋಕ್ತ ದಂಭು ಧಾತುವಿಗೆ **'ಸನಾಶಂಸ ಭಿಕ್ಷ ಉಃ'** (ಪಾ. ಸೂ. ೩-೨-೧೬೮) ಎಂಬುದರಿಂದ ಉ ಪ್ರತ್ಯಯ ಬರುತ್ತದೆ. ಉ ಪರದಲ್ಲಿರುವಾಗ **'ಅತೋಲೋಪಃ'** (ಪಾ. ಸೂ. ೬-೪-೪೮) ಎಂಬುದರಿಂದ ಸನ್ನಿನ ಅಕಾರಕ್ಕೆ ಲೋಪ ಬರುತ್ತದೆ. ಪ್ರಥಮಾ ಬಹುವಚನದಲ್ಲಿ ದಿಪ್ಸವಃ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ದ್ರುಹ್ವಾಣಃ**—ದ್ರುಹ ಜಿಘಾಂಸಾಯಾಂ ಧಾತು. ದಿವಾದಿ. **'ಅನ್ಯೇಭ್ಯೋಽಪಿ ದೃಶ್ಯತೇ'** ಎಂಬುದರಿಂದ ಕ್ವನಿಪ್ ಪ್ರತ್ಯಯ ಬರುತ್ತದೆ. ದ್ರುಹ್ವನ್ ಎಂದು ನಾಂತಪದವಾಗುತ್ತದೆ ಬಹುವಚನದಲ್ಲಿ **'ಸರ್ವನಾಮಸ್ಥಾನೇಚಾಸಂಬುದ್ಧೌ'** (ಪಾ. ಸೂ. ೬-೪-೮) ಎಂಬುದರಿಂದ ದೀರ್ಘ ಬರುತ್ತದೆ. **'ಅಟ್‌ಕುಪ್ವಾಙ್-'** (ಪಾ. ಸೂ. ೮-೪-೨) ಸೂತ್ರದಿಂದ ಣತ್ವ ಬಂದರೆ ದ್ರುಹ್ವಾಣಃ ಎಂದು ರೂಪವಾಗುತ್ತದೆ. ಪ್ರತ್ಯಯವು ಪಿತ್ತಾದುದ

ರಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತ ಸ್ವರವೇ ಉಳಿಯುತ್ತದೆ. ದ್ರುಹ್ವಾಣಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

॥ ಸಂಹಿತಾಪಾಠಃ ॥

ಉತ ಯೋ ಮಾನುಷೇಷ್ವಾ ಯಶಶ್ಚಕ್ರೇ ಅಸಾಮ್ಯಾ ।
ಅಸ್ಮಾಕಮುದರೇಷ್ವಾ ॥ ೧೫ ॥

॥ ಪದಪಾಠಃ ॥

ಉತ । ಯಃ । ಮಾನುಷೇಷು । ಆ । ಯಶಃ । ಚಕ್ರೇ । ಅಸಾಮಿ । ಆ ।
ಅಸ್ಮಾಕಂ । ಉದರೇಷು । ಆ ॥ ೧೫ ॥

॥ ಸಾಯಣಭಾಷ್ಯಂ ॥

**ಉತಾಪಿ ಚ ಯೋ ವರುಣೋ ಮಾನುಷೇಷು ಯಶೋಽನ್ನಮಾ ಚಕ್ರೇ ಸರ್ವತಃ ಕೃತವಾನ್ ಸ ವರುಣಃ ಕುರ್ವನ್ನಸ್ಮಾ ಸರ್ವತ ಅಸಾಮಿ । ಸಂಪೂರ್ಣಂ ಚಕ್ರೇ ನ ತು ನ್ಯೂನಂ ಕೃತವಾನ್ । ವಿಶೇಷತೋಽಸ್ಮಾಕಮುದರೇಷ್ವಾ ಸರ್ವತಶ್ಚಕ್ರೇ ॥ ಮಾನುಷೇಷು । ಮನೋರ್ಜಾತಾವಞ್ಯತೌ ಷುಕ್ ಚ । ಪಾ. ೪-೧-೧೬೧ । ಇತ್ಯಞ್ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ಚಕ್ರೇ । ಪ್ರತ್ಯಯಸ್ವರಃ । ಅಸಾಮಿ । ಅವ್ಯಯೇ ನಞ್‌ಕುನಿಪಾತಾನಾಮಿತಿ ವಕ್ತವ್ಯಂ । ಪಾ. ೬-೨-೨-೩ । ಇತ್ಯವ್ಯಯಪೂರ್ವ-ಪದಪ್ರಕೃತಿಸ್ವರತ್ವಂ । ಯಶಃ । ಅಶೇರ್ಯುಟ್ಚ । ಉ. ೪-೧೯೦ । ಇತ್ಯಸುನ್ । ಉದರೇಷು । ಉದಿ ದೃಣಾತೇರಜಲೌ ಪೂರ್ವಪದಾಂತ್ಯಲೋಪಶ್ಚ । ಉ. ೫-೧೯ । ಇತ್ಯಲ್ । ಲಿತ್ಸ್ವರಃ । ಗತಿಕಾರಕೋಪ-ಪದಾದಿತ್ಯುತ್ತರಪದಪ್ರಕೃತಿಸ್ವರತ್ವಂ ॥ ೧೪ ॥**

॥ ಪ್ರತಿಪದಾರ್ಥ ॥

**ಉತ**—ಮತ್ತು । **ಯಃ**—ಯಾವ ವರುಣನು । **ಮಾನುಷೇಷು**—ಸಮಸ್ತ ಮಾನವರಲ್ಲೂ । **ಯಶಃ**—ಅನ್ನವನ್ನು । **ಆ ಚಕ್ರೇ**—ಎಲ್ಲರಿಗೂ ಹಂಚಿದನೋ (ಅದೇ ವರುಣನು) । **ಆ**—ಎಲ್ಲಾ ಕಡೆಯೂ । **ಅಸಾಮಿ**—ನ್ಯೂನವಿಲ್ಲದೆ ಸಂಪೂರ್ಣವಾಗಿ (ಹಂಚಿ ಅದರಲ್ಲೂ) । **ಅಸ್ಮಾಕಂ**—ನಮ್ಮ । **ಉದರೇಷು**—ಉದರಗಳಲ್ಲಿ । **ಆ (ಚಕ್ರೇ)**—ತುಂಬುವಂತೆ ಮಾಡಿದನು.

॥ ಭಾವಾರ್ಥ ॥

ವರುಣನು ಸಮಸ್ತ ಮಾನವರಿಗೂ ತೃಪ್ತಿಯಾಗುವಂತೆ ಪ್ರಭೂತವಾದ ಅನ್ನವನ್ನು ಹಂಚಿದನು. ಅದರಲ್ಲೂ ನಮ್ಮ ಉದರಗಳನ್ನು ಸಂಪೂರ್ಣವಾಗಿ ತುಂಬುವಂತೆ ಮಾಡಿದನು.

## English Translation.

(Varuna) who has distributed unlimited food to all men (and the gods) has filled our stomachs with food.

॥ ವಿಶೇಷವಿಷಯಗಳು ॥

**ಮುಖ್ಯಾಭಿಪ್ರಾಯವು**—ಯಾವ ವರುಣನು ದೇವಮನುಷ್ಯರುಗಳಿಗೆ ಸಂಪೂರ್ಣವಾಗಿ ಅನ್ನವನ್ನು ಕೊಟ್ಟನೋ ಆ ವರುಣನು ನಮ್ಮ ಉದರಗಳಲ್ಲಿಯೂ ಅನ್ನವನ್ನು ಪೂರ್ಣವಾಗುವಂತೆ ಮಾಡಿದನು. ಎಂದರೆ ನಮಗೆ ತೃಪ್ತಿಯಾಗುವಂತೆ ಅನ್ನಾದ್ಯಾಹಾರಗಳನ್ನು ಕಡಮೆಮಾಡದೆ ಯಥೇಚ್ಛವಾಗಿ ಕೊಟ್ಟನು.

**ಯಶಃ**—ಅನ್ನವು; ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಯಶಃ ಎಂಬ ಶಬ್ದವು ಪಠಿತವಾಗಿರುವುದರಿಂದ ಯಶಃ ಎಂದರೆ ಅನ್ನವು ಎಂದರ್ಥ (ನಿ. ೩-೯).

**ಅಸಾಮಿ—ಸಾಮಿ ಶಬ್ದೋಽರ್ಧವಚನಃ । ನ ಸಾಮಿ=ಅಸಾಮಿ ಸಕಲಂ, ಪ್ರಭೂತಮಿತ್ಯರ್ಥಃ ।** ಸಾಮಿಯೆಂದರೆ ಅರ್ಧವು, ಪೂರ್ತಿಯಲ್ಲದ್ದು; ಅಸಾಮಿಯೆಂದರೆ ಸಂಪೂರ್ಣವಾಗಿ, ಬಹಳವಾಗಿ ಎಂದರ್ಥವು.

**ಅಸ್ಮಾಕಂ ಉದರೇಷು ಆ (ಚಕ್ರೇ)**—ನಮ್ಮ ಉದರಗಳಲ್ಲಿ ಎಂದರೆ ನಮ್ಮ ಉದರವು ತುಂಬುವಂತೆ, ನಮಗೆ ತೃಪ್ತಿಯಾಗುವಂತೆ, ಯಥೇಚ್ಛವಾಗಿ ಅನ್ನವನ್ನು ಕೊಟ್ಟನೆಂದಭಿಪ್ರಾಯವು.

**ಮಾನುಷೇಷು—ಮನೋರ್ಜಾತಾವಞ್ಯತೌ ಷುಕ್ ಚ**—(ಪಾ. ಸೂ. ೪-೧-೧೬೧) ಎಂಬುದರಿಂದ ಜಾತಿಯು ತೋರುವಾಗ ಮನುಶಬ್ದಕ್ಕೆ ಅಞ್ ಪ್ರತ್ಯಯವು ಬರುತ್ತದೆ. ಪ್ರಕೃತಿಗೆ ಷುಕಾಗಮ ಬರುತ್ತದೆ. ಞಿತ್ತಾದುದರಿಂದ ಆದಿವೃದ್ಧಿ ಬಂದರೆ ಮಾನುಷ ಶಬ್ದವಾಗುತ್ತದೆ. ಸಪ್ತಮೀ ಬಹುವಚನದ ರೂಪ. **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಚಕ್ರೇ**—ಡುಕೃಞ್ ಕರಣೇ. ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ದ್ವಿತ್ವ, ಉರದತ್ವ, ಹಲಾದಿ ಶೇಷ, ಚುತ್ವ, ಯಣ್ ಕಾರ್ಯಗಳು ಬಂದರೆ ಚಕ್ರೇ ಎಂದು ರೂಪವಾಗುತ್ತದೆ ಪ್ರತ್ಯಯವು ಆದ್ಯುದಾತ್ತವಾಗುವುದರಿಂದ ಚಕ್ರೇ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

**ಅಸಾಮಿ**—ಅರ್ಧವಲ್ಲ. ಸಂಪೂರ್ಣ ಎಂದರ್ಥ. ನ ಸಾಮಿ ಅಸಾಮಿ. ನಞ್‌ತತ್ಪುರುಷ ಸಮಾಸ. **'ತತ್ಪುರುಷೇ ತುಲ್ಯಾರ್ಥ'** (ಪಾ. ಸೂ. ೬-೨-೨) ಎಂಬ ಸೂತ್ರದಲ್ಲಿ **'ಅವ್ಯಯೇ ನಞ್‌ಕುನಿಪಾತಾನಾಮಿತಿ**

**ವಕ್ತವ್ಯಂ'** (ಪಾ. ಸೂ. ೬-೨-೨-೩) ಎಂದು ಅವ್ಯಯ ವಿಷಯದಲ್ಲಿ ನಿಯಮ ಮಾಡಿರುವುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಆದ್ಯುದಾತ್ತವಾದ ಪದವಾಗುತ್ತದೆ.

**ಯಶಃ**—ಅಶೂ ವ್ಯಾಪ್ತೌ ಧಾತು. **'ಅಶೇರ್ಯುಟ್ ಚ'** (ಉ. ಸೂ. ೪-೬೩೦) ಎಂಬುದರಿಂದ ಅಸುನ್ ಪ್ರತ್ಯಯ ಬರುತ್ತದೆ. ಪ್ರಕೃತಿಗೆ ತತ್ಸಂನಿಯೋಗದಿಂದ ಯುಟಾಗಮ ಬರುತ್ತದೆ. ಯಕಾರವು ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಯಶಸ್ ಎಂದು ಸಾಂತಪದವಾಗುತ್ತದೆ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಉದರೇಷು**—**'ಉದಿ ದೃಣಾತೇರಜಲೌ ಪೂರ್ವಪದಾಂತ್ಯಲೋಪಶ್ಚ'** (ಉ. ಸೂ. ೫-೬೮೭) ಎಂಬುದರಿಂದ ಉತ್ ಉಪಸರ್ಗ ಪೂರ್ವದಲ್ಲಿರುವಾಗ ದೃ ಧಾತುವಿಗೆ ಅಲ್ ಪ್ರತ್ಯಯವು ಬರುತ್ತದೆ. ಉದರ ಎಂದು ರೂಪವಾಗುತ್ತದೆ. ಸಪ್ತಮೀ ಬಹುವಚನದ ರೂಪ. ಅಲ್ ಲಿತ್ತಾದುದರಿಂದ **'ಲಿತಿ'** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಗತಿ ಸಮಾಸವಾದ ಮೇಲೆ **'ಗತಿಕಾರಕೋಪಪದಾತ್ ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ. ದಕರೋತ್ತರಾಕಾರವು ಉದಾತ್ತವಾಗಿಯೇ ಇರುವುದು. ॥ ೧೫ ॥

॥ ಸಂಹಿತಾಪಾಠಃ ॥

ಪರಾ ಮೇ ಯಂತಿ ಧೀತಯೋ ಗಾವೋ ನ ಗವ್ಯೂತೀರನು ।
ಇಚ್ಛಂತೀರುರುಚಕ್ಷಸಂ ॥ ೧೬ ॥

॥ ಪದಪಾಠಃ ॥

**ಪರಾ । ಮೇ । ಯಂತಿ । ಧೀತಯಃ । ಗಾವಃ । ನ । ಗವ್ಯೂತೀಃ । ಅನು ।**
**ಇಚ್ಛಂತೀಃ । ಉರುಽಚಕ್ಷಸಂ ॥ ೧೬ ॥**

॥ ಸಾಯಣಭಾಷ್ಯಂ ॥

**ಉರುಚಕ್ಷಸಂ । ಬಹುಭಿರ್ದ್ರಷ್ಟವ್ಯಂ ವರುಣಮಿಚ್ಛಂತೀರ್ಮೇ ಧೀತಯಃ ಶುನಃಶೇಪಸ್ಯ ಬುದ್ಧಯಃ ಪರಾ ಯಂತಿ । ಪರಾಙ್ಮುಖಾ ನಿವೃತ್ತಿರಹಿತಾ ಗಚ್ಛಂತಿ । ತತ್ರ ದೃಷ್ಟಾಂತಃ । ಗಾವೋ ನ । ಯಥಾ ಗಾವೋ ಗವ್ಯೂತೀರನು ಗೋಷ್ಠಾನ್ಯನುಲಕ್ಷ್ಯ ಗಚ್ಛಂತಿ ತದ್ವತ್ ॥ ಗವ್ಯೂತೀಃ ।**

**ಗಾವೋऽತ್ರ ಯೂಯಂತ ಇತ್ಯಧಿಕರಣೇ ಕ್ತಿನ್ । ಗೋರ್ಯೂತೌ ಛಂದಸಿ । ಪಾ. ೬-೧-೭೯-೨ । ಇತ್ಯವಾದೇಶಃ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಯದ್ವಾ । ಯೂತಿರ್ಯವನಂ । ಗವಾಂ ಯವನಮತ್ರೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಇಚ್ಛಂತೀಃ । ಇಷು ಇಚ್ಛಾಯಾಂ ಲಟಃ ಶತೃ । ತುದಾದಿಭ್ಯಃ ಶಃ । ಇಷುಗಮಿಯಮಾಂ ಛಃ । ಪಾ. ೭-೩-೭೭ । ಇತಿ ಛತ್ವಂ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರಃ ಶಿಷ್ಯತೇ ॥**

॥ ಪ್ರತಿಪದಾರ್ಥ ॥

**ಗವ್ಯೂತೀಃ ಅನು**—ಹುಲ್ಲುಗಾವಲುಗಳನ್ನೇ ಗಮನದಲ್ಲಿಟ್ಟು । **ಗಾವೋ ನ**—ಹಸುಗಳು ಹಿಂತಿರುಗವಂತೆ । **ಉರುಚಕ್ಷಸಂ**—ಬಹುಜನರಿಂದ ನೋಡಲ್ಪಡುವ ವರುಣನನ್ನು । **ಇಚ್ಛಂತೀಃ**—ಅಪೇಕ್ಷಿಸಿ । **ಮೇ**—ನನ್ನ । **ಧೀತಯಃ**—ಮನಶ್ಚಿಂತೆಗಳು । **ಪರಾ ಯಂತಿ**—(ಅವನ ಅಭಿಮುಖವಾಗಿಯೇ) ಹಿಂತಿರುಗುತ್ತವೆ.

॥ ಭಾವಾರ್ಥ ॥

ಹುಲ್ಲುಗಾವಲುಗಳನ್ನೇ ನೆನೆದು ಆಸೆಯಿಂದ ಹಸುಗಳು ಅವಕ್ಕೆ ಅಭಿಮುಖವಾಗಿಯೇ ಹಿಂತಿರುಗುವಂತೆ, ಬಹುಜನರ ಗಮನಕ್ಕೆ ಪಾತ್ರನಾದ ವರುಣನನ್ನು ಅಪೇಕ್ಷಿಸಿ ನನ್ನ ಮನಶ್ಚಿಂತೆಗಳು ಆದರದಿಂದ ಅವನ ಅಭಿಮುಖವಾಗಿಯೇ ಹಿಂತಿರುಗುತ್ತವೆ.

## English Translation.

My thoughts always turn back to him who is seen by many, as the cows return to the pastures.

॥ ವಿಶೇಷವಿಷಯಗಳು ॥

**ಮೇ ಧೀತಯಃ**—ನನ್ನ ಮನಸ್ಸು, ನನ್ನ ಆಲೋಚನೆಗಳು.

**ಪರಾ ಯಂತಿ**—ಹಿಂದಕ್ಕೆ ಹೋಗುತ್ತವೆ ಎಂದರೆ ಮತ್ತೆ ಮತ್ತೆ ವರುಣನ ವಿಷಯದಲ್ಲಿಯೇ ಪ್ರವರ್ತಿಸುತ್ತವೆ.

**ಗಾವೋ ನ ಗವ್ಯೂತೀಃ– ಗಾವೋ ಯತ್ರ ಚರಂತಿ ಸ ಭೂಪ್ರದೇಶೋ ಗವ್ಯೂತಿರಿತ್ಯುಚ್ಯತೇ ।** ಹುಲ್ಲುಮೇಯುವ ಸ್ಥಳ, ಹುಲ್ಲುಗಾವಲು, ಹಸುಗಳು ಚೆನ್ನಾಗಿ ಹುಲ್ಲು ಬೆಳೆದಿರುವ ಪ್ರದೇಶಕ್ಕೆ ಯಾರ ಪ್ರಚೋದನೆಯೂ ಇಲ್ಲದೆ ತಾವಾಗಿಯೇ ಹೋಗುವವೋ ಅದರಂತೆ ನನ್ನ ಮನಸ್ಸೂ ಕೂಡ ವರುಣನಲ್ಲಿಯೇ ನೆಲೆಸಲಿಚ್ಛಿಸುವುದು. ನನ್ನ ಮನಸ್ಸು ವರುಣನಲ್ಲಿಯೇ ಆಸಕ್ತವಾಗಿರುವುದೆಂದಭಿಪ್ರಾಯವು.

**ಉರುಚಕ್ಷಸಂ—ಬಹುಭಿರ್ದ್ರಷ್ಟವ್ಯಂ । ಬಹೂನಾಂ ದ್ರಷ್ಟಾರಂ ಬಹುದರ್ಶನಂ ವಾ ।** ಅನೇಕರಿಂದ ನೋಡಲ್ಪಡುವವನು ಅಥವಾ ಅನೇಕರನ್ನು ನೋಡುವವನು.

॥ ವ್ಯಾಕರಣಪ್ರಕ್ರಿಯಾ ॥

**ಗವ್ಯೂತಿಃ**—ಯು ಮಿಶ್ರಣಾಮಿಶ್ರಣಯೋಃ ಧಾತು ಅದಾದಿ. ಗಾವಃ ಅತ್ರ ಯೂಯಂತೆ ಇತಿ ಗವ್ಯೂತಿಃ ಅಧಿಕರಣಾರ್ಥದಲ್ಲಿ ಕ್ತಿನ್ ಪ್ರತ್ಯಯ ಬರುತ್ತದೆ. ಗೋ+ಯೂತಿಃ ಎಂದಿರುವಾಗ **'ಗೋರ್ಯೂತೌ ಛಂದಸ್ಯುಪ-ಸಂಖ್ಯಾನಮ್'** (ಪಾ. ಸೂ. ೬-೧-೭೯-೨) ಎಂಬುದರಿಂದ ಛಂದಸ್ಸಿನಲ್ಲಿ ಮಾತ್ರ ಅವಾದೇಶ ಬರುತ್ತದೆ. ಗವ್ಯೂತಿಃ ಎಂದು ರೂಪವಾಗುತ್ತದೆ. ದಾಸೀಭಾರಾದಿಯಲ್ಲಿ ಗವ್ಯೂತಿ ಶಬ್ದವನ್ನು ಪಾಠಮಾಡಿರುವುದರಿಂದ ಪೂರ್ವಪದಪ್ರಕೃತಿ ಸ್ವರವು ಬರುತ್ತದೆ. ಅಥವಾ ಯೂತಿಯೆಂದರೆ ಯವನಂ (ಸೇರುವಿಕೆ) ಎಂದರ್ಥ. ಗವಾಂ ಯುವನಂ ಅತ್ರ ಇತಿ ಗವ್ಯೂತಿಃ ಗೋವುಗಳು ಸೇರುವ ಸ್ಥಳವೆಂದರ್ಥ. ಬಹುವ್ರೀಹಿ ಸಮಾಸವಾದುದರಿಂದ **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

**ಇಚ್ಛಂತೀಃ**—ಇಷು ಇಚ್ಛಾಯಾಂ ಧಾತು. ತುದಾದಿ. ಲಟ್ಟಿಗೆ ಶತ್ರಾದೇಶ ಬರುತ್ತದೆ. **'ತುದಾದಿಭ್ಯಃ ಶಃ'** (ಪಾ. ಸೂ. ೩-೧-೭೭) ಎಂಬುದರಿಂದ ಶತೃಪರದಲ್ಲಿರುವಾಗ ಶವಿಕರಣ ಬರುತ್ತದೆ. ಶ ಪರದಲ್ಲಿರುವಾಗ **'ಇಷು-ಗಮಿಯಮಾಂ ಛಃ'** (ಪಾ. ಸೂ. ೭-೩-೭೭) ಎಂಬುದರಿಂದ ಛಾದೇಶವು ಬರುತ್ತದೆ. ಇಚ್ಛತ್ ಎಂದು ತಾಂತ ಶಬ್ದವಾಗುತ್ತದೆ. ಉಗಿತ್ತಾದುದರಿಂದ ನುಮಾಗವು ಬರುತ್ತದೆ ಸ್ತ್ರೀತ್ವ ವಿವಕ್ಷಾ ಮಾಡಿದಾಗ **'ಉಗಿತಶ್ಚ'** (ಪಾ. ಸೂ. ೪-೧-೬) ಎಂಬ ಸೂತ್ರದಿಂದ ಙೀಪ್ ಬರುತ್ತದೆ. ಶತೃ ಲಸಾರ್ವಧಾತುಕವಾದುದರಿಂದ **'ತಾಸ್ಯನು-ದಾತ್ತೇತ್'** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುತ್ತದೆ. ವಿಕರಣಸ್ವರವು ಸತಿಶಿಷ್ಟವಾಗುವುದರಿಂದ ಇಚ್ಛಂತೀಃ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ. ॥ ೧೬ ॥

---

॥ ಸಂಹಿತಾಪಾಠಃ ॥

ಸಂ ನು ವೋಚಾವಹೈ ಪುನರ್ಯತೋ ಮೇ ಮಧ್ವಾಭೃತಂ ।
ಹೋತೇವ ಕ್ಷದಸೇ ಪ್ರಿಯಂ ॥ ೧೭ ॥

॥ ಪದಪಾಠಃ ॥

**ಸಂ । ನು । ವೋಚಾವಹೈ । ಪುನಃ । ಯತಃ । ಮೇ । ಮಧು । ಆऽಭೃತಂ ।**
**ಹೋತಾऽಇವ । ಕ್ಷದಸೇ । ಪ್ರಿಯಂ ॥ ೧೭ ॥**

॥ ಸಾಯಣಭಾಷ್ಯಂ ॥

**ಯತೋ ಯಸ್ಮಾತ್ಕಾರಣಾನ್ಮೇ ಮಜ್ಜೀವನಾರ್ಥಂ ಮಧುರಂ ಹವಿರಾಭೃತಂ ಅಂಜಃಸವಾಖ್ಯೇ ಕರ್ಮಣಿ ಸಂಪಾದಿತಂ ಅತಃ ಕಾರಣಾದ್ಧೋತೇವ ಹೋಮಕರ್ತೇವ ತ್ವಮಪಿ ಪ್ರಿಯಂ ಹವಿಃ ಕ್ಷದಸೇ। ಅಶ್ನಾಸಿ। ಪುನರ್ಹವಿಃಸ್ವೀಕಾರಾದೂರ್ಧ್ವಂ ತೃಪ್ತಸ್ತ್ವಂ ಜೀವನ್ನಹಂ ಚ ನು ಅವಶ್ಯಂ ಸಂ ವೋಚಾವಹೈ। ಸಂಭೂಯ ಪ್ರಿಯವಾರ್ತಾಂ ಕರವಾವಹೈ॥ ವೋಚಾವಹೈ। ಲೋಡರ್ಥೇ ಛಾಂದಸೇ ಲುಙಿ ಬ್ರುವೋ ವಚಿಃ। ಅಸ್ಯತಿವಕ್ತೀತಿ ಚ್ಲೇರಙಾದೇಶಃ। ವಚ ಉಮಿತ್ಯುಮಾಗಮೇ ಗುಣಃ। ವ್ಯತ್ಯಯೇನ ಟೇರೈತ್ವಂ। ಯದ್ವಾ। ಲೋಟ ಏವ ಲುಙಾದೇಶಃ। ಸ್ಥಾನಿವದ್ಭಾವಾದೈತ್ವಂ। ಆಭೃತಂ। ಹೃಗ್ರಹೋರ್ಭಃ। ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ॥**

॥ ಪ್ರತಿಪದಾರ್ಥ ॥

**ಯತಃ**—ಯಾವ ಉದ್ದಿಶ್ಯದಿಂದ (ಅಂದರೆ)। **ಮೇ**—ನನ್ನ (ಜೀವಿತಕ್ಕಾಗಿ)। **ಮಧು**—ಮಧುರವಾದ ಹವಿಸ್ಸು। **ಆ ಭೃತಂ**—ಸಂಪಾದಿತವಾಗಿದೆಯೋ। **ಅತಃ**—(ಆ ಉದ್ದಿಶ್ಯದಿಂದಲೇ)। **ಹೋತೇವ**—ಹೋಮಕರ್ತನಂತೆ (ನೀನೂ ಸಹ)। **ಪ್ರಿಯಂ**—ಇಷ್ಟವಾದ ಹವಿಸ್ಸನ್ನು। **ಕ್ಷದಸೇ**—ಸೇವಿಸುತ್ತೀಯೆ। **ಪುನಃ**—ಅನಂತರ (ನೀನು ತೃಪ್ತನಾಗಿ ಮತ್ತು ನಾನು ಜೀವಿತನಾದ ಮೇಲೆ)। **ನು**—ಅವಶ್ಯವಾಗಿ। **ಸಂ ವೋಚಾವಹೈ**—ಇಬ್ಬರೂ ಒಟ್ಟಿಗೆ ಸೇರಿ ಪ್ರಿಯವಾದ ಸಂಭಾಷಣೆಯನ್ನು ಮಾಡೋಣ.

॥ ಭಾವಾರ್ಥ ॥

ನಾನು ಜೀವಿಸುವ ಉದ್ದಿಶ್ಯದಿಂದ ನಿನಗೆ ಪ್ರಿಯವಾದ ಹವಿಸ್ಸನ್ನು ಅರ್ಪಿಸಿರುವೆನು. ಆ ಉದ್ದಿಶ್ಯದಿಂದಲೇ ನೀನೂ ಸಹ ಅದನ್ನು ಇಷ್ಟವಾಗಿ ಸೇವಿಸುತ್ತೀಯೆ. ಅನಂತರ ನಾವಿಬ್ಬರೂ ಒಟ್ಟಿಗೆ ಸೇರಿ ಪ್ರಿಯಸಂಭಾಷಣೆ ಮಾಡೋಣ.

## English Translation.

Let us together declare that my offering has been prepared and that you like the sacrificer (Hotri) accept the oblation which you like.

॥ ವಿಶೇಷವಿಷಯಗಳು ॥

**ವೋಚಾವಹೈ**—ಇಲ್ಲಿ ಈ ದ್ವಿವಚನಾಂತಶಬ್ದವು, ಯಜಮಾನನಾದ ಹರಿಶ್ಚಂದ್ರರಾಜನನ್ನೂ, ಯೂಪಬದ್ಧನಾದ ಶುನಃಶೇಪನನ್ನೂ ಸೂಚಿಸುವುದು. ಏಕೆಂದರೆ ಯೂಪಬದ್ಧನಾದ ಶುನಃಶೇಪನು ತನ್ನ ಬಂಧವಿಮೋಚನೆಗಾಗಿ, ವರುಣನನ್ನು ಈ ಸೂಕ್ತದಲ್ಲಿ ಪ್ರಾರ್ಥಿಸುತ್ತಿರುವನೆಂದು ಹಿಂದೆಯೇ ಹೇಳಿರುವುದಷ್ಟೆ. ಆದುದರಿಂದ ವರುಣನನ್ನು ಪ್ರಾರ್ಥಿಸುತ್ತಿರುವ ಇಬ್ಬರಲ್ಲಿ ಶುನಃಶೇಪನೂ ಒಬ್ಬನು. ಈ ಋಕ್ಕಿನಲ್ಲಿ ಹವಿಃಪ್ರದಾನದ ವಿಷಯವು ಉಕ್ತವಾಗಿರುವುದರಿಂದ ಹವಿಃಪ್ರದಾನಮಾಡುವ ಯಜಮಾನನೇ ಎಂದರೆ ಹರಿಶ್ಚಂದ್ರರಾಜನೇ ಮತ್ತೊಬ್ಬನು. ಆದದುರಿಂದ ಶುನಃಶೇಪನು ನಾವಿಬ್ಬರೆಂದು ಹೇಳಿರುವನು.

**ಮಧು—ಮಧುರಂ ।** ಸಿಹಿಯಾದ, ರುಚಿಕರವಾದ ಹವಿಸ್ಸು ಅಥವಾ ಅನ್ನವು.

**ಹೋತೇವ—** ಹೋಮಮಾಡುವ ಯಜಮಾನನಂತೆ ನೀನೂ ಹವಿಸ್ಸನ್ನು ಭಕ್ಷಿಸು ಎಂದಭಿಪ್ರಾಯವು

**ಕ್ಷದಸೇ—ಅಶ್ನಾಸಿ ।** ಭಕ್ಷಿಸು, ತಿನ್ನು.

|| ವ್ಯಾಕರಣಪ್ರಕ್ರಿಯಾ ||

**ವೋಚಾವಹೈ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. **'ಛಂದಸಿಲುಙ್‌ಲಙ್‌ಲಿಟಃ'** (ಪಾ ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲುಙ್ ಬರುತ್ತದೆ. ಉತ್ತಮಬಹುವಚನದಲ್ಲಿ ಆತ್ಮನೇಪದದ ವಹಿಙ್ ಪ್ರತ್ಯಯ ಬರುತ್ತದೆ. **'ಬ್ರುವೋ ವಚಿಃ'** (ಪಾ. ಸೂ. ೨-೪-೫೩) ಎಂಬುದರಿಂದ ಲುಙ್ ಪರದಲ್ಲಿರುವಾಗ ಧಾತುವಿಗೆ ವಚಾದೇಶ ಬರುತ್ತದೆ. **'ಅಸ್ಯತಿ ವಕ್ತಿ ಖ್ಯಾತಿಭ್ಯೋಽಙ್'** (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ ಬರುತ್ತದೆ. ವಚ್+ಅ+ವಹಿ ಎಂದಿರುವಾಗ **'ವಚ ಉಮ್'** (ಪಾ. ಸೂ. ೭-೪-೨೦) ಎಂಬುದರಿಂದ ಅಙ್ ಪರದಲ್ಲಿರುವಾಗ ಧಾತುವಿಗೆ ಉಮಾಗಮ ಬರುತ್ತದೆ. ಮಿತ್ತಾದುದರಿಂದ ಅಂತ್ಯಾಚಿನ ಪರದಲ್ಲಿ ಬರುತ್ತದೆ. ಗುಣಬಂದು ವೋಚ+ವಹಿ ಎಂದಿರುವಾಗ **'ಅತೋದೀರ್ಘೋಯಞಿ'** (ಪಾ. ಸೂ. ೭-೩-೧೦೧) ಎಂಬುದರಿಂದ ದೀರ್ಘ ಬರುತ್ತದೆ. ಪ್ರತ್ಯಯದ ಇಕಾರಕ್ಕೆ ಐಕಾರಾದೇಶವು ಬರುತ್ತದೆ. ಅಥವಾ ಲೋಟಿನ ಸ್ಥಾನಕ್ಕೇ ಲುಙಾದೇಶ ಬರುತ್ತದೆ ಆಗ ಸ್ಥಾನಿವದ್ಭಾವದಿಂದ ಲೋಟ್ತ್ವವು ಬರುವುದರಿಂದ **'ಏತ ಐ'** (ಪಾ ಸೂ ೩-೪-೯೩) ಎಂಬುದರಿಂದಲೇ ಐಕಾರಾದೇಶವು ಬರುತ್ತದೆ. ವೋಚಾವಹೈ ಎಂದು ರೂಪವಾಗುತ್ತದೆ.

**ಆಭೃತಮ್**—ಆಙ್ ಉಪಸರ್ಗ ಗತಿಸಂಜ್ಞೆಯೂ ಇದೆ. ಹೃಞ್ ಹರಣೇ ಧಾತು. ಕ್ತಪ್ರತ್ಯಯ ಬರುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ. **'ಗತಿರನಂತರಃ'** (ಪಾ. ಸೂ. ೬-೨-೪೯) ಕರ್ಮಾರ್ಥಕ ಕ್ತಾಂತಪದವು ಪರದಲ್ಲಿರುವಾಗ ಅವ್ಯವಹಿತಪೂರ್ವದಲ್ಲಿರುವ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತದೆ ಎಂಬುದರಿಂದ ಇಲ್ಲಿ ಗತಿಯು ಉದಾತ್ತಸ್ವರವೇ ಉಳಿಯುತ್ತದೆ. ಆಭೃತಂ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ಧಾತುವಿನ ಹಕಾರಕೆ **'ಹೃಗ್ರಹೋರ್ಭಃ ಛಂದಸಿ'** ಎಂಬುದರಿಂದ ಭತ್ವವು ಬರುತ್ತದೆ ಆಭೃತಂ ಎಂದು ರೂಪವಾಗುತ್ತದೆ. || ೧೭ ||

---

|| ಸಂಹಿತಾಪಾಠಃ ||

ದರ್ಶಂ ನು ವಿಶ್ವದರ್ಶತಂ ದರ್ಶಂ ರಥಮಧಿ ಕ್ಷಮಿ ।

ಏತಾ ಜುಷತ ಮೇ ಗಿರಃ || ೧೮ ||

॥ ಪದಪಾಠಃ ॥

ದರ್ಶಂ । ನು । ವಿಶ್ವಽದರ್ಶತಂ । ದರ್ಶಂ । ರಥಂ । ಅಧಿ । ಕ್ಷಮಿ ।

ಏತಾಃ । ಜುಷತ । ಮೇ । ಗಿರಃ ॥ ೧೮ ॥

॥ ಸಾಯಣಭಾಷ್ಯಂ ॥

ವಿಶ್ವದರ್ಶತಂ ಸರ್ವೈರ್ದರ್ಶನೀಯಮಸ್ಮದನುಗ್ರಹಾರ್ಥಮತ್ರಾವಿರ್ಭೂತಂ ವರುಣಂ ದರ್ಶಂ ನು । ಅಹಂ ದೃಷ್ಟವಾನ್ಖಲು । ಕ್ಷಮಿ ಕ್ಷಮಾಯಾಂ ಭೂಮೌ ರಥಂ ವರುಣಸಂಬಂಧಿನಮಧಿ ದರ್ಶಂ। ಆಧಿಕ್ಯೇನ ದೃಷ್ಟವಾನಸ್ಮಿ । ಏತಾ ಉಚ್ಯಮಾನಾ ಮೇ ಗಿರೋ ಮದೀಯಾಃ ಸ್ತುತೀರ್ಜುಷತ । ವರುಣಃ ಸೇವಿತವಾನ್ ॥ ದರ್ಶಂ । ದೃಶೇರಿರಿತೋ ವಾ । ಪಾ. ೩-೧-೫೭ । ಇತಿ ಚ್ಲೇರಙಾದೇಶಃ । ಋದೃಶೋಽಙಿ ಗುಣಃ । ಪಾ. ೭-೪-೧೬ । ಇತಿ ಗುಣಃ । ವಿಶ್ವದರ್ಶತಂ । ದೃಶೇರ್ಭೃವೃದೃಶೀತ್ಯಾದಿನಾ । ಉ. ೩-೧೧೯ । ಅತಚ್‌ಪ್ರತ್ಯಯಾಂತೋ ದರ್ಶತಶಬ್ದಃ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಪಾ. ೬-೨-೧೦೬-೨ । ಯದ್ವಾ । ವಿಶ್ವಂ ದರ್ಶನೀಯಮಸ್ಯೇತಿ ಬಹುವ್ರೀಹಿಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ಕ್ಷಮಿ । ಆತೋ ಧಾತೋಃ । ಪಾ. ೬-೪-೧೪೦ । ಇತ್ಯತ್ರಾತ ಇತಿ ಯೋಗವಿಭಾಗಾದಾಕಾರ ಲೋಪಃ ॥

॥ ಪ್ರತಿಪದಾರ್ಥ ॥

**ವಿಶ್ವದರ್ಶತಂ**—ಎಲ್ಲರಿಂದಲೂ ಹರ್ಷದಿಂದ ನೋಡಲ್ಪಡುವ ವರುಣನನ್ನು । **ದರ್ಶಂ ನು**—ನಾನು ನೋಡಿಯೇ ನೋಡಿದೆನು । **ಕ್ಷಮಿ**—ಭೂಮಿಯ ಮೇಲೆ । **ರಥಂ**—ವರುಣನ ರಥವನ್ನು । **ಅಧಿ ದರ್ಶಂ**—ಚೆನ್ನಾಗಿ ನೋಡಿದೆನು । **ಏತಾಃ ಮೇ ಗಿರಃ**—ನಾನು ಉಚ್ಚರಿಸುವ ಈ ಸ್ತುತಿವಾಕ್ಯಗಳನ್ನು । **ಜುಷತ**—ವರುಣನು ಸ್ವೀಕರಿಸಿ ಸೇವಿಸಿದ್ದಾನೆ.

॥ ಭಾವಾರ್ಥ ॥

ನಮ್ಮೆಲ್ಲರಿಗೂ ಅನುಗ್ರಹಮಾಡುವುದಕ್ಕಾಗಿ ಗೋಚರನಾಗಿ ಎಲ್ಲರಿಗೂ ಹರ್ಷಜನಕನಾದ ವರುಣನನ್ನು ನಾನು ನೋಡಿಯೇ ಇದ್ದೇನೆ. ಭೂಮಿಯ ಮೇಲೆ ಅವನ ರಥವನ್ನೂ ಸಹ ನೋಡಿದ್ದೇನೆ. ನಾನು ಉಚ್ಚರಿಸುವ ಈ ಸ್ತುತಿವಾಕ್ಯಗಳನ್ನು ವರುಣನು ಸ್ವೀಕರಿಸಿ ಸೇವಿಸಿದ್ದಾನೆ.

## English Translation.

I have seen him whom all love to see; I have seen his chariot upon earth; he has accepted these my praises.

॥ ವಿಶೇಷವಿಷಯಗಳು ॥

**ವಿಶ್ವದರ್ಶತಂ – ಸರ್ವೈರ್ದರ್ಶನೀಯಮಸ್ಮದನುಗ್ರಹಾರ್ಥಮತ್ರಾವಿರ್ಭೂತಂ ವರುಣಂ ।** ನಮ್ಮ ಅನುಗ್ರಹಾರ್ಥವಾಗಿ ಈ ಯಜ್ಞಭೂಮಿಯಲ್ಲಿ ಪ್ರತ್ಯಕ್ಷನಾಗಿ ಸರ್ವರಿಂದಲೂ ನೋಡಲ್ಪಡುವ ವರುಣನನ್ನು

**ದರ್ಶಂ ನು**—ನಾನು ನೋಡಿಯೇ ನೋಡಿದೆನು.

**ಅಧಿ—ಆಧಿಕ್ಯೇನ ।** ಚೆನ್ನಾಗಿ ನೋಡಿದೆನು.

**ಏತಾಃ ಜುಷತ ಮೇ ಗಿರಃ—**ನನ್ನ ಸ್ತೋತ್ರರೂಪವಾದ ಈ ವಾಕ್ಯಗಳನ್ನು ವರುಣನು ಸೇವಿಸಲಿ ಎಂದರೆ ವರುಣನು ಸ್ವೀಕರಿಸಿ (ಕೇಳಿ) ಅದರಿಂದ ತೃಪ್ತನಾಗಲಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ದರ್ಶಮ್**—ದೃಶಿರ್ ಪ್ರೇಕ್ಷಣೇ ಧಾತು. ಭ್ವಾದಿ. ಲುಙ್ ಉತ್ತಮಪುರುಷ ಏಕವಚನ ಪರದಲ್ಲಿರುವಾಗ **'ಇರಿತೋ ವಾ'** (ಪಾ. ಸೂ. ೩-೧-೫೭) ಎಂಬುದರಿಂದ ಧಾತುವಿನಲ್ಲಿ ಇರಿತ್ತಾದುದರಿಂದ ಚ್ಲಿಗೆ ಅಙ್ ಬರುತ್ತದೆ. ಅಙ್ ಪರದಲ್ಲಿರುವಾಗ **'ಋದೃಶೋಽಙಿ ಗುಣಃ'** (ಪಾ. ಸೂ. ೭-೪-೧೬) ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ ಬರುತ್ತದೆ. **'ಬಹುಲಂ ಛಂದಸ್ಯಮಾಙ್ಯೋಗೇಽಪಿ'** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ದರ್ಶಮ್ ಎಂದು ರೂಪವಾಗುತ್ತದೆ.

**ವಿಶ್ವದರ್ಶತಮ್—**ಪೂರ್ವೋಕ್ತವಾದ ಧಾತುವಿಗೆ **'ಭೃಮೃದೃಶಿ'** (ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ ಬರುತ್ತದೆ. ಅತಚ್ ಪರದಲ್ಲಿರುವಾಗ ಧಾತುವಿಗೆ ಗುಣ ಬಂದರೆ ದರ್ಶತ ಎಂದು ರೂಪವಾಗುತ್ತದೆ. ಇದು ಮರುದ್ವೃಧಾದಿಯಲ್ಲಿ ಪಠಿತವಾದುದರಿಂದ ಅವುಗಳಿಗೆ ಪೂರ್ವಪದಾಂತೋದಾತ್ತ ಸ್ವರವನ್ನು ವಿಧಿಸಿರುವುದರಿಂದ (ಪಾ. ಸೂ. ೬-೨-೧೦೬-೨) ಇಲ್ಲಿ ಪೂರ್ವಪದಾಂತ ಸ್ವರವು ಬರುತ್ತದೆ. ಅಥವಾ **'ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ'** (ಪಾ. ಸೂ ೬-೨-೧೦೬) ಎಂಬುದರಿಂದಲೇ ಇಲ್ಲಿ ಪೂರ್ವಪದಾಂತೋದಾತ್ತಸ್ವರವು ಬರುತ್ತದೆ. ಆಗ ವಿಶ್ವಂ ದರ್ಶತಂ ದರ್ಶನೀಯಂ ಅಸ್ಯ ಇತಿ ವಿಶ್ವದರ್ಶತಃ ಎಂದು ಬಹುವ್ರೀಹಿ ಸಮಾಸವನ್ನು ಮಾಡಬೇಕು. ಇಲ್ಲಿ ವರುಣನಿಗೆ ಸಂಜ್ಞೆಯು ತೋರುವುದರಿಂದ ಸೂತ್ರಾರ್ಥವು ಸಂಗತವಾಗುತ್ತದೆ.

**ಕ್ಷಮಿ—**ಕ್ಷಮಾ ಎಂಬುದು ಆಕಾರಾಂತ ಸ್ತ್ರೀಲಿಂಗಶಬ್ದ. ಇದಕ್ಕೆ ಸಪ್ತಮೀ ಏಕವಚನ ಪರದಲ್ಲಿರುವಾಗ **'ಆತೋ ಧಾತೋಃ'** (ಪಾ. ಸೂ. ೬-೪-೧೪೦) ಎಂಬಲ್ಲಿ ಯೋಗವಿಭಾಗದಿಂದ ಸಿದ್ಧವಾದ **ಆತಃ** ಎಂಬುದರಿಂದ ಧಾತುವಾಗದಿದ್ದರೂ ಆಕಾರಾಂತವಾದುದರಿಂದ ಅಂತ್ಯಾಕಾರಕ್ಕೆ ಲೋಪ ಬರುತ್ತದೆ. ಕ್ಷ್ಮಃ ಕ್ಷ್ಮಃ ಇತ್ಯಾದಿ ರೂಪಸಿದ್ಧಿಗೋಸ್ಕರ ಅಲ್ಲಿ ಅವಶ್ಯಯೋಗವಿಭಾಗವು ಆಶ್ರಿತವಾಗಿದೆ. ಆಲೋಪಬಂದರೆ ಕ್ಷಮಿ ಎಂದು ರೂಪವಾಗುತ್ತದೆ. ॥ ೧೮ ॥

॥ ಸಂಹಿತಾಪಾಠಃ ॥

ಇಮಂ ಮೇ ವರುಣ ಶ್ರುಧೀ ಹವಮುದ್ಯಾ ಚ ಮೃಳಯ ।
ತ್ವಾಮವಸ್ಯುರಾ ಚಕೇ ॥ ೧೯ ॥

॥ ಪದಪಾಠಃ ॥

ಇಮಂ । ಮೇ । ವರುಣ । ಶ್ರುಧಿ । ಹವಂ । ಅದ್ಯ । ಚ । ಮೃಳಯ ।
ತ್ವಾಂ । ಅವಸ್ಯುಃ । ಆ । ಚಕೇ ॥ ೧೯ ॥

॥ ಸಾಯಣಭಾಷ್ಯಂ ॥

ವರುಣಪ್ರಘಾಸೇಷ್ವಿಮಂ ಮೇ ವರುಣೇತಿ ವಾರುಣಸ್ಯ ಹವಿಷೋಽನುವಾಕ್ಯಾ । ಪಂಚಮ್ಯಾಂ ಪೌರ್ಣಮಾಸ್ಯಾಮಿತಿ ಖಂಡೇ ಸೂತ್ರಿತಂ । ಇಮಂ ಮೇ ವರುಣ ಶ್ರುಧಿ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಃ । ಆ. ೨-೧೭ । ಇತಿ ॥

ಹೇ ವರುಣ ಮೇ ಮದೀಯಮಿಮಂ ಹವಮಾಹ್ವಾನಂ ಶ್ರುಧಿ । ಶೃಣು । ಕಿಂಚ ಅದ್ಯಾಸ್ಮಿನ್ನಿನೇ ಮೃಳಯ । ಅಸ್ಮಾನ್ಸುಖಯ । ಅವಸ್ಯುಃ । ರಕ್ಷಣೇಚ್ಛುರಹಂ ತ್ವಾಂ ವರುಣಮಾಭಿಮುಖ್ಯೇನ ಚಕೇ । ಶಬ್ದಯಾಮಿ ।ಸ್ತೌಮೀತ್ಯರ್ಥಃ ॥ ಶ್ರುಧಿ । ಶ್ರು ಶ್ರವಣೇ । ಲೋಟೋ ಹಿಃ । ಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘಃ । ಅವಸ್ಯುಃ । ಅವಸ್ಶಬ್ದಾತ್ಸುಪ ಆತ್ಮನಃ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಆ ಚಕೇ । ಕೈ ಗೈ ಶಬ್ದೇ । ಅಸ್ಮಾಲ್ಲಿಟ್ಯಾದೇಚಃ । ಪಾ. ೬-೧-೪೫ । ಇತ್ಯಾತ್ವಂ । ದ್ವಿರ್ಭಾವಚುತ್ವೇ । ಆತೋ ಲೋಪ ಇಟಿ ಚ । ಪಾ. ೬-೪-೬೪ । ಇತ್ಯಾಕಾರಲೋಪಃ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಮೇ**—ನನ್ನ । **ಇಮಂ ಹವಂ**—ಈ ಆಹ್ವಾನವನ್ನು । **ಶ್ರುಧಿ**—ಕೇಳು । **ಅದ್ಯ**—ಇಂದು । **ಮೃಳಯ**—(ನಮ್ಮನ್ನು) ಸುಖಪಡಿಸು । **ಅವಸ್ಯುಃ**—ರಕ್ಷಣೆಯನ್ನಪೇಕ್ಷಿಸಿ । **ತ್ವಾಂ**—ನಿನ್ನನ್ನು । **ಚಕೇ**—ಬೇಡಿಕೊಳ್ಳುತ್ತೇನೆ (ಅಪೇಕ್ಷಿಸುತ್ತೇನೆ).

॥ ಭಾವಾರ್ಥ ॥

ಎಲೈ ವರುಣನೇ, ನನ್ನ ಈ ಆಹ್ವಾನವನ್ನು ಲಾಲಿಸು. ನಮ್ಮನ್ನೆಲ್ಲ ಇಂದು ಸುಖಪಡಿಸು. ನಮ್ಮ ರಕ್ಷಣಾರ್ಥವಾಗಿ ನಿನ್ನಲ್ಲಿ ಬೇಡಿಕೊಳ್ಳುತ್ತೇನೆ.

## English Translation

O Varuna, hear this my invocation ; make us happy to-day ; I desire your protection.

॥ ವಿಶೇಷವಿಷಯಗಳು ॥

ವರುಣಪ್ರಘಾಸವೆಂಬ ಹೋಮದಲ್ಲಿ ವರುಣಸಂಬಂಧವಾದ ಆಹುತಿಯನ್ನರ್ಪಿಸುವಾಗ **ಇಮಂ ಮೇ ವರುಣ** ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪಂಚಮ್ಯಾಂ ಪೌರ್ಣಮಾಸ್ಯಾಂ** ಎಂಬ ಖಂಡದಲ್ಲಿ **ಇಮಂ ಮೇ ವರುಣ ಶ್ರುಧಿ** (ಋ. ಸಂ. ೧-೨೫-೧೯) **ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಃ** (ಋ. ಸಂ. ೧-೨೪-೧೧) ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು (ಆ. ೨-೧೭).

**ಅವಸ್ಯುಃ—ರಕ್ಷಣೇಚ್ಛುರಹಂ । ಆತ್ಮಪಾಲನಕಾಮೋಽಹಂ ।** ನನ್ನ ಬಂಧವಿಮೋಚನರೂಪವಾದ ರಕ್ಷಣೆಯನ್ನು ಅಪೇಕ್ಷಿಸುವ ನಾನು.

**ಆ ಚಕೇ—ಕೈ ಗೈ ಶಬ್ದೇ ।** ಶಬ್ದಮಾಡುವೆನು ಎಂದರೆ ಸ್ತೋತ್ರಮಾಡುವೆನು ಎಂದರ್ಥವು. ಸ್ಕಂದಸ್ವಾಮಿಯು ಈ ಶಬ್ದಕ್ಕೆ—**ಆ ಚಕೇ । ಕಾಂತಿಕರ್ಮಾಯಂ ಕಾಮಯೇ-ಪಾಲಯೇತ್ಯರ್ಥಃ**—ಎಂದರೆ ಅಪೇಕ್ಷಿಸುತ್ತೇನೆ, ಬಂಧವಿಮೋಚನೆಯನ್ನು ಅಪೇಕ್ಷಿಸುತ್ತೇನೆ. ಆದುದರಿಂದ ನನ್ನನ್ನು ಸಂರಕ್ಷಿಸು ಎಂದರ್ಥ ಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಶ್ರುಧಿ**—ಶ್ರು ಶ್ರವಣೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷದ ಏಕವಚನಕ್ಕೆ ಹಿ ಆದೇಶ ಬರುತ್ತದೆ. **'ಶ್ರುಶೃಣು ಪೃಕೃವೃಭ್ಯಶ್ಛಂದಸಿ"** (ಪಾ. ಸೂ. ೬-೪-೧೦೨) ಎಂಬುದರಿಂದ ಛಂದಸ್ಸಿನಲ್ಲಿ ಹಿಗೆ ಧಿ ಆದೇಶ ಬರುತ್ತದೆ. **'ಶ್ರುವಃ ಶೃಚ'** (ಪಾ. ಸೂ. ೩-೧-೭೪) ಎಂಬುದರಿಂದ ವಿಕರಣವು ಪ್ರಾಪ್ತವಾದರೆ **'ಬಹುಲಂ ಛಂದಸಿ'** (ಪಾ. ಸೂ. ೨-೪-೭೬) ಎಂಬುದರಿಂದ ಅದಕ್ಕೆ ಲುಕ್ ಬರುತ್ತದೆ. ಶ್ರುಧಿ ಎಂದು ರೂಪವಾಗುತ್ತದೆ. ಸಂಹಿತಾಪಾಠದಲ್ಲಿ **'ಅನ್ಯೇಷಾಮಪಿ ದೃಶ್ಯತೇ'** (ಪಾ. ಸೂ. ೬-೩-೧೩೭) ಎಂಬುದರಿಂದ ದೀರ್ಘ ಬರುತ್ತದೆ.

**ಅವಸ್ಯುಃ**—ಅವಸ್ ಶಬ್ದದ ಮೇಲೆ **'ಸುಪ ಆತ್ಮನಃ ಕ್ಯಚ್'** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ ಬರುತ್ತದೆ. **'ಸನಾದ್ಯಂತಾ ಧಾತವಃ'** (ಪಾ. ಸೂ. ೩-೧-೩೨) ಎಂಬುದರಿಂದ **ಕ್ಯಚ್** ಸನಾದಿಯಲ್ಲಿ ಸೇರಿರುವುದರಿಂದ ಧಾತುಸಂಜ್ಞೆ ಬರುತ್ತದೆ. ಅವಸ್ಯತಿ ಎಂದು ರೂಪವಾಗುತ್ತದೆ ರಕ್ಷಣೆಯನ್ನು ತನಗೆ ಇಚ್ಛಿಸುವವನು ಎಂಬರ್ಥದಲ್ಲಿ. **'ಕ್ಯಾಚ್ಛಂದಸಿ'** (ಪಾ. ಸೂ. ೩-೨-೧೭೦) ತಚ್ಛೀಲಾದಿ ಅರ್ಥವು ತೋರುತ್ತಿರುವಾಗ ಕ್ಯ ಪ್ರತ್ಯಯಾಂತವಾದುದರ ಮೇಲೆ ಉ ಪ್ರತ್ಯಯ ಬರುತ್ತದೆ ಎಂಬುದರಿಂದ ಅವಸ್ಯ ಎಂಬ ಕ್ಯಜಂತದ

ಮೇಲೆ ಉಪ್ರತ್ಯಯು ಬರುತ್ತದೆ ಅವಸ್ಯ+ಉ ಎಂದಿರುವಾಗ **'ಅತೋ ಲೋಪಃ'** (ಪಾ. ಸೂ. ೬-೪-೪೮) ಎಂಬುದರಿಂದ ಕ್ಯ ಪ್ರತ್ಯಯದ ಅಕಾರಕ್ಕೆ ಲೋಪಬರುತ್ತದೆ. ಅವಸ್ಯು ಶಬ್ದದ ಮೇಲೆ ವಿಭಕ್ತಿ ಬಂದರೆ ಅವಸ್ಯುಃ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಆ ಚಕೇ—**ಆ ಎಂಬುದು ಉಪಸರ್ಗ. ಕೈ ಗೈ ಶಬ್ದೇ ಧಾತು. ಭ್ವಾದಿ ಲಿಟ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ ಬರುತ್ತದೆ. **'ಟಿತಆತ್ಮನೇಪದಾನಾಂ ಟೇರೇ'** (ಪಾ. ಸೂ. ೩-೪-೭೯) ಎಂಬುದರಿಂದ ಅದಕ್ಕೆ ಏತ್ವ ಬರುತ್ತದೆ. **'ಆದೇಚ ಉಪದೇಶೇಽಶಿತಿ'** (ಪಾ. ಸೂ. ೬-೧-೪೫) ಎಂಬುದರಿಂದ ಉಪದೇಶಕಾಲದಲ್ಲಿ ಏಜಂತವಾದುದರಿಂದ ಲಿಟ್ ಪರದಲ್ಲಿರುವಾಗ ಧಾತುವಿಗೆ ಆತ್ವ ಬರುತ್ತದೆ. ಕಾ+ಏ, ಎಂದಿರುವಾಗ ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹ್ರಸ್ವವೂ ಚುತ್ವವೂ ಬರುತ್ತವೆ. ಚಕಾ+ಏ, ಎಂದಿರುವಾಗ, **'ಆತೋ ಲೋಪ ಇಟಿ ಚ'** (ಪಾ. ಸೂ. ೬-೪-೬೪) ಎಂಬುದರಿಂದ ಅಜಾದಿ ಆರ್ಧಧಾತುಕವು ಪರದಲ್ಲಿರುವುದರಿಂದ ಧಾತುವಿನ ಆಕಾರಕ್ಕೆ ಲೋಪ ಬರುತ್ತದೆ. ಚಕೇ ಎಂದು ರೂಪವಾಗುತ್ತದೆ. **'ತಿಙ್ಙತಿಙಃ'** (ಪಾ. ಸೂ. ೮-೧-೨೮) ಎಂಬುದರಿಂದ ಅವಸ್ಯುಃ ಎಂಬ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರವು ಬರುತ್ತದೆ. ॥ ೧೯ ॥

॥ ಸಂಹಿತಾಪಾಠಃ ॥

ತ್ವಂ ವಿಶ್ವಸ್ಯ ಮೇಧಿರ ದಿವಶ್ಚ ಗ್ಮಶ್ಚ ರಾಜಸಿ ।
ಸ ಯಾಮನಿ ಪ್ರತಿ ಶ್ರುಧಿ ॥ ೨೦ ॥

॥ ಪದಪಾಠಃ ॥

ತ್ವಂ । ವಿಶ್ವಸ್ಯ । ಮೇಧಿರ । ದಿವಃ । ಚ । ಗ್ಮಃ । ಚ । ರಾಜಸಿ ।
ಸಃ । ಯಾಮನಿ । ಪ್ರತಿ । ಶ್ರುಧಿ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಮೇಧಿರ ಮೇಧಾವಿನ್ವರುಣ ತ್ವಂ ದಿವಶ್ಚ ದ್ಯುಲೋಕಸ್ಯಾಪಿ ಗ್ಮಶ್ಚ ಭೂಲೋಕಸ್ಯಾಪಿ । ಏವಮಾತ್ಮಕಸ್ಯ ವಿಶ್ವಸ್ಯ ಸರ್ವಸ್ಯ ಜಗತೋ ಮಧ್ಯೇ ರಾಜಸಿ । ದೀಪ್ಯಸೇ । ಸ ತಾದೃಶಸ್ತ್ವಂ ಯಾಮನಿ ಕ್ಷೇಮಪ್ರಾಪಣೇಽಸ್ಮದೀಯೇ ಪ್ರತಿ ಶ್ರುಧಿ । ಪ್ರತಿಶ್ರವಣಮಾಜ್ಞಾಪನಂ ಕುರು । ರಕ್ಷಿಷ್ಯಾಮೀತಿ ಪ್ರತ್ಯುತ್ತರಂ ದೇಹೀತ್ಯರ್ಥಃ ॥ ದಿವಃ । ಊಡಿದಮಿತ್ಯಾದಿನಾ ಷಷ್ಠ್ಯಾ ಉದಾತ್ತತ್ವಂ । ಗ್ಮಃ । ಗ್ಮೇತ್ಯೇತದ್ಭೂನಾಮಸು ಪಠಿತಂ । ಆತೋ ಧಾತೋರಿತ್ಯತ್ರಾತ ಇತಿ ಯೋಗವಿಭಾಗಾದಾತೋ ಲೋಪ ಇತಿ ಪ್ರತಿಷೇಧೇಽಪಿ ವ್ಯತ್ಯಯೇನಾಕಾರಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಯಾಮನಿ । ಯಾ ಪ್ರಾಪಣೇ । ಆತೋ ಮನಿನ್ಕ್ವನಿಬ್ವನಿಪಶ್ಚೇತಿ ಮನಿನ್ । ನಿತ್ತ್ವಾದಾದ್ಯುದಾತ್ತತ್ವಂ । ಶ್ರುಧಿ । ಉಕ್ತಂ ॥

॥ ಪ್ರತಿಪದಾರ್ಥ ॥

**ಮೇಧಿರ**—ಮೇಧಾವಿಯಾದ ವರುಣನೇ । **ತ್ವಂ**—ನೀನು । **ದಿವಶ್ಚ**—ದ್ಯುಲೋಕವನ್ನೂ । **ಗ್ಮಶ್ಚ**—ಭೂಲೋಕವನ್ನೂ ಒಳಗೊಂಡ । **ವಿಶ್ವಸ್ಯ**—ಸಕಲ ಜಗತ್ತಿನ ಮಧ್ಯೆ । **ರಾಜಸಿ**—ಪ್ರಕಾಶಿಸುತ್ತೀಯೆ । **ಸಃ**—ಅಂತಹ ನೀನು (ನಮಗೆ ಸೌಭಾಗ್ಯವನ್ನುಂಟುಮಾಡುವುದರಲ್ಲಿ) । **ಯಾಮನಿ**—ನಮ್ಮ ಪ್ರಾರ್ಥನೆಗೆ । **ಪ್ರತಿ ಶ್ರುಧಿ**—ಭರವಸೆಯನ್ನು ಕೊಡು.

॥ ಭಾವಾರ್ಥ ॥

ಎಲೈ ಮೇಧಾವಿಯಾದ ವರುಣನೇ, ನೀನು ದ್ಯುಲೋಕದಲ್ಲೂ, ಭೂಲೋಕದಲ್ಲೂ ಮತ್ತು ಇವೆರಡು ಲೋಕಗಳನ್ನೂ ಒಳಗೊಂಡ ಸಕಲ ಜಗತ್ತಿನಲ್ಲೂ ಪ್ರಕಾಶಿಸುತ್ತೀಯೆ. ಅಂತಹ ನೀನು ನಮಗೆ ಸೌಭಾಗ್ಯವನ್ನುಂಟು ಮಾಡುವುದರಲ್ಲಿ ನಮಗೆ ಭರವಸೆಯನ್ನು ಕೊಡು.

## English Translation.

O Varuna, you are wise and you shine in heaven and earth ; hear my prayer and reply with a promise of prosperity.

॥ ವಿಶೇಷವಿಷಯಗಳು ॥

**ಮೇಧಿರ—ಮೇಧಾವಿನ್** । ಬುದ್ಧಿವಂತನು, ಜ್ಞಾನಿ, ತಿಳುವಳಿಕೆಯುಳ್ಳವನು. ಸ್ಕಂದಸ್ವಾಮಿಯು **ಯಜ್ಞವನ್**—ಯಜ್ಞದಲ್ಲಿ ಆರಾಧಿಸಲ್ಪಡುವವನು ಎಂದರ್ಥಮಾಡಿರುವರು.

**ಯಾಮನಿ—ಕ್ಷೇಮಪ್ರಾಪಣೇಽಸ್ಮದೀಯೇ** । ನಮ್ಮ ಕ್ಷೇಮಪ್ರಾಪ್ತಿಯಲ್ಲಿ ಅಥವಾ ಕ್ಷೇಮಪ್ರಾಪ್ತಿಗಾಗಿ ; ಸ್ಕಂದಸ್ವಾಮಿಯು ಈ ಶಬ್ದಕ್ಕೆ ಯಾಮನಿ । ಅಧಿಕರಣೇಽತ್ರ ಮನಿರ್ದ್ರಷ್ಟವ್ಯಃ । ಮೃತ್ಯುಂ ಪ್ರತಿ ಗಮ್ಯತೇ ಯಸ್ಮಿನ್ ಸ ಯಾಮಾ ಮರಣಕಾಲಃ ತತ್ರ । ಎಂದರೆ ಯಾ ಎಂಬ ಧಾತುವಿಗೆ ಹೋಗುವುದು ಎಂದರ್ಥವು. ಇಲ್ಲಿ ಹೋಗುವು ದೆಂದರೆ ಮರಣೋನ್ಮುಖನಾಗುವುದು. ಆದುದರಿಂದ ಈ ಧಾತುವಿನಿಂದ ನಿಷ್ಪನ್ನವಾದ ಯಾಮನಿ (ಈ ಶಬ್ದವು ಯಾಮನ್ ಶಬ್ದದ ಸಪ್ತಮ್ಯೇಕವಚನವು) ಎಂಬ ಶಬ್ದಕ್ಕೆ ಮರಣಕಾಲದಲ್ಲಿ ಎಂದರ್ಥವು. ಮರಣಕಾಲದಲ್ಲಿ ಇರುವ ನನಗೆ—**ಮುಂಚಾಮಿ ತ್ವಾಂ । ತ್ವಂ ನಮ್ರಿಯಸೇ**- ನಿನ್ನನ್ನು ಬಿಡಿಸುವೆನು ನೀನು ಸಾಯುವುದಿಲ್ಲ ಎಂಬ ಆಶ್ವಾಸ ವನ್ನು ನೀಡಬೇಕೆಂದು ಶುನಶ್ಶೇಪನು ವರುಣನನ್ನು ಪ್ರಾರ್ಥಿಸುವನೆಂದರ್ಥವು.

**ಪ್ರತಿ ಶ್ರುಧಿ**—ಪ್ರತಿ ಶ್ರವಣರೂಪವಾದ ವಾಕ್ಯವನ್ನು ಉಚ್ಚರಿಸು. ಎಂದರೆ **ರಕ್ಷಿಷ್ಯಾಮೀತಿ ಪ್ರತ್ಯುತ್ತರಂ ದೇಹೀತ್ಯರ್ಥಃ** । ನಾನು ಶುನಶ್ಶೇಪನಾದ ನಿನ್ನನ್ನು ಪಾಶಬಂಧನದಿಂದ ಬಿಡಿಸಿ ಸಂರಕ್ಷಿಸುವೆನೆಂದು ಪ್ರತ್ಯುತ್ತರವನ್ನು ಹೇಳು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ದಿವಃ**—ದಿವ್ ಶಬ್ದದ ಷಷ್ಠ್ಯಂತರೂಪ. **'ಊಡಿದಂಪದಾದಿ-'** (ಪಾ. ಸೂ. ೬-೧-೧೭೧) ಎಂಬುದ ರಿಂದ ಷಷ್ಠೀ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ದಿವಃ ಎಂಬುದು ಅಂತೋದಾತ್ತವಾದ ಪದವಾಗುತ್ತದೆ

**ಗ್ಮಃ**—ಗ್ಮಾ ಎಂಬುದು ಭೂಮಿಯ ಪರ್ಯಾಯ ಶಬ್ದಗಳಲ್ಲಿ ಪಠಿತವಾಗಿದೆ (ನಿ. ೧-೧-೨) ಇದಕ್ಕೆ ಷಷ್ಠೀ ಏಕವಚನ ಪರದಲ್ಲಿರುವಾಗ ಯಾಡಾಗವು ಪ್ರಾಪ್ತವಾಗುತ್ತದೆ. ಆದರೆ **'ಆತೋ ಧಾತೋಃ'** (ಪಾ. ಸೂ. ೬-೪-೧೪೦) ಎಂಬಲ್ಲಿ **'ಆತಃ'** ಎಂದು ಯೋಗವಿಭಾಗಮಾಡಿರುತ್ತಾರೆ. ಯೋಗವಿಭಾಗಮಾಡಿರುವುದರಿಂದ ಅಧಾತುವಾದರೂ ಕೆಲವು ಕಡೆಯಲ್ಲಿ ಆಕಾರಾಂತವಾದುದಕ್ಕೆ ಅಜಾದಿ ಪ್ರತ್ಯಯ ಪರದಲ್ಲಿರುವಾಗ ಲೋಪ ಬರುತ್ತದೆ. ಅದರಿಂದ ಇಲ್ಲಿ ಆಕಾರ ಲೋಪವಾದರೆ ಗ್ಮಃ ಎಂದು ರೂಪವಾಗುತ್ತದೆ. ಭಾಷ್ಯದಲ್ಲಿ ಯೋಗವಿಭಾಗವನ್ನು ಎಲ್ಲಾ ಕಡೆಯಲ್ಲಿ ಮಾಡಬಾರದೆಂದೂ, ಇಷ್ಟಸಿದ್ಧಿಗೋಸ್ಕರ ಕೆಲವು ಕಡೆಯಲ್ಲಿ ಮಾತ್ರ ಲೋಪ ಮಾಡಬೇಕೆಂದು ಹೇಳಿರುವುದರಿಂದ ಇಲ್ಲಿ ಲೋಪ ಬರುವುದಿಲ್ಲವೆಂದರೆ ವ್ಯತ್ಯಯದಿಂದ ಲೋಪವನ್ನು ಸ್ವೀಕರಿಸಬೇಕು. **'ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ'** (ಪಾ. ಸೂ. ೬-೧-೧೬೧) ಅನುದಾತ್ತವು ಪರದಲ್ಲಿರುವಾಗ ಉದಾತ್ತವು ಲೋಪವಾದರೆ ಆ ಅನುದಾತ್ತವು ಉದಾತ್ತವಾಗುತ್ತದೆ ಎಂದುದರಿಂದ ಇಲ್ಲಿ ವಿಭಕ್ತಿಗೆ ಅನುದಾತ್ತಸ್ವರವು ಇರುವುದರಿಂದ ಅದು ಪರದಲ್ಲಿರುವಾಗ ಆಕಾರ ಉದಾತ್ತವು ಲೋಪವಾದುದರಿಂದ ಉದಾತ್ತಸ್ವರವು ಬರುತ್ತದೆ.

**ಯಾಮನಿ**—ಯಾ ಪ್ರಾಪಣೇ ಧಾತು. ಅದಾದಿ. **'ಆತೋಮನಿನ್ ಕ್ವನಿಪ್ ವನಿಪಶ್ಚ'** (ಪಾ. ಸೂ. ೩-೨-೭೪) ಎಂಬುದರಿಂದ ಆದಂತ ಧಾತುವಾದುದರಿಂದ ಮನಿನ್ ಪ್ರತ್ಯಯ ಬರುತ್ತದೆ. ಯಾಮನ್ ಶಬ್ದದ ಮೇಲೆ ಸಪ್ತಮೀ ಏಕವಚನದಲ್ಲಿ ಙಿ ಪ್ರತ್ಯಯ ಬರುತ್ತದೆ. **'ವಿಭಾಷಾ ಙಿಶ್ಯೋಃ'** (ಪಾ. ಸೂ. ೬-೪-೧೩೬) ಎಂಬುದರಿಂದ ವಿಕಲ್ಪವಾಗಿ ಅಲ್ಲೋಪ ಬಂದರೆ ಯಾಮನಿ ಎಂದು ರೂಪವಾಗುತ್ತದೆ. ಮನಿನ್ ನಿತ್ತಾದುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಶ್ರುಧಿ**—ಪೂರ್ವ ಮಂತ್ರದಲ್ಲಿ (ಋ. ಸಂ. ೧-೨-೨೫-೧೯) ವ್ಯಾಖ್ಯಾತವಾಗಿದೆ. ॥ ೨೦ ॥

---

॥ ಸಂಹಿತಾಪಾಠಃ ॥

ಉದುತ್ತಮಂ ಮುಮುಗ್ಧಿ ನೋ ವಿ ಪಾಶಂ ಮಧ್ಯಮಂ ಚೃತ ।
ಅವಾಧಮಾನಿ ಜೀವಸೇ ॥ ೨೧ ॥

॥ ಪದಪಾಠಃ ॥

ಉತ್ । ಉತ್ऽತಮಂ । ಮುಮುಗ್ಧಿ । ನಃ । ವಿ । ಪಾಶಂ । ಮಧ್ಯಮಂ । ಚೃತ ।
ಅವ । ಅಧಮಾನಿ । ಜೀವಸೇ ॥ ೨೧ ॥

**ಅನುವಾದವು**—**ವಸಿಷ್ವಾ ಹಿ ಮಿಯೇಧ್ಯ** ಎಂಬುದು ಆರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. **ವಸಿಷ್ವ ದಶಾಗ್ನೇಯಂ**—ವಸಿಷ್ವ ಎಂಬ ಅಗ್ನಿದೇವತಾಕವಾದ ಸೂಕ್ತದಲ್ಲಿ ಹತ್ತು ಋಕ್ಕುಗಳಿರುವುವೆಂದು ಅನುಕ್ರಮಣಿಕೆಯಲ್ಲಿ ಹೇಳಿದೆ. ಈ ಸೂಕ್ತಕ್ಕೆ ಶುನಃಶೇಪನು ಋಷಿಯು. ಗಾಯತ್ರೀ ಛಂದಸ್ಸು. ಈ ಸೂಕ್ತ ಮುಂದಿನ ಸೂಕ್ತವೂ ಅಗ್ನಿದೇವತಾಕಗಳು. ಪ್ರಾತರನುವಾಕ ಮಂತ್ರಪಠನ ಕಾಲದಲ್ಲಿ ಅಗ್ನೇಯಕ್ರತುಸಂಬಂಧವಾದ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಎರಡು ಸೂಕ್ತಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ವಸಿಷ್ವಾ ಹೀತಿ ಸೂಕ್ತಯೋರುತ್ತಮಾಮುದ್ಧರೇತ್** ಎಂಬ ಸೂತ್ರದಿಂದ ವಿವೃತ ವಾಗಿರುವುದು. (ಆ. ೪-೧೩)

## ಸೂಕ್ತ—೨೬

॥ ಮಂಡಲ—೧ ॥ ಅನುವಾಕ—೬ ॥ ಸೂಕ್ತ—೨೬ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ—೨೦, ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ಶುನಃಶೇಪ ಆಜೀಗರ್ತಿಃ ॥

ದೇವತಾ—ಅಗ್ನಿಃ ॥

ಛಂದಃ—ಗಾಯತ್ರೀ ॥

---

॥ ಸಂಹಿತಾಪಾಠಃ ॥

ವಸಿಷ್ವಾ ಹಿ ಮಿಯೇಧ್ಯ ವಸ್ತ್ರಾಣ್ಯೂರ್ಜಾಂ ಪತೇ ।
ಸೇಮಂ ನೋ ಅಧ್ವರಂ ಯಜ ॥ ೧ ॥

॥ ಪದಪಾಠಃ ॥

ವಸಿಷ್ವ । ಹಿ । ಮಿಯೇಧ್ಯ । ವಸ್ತ್ರಾಣಿ । ಊರ್ಜಾಂ । ಪತೇ ।
ಸಃ । ಇಮಂ । ನಃ । ಅಧ್ವರಂ । ಯಜ ॥ ೧ ॥

|| ಸಾಯಣಭಾಷ್ಯಂ ||

ವರುಣೇನಾಗ್ನಿಸ್ತುತೌ ಪ್ರೇರಿತಃ ಶುನಃಶೇಪ ಏತದಾದಿಸೂಕ್ತದ್ವಯೇನಾಗ್ನಿಮಸ್ತೌತ್ । ತಥಾ ಚಾಮ್ನಾಯತೇ । ತಂ ವರುಣ ಉವಾಚಾಗ್ನಿರ್ವೈ ದೇವಾನಾಂ ಮುಖಂ ಸುಹೃದಯತಮಸ್ತಂ ನು ಸುಹ್ಯಥತ್ಸ್ತೋತ್ಸ್ಯಕ್ಷ್ಯಾಮ ಇತಿ ಸೋಽಗ್ನಿಂ ತುಷ್ಟಾವಾತ ಉತ್ತರಾಭಿರ್ದ್ವಾವಿಂಶತ್ಯಾ । ಐ. ಬ್ರಾ. ೭-೧೬ । ಇತಿ ॥ ಹೇ ಮಿಯೇಧ್ಯ ಮೇಧಸ್ಯ ಯಜ್ಞಸ್ಯ ಯೋಗ್ಯ ಊರ್ಜಾಂ ಪತೇ ಅನ್ನಾನಾಂ ಪಾಲಕಾಗ್ನೇ ವಸ್ತ್ರಾಣ್ಯಾಚ್ಛಾದಕಾನಿ ತೇಜಾಂಸಿ ವಸಿಷ್ವ । ಆಚ್ಛಾದಯ । ಪ್ರಜ್ವಲಿತಸ್ತೇಜಸಾ ಭವೇತ್ಯರ್ಥಃ । ಹಿ ಯಸ್ಮಾತ್ಪ್ರಜ್ವಲಿತಸ್ತಸ್ಮಾತ್ಸ ತಾದೃಶಸ್ತ್ವಂ ನೋಽಸ್ಮದೀಯಮಿಮಮಧ್ವರಂ ಯಜ । ನಿಷ್ಪಾದಯ ॥ ವಸಿಷ್ವ । ವಸ ಆಚ್ಛಾದನೇ । ಲೋಟಿ ಥಾಸಃ ಸೇ । ಸವಾಭ್ಯಾಂ ವಾಮೌ । ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದಾರ್ಧಧಾತುಕಸ್ಯೇಡ್ವಲಾದೇರಿತೀಡಾಗಮಃ । ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘಃ । ಮಿಯೇಧ್ಯ । ಮಕಾರೈಕಾರಯೋರ್ಮಧ್ಯ ಇಯಾಗಮಶ್ಛಾಂದಸಃ । ಊರ್ಜಾಂ ಪತೇ । ಸುಬಾಮಂತ್ರಿತ ಇತಿ ಪರಾಂಗವದ್ಭಾವಾತ್ ಷಷ್ಠ್ಯಾಮಂತ್ರಿತಸ್ಯ ಸಮುದಾಯಸ್ಯಾಷ್ಟಮಿಕೋ ನಿಘಾತಃ । ಸೇಮಂ । ಸೋಽಚಿ ಲೋಪೇಚೇತ್ಪಾದಪೂರಣಮಿತಿ ಸೋರ್ಲೋಪಃ ॥

|| ಪ್ರತಿಪದಾರ್ಥ ||

**ಮಿಯೇಧ್ಯ**—ಯಜ್ಞಯೋಗ್ಯನೂ । **ಊರ್ಜಾಂ ಪತೇ**—(ಜೀವನಾಧಾರವಾದ) ಅನ್ನರಕ್ಷಕನೂ ಆದ ಎಲೈ ಅಗ್ನಿಯೇ । **ವಸ್ತ್ರಾಣಿ**—(ತೇಜೋರೂಪದಲ್ಲಿರುವ) ಉಡುಪುಗಳನ್ನು । **ವಸಿಷ್ವ**—ಧರಿಸಿಕೊ । **ಹಿ**—ಆದ್ದರಿಂದಲೇ । **ಸಃ**—ಅಂತಹ ನೀನು । **ನಃ**—ನಮ್ಮ । **ಇಮಂ ಅಧ್ವರಂ**—ಈ ಯಜ್ಞವನ್ನು । **ಯಜ**—ನೆರವೇರಿಸು.

|| ಭಾವಾರ್ಥ ||

ಯಜ್ಞಾರ್ಹನೂ ಮತ್ತು ಜೀವನಾಧಾರವಾದ ಅನ್ನಪಾಲಕನೂ ಆದ ಎಲೈ ಅಗ್ನಿಯೇ, ತೇಜೋರೂಪದಲ್ಲಿರುವ ನಿನ್ನ ಉಡುಪುಗಳನ್ನು ಧರಿಸಿಕೊ. ಮತ್ತು ಹೀಗೆ ತೇಜಸ್ಸಿನಿಂದ ಅಲಂಕೃತನಾದ ನೀನು ನಮ್ಮ ಈ ಯಜ್ಞವನ್ನು ನೆರವೇರಿಸು.

English Translation.

(O Agni) lord of nourishment, you are being worshipped in the sacrifice; Put on your clothes (covering of light) and perform this our sacrifice.

|| ವಿಶೇಷವಿಷಯಗಳು ||

ಶುನಃಶೇಪನು ಇದುವರೆಗೂ ವರುಣನನ್ನು ಸ್ತೋತ್ರಮಾಡಲು ವರುಣನು ಪ್ರಸನ್ನನಾಗಿ ಅವನನ್ನು ಕುರಿತು-ಎಲೈ ಶುನಶ್ಶೇಪನೇ, ಅಗ್ನಿಯು ದೇವತೆಗಳಿಗೆ ಮುಖಭೂತನಾಗಿರುವನು ಎಂದರೆ ಅಗ್ನಿಯು ಮೂಲಕವಾಗಿಯೇ

ದೇವತೆಗಳು ಯಜ್ಞದಲ್ಲಿ ಹವಿಸ್ಸನ್ನು ಸ್ವೀಕಾರಮಾಡುವರು. ಆದುದರಿಂದ ನೀನು ಈಗ ಅಗ್ನಿಯನ್ನು ಸ್ತೋತ್ರಮಾಡು. ಅದರಿಂದ ನಿನ್ನ ಪಾಶವಿಮೋಚನೆಯಾಗುವುದು ಎಂದನು. ಅದರಂತೆ ಶುನಃಶೇಪನು ಈ **ವಸಿಷ್ವಾ ಹಿ ಮಿಯೇಧ್ಯ** ಎಂಬ ಸೂಕ್ತದಿಂದಲೂ ಮುಂದಿನ **ಅಶ್ವಂ ನ ತ್ವಾ ವಾರವಂತಂ** ಎಂಬ ಸೂಕ್ತದಿಂದಲೂ ಅಗ್ನಿಯನ್ನು ಸ್ತೋತ್ರ ಮಾಡುವನು. ಈ ವಿಷಯದಲ್ಲಿ—**ತಂ ವರುಣ ಉವಾಚಾಗ್ನಿರ್ವೈ ದೇವಾನಾಂ ಮುಖಂ ಸುಹೃದಯತಮಸ್ತಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸೋಽಗ್ನಿಂ ತುಷ್ಟಾವ ಉತ್ತರಾಭಿರ್ದ್ವಾವಿಂಶತ್ಯಾ** ॥ (ಐ. ಬ್ರಾ. ೭-೧೬) ಎಂದು ಐತರೇಯ ಬ್ರಾಹ್ಮಣ ವಾಕ್ಯವಿರುವುದು.

**ಮಿಯೇಧ್ಯ—ಯಜ್ಞಸ್ಯ ಯೋಗ್ಯ, ಯಜ್ಞಾರ್ಹ** । ಯಜ್ಞದಲ್ಲಿ ಆರಾಧಿಸಲ್ಪಡಲು ಯೋಗ್ಯನು.

**ವಸ್ತ್ರಾಣಿ—ಆಚ್ಛಾದಕಾನಿ ತೇಜಾಂಸಿ** । ಅಗ್ನಿಯ ವಸ್ತ್ರವೆಂದರೆ ತೇಜೋರೂಪವಾದ ಆಚ್ಛಾದನವು. ಅಗ್ನಿಯ ಸುತ್ತಲೂ ತೇಜಸ್ಸು (ಬೆಳಕು) ಹರಡಿರುವುದರಿಂದ ತೇಜಸ್ಸೆಂಬ ವಸ್ತ್ರವನ್ನು ಧರಿಸಿರುವನೆಂದು ಋಷಿಯು ಹೇಳಿರುವನು.

**ಊರ್ಜಾಂ ಪತೇ**—ಅನ್ನ ಅಥವಾ ಆಹಾರಕ್ಕೆ ಅಧಿಪತಿಯು, ಪಾಲಕನು. ಅಂಧಃ ಪಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಊರ್ಕ್ ಎಂಬ ಶಬ್ದವು ಪಠಿತವಾಗಿರುವುದರಿಂದ ಊರ್ಜಾಂ ಎಂದರೆ ಅನ್ನಾದ್ಯಾಹಾರಗಳ ಎಂದರ್ಥವು.

**ಯಜ**—ಯಜ್ಞಮಾಡು ಎಂದರೆ ನಮ್ಮ ಯಜ್ಞವನ್ನು ನಿರ್ವಹಿಸು, ಸಂಪೂರ್ಣವಾಗುವಂತೆ ಮಾಡು.

॥ ವ್ಯಾಕರಣಪ್ರಕ್ರಿಯಾ ॥

**ವಸಿಷ್ವ**—ವಸ ಆಚ್ಛಾದನೇ ಧಾತು. ಅದಾದಿ. ಇದಕ್ಕೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ ಬರುತ್ತದೆ. ಅದಕ್ಕೆ '**ಥಾಸಃ ಸೇ**' (ಪಾ. ಸೂ. ೩-೪-೮೦) ಎಂಬುದರಿಂದ ಸೇ ಆದೇಶ ಬರುತ್ತದೆ. ಸೇ ಎಂಬುದಕ್ಕೆ '**ಸವಾಭ್ಯಾಂ ವಾಮೌ**' (ಪಾ. ಸೂ. ೩-೪-೯೧) ಎಂಬುದರಿಂದ ವಕಾರವು ಅಂತಾದೇಶವಾಗಿ ಬರುತ್ತದೆ. ಸ್ವ ಎಂದು ರೂಪವಾಗುತ್ತದೆ. '**ಛಂದಸ್ಯುಭಯಥಾ**' (ಪಾ. ಸೂ. ೩-೪-೧೧೭) ಎಂಬುದರಿಂದ ಇಲ್ಲಿ ಸ್ವ ಎಂಬುದಕ್ಕೆ ಆರ್ಧಧಾತುಕಸಂಜ್ಞೆಯು ಬರುತ್ತದೆ. ಆದುದರಿಂದ '**ಆರ್ಧಧಾತುಕಸ್ಯೇಡ್ವಲಾದೇಃ**' (ಪಾ. ಸೂ. ೭-೨-೩೫) ಎಂಬುದರಿಂದ ವಲಾದಿಯಾದುದರಿಂದ ಸ್ವ ಎಂಬುದಕ್ಕೆ ಇಡಾಗಮ ಬರುತ್ತದೆ. ಆಗ ಇಕಾರದ ಪರದಲ್ಲಿ ಪ್ರತ್ಯಯದ ಸಕಾರ ಬಂದಿರುವುದರಿಂದ '**ಆದೇಶಪ್ರತ್ಯಯಯೋಃ**' (ಪಾ. ಸೂ. ೮-೩-೫೯) ಎಂಬುದರಿಂದ ಅದಕ್ಕೆ ಷತ್ವವು ಬರುತ್ತದೆ. ವಸಿಷ್ವ ಎಂದು ರೂಪವಾಗುತ್ತದೆ. ಇಲ್ಲಿ ಲಸಾರ್ವಧಾತುಕಕ್ಕೆ '**ತಾಸ್ಯನುದಾತ್ತೇತ್**' (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತೇತ್ತಾದ ಧಾತುವಿನ ಪರದಲ್ಲಿ ಬಂದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತ ಸ್ವರವೇ ಬರುತ್ತದೆ. '**ಅನ್ಯೇಷಾಮಪಿ ದೃಶ್ಯತೇ**' (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾಪಾಠದಲ್ಲಿ ಇದಕ್ಕೆ ದೀರ್ಘ ಬರುತ್ತದೆ.

**ಮಿಯೇಧ್ಯ**—ಮೇಧ ಶಬ್ದದ ಮೇಲೆ ಅರ್ಹಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಮೇಧ್ಯ ಎಂದು ಆಗುತ್ತದೆ. ಛಂದಸ್ಸಿನಲ್ಲಿ ನಿರ್ನಿಮಿತ್ತವಾಗಿ ಮಕಾರ ಮತ್ತು ಏಕಾರಗಳ ನಡುವೆ ಇಯ ಎಂಬ ಆಗಮವು ಬರುತ್ತದೆ. ಆದುದರಿಂದ ಸಂಬುದ್ಧಿಯಲ್ಲಿ ಹ್ರಸ್ವ ನಿಮಿತ್ತವಾಗಿ ಲೋಪವಾದಾಗ ಮಿಯೇಧ್ಯ ಎಂದು ರೂಪವಾಗುತ್ತದೆ.

**ಊರ್ಜಾಂ ಪತೇ**—ಪತೇ ಎಂಬುದು ಸಂಬೋಧನ ಪ್ರಥಮಾ ಏಕವಚನವಾದುದರಿಂದ ಆಮಂತ್ರಿತ ಸಂಜ್ಞೆಯನ್ನು ಹೊಂದುತ್ತದೆ. '**ಸುಬಾಮಂತ್ರಿತೇ ಪರಾಂಗವತ್ ಸ್ವರೇ**' (ಪಾ. ಸೂ. ೨-೧-೨) ಸ್ವರವಿಧಾನದಲ್ಲಿ ಆಮಂತ್ರಿತವು ಪರದಲ್ಲಿರುವಾಗ ಪೂರ್ವದಲ್ಲಿರುವ ಸುಬಂತವೂ ಆಮಂತ್ರಿತದ ಅವಯವದಂತೆಯೇ ಆಗುತ್ತದೆ ಎಂಬುದರಿಂದ ಇಲ್ಲಿ ಊರ್ಜಾಂ ಎಂಬುದೂ ಆಮಂತ್ರಿತವಾದ ಪತೇ ಎಂಬುದರ ಅವಯವೇ ಆಗುತ್ತದೆ. ಆದುದರಿಂದ '**ಆಮಂತ್ರಿತಸ್ಯ ಚ**' (ಪಾ. ಸೂ. ೮-೧-೧೯) ಎಂಬುದರಿಂದ ಸಮುದಾಯಕ್ಕೆ ಆಮಂತ್ರಿತನಿಘಾತಸ್ವರ ಬರುತ್ತದೆ.

**ಸೇಮಮ್**—ಸಸ್+ಇಮಮ್ ಎಂದಿರುತ್ತದೆ. '**ಸೋಚಿಲೋಪೇ ಚೇತ್ ಪಾದಪೂರಣಂ**' (ಪಾ. ಸೂ. ೬-೧-೧೩೪) ಸಸ್ ಎಂಬುದರ ಸು ವಿಭಕ್ತಿಗೆ ಅಚ್ ಪರದಲ್ಲಿರುವಾಗ, ಲೋಪ ಮಾಡಿದರೇ ಪಾದಪೂರ್ತಿಯಾಗುವುದು ಎಂದು ಇರುವಾಗ ಲೋಪ ಬರುತ್ತದೆ. ಇಲ್ಲಿ ಲೋಪ ಮಾಡಿದರೇ ಪಾದಪೂರ್ತಿಯಾಗುವುದರಿಂದ ಸಸ್ ಎಂಬುದರ ಸುವಿಗೆ ಲೋಪಬರುತ್ತದೆ. ಸ+ಇಮಮ್ ಎಂದಿರುವಾಗ ಗುಣಸಂಧಿ ಬಂದರೆ ಸೇಮಮ್ ಎಂದು ರೂಪವಾಗುತ್ತದೆ. ॥ ೧ ॥

---

॥ ಸಂಹಿತಾಪಾಠಃ ॥

ನಿ ನೋ ಹೋತಾ ವರೇಣ್ಯಃ ಸದಾ ಯವಿಷ್ಠ ಮನ್ಮಭಿಃ ।
ಅಗ್ನೇ ದಿವಿತ್ಮತಾ ವಚಃ ॥ ೨ ॥

॥ ಪದಪಾಠಃ ॥

ನಿ । ನಃ । ಹೋತಾ । ವರೇಣ್ಯಃ । ಸದಾ । ಯವಿಷ್ಠ । ಮನ್ಮಽಭಿಃ ।
ಅಗ್ನೇ । ದಿವಿತ್ಮತಾ । ವಚಃ ॥೨ ॥

|| ಸಾಯಣಭಾಷ್ಯಂ ||

ಸದಾ ಯವಿಷ್ಠ ಸರ್ವದಾ ಯುವತಮ ಹೇ ಅಗ್ನೇ ವರೇಣ್ಯೋ ವರಣೀಯಸ್ತ್ವಂ ನೋಽಸ್ಮಾಕಂ ಹೋತಾ ಹೋಮನಿಷ್ಪಾದಕೋ ಭೂತ್ವಾ ದಿವಿತ್ಮತಾ ದೀಪ್ತಿಮತಾ ವಚೋ ವಚಸಾ ಸ್ತೂಯಮಾನಃ ಸನ್ ನಿ ಷೀದೇತಿ ಶೇಷಃ । ಕೀದೃಶಸ್ತ್ವಂ । ಮನ್ಮಭಿರ್ಜ್ಞಾಪಕೈಸ್ತೇಜೋಭಿರ್ಯುಕ್ತ ಇತಿ ಶೇಷಃ ॥ ಯವಿಷ್ಠ । ಯುವಶಬ್ದಾದಿಷ್ಠನಿ ಸ್ಥೂಲದೂರೇತ್ಯಾದಿನಾ । ಪಾ ೬-೪-೧೫೬ । ಯಣಾದಿಪರಸ್ಯ ಲೋಪಃ । ಪೂರ್ವಸ್ಯೋಕಾರಸ್ಯ ಗುಣಶ್ಚ । ಅವಾದೇಶಃ । ಆಮಂತ್ರಿತನಿಘಾತಃ । ಮನ್ಮಭಿಃ । ಮನ ಜ್ಞಾನೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ದಿವಿತ್ಮತಾ । ದಿವು ಕ್ರೀಡಾದೌ । ಇಕ್ಶ್ತಿಪೌ ಧಾತುನಿರ್ದೇಶೇ । ಪಾ. ೩-೩-೧೦೮-೨ । ಇತೀಕ್ಪ್ರತ್ಯಯಃ । ತೇನ ಚ ಧಾತುವಾಚಿನಾ ದಿವಿಶಬ್ದೇನ ಧಾತ್ವರ್ಥೋ ದೀಪ್ತಿರ್ಲಕ್ಷ್ಯತೇ । ಯದ್ವಾ । ಔಣಾದಿಕೋ ಭಾವೇ ಕಿಪ್ರತ್ಯಯಃ ದಿವಿಶಬ್ದಾನ್ಮತುಪಿ ತಕಾರೋಪಜನಶ್ಛಾಂದಸಃ ಯದ್ವಾ । ಬಾಹುಲಕಾದ್ದಿವೇರ್ಭಾವ ಇತಕ್ । ಮತುಪಿ ತಸೌ ಮತ್ವರ್ಥ ಇತಿ ಭತ್ವಾಜ್ಜಶ್ತ್ವಾಭಾವಃ । ವಚಃ । ಸುಪಾಂ ಸುಲುಗಿತಿ ತೃತೀಯೈಕವಚನಸ್ಯ ಲುಕ್ ॥

|| ಪ್ರತಿಪದಾರ್ಥ ||

**ಸದಾ**—ಯಾವಾಗಲೂ । **ಯವಿಷ್ಠ**—ಅತ್ಯಂತ ಯುವಕನಾಗಿರತಕ್ಕ । **ಅಗ್ನೇ**—ಎಲೈ ಅಗ್ನಿಯೇ । **ವರೇಣ್ಯಃ**—(ನಮ್ಮಿಂದ) ಆರಿಸಲ್ಪಡುವವನಾಗಿ । **ಮನ್ಮಭಿಃ**—ತೇಜಸ್ಸುಗಳಿಂದ (ಪ್ರಕಾಶಿಸುತ್ತ) । **ದೀಪ್ತಿಮತಾ**—ಕಾಂತಿಯುಕ್ತವಾದ । **ವಚಃ**—(ನಮ್ಮ) ಸ್ತೋತ್ರವಾಕ್ಯಗಳಿಂದ ಸ್ತುತನಾಗಿ । **ನಃ**—ನಮಗೆ । **ಹೋತಾ**—ಹೋಮಸಂಪಾದಕನಾಗಿ । **ನಿ (ಷೀದ)**—ಕುಳಿತುಕೊ ॥

|| ಭಾವಾರ್ಥ ||

ಎಲೈ ಅಗ್ನಿಯೇ, ನೀನು ಯಾವಾಗಲೂ ಯುವಕನಾಗಿರುವೆ. ನಾವು ನಮ್ಮ ಯಜ್ಞಕರ್ಮಕ್ಕೆ ನಿನ್ನನ್ನೇ ಆರಿಸುತ್ತೇವೆ. ನೀನು ನಿನ್ನ ತೇಜಸ್ಸುಗಳಿಂದ ಬೆಳಗುತ್ತಲೂ ಮತ್ತು ನಮ್ಮ ಕಾಂತಿಯುತವಾದ ಸ್ತೋತ್ರವಾಕ್ಯಗಳಿಂದ ಸ್ತುತನಾಗಿಯೂ ನಮಗೆ ಹೋಮಸಂಪಾದಕನಾಗಿ ಇಲ್ಲಿ ಬಂದು ಕುಳಿತುಕೊ

## English Translation.

O ever youthful Agni, being praised with brilliant hymn, sit down, here, as we have selected you as our Hotri to perform the sacrifice.

|| ವಿಶೇಷವಿಷಯಗಳು ||

**ಸದಾ ಯವಿಷ್ಠ—ಸರ್ವದಾ ಯುವತಮ** । ಯಾವಾಗಲೂ ಯುವಕನಾಗಿಯೇ ಇರುವವನು. ಕಾಷ್ಠಾದಿಗಳನ್ನು ಹಾಕಿದಷ್ಟೂ, ಅಗ್ನಿಯು ಅತಿಶಯವಾಗಿ ಪ್ರಜ್ವಲಿಸುತ್ತಲೇ ಇರುವುದರಿಂದ ಸದಾ ಯುವಕನೆಂದು ಹೇಳುವರು.

**ವರೇಣ್ಯಃ—ವರಣೀಯಃ** । ಆರಿಸಲ್ಪಟ್ಟಿರುವವನು. ಯಜ್ಞನಿರ್ವಹಣೆಗಾಗಿ ಅಗ್ನಿಯನ್ನೇ ಆರಿಸಿಕೊಂಡಿರುವರು. ಅಥವಾ ಶ್ರೇಷ್ಠನಾದವನು ಎಂಬರ್ಥವನ್ನು ಬೇಕಾದರೂ ಹೇಳಬಹುದು.

**ಮನ್ಮಭಿಃ—ಮನ ಜ್ಞಾನೇ । ಜ್ಞಾಪಕೈಸ್ತೇಜೋಭಿರ್ಯುಕ್ತಃ** । ಜ್ಞಾಪಕಮಾಡುವ ಎಂದರೆ ಸ್ವಭಾವಸಿದ್ಧವಾದ ತೇಜಸ್ಸಿನಿಂದ ಯುಕ್ತನಾದವನು ಎಂದು ಭಾಷ್ಯಕಾರರು ಈ ಶಬ್ದಕ್ಕೆ ಅರ್ಥವಿವರಣೆ ಮಾಡಿರುವರು. ವೇದಾರ್ಥ ಯತ್ನಕಾರರು **ಮನ್ಮಭಿಃ—ಧ್ಯಾನೈಃ** meditations ಧ್ಯಾನಗಳಿಂದ ಎಂದರ್ಥವಮಾಡಿರುವರು. ಈ ಅರ್ಥವೂ ಇಲ್ಲಿ ಹೊಂದುವುದು.

**ದಿವಿತ್ಮತಾ—ದೀಪ್ತಿಮತಾ** । ಪ್ರಕಾಶಮಾನವಾದ ; ಈ ಶಬ್ದವು ವಚಃ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಪ್ರಕಾಶಮಾನವಾದ ವಾಕ್ಯಗಳಿಂದ ಎಂದರೆ ಶ್ರೇಷ್ಠವಾದ, ಅರ್ಥಗರ್ಭಿತವಾದ, ಪ್ರೌಢವಾದ ಇತ್ಯಾದ್ಯರ್ಥಗಳನ್ನು ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಯವಿಷ್ಠ**—ಅತಿಶಯೇನ ಯುವಾ ಯವಿಷ್ಠಃ. **'ಅತಿಶಾಯನೇ ತಮಬಿಷ್ಠನೌ'** (ಪಾ. ಸೂ. ೫-೩-೫೫) ಎಂಬುದರಿಂದ ಯುವನ್ ಶಬ್ದದ ಮೇಲೆ ಇಷ್ಠನ್ ಪ್ರತ್ಯಯ ಬರುತ್ತದೆ. **'ಸ್ಥೂಲದೂರಯುವಹ್ರಸ್ವ-'** (ಪಾ. ಸೂ. ೬-೪-೧೫೬) ಎಂಬುದರಿಂದ ಇಷ್ಠನ್ ಪರದಲ್ಲಿರುವಾಗ ಯಣಾದಿಯಾಗಿ ಪರದಲ್ಲಿರುವುದು ಲೋಪವಾಗುತ್ತದೆ. ಲೋಪವಾದಮೇಲೆ ಪೂರ್ವಕ್ಕೆ ಗುಣ ಬರುತ್ತದೆ. ವನ್ ಎಂಬುದು ಲೋಪವಾದಮೇಲೆ ಪೂರ್ವದ ಉಕಾರಕ್ಕೆ ಗುಣ ಬರುತ್ತದೆ. ಯೋ+ಬ ಇಷ್ಠ ಎಂದು ಆಗುತ್ತದೆ. **'ಏಚೋಽಯವಾಯಾವಃ'** (ಪಾ. ಸೂ. ೬-೧-೭೮) ಎಂಬುದರಿಂದ ಓಕಾರಕ್ಕೆ ಅವಾದೇಶ ಬಂದರೆ ಯವಿಷ್ಠ ಎಂದು ರೂಪವಾಗುತ್ತದೆ ಸಂಬುದ್ಧಿಯಲ್ಲಿ **'ಆಮಂತ್ರಿತಸ್ಯ ಚ'** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮನ್ಮಭಿಃ**—ಮನ ಜ್ಞಾನೇ ಧಾತು. ದಿವಾದಿ **'ಅನ್ಯೇಭ್ಯೋಽಪಿ ದೃಶ್ಯಂತೇ'** (ಪಾ. ಸೂ. ೩-೩-೧೩೦) ಎಂಬುದರಿಂದ ಮನಿನ್ ಪ್ರತ್ಯಯ ಬರುತ್ತದೆ. ಮನ್ಮನ್ ಎಂದು ನಾಂತವಾದ ಶಬ್ದವಾಗುತ್ತದೆ. ತೃತೀಯಾ ಬಹುವಚನದ ಭಿಸ್ ಪರದಲ್ಲಿರುವಾಗ ಪದಸಂಜ್ಞೆ ಇರುವುದರಿಂದ **'ನಲೋಪಃ ಪ್ರಾತಿಪದಿಕಾಂತಸ್ಯ'** ಎಂಬುದರಿಂದ ನಕಾರಕ್ಕೆ ಲೋಪಬರುತ್ತದೆ. ಅದು ಅಸಿದ್ಧವಾದುದರಿಂದ ಭಿಸ್ಸಿಗೆ ಐಸಾದೇಶ ಬರುವುದಿಲ್ಲ. ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಮನ್ಮಭಿಃ ಎಂದು ರೂಪವಾಗುತ್ತದೆ. ಮನಿನ್ ನಿತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ದಿವಿತ್ಮತಾ**—ದಿವು ಕ್ರೀಡಾದೌ ಧಾತು. ದಿವಾದಿ ಕ್ರೀಡಾ ವಿಜಿಗೀಷಾದಿ ಹತ್ತು ಅರ್ಥಗಳಲ್ಲಿ ಪಠಿತವಾಗಿದೆ. **'ಇಕ್ಶ್ತಿಪೌ ಧಾತುನಿರ್ದೇಶೇ'** (ಪಾ. ಸೂ. ೩-೩-೧೦೮-೨) ಧಾತುವನ್ನು ನಿರ್ದೇಶಿಸುವಾಗ ಅದಕ್ಕೆ ಇಕ್, ಶ್ತಿಪ್ ಎರಡು ಪ್ರತ್ಯಯಗಳು ಬರುತ್ತವೆ ಎಂಬುದರಿಂದ ಇಲ್ಲಿ ಇಕ್ ಪ್ರತ್ಯಯ ಬರುತ್ತದೆ. ದಿವಿಃ ಎಂದು ರೂಪವಾಗುತ್ತದೆ. ದಿವಿ ಎಂದರೆ ದಿವ್ ಧಾತುವೆಂದು ಅರ್ಥವಾಗುತ್ತದೆ. ಆದರೆ ಇಲ್ಲಿ ಲಕ್ಷಣಾವೃತ್ತಿಯಿಂದ ದಿವ್ ಧಾತುವಿನ ಅರ್ಥವಾದ ದೀಪ್ತಿಯನ್ನು ಸ್ವೀಕರಿಸಬೇಕು. ಆಗ ದಿವಿ ಎಂಬುದಕ್ಕೆ ದೀಪ್ತಿ ಎಂದು ಅರ್ಥವಾಗುತ್ತದೆ. ಅಥವಾ ಭಾವಾರ್ಥದಲ್ಲಿ

ಉಣಾದಿಸಿದ್ಧವಾದ ಪ್ರತ್ಯಯವನ್ನು ಹೇಳಬೇಕು. ಆಗ ಸ್ವರಸವಾಗಿ ದೀಪ್ತಿ ಎಂದು ಅರ್ಥವಾಗುತ್ತದೆ. ದಿವಿಃ ಅಸ್ಯ ಅಸ್ತಿ ಎಂಬರ್ಥದಲ್ಲಿ (ದೀಪ್ತಿಯುಳ್ಳದ್ದು) **'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್'** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ ಬರುತ್ತದೆ. ದಿವಿಮತ್ ಎಂದಿರುವಾಗ ಮಧ್ಯೆ ತಕಾರಾಗಮವು ಛಾಂದಸವಾಗಿ ಬರುತ್ತದೆ. ದಿವಿತ್ಮತ್ ಶಬ್ದದಮೇಲೆ ತೃತೀಯಾ ಏಕವಚನದಲ್ಲಿ ಟಾ ಪ್ರತ್ಯಯ ಬಂದಾಗ ದಿವಿತ್ಮತಾ ಎಂದು ರೂಪವಾಗುತ್ತದೆ. ಅಥವಾ ದಿವ್ ಧಾತುವಿನ ಮೇಲೆ ಬಹುಲಗ್ರಹಣದಿಂದ ಸಿದ್ಧವಾದ ಇತಕ್ ಪ್ರತ್ಯಯವು ಭಾವಾರ್ಥದಲ್ಲಿ ಬರುತ್ತದೆ. ದಿವಿತ್ ಶಬ್ದದಮೇಲೆ ಮತುಪ್ ಪ್ರತ್ಯಯ ಬಂದರೆ ದಿವಿತ್ಮತ್ ಎಂದು ರೂಪವಾಗುತ್ತದೆ **'ತಸೌ ಮತ್ವರ್ಥೇ'** (ಪಾ. ಸೂ. ೧-೪-೧೯) ಎಂಬುದರಿಂದ ತಾಂತಕ್ಕೆ ಭಸಂಜ್ಞೆಯನ್ನು ವಿಧಿಸಿರುವುದರಿಂದ ಪದಸಂಜ್ಞೆಯು ಇಲ್ಲದಿರುವುದರಿಂದ ಜಸ್ತ್ವವು ಬರುವುದಿಲ್ಲ ತೃತೀಯೈಕವಚನದಲ್ಲಿ ದಿವಿತ್ಮತಾ ಎಂದು ರೂಪವಾಗುತ್ತದೆ.

**ವಚಃ**—ವಚ ಪರಿಭಾಷಣೇ ಧಾತು. ಅದಾದಿ **'ಸರ್ವಧಾತುಭ್ಯೋಽಸುನ್'** (ಉ ಸೂ. ೪-೬೭೮) ಎಂಬುದರಿಂದ ಅಸುನ್ ಪ್ರತ್ಯಯ ಬರುತ್ತದೆ. ವಚಸ್ ಎಂದು ಸಾಂತಪದವಾಗುತ್ತದೆ. ತೃತೀಯಾ ಏಕವಚನ ವಿವಕ್ಷಾಮಾಡಿದಾಗ **'ಸುಪಾಂ ಸುಲುಕ್'** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್ ಬರುತ್ತದೆ. ವಚಃ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೨ ॥

---

॥ ಸಂಹಿತಾಪಾಠಃ ॥

ಆ ಹಿ ಷ್ಮಾ ಸೂನವೇ ಪಿತಾಪಿರ್ಯಜತ್ಯಾಪಯೇ ।
ಸಖಾ ಸಖ್ಯೇ ವರೇಣ್ಯಃ ॥ ೩ ॥

॥ ಪದಪಾಠಃ ॥

ಆ । ಹಿ । ಸ್ಮ । ಸೂನವೇ । ಪಿತಾ । ಆಪಿಃ । ಯಜತಿ । ಆಪಯೇ ।
ಸಖಾ । ಸಖ್ಯೇ । ವರೇಣ್ಯಃ ॥ ೩ ॥

॥ ಸಾಯಣ ಭಾಷ್ಯಂ ॥

**ಹೇ ಅಗ್ನೇ ವರೇಣ್ಯೋ ವರಣೀಯಃ ಪಿತಾಪಿ ಪಿತೃಸ್ಥಾನೀಯಸ್ತ್ವಂ ಸೂನವೇ ಪುತ್ರಸ್ಥಾನೀಯಾಯ ಮಹ್ಯಮಭೀಷ್ಟಂ ದೇಹೀತಿ ಶೇಷಃ । ಹಿ ಷ್ಮೇತಿ ನಿಪಾತದ್ವಯಂ ಸರ್ವಥೇತ್ಯಮುಮರ್ಥಮಾಚಷ್ಟೇ । ಅಭೀಷ್ಟದಾನೇ ದೃಷ್ಟಾಂತದ್ವಯಮುಚ್ಯತೇ । ಯಥಾಪಿರ್ಬಂಧುರಾಪಯೇ ಬಂಧವ ಆ**

ಯಜತಿ ಹಿ ಸ್ಮ । ಸರ್ವಥಾ ದದಾತೀತಿ ಶೇಷಃ । ಸಖಾ ಪ್ರಿಯಃ ಸಖ್ಯೇ ಪ್ರಿಯಾಯಾಭೀಷ್ಟಂ ಸರ್ವಥಾ ದದಾತಿ ತಥಾ ತ್ವಮಪಿ ದೇಹಿ ॥ ಸ್ಮಾ ಸೂನವೇ । ನಿಪಾತಸ್ಯ ಚೇತಿ ದೀರ್ಘಃ । ಯಜತೀತ್ಯಸ್ಯ ಸಖಾ ಸಖ್ಯ ಇತ್ಯತ್ರಾಪ್ಯನುಷಂಗಾತ್ತದಪೇಕ್ಷಯೇಯಂ ಪ್ರಥಮೇತಿ ಚಾದಿಲೋಪೇ ವಿಭಾಷೇತಿ ನ ನಿಹನ್ಯತೇ । ಯದ್ವಾ । ಹಿ ಚೇತಿ ನಿಘಾತಪ್ರತಿಷೇಧಃ । ಸಖ್ಯೇ । ಸಮಾನೇ ಖ್ಯಃ ಸ ಚೋದಾತ್ತ ಇತಿ ಸಖಿಶಬ್ದ ಇಣ್ಪ್ರತ್ಯಯಾಂತ ಆದ್ಯುದಾತ್ತಃ । ಸುಪಃ ಪಿತ್ತ್ವಾದನುದಾತ್ತತ್ವೇ ಸ ಏವ ಶಿಷ್ಯತೇ ॥

॥ ಪ್ರತಿಪದಾರ್ಥ ॥

**ಆಪಿಃ**—ಬಂಧುವಾದವನು । **ಆಪಯೇ**—ತನ್ನ ಬಂಧುವಿಗೂ (ಮತ್ತು) । **ಸಖಾ**—(ಪ್ರಿಯನಾದ) ಸ್ನೇಹಿತನು । **ಸಖ್ಯೇ**—ತನ್ನ ಸ್ನೇಹಿತನಿಗೂ । **ಆ ಯಜತಿ ಹಿ ಸ್ಮ**—(ಅಭೀಷ್ಟವನ್ನು) ಕೊಟ್ಟೇ ಕೊಡುತ್ತಾನಲ್ಲವೆ (ಅದರಂತೆ) । **ಸೂನವೇ**—ಮಗನ ಸ್ಥಾನದಲ್ಲಿರುವ ನನಗೆ । **ಪಿತಾ**—ತಂದೆಯಾಗಿರುವ ನೀನು (ನನ್ನ ಅಭೀಷ್ಟವನ್ನು ದಯಪಾಲಿಸು).

॥ ಭಾವಾರ್ಥ ॥

ಎಲೈ ಅಗ್ನಿಯೇ, ಬಂಧುವಾದವನು ತನ್ನ ಆಪ್ತ ಬಂಧುವಿಗೂ ಮತ್ತು ಸ್ನೇಹಿತನಾದವನು ತನ್ನ ಪ್ರಿಯ ಮಿತ್ರನಿಗೂ ಅವನವನ ಅಭೀಷ್ಟವನ್ನು ಒದಗಿಸಿ ಕೊಡುವಂತೆ, ತಂದೆಯಂತಿರುವ ನೀನು ಪುತ್ರಪ್ರಾಯನಾದ ನನಗೆ ನನ್ನ ಅಭೀಷ್ಟವನ್ನು ನೆರವೇರಿಸಿಕೊಡು.

## English Translation.

O Agni, you are indeed as a loving father to a son, as a kinsman to a kinsman, as a friend to a friend.

॥ ವಿಶೇಷವಿಷಯಗಳು ॥

**ಆಪಿಃ, ಆಪಯೇ—ಬಂಧುಃ ಬಂಧವೇ** । ಬಂಧುವಾದವನು ತನ್ನ ಬಂಧುವಿನ ವಿಷಯದಲ್ಲಿ ಹೇಗೆ ಸುಹೃದ್ಭಾವದಿಂದ ವರ್ತಿಸುವನೋ ಅದರಂತೆ, ಈ ಋಕ್ಕಿನಲ್ಲಿ ಋಷಿಯು ಪಿತಾಪುತ್ರರಿಗೂ, ಬಂಧುಬಾಂಧವರಿಗೂ, ಸ್ನೇಹಿತಸ್ನೇಹಿತರಿಗೂ ಇರುವ ಪ್ರೇಮಾತಿಶಯವನ್ನು ಸೂಚಿಸಿ ಅದರಂತೆ ಅಗ್ನಿಯು ತನ್ನನ್ನು ಕಾಪಾಡಬೇಕೆಂದು ಪ್ರಾರ್ಥಿಸಿರುವನು.

॥ ವ್ಯಾಕರಣಪ್ರಕ್ರಿಯಾ ॥

**ಸ್ಮಾ ಸೂನವೇ**—ಸ್ಮ ಎಂಬುದು ನಿಪಾತ. ಆದುದರಿಂದ '**ನಿಪಾತಸ್ಯ ಚ**' (೬-೩-೧೩೬) ಎಂಬುದರಿಂದ ಮಂತ್ರದಲ್ಲಿ ದೀರ್ಘ ಬರುತ್ತದೆ.

**ಯಜತಿ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಭ್ವಾದಿ. ಲಟ್ ಪ್ರಥಮಪುರುಷ ಏಕವಚನದ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರವು ಪ್ರಾಪ್ತವಾಗುತ್ತದೆ. ಆದರೆ ಇಲ್ಲಿ ಮುಂದೆ ಸಖಾ

ಸಖ್ಯೇ ಎಂಬಲ್ಲಿಯೂ ಈ ಧಾತುವಿನ ಅನುಷಂಗ (ಸಂಬಂಧ) ಇರುವುದರಿಂದ ಆಗ ಇದು ಪ್ರಥಮೋಚ್ಚರಿತವಾಗುತ್ತದೆ. ಆದುದರಿಂದ **' ಚಾದಿಲೋಪೇ ವಿಭಾಷಾ '** (ಪಾ.ಸೂ. ೮-೧-೬೩) ಚ ವಾ ಮುಂತಾದವುಗಳು ಲೋಪವಾಗುವಾಗ ಪ್ರಥಮೋಚ್ಚರಿತವಾದ ತಿಙಂತವು ಸರ್ವಾನುದಾತ್ತವಾಗುವುದಿಲ್ಲ ಎಂಬುದರಿಂದ ನಿಘಾತಸ್ವರವು ಬರುವುದಿಲ್ಲ. ಅಥವಾ **' ಹಿ ಚ '** (ಪಾ. ಸೂ. ೮-೧-೩೪) ಹಿ ಎಂಬುದರೊಡನೆ ಕೂಡಿಕೊಂಡಿರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂಬುದರಿಂದ ಸ್ವರಸವಾಗಿ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ಮತ್ತು ತಿಪ್ ಅನುದಾತ್ತವಾದುದರಿಂದ ಧಾತುವಿನ ಸ್ವರದಿಂದ ಯಜತಿ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

**ಸಖ್ಯೇ— ಶೇಷೋಘ್ಯಸಖಿ** ಎಂದು ನಿಷೇಧಮಾಡಿರುವುದರಿಂದ ಘಿ ಸಂಜ್ಞಾ ಬರುವುದಿಲ್ಲ. ಆದುದರಿಂದ ಚತುರ್ಥೀ ಏಕವಚನದ ಙೇ ವಿಭಕ್ತಿಯು ಪರದಲ್ಲಿರುವಾಗ ಯಣಾದೇಶ ಬಂದು ಸಖ್ಯೇ ಎಂದು ರೂಪವಾಗುತ್ತದೆ. **'ಸಮಾನೇ ಖ್ಯಃ ಸ ಚೋದಾತ್ತಃ '** (ಉ.ಸೂ. ೪-೫೭೬) ಸಮಾನ ಶಬ್ದವು ಉಪಪದವಾಗಿರುವಾಗ ಖ್ಯಾ ಪ್ರಕಥನೇ ಎಂಬ ಧಾತುವಿಗೆ ಇಣ್ ಪ್ರತ್ಯಯು ಬರುತ್ತದೆ ಅದು ಡಿತ್ತಾಗುತ್ತದೆ. ಸಮಾನಕ್ಕೆ ಸ ಎಂಬ ಆದೇಶವೂ ಉದಾತ್ತಸ್ವರವೂ ಬರುತ್ತದೆ. ಯಲೋಪವೂ ಸೂತ್ರದಲ್ಲಿಯೇ ವಿಹಿತವಾಗಿದೆ. ಡಿತ್ತಾದುದರಿಂದ ಖ್ಯಾ ಧಾತುವಿನ ಟಿ ಸಂಜ್ಞೆಯುಳ್ಳ ಆಕಾರಕ್ಕೆ ಲೋಪಬರುತ್ತದೆ. ಯಕಾರವು ಸೂತ್ರದಿಂದಲೇ ಲೋಪವನ್ನು ಹೊಂದುತ್ತದೆ. ಸಖಿ ಎಂದು ರೂಪವಾಗುತ್ತದೆ. ಸ ಎಂಬುದಕ್ಕೆ ಉದಾತ್ತತ್ವವನ್ನು ವಿಧಿಸಿರುವುದರಿಂದ ಸಖಿಶಬ್ದವು ಆದ್ಯುದಾತ್ತವಾಗುತ್ತದೆ. ಸುಪ್ ವಿಭಕ್ತಿಗೆ **' ಅನುದಾತ್ತೌ ಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತಸ್ವರ ವಿಧಾನಮಾಡಿರುವುದರಿಂದ ಪೂರ್ವೋಕ್ತವಾದ ಸ್ವರವೇ ಸತಿಶಿಷ್ಟವಾಗುತ್ತದೆ. ಸಖ್ಯೇ ಎಂಬುದೂ ಆದ್ಯುದಾತ್ತವಾಗುತ್ತದೆ. ॥ ೩ ॥

॥ ಸಂಹಿತಾಪಾಠಃ ॥

ಆ ನೋ ಬರ್ಹೀ ರಿಶಾದಸೋ ವರುಣೋ ಮಿತ್ರೋ ಅರ್ಯಮಾ ।
ಸೀದನ್ತು ಮನುಷೋ ಯಥಾ ॥ ೪ ॥

॥ ಪದಪಾಠಃ ॥

ಆ । ನಃ । ಬರ್ಹಿಃ । ರಿಶಾದಸಃ । ವರುಣಃ । ಮಿತ್ರಃ । ಅರ್ಯಮಾ ।
ಸೀದನ್ತು । ಮನುಷಃ । ಯಥಾ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವರುಣಾದಯೋ ದೇವಾಸ್ತ್ವದ್ಬಂಧವಸ್ತ್ವಯಾ ಪ್ರೇರಿತಾ ರಿಶಾದಸೋ ಹಿಂಸಕಾನದಂತೋ ನೋಽಸ್ಮದೀಯಂ ಬರ್ಹಿರ್ಯಜ್ಞಮಾಸೀದಂತು । ತತ್ರ ದೃಷ್ಟಾಂತಃ । ಯಥಾ ಮನುಷಃ ಪ್ರಜಾಪತೇರ್ಯಜ್ಞಮಾಸೀದಂತಿ । ತದ್ವತ್ ॥ ಬರ್ಹಿಃ । ರಿಶಾದಸಃ । ವಿಸರ್ಜನೀಯಸ್ಯ ರುತ್ವೇ ಕೃತೇ ರೋ ರಿ । ಪಾ. ೮-೩-೧೪ । ಇತಿ ರೇಫಲೋಪಃ । ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ । ಪಾ. ೬-೩-೧೧೧ । ಇತೀಕಾರಸ್ಯ ದೀರ್ಘತ್ವಂ । ರಿಶಾದಸಃ । ರಿಶ ಹಿಂಸಾಯಾಂ । ರಿಶಂತಿ ಹಿಂಸಂತೀತಿ ರಿಶಾಃ ಶತ್ರವಃ । ಇಗುಪಧಜ್ಞಾಪ್ರೀಕಿರಃ ಕಃ । ತಾನದಂತೀತಿ ರಿಶಾದಸಃ । ಸರ್ವಧಾತುಭ್ಯೋಽಸುನ್ । ಕೃದುತ್ತರಪದಪ್ರಕೃತಿಸ್ವರತ್ವಂ । ಸೀದಂತು । ಷದ್ಲೃ ವಿಶರಣಗತ್ಯವಸಾದನೇಷು । ಪಾಘ್ರೇತ್ಯಾದಿನಾ ಸೀದಾದೇಶಃ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಮನುಷಃ । ಮನ ಜ್ಞಾನೇ । ಮನ್ಯತೇ ಜಾನಾತೀತಿ ಮನುಃ ಪ್ರಜಾಪತಿಃ । ಜನೇರುಸಿರ್ನಿಚ್ಚ । ಉ. ೨-೧೧೬-೧೧೮ । ಇತ್ಯನುವೃತ್ತೌ ಬಹುಲಮನ್ಯತ್ರಾಪಿ । ಉ. ೨-೧೨೨ । ಇತ್ಯೌಣಾದಿಕ ಉಸಿಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಯಥಾ । ಯಥೇತಿ ಪಾದಾಂತೇ । ಫಿ. ೪. ೧೭ । ಇತಿ ಸರ್ವಾನುದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಅಗ್ನೇ—ಎಲೈ ಅಗ್ನಿಯೇ) । **ರಿಶಾದಸಃ**—ಶತ್ರುನಾಶಕರಾದ । **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ ಸಹ । **ಯಥಾ**—ಯಾವ ರೀತಿ । **ಮನುಷಃ**—ಮನುವಿನ (ಯಜ್ಞಭೂಮಿಯಲ್ಲಿ ವೇದಿಕೆಯ ಮೇಲೆ ಹೇಗೆ ಕುಳಿತುಕೊಂಡರೋ ಹಾಗೆ) । **ನಃ**—ನಮ್ಮ । **ಬರ್ಹಿಃ**—ಯಜ್ಞಭೂಮಿಯ ಆಸನದ ಮೇಲೆ । **ಆ ಸೀದಂತು**—ಬಂದು ಕುಳಿತುಕೊಳ್ಳಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಶತ್ರುನಾಶಕರಾದ ವರುಣನೂ, ಮಿತ್ರನೂ ಮತ್ತು ಅರ್ಯಮನೂ ಸಹ ಹಿಂದೆ ಯಾವ ರೀತಿ ಅನುಗ್ರಹದಿಂದ ಮನುವಿನ ಯಜ್ಞಭೂಮಿಯ ಆಸನದ ಮೇಲೆ ಕುಳಿತುಕೊಂಡರೋ ಅದೇ ರೀತಿ ಈಗಲೂ ನಮ್ಮ ಯಜ್ಞಭೂಮಿಯ ಆಸನದ ಮೇಲೆ ಕುಳಿತುಕೊಳ್ಳಲಿ.

## English Translation.

Let Varuna, Mitra, Aryama, destroyers of the wicked, sit down upon our sacred grass as they did at the Sacrifice of Manu.

॥ ವಿಶೇಷವಿಷಯಗಳು ॥

**ಅರ್ಯಮಾ**—ದ್ವಾದಶಾದಿತ್ಯರಲ್ಲಿ ಒಬ್ಬನು, ಅದಿತಿಯ ಪುತ್ರನು.

**ಬರ್ಹಿಃ**—ಯಜ್ಞವೇದಿಕೆಯಲ್ಲಿ ದೇವತೆಗಳು ಬಂದು ಕೂಡುವುದಕ್ಕಾಗಿ ಕುಶವೆಂಬ ದರ್ಭೆಗಳ ಅಗ್ರಭಾಗಗಳನ್ನು ಕತ್ತರಿಸಿ ಮೆತ್ತಗಿರುವಂತೆ ಮೂರು ಪದರಗಳಾಗಿ ಹರಡಿ ಸಿದ್ಧಪಡಿಸಿರುವ ದರ್ಭಾಸನ.

**ರಿಶಾದಸಃ**—**ರಿಶಾದಸಃ ರಿಶ ಹಿಂಸಾಯಾಂ । ರಿಶಂತಿ ಹಿಂಸಂತೀತಿ ರಿಶಾಃ ಶತ್ರವಃ । ತಾನದಂತೀತಿ ರಿಶಾದಸಃ ॥** ರಿಶ ಧಾತುವಿಗೆ ಹಿಂಸೆಮಾಡು ಎಂದರ್ಥವು. ಹಿಂಸೆಮಾಡುವವರಿಗೆ ರಿಶಾಃ ಶತ್ರುಗಳೆಂದು ಹೆಸರು. ಅಂತಹ ಶತ್ರುಗಳನ್ನು ನಾಶಮಾಡುವವರಾದುದರಿಂದ **ರಿಶಾದಸಃ**—ಶತ್ರುನಾಶಕರು ಎಂದಭಿಪ್ರಾಯವು.

**ಸೀದಂತು ಮನುಷೋ ಯಥಾ**—ಮನುಪ್ರಜಾಪ್ರತಿಯು ಮಾಡಿದ ಯಜ್ಞದಲ್ಲಿ ದೇವತೆಗಳು ಯಾವ ಪ್ರಕಾರ ಯಜ್ಞಭೂಮಿಗೆ ಬಂದು ದರ್ಭಾಸನದ ಮೇಲೆ ಮಂಡಿಸಿದರೋ ಅದರಂತೆ ಮಿತ್ರಾವರುಣಾದಿಗಳು ಈ ನಮ್ಮ ಯಜ್ಞಭೂಮಿಗೆ ಬಂದು ಕುಳಿತುಕೊಳ್ಳಲಿ ಎಂದು ಋಷಿಯ ಪ್ರಾರ್ಥನೆಯು.

॥ ವ್ಯಾಕರಣಪ್ರಕ್ರಿಯಾ ॥

**ಬರ್ಹೀ ರಿಶಾದಸಃ**—ಬರ್ಹಿಸ್+ರಿಶಾದಸಃ ಎಂದಿರುವಾಗ **'ಸಸಜುಷೋ ರುಃ'** (ಪಾ. ಸೂ. ೮-೨-೬೬) ಎಂಬುದರಿಂದ ಬರ್ಹಿಸ್ ಎಂಬಲ್ಲಿರುವ ಪದಾಂತವಾದ ಸಕಾರಕ್ಕೆ ರುತ್ವ ಬರುತ್ತದೆ. **' ರೋ ರಿ '** (ಪಾ ಸೂ. ೮-೩-೧೪) ರೇಫಕ್ಕೆ ರೇಫವು ಪರದಲ್ಲಿದ್ದರೆ ಲೋಪ ಬರುತ್ತದೆ ಎಂಬುದರಿಂದ ಬರ್ಹಿರ್ ಎಂಬಲ್ಲಿರುವ ರೇಫಕ್ಕೆ ಲೋಪ ಬರುತ್ತದೆ. ಬರ್ಹಿ+ರಿಶಾದಸಃ ಎಂದಿರುವಾಗ **' ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ '** (ಪಾ. ಸೂ. ೬-೩-೧೧೧) ಢಕಾರ ಮತ್ತು ರೇಫಕ್ಕೆ ಲೋಪನಿಮಿತ್ತವಾದ ವರ್ಣವು ಪರದಲ್ಲಿರುವಾಗ ಪೂರ್ವದಲ್ಲಿರುವ ಅಣ್ಣಿಗೆ ದೀರ್ಘ ಬರುತ್ತದೆ ಎಂಬುದರಿಂದ ಅರ್ಥಾತ್ ರೇಫಲೋಪನಿಮಿತ್ತವಾದ ರೇಫವೇ ಪರದಲ್ಲಿರುವುದರಿಂದ ಇಕಾರಕ್ಕೆ ದೀರ್ಘ ಬರುತ್ತದೆ. ಬರ್ಹೀ ರಿಶಾದಸಃ ಎಂದು ಪ್ರಕೃತರೂಪವು ಆಗುತ್ತದೆ.

**ರಿಶಾದಸಃ**—ರಿಶ ಹಿಂಸಾಯಾಂ ಧಾತು. ತುದಾದಿ ರಿಶಂತಿ ಹಿಂಸಂತಿ ಇತಿ ರಿಶಾಃ ಶತ್ರವಃ ಹಿಂಸಾಕೃತ್ಯವುಳ್ಳವರು ಶತ್ರುಗಳು ಎಂದು ತಾತ್ಪರ್ಯ. **' ಇಗುಪಧಜ್ಞಾಪ್ರೀಕಿರಃ ಕಃ '** (ಪಾ. ಸೂ ೩-೧-೧೩೫) ಎಂಬುದರಿಂದ ಇಕ್ ಉಪಧವಾಗಿರುವುದರಿಂದ (ಅಂತ್ಯವರ್ಣದ ಪೂರ್ವವರ್ಣ) ಇದಕ್ಕೆ ಕ ಪ್ರತ್ಯಯ ಬರುತ್ತದೆ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ರಿಶ ಎಂದು ರೂಪವಾಗುತ್ತದೆ ರಿಶಾನ್ ಅದಂತಿ ಇತಿ ರಿಶಾದಸಃ ಶತ್ರುಗಳನ್ನು ತಿನ್ನುವವರು ನಾಶಮಾಡುವವರು ಎಂದು ತಾತ್ಪರ್ಯ. **' ಸರ್ವಧಾತುಭ್ಯೋಽಸುನ್ '** (ಉ ಸೂ. ೪-೬೨೮) ಎಂಬುದರಿಂದ ಅದ ಭಕ್ಷಣೇ ಧಾತುವಿಗೆ ಅಸುನ್ ಪ್ರತ್ಯಯ ಬರುತ್ತದೆ ರಿಶಾದಸ್ ಎಂದು ಸಾಂತವಾದ ಪದವಾಗುತ್ತದೆ. ಪ್ರಥಮಾ ಬಹುವಚನದಲ್ಲಿ ರಿಶಾದಸಃ ಎಂದು ರೂಪವಾಗುತ್ತದೆ. **' ಗತಿಕಾರಕೋಪಪದಾತ್ ಕೃತ್ '** (ಪಾ. ಸೂ. ೬-೨-೧೩೯) ಎಂಬುದರಿಂದ ಕಾರಕ ಉಪಪದವಾಗಿರುವುದರಿಂದ ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರವು ಬರುತ್ತದೆ. ಅದಸ್ ಎಂಬುದು ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ ಆಗ ರಿಶಾದಸಃ ಎಂಬಲ್ಲಿ ಶಕಾರದ ಮೇಲಿರುವ ಆಕಾರವು ಉದಾತ್ತವಾಗುತ್ತದೆ.

**ಸೀದಂತು**—ಷದ್ಲೃ ವಿಶರಣಗತ್ಯವಸಾದನೇಷು ಧಾತು. ಭ್ವಾದಿ. ಲೋಟ್ ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ ಬಂದರೆ ಅಂತು ಎಂದು ಆಗುತ್ತದೆ. ಶಪ್ ವಿಕರಣ ಬರುತ್ತದೆ. ಅದು ಪರದಲ್ಲಿರುವಾಗ

**'ಪಾಘ್ರಾಧ್ಮಾಸ್ಥಾ-'** (ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಸೀದ ಎ ಬ ಆದೇಶ ಬರುತ್ತದೆ. **'ಅತೋ ಗುಣೇ'** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ಬಂದರೆ ಸೀದಂತು ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ- ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **'ತಾಸ್ಯನುದಾತ್ತೇತ್'** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ **'ಧಾತೋಃ'** (ಪಾ ಸೂ ೬-೧-೧೬೨) ಎಂಬುದರಿಂದ ಬಂದಿರುವ ಧಾತುವಿನ ಅಂತೋದಾತ್ತಸ್ವರವೇ ಸತಿಶಿಷ್ಟವಾದುದರಿಂದ ಉಳಿಯುತ್ತದೆ.

**ಮನುಷಃ**—ಮನ ಜ್ಞಾನೇ ಧಾತು. ದಿವಾದಿ. ಮನ್ಯತೇ ಜಾನಾತೀತಿ ಮನುಃ ಪ್ರಜಾಪತಿಃ ಎಲ್ಲವನ್ನೂ ತಿಳಿಯುವವನು ಎಂದರ್ಥ. **ಜನೇರುಸಿಃ ನಿಚ್ಚ** ಎಂಬುದು ಅನುವೃತ್ತವಾಗುವಾಗ **'ಬಹುಲ ಮನ್ಯತ್ರಾಽಪಿ'** (ಉ ಸೂ. ೨-೨೭೮) ಎಂಬುದರಿಂದ ಮನ ಧಾತುವಿಗೆ ಉಸಿ ಪ್ರತ್ಯಯುವು ಬರುತ್ತದೆ. ಅದಕ್ಕೆ ನಿತ್ವವು ಬರುತ್ತದೆ ಮನುಸ್ ಎಂದು ಸಾಂತಶಬ್ದವಾಗುತ್ತದೆ. ಷಷ್ಠೀ ಏಕವಚನದಲ್ಲಿ ಙಸ್ ಪ್ರತ್ಯಯ ಬರುತ್ತದೆ. ಪ್ರತ್ಯಯಾವಯುವ ವಾದುದರಿಂದ ಇಣ್ಣಿನ ಪರದಲ್ಲಿರುವ ಸಕಾರಕ್ಕೆ ಷತ್ವ ಬರುತ್ತದೆ. ಮನುಷಃ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಯಥಾ**—**'ಪ್ರಕಾರವಚನೇ ಥಾಲ್'** (ಪಾ. ಸೂ. ೫-೩-೨೩) ಎಂಬುದರಿಂದ ಪ್ರಕಾರಾರ್ಥದಲ್ಲಿ ಯಚ್ಛಬ್ದದ ಮೇಲೆ ಥಾಲ್ ಪ್ರತ್ಯಯ ಬರುತ್ತದೆ. ಇದಕ್ಕೆ ವಿಭಕ್ತಿ ಸಂಜ್ಞಾ ಇರುವುದರಿಂದ **'ತ್ಯದಾದೀನಾಮಃ'** (ಪಾ. ಸೂ ೭-೨-೧೦೨) ಎಂಬುದರಿಂದ ಆಕಾರವು ಅಂತಾದೇಶವಾಗಿ ಬರುತ್ತದೆ ಯಥಾ ಎಂದು ರೂಪವಾಗುತ್ತದೆ. **'ಯಥೇತಿ ಪಾದಾಂತೇ'** (ಫಿ ಸೂ ೮೫) ಪಾದದ ಕೊನೆಯಲ್ಲಿರುವ ಯಥಾ ಎಂಬುದು ಸರ್ವಾನುದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ನಿಘಾತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

## ಪೂರ್ವ್ಯ ಹೋತರಸ್ಯ ನೋ ಮಂದಸ್ವ ಸಖ್ಯಸ್ಯ ಚ ।
## ಇಮಾ ಉ ಷು ಶ್ರುಧೀ ಗಿರಃ ॥ ೫ ॥

॥ ಪದಪಾಠಃ ॥

**ಪೂರ್ವ್ಯ । ಹೋತರಿತಿ । ಅಸ್ಯ । ನಃ । ಮಂದಸ್ವ । ಸಖ್ಯಸ್ಯ । ಚ ।**

**ಇಮಾಃ । ಊಂ ಇತಿ । ಸು । ಶ್ರುಧಿ । ಗಿರಃ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಪೂರ್ವ್ಯ ಅಸ್ಮದಾದೇಃ ಪೂರ್ವಮುತ್ಪನ್ನ ಹೋತರ್ಹೋಮನಿಷ್ಪಾದಕಾಗ್ನೇ ನೋಽಸ್ಮದೀಯಸ್ಯಾಸ್ಯ ಪ್ರವರ್ತಮಾನಸ್ಯ ಯಜ್ಞಸ್ಯ ಸಖ್ಯಸ್ಯ ಚಾಸ್ಮದನುಗ್ರಹಸ್ಯ ಚ ಸಿದ್ಧ್ಯರ್ಥಂ ಮಂದಸ್ವ । ತ್ವಂ ಹೃಷ್ಟೋ ಭವ । ಇಮಾ ಅಸ್ಮಾಭಿಃ ಪ್ರಯುಜ್ಯಮಾನಾ ಗಿರ ಉ ಷು ಸ್ತುತಿರೂಪಾ ವಾಚೋಽಪಿ ಶ್ರುಧಿ ಶೃಣು ॥ ಪೂರ್ವ್ಯ । ಆಮಂತ್ರಿತಾದ್ಯುದಾತ್ತತ್ವಂ । ಹೋತರಿತ್ಯಸ್ಯ ನಾಮಂತ್ರಿತೇ ಸಮಾನಾಧಿಕರಣ ಇತಿ ಪೂರ್ವಸ್ಯ ವಿದ್ಯಮಾನತ್ವಾದಾಷ್ಟಮಿಕೋ ನಿಘಾತಃ । ಅಸ್ಯ । ಊಡಿದಮಿತಿ ಷಷ್ಠ್ಯಾ ಉದಾತ್ತತ್ವಂ । ಮಂದಸ್ವ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ಸ್ವರಃ । ಅಪಾದಾದಾವಿತಿ ಪರ್ಯುದಾಸಾದಾಷ್ಟಮಿಕನಿಘಾತಾಭಾವಃ । ಸಖ್ಯಸ್ಯ । ಸಖ್ಯುಃ ಕರ್ಮ ಸಖ್ಯಂ । ಸಖ್ಯುರ್ಯಃ । ಪಾ. ೫-೧-೧೨೬ । ಇತಿ ಯಪ್ರತ್ಯಯಃ । ಯಸ್ಯೇತಿ ಲೋಪೇ ಪ್ರತ್ಯಯಸ್ವರಃ । ಉ ಷು । ಸುಞಃ । ಪಾ. ೮-೩-೧೦೭ । ಇತಿ ಷತ್ವಂ । ಶ್ರುಧಿ । ಶ್ರು ಶ್ರವಣೇ । ಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ಶಪೋ ಲುಕ್ ॥೨೦॥**

॥ ಪ್ರತಿಪದಾರ್ಥ ॥

**ಪೂರ್ವ್ಯ**—(ನಮ್ಮೆಲ್ಲರಿಗಿಂತಲೂ) ಪ್ರಾಚೀನನಾದವನೂ । **ಹೋತಃ**—ಹೋಮಸಂಪಾದಕನೂ ಆದ ಎಲೈ ಅಗ್ನಿಯೇ । **ನಃ**—ನಮ್ಮ । **ಅಸ್ಯ**—(ಈಗ ನಡೆಯುತ್ತಿರುವ) ಈ ಯಜ್ಞದಿಂದಲೂ । **ಚ**—ಮತ್ತು । **ಸಖ್ಯಸ್ಯ**—(ನಮ್ಮ) ಸ್ನೇಹದಿಂದಲೂ (ಇವುಗಳ ವೃದ್ಧಿಗಾಗಿ) । **ಮಂದಸ್ವ**—ಸಂತುಷ್ಟನಾಗು । **ಇಮಾಃ**—ನಮ್ಮಿಂದ ಪ್ರಯುಕ್ತಗಳಾದ । **ಗಿರಃ ಉ ಷು**—ನಮ್ಮ ಸ್ತೋತ್ರವಾಕ್ಯಗಳನ್ನೂ ಕೂಡ । **ಶ್ರುಧಿ**—ಲಾಲಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ನಮ್ಮೆಲ್ಲರಿಗಿಂತಲೂ ಪ್ರಾಚೀನನೂ, ಹೋಮಸಂಪಾದಕನೂ ಆಗಿದ್ದೀಯೆ. ನಾವು ಈಗ ನಡೆಸುತ್ತಿರುವ ಯಜ್ಞದಿಂದಲೂ ಮತ್ತು ನಮ್ಮ ಸ್ನೇಹದಿಂದಲೂ ಸಂತುಷ್ಟನಾಗಿ ಅದನ್ನು ವೃದ್ಧಿಪಡಿಸು. ನಮ್ಮಿಂದ ಪ್ರಯುಕ್ತಗಳಾದ ನಮ್ಮ ಈ ಸ್ತೋತ್ರವಾಕ್ಯಗಳನ್ನೂ ಸಹ ಲಾಲಿಸಿ ಕೇಳು.

## English Translation.

O Ancient Hotri, Agni, be pleased with this our sacrifice and with our friendship and listen to these our prayers.

॥ ವಿಶೇಷವಿಷಯಗಳು ॥

**ಪೂರ್ವ್ಯ—ಅಸ್ಮದಾದೇಃ ಪೂರ್ವಮುತ್ಪನ್ನ ।** ನಮ್ಮೆಲ್ಲರಿಗಿಂತಲೂ ಪೂರ್ವದಲ್ಲಿ ಉತ್ಪನ್ನನಾದವನು, ಪ್ರಾಚೀನನು.

**ಹೋತಃ**—ಹೋಮನಿಷ್ಪಾದಕನು, ಯಜ್ಞದಲ್ಲಿ ದೇವತೆಗಳನ್ನು ಕರೆದುಕೊಂಡು ಬರುವವನು.

**ಅಸ್ಯ**—ಈ ಯಜ್ಞದ, ಈಗ ನಾವು ಮಾಡುತ್ತಿರುವ ಯಜ್ಞದಿಂದ

**ಸಖ್ಯಸ್ಯ**—ನಮ್ಮನ್ನು ಸ್ನೇಹಿತರಂತೆ ಅಭಿಮಾನಿಸಿ ಅನುಗ್ರಹಿಸುವುದಕ್ಕಾಗಿ ಎಂದಭಿಪ್ರಾಯವು. ದೇವತೆಗಳ ಸಖ್ಯವನ್ನು ಬಯಸುವ ವಿಷಯದಲ್ಲಿ—

**ತವೇದ್ಧಿ ಸಖ್ಯಮಸ್ತೃತಂ ॥**

(ಋ. ಸಂ. ೧-೧೫-೫)

**ದೇವಾನಾಂ ಸಖ್ಯಮುಪಸೇದಿಮಾ ವಯಂ ದೇವಾ ನ ಆಯುಃ ಪ್ರ ತಿರಂತು ಜೀವಸೇ ॥**

(ಋ. ಸಂ. ೧-೮೯-೨)

**ಅನು ಪ್ರತ್ನಾಸಸ್ತವ ಸಖ್ಯಮೀಯುರನು ದೇವಾ ಮಮಿರೇ ವೀರ್ಯಂ ತೇ ॥**

(ಋ. ಸಂ. ೧-೧೬೩-೮)

**ಯಯೋರಸ್ತಿ ಪ್ರ ಣಃ ಸಖ್ಯಂ ದೇವೇಷ್ವಧ್ಯಾಪ್ಯಂ ॥**

(ಋ. ಸಂ. ೮-೧೦-೩)

**ಯದಿನ್ಮೇ ಸಖ್ಯಮಾವರ ಇಮಸ್ಯ ಪಾಹ್ಯಂಧಸಃ ।**

(ಋ. ಸಂ. ೮-೧೩-೨೧)

**ಪ್ರ ಸೋ ಅಗ್ನೇ ತವೋತಿಭಿಃ ಸುವೀರಾಭಿಸ್ತಿರತೇ ವಾಜಭರ್ಮಭಿಃ ।**
**ಯಸ್ಯ ತ್ವಂ ಸಖ್ಯಮಾವರಃ ॥**

(ಋ. ಸಂ. ೮-೧೯-೩೦)

**ಅದಬ್ಧಸ್ಯ ಸ್ವಧಾವತೋ ದೂತಸ್ಯ ರೇಭತಃ ಸದಾ ॥**
**ಅಗ್ನೇಃ ಸಖ್ಯಂ ವೃಣೀಮಹೇ ॥**

(ಋ. ಸಂ. ೮-೪೪-೨೦)

ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು.

**ಮಾದಸ್ವ**—ಸಂತುಷ್ಟನಾಗು, ಸಂತೋಷಪಡು.

॥ ವ್ಯಾಕರಣಪ್ರಕ್ರಿಯಾ ॥

**ಪೂರ್ವ್ಯ**—ಪೂರ್ವೇ ಭವಃ ಪೂರ್ವ್ಯಃ ಹಿಂದೆ ಉತ್ಪನ್ನನಾದವನು ಎಂದರ್ಥ. ಭಾವಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಸಂಬುದ್ಧಿಯಲ್ಲಿ ಪೂರ್ವ್ಯ ಎಂದು ರೂಪವಾಗುತ್ತದೆ. ಪದದ ಪರದಲ್ಲಿರದೇ ಇದ್ದುದರಿಂದ **'ಆಮಂತ್ರಿತಸ್ಯ'** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಹೋತಃ**—ಹು ದಾನದನಯೋಃ ಧಾತು. ಜುಹೋತ್ಯಾದಿ. ಕರ್ತ್ರರ್ಥದಲ್ಲಿ ತೃಚ್ ಪ್ರತ್ಯಯ ಬರುತ್ತದೆ. ಸಂಬುದ್ಧಿಯಲ್ಲಿ ಹೋತಃ ಎಂದು ರೂಪವಾಗುತ್ತದೆ. ಇಲ್ಲಿ ಪೂರ್ವ್ಯ, ಹೋತಃ, ಎಂಬ ಎರಡು ಶಬ್ದಗಳೂ ಆಮಂತ್ರಿತ ಸಂಜ್ಞೆಯನ್ನು ಹೊಂದಿರುತ್ತವೆ. ಆಗ **'ಆಮಂತ್ರಿತಂ ಪೂರ್ವಮವಿದ್ಯಮಾನವತ್'** (ಪಾ. ಸೂ ೮-೧-೭೨) ಎಂಬುದರಿಂದ ಪೂರ್ವದ ಆಮಂತ್ರಿತಕ್ಕೆ ಅವಿದ್ಯಮಾನತ್ವವು (ಇಲ್ಲದೇ ಇರುವಿಕೆ) ಪ್ರಾಪ್ತವಾಗುತ್ತದೆ. ಆದರೆ ಇಲ್ಲಿ

ಎರಡು ಶಬ್ದಗಳಿಗೂ ಸಾಮಾನಾಧಿಕರಣ್ಯವಿದೆ ಅಂದರೆ ಎರಡೂ ಏಕಾರ್ಥವಾಚಕಗಳು. ಆದುದರಿಂದ **' ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮ್ '** (ಪಾ. ಸೂ. ೮-೧-೭೩) ಎಂಬುದರಿಂದ ಅವಿದ್ಯಮಾನವದ್ಭಾವವು ಬರುವುದಿಲ್ಲ ಅಂದರೆ ಪೂರ್ವದಲ್ಲಿ ಒಂದು ಶಬ್ದವಿದ್ದಂತೇ ಆಗುತ್ತದೆ. ಆದುದರಿಂದ **' ಆಮಂತ್ರಿತಸ್ಯ ಚ '** (ಪಾ. ಸೂ. ೮-೧-೧೯) ಎಂಬುದರಿಂದ ಪದದ ಪರದಲ್ಲಿರುವ ಆಮಂತ್ರಿತವಾದ ಹೋತಃ ಎಂಬುದಕ್ಕೆ ನಿಘಾತಸ್ವರ ಬರುತ್ತದೆ.

**ಅಸ್ಯ**---ಇದಮ್ ಶಬ್ದದ ಮೇಲೆ ಷಷ್ಠೀ ಏಕವಚನದ ಙಸ್ ಪ್ರತ್ಯಯ ಬರುತ್ತದೆ **' ತ್ಯದಾದೀನಾಮಃ '** (ಪಾ. ಸೂ. ೭-೨-೧೦೨) ಎಂಬುದರಿಂದ ಪ್ರಕೃತಿಗೆ ಅಕಾರವು ಅಂತಾದೇಶವಾಗಿ ಬರುತ್ತದೆ. ಇದ+ಅಸ್ ಎಂದಿರುವಾಗ ಅಕಾರದ ಪರದಲ್ಲಿರುವುದರಿಂದ **' ಟಾಙಸಿಙಸಾಮಿನಾತ್ಸ್ಯಾಃ '** (ಪಾ. ಸೂ. ೭-೧-೧೨) ಎಂಬುದರಿಂದ ಙಸ್ಸಿಗೆ ಸ್ಯ ಎಂಬ ಆದೇಶವು ಬರುತ್ತದೆ. ಹಲಾದಿಪ್ರತ್ಯಯ ಪರದಲ್ಲಿರುವುದರಿಂದ **' ಹಲಿ ಲೋಪಃ '** (ಪಾ. ಸೂ. ೭-೨-೧೧೩) ಎಂಬುದರಿಂದ ಇದ ಎಂಬಲ್ಲಿರುವ ಇದಿಗೆ ಲೋಪ ಬರುತ್ತದೆ. ಅಸ್ಯ ಎಂದು ರೂಪವಾಗುತ್ತದೆ. **' ಊಡಿದಂಪದಾದಿ-'** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಸ್ಯ ಎಂಬುದು ಅಂತೋದಾತ್ತವಾಗುತ್ತದೆ.

**ಮಂದಸ್ವ**---ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು, ಧಾತು. ಭ್ವಾದಿ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಮಂದಸ್ವ ಎಂದು ರೂಪವಾಗುತ್ತದೆ. ಇದಿತ್ತಾದುದರಿಂದ ನುಮಾಗಮ ಬರುತ್ತದೆ ಶಪ್ ಪಿತ್ತಾದುದರಿಂದ ಅನುದಾತ್ತಸ್ವರ ಬರುತ್ತದೆ. ತಿಙ್ ಅದುಪದೇಶದ ಪರದಲ್ಲಿರುವುದರಿಂದ **' ತಾಸ್ಯನುದಾತ್ತೇತ್ '** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುತ್ತದೆ. ಧಾತುವಿನ ಅಂತೋದಾತ್ತ ಸ್ವರವು ಉಳಿಯುತ್ತದೆ ಮಂದಸ್ವ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. **ಅಪಾದಾದೌ** ಎಂದು ನಿಷೇಧಮಾಡಿರುವುದರಿಂದ **' ತಿಙ್ಙತಿಙಃ '** (ಪಾ. ಸೂ. ೫-೧-೨೮) ಎಂಬುದರಿಂದ ನಿಘಾತಸ್ವರ ಬರುವುದಿಲ್ಲ.

**ಸಖ್ಯಸ್ಯ**---ಸಖ್ಯುಃ ಕರ್ಮ ಸಖ್ಯಮ್. ಸ್ನೇಹಿತನ ಕಾರ್ಯ ಎಂದರ್ಥ. **' ಸಖ್ಯುರ್ಯಃ '** (ಪಾ. ಸೂ. ೫-೧-೧೨೬) ಎಂಬುದರಿಂದ ಭಾವ ಅಥವಾ ಕರ್ಮ ಎಂಬರ್ಥದಲ್ಲಿ ಯ ಪ್ರತ್ಯಯ ಬರುತ್ತದೆ. ಯಾದಿ ಪ್ರತ್ಯಯವಾದುದರಿಂದ ಪೂರ್ವಕ್ಕೆ ಭಸಂಜ್ಞಾ ಬರುತ್ತದೆ. ಸಖ್ಯ ಎಂದು ರೂಪವಾಗುತ್ತದೆ. ಷಷ್ಠೀ ಏಕವಚನ ರೂಪ. ಪ್ರತ್ಯಯಸ್ವರದಿಂದ ಸಖ್ಯಸ್ಯ ಎಂಬುದು ಮಧ್ಯೋದಾತ್ತವಾಗುತ್ತದೆ.

**ಉ ಷು**---**ಸುಞಃ** (ಪಾ. ಸೂ. ೮-೩-೧೦೭) ಪೂರ್ವಪದದಲ್ಲಿರುವ ನಿಮಿತ್ತದ (ಇಣ್, ಕವರ್ಗ) ಪರದಲ್ಲಿರುವ ನಿಪಾತವಾದ ಸುಞ್‌ನ ಸಕಾರಕ್ಕೆ ಷತ್ವ ಬರುತ್ತದೆ ಎಂಬುದರಿಂದ ಇಲ್ಲಿ ಉಕಾರದ ಪರದಲ್ಲಿರುವುದರಿಂದ ಷತ್ವ ಬರುತ್ತದೆ.

**ಶ್ರುಧಿ**---ಶ್ರು ಶ್ರವಣೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಗೆ ಹಿ ಆದೇಶಬರುತ್ತದೆ. **' ಬಹುಲಂ ಛಂದಸಿ '** (ಪಾ. ಸೂ. ೨-೪-೭೩) ಎಂಬುದರಿಂದ ವಿಕರಣವಾದ ಶಪ್ಪಿಗೆ ಲುಕ್ ಬರುತ್ತದೆ. **' ಶ್ರುಶೃಣುಪೃಕೃವೃಭ್ಯಶ್ಛಂದಸಿ '** (ಪಾ. ಸೂ. ೬-೪-೧೦೨) ಎಂಬುದರಿಂದ ಹಿಗೆ ಧಿ ಆದೇಶ ಬರುತ್ತದೆ. ಶ್ರುಧಿ ಎಂದು ರೂಪವಾಗುತ್ತದೆ. ‖ ೫ ‖

|| ಸಂಹಿತಾಪಾಠಃ ||

ಯಚ್ಚಿದ್ಧಿ ಶಶ್ವತಾ ತನಾ ದೇವಂದೇವಂ ಯಜಾಮಹೇ ।

ತ್ವೇ ಇದ್ಧೂಯತೇ ಹವಿಃ || ೬ ||

|| ಪದಪಾಠಃ ||

**ಯತ್। ಚಿತ್ । ಹಿ । ಶಶ್ವತಾ । ತನಾ । ದೇವಂಽದೇವಂ । ಯಜಾಮಹೇ ।**

**ತ್ವೇ ಇತಿ । ಇತ್ । ಹೂಯತೇ । ಹವಿಃ || ೬ ||**

|| ಸಾಯಣಭಾಷ್ಯಂ ||

ಹೇ ಅಗ್ನೇ ಯಚ್ಚಿದ್ಧಿ ಯದ್ಯಪಿ ಶಶ್ವತಾ ಶಾಶ್ವತೇನ ನಿತ್ಯೇನ ತನಾ ವಿಸ್ತೃತೇನ ಹವಿಷಾ ದೇವಂ ದೇವಮನ್ಯಮನ್ಯಂ ವರುಣೇಂದ್ರಾದಿರೂಪಂ ನಾನಾವಿಧಂ ದೇವತಾವಿಶೇಷಂ ಯಜಾಮಹೇ ತಥಾಪಿ ತದ್ಧವಿಃ ಸರ್ವಂ ತ್ವೇ ಇತ್ತ್ವಯ್ಯೇವ ಹೂಯತೇ । ಅತೋ ದೇವಾಂತರವಿಷಯೋ ಯಾಗೋಽಪಿ ತ್ವದೀಯೈವ ಸೇವೇತ್ಯರ್ಥಃ || ತನಾ । ತನು ವಿಸ್ತಾರೇ । ಕ್ವಿಷ್ಟ್ಯೇತಿ ಕ್ವಿಪ್ । ಯದ್ವಾ । ಪಚಾದ್ಯಚ್ । ಸುಪಾಂ ಸುಲುಗಿತಿ ತೃತೀಯಾಯಾ ಆಕಾರಃ । ದೇವಂ ದೇವಂ । ನಿತ್ಯವೀಪ್ಸಯೋರಿತಿ ದ್ವಿರ್ಭಾವಃ । ತಸ್ಯ ಪರಮಾಮ್ರೇಡಿತಮಿತ್ಯುತ್ತರಸ್ಯಾಮ್ರೇಡಿತಸಂಜ್ಞಾಯಾಮನುದಾತ್ತಂ ಚೇತಿ ಸರ್ವಾನುದಾತ್ತತ್ವಂ । ಯಜಾಮಹೇ । ನಿಪಾತೈರ್ಯದ್ಯದಿ ಹಂತೇತಿ ನಿಘಾತಪ್ರತಿಷೇಧಃ । ತ್ವೇ । ಯುಷ್ಮಚ್ಛಬ್ದಾತ್ಸಪ್ತಮ್ಯೇಕವಚನಸ್ಯ ಸುಪಾಂ ಸುಲುಗಿತಿ ಶೇ ಆದೇಶಃ । ತ್ವಮಾವೇಕವಚನ ಇತಿ ಮಪರ್ಯಂತಸ್ಯ ತ್ವಾದೇಶಃ । ಶೇಷಲೋಪೇಽತೋ ಗುಣ ಇತಿ ಪರಪೂರ್ವತ್ವಂ । ಶೇ । ಪಾ. ೧-೧-೧೩ । ಇತಿ ಪ್ರಗೃಹ್ಯಸಂಜ್ಞಾಯಾಂ ಪ್ಲುತಪ್ರಗೃಹ್ಯಾ ಅಚಿ । ಪಾ. ೬-೧-೧೨೫ । ಇತಿ ಪ್ರಕೃತಿಭಾವಃ । ಹೂಯತೇ । ಅಕೃತ್ಸಾರ್ವಧಾತುಕಯೋಃ । ಪಾ. ೭-೪-೨೫ । ಇತಿ ದೀರ್ಘಃ ||

|| ಪ್ರತಿಪದಾರ್ಥ ||

(ಅಗ್ನೇ—ಎಲೈ ಅಗ್ನಿಯೇ) । **ಯಚ್ಚಿದ್ಧಿ—**ಯಾವುದೇ ಆಗಲಿ । **ಶಶ್ವತಾ—**(ಒಂದು ದಿನವೂ ತಪ್ಪದೆ) ಶಾಶ್ವತವಾದುದೂ । **ತನಾ—**ಅತ್ಯಧಿಕವಾದುದೂ ಆದ ಹವಿಸ್ಸಿನಿಂದ । **ದೇವಂದೇವಂ—**(ವರುಣೇಂದ್ರಾದಿ ಇತರ) ಸಕಲ ದೇವತೆಗಳನ್ನೂ । **ಯಜಾಮಹೇ—**ಪೂಜಿಸುತ್ತೇವೆಯೋ । **ಹವಿಃ—**ಆ ಸಕಲ ಹವಿಸ್ಸೂ । **ತ್ವೇ ಇತ್—**ನಿನ್ನಲ್ಲೇನೇ । **ಹೂಯತೇ—**ಅರ್ಪಿಸಲ್ಪಡುತ್ತವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಾವು ಒಂದು ದಿನವೂ ತಪ್ಪದೇ ಎಂದರೆ ಪ್ರತಿದಿನವೂ ಹೋಮಮಾಡುವ ಮತ್ತು ಅತ್ಯಧಿಕವಾಗಿಯೂ ಇರುವ ಹವಿಸ್ಸನ್ನು ವರುಣೇಂದ್ರಾದಿದೇವತೆಗಳನ್ನುದ್ದೇಶಿಸಿ ಅರ್ಪಿಸುತ್ತೇವೆಯೋ, ಆ ಸಕಲ ಹವಿಸ್ಸನ್ನೂ ಮೊದಲು ನಿನ್ನಲ್ಲೇ ಅರ್ಪಿಸುತ್ತೇವೆ, ಎಂದರೆ ನಿನ್ನ ಮೂಲಕವಾಗಿಯೇ ಅರ್ಪಿಸುತ್ತೇವೆ.

## English Translation.

Whatever we offer as plentiful oblations to the different deities every day is assuredly offered to (through) you.

॥ ವಿಶೇಷವಿಷಯಗಳು ॥

**ಶಶ್ವತಾ—ಶಾಶ್ವತೇನ, ನಿತ್ಯೇನ ।** ಪ್ರತಿದಿನವೂ ನಾವು ಅರ್ಪಿಸುವ.

**ತನಾ**—ವಿಸ್ತೃತವಾದ ಎಂದರೆ ಬಹಳವಾದ, ಹೆಚ್ಚಾದ ಹವಿಸ್ಸಿನಿಂದ.

**ದೇವಂದೇವಂ—ಅನ್ಯಮನ್ಯಂ ವರುಣೇಂದ್ರಾದಿರೂಪಂ ನಾನಾವಿಧಂ ದೇವತಾವಿಶೇಷಂ ।** ಪ್ರತಿ ದೇವತೆಯನ್ನೂ ಎಂದರೆ ವರುಣ, ಇಂದ್ರ ಮೊದಲಾದ ಬೇರೆ ಬೇರೆ ದೇವತೆಗಳನ್ನು ಉದ್ದೇಶಿಸಿ.

**ತ್ವೇ ಇತ್ ಹೂಯತೇ ಹವಿಃ**—ಇತರ ದೇವತೆಗಳನ್ನು ಉದ್ದೇಶಿಸಿ ಅರ್ಪಿಸುವ ಹವಿಸ್ಸು ಅಗ್ನಿಯಾದ ನಿನ್ನಲ್ಲಿಯೇ ಹೋಮಮಾಡುತ್ತೇವೆ. ಇತರ ದೇವತೆಗಳು **ಪರೋಕ್ಷಂ ವಾ ಅನ್ಯೇ ದೇವಾ ಇಜ್ಯಂತೇ**—ಎಂಬ ಶ್ರುತಿವಾಕ್ಯಾನುಸಾರ ಕಣ್ಣಿಗೆ ಕಾಣಿಸುವುದಿಲ್ಲವಾದ್ದರಿಂದ ಅವರಿಗೆ ಅರ್ಪಿಸಬೇಕಾದ ಹವಿಸ್ಸನ್ನು ಅವರನ್ನುದ್ದೇಶಿಸಿ ಅಗ್ನಿಯಲ್ಲೇ ಹೋಮಮಾಡುತ್ತೇವೆ. ದೇವದೂತನಾದ ನೀನು ನಿನ್ನಲ್ಲಿ ಹೋಮಮಾಡಿದ ಹವಿಸ್ಸನ್ನು ಅವರಿಗೆ ತಲಪಿಸುವೆ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ತನಾ**—ತನು ವಿಸ್ತಾರೇ ಧಾತು. ತನಾದಿ. '**ಕ್ವಿಪ್ ಚ**' (ಪಾ. ಸೂ. ೩–೨–೭೬) ಎಂಬುದರಿಂದ ಕ್ವಿಪ್ ಪ್ರತ್ಯಯ ಬರುತ್ತದೆ. ಕ್ವಿಪ್ಪಿನಲ್ಲಿ ಸರ್ವಲೋಪವಾಗುತ್ತದೆ ತನ್ ಎಂದು ನಾಂತವಾದ ಪದವಾಗುತ್ತದೆ. ತೃತೀಯಾ ಏಕವಚನದಲ್ಲಿ ತನಾ ಎಂದು ರೂಪವಾಗುತ್ತದೆ. ಅಥವಾ '**ನಂದಿಗ್ರಹ ಪಚಾದಿಭ್ಯೋ**' (ಪಾ. ಸೂ. ೩–೧–೧೩೪) ಎಂಬುದರಿಂದ ಇದು ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ ಬರುತ್ತದೆ. ಆಗ ತನ ಎಂದು ಅಕಾರಾಂತವಾದ ಪದವಾಗುತ್ತದೆ. ತೃತೀಯಾ ಏಕವಚನಕ್ಕೆ '**ಸುಪಾಂ ಸುಲುಕ್**' (ಪಾ. ಸೂ. ೭–೧–೩೯) ಎಂಬುದರಿಂದ ಆಕಾರ ಆದೇಶವು ಬರುತ್ತದೆ. ತನಾ ಎಂದು ರೂಪವಾಗುತ್ತದೆ.

**ದೇವಂದೇವಂ**—'**ನಿತ್ಯವೀಪ್ಸಯೋಃ**' (ಪಾ. ಸೂ. ೮–೧–೪) ಪೌನಃಪುನ್ಯವು ಎಂದರೆ ವೀಪ್ಸೆಯು ತೋರುತ್ತಿರುವಾಗ ಪದಕ್ಕೆ ದ್ವಿರ್ವಚನವು ಬರುತ್ತದೆ. ಇಲ್ಲಿ ವೀಪ್ಸಾ ತೋರುತ್ತಿರುವುದರಿಂದ ದ್ವಿರ್ವಚನ ಬರುತ್ತದೆ. '**ತಸ್ಯ ಪರಮಾಮ್ರೇಡಿತಂ**' (ಪಾ. ಸೂ. ೮–೧–೨) ಎಂಬುದರಿಂದ ಇಲ್ಲಿ ಪರದ ರೂಪಕ್ಕೆ ಆಮ್ರೇಡಿತಸಂಜ್ಞೆ

ಬರುತ್ತದೆ. '**ಅನುದಾತ್ತಂ ಚ**' (ಪಾ. ಸೂ. ೮-೧-೩) ದ್ವಿರುಕ್ತವಾದಾಗ ಪರದಲ್ಲಿರುವ ರೂಪವು ಸರ್ವಾನುದಾತ್ತ ವಾಗುತ್ತದೆ ಎಂಬುದರಿಂದ ಇಲ್ಲಿ ಪರದ ರೂಪಕ್ಕೆ ನಿಘಾತಸ್ವರ ಬರುತ್ತದೆ.

**ಯಜಾಮಹೇ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಉತ್ತಮಪುರುಷ ಬಹುವಚನದ ರೂಪ. ಯಚ್ಚಿದ್ಧಿ ಎಂಬಲ್ಲಿರುವ ಯತ್ ಎಂಬುದರ ಯೋಗವಿರುವುದರಿಂದ '**ನಿಪಾತೈರ್ಯದ್ಯದಿಹಂತ**' (ಪಾ. ಸೂ. ೮-೧-೩೦) ಎಂಬುದರಿಂದ ತಿಙಂತನಿಘಾತಸ್ವರವು ಬರುವುದಿಲ್ಲ.

**ತ್ವೇ**—ಯುಷ್ಮತ್ ಶಬ್ದದ ಪರದಲ್ಲಿ ಸಪ್ತಮೀ ಏಕವಚನ ಇರುವಾಗ '**ಸುಪಾಂ ಸುಲುಕ್**' ಸೂತ್ರದಿಂದ ಅದಕ್ಕೆ ಶೇ ಆದೇಶ ಬರುತ್ತದೆ. ಶಿತ್ತಾದುದರಿಂದ ಸರ್ವಾದೇಶವಾಗಿ ಬರುತ್ತದೆ. '**ತ್ವಮಾವೇಕವಚನೇ**' (ಪಾ. ಸೂ. ೭-೨-೯೭) ಎಂಬುದರಿಂದ ಯುಷ್ಮದಿನ ಮಪರ್ಯಂತಕ್ಕೆ ತ್ವ ಆದೇಶ ಬರುತ್ತದೆ. ತ್ವ+ಅದ್+ಏ ಎಂದಿರುವಾಗ '**ಶೇಷೇ ಲೋಪಃ**' (ಪಾ. ಸೂ. ೭-೨-೯೦) ಎಂಬುದರಿಂದ ಮಪರ್ಯಂತದ ಪರದಲ್ಲಿರುವ ಅದ್ ಎಂಬುದಕ್ಕೆ ಲೋಪಬರುತ್ತದೆ. '**ಅತೋ ಗುಣೇ**' (ಪಾ. ಸೂ. ೬-೧-೯೭) ಎಂಬುದರಿಂದ ಅಕಾರಕ್ಕೆ ಏಕಾರರೂಪಗುಣ ಪರದಲ್ಲಿ ರುವುದರಿಂದ ಪರರೂಪವು ಏಕಾದೇಶವಾಗಿ ಬರುತ್ತದೆ. ತ್ವೇ ಎಂದು ರೂಪವಾಗುತ್ತದೆ. '**ಶೇ**' (ಪಾ. ಸೂ. ೧-೧-೧೩) ಶೇ ಎಂಬುದು ಪ್ರಗೃಹ್ಯ ಸಂಜ್ಞೆಯನ್ನು ಹೊಂದುವುದು. ಆದುದರಿಂದ ತ್ವೇ ಎಂಬುದಕ್ಕೆ ಪ್ರಗೃಹ್ಯ ಸಂಜ್ಞೆ ಬರುತ್ತದೆ. ತ್ವೇ+ಇತಿ ಎಂದಿರುವಾಗ '**ಪ್ಲುತಪ್ರಗೃಹ್ಯಾ ಅಚಿ ನಿತ್ಯಂ**' (ಪಾ. ಸೂ. ೬-೧-೧೨೫) ಪ್ಲುತಕ್ಕಾಗಲೀ ಪ್ರಗೃಹ್ಯಕ್ಕಾಗಲೀ ಅಚ್ ಪರದಲ್ಲಿರುವಾಗ ಪ್ರಕೃತಿಭಾವ ಬರುತ್ತದೆ ಎಂಬುದರಿಂದ ಸಂಧಿಯು ಬರುವುದಿಲ್ಲ.

**ಹೂಯತೇ**—ಹು ದಾನಾದನಯೋಃ ಧಾತು. ಜುಹೋತ್ಯಾದಿ ಕರ್ಮಣಿಯಲ್ಲಿ ಲಟ್ ಪ್ರಥಮಪುರುಷ ಏಕ ವಚನಕ್ಕೆ '**ಟಿತಆತ್ಮನೇಪದಾನಾಂ**' (ಪಾ. ಸೂ. ೩-೪-೭೯) ಎಂಬುದರಿಂದ ಏತ್ವ ಬರುತ್ತದೆ. '**ಸಾರ್ವ-ಧಾತುಕೇಯಕ್**' (ಪಾ. ಸೂ. ೩-೧-೬೭) ಎಂಬುದರಿಂದ ಯಕ್ ಬರುತ್ತದೆ. '**ಅಕೃತ್‌ಸಾರ್ವಧಾತುಕಯೋ-ದೀರ್ಘಃ**' (ಪಾ. ಸೂ. ೭-೪-೨೫) ಕೃತ್ ಸಾರ್ವಧಾತುಕ ವ್ಯತಿರಿಕ್ತವಾದ ಯಾದಿ ಪ್ರತ್ಯಯಪರದಲ್ಲಿರುವಾಗ ಅಜಂತಾಂಗಕ್ಕೆ ದೀರ್ಘಬರುತ್ತದೆ ಎಂಬುದರಿಂದ ಯಕ್‌ಪರದಲ್ಲಿರುವಾಗ ಧಾತುವಿಗೆ ದೀರ್ಘಬರುತ್ತದೆ. ಹೂಯತೇ ಎಂದು ರೂಪವಾಗುತ್ತದೆ. ॥ ೬ ॥

---

॥ ಸಂಹಿತಾಪಾಠಃ ॥

ಪ್ರಿಯೋ ನೋ ಅಸ್ತು ವಿಶ್ಪತಿರ್ಹೋತಾ ಮನ್ದ್ರೋ ವರೇಣ್ಯಃ ।

ಪ್ರಿಯಾಃ ಸ್ವಗ್ನಯೋ ವಯಂ ॥ ೭ ॥

॥ ಪದಪಾಠಃ ॥

ಪ್ರಿಯಃ । ನಃ । ಅಸ್ತು । ವಿಶ್ಪತಿಃ । ಹೋತಾ । ಮನ್ದ್ರಃ । ವರೇಣ್ಯಃ ।
ಪ್ರಿಯಾಃ । ಸುऽಅಗ್ನಯಃ । ವಯಂ ॥ ೭ ॥

॥ ಸಾಯಣ ಭಾಷ್ಯಂ ॥

ವಿಶ್ಪತಿರ್ವಿಶಾಂ ಪ್ರಜಾನಾಂ ಪಾಲಕೋ ಹೋತಾ ಹೋಮನಿಷ್ಪಾದಕೋ ಮಂದ್ರೋ ಹೃಷ್ಟೋ ವರೇಣ್ಯೋ ವರಣೀಯೋಽಗ್ನಿರ್ನೋಽಸ್ಮಾಕಂ ಪ್ರಿಯೋಽಸ್ತು । ವಯಮಪಿ ಸ್ವಗ್ನಯಃ ಶೋಭನಾಗ್ನಿಯುಕ್ತಾಃ ಸಂತಸ್ತವ ಪ್ರಿಯಾ ಭೂಯಾಸ್ಮೇತಿ ಶೇಷಃ ॥ ವಿಶ್ಪತಿಃ ॥ ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರೇ [ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ವರೇಣ್ಯಃ । ವೃಞ ಏಣ್ಯಃ । ಉ. ೩-೯೮ । ವೃಷಾದಿತ್ವಾದಾದ್ಯುದಾತ್ತತ್ವಂ । ಸ್ವಗ್ನಯಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ವಿಶ್ಪತಿಃ**—ಪ್ರಜೆಗಳಿಗೆ ಒಡೆಯನೂ । **ಹೋತಾ**—ಹೋಮಸಂಪಾದಕನೂ । **ಮಂದ್ರಃ**—ಸಂತುಷ್ಟನೂ । **ವರೇಣ್ಯಃ**—ಶ್ರೇಷ್ಠನೂ (ನಮ್ಮಿಂದ ಆರಿಸಲ್ಪಡುವವನೂ) ಆದ ಅಗ್ನಿಯು । **ನಃ**—ನಮಗೆ । **ಪ್ರಿಯಃ**—ಅನುಕೂಲವನ್ನು ಮಾಡುವವನಾಗಿ । **ಅಸ್ತು**—ಆಗಲಿ । **ವಯಂ**—ನಾವೂ ಕೂಡ । **ಸ್ವಗ್ನಯಃ**—ಮಂಗಳಕರಗಳಾದ ಅಗ್ನಿಯುಕ್ತರಾಗಿ । **ಪ್ರಿಯಾಃ**—(ಅಗ್ನಿಗೆ) ಬೇಕಾದವರಾಗಿ ಆಗೋಣ.

॥ ಭಾವಾರ್ಥ ॥

ಪ್ರಜಾಪಾಲಕನೂ, ಹೋಮಸಂಪಾದಕನೂ, ಸಂತುಷ್ಟನೂ ಮತ್ತು ಶ್ರೇಷ್ಠನೂ ಆದ ಅಗ್ನಿಯು ನಮಗೆ ಅನುಕೂಲವನ್ನುಂಟುಮಾಡುವವನಾಗಲಿ. ನಾವೂ ಸಹ ಶೋಭನಕರಗಳಾದ ಅಗ್ನಿಗಳಿಂದ ಕೂಡಿದವರಾಗಿ ಅಗ್ನಿಗೆ ಪ್ರಿಯರಾಗೋಣ.

## English Translation.

May Agni, the lord of men, the sacrificing priest (Hotri), the gracious, and the great (or the chosen) be kind (dear) to us; may we, possessed of holy fires, be dear to Agni.

॥ ವಿಶೇಷವಿಷಯಗಳು ॥

**ಪ್ರಿಯಾಃ ಸ್ವಗ್ನಯೋ ವಯಂ**—ಈ ಋಕ್ಕಿನಲ್ಲಿ ಅಗ್ನಿಯು ವಿಶ್ಪತಿ, ಹೋತಾ, ಮಂದ್ರ, ವರೇಣ್ಯ ಎಂಬ ಅನೇಕ ವಿಶೇಷಣಗಳಿಂದ ಸ್ತುತಿಸಲ್ಪಟ್ಟಿರುವನು. ಆದುದರಿಂದ ಇಂತಹ ಗುಣವಿಶಿಷ್ಟನಾದ ಅಗ್ನಿಯನ್ನು ಬಹುವಚನದಲ್ಲಿ ಋಷಿಯು ನಿರ್ದೇಶಿಸಿರುವನು. ಅಥವಾ ಪ್ರತಿಮನೆಯಲ್ಲಿಯೂ ಗೃಹಪತಿಯಾಗಿ ಅಗ್ನಿಯು ಇರುವುದರಿಂದ ಸ್ವಗ್ನಯಃ ಶೋಭನವನ್ನುಂಟುಮಾಡುವ ಅಥವಾ ನಮ್ಮ (ಮನೆಯಲ್ಲಿರುವ) ಅಗ್ನಿಗಳು ಎಂದು ಭಾವಿಸಿ ಪ್ರಿಯಾಃ ಸ್ವಗ್ನಯಃ ಎಂದು ಬಹುವಚನ ಪ್ರಯೋಗಮಾಡಿರಬಹುದು.

॥ ವ್ಯಾಕರಣಪ್ರಕ್ರಿಯಾ ॥

**ವಿಶ್ಪತಿಃ**—ವಿಶಾಂ ಪತಿಃ ವಿಶ್ಪತಿಃ ಪ್ರಜೆಗಳ ಒಡೆಯನು. **'ಪತ್ಯಾವೈಶ್ವರ್ಯೇ'** (ಪಾ. ಸೂ. ೬-೨-೧೮) ಐಶ್ವರ್ಯವಾಚಿಯಾದ ಪತಿಶಬ್ದವು ಉತ್ತರಪದವಾಗಿರುವಾಗ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಇದರಿಂದ ಇಲ್ಲಿ ಪೂರ್ವಪದಪ್ರಕೃತಿ ಸ್ವರವು ಪ್ರಾಪ್ತವಾದರೆ **'ಪರಾದಿಶ್ಛಂದಸಿ ಬಹುಲಂ'** (ಪಾ ಸೂ. ೬-೨-೧೯೯) ಎಂಬಲ್ಲಿ ಬಹುಲಗ್ರಹಣ ಮಾಡಿರುವುದರಿಂದ ಇಲ್ಲಿ ಉತ್ತರಪದಾದ್ಯುದಾತ್ತಸ್ವರವು ಬರುತ್ತದೆ. ವಿಶ್ಪತಿಃ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ.

**ವರೇಣ್ಯಃ—'ವೃಞ ಏಣ್ಯಃ'** (ಉ. ಸೂ. ೩-೩೭೮) ವೃಞ್ ವರಣೇ ಧಾತು. ಇದಕ್ಕೆ ಏಣ್ಯ ಪ್ರತ್ಯಯವು ಬರುತ್ತದೆ. ಏಣ್ಯಪರದಲ್ಲಿರುವಾಗ **'ಸಾರ್ವಧಾತುಕಾರ್ಧಧಾತುಕಯೋಃ'** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ ಬರುತ್ತದೆ. ಋಕಾರದ ಸ್ಥಾನಕ್ಕೆ ಬರುವುದರಿಂದ **'ಉರಣ್ರಪರಃ'** (ಪಾ. ಸೂ. ೧-೧-೫೧) ಸೂತ್ರದಿಂದ ರಪರವಾಗಿ ಬರುತ್ತದೆ ವರೇಣ್ಯಃ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರವು ಪ್ರಾಪ್ತವಾದರೆ, **'ವೃಷಾದೀನಾಂ ಚ'** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ವರೇಣ್ಯಃ ಎಂಬುದು ವೃಷಾದಿಯಲ್ಲಿ ಪಠಿತವಾಗಿರುತ್ತದೆ.

**ಸ್ವಗ್ನಯಃ**—ಶೋಭನಾಃ ಅಗ್ನಯಃ ಯೇಷಾಂ ತೇ-ಸ್ವಗ್ನಯಃ ಪವಿತ್ರವಾದ ಅಗ್ನಿಯುಳ್ಳವರು ಎಂದು ಭಾವ. ಬಹುವ್ರೀಹಿಸಮಾಸ. **'ನಞ್ಸುಭ್ಯಾಂ'** (ಪಾ. ಸೂ. ೬-೨-೧೭೨) ಬಹುವ್ರೀಹಿಯಲ್ಲಿ ನಞ್, ಸು ಇವೆರಡರ ಪರದಲ್ಲಿರುವ ಉತ್ತರಪದವು ಅಂತೋದಾತ್ತಸ್ವರವನ್ನು ಹೊಂದುತ್ತವೆ ಎಂಬುದರಿಂದ ಇಲ್ಲಿ ಸು ಎಂಬುದರ ಪರದಲ್ಲಿರುವ ಅಗ್ನಿಶಬ್ದಕ್ಕೆ ಅಂತೋದಾತ್ತಸ್ವರ ಬರುತ್ತದೆ. ಸ್ವಗ್ನಿ ಶಬ್ದವು ಅಂತೋದಾತ್ತವಾಗಿದೆ. ಜಸ್ ಪರದಲ್ಲಿರುವಾಗ **'ಜಸಿ ಚ'** (ಪಾ. ಸೂ. ೭-೩-೧೦೯) ಎಂಬುದರಿಂದ ಪೂರ್ವಕ್ಕೆ ಗುಣ ಬರುತ್ತದೆ. ಅದಕ್ಕೆ ಅಚ್‌ಪರದಲ್ಲಿರುವುದರಿಂದ ಅಯಾದೇಶ ಬಂದರೆ ಸ್ವಗ್ನಯಃ ಎಂದು ರೂಪವಾಗುತ್ತದೆ. ॥ ೭ ॥

॥ ಸಂಹಿತಾಪಾಠಃ ॥

ಸ್ವಗ್ನಯೋ ಹಿ ವಾರ್ಯಂ ದೇವಾಸೋ ದಧಿರೇ ಚ ನಃ ।
ಸ್ವಗ್ನಯೋ ಮನಾಮಹೇ ॥ ೮ ॥

॥ ಪದಪಾಠಃ ॥

ಸುऽಅಗ್ನಯಃ । ಹಿ । ವಾರ್ಯಂ । ದೇವಾಸಃ । ದಧಿರೇ । ಚ । ನಃ ।
ಸುऽಅಗ್ನಯಃ । ಮನಾಮಹೇ ॥ ೮ ॥

॥ ಸಾಯಣಭಾಷ್ಯಂ ॥

ಸ್ವಗ್ನಯಃ ಶೋಭನಾಗ್ನಿಯುಕ್ತಾ ದೇವಾಸೋ ದೀಪ್ಯಮಾನಾ ಋತ್ವಿಜೋ ನೋಽಸ್ಮದೀಯಂ ವಾರ್ಯಂ ವರಣೀಯಂ ಹವಿರ್ಹಿ ಯಸ್ಮಾದ್ದಧಿರೇ ಧೃತವಂತಃ ತಸ್ಮಾದ್ವಯಂ ಸ್ವಗ್ನಯಃ ಶೋಭನಾಗ್ನಿಯುಕ್ತಾಃ ಸಂತೋ ಮನಾಮಹೇ । ತ್ವಾಂ ಯಾಚಾಮಹೇ ॥ ವಾರ್ಯಂ । ವೃಞ್ ವರಣೇ । ವೃಜ್ ಸಂಭಕ್ತೌ । ಋಹಲೋರ್ಣ್ಯತ್ । ಈಡವಂದೇತ್ಯಾದಿನಾದ್ಯುದಾತ್ತತ್ವಂ । ದಧಿರೇ । ಇರೇಚಶ್ಚಿತ್ವಾದಂತೋದಾತ್ತತ್ವಂ । ಹಿ ಚೇತಿ ನಿಘಾತಪ್ರತಿಷೇಧಃ । ಮನಾಮಹೇ । ಮನ ಜ್ಞಾನೇ । ವ್ಯತ್ಯಯೇನ ಶಪ್ ॥

॥ ಪ್ರತಿಪದಾರ್ಥ ॥

ಸ್ವಗ್ನಯಃ—ಶ್ರೇಷ್ಠವಾದ ಅಗ್ನಿಯುಳ್ಳವರೂ । ದೇವಾಸಃ—ಪ್ರಕಾಶಮಾನರೂ ಆದ ಋತ್ವಿಕ್ಕುಗಳು । ನಃ—ನಮ್ಮ । ವಾರ್ಯಂ—ಶ್ರೇಷ್ಠವಾದ ಹವಿಸ್ಸನ್ನು । ಹಿ—ಯಾವ ಕಾರಣದಿಂದ । ದಧಿರೇ—ಹೊಂದಿದ್ದಾರೋ (ಆದ್ದರಿಂದ) । ಸ್ವಗ್ನಯಃ—ಮಂಗಳಕರಗಳಾದ ಅಗ್ನಿಯುಕ್ತರಾದ (ನಾವೂ ಕೂಡ) । ಮನಾಮಹೇ—(ನಿನ್ನನ್ನು) ಬೇಡಿಕೊಳ್ಳುತ್ತೇವೆ.

॥ ಭಾವಾರ್ಥ ॥

ಶ್ರೇಷ್ಠವಾದ ಅಗ್ನಿಯುಕ್ತರೂ, ಪ್ರಕಾಶಮಾನರೂ ಆದ ಋತ್ವಿಕ್ಕುಗಳು ಶ್ರೇಷ್ಠವಾದ ನಮ್ಮ ಹವಿಸ್ಸನ್ನು ನಮ್ಮ ಕಲ್ಯಾಣಕ್ಕಾಗಿಯೇ ನಿನಗೆ ಅರ್ಪಿಸಲು ಹೊಂದಿದ್ದಾರೆ. ಆದ್ದರಿಂದಲೇ, ಮಂಗಳಕರಗಳಾದ ಅಗ್ನಿಗಳನ್ನು ಹೊಂದಿರುವ ನಾವೂ ಸಹ ನಮ್ಮ ಕಲ್ಯಾಣಕ್ಕಾಗಿ ನಿನ್ನನ್ನು ಪ್ರಾರ್ಥಿಸುತ್ತೇವೆ.

## English Translation.

As the brilliant priests possessed of holy fires have taken charge of our oblation, so we with holy fires pray to you.

॥ ವಿಶೇಷವಿಷಯಗಳು ॥

**ವಾರ್ಯಂ--ವರಣೀಯಂ, ಶ್ರೇಷ್ಠಂ** । ಶ್ರೇಷ್ಠವಾದ ವಸ್ತುವು, ಹವಿಸ್ಸು.

**ದೇವಾಸಃ--ದೀಪ್ಯಮಾನಾ ಋತ್ವಿಜಃ** । ಪ್ರಕಾಶಮಾನರಾದ ಋತ್ವಿಗ್ಜನರು.

**ಮನಾಮಹೇ—ತ್ವಾಂ ಯಾಚಾಮಹೇ** । ಪ್ರಾರ್ಥಿಸುತ್ತೇವೆ.

ಈ ಋಕ್ಕಿಗೆ ಬೇರೆ ವಿಧವಾಗಿಯೂ ಅರ್ಥಮಾಡಬಹುದು—**ಸ್ವಗ್ನಯಃ ಪ್ರಸನ್ನಾಗ್ನಿಯುಕ್ತಾ ದೇವಾಸೋ ದೇವಾ ವಾರ್ಯಂ ವರಣೀಯಂ ಧನಂ ನೋಽಸ್ಮಭ್ಯಂ ದಧಿರೇ ಚ ದದತಿ ಖಲು । ಅತಃ ಸ್ವಗ್ನಯಃ ಪ್ರಸನ್ನಾಗ್ನಿಯುಕ್ತಾ ವಯಂ ತ್ವಾಂ ಮನಾಮಹೇ ಸ್ತುಮಹೇ** ॥ ಎಂದರೆ ಅಗ್ನಿಸಹಿತರಾದ ದೇವತೆಗಳು ನಮಗೆ ಬೇಕಾದ ಶ್ರೇಷ್ಠಧನಾದಿಗಳನ್ನು ಕೊಡುವರು. ಆದುದರಿಂದ ಅಗ್ನಿಯುಕ್ತರಾದ (ಅಗ್ನಿಯನ್ನು ಆರಾಧಿಸುತ್ತಿರುವ) ನಾವು ಅಗ್ನಿಯಾದ ನಿನ್ನನ್ನು ಸ್ತೋತ್ರಮಾಡುತ್ತೇವೆ, ಎಂದು.

॥ ವ್ಯಾಕರಣಪ್ರಕ್ರಿಯಾ ॥

**ವಾರ್ಯಂ**—ವೃಞ್ ವರಣೇ ಧಾತು ಸ್ವಾದಿ. **'ಋಹಲೋರ್ಣ್ಯತ್'** (ಪಾ. ಸೂ. ೩-೧-೧೨೪) ಎಂಬುದರಿಂದ ಋದಂತವಾದುದರಿಂದ ಣ್ಯತ್ ಪ್ರತ್ಯಯ ಬರುತ್ತದೆ. ಣಿತ್ತಾದುದರಿಂದ **'ಅಚೋ ಞ್ಣಿತಿ'** (ಪಾ. ಸೂ. ೭-೨-೧೧೫) ಎಂಬುದರಿಂದ ಧಾತುವಿಗೆ ವೃದ್ಧಿ ಬರುತ್ತದೆ. ರಪರವಾಗಿ ಬರುವುದರಿಂದ ವಾರ್ಯ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನದ ರೂಪ. **'ಈಡವಂದವೃಶಂಸದುಹಾಂ ಣ್ಯತಃ'** (ಪಾ. ಸೂ. ೬-೧-೨೧೪) ಣ್ಯಂತವಾದ ಈ ಧಾತುಗಳಿಗೆ ಆದ್ಯುದಾತ್ತ ಸ್ವರವು ಬರುತ್ತದೆ ಎಂಬುದರಿಂದ ಇಲ್ಲಿ ಪ್ರತ್ಯಯಸ್ವರವು ಬಾಧಿತವಾಗಿ ಆದ್ಯುದಾತ್ತ ಸ್ವರವು ಬರುತ್ತದೆ.

**ದಧಿರೇ**—ಡುಧಾಞ್ ಧಾರಣಪೋಷಣಯೋಃ ಜುಹೋತ್ಯಾದಿ. ಲಿಟ್ಟಿನ ಪ್ರಥಮಪುರುಷ ಬಹುವಚನದಲ್ಲಿ **'ಲಿಟಸ್ತಝಯೋರೇಶ್ ಇರೇಚ್'** (ಪಾ. ಸೂ. ೩-೪-೮೧) ಎಂಬುದರಿಂದ ಝ ಪ್ರತ್ಯಯಕ್ಕೆ ಇರೇಚ್ ಆದೇಶ ಬರುತ್ತದೆ. ಧಾತುವಿಗೆ ಲಿಟ್ನಿಮಿತ್ತವಾಗಿ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹಲಾದಿಶೇಷ, ಹ್ರಸ್ವ, ಜಸ್ತ್ವಗಳು ಬರುತ್ತವೆ ದಧಾ+ಇತಿ ಎಂದಿರುವಾಗ ಪ್ರತ್ಯಯವು ಕಿತ್ತಾದುದರಿಂದ **'ಆತೋಲೋಪ ಇಟಿ ಚ'** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪ ಬರುತ್ತದೆ. ದಧಿರೇ ಎಂದು ರೂಪವಾಗುತ್ತದೆ. ಇರೇಚಿನಲ್ಲಿ ಚಕಾರ ಇತ್ತಾದುದರಿಂದ **'ಚಿತಃ'** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರವು ಬರುತ್ತದೆ. ಹಿ ಎಂಬುದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಮನಾಮಹೇ**—ಮನ ಜ್ಞಾನೇ ಧಾತು. ದಿವಾದಿ. **'ದಿವಾದಿಭ್ಯಃ ಶನ್'** (ಪಾ. ಸೂ. ೩-೧-೬೯) ಎಂಬುದರಿಂದ ಉತ್ತಮಪುರುಷ ಬಹುವಚನ ಪರದಲ್ಲಿರುವಾಗ ಪ್ರಾಪ್ತವಾಗುತ್ತದೆ. ಆದರೆ **'ವ್ಯತ್ಯಯೋ ಬಹುಲಂ'**

(ಪಾ. ಸೂ. ೩-೧-೬೫) ಎಂಬುದರಿಂದ ಇಲ್ಲಿ ಶಪ್ ವಿಕರಣ ಪ್ರತ್ಯಯ ಬರುತ್ತದೆ. **‘ ಅತೋದೀರ್ಘೋ ಯಞಿ ’** (ಪಾ. ಸೂ. ೭-೩-೧೦೧) ಎಂಬುದರಿಂದ ಮಹಿಙ್ ಪರದಲ್ಲಿರುವಾಗ ಅದಂತಾಂಗಕ್ಕೆ ದೀರ್ಘ ಬರುತ್ತದೆ. **‘ ಟಿತ-ಆತ್ಮನೇಪದಾನಾಂ ಟೇರೇ ”** (ಪಾ. ಸೂ. ೩-೪-೭೯) ಎಂಬುದರಿಂದ ಪ್ರತ್ಯಯಕ್ಕೆ ಏತ್ವವು ಬಂದರೆ ಮನಾಮಹೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ **‘ ತಿಙ್ಙತಿಙಃ ’** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ದೇವಾಸಃ**—ದೇವ+ಜಸ್ ಎಂದಿರುವಾಗ **‘ ಆಜ್ಜಸೇರಸುಕ್ ’** (ಪಾ. ಸೂ. ೭-೧-೫೦) ಎಂಬುದರಿಂದ ಅವರ್ಣಾಂತಾಂಗದ ಪರದಲ್ಲಿರುವ ಜಸ್ಸಿಗೆ ಅಸುಕಾಗವು ಬರುತ್ತದೆ. ಅಸಸ್ ಎಂದಾಗುತ್ತದೆ. ಪೂರ್ವಸವರ್ಣದೀರ್ಘ ಬಂದು ರುತ್ವ ವಿಸರ್ಗಗಳು ಬಂದರೆ ದೇವಾಸಃ ಎಂದು ರೂಪವಾಗುತ್ತದೆ. ॥ ೮ ॥

---

॥ ಸಂಹಿತಾಪಾಠಃ ॥

ಅಥಾ ನ ಉಭಯೇಷಾಮಮೃತ ಮರ್ತ್ಯಾನಾಂ ।
ಮಿಥಃ ಸಂತು ಪ್ರಶಸ್ತಯಃ ॥ ೯ ॥

॥ ಪದಪಾಠಃ ॥

ಅಥ । ನಃ । ಉಭಯೇಷಾಂ । ಅಮೃತ । ಮರ್ತ್ಯಾನಾಂ ।
ಮಿಥಃ । ಸಂತು । ಪ್ರಽಶಸ್ತಯಃ ॥ ೯ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಅಮೃತ ಮರಣರಹಿತಾಗ್ನೇ ಅಥ ಕರ್ಮಾನುಷ್ಠಾನಾನಂತರಂ ಮರ್ತ್ಯಾನಾಂ ಮನುಷ್ಯಾಣಾಂ ನೋಽಸ್ಮಾಕಮಸ್ಮತ್ಸ್ವಾಮಿನಸ್ತವ ಚೋಭಯೇಷಾಂ ಮಿಥಃ ಪರಸ್ಪರಂ ಪ್ರಶಸ್ತಯಃ ಪ್ರಶಂಸಾ-ರೂಪಾ ವಾಚಃ ಸಂತು । ಸಮ್ಯಗನುಷ್ಠಿತಮಿತಿ ಯಜಮಾನವಿಷಯಾ ಪ್ರಶಂಸಾ । ಸಮ್ಯಗನುಗೃಹೀತ-ಮಿತ್ಯಗ್ನಿವಿಷಯಾ ॥ ಅಥ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘಃ । ಅಮೃತ । ಅಪಾದಾದಾವಿತಿ ಪರ್ಯುದಾಸಾತ್ಸ್ವಾಷ್ಟಿಕಮಾದ್ಯುದಾತ್ತತ್ವಂ । ಮರ್ತ್ಯಾನಾಂ । ಮೃಙ್ ಪ್ರಾಣತ್ಯಾಗೇ । ಅಸಿಹಸೀತ್ಯಾದಿನಾ ತನ್ಪ್ರತ್ಯಯಾಂತೋ ಮರ್ತಶಬ್ದಃ । ತಸ್ಮಾದ್ಭವೇ ಛಂದಸಿ । ಪಾ. ೪-೪-೧೧೦ । ಇತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಸಂತು । ಶ್ನಸೋರಲ್ಲೋಪಃ । ಪ್ರಶಸ್ತಯಃ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಅಮೃತ**—ಮರಣರಹಿತನಾದ ಅಗ್ನಿಯೇ । **ಅಥ**— ಯಜ್ಞಕರ್ಮದ ಸಮಾಪ್ತಿಯಾದನಂತರ । **ಪ್ರಶಸ್ತಯಃ**—(ಕರ್ಮವಿಷಯದಲ್ಲಿ ನಮ್ಮ ನಿಮ್ಮ) ಪ್ರಶಂಸಾರೂಪಗಳಾದ ವಾಕ್ಯಗಳು । **ಮರ್ತ್ಯಾನಾಂ**—ಮಾನವರಾದ । **ನಃ**—ನಮಗೂ । **ಉಭಯೇಷಾಂ**—(ನಾವು ಮತ್ತು ನೀವು) ಎರಡು ಪಕ್ಷಗಳಿಗೂ । **ಮಿಥಃ**—ಪರಸ್ಪರವಾಗಿ (ಇಬ್ಬರ ಸೌಖ್ಯಕ್ಕಾಗಿಯೂ) । **ಸಂತು**—ನೆರವೇರಲಿ.

॥ ಭಾವಾರ್ಥ ॥

ಮರಣರಹಿತನಾದ ಎಲೈ ಅಗ್ನಿಯೇ, ಯಜ್ಞಕರ್ಮಾನಂತರ ಕರ್ಮದ ವಿಷಯದಲ್ಲಿ ನಡೆಯತಕ್ಕ ನಮ್ಮ ನಿಮ್ಮ ಪ್ರಶಂಸೆಗಳು ಯಜ್ಞದ ಸಾರ್ಥಕತೆಯನ್ನು ಹೊಗಳಿ ಮಾನವರಾದ ನಮಗೂ ಮತ್ತು ನಿನಗೂ ಈ ಎರಡು ಪಕ್ಷಗಳಿಗೂ ಸೌಖ್ಯವನ್ನುಂಟುಮಾಡುವಂತಾಗಲಿ.

## English Translation.

And now, Agni, may there be an interchange of praises between you, the immortal, and us the mortals.

॥ ವಿಶೇಷವಿಷಯಗಳು ॥

**ಉಭಯೇಷಾಂ**—ಅಗ್ನಿಯಾದ ನಿನಗೂ, ಮನುಷ್ಯರಾದ ನಮಗೂ ಉಭಯತ್ರರಿಗೂ.

**ಅಮೃತ**— ಮರಣರಹಿತ.

**ಪ್ರಶಸ್ತಯಃ**—**ಪ್ರಶಂಸಾರೂಪಾ ವಾಚಃ । ಸಮ್ಯಗನುಷ್ಠಿತಮಿತಿ ಯಜಮಾನವಿಷಯಾ ಪ್ರಶಂಸಾ । ಸಮ್ಯಗನುಗೃಹೀತಮಿತ್ಯಗ್ನಿವಿಷಯಾ ।** ಪರಸ್ಪರ ಪ್ರಶಂಸಾರೂಪವಾದ ಸಂಭಾಷಣೆಯು ; ಯಜ್ಞಾನುಷ್ಠಾನವನ್ನು ಚೆನ್ನಾಗಿ ನಿರ್ವಹಿಸಿದಿರೆಂದು ಅಗ್ನಿಯೂ, ನಿನ್ನಿಂದ ಅನುಗೃಹೀತರಾದೆವೆಂದು ಯಜಮಾನರಾದಿ ಜನರೂ ಪರಸ್ಪರ ಅಭಿನಂದನಾದಿಗಳನ್ನು ಮಾಡುವುದು.

॥ ವ್ಯಾಕರಣಪ್ರಕ್ರಿಯಾ ॥

**ಅಥ**—**' ಚಾದಯೋಽಸತ್ವೇ '** (ಪಾ ಸೂ. ೧-೪-೫೭) ಎಂಬುದರಿಂದ ಇದಕ್ಕೆ ನಿಪಾತಸಂಜ್ಞೆ ಬರುತ್ತದೆ. **' ನಿಪಾತಸ್ಯ ಚ '** (ಪಾ ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘಬರುತ್ತದೆ. ಅಥಾ ಎಂದು ಆಗುತ್ತದೆ.

**ಅಮೃತ**—ಮೃಙ್ ಪ್ರಾಣತ್ಯಾಗೇ ಧಾತು. ಭಾವಾರ್ಥದಲ್ಲಿ ಕ್ತ ಪ್ರತ್ಯಯ ಬರುತ್ತದೆ. ನವಿದ್ಯತೇ ಮೃತಂ ಯಸ್ಯ ಸಃ ಅಮೃತಃ ಸಂಬುದ್ಧಿಯಲ್ಲಿ ಅಮೃತ ಎಂದು ರೂಪವಾಗುತ್ತದೆ. ಇದು ಪಾದದ ಆದಿಯಲ್ಲಿರುವುದರಿಂದ **ಅಪಾದಾದೌ** ಎಂದು ನಿಷೇಧಮಾಡಿರುವುದರಿಂದ ಆಷ್ಟಮಿಕ ನಿಘಾತಸ್ವರವು ಬರುವುದಿಲ್ಲ. **' ಆಮಂತ್ರಿತಸ್ಯ '** (ಪಾ. ಸೂ ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಮರ್ತ್ಯಾನಾಮ್**—ಮೃಙ್ ಪ್ರಾಣತ್ಯಾಗೇ ಧಾತು. **' ಅಸಿಹಸಿಮೃಗ್ರಿ'** (ಉ ಸೂ. ೩-೩೬೬) ಎಂಬುದರಿಂದ ತನ್ ಪ್ರತ್ಯಯು ಬರುತ್ತದೆ. ತನ್ ಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. ರಪರವಾಗಿ ಬಂದರೆ ಮರ್ತ ಎಂದು ರೂಪವಾಗುತ್ತದೆ ಇದರ ಮೇಲೆ **' ಭವೇ ಛಂದಸಿ '** (ಪಾ ಸೂ. ೪-೪-೧೧೦) ಎಂಬುದರಿಂದ ಭವಾರ್ಥದಲ್ಲಿ ಯತ್ ಪ್ರತ್ಯಯು ಬರುತ್ತದೆ. ಯಪರದಲ್ಲಿರುವಾಗ **' ಯಸ್ಯೇತಿ ಚ '** (ಪಾ. ಸೂ. ೬-೪-೧೪೮) ಸೂತ್ರದಿಂದ ಪೂರ್ವದ ಅಕಾರಕ್ಕೆ ಲೋಪ ಬಂದರೆ ಮರ್ತ್ಯ ಎಂದು ರೂಪವಾಗುತ್ತದೆ. ಷಷ್ಠೀ ಬಹುವಚನದಲ್ಲಿ ಮರ್ತ್ಯಾನಾಮ್ ಎಂದು ರೂಪವಾಗುತ್ತದೆ. **' ಯತೋಽನಾವಃ '** (ಪಾ. ಸೂ. ೬-೧-೨೧೩) ಎಂಬುದರಿಂದ ನೌ ಶಬ್ದ ಭಿನ್ನವಾದುದರಿಂದಲೂ ಯದಂತವಾದುದರಿಂದಲೂ ಆದ್ಯುದಾತ್ತಸ್ವರವು ಬರುತ್ತದೆ.

**ಸಂತು**—ಅಸ ಭುವಿ ಧಾತು. ಅದಾದಿ. ಲೋಟ್ ಪ್ರಥಮಪುರುಷ ಬಹುವಚನದ ಝಿಗೆ ಅಂತಾದೇಶ ಬರುತ್ತದೆ. **' ಏರುಃ '** (ಪಾ. ಸೂ. ೩-೪-೮೬) ಎಂಬುದರಿಂದ ಉತ್ವ ಬರುತ್ತದೆ. ಅಸ್+ಅಂತು ಎಂದಿರುವಾಗ ವಿಕರಣಕ್ಕೆ **' ಅದಿಪ್ರಭೃತಿಭ್ಯಃ ಶಪಃ '** (ಪಾ ಸೂ. ೨-೪-೭೨) ಎಂಬುದರಿಂದ ಲುಕ್ ಬರುತ್ತದೆ. **' ಶ್ನಸೋ-ರಲ್ಲೋಪಃ '** (ಪಾ. ಸೂ. ೬-೪-೧೧೧) ಎಂಬುದರಿಂದ ಅಜಾದಿ ಙಿತ್ ಪ್ರತ್ಯಯು ಪರದಲ್ಲಿರುವುದರಿಂದ ಅಸ್ಸಿನ ಅಕಾರಕ್ಕೆ ಲೋಪ ಬರುತ್ತದೆ. ಸಂತು ಎಂದು ರೂಪವಾಗುತ್ತದೆ.

**ಪ್ರಶಸ್ತಯಃ**—ಶಂಸು ಸ್ತುತೌ ಧಾತು. ಕ್ತಿನ್ ಪ್ರತ್ಯಯಪರದಲ್ಲಿರುವಾಗ **'ಅನಿದಿತಾಂ ಹಲ '** (ಪಾ. ಸೂ. ೬-೪-೨೪) ಎಂಬುದರಿಂದ ಉಪಧಾನಕಾರಕ್ಕೆ ಲೋಪ ಬರುತ್ತದೆ. ಪ್ರಶಸ್ತಿ ಶಬ್ದವಾಗುತ್ತದೆ. ಪ್ರಥಮಾ ಬಹುವಚನರೂಪ. **' ತಾದೌ ಚ ನಿತಿ ಕೃತ್ಯತೌ '** (ಪಾ. ಸೂ. ೬-೨-೫೦) ತಕಾರಾದಿಯಾದ ನಿತ್‌ಪ್ರತ್ಯಯಾಂತವಾದ ಕೃತ್ ಪ್ರತ್ಯಯು ಪರದಲ್ಲಿರುವಾಗ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತದೆ ಎಂಬುದರಿಂದ ಕ್ತಿನ್ ಪ್ರತ್ಯಯುವು ಪರದಲ್ಲಿರುವುದರಿಂದ ಇಲ್ಲಿ ಗತಿಗೆ ಉದಾತ್ತಸ್ವರವು ಭಂಗವಾಗುವುದಿಲ್ಲ. ಪ್ರಶಸ್ತಯಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ॥ ೯ ॥

---

॥ ಸಂಹಿತಾಪಾಠಃ ॥

ವಿಶ್ವೇಭಿರಗ್ನೇ ಅಗ್ನಿಭಿರಿಮಂ ಯಜ್ಞಮಿದಂ ವಚಃ ।
ಚನೋ ಧಾಃ ಸಹಸೋ ಯಹೋ ॥ ೧೦ ॥

॥ ಪದಪಾಠಃ ॥

ವಿಶ್ವೇಭಿಃ । ಅಗ್ನೇ । ಅಗ್ನಿಽಭಿಃ । ಇಮಂ । ಯಜ್ಞಂ । ಇದಂ । ವಚಃ ।
ಚನಃ । ಧಾಃ । ಸಹಸಃ । ಯಹೋ ಇತಿ ॥ ೧೦ ॥

॥ ಸಾಯಣಭಾಷ್ಯಂ ॥

ಸಹಸೋ ಬಲಸ್ಯ ಯಹೋ ಪುತ್ರ ಹೇ ದೇವತಾರೂಪಾಗ್ನೇ ವಿಶ್ವೇಭಿರಗ್ನಿಭಿಃ ಸರ್ವೈರಾಹವನೀಯಾದಿಭಿರ್ಯುಕ್ತಸ್ತ್ವಮಿಮಮಸ್ಮದೀಯಂ ಯಜ್ಞಮಿದಮಸ್ಮದೀಯಂ ವಚಃ ಸ್ತೋತ್ರಂ ಚ ಸೇವಮಾನಶ್ಚನೋಽನ್ನಂ ಧಾಃ । ಅಸ್ಮಭ್ಯಂ ಧೇಹಿ ॥ ವಿಶ್ವೇಭಿಃ । ಬಹುಲಂ ಛಂದಸೀತಿ ಭಿಸ ಐಸಾದೇಶಾಭಾವಃ । ಚನಃ । ಚಾಯೃ ಪೂಜಾನಿಶಾಮನಯೋಃ । ಚಾಯೇರನ್ನೇ ಹ್ರಸ್ವಶ್ಚ । ಉ. ೪-೧೯೯ । ಇತ್ಯಸುನ್ । ತತ್ಸನ್ನಿಯೋಗೇನ ನುಡಾಗಮಶ್ಚ । ನಿತ್ತ್ವಾದಾದ್ಯುದಾತ್ತತ್ವಂ । ಧಾಃ । ಲುಙಿ ಗಾತಿಸ್ಥಾ । ಪಾ. ೨-೪-೭೭ । ಇತಿ ಸಿಚೋ ಲುಕ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಸಹಸೋ ಯಹೋ ಇತಿ ಸುಬಾಮಂತ್ರಿತ ಇತಿ ಪರಾಂಗವದ್ಭಾವಾದಾಮಂತ್ರಿತಸ್ಯ ಚೇತಿ ಷಷ್ಠ್ಯಾಮಂತ್ರಿತಸಮುದಾಯೋ ನಿಹನ್ಯತೇ ॥ ೨೧ ॥

॥ ಪ್ರತಿಪದಾರ್ಥ ॥

**ಸಹಸಃ**—ಶಕ್ತಿಯ । **ಯಹೋ**—ಪುತ್ರನಾದ । **ಅಗ್ನೇ**—ಎಲೈ ಅಗ್ನಿಯೇ । **ವಿಶ್ವೇಭಿಃ ಅಗ್ನಿಭಿಃ**—ಆಹವನೀಯಾದಿ ರೂಪಗಳಲ್ಲಿರುವ ಸಮಸ್ತವಾದ ಅಗ್ನಿಗಳೊಂದಿಗೆ ಕೂಡಿಕೊಂಡು । **ಇಮಂ**— ಈ ನಮ್ಮ । **ಯಜ್ಞಂ**—ಯಜ್ಞವನ್ನೂ । **ಇದಂ**—ಈ ನಮ್ಮ । **ವಚಃ**—ಸ್ತೋತ್ರವಾಕ್ಯವನ್ನೂ (ಸೇವಿಸುತ್ತಾ) । **ಚನಃ**—ಅನ್ನವನ್ನೂ । **ಧಾಃ**—(ನಮಗೆ) ಕೊಡು.

॥ ಭಾವಾರ್ಥ ॥

ಶಕ್ತಿಯಪುತ್ರನಾದ ಎಲೈ ಅಗ್ನಿಯೇ, ಆಹವನೀಯಾದಿ ರೂಪಗಳಲ್ಲಿರುವ ಸಮಸ್ತವಾದ ಅಗ್ನಿಗಳಿಂದ ಕೂಡಿರುವ ನೀನು ಈ ನಮ್ಮ ಯಜ್ಞವನ್ನೂ ಮತ್ತು ಈ ನಮ್ಮ ಸ್ತೋತ್ರವಾಕ್ಯವನ್ನೂ ಸ್ವೀಕರಿಸಿ ನಮಗೆ ಅನ್ನವನ್ನು (ಆಹಾರವನ್ನು) ಕೊಡು.

## English Translation.

Agni, Son of Strength, accept this Sacrifice and this our praise with the three different Sacrificial fires, and grant us abundant food.

॥ ವಿಶೇಷವಿಷಯಗಳು ॥

**ವಿಶ್ವೇಭಿಃ ಅಗ್ನಿಭಿಃ**—ಅನೇಕ ಅಗ್ನಿಗಳಿಂದ ಎಂದರೆ ಯಜ್ಞದಲ್ಲಿ ಪ್ರತಿಷ್ಠಿತವಾದ ಆಹವನೀಯ, ಗಾರ್ಹಪತ್ಯ ದಕ್ಷಿಣಾಗ್ನಿ ಎಂಬ ಅಗ್ನಿಗಳಿಂದ ಅಥವಾ ಬೇರೆ ಬೇರೆ ಸ್ಥಳಗಳಲ್ಲಿ ಅಥವಾ ಗೃಹಗಳಲ್ಲಿ ಇರುವ ಅನೇಕ ಅಗ್ನಿಗಳಿಂದ ಎಂದಭಿಪ್ರಾಯವು.

**ಚನಃ**—ಅನ್ನವನ್ನು ; **ಚನ ಇತ್ಯನ್ನನಾಮ** ಎಂದು ಯಾಸ್ಕರ ವಚನವಿರುವುದು (ನಿ. ೬-೧೬).

**ಸಹಸಃ—ಬಲದ** । ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮುಗಳ ಮಧ್ಯದಲ್ಲಿ ಸಹಸ್ ಶಬ್ದವು ಪಠಿತವಾಗಿರುವುದರಿಂದ ಸಹಸಃ ಎಂದರೆ ಬಲದ (ನಿ. ೩-೯).

**ಯಹೋ**—ಪುತ್ರ. ತುಕ್ ತೋಕಂ ಮೊದಲಾದ ಹದಿನೈದು ಅಪತ್ಯನಾಮುಗಳ ಮಧ್ಯದಲ್ಲಿ ಯಹುಃ ಎಂಬ ಶಬ್ದವು ಪಠಿತವಾಗಿರುವುದರಿಂದ ಯಹೋ ಎಂದರೆ ಪುತ್ರನೇ, ಎಂದರ್ಥವು. ಅಗ್ನಿಯನ್ನೂ ಕೆಲವು ಸಂದರ್ಭದಲ್ಲಿ ಇಂದ್ರನನ್ನೂ ಸಹಸಸ್ಪುತ್ರ—ಎಂದರೆ ಬಲದ ಅಥವಾ ಶಕ್ತಿಯ ಪುತ್ರನೆಂದು ಕರೆಯುವುದು ಋಗ್ವೇದದಲ್ಲಿ ವಿಶೇಷವಾಗಿ ಕಂಡುಬರುವುದು. ಕೆಲವು ಉದಾಹರಣೆಗಳನ್ನು ಕೊಟ್ಟಿರುವೆವು—

**ಅಗ್ನಿಂ ಹೋತಾರಂ ಮನ್ಯೇ ದಾಸ್ವಂತಂ ವಸುಂ ಸೂನುಂ ಸಹಸೋ ಜಾತವೇದಸಂ**
**ವಿಪ್ರಂ ನ ಜಾತವೇದಸಂ ॥**

(ಋ. ಸಂ. ೧-೧೨೭-೧)

**ದ್ವಿತ್ರ್ಯನ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ । ಸಹಸಸ್ಪುತ್ರೋ ಅದ್ಭುತಃ ॥**

(ಋ. ಸಂ. ೨-೭-೬)

**ಅಗ್ನಿಂ ಸೂನುಂ ಸನಶ್ರುತಂ ಸಹಸೋ ಜಾತವೇದಸಂ ॥**

(ಋ. ಸಂ ೩-೧೧-೪)

**ವಿದ್ಯುದ್ರಥಃ ಸಹಸಸ್ಪುತ್ರೋ ಅಗ್ನಿಃ ಶೋಚಿಷ್ಕೇಶಃ ಪೃಥಿವ್ಯಾಂ ಪಾಜೋ ಅಶ್ರೇತ್ ।**

(ಋ. ಸಂ. ೩-೧೪-೧)

**ಅಗ್ನೇ ದ್ಯುಮ್ನೇನ ಜಾಗೃವೇ ಸಹಸಃ ಸೂನವಾಹುತ ।**

(ಋ ಸಂ. ೩-೨೪-೩)

**ಅಸ್ಮಾಕಮಗ್ನೇ ಅಧ್ವರಂ ಜುಷಸ್ವ ಸಹಸಃ ಸೂನೋ ತ್ರಿಷಧಸ್ಥ ಹವ್ಯಂ ।**

(ಋ. ಸಂ. ೫-೪-೮)

**ಹುವೇ ವಃ ಸೂನುಂ ಸಹಸೋ ಯುವಾನಮದ್ರೋಘವಾಚಂ ಮತಿಭಿರ್ಯವಿಷ್ಠಂ ॥**

(ಋ. ಸಂ. ೬-೫-೧)

ಇತ್ಯಾದಿ ಅನೇಕ ಋಕ್ಕುಗಳಲ್ಲಿ **ಸಹಸಃ ಸೂನು, ಸಹಸಸ್ಪುತ್ರ** ಎಂಬ ಶಬ್ದಗಳು ಅಗ್ನಿಯ ಪರವಾಗಿ ಪ್ರಯೋಗಿಸಲ್ಪಟ್ಟಿವೆ.

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವೇಭಿಃ**—ವಿಶ್ವ+ಭಿಸ್ ಎಂದಿರುವಾಗ **'ಅತೋ ಭಿಸ ಐಸ್'** (ಪಾ. ಸೂ. ೭-೧-೯) ಎಂಬುದರಿಂದ ಭಿಸ್ಸಿಗೆ ಐಸ್ ಪ್ರಾಪ್ತವಾದರೆ **'ಬಹುಲಂ ಛಂದಸಿ'** (ಪಾ. ಸೂ. ೭-೧-೧೦) ಎಂಬುದರಿಂದ ಛಂದಸ್ಸಿನಲ್ಲಿ ವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ. **'ಬಹುವಚನೇ ಝಲ್ಯೇತ್'** (ಪಾ. ಸೂ. ೭-೩-೧೦೩) ಎಂಬುದರಿಂದ ಅದಂತಾಂಗಕ್ಕೆ ಏತ್ವ ಬಂದರೆ ವಿಶ್ವೇಭಿಃ ಎಂದು ರೂಪವಾಗುತ್ತದೆ.

**ಚನಃ**—ಚಾಯೃ ಪೂಜಾನಿಶಾಮನಯೋಃ ಧಾತು. ಭ್ವಾದಿ. **'ಚಾಯೇರನ್ನೇ ಹ್ರಸ್ವಶ್ಚ'** (ಉ. ಸೂ. ೪-೬೩೯) ಎಂಬುದರಿಂದ ಅನ್ನರೂಪ ಅರ್ಥವು ತೋರುತ್ತಿರುವಾಗ ಚಾಯೃ ಎಂಬುದಕ್ಕೆ ಅಸುನ್ ಪ್ರತ್ಯಯವು ಬರುತ್ತದೆ. ಧಾತುವಿಗೆ ಹ್ರಸ್ವವೂ ಪ್ರತ್ಯಯಕ್ಕೆ ನುಡಾಗಮವೂ ಬರುತ್ತವೆ. ಚಯ್+ನಸ್ ಎಂದಿರುವಾಗ **'ಲೋಪೋವ್ಯೋರ್ವಲಿ'** (ಪಾ. ಸೂ. ೬-೧-೬೬) ಎಂಬುದರಿಂದ ಯಕಾರಕ್ಕೆ ಲೋಪ ಬರುತ್ತದೆ. ಚನಸ್ ಎಂದು ಸಾಂತಶಬ್ದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ **'ಸ್ವಮೋರ್ನಪುಂಸಕಾತ್'** (೭-೧-೨೩) ಎಂಬುದರಿಂದ ಅಮಿಗೆ ಲುಕ್ ಬಂದು ರುತ್ವವಿಸರ್ಗಗಳು ಬಂದರೆ ಚನಃ ಎಂದು ರೂಪವಾಗುತ್ತದೆ. ನಿತ್‌ಪ್ರತ್ಯಯಾಂತವಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. **'ಛಂದಸಿ ಲುಙ್‌ಲಙ್ ಲಿಟಃ'** (ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲುಙ್ ಬರುತ್ತದೆ. ಮಧ್ಯಮಪುರುಷ ಏಕವಚನ ಪರದಲ್ಲಿರುವಾಗ ಚ್ಲಿಗೆ ಸಿಚಾದೇಶ ಬರುತ್ತದೆ. ಧಾ+ಸ್+ಸ್ ಎಂದಿರುವಾಗ **'ಗಾತಿಸ್ಥಾಘುಪಾ-'** (ಪಾ. ಸೂ ೨-೪-೭೭) ಸೂತ್ರದಿಂದ ಘು ಸಂಜ್ಞೆ ಉಳ್ಳ ಧಾತುವಿನ ಪರದಲ್ಲಿರುವುದರಿಂದ ಸಿಚ್ಚಿಗೆ ಲುಕ್ ಬರುತ್ತದೆ. **'ಬಹುಲಂ ಛಂದಸ್ಯಮಾಙ್-ಯೋಗೇಽಪಿ'** (ಪಾ. ಸೂ. ೬-೪-೭೫) ಎಂಬುದರಿಂದ ಮಾಙ್‌ಯೋಗವಿಲ್ಲದಿದ್ದರೂ ಅಡಾಗಮ ಬರುವುದಿಲ್ಲ. ಸಿಪ್ಪಿನ ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಧಾಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಹಸೋ ಯಹೋ**—ಸಹಸ್ ಎಂಬ ಬಲಾರ್ಥಕಶಬ್ದದ ಷಷ್ಠಿಯಲ್ಲಿ ಸಹಸಃ ಎಂದು ರೂಪವಾಗುತ್ತದೆ. ಯಹೋ ಎಂಬುದು ಸಂಬುದ್ಧಿಯಾದುದರಿಂದ ಆಮಂತ್ರಿತ ಸಂಜ್ಞೆಯನ್ನು ಹೊಂದುತ್ತದೆ. **'ಸುಬಾ-ಮಂತ್ರಿತೇಪರಾಂಗವತ್ ಸ್ವರೇ'** (ಪಾ. ಸೂ. ೨-೧-೨) ಎಂಬುದರಿಂದ ಆಮಂತ್ರಿತದ ಪೂರ್ವದಲ್ಲಿರುವುದರಿಂದ ಸಹಸಃ ಎಂಬುದು ಆಮಂತ್ರಿತದ ಅವಯವದಂತೆ ಆಗುತ್ತದೆ. ಆಗ **'ಆಮಂತ್ರಿತಸ್ಯ ಚ'** (ಪಾ. ಸೂ. ೮-೧-೧೯) ಎಂಬುದರಿಂದ ಬರುವ ನಿಘಾತಸ್ವರವು ಸಮುದಾಯಕ್ಕೆ ಬರುತ್ತದೆ. ಸಹಸೋ ಯಹೋ ಎಂಬ ಸಮುದಾಯವು ಸರ್ವಾನುದಾತ್ತವಾಗುತ್ತದೆ.

೨೬ ನೇ ಸೂಕ್ತವು ಸಮಾಪ್ತವು.

# ಇಪ್ಪತ್ತೇಳನೆಯ ಸೂಕ್ತವು

**ಅಶ್ವಂ ನ ತ್ವೇತಿ ತ್ರಯೋದಶರ್ಚಂ ಚತುರ್ಥಂ ಸೂಕ್ತಂ । ಪೂರ್ವವದೃಷ್ಯಾದಯಃ । ತ್ರಯೋದಶ್ಯಾ ನಮೋ ಮಹದ್ಭ್ಯ ಇತ್ಯಸ್ಯಾಸ್ತ್ರಿಷ್ಟುಪ್ ಛಂದಃ । ವಿಶ್ವೇ ದೇವಾ ದೇವತಾ । ತಥಾ ಚಾನುಕ್ರಾಂತಂ ಅಶ್ವಂ ಸಪ್ತೋನಾ ಗಾಯತ್ರೇಂಽತ್ಯಾ ದೈವೀ ತ್ರಿಷ್ಟುಬಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುತ್ತಮಾವರ್ಜಿತಸ್ಯ ಸೂಕ್ತಸ್ಯ ವಿನಿಯೋಗ ಉಕ್ತಃ ॥**

**ಅನುವಾದವು**—ಅಶ್ವಂ ನತ್ವಾ ಎಂಬುದು ಆರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಋಷಿದೇವತಾಛಂದಸ್ಸುಗಳು ಪೂರ್ವದಂತೆ ಎಂದರೆ ಹಿಂದಿನ ಸೂಕ್ತದಂತೆ. ನಮೋ ಮಹದ್ಭ್ಯಃ ಎಂಬ ಹದಿಮೂರನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು—ಈ ಋಕ್ಕಿಗೆ ವಿಶ್ವೇದೇವತೆಗಳೇ ದೇವತೆಯು. ಈ ವಿಷಯದಲ್ಲಿ ಅನುಕ್ರಮಣಿಕೆಯು **ಅಶ್ವಂ ಸಪ್ತೋನಾ ಗಾಯತ್ರೇಂತ್ಯಾ ದೈವೀ ತ್ರಿಷ್ಟುಬಿತಿ**- ಎಂದಿರುವುದು. ಈ ಸೂಕ್ತದಲ್ಲಿ ಕೊನೆಯ ಒಂದು ಋಕ್ಕನ್ನು ಬಿಟ್ಟು ಉಳಿದ ಹನ್ನೆರಡು ಋಕ್ಕುಗಳನ್ನು ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಹೇಳಲ್ಪಟ್ಟಿರುವುದು.

## ಸೂಕ್ತ—೨೭

॥ ಮಂಡಲ—೧ ॥ ಅನುವಾಕ—೬ ॥ ಸೂಕ್ತ—೨೭ ॥
॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ—೨೨, ೨೩, ೨೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ॥

॥ ಋಷಿಃ—ಶುನಃಶೇಪ ಆಜೀಗರ್ತಿಃ ॥

ದೇವತಾ—೧-೧೨. ಅಗ್ನಿಃ । ೧೩. ವಿಶ್ವೇದೇವಾಃ ॥

ಛಂದಃ—೧-೧೨. ಗಾಯತ್ರೀ । ೧೩. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಶ್ವಂ ನ ತ್ವಾ ವಾರವನ್ತಂ ವನ್ದಧ್ಯಾ ಅಗ್ನಿಂ ನಮೋಭಿಃ ।
ಸಮ್ರಾಜನ್ತಮಧ್ವರಾಣಾಂ ॥ ೧ ॥

॥ ಪದಪಾಠಃ ॥

ಅಶ್ವಂ । ನ । ತ್ವಾ । ವಾರಽವನ್ತಂ । ವನ್ದಧ್ಯೈ । ಅಗ್ನಿಂ । ನಮಃಽಭಿಃ ।

ಸಂಽರಾಜಂತಂ । ಅಧ್ವರಾಣಾಂ ॥ ೧ ॥

॥ ಸಾಯಣಭಾಷ್ಯಂ ॥

ಅಧ್ವರಾಣಾಂ ಯಜ್ಞಾನಾಂ ಸಮ್ರಾಜಂತಂ ಸಮ್ರಾಟ್ಸ್ವರೂಪಂ ಸ್ವಾಮಿನಮಗ್ನಿಂ ತ್ವಾಂ ನಮೋಭಿಃ ಸ್ತುತಿಭಿರ್ವಂದಧ್ಯೈ ವಂದಿತುಂ ಪ್ರವೃತ್ತಾ ಇತಿ ಶೇಷಃ । ಅತ್ರ ದೃಷ್ಟಾಂತಃ । ವಾರವಂತಂ ವಾಲಯುಕ್ತಮಶ್ವಂ ನ ಅಶ್ವಮಿವ । ಅಶ್ವೋ ಯಥಾ ವಾಲೈರ್ಬಾಧಕಾನ್ಮಶಕಮಕ್ಷಿಕಾದೀನ್ಪರಿಹರತಿ ತಥಾ ತ್ವಮಪಿ ಜ್ವಾಲಾಭಿರಸ್ಮದ್ವಿರೋಧಿನಃ ಪರಿಹರಸೀತ್ಯರ್ಥಃ ॥ ವಾರವಂತಂ । ಮತುಪಃ ಪಿತ್ತ್ವಾದನುದಾತ್ತತ್ವಂ । ಘುಞಿೋ ಞಿತ್ತ್ವಾದಾದ್ಯುದಾತ್ತೋ ವಾರಶಬ್ದಃ । ಕರ್ಷಾತ್ವತ ಇತ್ಯಂತೋದಾತ್ತತ್ವಂ ವ್ಯತ್ಯಯೇನ ನ ಪ್ರವರ್ತತೇ । ವಂದಧ್ಯೈ । ವದಿ ಅಭಿವಾದನಸ್ತುತ್ಯೋಃ । ಇದಿತೋ ನುಮ್ ಧಾತೋರಿತಿ ನುಮ್ । ತುಮರ್ಥೇ ಸೇಸೇನಿತ್ಯಧ್ಯೈಪ್ರತ್ಯಯಃ । ಪ್ರತ್ಯಯಸ್ವರಃ । ಸಮ್ರಾಜಂತಂ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಸಮಾಸೇ ಕೃದುತ್ತರಪದಪ್ರಕೃತಿಸ್ವರೇಣ ಸ ಏವ । ಅಧ್ವರಾಣಾಂ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಧ್ವರಾಣಾಂ** — ಯಜ್ಞಗಳಿಗೆ । **ಸಮ್ರಾಜಂತಂ**— ಸಾರ್ವಭೌಮನಾಗಿಯೂ (ಮತ್ತು ಶತ್ರುಗಳನ್ನು ಓಡಿಸುವುದರಲ್ಲಿ) **ವಾರವಂತಂ**—(ಸೊಳ್ಳೆಗಳನ್ನು ಓಡಿಸುವ) ಬಾಲವುಳ್ಳ । **ಅಶ್ವಂ ನ**—ಕುದುರೆಯಂತಿರುವವನೂ ಆದ । **ಅಗ್ನಿಂ**—ಅಗ್ನಿದೇವನಾದ ನಿನ್ನನ್ನು । **ನಮೋಭಿಃ**—(ಸ್ತುತಿಪೂರ್ವಕಗಳಾದ) ನಮಸ್ಕಾರಗಳಿಂದ । **ವಂದಧ್ಯೈ**—ವಂದಿಸುತ್ತೇನೆ

॥ ಭಾವಾರ್ಥ ॥

ಯಜ್ಞಗಳಿಗೆಲ್ಲಾ ಸಾರ್ವಭೌಮನಾಗಿಯೂ ಮತ್ತು ಕುದುರೆಯು ತನ್ನ ಬಾಲದಿಂದ ಸೊಳ್ಳೆಗಳನ್ನೆಲ್ಲಾ ಚದುರಿಸಿ ಓಡಿಸುವಂತೆ ಶತ್ರುಗಳನ್ನು ನಾನಾ ದಿಕ್ಕಿಗೂ ಓಡಿಸುವವನೂ ಆದ ಅಗ್ನಿದೇವನಾದ ನಿನ್ನನ್ನು ಸ್ತೋತ್ರಪೂರ್ವಕವಾಗಿ ವಂದಿಸುತ್ತೇನೆ.

## English Translation.

We have come to worship Agni, the sovereign lord of sacrifices with praises; that Agni who scatters enemies like a horse which brushes off flies with his tail.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಅಗ್ನಿಯನ್ನು ಬಾಲವಿರುವ ಕುದುರೆಯಂತೆ ಎಂದು ಮಾತ್ರ ವರ್ಣಿಸಿದೆ. ಬಾಲವಿರುವ ಕುದುರೆಗೂ ಅಗ್ನಿಗೂ ಯಾವ ಸಾದೃಶ್ಯವೂ ಇದ್ದಂತೆ ತೋರುವುದಿಲ್ಲ. ಇದಕ್ಕಾಗಿ ಭಾಷ್ಯಕಾರರು ಬಾಲವುಳ್ಳ ಕುದುರೆಯು ತನ್ನ ಬಾಲದಿಂದ ಸೊಳ್ಳೆಗಳನ್ನು ಅನಾಯಾಸವಾಗಿ ಓಡಿಸುವಂತೆ ಅಗ್ನಿಯು ಶತ್ರುಗಳನ್ನು ಓಡಿಸುವನೆಂದು ಕೆಲವು ಪದಗಳನ್ನು ಅಧ್ಯಾಹಾರಮಾಡಿಕೊಂಡು ಅರ್ಥವು ಹೊಂದುವಂತೆ ಮಾಡಿರುವರು.

**ಅಶ್ವಂ ನ**—ಕುದುರೆಯ ಹಾಗೆ. ಇಲ್ಲಿ ನಕಾರವು ನಿಷೇಧಾರ್ಥವನ್ನು ಸೂಚಿಸುವುದಿಲ್ಲ. ಅಂತೆ, ಹಾಗೆ ಎಂಬ ಉಪಮಾರ್ಥವನ್ನು ಸೂಚಿಸುವುದು. ನಶಬ್ದಕ್ಕೆ ಈ ವಿಧವಾದ ಅರ್ಥವು ವೇದದಲ್ಲಿ ಮಾತ್ರ ಇರುವುದು. ಆಧುನಿಕ ಸಂಸ್ಕೃತದಲ್ಲಿ ನಶಬ್ದಕ್ಕೆ ಈ ವಿಧವಾದ ಅರ್ಥವಿರುವುದಿಲ್ಲ.

**ವಾರವಂತಂ**—ಈ ಶಬ್ದದಲ್ಲಿ ಲಕಾರಕ್ಕೆ ಬದಲಾಗಿ ರಕಾರವು ವ್ಯತ್ಯಯದಿಂದ ಪ್ರಯೋಗಿಸಲಾಗಿದೆ. ಆದುದರಿಂದ **ವಾಲವಂತಂ** ಎಂದರೆ ಬಾಲವುಳ್ಳ ಎಂದರ್ಥವು.

**ನಮೋಭಿಃ** - ನಮಸ್ಕಾರಗಳಿಂದ, ಸ್ತೋತ್ರಗಳಿಂದ.

**ಸಮ್ರಾಜಂತಂ ಅಧ್ವರಾಣಾಂ**—ಯಜ್ಞಕ್ಕೆ ಸಮ್ರಾಟ್‌ನಂತೆ ಮಹಾಪ್ರಭುವು, ಅಥವಾ ರಾಜೃ ದೀಪ್ತೌ ಎಂಬ ಧಾತುವಿನ ಅರ್ಥದಂತೆ ಸಮ್ರಾಜಂತಂ ಎಂದರೆ ಯಜ್ಞದಲ್ಲಿ ಮಹಾಪ್ರಕಾಶದಿಂದ ದೇದೀಪ್ಯಮಾನನಾಗಿ ಬೆಳಗುತ್ತಿರುವ ಅಗ್ನಿಯೆಂದರ್ಥವು. ಅಗ್ನಿಯಿಲ್ಲದೆ ಯಜ್ಞವಿಲ್ಲ. ಆದುದರಿಂದ ಅಗ್ನಿಯೇ ಮುಖ್ಯಾಧಿಪತಿಯು, ಸಮ್ರಾಟ್‌ಸ್ವರೂಪನು

|| ವ್ಯಾಕರಣಪ್ರಕ್ರಿಯಾ ||

**ವಾರವಂತಂ**—ವಾರಯತಿ ದಂಶಕಾನ್ ಇತಿ ವಾರಃ ಕ್ರಿಮಿಕೀಟಾದಿಗಳನ್ನು ಕಡಿಯುವವುಗಳನ್ನು ಹೋಗಲಾಡಿಸುವುದು ಬಾಲವೆಂದರ್ಥ. **'ನಂದಿಗ್ರಹ-'** (ಪಾ. ಸೂ. ೩-೧-೧೩೪) ಸೂತ್ರದಿಂದ ಪಚಾದಿಯಲ್ಲಿ ಸೇರಿರುವುದರಿಂದ ವೃ ಧಾತುವಿಗೆ ಅಚ್ ಪ್ರತ್ಯಯು ಬರುತ್ತದೆ. ಕಪಿಲಕಾದಿಯಲ್ಲಿ ಸೇರಿರುವುದರಿಂದ ಲತ್ವವು ವಿಕಲ್ಪ ವಾಗಿ ಬರುತ್ತದೆ. ವಾರಃ (ವಾಲಃ) ಅಸ್ಯ ಅಸ್ತೀತಿ ವಾರವಾನ್. **'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್'** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯು ಬರುತ್ತದೆ. **'ಮಾದುಪಧಾಯಾಶ್ಚ-'** (ಪಾ. ಸೂ. ೮-೨-೯) ಎಂಬುದರಿಂದ ಅಕಾರವ ಪರದಲ್ಲಿರುವುದರಿಂದ ಮತುಪ್ಪಿನ ಮಕಾರಕ್ಕೆ ವಕಾರಾದೇಶ ಬರುತ್ತದೆ ದ್ವಿತೀಯಾ ಏಕ ವಚನದಲ್ಲಿ ವಾರವಂತಂ ಎಂದು ರೂಪವಾಗುತ್ತದೆ. ಅಥವಾ ವೃ ಧಾತುವಿಗೆ ಘಞ್ ಪ್ರತ್ಯಯು ಬರುತ್ತದೆ ಞಿತ್ತಾ ದುದರಿಂದ ವೃದ್ಧಿ ಬಂದರೆ ವಾರ ಶಬ್ದವಾಗುತ್ತದೆ. ಪೂರ್ವೋಕ್ತ ಪ್ರಕ್ರಿಯೆಯಿಂದ ವಾರವಂತಂ ಎಂದಾಗುತ್ತದೆ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಘಞ್ ಞಿತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ವಾರ ಎಂಬುದು ಆದ್ಯುದಾತ್ತವಾಗುತ್ತದೆ. **'ಕರ್ಷಾತ್ವತಃ-'** (ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೂ ವ್ಯತ್ಯಯದಿಂದ ಇಲ್ಲಿ ಬರುವುದಿಲ್ಲವೆಂದು ಸ್ವೀಕರಿಸಬೇಕು.

**ವಂದಧ್ಯೈ**—ವದಿ ಅಭಿವಾದನಸ್ತುತ್ಯೋಃ ಧಾತು. ಭ್ವಾದಿ. **'ಇದಿತೋ ನುಮ್ ಧಾತೋಃ'** (ಪಾ. ಸೂ. ೭-೧-೫೮) ಎಂಬುದರಿಂದ ಇಕಾರ ಇತ್ತಾದುದರಿಂದ ಧಾತುವಿಗೆ ನುಮಾಗಮ ಬರುತ್ತದೆ. ವಂದಿತುಂ ಎಂದು ತುಮುನರ್ಥವು ತೋರುವುದರಿಂದ **'ತುಮರ್ಥೇ ಸೇಸೇನ್-'** (ಪಾ. ಸೂ. ೩-೪-೯) ಎಂಬುದರಿಂದ ಅಧ್ಯೈ ಪ್ರತ್ಯಯ ಬರುತ್ತದೆ. ವಂದಧ್ಯೈ ಎಂದು ರೂಪವಾಗುತ್ತದೆ. ಅಧ್ಯೈ ಎಂಬುದು ಪ್ರತ್ಯಯ ಸ್ವರದಿಂದ ಆದ್ಯುದಾತ್ತ ವಾಗುತ್ತದೆ. ಆಗ ವಂದಧ್ಯೈ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ.

**ಸಮ್ರಾಜಂತಮ್**—ಸಮ್ ಉಪಸರ್ಗ (ಗತಿ) ರಾಜೃ ದೀಪ್ತೌ ಉಭಯಪದಿ. ಭ್ವಾದಿ. ಲಡರ್ಥದಲ್ಲಿ **ಶತೃ** ಪ್ರತ್ಯಯ ಬರುತ್ತದೆ. ಶಪ್ ವಿಕರಣ ಬಂದರೆ **'ಅತೋ ಗುಣೇ'** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ಬಂದರೆ ರಾಜತ್ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ನುಮಾಗಮ ಬಂದರೆ ರಾಜಂತಂ ಎಂದು ರೂಪವಾಗುತ್ತದೆ. ಇಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ **'ತಾಸ್ಯನು ದಾತ್ತೇತ್-'** (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವಾದ ಶತೃ ಪ್ರತ್ಯಯವೂ ಅನುದಾತ್ತ ವಾಗುತ್ತದೆ. ಆಗ ಧಾತು ಸ್ವರದಿಂದ (ಅಂತೋದಾತ್ತ) ರಾಜಂತಂ ಎಂಬುದು ಆದ್ಯುದಾತ್ತವಾಗುತ್ತದೆ. ಸಮ್ ಎಂಬುದರೊಡನೆ ಸಮಾಸವಾದಾಗ **'ಗತಿಕಾರಕೋಪಪದಾತ್ ಕೃತ್'** (ಪಾ ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬಂದರೆ ಧಾತುವಿನ ಸ್ವರವೇ ಉಳಿಯುತ್ತದೆ.

**ಅಧ್ವರಾಣಾಂ**—ನ ವಿದ್ಯತೇ ಧ್ವರಃ (ಹಿಂಸಾ) ಯಸ್ಮಿನ್ ಸಃ ಅಧ್ವರಃ ಹಿಂಸಾದಿ ದುಷ್ಟಕರ್ಮರಹಿತ ವಾದದ್ದು ಯಾಗ ಎಂದರ್ಥ. **'ನಞ್‌ಸುಭ್ಯಾಂ'** (ಪಾ. ಸೂ. ೬-೨-೧೭೨) ಎಂಬುದರಿಂದ ಇಲ್ಲಿ ನಞ್‌ನ ಪರದಲ್ಲಿ ರುವ ಬಹುವ್ರೀಹಿಯ ಉತ್ತರಪದವು ಅಂತೋದಾತ್ತವಾಗುತ್ತದೆ. ಅಧ್ವರಾಣಾಂ ಎಂಬಲ್ಲಿ ರೇಫೋತ್ತರದ ಆಕಾರವು ಉದಾತ್ತವಾಗುತ್ತದೆ. ॥ ೧ ॥

---

॥ ಸಂಹಿತಾಪಾಠಃ ॥

ಸ ಘಾ ನಃ ಸೂನುಃ ಶವಸಾ ಪೃಥುಪ್ರಗಾಮಾ ಸುಶೇವಃ ।
ಮೀಢ್ವಾ ಅಸ್ಮಾಕಂ ಬಭೂಯಾತ್ ॥ ೨ ॥

॥ ಪದಪಾಠಃ ॥

**ಸಃ । ಘ । ನಃ । ಸೂನುಃ । ಶವಸಾ । ಪೃಥುऽಪ್ರಗಾಮಾ । ಸುऽಶೇವಃ ।**
**ಮೀಢ್ವಾನ್ । ಅಸ್ಮಾಕಂ । ಬಭೂಯಾತ್ ॥ ೨ ॥**

॥ ಸಾಯಣಭಾಷ್ಯಂ ॥

ಸ ಘ ಸ ಏವಾಗ್ನಿರ್ನೋಽಸ್ಮಾಕಂ ಸುಶೇವಃ ಸುಸುಖೋ ಭವತ್ವಿತಿ ಶೇಷಃ। ಕೀದೃಶಃ। ಶವಸಾ ಬಲಸ್ಯ ಸೂನುಃ ಪುತ್ರಃ ಪೃಥುಪ್ರಗಾಮಾ ಪೃಥುಪ್ರಗಮನಃ। ಕಿಂಚಾಸ್ಮಾಕಂ ಮೀಢ್ವಾನ್ ಕಾಮಾನಾಂ ವರ್ಷಿತಾ ಬಭೂಯಾತ್। ಭವತು॥ ಘಾ ನಃ। ಋಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಂ। ಪಾ. ೬-೩-೧೩೩। ಇತಿ ದೀರ್ಘಃ। ಶವಸಾ। ಸುಪಾಂ ಸುಲೋ ಭವಂತೀತಿ ಜಸಷ್ವಾದೇಶಃ। ಪೃಥುಪ್ರಗಾಮಾ। ಪ್ರಕರ್ಷೇಣ ಗಮನಂ ಪ್ರಗಾಮಃ। ಹಲಶ್ಚೇತಿ ಘಞ್। ಪೃಥುಃ ಪ್ರಗಾಮಾ ಯಸ್ಯಾಸೌ ಪೃಥುಪ್ರಗಾಮಾ। ಸುಪಾಂ ಸುಲುಗಿತಿ ಪೂರ್ವಸವರ್ಣ ಆಕಾರಃ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ। ಸುಶೇವಃ। ಇಣ್ಶೀಙ್‌ಭ್ಯಾಂ ವನ್। ಉ. ೧-೧೫೨। ಇತಿ ಶೇವಶಬ್ದೋ ವನ್ಪ್ರತ್ಯಯಾಂತ ಆದ್ಯುದಾತ್ತಃ। ತತೋ ಬಹುವ್ರೀಹೌ ನಞ್‌ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವೇ ಪ್ರಾಪ್ತ ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ। ಮೀಢ್ವಾನ್। ಮಿಹ ಸೇಚನ ಇತ್ಯಸ್ಮಾತ್ಕ್ವಸುಪ್ರತ್ಯಯಾಂತೋ ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚೇತಿ ನಿಪಾತಿತಃ। ಬಭೂಯಾತ್। ಭವತೇಶ್ಛಾಂದಸಸ್ಯ ಲಿಟಸ್ತಿಙಾಂ ತಿಙೋ ಭವಂತಿ। ಮ. ೭-೧-೩೯। ಇತಿ ಲಿಙಾದೇಶಃ। ಯಾಸುಟ್‌ಸ್ಥಾನಿವದ್ಭಾವಾದಾರ್ಧಧಾತುಕತ್ವಾಚ್ಛಬಭಾವಃ। ದ್ವಿರ್ವಚನೇ ಭವತೇರಃ। ಪಾ. ೭-೪-೭೩। ಇತ್ಯತ್ವಂ। ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

**ಶವಸಾ**—ಶಕ್ತಿಯ। **ಸೂನುಃ**—ಪುತ್ರನೂ। **ಪೃಥುಪ್ರಗಾಮಾ**—ವೇಗವಾದ ಸಂಚಾರವುಳ್ಳವನೂ ಆದ। **ಸಃ ಘ**—ಅದೇ ಅಗ್ನಿಯು। **ನಃ**—ನಮಗೆ। **ಸುಶೇವಃ**—ಅನುಗ್ರಹವನ್ನುಂಟುಮಾಡುವ ಬುದ್ಧಿಯುಳ್ಳವನೂ (ಮತ್ತು)। **ಅಸ್ಮಾಕಂ**—ನಮ್ಮ। **ಮೀಢ್ವಾನ್**—ಇಷ್ಟಾರ್ಥಗಳನ್ನು ಸುರಿಸುವವನೂ। **ಬಭೂಯಾತ್**—ಆಗಲಿ.

॥ ಭಾವಾರ್ಥ ॥

ಶಕ್ತಿಯ ಪುತ್ರನೂ ಮತ್ತು ವೇಗವಾದ ಸಂಚಾರವುಳ್ಳವನೂ ಆದ ಅಗ್ನಿಯು ನಮಗೆ ಅನುಗ್ರಹವನ್ನುಂಟು ಮಾಡುವವನೂ ಮತ್ತು ನಮ್ಮ ಇಷ್ಟಾರ್ಥಗಳನ್ನು ವರ್ಷಿಸುವವನೂ ಆಗಲಿ.

## English Translation.

May he (Agni), the son of strength who moves swiftly, give comfort to us and shower down blessings upon us.

॥ ವಿಶೇಷವಿಷಯಗಳು ॥

**ಘ—ಏವ।** ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ಘಕಾರವು ದೀರ್ಘವಾಗಿರುವುದು.

**ಸೂನುಃ ಶವಸಾ**—ಬಲದ ಅಥವಾ ಶಕ್ತಿಯ ಪುತ್ರನು. ಈ ಶಬ್ದಕ್ಕೆ ಅರ್ಥವನ್ನು ನಾವು ಹಿಂದೆಯೇ ವಿವರಿಸಿದೇವೆ. (ಪೇಜು 372 ನೋಡಿ)

**ಪೃಥುಪ್ರಗಾಮಾ—ಪ್ರಕರ್ಷೇಣ ಗಮನಂ ಪ್ರಗಾಮಃ । ಪೃಥುಃ ಪ್ರಗಾಮಾ ಯಸ್ಯಾಸೌ ಪೃಥು ಪ್ರಗಾಮಾ ।** ಹೆಚ್ಚಾಗಿ ಗಮನವುಳ್ಳವನು. ಎಂದರೆ ತನ್ನ ಕಿರಣಗಳಿಂದ ಸುತ್ತಲೂ ವ್ಯಾಪಿಸುವವನು,

**ಸುಶೇವಃ—ಸುಮುಖಃ ।** ನಮಗೆ ಅನುಕೂಲನಾಗಿರಲಿ, ಸುಖಪ್ರದನಾಗಲಿ, ಅನುಗ್ರಹಮಾಡಲಿ.

**ಮೀಢ್ವಾನ್—ಮಿಹ ಸೇಚನೇ । ಕಾಮಾನಾಂ ವರ್ಷಯಿತಾ ।** ಇಷ್ಟಾರ್ಥಗಳನ್ನು ವರ್ಷಿಸುವವನು ಎಂದರೆ ಕೊಡುವವನು.

॥ ವ್ಯಾಕರಣಪ್ರಕ್ರಿಯಾ ॥

**ಘಾ ನಃ— ' ಋಚಿತುನುಘಮಕ್ಷುತಂಕುತ್ರೋರುಷ್ಯಾಣಾಂ '** (ಪಾ. ಸೂ. ೬-೩-೧೩೩) ಎಂಬುದ ರಿಂದ ಸಂಹಿತಾಪಾಠದಲ್ಲಿ ಘ ಎಂಬುದಕ್ಕೆ ದೀರ್ಘ ಬರುತ್ತದೆ.

**ಶವಸಾ—**ಶವಸ್ ಎಂಬುದು ಬಲಾರ್ಥಕವಾದ ಸಾಂತ ಶಬ್ದ. ಇದಕ್ಕೆ ಷಷ್ಠೀ ಏಕವಚನ ಪರದಲ್ಲಿರುವಾಗ **'ವ್ಯತ್ಯಯೋ ಬಹುಲಂ '** (ಪಾ ಸೂ. ೩-೧-೮೫) ಎಂಬುದರಿಂದ ಸಿದ್ಧವಾದ **' ಸುಪಾಂ ಸುಪೋ ಭವಂತಿ '** ಎಂಬ ವಚನದಿಂದ ಅದಕ್ಕೆ ಟಾದೇಶ ಬರುತ್ತದೆ. ಶವಸಾ ಎಂದು ರೂಪವಾಗುತ್ತದೆ

**ಪೃಥುಪ್ರಗಾಮಾ—**ಪ್ರಕರ್ಷೇಣ ಗಮನಂ ಪ್ರಗಾಮಃ ಗಮ್ಲೃ ಗತೌ ಧಾತು. **' ಹಲಶ್ಚ '** (ಪಾ ಸೂ. ೩-೩-೧೨೧) ಎಂಬುದರಿಂದ ಘಞ್ ಪ್ರತ್ಯಯ ಬರುತ್ತದೆ. ಞಿತ್ತಾದುದರಿಂದ **' ಅತ ಉಪಧಾಯಾಃ'** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಬರುತ್ತದೆ. ಪೃಥುಃ ಪ್ರಗಾಮಃ ಯಸ್ಯ ಅಸೌ ಪೃಥುಪ್ರಗಾಮಾ **' ಸುಪಾಂ ಸುಲುಕ್–'** (ಪಾ. ಸೂ. ೭-೧-೩೯) ಎಂಬುದರಿಂದ ಸು ವಿಭಕ್ತಿಗೆ ಆಕಾರವು ಆದೇಶವಾಗಿ ಬರುತ್ತದೆ. ಪೃಥುಪ್ರಗಾಮಾ ಎಂದು ರೂಪವಾಗುತ್ತದೆ. **' ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ '** (ಪಾ ಸೂ. ೬-೨-೧) ಎಂಬುದರಿಂದ ಬಹುವ್ರೀಹಿ ಸಮಾಸವಾದುದರಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

**ಸುಶೇವಃ—**ಶೀಙ್ ಸ್ವಪ್ನೇ ಧಾತು. **' ಇಣ್‌ಶೀಙ್‌ಭ್ಯಾಂ ವನ್ '** (ಉ. ಸೂ ೧-೧೫೦) ಎಂಬುದರಿಂದ ವನ್ ಪ್ರತ್ಯಯ ಬರುತ್ತದೆ. ವನ್ ಪರದಲ್ಲಿರುವಾಗ ಧಾತುವಿಗೆ ಗುಣ ಬಂದರೆ ಶೇವ ಶಬ್ದವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ಶೋಭನಃ ಶೇವಃ ಯಸ್ಯ ಸಃ ಎಂದು ಬಹುವ್ರೀಹಿ ಸಮಾಸದಲ್ಲಿ ಸುಶೇವಃ ಎಂದು ರೂಪವಾಗುತ್ತದೆ. **' ನಞ್‌ಸುಭ್ಯಾಂ '** (ಪಾ. ಸೂ. ೬-೨-೧೭೨) ಎಂಬುದರಿಂದ ಸುವಿನ ಪರ ದಲ್ಲಿರುವುದರಿಂದ ಬಹುವ್ರೀಹಿಯಲ್ಲಿ ಉತ್ತರಪದಾಂತೋದಾತ್ತಸ್ವರವು ಪ್ರಾಪ್ತವಾದರೆ **' ಆದ್ಯುದಾತ್ತಂ ದ್ವ್ಯಚ್ ಛಂದಸಿ '** (ಪಾ. ಸೂ. ೬-೨-೧೧೯) ಸುವಿಗೆ ಆದ್ಯುದಾತ್ತವಾದ ದ್ವ್ಯಚ್ಕವಾದ ಉತ್ತರಪದಪರದಲ್ಲಿರುವಾಗ ಆದ್ಯು ದಾತ್ತಸ್ವರ ಬರುತ್ತದೆ ಎಂಬುದರಿಂದ ಇಲ್ಲಿ ಪೂರ್ವಸ್ವರವನ್ನು ಬಾಧಿಸಿ ಉತ್ತರಪದದ ಆದ್ಯುದಾತ್ತಸ್ವರವೇ ಬರುತ್ತದೆ.

**ಮೀಢ್ವಾನ್—**ಮಿಹ ಸೇಚನೇ, ಧಾತು. ಭ್ವಾದಿ. **' ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ '** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

**ಬಭೂಯಾತ್—**ಭೂ ಸತ್ತಾಯಾಂ ಧಾತು. ಭ್ವಾದಿ **' ಛಂದಸಿ ಲುಙ್‌ಲಙ್‌ಲಿಟಃ '** (ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲಿಟ್ ಬರುತ್ತದೆ ಲಿಟ್ಟಿನ ತಿ ಪರದಲ್ಲಿರುವಾಗ **' ತಿಙಾಂ ತಿಙೋ ಭವಂತಿ'**

(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲಿಜಿನ ಆದೇಶಬರುತ್ತದೆ. ಲಿಜಿನಲ್ಲಿ **'ಇತಶ್ಚ'** (ಪಾ. ಸೂ. ೩-೪-೧೦೦) ಎಂಬುದರಿಂದ ತಿ ಎಂಬುದರ ಇಕಾರಕ್ಕೆ ಲೋಪ ಬರುತ್ತದೆ. **'ಯಾಸುಟ್‌ಪರಸ್ಮೈಪದೇಷೂದಾತ್ತೋ ಙಿಚ್ಚ'** (ಪಾ. ಸೂ. ೩-೪-೧೦೩) ಎಂಬುದರಿಂದ ಅದಕ್ಕೆ ಯಾಸುಡಾಗವು ಬರುತ್ತದೆ. ಯಾಸುಟ್ಟಿಗೆ ಸ್ಥಾನಿವದ್ಭಾವ ಮಾಡಿದರೆ ಲಿಟ್ಟಿನಂತಾಗುವುದರಿಂದ ಅದಕ್ಕೆ ಆರ್ಧಧಾತುಕಸಂಜ್ಞೆ ಬರುತ್ತದೆ. ಆದುದರಿಂದ ಶಪ್ ವಿಕರಣಪ್ರತ್ಯಯ ಬರುವುದಿಲ್ಲ. ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹ್ರಸ್ವ ಬಂದರೆ **'ಭವತೇರಃ'** (ಪಾ. ಸೂ. ೭-೪-೭೩) ಎಂಬುದರಿಂದ ಅಭ್ಯಾಸಕ್ಕೆ ಅತ್ವ ಬರುತ್ತದೆ. ಜಸ್ತ್ವವು ಬಂದರೆ ಬಭೂಯಾತ್ ಎಂದು ರೂಪವಾಗುತ್ತದೆ **'ತಿಙ್ಙತಿಙಃ'** (ಪಾ. ಸೂ. ೮-೧-೨೮) ಎಂಬುದರಿಂದ ಅಸ್ಮಾಕಂ ಎಂಬ ಅತಿಙಂತಶಬ್ದದ ಪರದಲ್ಲಿರುವುದರಿಂದ ಬಭೂಯಾತ್ ಎಂಬುದಕ್ಕೆ ನಿಘಾತಸ್ವರ ಬರುತ್ತದೆ. ॥ ೨ ॥

॥ ಸಂಹಿತಾಪಾಠಃ ॥

ಸ ನೋ ದೂರಾಚ್ಚಾಸಾಚ್ಚ ನಿ ಮರ್ತ್ಯಾದಘಾಯೋಃ ।
ಪಾಹಿ ಸದಮಿದ್ವಿಶ್ವಾಯುಃ ॥ ೩ ॥

॥ ಪದಪಾಠಃ ॥

ಸಃ । ನಃ । ದೂರಾತ್ । ಚ । ಆಸಾತ್ । ಚ । ನಿ । ಮರ್ತ್ಯಾತ್ । ಅಘಽಯೋಃ ।
ಪಾಹಿ । ಸದಂ । ಇತ್ । ವಿಶ್ವಽಆಯುಃ ॥ ೩ ॥

॥ ಸಾಯಣ ಭಾಷ್ಯಂ ॥

**ಹೇ ಅಗ್ನೇ ವಿಶ್ವಾಯುರ್ವ್ಯಾಪ್ತಗಮನಃ ಸ ತ್ವಂ ದೂರಾಚ್ಚ ದೂರೇಽಪಿ ಆಸಾಚ್ಚಾ ಸನ್ನದೇಶೇಽಪಿ ಅಘಾಯೋರಘಂ ಪಾಪಮನಿಷ್ಟಂ ಕರ್ತುಮಿಚ್ಛತೋ ಮರ್ತ್ಯಾನ್ಮನುಷ್ಯಾದ್ವೈರಿಣೋ ನೋಽಸ್ಮಾನ್ಸದಮಿತ್ ಸರ್ವದೈವ ನಿ ಪಾಹಿ । ನಿತರಾಂ ಪಾಲಯ ॥ ಅಘಾಯೋಃ । ಸುಪ ಆತ್ಮನಃ ಕ್ಯಚ್ । ಅಶ್ವಾಘಸ್ಯಾತ್ । ಪಾ. ೭-೪-೩೭ । ಇತ್ಯಾತ್ವಂ । ಪಾಹಿ । ಪಾದಾದಿತ್ವಾದನಿಘಾತಃ । ವಿಶ್ವಾಯುಃ । ಇಣ್ ಗತಾವಿತ್ಯಸ್ಮಾದ್ಭಾವೇ ಏತೇರ್ಣಿಚ್ಚ । ಉ. ೨-೧೧೯ । ಇತ್ಯುಸಿಃ । ವಿಶ್ವಮಯನಂ ಗಗನಂ ಯಸ್ಯೇತಿ ಬಹುವ್ರೀಹಿಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅಗ್ನೇ**—(ಎಲೈ ಅಗ್ನಿಯೇ) । **ವಿಶ್ವಾಯುಃ**—ಸಕಲ ಪ್ರದೇಶವನ್ನೂ ವ್ಯಾಪಿಸುವ ಸಂಚಾರವುಳ್ಳ । **ಸಃ**—ಆ ನೀನು । **ದೂರಾಚ್ಚ**—ದೂರಪ್ರದೇಶದಿಂದಾಗಲಿ । **ಆಸಾಚ್ಚ**—ಸಮೀಪಪ್ರದೇಶದಿಂದಾಗಲಿ । **ಅಘಾಯೋಃ**—ನಮಗೆ ಕೇಡನ್ನು ಬಯಸತಕ್ಕ । **ಮರ್ತ್ಯಾತ್**—(ಶತ್ರುವಾದ) ಮನುಷ್ಯನಿಂದ । **ನಃ**—ನಮ್ಮನ್ನು । **ಸದಮಿತ್**—ಯಾವಾಗಲೂ । **ನಿ ಪಾಹಿ**—ಚೆನ್ನಾಗಿ ಕಾಪಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಸಕಲ ಪ್ರದೇಶಗಳಲ್ಲಿಯೂ ವ್ಯಾಪಿಸುವ ಶಕ್ತಿಯುಳ್ಳವನು. ಆದ್ದರಿಂದ ದೂರದಿಂದಾಗಲಿ ಅಥವಾ ಹತ್ತಿರದಿಂದಾಗಲಿ ನಮಗೆ ಕೇಡು ಬಯಸಿ ಹಿಂಸೆಯನ್ನುಂಟುಮಾಡುವ ಶತ್ರುಗಳಿಂದ ನಮ್ಮನ್ನು ಯಾವಾಗಲೂ ಕಾಪಾಡು.

## English Translation.

Do you, therefore Agni who is omnipresent, ever protect us from the wicked mortal seeking to do us injury whether near or afar.

॥ ವಿಶೇಷವಿಷಯಗಳು ॥

**ದೂರಾಚ್ಚ ಆಸಾಚ್ಚ**—ದೂರದಿಂದಾಗಲಿ, ಸಮೀಪದಿಂದಾಗಲಿ.

**ಅಘಾಯೋಃ**—ಅಘವೆಂದರೆ ಪಾಪ, ಅನಿಷ್ಟ, ಕೇಡು. ಅದನ್ನು ಮಾಡಲಿಚ್ಛಿಸುವ ಮನುಷ್ಯನು ಅಘಾಯುವು. ನಮಗೆ ಕೇಡನ್ನು ಬಯಸುವ ಅಂತಹ ಮನುಷ್ಯನಿಂದ (ನಮ್ಮನ್ನು ಕಾಪಾಡು).

**ಸದಂ ಇತ್—ಸರ್ವದೈವ** । ಯಾವಾಗಲೂ.

**ವಿಶ್ವಾಯುಃ—ವಿಶ್ವನುಯನಂ ಗಮನಂ ಯಸ್ಯ** । ಸರ್ವಸ್ಥಳಗಳಲ್ಲಿಯೂ ಗಮನ ಅಥವಾ ಸಂಚಾರವುಳ್ಳವನು, ಸರ್ವವ್ಯಾಪಿಯು.

॥ ವ್ಯಾಕರಣಪ್ರಕ್ರಿಯಾ ॥

**ಅಘಾಯೋಃ**—ಅಘಂ ಆತ್ಮನಃ ಇಚ್ಛತಿ (ಪಾಪವನ್ನು ಇಚ್ಛಿಸುತ್ತಾನೆ) ಎಂಬರ್ಥದಲ್ಲಿ **'ಸುಪ ಆತ್ಮನಃ ಕ್ಯಚ್'** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ ಬರುತ್ತದೆ. ಅಘೀಯತಿ ಎಂದು ರೂಪವಾಗುತ್ತದೆ **'ಕ್ಯಾಚ್ಛಂದಸಿ'** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದಮೇಲೆ ಉ ಪ್ರತ್ಯಯ ಬರುತ್ತದೆ. **'ಅತೋ ಲೋಪಃ'** (ಪಾ. ಸೂ. ೬-೪-೪೮) ಎಂಬುದರಿಂದ ಉಪರದಲ್ಲಿರುವಾಗ ಕ್ಯಚ್ಚಿನ ಅಕಾರಕ್ಕೆ ಲೋಪ ಬರುತ್ತದೆ. ಅಘಯು ಶಬ್ದವಾಗುತ್ತದೆ. **'ಅಶ್ವಾಘಸ್ಯಾತ್'** (ಪಾ. ಸೂ ೭ ೭-೪-೩೭) ಅಶ್ವ, ಅಘ ಶಬ್ದಗಳಿಗೆ ಕ್ಯಚ್ ಪರದಲ್ಲಿರುವಾಗ ಛಂದಸ್ಸಿನಲ್ಲಿ ಆತ್ವವು ಬರುತ್ತದೆ ಎಂಬುದರಿಂದ ಇಲ್ಲಿ ಅಘ ಶಬ್ದಕ್ಕೆ ಆತ್ವ ಬಂದರೆ ಅಘಾಯು ಎಂದಾಗುತ್ತದೆ. ಪಂಚಮೀ ಏಕವಚನದಲ್ಲಿ ಅಘಾಯೋಃ ಎಂದು ರೂಪವಾಗುತ್ತದೆ.

**ಪಾಹಿ**—ಪಾ ರಕ್ಷಣೇ ಧಾತು. ಅದಾದಿ. ಲೋಟ್ ಮಧ್ಯಮಪುರುಷ ಏಕವಚನದ ಸಿಪ್ಪಿಗೆ ಹಿ ಆದೇಶ ಬರುತ್ತದೆ. ಹ್ರಸ್ವಾಕಾರದ ಪರದಲ್ಲಿ ಇರದಿದ್ದುದರಿಂದ ಲೋಪ ಬರುವುದಿಲ್ಲ. ಪಾದದ ಆದಿಯಲ್ಲಿ ಬಂದುದರಿಂದ '**ಅಪಾದಾದೌ**' ಎಂದು ನಿಷೇಧವಿರುವುದರಿಂದ ತಿಙಂತನಿಘಾತಸ್ವರವು ಬರುವುದಿಲ್ಲ.

**ವಿಶ್ವಾಯುಃ**—ಇಣ್ ಗತೌ ಧಾತು. ಅದಾದಿ. ಇದಕ್ಕೆ ಭಾವಾರ್ಥದಲ್ಲಿ '**ಏತೇರ್ಣಿಚ್ಚ**' (ಉ. ಸೂ. ೨-೨೭೫) ಎಂಬುದರಿಂದ ಉಸಿ ಪ್ರತ್ಯಯ ಬರುತ್ತದೆ. ಇದು ಣಿತ್ತಾಗುತ್ತದೆ. ಆದುದರಿಂದ '**ಅಚೋ ಞ್ಣಿತಿ**" (ಪಾ. ಸೂ. ೭-೨-೧೧೫) ಎಂಬುದರಿಂದ ಧಾತುವಿಗೆ ವೃದ್ಧಿಬರುತ್ತದೆ. ಆದಕ್ಕೆ ಅಚ್ ಪರದಲ್ಲಿರುವುದರಿಂದ '**ಏಚೋಽಯವಾಯಾವಃ**' (ಪಾ. ಸೂ. ೬-೧-೭೮) ಎಂಬುದರಿಂದ ಆಯಾದೇಶ ಬರುತ್ತದೆ. ಆಯು ಎಂದು ರೂಪವಾಗುತ್ತದೆ. ವಿಶ್ವಂ ಆಯುಃ (ಅಯನಂ) ಗಮನಂ ಯಸ್ಯ ಸಃ ವಿಶ್ವಾಯುಃ '**ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ**' (ಪಾ. ಸೂ. ೬-೨-೧೦೬) ಎಂಬುದರಿಂದ ಸಂಜ್ಞಾತೋರುವುದರಿಂದ ಪೂರ್ವಪದಕ್ಕೆ ಅಂತೋದಾತ್ತಸ್ವರ ಬರುತ್ತದೆ. ವಿಶ್ವಾಯುಃ ಎಂಬುದು ಮಧ್ಯೋದಾತ್ತವಾದ ಪದವಾಗುತ್ತವೆ. ಪೂರ್ವಪದಕ್ಕೆ ಬರುವ ಆದ್ಯುದಾತ್ತ ಸ್ವರಕ್ಕೆ ಅಪವಾದವಾಗಿ ಅಂತೋದಾತ್ತವು ವಿಹಿತವಾಗಿದೆ. ॥ ೩ ॥

॥ ಸಂಹಿತಾಪಾಠಃ ॥

ಇಮಮೂ ಷು ತ್ವಮಸ್ಮಾಕಂ ಸನಿಂ ಗಾಯತ್ರಂ ನವ್ಯಾಂಸಂ ।
ಅಗ್ನೇ ದೇವೇಷು ಪ್ರ ವೋಚಃ ॥ ೪ ॥

॥ ಪದಪಾಠಃ ॥

ಇಮಂ । ಊಂ ಇತಿ । ಸು । ತ್ವಂ । ಅಸ್ಮಾಕಂ । ಸನಿಂ । ಗಾಯತ್ರಂ । ನವ್ಯಾಂಸಂ ॥
ಅಗ್ನೇ । ದೇವೇಷು । ಪ್ರ । ವೋಚಃ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಮಸ್ಮಾಕಮಸ್ಮತ್ಸಂಬಂಧಿನಮಿಮಮೂ ಷು ಪುರೋದೇಶೇಽನುಷ್ಠೀಯಮಾನಮಪಿ ಸನಿಂ ಹವಿರ್ದಾನಂ ನವ್ಯಾಂಸಂ ನವತರಂ ಗಾಯತ್ರಂ ಸ್ತುತಿರೂಪಂ ವಚೋಽಪಿ ದೇವೇಷು ದೇವಾನಾಮಗ್ರೇ ಪ್ರ ವೋಚಃ । ಪ್ರಬ್ರೂಹಿ ॥ ಊ ಷು । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘತ್ವಂ ।**

**ಸುಞ ಇತಿ ಷತ್ವಂ । ನವ್ಯಾಂಸಂ । ನವಶಬ್ದಾದೀಯಸುನೀಕಾರಲೋಪಶ್ಛಾಂದಸಃ । ಈಯಸುನೋ ನಿತ್ತ್ವಾದಾದ್ಯುದಾತ್ತತ್ವಂ । ವೋಚಃ । ಛಂದಸಿ ಲುಙ್‌ಲಙ್‌ಲಿಟ ಇತಿ ಲೋಡರ್ಥೇ ಪ್ರಾರ್ಥನಾಯಾಂ ಲುಙ್ವ್ಯಸ್ಯತಿವಕ್ತೀತಿ ಚ್ಲೇರಙಾದೇಶಃ । ಪಾ. ೩-೧-೫೨ । ವಚ ಉಮ್ । ಪಾ. ೭-೪-೨೦ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಅಸ್ಮಾಕಂ**—ನಮ್ಮ (ನಮ್ಮಿಂದ ಅರ್ಪಿಸಲ್ಪಡುವ) । **ಇದಮುಷು ಸನಿಂ**—ಈ ಹವಿಸ್ಸನ್ನೂ । **ನವ್ಯಾಂಸಂ**—ಅತ್ಯಂತ ನೂತನವಾದ । **ಗಾಯತ್ರಂ**—ಸ್ತೋತ್ರವನ್ನೂ । **ದೇವೇಷು**—ದೇವತೆಗಳ ಮುಂದುಗಡೆ । **ಪ್ರ ವೋಚಃ**—ಚೆನ್ನಾಗಿ ಹೊಗಳು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಾವು ಅರ್ಪಿಸುವ ಈ ಹವಿಸ್ಸನ್ನೂ ಮತ್ತು ನಮ್ಮ ಅತ್ಯಂತ ನೂತನವಾದ ಈ ಸ್ತೋತ್ರವನ್ನೂ ಸಹ ದೇವತೆಗಳ ಮುಂದುಗಡೆ ಚೆನ್ನಾಗಿ ಪ್ರಶಂಸಿಸು.

## English Translation.

Agni, announce to the gods this our offering and this our newest hymn (consisting of verses of Gayatri metre).

॥ ವಿಶೇಷವಿಷಯಗಳು ॥

**ಇಮಮೂ ಷು ಸನಿಂ**—ಈ ಪ್ರದಾನವು ಎಂದರೆ ಈಗ ನಾವು ನಿನಗೆ ಅರ್ಪಿಸುವುದಕ್ಕಾಗಿ ನಮ್ಮ ಮುಂದೆ ಸಿದ್ಧಪಡಿಸಿಟ್ಟುಕೊಂಡಿರುವ ಹವಿಃಪ್ರದಾನವು.

**ಗಾಯತ್ರಂ ನವ್ಯಾಂಸಂ**—ನಾವು ಹೊಸದಾಗಿ ಈಗತಾನೇ ರಚಿಸಿರುವ ಗಾಯತ್ರೀಛಂದಸ್ಸಿನಿಂದ ಕೂಡಿದ ಋಕ್ಕುಗಳುಳ್ಳ ಸ್ತೋತ್ರವು. ಅಥವಾ ಗಾಯತ್ರಂ ಎಂದರೆ ಗಾನಮಾಡಲು ಅನುಕೂಲವಾಗುವಂತೆ ರಚಿಸಿರುವ ಎಂಬ ಅರ್ಥವನ್ನು ಬೇಕಾದರೂ ಹೇಳಬಹುದು.

**ಅಗ್ನೇ ದೇವೇಷು ಪ್ರವೋಚಃ**—ಎಲೈ ಅಗ್ನಿಯೇ ನೀನು ನಮ್ಮ ಹವಿಃಪ್ರದಾನ ಮತ್ತು ಹೊಸದಾಗಿ ರಚಿಸಿರುವ ಸ್ತೋತ್ರದ ವಿಷಯವನ್ನು ದೇವತೆಗಳ ಸಮೀಪದಲ್ಲಿ ಪ್ರಶಂಸೆಮಾಡು.

॥ ವ್ಯಾಕರಣಪ್ರಕ್ರಿಯಾ ॥

**ಊ ಷು**—**' ನಿಪಾತಸ್ಯ ಚ '** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ. **' ಸುಞಃ '** (ಪಾ ಸೂ. ೮-೩-೧೦೭) ಎಂಬುದರಿಂದ ಉಕಾರವ ಪರದಲ್ಲಿರುವುದರಿಂದ ಸುಞ್‌ನ ಸಕಾರಕ್ಕೆ ಷತ್ವ ಬರುತ್ತದೆ.

**ನವ್ಯಾಂಸಂ**—ನವ ಶಬ್ದದಮೇಲೆ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ ಬರುತ್ತದೆ. ನವ+ಈಯಸ್ ಎಂದಿರುವಾಗ ಛಾಂದಸಿಕವಾಗಿ ಈಯಸುವಿನ ಈಕಾರಕ್ಕೆ ಲೋಪಬರುತ್ತದೆ. ಆಗ ಯಾದಿಪ್ರತ್ಯಯ ಪರದಲ್ಲಿರುವುದ

ರಿಂದ **'ಯಸ್ಯೇತಿಚ'** (ಪಾ. ಸೂ ೬-೪-೧೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ ಬರುತ್ತದೆ. ನವ್ಯಸ್ ಶಬ್ದವಾಗುತ್ತದೆ. ಉಗಿತ್ತಾದುದರಿಂದ ದ್ವಿತೀಯಾ ಏಕವಚನದಲ್ಲಿ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ ನುಮಾಗಮ ಬರುತ್ತದೆ. **'ಅತ್ವಸಂತಸ್ಯ ಚಾಧಾತೋಃ'** (ಪಾ. ಸೂ. ೬-೪-೧೪) ಎಂಬುದರಿಂದ ದೀರ್ಘ ಬರುತ್ತದೆ ನವ್ಯಾಂಸಂ ಎಂದು ರೂಪವಾಗುತ್ತದೆ. ಈಯಸುನ್ನಿನಲ್ಲಿ ನಕಾರ ಇತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಕಾರೋತ್ತರಾಕಾರವು ಉದಾತ್ತವಾಗುತ್ತದೆ.

**ವೋಚಃ**—ವಚ ಪರಿಭಾಷಣೇ ಧಾತು ಅದಾದಿ (ಅಥವಾ ಬ್ರೂಇಞ್ ವ್ಯಕ್ತಾಯಾಂ ವಾಚಿ. ಧಾತು. ಇದಕ್ಕೆ ಆರ್ಧಧಾತುಕದಲ್ಲಿ ವಚಾದೇಶ ಬರುತ್ತದೆ.) **'ಛಂದಸಿ ಲುಙ್‌ಲಙ್‌ಲಿಟಃ'** (ಪಾ. ಸೂ. ೩-೪-೬) ಎಂಬುದರಿಂದ **ಲೋಡರ್ಥ**ವಾದ ಪ್ರಾರ್ಥನೆಯಲ್ಲಿ ಲುಙ್ ಬರುತ್ತದೆ. ಮಧ್ಯಮಪುರುಷೈಕವಚನದಲ್ಲಿ ಸಿಪ್ ಬರುತ್ತದೆ. **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪಬರುತ್ತದೆ. **'ಚ್ಲಿಲುಙಿ'** (ಪಾ. ಸೂ. ೩-೧-೪೩) ಎಂಬುದರಿಂದ ಚ್ಲಿ ಪ್ರಾಪ್ತವಾದರೆ ಅದಕ್ಕೆ **'ಅಸ್ಯತಿವಕ್ತಿಖ್ಯಾತಿಭ್ಯೋಙ್'** (ಪಾ. ಸೂ ೩-೧-೫೨) ಎಂಬುದರಿಂದ ಅಙಾದೇಶ ಬರುತ್ತದೆ. ವಚ್+ಅ+ಸ್ ಎಂದಿರುವಾಗ **'ವಚ ಉಮ್'** (ಪಾ. ಸೂ. ೭-೪-೨೦) ಎಂಬುದರಿಂದ ಅಙ್ ಪರದಲ್ಲಿರುವಾಗ ಧಾತುವಿಗೆ ಉಮಾಗಮವು ಬರುತ್ತದೆ. ಮಿತ್ತಾದುದರಿಂದ ಅಂತ್ಯಾಚ್ಚಿನ ಪರಕ್ಕೆ ಗುಣ ಬಂದು ಪ್ರತ್ಯಯಕ್ಕೆ ರುತ್ವವಿಸರ್ಗಗಳು ಬಂದರೆ ವೋಚಃ ಎಂದು ರೂಪವಾಗುತ್ತದೆ. **'ಬಹುಲಂ ಛಂದಸ್ಯಮಾಙ್-'** (ಪಾ. ಸೂ. ೬-೪-೭೫) ಎಂಬುದರಿಂದ ಆಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ

॥ ಸಂಹಿತಾಪಾಠಃ ॥

ಆ ನೋ ಭಜ ಪರಮೇಷ್ವಾ ವಾಜೇಷು ಮಧ್ಯಮೇಷು ।
ಶಿಕ್ಷಾ ವಸ್ವೋ ಅಂತಮಸ್ಯ ॥ ೫ ॥

॥ ಪದಪಾಠಃ ॥

ಆ । ನಃ । ಭಜ । ಪರಮೇಷು । ಆ । ವಾಜೇಷು । ಮಧ್ಯಮೇಷು ।
ಶಿಕ್ಷ । ವಸ್ವಃ । ಅಂತಮಸ್ಯ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಪರಮೇಷೂತ್ಕೃಷ್ಟೇಷು ದ್ಯುಲೋಕವರ್ತಿಷು ವಾಜೇಷ್ವನ್ನೇಷು ನೋಽಸ್ಮಾನಾ ಭಜ । ಸರ್ವತಃ ಪ್ರಾಪಯ । ಮಧ್ಯಮೇಷ್ವಂತರಿಕ್ಷಲೋಕವರ್ತಿಷು ವಾಜೇಷ್ವಾ ಭಜ । ಅಂತಮಸ್ಯಾಂ-**

**ತಿಕತಮಸ್ಯ ಭೂಲೋಕಸ್ಯ ಸಂಬಂಧೀನಿ ವಸ್ವೋ ವಸೂನಿ ಶಿಕ್ಷ । ದೇಹಿ ॥ ಶಿಕ್ಷ । ಶಿಕ್ಷ ವಿದ್ಯೋಪಾದಾನೇ। ಶಪಃ ಪಿತ್ವಾನ್ನದ್ಧಾತುಸ್ವರಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಅಂತಮಸ್ಯ । ಅಂತಿಕತಮಸ್ಯ ತಮೇ ತಾದೇಶ್ಚ । ಪಾ. ೬-೪-೧೪೯-೯ । ಇತಿ ತಿಕಶಬ್ದಲೋಪಃ ॥ ೨೨ ॥**

॥ ಪ್ರತಿಪದಾರ್ಥ ॥

(ಹೇ ಅಗ್ನೇ—ಎಲೈ ಅಗ್ನಿಯೇ) । **ಪರಮೇಷು**—ಅತ್ಯಂತ ಉತ್ಕೃಷ್ಟವಾದ (ದ್ಯುಲೋಕದಲ್ಲಿರುವ) । **ವಾಜೇಷು**—ಅನ್ನಗಳಲ್ಲಿ । **ನಃ**—ನಮ್ಮನ್ನು । **ಆ ಭಜ**—ಸಂಪೂರ್ಣವಾಗಿ ಸೇರಿಸು, ಅಂತಹ ಅನ್ನವನ್ನು ದೊರಕಿಸಿಕೊಡು । **ಮಧ್ಯಮೇಷು**—ಮಧ್ಯಮಲೋಕವಾದ ಅಂತರಿಕ್ಷದಲ್ಲಿರತಕ್ಕ । **ವಾಜೇಷು—**ಅನ್ನಗಳಲ್ಲಿ । **ಆಭಜ—**ಸೇರಿಸು (ದೊರಕಿಸಿಕೊಡು) । **ಅಂತಮಸ್ಯ—**ಅತ್ಯಂತ ಸಮೀಪದಲ್ಲಿರುವ ಭೂಲೋಕದ । **ವಸ್ವಃ**—ಐಶ್ವರ್ಯಗಳನ್ನು । **ಶಿಕ್ಷ—**ಕೊಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮಗೆ ಅತ್ಯಂತ ಉತ್ಕೃಷ್ಟವಾದ ದ್ಯುಲೋಕದಲ್ಲಿರುವುದೂ ಮತ್ತು ಮಧ್ಯಮಲೋಕವಾದ ಅಂತರಿಕ್ಷದಲ್ಲಿರುವುದೂ ಆದ ಅನ್ನವನ್ನೊದಗಿಸಿ ಅವನ್ನು ದೊರಕುವಂತೆ ಮಾಡು. ಮತ್ತು ನಮ್ಮ ಅತ್ಯಂತ ಸಮೀಪವರ್ತಿಯಾದ ಭೂಲೋಕದ ಐಶ್ವರ್ಯಗಳನ್ನು ಒದಗಿಸು.

English Translation.

Procure for us the food that is in heaven and firmament and grant us the wealth that is on earth.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಪರಮೇಷು, ಮಧ್ಯಮೇಷು, ಅಂತಮಸ್ಯ ಎಂಬ ಶಬ್ದಗಳು ಮಾತ್ರವಿರುವವು. ಈ ಶಬ್ದಗಳಿಗೆ ಉತ್ಕೃಷ್ಟವಾದ, ಮಧ್ಯದಲ್ಲಿರುವ, ಸಮೀಪದಲ್ಲಿರುವ (ಪ್ರದೇಶ) ಎಂದು ಮಾತ್ರ ಅರ್ಥವಾಗುವುದು. ಭಾಷ್ಯಕಾರರು ಈ ಶಬ್ದಗಳಿಗೆ ಕ್ರಮವಾಗಿ ಸ್ವರ್ಗಲೋಕ, ಅಂತರಿಕ್ಷಲೋಕ, ಭೂಮಿ ಎಂದು ಅರ್ಥವನ್ನು ಸ್ಪಷ್ಟಪಡಿಸಿರುವರು.

**ಆ ಭಜ—ಪ್ರಾಪಯ ।** ದೊರಕಿಸಿಕೊಡು, ಲಭಿಸುವಂತೆ ಮಾಡು.

**ಶಿಕ್ಷ—ಶಿಕ್ಷ ವಿದ್ಯೋಪಾದಾನೇ ।** ಶಿಕ್ಷಶಬ್ದಕ್ಕೆ ವಿದ್ಯವನ್ನು ಹೇಳಿಕೊಡುವುದು ಎಂಬರ್ಥವಿದ್ದರೂ ಇಲ್ಲಿ ಸಾಮಾನ್ಯವಾಗಿ ಕೊಡು ಎಂಬ ಅರ್ಥವನ್ನೇ ಹೇಳಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಶಿಕ್ಷ**—ಶಿಕ್ಷ ವಿದ್ಯೋಪಾದಾನೇ ಧಾತು. ಭ್ವಾದಿ. ಧಾತುಗಳಿಗೆ ಅನೇಕಾರ್ಥವನ್ನು ಸ್ವೀಕರಿಸಿರುತ್ತಾರೆ. ಆದುದರಿಂದ ಅರ್ಥಾಂತರದಲ್ಲಿ ಪ್ರಯುಕ್ತವಾಗಿದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ ಬರುತ್ತದೆ. ಶಪ್ ವಿಕರಣ ಬರುತ್ತದೆ. ಅಕಾರದ ಪರದಲ್ಲಿ ಹಿ ಬಂದುದರಿಂದ '**ಅತೋಹೇಃ**' (ಪಾ. ಸೂ.

೬-೪-೧೦೫) ಎಂಬುದರಿಂದ ಅದಕ್ಕೆ ಲುಕ್ ಬರುತ್ತದೆ. ಶಿಕ್ಷ ಎಂದು ರೂಪವಾಗುತ್ತದೆ. ಇಲ್ಲಿ ಶಪ್ ಪಿತ್ತಾದುದರಿಂದ **' ಅನುದಾತ್ತೌ ಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರವೇ ಉಳಿಯುತ್ತದೆ. **' ದ್ವ್ಯಚೋಽತಸ್ತಿಙಃ '** (ಪಾ. ಸೂ. ೬-೩-೧೩೫) ದ್ವ್ಯಚ್ಕವಾದ ತಿಙಂತದ ಅಕಾರಕ್ಕೆ ಸಂಹಿತಾದಲ್ಲಿ ದೀರ್ಘಬರುತ್ತದೆ ಎಂಬುದರಿಂದ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ, ಶಿಕ್ಷಾ ಎಂದು ರೂಪವಾಗುತ್ತದೆ.

**ಅಂತಿಮಸ್ಯ**—ಅಂತಿಕತಮಸ್ಯ ಎಂದಿರುತ್ತದೆ. **' ತಮೇ ತಾದೇಶ್ಚ '** (ಪಾ. ಸೂ. ೬-೪-೧೪೯-೯) ತಮಪ್ ಪರದಲ್ಲಿರುವಾಗ ಅಂತಿಕಶಬ್ದದಲ್ಲಿರುವ ತಕಾರಾದಿಯಾದ ವರ್ಣಗಳು ಲೋಪವಾಗುತ್ತವೆ ಎಂಬುದರಿಂದ ಇಲ್ಲಿ ತಿಕ ಶಬ್ದಕ್ಕೆ ಲೋಪ ಬರುತ್ತದೆ. ಅಂತಿಮ ಎಂದಾಗುತ್ತದೆ. ಷಷ್ಠೀ ಏಕವಚನದಲ್ಲಿ ಅಂತಿಮಸ್ಯ ಎಂದು ರೂಪವಾಗುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ವಿಭಕ್ತಾಸಿ ಚಿತ್ರಭಾನೋ ಸಿಂಧೋರೂರ್ಮಾ ಉಪಾಕ ಆ ।
ಸದ್ಯೋ ದಾಶುಷೇ ಕ್ಷರಸಿ ॥ ೬ ॥

॥ ಪದಪಾಠಃ ॥

ವಿಽಭಕ್ತಾ । ಅಸಿ । ಚಿತ್ರಭಾನೋ ಇತಿ ಚಿತ್ರಽಭಾನೋ । ಸಿಂಧೋಃ । ಊರ್ಮೌ । ಉಪಾಕೇ । ಆ ।
ಸದ್ಯಃ । ದಾಶುಷೇ । ಕ್ಷರಸಿ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಚಿತ್ರಭಾನೋ ವಿಚಿತ್ರರಶ್ಮಿಯುಕ್ತಾಗ್ನೇ ವಿಭಕ್ತಾ ವಿಶಿಷ್ಟಸ್ಯ ಧನಸ್ಯ ಪ್ರಾಪಯಿತಾಸಿ । ತತ್ರ ದೃಷ್ಟಾಂತ ಉಚ್ಯತೇ । ಆಕಾರ ಉಪಮಾರ್ಥಃ । ಯಥಾ ಸಿಂಧೋರ್ನದ್ಯಾ ಉಪಾಕೇ ಸಮೀಪ ಊರ್ಮಾವೂರ್ಮಿಂ ತರಂಗೋಪಲಕ್ಷಿತಂ ಕುಲ್ಯಾದಿಪ್ರವಾಹಂ ವಿಭಜಂತಿ ತದ್ವತ್ । ದಾಶುಷೇ । ಹವಿ-**

ದರ್ತ್ತವತೇ ಯಜಮಾನಾಯ ಸದ್ಯಸ್ತದಾನೀಮೇವ ಕ್ಷರಸಿ । ಕರ್ಮಫಲಭೂತಾಂ ವೃಷ್ಟಿಂ ಕರೋಷಿ ॥ ಸಿಂಧೋಃ । ಸ್ಯಂದೂ ಪ್ರಸ್ರವಣೇ । ಸ್ಯಂದೇಃ ಸಂಪ್ರಸಾರಣಂ ಧಶ್ಚ । ಉ. ೧-೧೨ । ಇತ್ಯುಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಊರ್ಮಿಃ । ಅರ್ತೇರೂಚ್ಚ । ಉ. ೪-೪೪ । ಇತಿ ಮಿಃ । ಪ್ರತ್ಯಯ ಸ್ವರಃ । ದಾಶುಷೇ । ಧೃತವ್ರತಾಯ ದಾಶುಷೇ । ಋಗ್ವೇ. ೧-೨೫-೬ । ಇತ್ಯತ್ರೋಕ್ತಂ ॥

॥ ಪ್ರತಿಪದಾರ್ಥ ॥

**ಚಿತ್ರಭಾನೋ**—ಬಗೆಬಗೆಯ ಕಿರಣಗಳುಳ್ಳ ಅಗ್ನಿಯೇ । **ತ್ವಂ**—(ನೀನು) । **ಸಿಂಧೋಃ**—ನದಿಯ । **ಉಪಾಕೇ**—ಸಮೀಪದಲ್ಲಿ (ಮಧ್ಯಭಾಗದಲ್ಲಿರುವ ದ್ವೀಪಪ್ರದೇಶಗಳು) । **ಊರ್ಮೌ ಆ**—ಅಲೆಗಳ ರೂಪಗಳಲ್ಲಿರುವ (ಅಖಂಡವಾದ ಪ್ರವಾಹವನ್ನು ವಿಭಾಗಮಾಡಿ ಸುತ್ತಲೂ ಹಂಚಿ ಹರಿಯುವಂತೆ ಮಾಡುವ ಹಾಗೆ) । **ವಿಭಕ್ತಾ**— (ಅಖಂಡವಾದ ಐಶ್ವರ್ಯವನ್ನು) ಹಂಚುವವನಾಗಿ । **ಅಸಿ**—ಆಗಿದ್ದೀಯೆ (ಮತ್ತು) । **ದಾಶುಷೇ**—ಹವಿಸ್ಸನ್ನು ಅರ್ಪಿಸುವವನಿಗೆ । **ಸದ್ಯಃ**—ಒಡನೆಯೇ । **ಕ್ಷರಸಿ**—(ಕರ್ಮಫಲರೂಪವಾದ) ವೃಷ್ಟಿಯನ್ನು ಸುರಿಸುತ್ತೀಯೆ.

॥ ಭಾವಾರ್ಥ ॥

ಬಗೆಬಗೆಯ ಕಿರಣಗಳುಳ್ಳ ಎಲೈ ಅಗ್ನಿಯೇ, ನದಿಯ ಮಧ್ಯಭಾಗದಲ್ಲಿರುವ ದ್ವೀಪರೂಪವಾದ ಬಂಡೆಗಳು ಅಲೆಯ ರೂಪದಲ್ಲಿರುವ ನದಿಯ ಪ್ರವಾಹವನ್ನು ಒಡೆದು ಸುತ್ತಲೂ ಹಂಚಿ ಹರಿಯುವಂತೆ ಮಾಡುವ ಹಾಗೆ ನೀನೂ ಸಹ ಅಖಂಡವಾದ ಐಶ್ವರ್ಯವನ್ನು ನಮ್ಮೆಲ್ಲರಿಗೂ ಹಂಚುತ್ತೀಯೆ. ಮತ್ತು ನಿನಗೆ ಹವಿಸ್ಸನ್ನು ಅರ್ಪಿಸುವ ಯಜ್ಞ ಕರ್ತನಿಗೆ ಅವನು ಮಾಡಿದ ಕರ್ಮಗಳಿಗೆ ಬೇಗನೆ ಪ್ರತಿಫಲವನ್ನು ಕೊಡುತ್ತೀಯೆ.

## English Translation.

O Chitrabhanu, or Agni with wonderful or various lustre, you are the distributor of riches as the waves of a river are parted by islets (in the middle of the river); you shower rewards upon the giver of oblations.

॥ ವಿಶೇಷವಿಷಯಗಳು ॥

**ವಿಭಕ್ತಾ—ವಿಶಿಷ್ಟಸ್ಯ ಧನಸ್ಯ ಪ್ರಾಪಯಿತಾಸಿ ।** ಸಮಸ್ತ ಧನವನ್ನು ದೊರಕಿಸಿಕೊಡುವವನು.

**ಚಿತ್ರಭಾನೋ—** ಈ ಶಬ್ದವು ಅಗ್ನಿಯನ್ನು ಸಂಬೋಧನೆಮಾಡುವಾಗ ವಿಶೇಷವಾಗಿ ಉಪಯೋಗಿಸಲ್ಪಡು ವುದು. ಚಿತ್ರ-ವಿಚಿತ್ರ ಅಥವಾ ನಾನಾ ವಿಧವಾದ, ಭಾನೋ-ಕಿರಣಗಳುಳ್ಳ ಎಂದು ಅವಯವಾರ್ಥವು. Agni with wonderful or various lustre.

**ಸಿಂಧೋರಾ—** ನದಿಯ ನೀರು ವಿಭಾಗಿಸಲ್ಪಡುವಂತೆ. ಇಲ್ಲಿ ಆ ಎಂಬ ಶಬ್ದವು ಇವ ಎಂಬ ಉಪಮಾರ್ಥ ವನ್ನು ಸೂಚಿಸುವುದೆಂದು ಭಾಷ್ಯಕಾರರು ಹೇಳಿರುವರು. **ಸ್ಯನ್ದೂ ಪ್ರಸವಣೇ ।** ಪ್ರವಾಹರೂಪದಲ್ಲಿ ಹರಿಯುವುದ ರಿಂದ ಸಿಂಧು ಶಬ್ದಕ್ಕೆ ನದಿಯೆಂದು ಹೆಸರು.

**ಕ್ಷರಸಿ—ವೃಷ್ಟಿಂ ಕರೋತಿ ।** ಮಳೆಯನ್ನು ಸುರಿಸುವಂತೆ ಇಷ್ಟಾರ್ಥಗಳನ್ನು ಸುರಿಸು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಸಿಂಧೋಃ**—ಸ್ಯಂದೂ ಪ್ರಸ್ರವಣೇ ಧಾತು. ಭ್ವಾದಿ. **'ಸ್ಯಂದೇಃ ಸಂಪ್ರಸಾರಣಂ ಧಶ್ಚ'** (ಉ ಸೂ. ೧-೧೧) ಎಂಬುದರಿಂದ ಇದಕ್ಕೆ ಉಪ್ರತ್ಯಯ ಬರುತ್ತದೆ. ಧಾತುವಿನ ಯಕಾರಕ್ಕೆ ಸಂಪ್ರಸಾರಣ ಬರುತ್ತದೆ. ದಕಾರಕ್ಕೆ ಧಕಾರಾದೇಶ ಬರುತ್ತದೆ. ಯಕಾರಕ್ಕೆ ಇಕಾರರೂಪ ಸಂಪ್ರಸಾರಣ ಬಂದರೆ ಸಿಂಧು ಎಂದು ರೂಪವಾಗುತ್ತದೆ. ಷಷ್ಠೀ ಏಕವಚನದಲ್ಲಿ ಸಿಂಧೋಃ ಎಂದು ರೂಪವಾಗುತ್ತದೆ. **ಸ್ಯಂದೇ**—ಸೂತ್ರದಲ್ಲಿ ಹಿಂದಿನಿಂದ ನಿತ್ ಎಂದು ಅನುವೃತ್ತವಾಗುವುದರಿಂದ ಉ ಪ್ರತ್ಯಯವು ನಿತ್ತಾಗುತ್ತದೆ ಆದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಸಿಂಧು ಶಬ್ದವು ಆದ್ಯುದಾತ್ತವಾಗುತ್ತದೆ.

**ಊರ್ಮಿಃ**—ಋ ಗತೌ ಧಾತು. **'ಅರ್ತೇರೂಚ್ಚ'** (ಉ. ಸೂ. ೪-೪೪) ಎಂಬುದರಿಂದ ಮಿ ಪ್ರತ್ಯಯ ಬರುತ್ತದೆ. ಪ್ರಕೃತಿಗೆ ಊತ್ವ ಬರುತ್ತದೆ. **ಉರಣ್‌ರಪರಃ** ಎಂಬುದರಿಂದ ಋಕಾರಸ್ಥಾನಕ್ಕೆ ಊತ್ವವು ರಪರವಾಗಿ ಬಂದರೆ ಊರ್ಮಿಃ ಎಂದು ರೂಪವಾಗುತ್ತದೆ.ಪ್ರತ್ಯಯಕ್ಕೆ **'ಆದ್ಯುದಾತ್ತಶ್ಚ'** (ಪಾ- ಸೂ. ೩-೧-೩) ಎಂಬುದರಿಂದ ಬಂದಿರುವ ಆದ್ಯುದಾತ್ತ ಸ್ವರದಿಂದ ಊರ್ಮಿ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

**ದಾಶುಷೇ**—ದಾಶೃ ದಾನೇ ಧಾತು. ಇದರ ಪ್ರಕ್ರಿಯೆಯನ್ನು ಪೂರ್ವದಲ್ಲಿ (ಋ. ಸ. ೧-೨-೨೫-೬) ವಿವೃತವಾಗಿದೆ ಕ್ವಸು ಪ್ರತ್ಯಯದೊಡನೆ ಸಂಪ್ರಸಾರಣ ಷತ್ವಗಳು ಬರುತ್ತವೆ.

॥ ಸಂಹಿತಾಪಾಠಃ ॥

ಯಮ॑ಗ್ನೇ ಪೃ॒ತ್ಸು ಮರ್ತ್ಯ॒ಮವಾ॒ ವಾಜೇ॑ಷು॒ ಯಂ ಜು॒ನಾಃ ।
ಸ ಯನ್ತಾ॒ ಶಶ್ವ॑ತೀ॒ರಿಷಃ॑ ॥ ೭ ॥

॥ ಪದಪಾಠಃ ॥

ಯಂ । ಅ॒ಗ್ನೇ॒ । ಪೃ॒ತ್ಽಸು । ಮರ್ತ್ಯ॑ಂ । ಅವಾ॑ಃ । ವಾಜೇ॑ಷು । ಯಂ । ಜು॒ನಾಃ ।
ಸಃ । ಯನ್ತಾ॑ । ಶಶ್ವ॑ತೀಃ । ಇಷಃ॑ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಪೃತ್ಸು ಸಂಗ್ರಾಮೇಷು ಯಂ ಮರ್ತ್ಯಂ ಯಜಮಾನಮವಾ ಅವಸಿ ರಕ್ಷಸಿ । ಯಂ ಪುರುಷಂ ವಾಜೇಷು ಸಂಗ್ರಾಮೇಷು ಜುನಾಃ ಪ್ರೇರಯಸಿ । ಸ ನರೋ ಯಜಮಾನಃ ಶಾಶ್ವತೀರಿಷೋ**

ನಿತ್ಯಾನ್ಯನ್ನಾನಿ ಯಂತಾ । ನಿಯಂತುಂ ಸಮರ್ಥೋ ಭವತಿ ॥ ಪೃತ್ಸು । ಪದಾದಿಷು ಮಾಂಸ್ಪೃತ್ಸ್ನೂನಾಮುಪಸಂಖ್ಯಾನಂ । ಪಾ. ೬-೧-೬೩-೧ । ಇತಿ ಪೃತನಾಶಬ್ದಸ್ಯ ಪೃದಾದೇಶಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಅವಾಃ । ಅವಃ । ಅಕಾರಾಕಾರಯೋರ್ವಿಪರ್ಯಯಃ । ಯದ್ವಾ । ಲೇಟ್ಯಾಡಾಗಮಃ । ಇತಶ್ಚೇತಿ ಸಿಪ ಇಕಾರಸ್ಯ ಲೋಪಃ । ಜುನಾಃ । ಜೂ ಇತಿ ಗತ್ಯರ್ಥಃ ಸೌತ್ರೋ ಧಾತುಃ । ಲಙಃ ಸಿಪ್ । ಕ್ರಾದಿಭ್ಯಃ ಶ್ನಾ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಾಗಮಾಭಾವಃ । ಯದ್ವೃತ್ತಯೋಗಾದನಿಘಾತಃ । ಯಂತಾ । ತೃನೋ ನಿತ್ತ್ವಾದಾದ್ಯುದಾತ್ತತ್ವಂ । ಶಶ್ವತೀಃ । ಉಗಿತಶ್ಚೇತಿ ಙೀಪ್ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಪೃತ್ಸು**—ಯುದ್ಧಗಳಲ್ಲಿ । **ಯಂ ಮರ್ತ್ಯಂ**—ಯಾವ (ಯಜಮಾನನಾದ) ಮಾನವನನ್ನು । **ಅವಾಃ**—ಕಾಪಾಡುತ್ತೀಯೋ । **ಯಂ**—ಯಾವ ಮಾನವನನ್ನು । **ವಾಜೇಷು**—ಯುದ್ಧಗಳಲ್ಲಿ । **ಜುನಾಃ**—ಪ್ರೇರಿಸುತ್ತೀಯೋ । **ಸಃ**—ಆ ಮಾನವನು । **ಶಶ್ವತೀಃ ಇಷಃ**—ಶಾಶ್ವತವಾದ ಅನ್ನಕ್ಕೆ । **ಯಂತಾ**—ಅಧಿಪತಿಯಾಗುತ್ತಾನೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಯಾವ ಯಜ್ಞಕರ್ತನಾದ ಮಾನವನನ್ನು ಯುದ್ಧಗಳಲ್ಲಿ ಪ್ರೇರಿಸುತ್ತೀಯೋ ಮತ್ತು ಯಾವನನ್ನು ಕಾಪಾಡುತ್ತೀಯೋ ಅಂತಹ ಯಜ್ಞಕರ್ತನಾದ ಮಾನವನು ಶಾಶ್ವತವಾದ ಅನ್ನಕ್ಕೆ ಅಧಿಪತಿಯಾಗುತ್ತಾನೆ.

## English Translation.

O Agni, that mortal (man) whom you protect in battles, whom you encourage in all battles will always command food.

॥ ವಿಶೇಷವಿಷಯಗಳು ॥

**ಪೃತ್ಸು, ವಾಜೇಷು**—ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮವಾಚಕಶಬ್ದಗಳ ಮಧ್ಯದಲ್ಲಿ ಪೃತ್ಸು, ವಾಜೇ ಎಂಬ ಶಬ್ದಗಳು ಪಠಿತವಾಗಿರುವುದರಿಂದ (ನಿ. ೨-೯) ಪೃತ್ಸು, ವಾಜೇಷು ಎಂಬ ಶಬ್ದಗಳಿಗೆ ಯುದ್ಧಗಳಲ್ಲಿ ಎಂದರ್ಥವು.

**ಜುನಾಃ—ಜೂ ಇತಿ ಗತ್ಯರ್ಥ ಸೌತ್ರೋ ಧಾತುಃ**—ಜೂ ಧಾತುವಿಗೆ ಗತ್ಯರ್ಥವಿರುವುದು. **ಜುನಾ** ಎಂದರೆ (ಯುದ್ಧಗಳಲ್ಲಿ) ಹೋಗುವಂತೆ ಮಾಡುವೆ, ಪ್ರಬೋಧನೆಮಾಡುವೆ, ಉತ್ಸಾಹಗೊಳಿಸುವೆ ಇತ್ಯಾದ್ಯರ್ಥಗಳನ್ನು ಹೇಳಬಹುದು.

**ಯಂತಾ—ಯಾ ಪ್ರಾಪಣೇ** । ಹೊಂದಿರುವವನು.

**ಶಶ್ವತೀಃ ಇಷಃ**—ಯಾವಾಗಲೂ ಇರುವ ಅನ್ನವು. ಸದಾಕಾಲದಲ್ಲಿಯೂ ಆಹಾರವನ್ನು ಹೊಂದಿರುವವನು ಎಂದರೆ ಆಹಾರಕ್ಕೆ ಕೊರತೆ ಇಲ್ಲದಿರುವವನು.

॥ ವ್ಯಾಕರಣಪ್ರಕ್ರಿಯಾ ॥

**ಪೃತ್ಸು**—ಪೃತನಾ ಶಬ್ದಕ್ಕೆ ಸಪ್ತಮೀ ಬಹುವಚನ ಸುಪ್ ಪರದಲ್ಲಿರುವಾಗ, **'ಪದಾದಿಷು ಮಾಂಸ್‌ಪೃತ್ ಸ್ನೂನಾಮುಪಸಂಖ್ಯಾನಮ್'** (ಪಾ. ಸೂ. ೬-೧-೬೩-೨) ಎಂಬುದರಿಂದ ಪೃತ್ ಎಂಬ ಆದೇಶ ಬರುತ್ತದೆ. ಪೃತ್ಸು ಎಂದು ರೂಪವಾಗುತ್ತದೆ. **'ಸಾವೇಕಾಚಸ್ತೃತೀಯಾದಿಃ'** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಯ ಅನುದಾತ್ತಸ್ವರವು ಬಾಧಿತವಾಗಿ ಉದಾತ್ತಸ್ವರ ಬರುತ್ತದೆ.

**ಅವಾಃ**—ಅವ ರಕ್ಷಣೇ ಧಾತು ಭ್ವಾದಿ. ಆವಃ ಎಂದು ಆಗಬೇಕಾಗುತ್ತದೆ. ಲಙ್‌ನಲ್ಲಿ ಸಿಪ್ ಬಂದರೆ ಮಧ್ಯೆ ಶಪ್ ಬರುತ್ತದೆ. ಧಾತುವಿಗೆ ಆಡಾಗಮ ಬಂದರೆ ಆವಃ ಎಂದು ಆಗುತ್ತದೆ. ಛಂದಸ್ಸಿನಲ್ಲಿ ಆಕಾರ ಅಕಾರಗಳಿಗೆ ವರ್ಣ ವಿಪರ್ಯಯ ಬರುತ್ತದೆ, ಅಥವಾ ಲೇಟ್ ಬರುತ್ತದೆ ಎಂದು ಅಂಗೀಕರಿಸಬೇಕು. **'ಲೇಟೋಽಡಾಟೌ'** (ಪಾ. ಸೂ. ೩-೪-೯೪) ಎಂಬುದರಿಂದ ವಿಭಕ್ತಿಗೆ ಆಡಾಗಮ ಬರುತ್ತದೆ. ಆಗ ಸ್ವರಸವಾಗಿ ಅವಾಃ ಎಂದು ರೂಪ ವಾಗುತ್ತದೆ. **'ಇತಶ್ಚ ಲೋಪಃ ಪರಸ್ಮೈಪದೇಷು'** (ಪಾ. ಸೂ. ೩-೪-೯೭) ಎಂಬುದರಿಂದ ಸಿಪ್ಪಿನ ಇಕಾರಕ್ಕೆ ಲೋಪ ಬರುತ್ತದೆ. ಶಪ್ ವಿಭಕ್ತಿಯು ಪಿತ್ತಾದುದರಿಂದ ಅನುದಾತ್ತವಾಗುತ್ತವೆ. ಧಾತುಸ್ವರದಿಂದ ಆದ್ಯುದಾತ್ತ ವಾಗುತ್ತದೆ.

**ಜುನಾಃ**—ಜೂ ಗತೌ ಧಾತು. ಸೂತ್ರನಿರ್ದಿಷ್ಟವಾಗಿದೆ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬರುತ್ತದೆ. ಕ್ರ್ಯಾದಿಯಲ್ಲಿ ಪಠಿತವಾದುದರಿಂದ **'ಕ್ರ್ಯಾದಿಭ್ಯಃ ಶ್ನಾ'** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ ಬರುತ್ತದೆ ಜುನಾಸ್ ಎಂದಿರುವಾಗ ರುತ್ವವಿಸರ್ಗ ಬಂದರೆ ಜುನಾಃ ಎಂದು ರೂಪವಾಗುತ್ತದೆ. **'ಬಹುಲಂ ಛಂದಸ್ಯಮಾಙ್‌ಯೋಗೇಽಪಿ'** (ಪಾ.ಸೂ. ೬-೪-೭೫) ಎಂಬುದರಿಂದ ಮಾಙ್ ಸಂಬಂಧವಿಲ್ಲದಿದ್ದರೂ ಛಂದಸ್ಸಿ ನಲ್ಲಿ ಅಡಾಗಮ ಬರುವುದಿಲ್ಲ. ಯಮ್ ಎಂಬ ಯಚ್ಛಬ್ದಸಂಬಂಧವಿರುವುದರಿಂದ **'ಯದ್ವೃತ್ತಾನ್ನಿತ್ಯಂ'** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ವಿಕರಣಸ್ವರದಿಂದ ಅಂತೋದಾತ್ತ ವಾಗುತ್ತದೆ.

**ಯಂತಾ**—ಯಮ ಉಪರಮೇ ಧಾತು. ಕರ್ತ್ರರ್ಥದಲ್ಲಿ ತೃನ್ ಪ್ರತ್ಯಯ ಬರುತ್ತದೆ. ಪ್ರಥಮಾ ಏಕವಚನ ದಲ್ಲಿ ಯಂತಾ ಎಂದು ರೂಪವಾಗುತ್ತದೆ. ತೃನ್ ನಿತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಶಶ್ವತೀಃ**—**'ಉಗಿತಶ್ಚ'** (ಪಾ. ಸೂ. ೪-೧-೬) ಎಂಬುದರಿಂದ ಙೀಪ್ ಬರುತ್ತದೆ. ದ್ವಿತೀಯಾ ಬಹು ವಚನದಲ್ಲಿ ಶಶ್ವತೀಃ ಎಂದು ರೂಪವಾಗುತ್ತದೆ. ॥ ೭ ॥

॥ ಸಂಹಿತಾಪಾಠಃ ॥

ನಕಿರಸ್ಯ ಸಹನ್ತ್ಯ ಪರ್ಯೇತಾ ಕಯಸ್ಯ ಚಿತ್ ।
ವಾಜೋ ಅಸ್ತಿ ಶ್ರವಾಯ್ಯಃ ॥ ೮ ॥

॥ ಪದಪಾಠಃ ॥

ನಕಿಃ । ಅಸ್ಯ । ಸಹನ್ತ್ಯ । ಪರಿಽಏತಾ । ಕಯಸ್ಯ । ಚಿತ್ ।
ವಾಜಃ । ಅಸ್ತಿ । ಶ್ರವಾಯ್ಯಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಸಹಂತ್ಯ ಶತ್ರೂಣಾಮಭಿಭವನಶೀಲಾಗ್ನೇ ಅಸ್ಯ ತ್ವದ್ಭಕ್ತಸ್ಯ ಯಜಮಾನಸ್ಯ ಕಯಸ್ಯ ಚಿತ್ಕಸ್ಯಾಪಿ ಪರ್ಯೇತಾ ನಕಿಃ । ಆಕ್ರಮಿತಾ ನಾಸ್ತಿ । ಕಿಂಚಾಸ್ಯ ಯಜಮಾನಸ್ಯ ಶ್ರವಾಯ್ಯಃ ಶ್ರವಣೀಯೋ ವಾಜೋಽಸ್ತಿ । ಬಲವಿಶೇಷೋಽಸ್ತಿ ॥ ಕಯಸ್ಯ । ಯಕಾರೋಪಜನಶ್ಛಾಂದಸಃ । ಶ್ರವಾಯ್ಯಃ । ಶ್ರುದಕ್ಷಿಸ್ಪೃಹಿಗ್ರಹಿಭ್ಯ ಆಯ್ಯಃ । ಉ. ೩-೯೬ । ಇತ್ಯಾಯ್ಯಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಸಹಂತ್ಯ**—(ಶತ್ರುಗಳನ್ನು ನಾಶಮಾಡುವ) ಶಕ್ತಿಯುಳ್ಳ ಎಲೈ ಅಗ್ನಿಯೇ । **ಅಸ್ಯ**—ಈ ಯಜಮಾನನಿಗೆ । **ಕಯಸ್ಯ ಚಿತ್ ಪರ್ಯೇತಾ**—ನಿಗ್ರಹಮಾಡಬಲ್ಲ ಯಾವ ಶತ್ರುವೂ ಕೂಡ । **ನಕಿಃ**—ಇಲ್ಲವೇ ಇಲ್ಲ (ಮತ್ತು ಇಂತಹ ಯಜಮಾನನಿಗೆ) । **ಶ್ರವಾಯ್ಯಃ**—ಲೋಕಪ್ರಸಿದ್ಧವಾದ । **ವಾಜಃ**—ಶಕ್ತಿಯು ಅಥವಾ ಅನ್ನವು । **ಅಸ್ತಿ**—ಇದೆ.

॥ ಭಾವಾರ್ಥ ॥

ಎಲೈ ಶತ್ರುನಾಶಕನಾದ ಅಗ್ನಿಯೇ, ನಿನ್ನ ಭಕ್ತನಾದ ಯಜಮಾನನಿಗೆ ಅವನನ್ನು ಸೋಲಿಸುವ ಶತ್ರುವು ಇಲ್ಲವೇ ಇಲ್ಲ. ಏಕೆಂದರೆ ಅವನಿಗೆ (ನಿನ್ನ ಅನುಗ್ರಹದಿಂದ) ಶಕ್ತಿಯೂ (ಅನ್ನಾದ್ಯಾಹಾರವೂ) ಇದೆಯೆಂಬುದು ಪ್ರಸಿದ್ಧವಾಗಿಯೇ ಇದೆ.

## English Translation.

Subduer of enemies, (Agni) no conqueror of your worshipper ever exists; for his might is well-known.

॥ ವಿಶೇಷವಿಷಯಗಳು ॥

**ನಕಿಃ**—ಹಿಕಂ ನುಕಂ ಮೊದಲಾದ ಸರ್ವಪದಸಮಾಮ್ನಾಯವನ್ನು ಹೇಳುವ ಒಂಭತ್ತು ಪದಗಳ ಮಧ್ಯದಲ್ಲಿ ನಕಿಃ ಎಂಬ ಶಬ್ದವು ಪಠಿತವಾಗಿರುವುದರಿಂದ ನಕಿಃ ಎಂದರೆ ಇಲ್ಲ ಎಂಬ ಅರ್ಥವನ್ನು (ಅಥವಾ ಸಮಯೋಚಿತವಾದ ಯಾವಅರ್ಥವನ್ನು ಬೇಕಾದರೂ) ಇಲ್ಲಿ ಹೇಳಬಹುದು.

**ಸಹಂತ್ಯ—ಶತ್ರೂಣಾಮಭಿಭವನಶೀಲ ।** ಶತ್ರುಗಳನ್ನು ಪರಾಭವಗೊಳಿಸುವ ಸಾಮರ್ಥ್ಯವುಳ್ಳ.

**ಪರ್ಯೇತಾ—ಪರಿ ಏತೀತಿ ಪರ್ಯೇತಾ ಆಕ್ರಮಿತಾ ।** ಆಕ್ರಮಿಸುವವನು, ಸೋಲಿಸುವವನು, ಜಯಿಸುವವನು conqueror.

**ಕಯಸ್ಯ ಚಿತ್—ಕಸ್ಯ ಚಿತ್ ।** ಛಂದಸ್ಸಿನ ಅನುಕೂಲಕ್ಕಾಗಿ ಯ ಎಂಬ ಅಕ್ಷರವು ಇಲ್ಲಿ ಸೇರಿಸಲ್ಪಟ್ಟಿದೆ.

**ವಾಜಃ**—ಬಲವು ಅಥವಾ ಅನ್ನವು.

**ಶ್ರವಾಯ್ಯಃ—ಶ್ರವಣೀಯಃ ।** ಪ್ರಸಿದ್ಧವಾದ.

॥ ವ್ಯಾಕರಣಪ್ರಕ್ರಿಯಾ ॥

**ಕಯಸ್ಯ**—ಕಿಮ್ ಶಬ್ದದ ಮೇಲೆ ಷಷ್ಠೀ ಏಕವಚನ ಪರದಲ್ಲಿರುವಾಗ '**ಕಿಮಃ ಕಃ**' (ಪಾ. ಸೂ. ೭-೧-೧೦೩) ಎಂಬುದರಿಂದ ವಿಭಕ್ತಿಪರದಲ್ಲಿರುವಾಗ ಕಾದೇಶ ಬರುತ್ತದೆ. ಅಕಾರದ ಪರದಲ್ಲಿರುವುದರಿಂದ '**ಟಾಙಸಿಙಸಾಂ**–' (ಪಾ ಸೂ. ೭-೧-೧೨) ಎಂಬುದರಿಂದ ಙಸ್ಸಿಗೆ ಸ್ಯ ಎಂಬ ಆದೇಶ ಬರುತ್ತದೆ. ಕಸ್ಯ ಎಂದು ರೂಪವಾಗುತ್ತದೆ. ಛಾಂದಸವಾಗಿ ಮಧ್ಯೆ ಯಕಾರಾಗಮವು ಬರುತ್ತದೆ. ಕಯಸ್ಯ ಎಂದು ರೂಪವಾಗುತ್ತದೆ.

**ಶ್ರವಾಯ್ಯಃ**—ಶ್ರು ಶ್ರವಣೇ ಧಾತು. ಭ್ವಾದಿ. '**ಶ್ರುದಕ್ಷಿಸ್ಪೃಹಿ ಗೃಹಿಭ್ಯಃ ಆಯ್ಯಃ**' (ಉ. ಸೂ. ೩-೩೭೬) ಎಂಬುದರಿಂದ ಇದಕ್ಕೆ ಆಯ್ಯ ಪ್ರತ್ಯಯವು ಪರದಲ್ಲಿರುವಾಗ '**ಸಾರ್ವಧಾತುಕಾರ್ಧಧಾತುಕಯೋಃ**' (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿಗೆ ಗುಣ ಬರುತ್ತದೆ. ಅವಾದೇಶ ಬಂದರೆ ಶ್ರವಾಯ್ಯಃ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಮಧ್ಯೋದಾತ್ತವಾದ ಶಬ್ದವಾಗುತ್ತದೆ. ॥ ೮ ॥

---

॥ ಸಂಹಿತಾಪಾಠಃ ॥

ಸ ವಾಜಂ ವಿಶ್ವಚರ್ಷಣಿರರ್ವದ್ಭಿರಸ್ತು ತರುತಾ ।
ವಿಪ್ರೇಭಿರಸ್ತು ಸನಿತಾ ॥ ೯ ॥

॥ ಪದಪಾಠಃ ॥

**ಸಃ । ವಾಜಂ । ವಿಶ್ವಽಚರ್ಷಣಿಃ । ಅರ್ವತ್ಽಭಿಃ । ಅಸ್ತು । ತರುತಾ ।**
**ವಿಪ್ರೇಭಿಃ । ಅಸ್ತು । ಸನಿತಾ ॥ ೯ ॥**

॥ ಸಾಯಣಭಾಷ್ಯಂ ॥

ವಿಶ್ವಚರ್ಷಣಿಃ ಸರ್ವೈರ್ಮನುಷ್ಯೈರುಪೇತಃ ಸೋಽಗ್ನಿರರ್ವದ್ಭಿರಶ್ವೈರ್ವಾಜಂ ಸಂಗ್ರಾಮಂ ತರುತಾ ತಾರಯಿತಾಸ್ತು । ವಿಪ್ರೇಭಿರ್ಮೇಧಾವಿಭಿರ್ಋತ್ವಿಗ್ಭಿಃ ಸಹಿತಸ್ತುಷ್ಟೋಽಗ್ನಿಃ ಸನಿತಾ ಫಲಸ್ಯ ದಾತಾಸ್ತು ॥ ವಿಶ್ವಚರ್ಷಣಿಃ । ವಿಶ್ವೇ ಚರ್ಷಣಯೋ ಯಸ್ಯ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ಅರ್ವದ್ಭಿಃ । ಋ ಗತೌ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ಭಿಸ್ಯರ್ವಣಸ್ತ್ರಸಾವನಞಃ । ಪಾ. ೬-೪-೧೨೭ । ಇತಿ ನಕಾರಸ್ಯ ತೃ ಇತ್ಯಯಮಾದೇಶಃ । ತರುತಾ । ತೄ ಪ್ಲವನತರಣಯೋಃ । ಅಸ್ಮಾದ್ಗ್ರಸಿತಸ್ಕಭಿತೇತ್ಯಾದೌ । ಪಾ. ೭-೨-೩೪ । ತೃನಂತೋ ನಿಪಾತಿತಃ । ನಿಪಾತನಾದೇವೇಕಾರಸ್ಯೋತ್ವಂ ॥

॥ ಪ್ರತಿಪದಾರ್ಥ ॥

**ವಿಶ್ವಚರ್ಷಣಿಃ**—ಸಕಲ ಮಾನವರಿಂದಲೂ ಪೂಜಿತನಾದ । **ಸಃ**—ಆ ಅಗ್ನಿಯು । **ಅರ್ವದ್ಭಿಃ**—ಕುದುರೆಗಳಿಂದ (ಕುದುರೆಗಳ ಸಹಾಯದಿಂದ) । **ವಾಜಂ**—ಯುದ್ಧವನ್ನು । **ತರುತಾ**—ದಾಟಿಸುವವನಾಗಿ । **ಅಸ್ತು**—ಆಗಲಿ । **ವಿಪ್ರೇಭಿಃ**—ಮೇಧಾವಿಗಳಾದ ಋತ್ವಿಕ್ಕುಗಳಿಂದ (ಪೂಜಿತನಾದ ಅಗ್ನಿಯು) । **ಸನಿತಾ**—(ಅತ್ಯಧಿಕವಾದ ಫಲಗಳ) ದಾತನಾಗಿ । **ಅಸ್ತು**—ಆಗಲಿ.

॥ ಭಾವಾರ್ಥ ॥

ಸಕಲ ಮಾನವರಿಂದಲೂ ಪೂಜಿತನಾದ ಅಗ್ನಿಯು ಕುದುರೆಗಳ ಸಹಾಯದಿಂದ ನಮ್ಮನ್ನು ಯುದ್ಧದಲ್ಲಿ ಜಯಿಸುವಂತೆ ಮಾಡಲಿ. ಮತ್ತು ಮೇಧಾವಿಗಳಾದ ಋತ್ವಿಕ್ಕುಗಳಿಂದ ಪೂಜಿತನಾದ ಅಗ್ನಿಯು ನಮಗೆ ಅತ್ಯಧಿಕವಾದ ಫಲಗಳನ್ನು ಕೊಡುವವನಾಗಲಿ.

## English Translation.

May he who is worshipped by all men convey us with horses through the battle; may he, praised by the intelligent priests, be the bestower of riches.

॥ ವಿಶೇಷವಿಷಯಗಳು ॥

**ವಿಶ್ವಚರ್ಷಣಿಃ—ಸರ್ವೈರ್ಮನುಷ್ಯೈರುಪೇತಃ ।** ಸಮಸ್ತ ಮನುಷ್ಯರಿಂದ ಯುಕ್ತನಾದವನು. **ಮನುಷ್ಯಾಃ ನರಃ** ಮೊದಲಾದ ಇಪ್ಪತ್ತೈದು ಮನುಷ್ಯನಾಮಗಳ ಮಧ್ಯದಲ್ಲಿ ಚರ್ಷಣೀ ಶಬ್ದವು ಪಠಿತವಾಗಿರುವುದರಿಂದ ಚರ್ಷಣಿ ಎಂದರೆ ಮನುಷ್ಯ ಎಂದು ಅರ್ಥವು.

**ಅರ್ವದ್ಭಿಃ—ಅತ್ಯಃ ಹಯಃ ।** ಮೊದಲಾದ ಇಪ್ಪತ್ತಾರು ಅಶ್ವನಾಮಗಳ ಮಧ್ಯದಲ್ಲಿ ಅರ್ವಾ ಎಂಬ ಶಬ್ದವು ಪಠಿತವಾಗಿರುವುದರಿಂದ ಅರ್ವದ್ಭಿಃ ಎಂದರೆ ಅಶ್ವಗಳಿಂದ ಯುಕ್ತನಾದ ಎಂದರ್ಥವು. **ಅರ್ವಾಸಿ ಸಪ್ತಿರಸಿ ವಾಜ್ಯಸಿ** ಎಂದು ಶ್ರುತಿವಾಕ್ಯವಿರುವುದು.

**ತರುತಾ—ತಾರಯಿತಾ ।** ದಾಟಿಸುವವನು, ಪಾರುಮಾಡುವವನು; ಯುದ್ಧದಲ್ಲಿ ಸೋಲದೆ ಬದುಕಿ ಬರುವಂತೆಯೂ, ಗೆಲ್ಲುವಂತೆಯೂ ಪಾರುಮಾಡುವವನು.

**ವಿಪ್ರೇಭಿಃ—ಮೇಧಾವಿಭಿರ್ಋತ್ವಿಗ್ಭಿಃ ।** ಬುದ್ಧಿವಂತರಾದ ಋತ್ವಿಗ್ಜನಗಳಿಂದ (ಸ್ತುತಿಸಲ್ಪಟ್ಟು).

**ಸನಿತಾ—ಫಲಸ್ಯ ದಾತಾ ।** (ಫಲವನ್ನು) ಕೊಡುವವನು.

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವಚರ್ಷಣಿಃ**—ವಿಶ್ವೇ ಚರ್ಷಣಯೋ ಯಸ್ಯ ಸಃ ವಿಶ್ವಚರ್ಷಣಿಃ ಬಹುವ್ರೀಹಿಸಮಾಸ. **'ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ'** (ಪಾ. ಸೂ. ೬–೨–೧೦೬) ಎಂಬುದರಿಂದ ಸಂಜ್ಞಾ ತೋರುವುದರಿಂದ ವಿಶ್ವ ಎಂಬ ಪೂರ್ವಪದಕ್ಕೆ ಅಂತೋದಾತ್ತಸ್ವರ ಬರುತ್ತದೆ.

**ಅರ್ವದ್ಭಿಃ**—ಋ ಗತೌ ಧಾತು. **'ಅನ್ಯೇಭ್ಯೋಽಪಿ ದೃಶ್ಯಂತೇ'** (ಪಾ. ಸೂ. ೩–೨–೭೫) ಎಂಬುದರಿಂದ ವನಿಪ್ ಪ್ರತ್ಯಯ ಬರುತ್ತದೆ. ವನಿಪ್ ಪರದಲ್ಲಿರುವಾಗ ಧಾತುವಿಗೆ ಗುಣ ಬಂದರೆ ಅರ್ವನ್ ಎಂದು ನಾಂತವಾದ ಪದವಾಗುತ್ತದೆ. ಅದಕ್ಕೆ ತೃತೀಯಾ ಬಹುವಚನ ಭಿಸ್ ಪರವಲ್ಲಿರುವುದರಿಂದ **'ಅರ್ವಣಸ್ತ್ರಸಾವನಞಃ'** (ಪಾ. ಸೂ. ೬–೪–೧೨೭) ಎಂಬುದರಿಂದ ಸು ಭಿನ್ನ ವಿಭಕ್ತಿಪರದಲ್ಲಿರುವುದರಿಂದ ನಕಾರಕ್ಕೆ ತೃ ಎಂಬ ಆದೇಶಬರುತ್ತದೆ. ತೃ ಎಂಬಲ್ಲಿ ಋಕಾರ ಇತ್ತಾಗುತ್ತದೆ. ಅರ್ವತ್ ಎಂದು ತಾಂತವಾದ ಶಬ್ದವಾಗುವುದರಿಂದ ಅರ್ವದ್ಭಿಃ ಎಂದು ರೂಪವಾಗುತ್ತದೆ.

**ತರುತಾ**—ತೄ ಪ್ಲವನತರಣಯೋಃ ಧಾತು. ಭ್ವಾದಿ. **'ಗ್ರಸಿತಸ್ಕಭಿತ'** (ಪಾ ಸೂ. ೭–೨–೩೪) ಎಂಬುದರಿಂದ ತೃನ್ನಂತವಾಗಿ ನಿಪಾತಿತವಾಗಿದೆ. ಶಾಸ್ತ್ರಾಂತರದಿಂದ ಬಾರದಿರುವ ಕಾರ್ಯಗಳನ್ನು ಸೇರಿಸಿ ಉಚ್ಚರಿಸಿರುತ್ತಾರೆ. ಆದುದರಿಂದ ನಿಪಾತದಿಂದಲೇ ಇಟ್ಟಿನ ಇಕಾರಕ್ಕೆ ಉಕಾರಾದೇಶ ಬರುತ್ತದೆ. ತರುತೃ ಶಬ್ದದ ಪ್ರಥಮಾ ಏಕವಚನದಲ್ಲಿ ಅನಙಾದೇಶ ದೀರ್ಘ ನಲೋಪಗಳು ಬಂದರೆ ತರುತಾ ಎಂದು ರೂಪವಾಗುತ್ತದೆ.

**ವಿಪ್ರೇಭಿಃ**—ವಿಪ್ರ ಶಬ್ದದಮೇಲೆ ತೃತೀಯಾ ಬಹುವಚನ ಭಿಸ್ ಪರದಲ್ಲಿರುವಾಗ '**ಅತೋಭಿಸ ಐಸ್**. (ಪಾ ಸೂ. ೭-೧-೯) ಎಂಬುದರಿಂದ ಐಸಾದೇಶ ಪ್ರಾಪ್ತವಾದರೆ '**ಬಹುಲಂ ಛಂದಸಿ**' (ಪಾ. ಸೂ ೭-೧-೧೦) ಎಂಬುದರಿಂದ ಛಂದಸ್ಸಿನಲ್ಲಿ ವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ '**ಬಹುವಚನೇಝಲ್ಯೇತ್**' (ಪಾ. ಸೂ ೭-೩-೧೦೩) ಎಂಬುದರಿಂದ ಅಂಗಕ್ಕೆ ಏತ್ವ ಬಂದರೆ ವಿಪ್ರೇಭಿಃ ಎಂದು ರೂಪವಾಗುತ್ತದೆ. ‖ ೯ ‖

---

‖ ಸಂಹಿತಾಪಾಠಃ ‖

ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ ।
ಸ್ತೋಮಂ ರುದ್ರಾಯ ದೃಶೀಕಂ ‖ ೧೦ ‖

‖ ಪದಪಾಠಃ ‖

ಜರಾಽಬೋಧ । ತತ್ । ವಿವಿಡ್ಢಿ । ವಿಶೇಽವಿಶೇ । ಯಜ್ಞಿಯಾಯ ।
ಸ್ತೋಮಂ । ರುದ್ರಾಯ । ದೃಶೀಕಂ ‖ ೧೦ ‖

‖ ಸಾಯಣಭಾಷ್ಯಂ ‖

ಅಪ್ತೋರ್ಯಾಮೇ ಹೋತುರತಿರಿಕ್ತೋಕ್ಥೇ ಜರಾಬೋಧ ತದ್ವಿವಿಡ್ಢೀತಿ ಸ್ತೋತ್ರಿಯಸ್ತೃಚಃ । ಯಸ್ಯ ಪಶವೋ ನೋಪಧರೇರನ್ನಿತಿ ಖಂಡೇ ಸೂತ್ರಿತಂ । ಅತಿರಿಕ್ತೋಕ್ಥಾನಿ ಜರಾಬೋಧ ತದ್ವಿವಿಡ್ಢಿ । ಆ ೯-೧೧ । ಇತಿ ‖

ಹೇ ಜರಾಬೋಧ ಜರಯಾ ಸ್ತುತ್ಯಾ ಬೋಧಮಾನಾಗ್ನೇ ವಿಶೇವಿಶೇ ತತ್ತದ್ಯಜಮಾನರೂಪಪ್ರಜಾನುಗ್ರಹಾರ್ಥಂ ಯಜ್ಞಿಯಾಯ ಯಜ್ಞಸಂಬಂಧ್ಯನುಷ್ಠಾನಸಿದ್ಧ್ಯರ್ಥಂ ತದೇವ ಯಜನಂ ವಿವಿಡ್ಢಿ । ಪ್ರವಿಶ । ಯಜಮಾನೋಽಪಿ ರುದ್ರಾಯ ಕ್ರೂರಾಯಾಗ್ನಯೇ ತುಭ್ಯಂ ದೃಶೀಕಂ ದರ್ಶನೀಯಂ ಸಮೀಚೀನಂ ಸ್ತೋಮಂ ಸ್ತೋತ್ರಂ ಕರೋತೀತಿ ಶೇಷಃ । ಅತ್ರ ಯಾಸ್ಕ ಏವಂ ವ್ಯಾಖ್ಯಾತವಾನ್ । ಜರಾ ಸ್ತುತಿರ್ಜರತೇಃ ಸ್ತುತಿಕರ್ಮಣಸ್ತಾಂ ಬೋಧ ತಯಾ ಬೋಧಯಿತರಿತಿ ವಾ ತದ್ವಿವಿಡ್ಢಿ ತತ್ಕುರು ಮನುಷ್ಯಸ್ಯ ಮನುಷ್ಯಸ್ಯ ಯಜನಾಯ ಸ್ತೋಮಂ ರುದ್ರಾಯ ದರ್ಶನೀಯಂ । ನಿ. ೧೦-೮ । ಇತಿ ‖ ಜರಾಬೋಧ । ಜ್ಯಷ್ ವಯೋಹಾನೌ । ಅತ್ರ ತು ಸ್ತುತ್ಯರ್ಥಃ । ಷಿದ್ಭಿದಾದಿಭ್ಯೋಽಙ್ । ಪಾ. ೩-೩-೧೦೪ ।

**ಇತ್ಯೈಜ್‌ಪ್ರತ್ಯಯಃ । ತತಷ್ಟಾಪ್ । ಜರಯಾ ಸ್ತುತ್ಯಾ ಬೋಧೋ ಯಸ್ಯಾಸೌ ಜರಾಬೋಧಃ । ಯದ್ವಾ । ಜರಯಾ ಬೋಧ್ಯತ ಇತಿ ಜರಾಬೋಧಃ । ಕರ್ಮಣಿ ಘಞ್ । ಆಮಂತ್ರಿತಾದ್ಯುದಾತ್ತತ್ವಂ । ವಿವಿಡ್ಢಿ । ವಿಶ ಪ್ರವೇಶನೇ । ಲೋಟೋ ಹಿ । ಬಹುಲಂ ಛಂದಸೀತಿ ಶಪಃ ಶ್ಲುಃ । ಅಭ್ಯಾಸಹಲಾದಿಶೇಷೌ । ಹುಝಲ್ಭ್ಯೋ ಹೇರ್ಧಿರಿತಿ ಹೇರ್ಧಿರಾದೇಶಃ । ಷತ್ವಷ್ಟುತ್ವೇ । ಯದ್ವಾ । ವಿಷ್ಲೃ ವ್ಯಾಪ್ತಾವಿತ್ಯಸ್ಮಾಲ್ಲೋಣ್ಮಧ್ಯಮೈಕವಚನೇಽಭ್ಯಾಸಸ್ಯ ಗುಣಾಭಾವಃ । ವಿಶೇ ವಿಶೇ । ಸಾವೇಕಾಚ ಇತಿ ಚತುರ್ಥ್ಯಾ ಉದಾತ್ತತ್ವಂ । ಅನುದಾತ್ತಂ ಚೇತ್ಯಾಮ್ರೇಡಿತಾನುದಾತ್ತತ್ವಂ । ಯಜ್ಞಿಯಾಯ । ಯಜ್ಞರ್ತ್ವಿಗ್ಭ್ಯಾಂ ಘಖಞೌ । ಪಾ. ೫-೧-೭೧ । ಇತಿ ಘಃ । ದೃಶೀಕಂ । ಅನಿದೃಶಿಭ್ಯಾಂ ಚೇತಿ ಕೀಕನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ ॥ ೨೭ ॥**

॥ ಪ್ರತಿಪದಾರ್ಥ ॥

**ಜರಾಬೋಧ**—ಸ್ತುತಿಯಿಂದ ತಿಳಿಯಲ್ಪಡತಕ್ಕ ಎಲೈ ಅಗ್ನಿಯೇ । **ವಿಶೇವಿಶೇ**—ಯಜ್ಞಕರ್ತನಾದ ಆಯಾ (ಪ್ರತಿಯೊಬ್ಬ) ಯಜಮಾನನ । **ಯಜ್ಞಿಯಾಯ**—ಯಜ್ಞಕರ್ಮದ ಸಿದ್ಧಿಗಾಗಿ । **ತತ್**—ಆ ದೇವಯಜ್ಞ ಪ್ರದೇಶವನ್ನು । **ವಿವಿಡ್ಢಿ**—ಪ್ರವೇಶಿಸು । (ಆ ಯಜಮಾನನೂ ಕೂಡ) **ರುದ್ರಾಯ**—ಭಯಂಕರವಾದ ರೂಪವುಳ್ಳ ನಿನಗೆ । **ದೃಶೀಕಂ**—(ಸಂತೋಷಕರವಾದ) ರಮ್ಯವಾದ । **ಸ್ತೋಮಂ**—ಸ್ತೋತ್ರವನ್ನು (ಅರ್ಪಿಸುತ್ತಾನೆ).

॥ ಭಾವಾರ್ಥ ॥

ಸ್ತುತಿವೇದ್ಯನಾದ ಎಲೈ ಅಗ್ನಿಯೇ, ಯಜ್ಞಕರ್ತನಾದ ಪ್ರತಿಯೊಬ್ಬ ಮಾನವನ ಯಜ್ಞಸಿದ್ಧಿಗಾಗಿಯೂ ನೀನು ದೇವಯಜ್ಞ ಪ್ರದೇಶವನ್ನು ಪ್ರವೇಶಿಸು. ಆ ಯಜಮಾನನೂ ಸಹ ಭಯಂಕರವಾದ ರೂಪವುಳ್ಳ ನಿನಗೆ ಸಂತೋಷದಾಯಕವಾದ ಸ್ತೋತ್ರವನ್ನು ಅರ್ಪಿಸುತ್ತಾನೆ.

## English Translation.

(O Agni) you who are awakened by praise enter into the oblation for the completion of the sacrifice that benefits mankind ; the worshipper offers beautiful (or agreeable) prayers to the terrible Agni.

॥ ವಿಶೇಷವಿಷಯಗಳು ॥

ಅಪ್ತೋರ್ಯಾಮವೆಂಬ ಸೋಮಯಾಗದಲ್ಲಿ ಹೋತೃವು ಅತಿರಿಕ್ತೋಕ್ಥವೆಂಬ ಶಸ್ತ್ರಮಂತ್ರಪಠನಕಾಲದಲ್ಲಿ **ಜರಾಬೋಧ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಯಸ್ಯ ಪಶವೋ ನೋಪಧೇರನ್** ಎಂಬ ಖಂಡದಲ್ಲಿ **ಅತಿರಿಕ್ತೋಕ್ಥಾನಿ ಜರಾಬೋಧ ತದ್ವಿವಿಡ್ಢಿ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೯-೧೧).

**ಜರಾಬೋಧ—ಜರಯಾ ಸ್ತುತ್ಯಾ ಬೋಧಮಾನ ।** ಸ್ತೋತ್ರದಿಂದ ಎಚ್ಚರಗೊಳಿಸಲ್ಪಡುವವನು. ಯಜ್ಞಭೂಮಿಯಲ್ಲಿ ಯಜ್ಞನಿರ್ವಹಣೆಗಾಗಿ ಅಗ್ನಿಯನ್ನು ಪ್ರಾತಃಕಾಲದಲ್ಲಿ ಎಬ್ಬಿಸುವುದಕ್ಕಾಗಿ ಸ್ತೋತ್ರವನ್ನು

ಪಠಿಸುವರು. ಆ ಕಾಲದಲ್ಲಿ ಜರಾಬೋಧ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಅಗ್ನಿಪ್ರಬೋಧನಮಾಡುವುದಕ್ಕಾಗಿ ಪಠಿಸಬೇಕು.

**ವಿವಿಡ್ಢಿ—ಪ್ರವಿಶ ।** ಪ್ರವೇಶಮಾಡು.

**ವಿಶೇವಿಶೇ**— ಪ್ರತಿ ಪ್ರಜೆಗಾಗಿ ಎಂದರೆ ಪ್ರಜಾರೂಪದಿಂದಿರುವ ಅಥವಾ ಪ್ರಜೆಗಳಾದ ಪ್ರತಿ ಯಜಮಾನನಿಗಾಗಿಯೂ.

**ಯಜ್ಞಿಯಾಯ**— ಯಜ್ಞಾನುಷ್ಠಾನಸಿದ್ಧಿಗಾಗಿ, ಯಜ್ಞವು ಸಾಂಗವಾಗಿ ನೆರವೇರುವುದಕ್ಕಾಗಿ.

**ರುದ್ರಾಯ—ಕ್ರೂರಯಾಗ್ನಯೇ ।** ಕ್ರೂರಸ್ವಭಾವವುಳ್ಳ ಅಗ್ನಿಗೆ, ಅಗ್ನಿಯು ಎಲ್ಲವನ್ನೂ ದಹಿಸುವ ಸ್ವಭಾವವುಳ್ಳವನಾದುದರಿಂದ ರುದ್ರಾಯ ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ರೇಭಃ ಜರಿತಾ ಎಂದು ಮೊದಲಾದ ಹದಿಮೂರು ಸ್ತೋತೃನಾಮಗಳ ಮಧ್ಯದಲ್ಲಿ ರುದ್ರಶಬ್ದವು ಪಠಿತವಾಗಿರುವುದರಿಂದ (ನಿ. ೩-೧೯) ರುದ್ರಾಯ ಎಂದರೆ ಸ್ತೋತ್ರಮಾಡುವವನಾಗಿ ಎಂಬರ್ಥವನ್ನು ಹೇಳಬಹುದು. ಇಲ್ಲಿ ಸ್ತೋತ್ರಪ್ರಿಯಾನ ಅಥವಾ ಸ್ತೋತ್ರಗಳಿಂದ ಸ್ತುತಿಸಲ್ಪಡುವ ಅಗ್ನಿಗಾಗಿ ಎಂಬರ್ಥವನ್ನೂ ಹೇಳಬಹುದು

**ದೃಶೀಕಂ—ದರ್ಶನೀಯಂ, ಸಮೀಚೀನಂ ।** ಸುಂದರವಾದ, ಉತ್ತಮವಾದ, ಸ್ತೋತ್ರವನ್ನು **ಯಜಮಾನಃ ಕರೋತಿ**— ಯಜಮಾನನು ಮಾಡುವನು ಎಂಬ ಶಬ್ದಗಳನ್ನೂ ಅಧ್ಯಾಹಾರಮಾಡಿಕೊಳ್ಳಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಜರಾಬೋಧ**— ಜ್ಯಾಷ್ ವಯೋಹಾನೌ ಧಾತು. ಕ್ರ್ಯಾದಿ ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **' ಷಿದ್ಭಿದಾದಿಭ್ಯೋಙ್ '** (ಪಾ. ಸೂ. ೩-೩-೧೦೪) ಷಿತ್ತಾದ ಧಾತುಗಳಿಗೂ ಭಿದಾದಿಗಳಿಗೂ ಅಙ್ ಪ್ರತ್ಯಯ ಬರುತ್ತದೆ ಎಂಬುದರಿಂದ ಷಿತ್ತಾದುದರಿಂದ ಅಙ್ ಪ್ರತ್ಯಯ ಬರುತ್ತದೆ. **' ಋದೃಶೋಙಿ ಗುಣಃ '** (ಪಾ. ಸೂ. ೭-೪-೧೬) ಎಂಬುದರಿಂದ ಅಙ್ ಪ್ರತ್ಯಯಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. ರಪರವಾಗಿ ಬಂದರೆ ಜರ ಶಬ್ದವಾಗುತ್ತದೆ. ಸ್ತ್ರೀಲಿಂಗದಲ್ಲಿ **' ಅಜಾದ್ಯತಷ್ಟಾಪ್ '** (ಪಾ. ಸೂ. ೪-೧-೪) ಎಂಬುದರಿಂದ ಅದಂತವಾದುದರಿಂದ ಟಾಪ್ ಪ್ರತ್ಯಯ ಬರುತ್ತದೆ. ಜರಾ ಎಂದು ರೂಪವಾಗುತ್ತದೆ. ಜರಯಾ ಬೋಧೋ ಯಸ್ಯ ಅಸೌ ಜರಾಬೋಧಃ (ಸ್ತುತಿಯಿಂದ ಬೋಧನವುಳ್ಳವನು ಎಂದರ್ಥ) ಅಥವಾ ಜರಯಾ ಬೋಧ್ಯತೇ ಇತಿ ಜರಾಬೋಧಃ ಬುಧ ಅವಗಮನೇ ಧಾತು. ಇದಕ್ಕೆ ಕರ್ಮಾರ್ಥದಲ್ಲಿ ಘಙ್ ಪ್ರತ್ಯಯ ಬರುತ್ತದೆ. ಲಘೂಪಧಗುಣಬಂದರೆ ಬೋಧ ಎಂದು ರೂಪವಾಗುತ್ತದೆ. ಸಂಬುದ್ಧಿಯಲ್ಲಿ ಸುಲೋಪವಾಗುವುದರಿಂದ ಜರಾಬೋಧ ಎಂದು ರೂಪವಾಗುತ್ತದೆ. ಪಾದದ ಆದಿಯಲ್ಲಿರುವುದರಿಂದ ಆಷ್ಟಮಿಕ ನಿಘಾತಸ್ವರ ಬರುವುದಿಲ್ಲ. **' ಆಮಂತ್ರಿತಸ್ಯ '** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿವಿಡ್ಢಿ**— ವಿಶ ಪ್ರವೇಶನೇ ಧಾತು. ಲೋಡಿನ ಸಿಪ್ಪಿಗೆ ಹಿ ಆದೇಶ ಬರುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಬದಲಾಗಿ ಶ್ಲು ವಿಕರಣ ಬರುತ್ತದೆ. ಶ್ಲು ಪರದಲ್ಲಿರುವಾಗ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹಲಾದಿಶೇಷ ಬರುತ್ತದೆ. ವಿವಿಶ್+ಹಿ ಎಂದಿರುವಾಗ **' ಹುಝಲ್ಭ್ಯೋ ಹೇರ್ಧಿಃ '** (ಪಾ. ಸೂ. ೬-೪-೧೦೧)

ಎಂಬುದರಿಂದ ಹಿಗೆ ಧಿ ಆದೇಶ ಬರುತ್ತದೆ. **'ವ್ರಶ್ಚಭ್ರಸ್ಜ'** (ಪಾ. ಸೂ. ೮-೨-೩೬) ಎಂಬುದರಿಂದ ಝಲ್ ಪರದಲ್ಲಿ ರುವುದರಿಂದ ಶಕಾರಕ್ಕೆ ಷಕಾರ ಬರುತ್ತದೆ. ಷಕಾರದ ಪರದಲ್ಲಿರುವ ಧಕಾರಕ್ಕೆ ಷ್ಟುತ್ವ ಸಂಧಿಯು ಬಂದರೆ ಢಕಾರ ಬರುತ್ತದೆ. ವಿವಿಡ್ಢಿ ಎಂದು ರೂಪವಾಗುತ್ತದೆ. ಅಥವಾ ವಿಷ್‌ಲೃ ವ್ಯಾಪ್ತೌ ಧಾತು. ಜುಹೋತ್ಯಾದಿ. ಹಿ ಪರದಲ್ಲಿರು ವಾಗ **'ಜುಹೋತ್ಯಾದಿಭ್ಯಃ ಶ್ಲುಃ'** (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು ವಿಕರಣ ಬರುತ್ತದೆ. ಧಾತುವಿಗೆ ದ್ವಿತ್ವಾದಿಗಳು ಬಂದರೆ ವಿವಿಡ್ಢಿ ಎಂದು ರೂಪವಾಗುತ್ತದೆ. ಇಲ್ಲಿಯೂ **'ನಿಜಾಂ ತ್ರಯಾಣಾಂ ಗುಣಃ ಶ್ಲೌ'** (ಪಾ. ಸೂ. ೭-೪-೭೫) ಎಂಬುದರಿಂದ ಮೂರರಲ್ಲಿ ಈ ಧಾತುವೂ ಸೇರಿರುವುದರಿಂದ ಗುಣವು ಪ್ರಾಪ್ತವಾದರೂ **'ವ್ಯತ್ಯಯೋ ಬಹುಲಂ'** (ಪಾ. ಸೂ ೩-೧-೮೫) ಎಂಬುದರಿಂದ ಗುಣಾಭಾವವನ್ನು ಹೇಳಬೇಕು.

**ವಿಶೇವಿಶೇ**—ವಿಟ್ ಶಬ್ದದ ಚತುರ್ಥೀ ಏಕವಚನರೂಪ **'ಸಾವೇಕಾಚಸ್ತೃತೀಯಾದಿಃ'** (ಪಾ. ಸೂ. ೬-೧-೧೬೮) ಎಂಬುದರಿಂದ ಚತುರ್ಥೀ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಂತೋದಾತ್ತವಾದ ಪದವಾಗುತ್ತದೆ. **'ನಿತ್ಯವೀಪ್ಸಯೋಃ'** (ಪಾ. ಸೂ. ೮-೧-೪) ಎಂಬುದರಿಂದ ವೀಪ್ಸಾ ತೋರುವುದರಿಂದ ದ್ವಿತ್ವ ಬರುತ್ತದೆ. **'ಅನುದಾತ್ತಂ ಚ'** (ಪಾ. ಸೂ. ೮-೧-೩) ಎಂಬುದರಿಂದ ದ್ವಿರುಕ್ತವಾದಾಗ ಪರರೂಪವು ಅನುದಾತ್ತಸ್ವರವನ್ನು ಹೊಂದುತ್ತದೆ ಎಂಬುದರಿಂದ ಪರರೂಪವು ಅನುದಾತ್ತವಾಗುತ್ತದೆ.

**ಯಜ್ಞಿಯಾಯ—ಯಜ್ಞರ್ತ್ವಿಗ್‌ಭ್ಯಾಂ ಘಖಞೌ'** (ಪಾ. ಸೂ. ೫-೧-೭೧) ಎಂಬುದರಿಂದ ಅರ್ಹತಿ ಎಂಬರ್ಥದಲ್ಲಿ ಯಜ್ಞ ಶಬ್ದದ ಮೇಲೆ ಘ ಪ್ರತ್ಯಯ ಬರುತ್ತದೆ. **'ಆಯನೇಯೀ ನಿಯಃ'** (ಪಾ. ಸೂ. ೭-೧-೨) ಎಂಬುದರಿಂದ ಘ ಪ್ರತ್ಯಯಕ್ಕೆ ಇಯಾದೇಶ ಬರುತ್ತದೆ ಇಯ ಪರದಲ್ಲಿರುವಾಗ **'ಯಸ್ಯೇತಿ ಚ'** (ಪಾ. ಸೂ. ೬-೪-೧೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ ಬರುತ್ತದೆ. ಯಜ್ಞಿಯ ಎಂದಾಗುತ್ತದೆ. ಚತುರ್ಥೀ ಏಕ ವಚನದಲ್ಲಿ ಯಜ್ಞಿಯಾಯ ಎಂದು ರೂಪವಾಗುತ್ತದೆ.

**ದೃಶೀಕಮ್**—ದೃಶಿರ್ ಪ್ರೇಕ್ಷಣೇ ಧಾತು. ಭ್ವಾದಿ **'ಅನಿದೃಶಿಭ್ಯಾಂ ಚ'** (ದಶ. ಪಾ. ೩) ಎಂಬುದ ರಿಂದ ಕೀಕನ್ ಪ್ರತ್ಯಯ ಬರುತ್ತದೆ. ಕೀಕನಿನಲ್ಲಿ ಈಕ ಎಂದು ಉಳಿಯುತ್ತದೆ. ದ್ವಿತೀಯಾ ಏಕವಚನದಲ್ಲಿ ದೃಶೀಕಂ ಎಂದು ರೂಪವಾಗುತ್ತದೆ. ಕೀಕನಿನಲ್ಲಿ ನಕಾರ ಇತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ದೃಶೀಕಂ ಎಂಬುದು ಆದ್ಯುದಾತ್ತವಾಗುತ್ತದೆ. ॥ ೧೦ ॥

---

॥ ಸಂಹಿತಾಪಾಠಃ ॥

## ಸ ನೋ ಮಹಾಁ ಅನಿಮಾನೋ ಧೂಮಕೇತುಃ ಪುರುಶ್ಚನ್ದ್ರಃ ।
## ಧಿಯೇ ವಾಜಾಯ ಹಿನ್ವತು ॥ ೧೧ ॥

|| ಪದಪಾಠಃ ||

ಸಃ | ನಃ | ಮಹಾನ್ | ಅನಿಽಮಾನಃ | ಧೂಮಽಕೇತುಃ | ಪುರುಽಚನ್ದ್ರಃ | ಧಿಯೇ | ವಾಜಾಯ | ಹಿನ್ವತು || ೧೧ ||

|| ಸಾಯಣಭಾಷ್ಯಂ ||

ಸೋಽಗ್ನಿರ್ನೋಽಸ್ಮಾನ್ಧಿಯೇ ಕರ್ಮಣೇ ವಾಜಾಯಾನ್ನಾಯ ಚ ಹಿನ್ವತು | ಪ್ರೀಣಯತು | ಕೀದೃಶಃ | ಮಹಾನ್ ಗುಣಾಧಿಕಃ ಅನಿಮಾನೋ ನಿಮಾನವರ್ಜಿತಃ | ಅಪರಿಚ್ಛಿನ್ನ ಇತ್ಯರ್ಥಃ | ಧೂಮಕೇತುರ್ಧೂಮೇನ ಜ್ಞಾಪ್ಯಮಾನಃ ಪುರುಶ್ಚಂದ್ರೋ ಬಹುದೀಪ್ತಿಃ || ಮಹಾँ ಅನೀತ್ಯತ್ರ ಸಂಹಿತಾಯಾಂ ನಕಾರಸ್ಯ ರುತ್ವಾನುನಾಸಿಕಾವುಕ್ತೌ] | ಅನಿಮಾನಃ | ನ ವಿದ್ಯತೇ ನಿಮಾನೋಽಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ | ಧೂಮಕೇತುಃ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ | ಪುರುಶ್ಚಂದ್ರಃ | ಚದಿ ಆಹ್ಲಾದನೇ ದೀಪ್ತೌ ಚ | ಅಸ್ಮಾತ್ಸ್ಫಾಯಿತಂಚೀತ್ಯಾದಿನಾ ಕರ್ತರಿ ರಕ್ | ಪುರುಶ್ಚಾಸೌ ಚಂದ್ರಶ್ಚೇತಿ ಸಮಾಸಾಂತೋದಾತ್ತತ್ವಂ | ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರೇ | ಪಾ. ೬-೧-೧೫೧ | ಇತಿ ಸುಟ್ | ತಸ್ಯ ಶ್ಚುತ್ವೇನ ಶಕಾರಃ | ಧಿಯೇ | ಸಾವೇಕಾಚ ಇತಿ ಚತುರ್ಥ್ಯಾ ಉದಾತ್ತತ್ವಂ | ಹಿನ್ವತು | ಹಿವಿ ಪ್ರೀಣನಾರ್ಥಃ | ಇದಿತೋ ನುಮ್ ಧಾತೋರಿತಿ ನುಮ್ ||

|| ಪ್ರತಿಪದಾರ್ಥ ||

**ಮಹಾನ್**—ಗುಣಗಳಿಂದ ದೊಡ್ಡವನೂ, | **ಅನಿಮಾನಃ**—ಮಿತಿಯಿಲ್ಲದವನೂ | **ಧೂಮಕೇತುಃ**—ಹೊಗೆಯಿಂದ ತಿಳಿಯಲ್ಪಡುವವನೂ | **ಪುರಶ್ಚಂದ್ರಃ**—ಅತ್ಯಧಿಕವಾದ ಕಾಂತಿಯುಳ್ಳವನೂ ಆದ | **ಸಃ**—ಆ ಅಗ್ನಿಯು | **ನಃ**—ನಮ್ಮ (ನ್ನು) | **ಧಿಯೇ**—ಯಜ್ಞಕರ್ಮಕ್ಕಾಗಿಯೂ | **ವಾಜಾಯ**—ಅನ್ನಕ್ಕಾಗಿಯೂ | **ಹಿನ್ವತು**—ಸಂತೋಷಗೊಳ್ಳಲಿ. (ಸಂತೋಷಪಡಿಸಲಿ).

|| ಭಾವಾರ್ಥ ||

ಶ್ರೇಷ್ಠವಾದ ಗುಣಗಳಿಂದ ದೊಡ್ಡವನೂ, ಅಪರಿಚ್ಛಿನ್ನನೂ, ಹೊಗೆಯಿಂದ ತಿಳಿಯಲ್ಪಡುವವನೂ ಮತ್ತು ಅತ್ಯಧಿಕವಾದ ಕಾಂತಿಯುಳ್ಳವನೂ ಆದ ಅಗ್ನಿಯು ನಮ್ಮ ಯಜ್ಞದಿಂದ ತಾನು ಸಂತೋಷಪಟ್ಟು ನಮ್ಮನ್ನು ಅನ್ನದಿಂದ ಸಂತೋಷಗೊಳಿಸಲಿ.

## English Translation.

May the great, illimitable, smoke-bannered and brilliant; Agni be pleased with our rite and grant (inspire) us food.

|| ವಿಶೇಷವಿಷಯಗಳು ||

**ಅನಿಮಾನಃ—ನ ವಿದ್ಯತೇ ನಿಮಾನೋಽಸ್ಯೇತಿ । ನಿಮಾನವರ್ಜಿತಃ । ನಿಯತಪರಿಮಾಣವರ್ಜಿತಃ** ಪರಿಮಾಣ ಅಥವಾ ಎಲ್ಲೆ ಇಲ್ಲದಿರುವ; ಅನಂತ, illimitable.

**ಧೂಮಕೇತುಃ**—ಧೂಮ ಎಂದರೆ ಹೊಗೆಯೇ ಧ್ವಜವಾಗಿವುಳ್ಳವನು. ಅಗ್ನಿಯ ಧ್ವಜವು ಹೊಗೆಯೆಂದು ಪ್ರಸಿದ್ಧವು. having smoke as flag.

**ಪುರುಶ್ಚಂದ್ರಃ—ಚದಿ ಆಹ್ಲಾದನೇ ದೀಪ್ತೌ ಚ । ಪುರುಶ್ಚಂದ್ರೋ ಬಹುದೀಪ್ತಿಃ ।** ಬಹುಪ್ರಕಾಶ ಮಾನನಾದವನು.

**ಧಿಯೇ—ಕರ್ಮಣೇ । ಪ್ರಜ್ಞಾಯೈ ॥** ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಧೀಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧) ಕರ್ಮವೆಂದೂ, ಕೇತಃ ಕೇತುಃ ಮೊದಲಾದ ಹನ್ನೊಂದು ಪ್ರಜ್ಞಾನಾಮಗಳ ಮಧ್ಯದಲ್ಲಿ ಧೀಃ ಶಬ್ದವು ಪಠಿತವಾಗಿರುವುದರಿಂದ ಪ್ರಜ್ಞೆಯೆಂದೂ (ನಿ ೩-೧೩) ಅರ್ಥಗಳಿರುವವು. ಇಲ್ಲಿ ಧಿಯೇ ಎಂದರೆ ನಾವು ಮಾಡುವ ಯಜ್ಞಾನುಷ್ಠಾನಕರ್ಮಗಳು ಪೂರ್ಣವಾಗುವಂತೆಯೂ ನಮಗೆ ಪ್ರಜ್ಞೆಯೆಂದರೆ ತಿಳುವಳಿಕೆಯನ್ನು ಅಥವಾ ಜ್ಞಾನವನ್ನು ಕೊಟ್ಟು ವಾಜಾಯ—ಅನ್ನವನ್ನು ಅನುಗ್ರಹಿಸ ಬೇಕೆಂದು ಪ್ರಾರ್ಥಿಸಲಾಗಿದೆ.

**ಹಿನ್ವತು—ಪ್ರೀಣಯತು ।** ಸಂತುಷ್ಟನಾಗಿ ಕೊಡಲಿ. ಅಗ್ನಿಯು ಸಂತುಷ್ಟನಾಗಿ ಅಥವಾ ಪ್ರೀತನಾಗಿ ನಮಗೆ ಅನ್ನಾದ್ಯಾಹಾರಗಳನ್ನು ಕೊಡಲಿ ಎಂದು ಪ್ರಾರ್ಥನೆಯು.

|| ವ್ಯಾಕರಣಪ್ರಕ್ರಿಯಾ ||

**ಮಹಾನ್—'ದೀರ್ಘಾದಟಿ ಸಮಾನಪಾದೇ'** (ಪಾ. ಸೂ. ೮-೩-೯) ಎಂಬುದರಿಂದ ಅಟ್ ಪರದಲ್ಲಿರುವಾಗ ದೀರ್ಘದ ಪರದಲ್ಲಿರುವ ನಕಾರಕ್ಕೆ ಛಂದಸ್ಸಿನಲ್ಲಿ ರುತ್ವ ಬರುತ್ತದೆ. **'ಆತೋಟಿನಿತ್ಯಂ'**(ಪಾ. ಸೂ. ೮-೩-೩) ಎಂಬುದರಿಂದ ಅಟ್ ಪರದಲ್ಲಿರುವಾಗ ರುವಿನ ಪೂರ್ವದಲ್ಲಿರುವ ಆಕಾರಕ್ಕೆ ನಿತ್ಯವಾಗಿ ಅನುನಾಸಿಕವು ಬರುತ್ತದೆ.

**ಅನಿಮಾನಃ**-ನ ವಿದ್ಯತೇ ನಿಮಾನೋಽಸ್ಯ ಸಃ ಅನಿಮಾನಃ ಬಹುವ್ರೀಹಿಸಮಾಸ. **'ನಞ್‌ಸುಭ್ಯಾಂ'** (ಪಾ. ಸೂ. ೬-೨-೧೭೨) ಎಂಬುದರಿಂದ ನಞಿನ ಪರದಲ್ಲಿರುವುದರಿಂದ ಉತ್ತರಪದಾಂತೋದಾತ್ತ ಸ್ವರವು ಪೂರ್ವಪದ ಪ್ರಕೃತಿಸ್ವರವನ್ನು ಬಾಧಿಸಿ ಬರುತ್ತದೆ.

**ಧೂಮಕೇತುಃ**—ಧೂಮಃ ಕೇತುಃ ಯಸ್ಯ ಸಃ ಧೂಮಕೇತುಃ ಬಹುವ್ರೀಹಿಸಮಾಸ. **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಸಮಾಸದ ಅಂತೋದಾತ್ತಸ್ವರವನ್ನು ಬಾಧಿಸಿ ಬರುತ್ತದೆ. ಮಕಾರೋತ್ತರಾಕಾರವು ಉದಾತ್ತವಾಗುತ್ತದೆ.

**ಪುರುಶ್ಚಂದ್ರಃ**—ಚದಿ ಆಹ್ಲಾದನೇ ದೀಪ್ತೌ ಚ ಧಾತು. ಭ್ವಾದಿ. ಇದಕ್ಕೆ ಕರ್ತ್ರರ್ಥದಲ್ಲಿ **'ಸ್ಫಾಯಿತಞ್ಚಿ ವಂಚಿ'** (ಉ. ಸೂ. ೧-೧೭೦) ಎಂಬುದರಿಂದ ರಕ್ ಪ್ರತ್ಯಯ ಬರುತ್ತದೆ. **'ಇದಿತೋನುಮ್‌ಧಾತೋಃ'**

(ಪಾ. ಸೂ ೭-೧-೫೮) ಎಂಬುದರಿಂದ ಇದಿತ್ತಾದುದರಿಂದ ಧಾತುವಿಗೆ ನುಮಾಗಮ ಬರುತ್ತದೆ. ಚಂದ್ರ ಎಂದು ರೂಪವಾಗುತ್ತದೆ ಪುರುಶ್ಚಾಸೌ ಚಂದ್ರಶ್ಚ ಪುರುಶ್ಚಂದ್ರಃ ಕರ್ಮಧಾರಯಸಮಾಸ. **'ಸಮಾಸಸ್ಯ'** (ಪಾ. ಸೂ ೬-೧-೨೨೩) ಎಂಬುದರಿಂದ ಅಂತೋದಾತ್ತ ಸ್ವರವು ಬರುತ್ತದೆ. **'ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರೇ'** (ಪಾ. ಸೂ. ೬-೧-೧೫೧) ಎಂಬುದರಿಂದ ಹ್ರಸ್ವದ ಪರದಲ್ಲಿ ಚಂದ್ರಪದವು ಉತ್ತರಪದವಾದುದರಿಂದ ಚಂದ್ರಪದಕ್ಕೆ ಸುಡಾಗಮ ಬರುತ್ತದೆ. ಪುರುಸ್‌ಚಂದ್ರ ಎಂದಿರುವಾಗ ಚಕಾರಪರದಲ್ಲಿರುವುದರಿಂದ ಸಕಾರಕ್ಕೆ ಶ್ಚುತ್ವಸಂಧಿಯಿಂದ ಶಕಾರ ಬರುತ್ತದೆ. ಪುರುಶ್ಚಂದ್ರಃ ಎಂದು ರೂಪವಾಗುತ್ತದೆ.

**ಧಿಯೇ**—ಧೀಶ್ಶಬ್ದದ ಚತುರ್ಥೀ ಏಕವಚನ ರೂಪ. **'ಸಾವೇಕಾಚಸ್ತೃತೀಯಾದಿಃ'** (ಪಾ. ಸೂ. ೬-೧-೧೬೮) ಎಂಬುದರಿಂದ ಚತುರ್ಥಿಗೆ ಉದಾತ್ತಸ್ವರ ಬರುತ್ತದೆ.

**ಹಿನ್ವತು**—ಹಿವಿ ಪ್ರೀಣನೇ ಧಾತು ಭ್ವಾದಿ. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿ ಪ್ರತ್ಯಯ ಬರುತ್ತದೆ. **'ಏರುಃ'** (ಪಾ. ಸೂ. ೩-೪-೮೬) ಎಂಬುದರಿಂದ ಅದರ ಇಕಾರಕ್ಕೆ ಉಕಾರ ಬರುತ್ತದೆ. **'ಇದಿತೋನುಮ್ ಧಾತೋಃ'** (ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ ಬರುತ್ತದೆ **'ಕರ್ತರಿ ಶಪ್'** (ಪಾ. ಸೂ. ೩-೧೬೮) ಎಂಬುದರಿಂದ ಶಪ್ ವಿಕರಣಪ್ರತ್ಯಯ ಬರುತ್ತದೆ. ನುಮ್ ಮಿತ್ತಾದುದರಿಂದ ಇಕಾರದ ಪರದಲ್ಲಿ ಬರುವುದರಿಂದ ಹಿನ್ವತು ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿ ಬಂದಿರುವುದರಿಂದ ತಿಙಂತ ನಿಘಾತ ಸ್ವರ ಬರುತ್ತದೆ. ॥ ೧೧ ॥

॥ ಸಂಹಿತಾಪಾಠಃ ॥

ಸ ರೇವಾँಇವ ವಿಶ್ಪತಿರ್ದೈವ್ಯಃ ಕೇತುಃ ಶೃಣೋತು ನಃ ।
ಉಕ್ಥೈರಗ್ನಿರ್ಬೃಹದ್ಭಾನುಃ ॥ ೧೨ ॥

॥ ಪದಪಾಠಃ ॥

ಸಃ । ರೇವಾನ್ ಽ ಇವ । ವಿಶ್ಪತಿಃ । ದೈವ್ಯಃ । ಕೇತುಃ । ಶೃಣೋತು । ನಃ ।
ಉಕ್ಥೈಃ । ಅಗ್ನಿಃ । ಬೃಹತ್ ಽ ಭಾನುಃ ॥ ೧೨ ॥

॥ ಸಾಯಣ ಭಾಷ್ಯಂ ॥

**ಸೋಽಗ್ನಿರುಕ್ಥೈಃ ಸ್ತೋತ್ರೈರ್ಯುಕ್ತಾನ್ ನೋಽಸ್ಮಾನ್ ಶೃಣೋತು । ತತ್ರ ದೃಷ್ಟಾಂತಃ । ರೇವಾನಿವ । ಯಥಾ ಲೋಕೇ ಧನವಾನ್ ರಾಜಾ ವಂದಿನಾಂ ಸ್ತೋತ್ರಂ ಶೃಣೋತಿ ತದ್ವತ್ । ಕೀದೃಶಃ ।**

**ವಿಶ್ಪತಿಃ ಪ್ರಜಾಪಾಲಕೋ ದೈವ್ಯೋ ದೇವಾನಾಂ ಸಂಬಂಧೀ । ಅಗ್ನಿರ್ವೈ ದೇವಾನಾಂ ಹೋತಾ । ಐ. ಬ್ರಾ. ೩-೧೪ । ಇತಿ ಶ್ರುತ್ಯಂತರಾತ್ । ಕೇತುರ್ದೂತವಜ್ಜ್ಞಾಪಕಃ । ಅಗ್ನಿರ್ವೈ ದೇವಾನಾಂ ದೂತ ಆಸೀತ್ । ತೈ. ಸಂ. ೨-೫-೮-೫ । ಇತಿ ಶ್ರುತೇಃ । ಬೃಹದ್ಭಾನುಃ ಪ್ರೌಢರಶ್ಮಿಃ ॥ ಸ ರೇವಾನ್ । ಏತತ್ತ್ವದೋಃ । ಪಾ. ೬-೧-೧೩೨ । ಇತಿ ಸೋರ್ಲೋಪಃ । ರಯೇರ್ಮತೌ ಬಹುಲಮಿತಿ ಸಂಪ್ರಸಾರಣಂ । ಪರಪೂರ್ವತ್ವಂ । ಆದ್ಗುಣಃ । ಛಂದಸೀರ ಇತಿ ಮತುಪೋ ವತ್ವಂ । ಆರೀಶಬ್ದಾಚ್ಚ ಮತುಪ ಉದಾತ್ತತ್ವಂ । ವಿಶ್ಪತಿಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಬೃಹದ್ಭಾನುಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ವಿಶ್ಪತಿಃ**—ಪ್ರಜಾಪಾಲಕನೂ । **ದೈವ್ಯಃ**—ದೇವತೆಗಳ ಸಂಬಂಧಿಯೂ । **ಕೇತುಃ**—(ದೇವತೆಗಳ) ದೂತನೂ । **ಬೃಹದ್ಭಾನುಃ**—ಅಧಿಕವಾಗಿ ಪ್ರಕಾಶಕಗಳಾದ ಕಿರಣಗಳುಳ್ಳವನೂ ಆದ । **ಸಃ ಅಗ್ನಿಃ**—ಆ ಅಗ್ನಿಯು । **ರೇವಾನ್ ಇವ**—ಐಶ್ವರ್ಯವಂತನಾದ ದೊರೆಯು (ವಂದಿಗಳ ಸ್ತೋತ್ರಗಳನ್ನು ಕೇಳುವಂತೆ) । **ಉಕ್ಥೈಃ**—ಸ್ತೋತ್ರಗಳಿಂದ (ಕೂಡಿದ) । **ನಃ**—ನಮ್ಮನ್ನು (ನಮ್ಮ ಸ್ತೋತ್ರಗಳನ್ನು) । **ಶೃಣೋತು**—ಕೇಳಲಿ.

॥ ಭಾವಾರ್ಥ ॥

ಪ್ರಜಾಪಾಲಕನೂ, ದೇವತೆಗಳ ಸಂಬಂಧಿಯೂ, ದೇವತೆಗಳ ದೂತನೂ ಮತ್ತು ಪ್ರಕಾಶಮಾನಗಳಾದ ಕಿರಣಗಳುಳ್ಳವನೂ ಆದ ಅಗ್ನಿಯು ಧನವಂತನಾದ ದೊರೆಯು ಹೊಗಳುಭಟರ ಸ್ತೋತ್ರಗಳನ್ನು ಕೇಳುವಂತೆ ನಮ್ಮ ಸ್ತೋತ್ರಗಳನ್ನು ಕೇಳಲಿ.

## English Translation.

May Agni, of vast splendour, the lord of men, the invoker and messenger of gods hear us through our prayers as a wealthy king listens to his followers.

॥ ವಿಶೇಷವಿಷಯಗಳು ॥

**ರೇವಾನಿವ—ಧನವಾನ್ ರಾಜಾ ।** ಐಶ್ವರ್ಯವಂತನಾದ ರಾಜನು ಅಥವಾ ಐಶ್ವರ್ಯವಂತನಾದ ಪುರುಷನು. ಲೋಕದಲ್ಲಿ ಜನರು ಐಶ್ವರ್ಯವಂತನನ್ನು ಹೊಗಳುವುದೂ ಆದರಿಂದ ಅವರು ಸಂತೋಷಪಡುವುದೂ ಸಹಜವಾಗಿದೆ

**ವಿಶ್ಪತಿಃ—ಪ್ರಜಾಪಾಲಕಃ ।** ಪ್ರಜೆಗಳನ್ನು ಸಂರಕ್ಷಿಸುವ ಅಗ್ನಿಯು.

**ದೈವ್ಯಃ**—ದೇವಸಂಬಂಧಿಯಾದ ಎಂದರೆ ದೇವತೆಗಳ ಗುಂಪಿಗೆ ಸೇರಿದವನು. ಅಲ್ಲದೆ ಅಗ್ನಿಯು ದೇವತೆಗಳನ್ನು ಆಹ್ವಾನಮಾಡುವವನು ಆದುದರಿಂದ ದೂತನೆಂದೂ ಕರೆಯಲ್ಪಡುವನು. ಈ ವಿಷಯದಲ್ಲಿ **ಅಗ್ನಿರ್ವೈ**

**ದೇವಾನಾಂ ಹೋತಾ** (ಐ. ಬ್ರಾ. ೩-೧೪) ಮತ್ತು **ಅಗ್ನಿರ್ವೈ ದೇವಾನಾಂ ದೂತ ಆಸೀತ್** (ತೈ. ಸಂ. ೨-೫-೮-೫) ಎಂದು ಶ್ರುತಿವಾಕ್ಯಗಳಿರುವವು.

**ಕೇತುಃ—**ಕೇತು ಶಬ್ದಕ್ಕೆ ಪ್ರಜ್ಞೆಯೆಂದು ಅರ್ಥವಿರುವುದರಿಂದ ದೂತನಂತೆ ದೇವತೆಗಳನ್ನು ಯಜ್ಞಭೂಮಿಗೆ ಬರುವಂತೆ ಜ್ಞಾಪಿಸುವವನು ಎಂದು ಭಾಷ್ಯಕಾರರು ಪ್ರಕಾರಾಂತರವಾಗಿ ಅರ್ಥವಿವರಣೆಮಾಡಿರುವರು. ಈ ಶಬ್ದಕ್ಕೆ ಕರ್ಮವೆಂಬ ಅರ್ಥವೂ ಇರುವುದರಿಂದ ಕೇತು=ಎಂದರೆ ಯಜ್ಞಾದಿಕರ್ಮಾನುಷ್ಠಾನವನ್ನು ನೆರವೇರಿಸುವವನು ಎಂದು ಅರ್ಥವನ್ನು ಹೇಳಬಹುದು

**ಬೃಹದ್ಭಾನುಃ—ಪ್ರೌಢರಶ್ಮಿಃ ।** ತೀಕ್ಷ್ಣವಾದ ಎಂದರೆ ದಹಿಸುವ ಸ್ವಭಾವವುಳ್ಳ ರಶ್ಮಿಗಳುಳ್ಳವನು.

॥ ವ್ಯಾಕರಣಪ್ರಕ್ರಿಯಾ ॥

**ಸ ರೇವಾನ್—**ಸಸ್+ರೇವಾನ್ ಎಂದಿರುವಾಗ **'ಏತತ್ತದೋಃ'** (ಪಾ. ಸೂ. ೬-೧-೧೩೨) ಎಂಬುದರಿಂದ ಹಲ್‌ಪರದಲ್ಲಿರುವಾಗ ತಚ್ಛಬ್ದದ ಸುವಿಗೆ ಲೋಪಬರುತ್ತದೆ.

**ರೇವಾನ್—'ರಯೇರ್ಮತೌ ಬಹುಲಂ'** (ವಾ. ೩೪-೭೩) ಛಂದಸ್ಸಿನಲ್ಲಿ ರಯಿ ಶಬ್ದಕ್ಕೆ ಮತುಪ್ ಪರದಲ್ಲಿರುವಾಗ ಸಂಪ್ರಸಾರಣ ಬರುತ್ತದೆ. ರಯಿ ಎಂಬಲ್ಲಿ ಸಂಪ್ರಸಾರಣವನ್ನು ಹೊಂದಲು ಎರಡು ವರ್ಣವಿದ್ದರೂ **'ನ ಸಂಪ್ರಸಾರಣೇ ಸಂಪ್ರಸಾರಣಂ'** (ಪಾ. ಸೂ. ೬-೧-೩೭) ಎಂದು ನಿಷೇಧಮಾಡಿರುವುದರಿಂದ ಯಕಾರಕ್ಕೆ ಮಾತ್ರ ಸಂಪ್ರಸಾರಣ ಬರುತ್ತದೆ. ರ+ಇ+ಅ+ಮತ್ ಎಂದಿರುವಾಗ **'ಸಂಪ್ರಸಾರಣಾಚ್ಚ'** (ಪಾ ಸೂ ೬-೧-೧೦೮) ಎಂಬುದರಿಂದ ಪೂರ್ವರೂಪ ಬಂದರೆ ಅಕಾರ ಇಕಾರಗಳಿಗೆ ಗುಣ ಬಂದರೆ ರೇಮತ್ ಎಂದಾಗುತ್ತದೆ. **'ಛಂದಸೀರಃ'** (ಪಾ. ಸೂ. ೮-೨-೧೫) ಇಕಾರಾಂತ ರೇಫಾಂತದ ಪರದಲ್ಲಿರುವ ಮತುಪಿನ ಮಕಾರಕ್ಕೆ ವಕಾರ ಬರುತ್ತದೆ ಎಂಬುದರಿಂದ ಇಲ್ಲಿ ವಕಾರ ಬರುತ್ತದೆ. ಪ್ರಥಮಾ ಏಕವಚನದಲ್ಲಿ ದೀರ್ಘ ನಾಮ್ ಸುಲೋಪ ಸಂಯೋಗಾಂತಲೋಪಗಳು ಬಂದರೆ ರೇವಾನ್ ಎಂದು ರೂಪವಾಗುತ್ತದೆ **'ಆರೇಶಬ್ದಾಚ್ಚ ಮತುಪ ಉದಾತ್ತತ್ವಂ ವಕ್ತವ್ಯಂ'** (ಪಾ. ಸೂ. ೬-೧-೧೭೬-೧) ಎಂಬುದರಿಂದ ಮತುಪ್ ಪಿತ್ತಾದರೂ ರೇ ಶಬ್ದದ ಪರದಲ್ಲಿರುವುದರಿಂದ ಉದಾತ್ತಸ್ವರವು ಬರುತ್ತದೆ. ರೇವಾನ್+ಇವ ಎಂಬಲ್ಲಿ ಛಂದಸ್ಸಿನಲ್ಲಿ ನಕಾರಕ್ಕೆ ರುತ್ವವೂ ಪೂರ್ವಕ್ಕೆ ಅನುನಾಸಿಕವೂ ಹಿಂದಿನಂತೆಯೇ ಬರುತ್ತವೆ.

ವಿಶ್ಪತಿಃ—ವಿಶಾಂ ಪತಿಃ ವಿಶ್ಪತಿಃ **'ಸಮಾಸಸ್ಯ'** (೬-೧-೨೨೩) ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾದರೆ **'ಪರಾದಿಶ್ಛಂದಸಿ ಬಹುಲಂ'** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರವು ಬರುತ್ತದೆ.

ಬೃಹದ್ಭಾನುಃ—ಬೃಹತಃ ಭಾನವಃ ಯಸ್ಯ ಸಃ ಬೃಹದ್ಭಾನುಃ ಬಹುವ್ರೀಹಿಸಮಾಸ. **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ'** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಹಕಾರೋತ್ತರ ಅಕಾರವು ಉದಾತ್ತವಾಗುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವ-
ಭ್ಯೋ ನಮ ಆಶಿನೇಭ್ಯಃ ।
ಯಜಾಮ ದೇವಾನ್ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ
ವೃಕ್ಷಿ ದೇವಾಃ ॥ ೧೩ ॥

॥ ಪದಪಾಠಃ ॥

ನಮಃ । ಮಹತ್ಽಭ್ಯಃ । ನಮಃ । ಅರ್ಭಕೇಭ್ಯಃ । ನಮಃ । ಯುವಽಭ್ಯಃ ।
ನಮಃ । ಆಶಿನೇಭ್ಯಃ ।
ಯಜಾಮ । ದೇವಾನ್ । ಯದಿ । ಶಕ್ನವಾಮ । ಮಾ । ಜ್ಯಾಯಸಃ । ಶಂಸಂ ।
ಆ । ವೃಕ್ಷಿ । ದೇವಾಃ ॥ ೧೩ ॥

॥ ಸಾಯಣಭಾಷ್ಯಂ ॥

ದರ್ಶಪೂರ್ಣಮಾಸಯೋಃ ಸ್ರುಗಾದಾಪನಾತ್ಪೂರ್ವಭಾವಿನಿ ಜಪೇ ನಮೋ ಮಹದ್ಭ್ಯ ಇತ್ಯೇಷಾ । ಬ್ರಹ್ಮೌದನೇ ಪ್ರಾಶಿಷ್ಯಮಾಣ ಇತಿ ಖಂಡೇ ಸೂರ್ಯೋ ನೋ ದಿವಸ್ಪಾತು ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯಃ । ಆ. ೧–೪ । ಇತಿ ಸೂತ್ರಿತಂ ॥

ಅಗ್ನಿನಾ ಪ್ರೇರಿತಃ ಶುನಃಶೇಪೋ ವಿಶ್ವಾನ್ದೇವಾನನಯಾ ತುಷ್ಟಾವ । ತಥಾ ಚಾಮ್ನಾಯತೇ । ತಮಗ್ನಿರುವಾಚ । ವಿಶ್ವಾನ್ನು ದೇವಾನ್ ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸ ವಿಶ್ವಾನ್ದೇವಾಂಸ್ತುಷ್ಟಾವ ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯ ಇತ್ಯೇತಯರ್ಚಾ । ಐ- ಬ್ರಾ. ೭–೧೬ । ಇತಿ ॥ ಮಹಾಂತೋ ಗುಣೈರಧಿಕಾಃ । ಅರ್ಭಕೋ ಗುಣೈರ್ನ್ಯೂನಾಃ ಯುವಾನಸ್ತರುಣಾಃ । ಆಶಿನಾ ವಯಸಾ ವ್ಯಾಪ್ತಾ ವೃದ್ಧಾಃ । ಯಥೋಕ್ತಚತುರ್ವಿಧದೇಹಯುಕ್ತೇಭ್ಯೋ ದೇವೇಭ್ಯೋ ನಮೋಽಸ್ತು । ಯದಿ ಶಕ್ನವಾಮ ಕಥಂಚಿದ್ಧನಾದಿಸಂಪತ್ತ್ಯಾ ಶಕ್ತಾಶ್ಚೇತ್ತದಾನೀಂ ದೇವಾನ್ಯಜಾಮ । ಹೇ ದೇವಾ ಜ್ಯಾಯಸೋ

**ಜ್ಯೇಷ್ಠಸ್ಯ ದೇವತಾವಿಶೇಷಸ್ಯ ಆ ಸರ್ವತಃ ಪ್ರಸೃತಂ ಶಂಸಂ ಸ್ತೋತ್ರಂ ಮಾ ವೃಕ್ಷಿ। ಅಹಂ ವಿಚ್ಛಿನ್ನಂ ಮಾ ಕಾರ್ಷಂ॥ ಆಶಿನೇಭ್ಯಃ। ಅಶೂ ವ್ಯಾಪ್ತೌ। ಬಹುಲಮನ್ಯತ್ರಾಪಿ। ಉ. ೨-೪೯। ಇತ್ಯಾಣಾದಿಕ ಇನಚ್ಪ್ರತ್ಯಯಃ। ಚಿತ ಇತ್ಯಂತೋದಾತ್ತತ್ವಂ। ಯಜಾಮ। ಶಪಃ ಪಿತ್ತ್ವಾದನುದಾತ್ತತ್ವಂ। ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ। ಶಕ್ನವಾಮ। ಶಕ್ಲೃ ಶಕ್ತೌ। ಆಡುತ್ತಮಸ್ಯ ಪಿಚ್ಚೇತಿ ತಿಙಃ ಪಿದ್ವದ್ಭಾವಾದನುದಾತ್ತತ್ವೇ ಸತಿ ವಿಕರಣಸ್ವರಃ। ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ। ಜ್ಯಾಯಸಃ। ಪ್ರಶಸ್ಯಶಬ್ದಾದೀಯಸುನಿ ಜ್ಯ ಚ। ಪಾ. ೫-೩-೬೧। ಇತಿ ಜ್ಯಾದೇಶಃ। ಜ್ಯಾದಾದೀಯಸಃ। ಪಾ. ೬-೪-೧೬೦। ಇತೀಯಸುನ ಈಕಾರಸ್ಯಾತ್ವಂ। ನಿತ್ತ್ವಾದಾದ್ಯುದಾತ್ತತ್ವಂ। ಶಂಸಂ। ಹಲಶ್ಚೇತಿ ಘಞ್। ವೃಕ್ಷಿ। ಓ ವ್ರಶ್ಚೂ ಛೇದನೇ। ವ್ಯತ್ಯಯೇನಾತ್ಮನೇಪದೋತ್ತಮಪುರುಷೈಕವಚನಮಿಟ್। ಚ್ಲೇಃ ಸಿಚ್। ಸ್ವರಿತಸೂತೀತ್ಯಾದಿನಾ ಇಡಭಾವಃ ಸ್ಕೋಃ ಸಂಯೋಗಾದ್ಯೋರಿತ್ಯುಪಧಾಸಕಾರಲೋಪಃ। ವ್ರಶ್ಚಾದಿನಾ ಷತ್ವಂ। ಷಢೋಃ ಕಃ ಸೀತಿ ಕತ್ವಂ। ಆದೇಶಪ್ರತ್ಯಯೋರಿತಿ ಷತ್ವಂ। ನ ಮಾಙ್ಯೋಗ ಇತ್ಯಡಭಾವಃ ॥ ೨೪ ॥**

॥ ಪ್ರತಿಪದಾರ್ಥ ॥

**ಮಹದ್ಭ್ಯಃ**—ಶ್ರೇಷ್ಠವಾದ ಗುಣಗಳಿಂದ ಪೂಜ್ಯರಾದ ದೇವತೆಗಳಿಗೆ (ದೊಡ್ಡವರಿಗೆ)। **ನಮಃ**—ನಮಸ್ಕಾರವು। **ಅರ್ಭಕೇಭ್ಯಃ**—(ಅವರಿಗಿಂತಲೂ ಕೊಂಚ) ನ್ಯೂನವಾದ ಗುಣಗಳುಳ್ಳ ದೇವತೆಗಳಿಗೆ (ಬಾಲಕರಿಗೆ)। **ನಮಃ**—ನಮಸ್ಕಾರವು। **ಯುವಭ್ಯಃ**—ಯುವಕರಾದ ದೇವತೆಗಳಿಗೆ। **ನಮಃ**—ನಮಸ್ಕಾರವು। **ಆಶಿನೇಭ್ಯಃ**—ವೃದ್ಧರಾದ ದೇವತೆಗಳಿಗೆ। **ನಮಃ**—ನಮಸ್ಕಾರವು। **ಯದಿ ಶಕ್ನವಾಮ**—(ನಮಗೆ) ಎಷ್ಟು ಶಕ್ತಿಯಿದೆಯೋ ಅಷ್ಟು। **ದೇವಾನ್**—ದೇವತೆಗಳನ್ನು। **ಯಜಾಮ**—ಪೂಜಿಸುತ್ತೇವೆ। **ದೇವಾಃ**—ಎಲೈ ದೇವತೆಗಳೇ। **ಜ್ಯಾಯಸಃ**—ಜ್ಯೇಷ್ಠರಾದ ದೇವತೆಗಳ। **ಆ ಶಂಸಂ**—ಸರ್ವಾತ್ಮಕವಾಗಿ ಹೊರಟ ಸ್ತೋತ್ರವನ್ನು। **ಮಾ ವೃಕ್ಷಿ**—ನಾನು ನಿಲ್ಲಿಸುವುದಿಲ್ಲ.

॥ ಭಾವಾರ್ಥ ॥

ಶುನಃಶೇಪನು ಇದುವರೆಗೂ ಅಗ್ನಿಯನ್ನು ಸ್ತುತಿಸಲು ಅಗ್ನಿಯು ತೃಪ್ತನಾಗಿ ಶುನಶ್ಶೇಪನನ್ನು ಕುರಿತು ನೀನು ವಿಶ್ವೇದೇವತೆಗಳನ್ನು ಸ್ತೋತ್ರಮಾಡಿದ ಬಳಿಕ ನಾವೆಲ್ಲರೂ ನಿನ್ನ ಪಾಶಗಳನ್ನು ಬಿಡಿಸಿ ಬಂಧಮುಕ್ತನನ್ನಾಗಿ ಮಾಡುವೆವು ಎಂದು ಹೇಳಲು ಅದರಂತೆ ಶುನಃಶೇಪನು ವಿಶ್ವೇದೇವತೆಗಳನ್ನು ಎಂದರೆ ಸಮಸ್ತ ದೇವತೆಗಳನ್ನು ಪ್ರಾರ್ಥಿಸುತ್ತಾನೆ—

ದೇವತೆಗಳಲ್ಲಿ ದೊಡ್ಡವರಾದ ಎಂದರೆ ಅಧಿಕವಾಗಿ ಪೂಜ್ಯರಾದವರಿಗೆ ನಮಸ್ಕಾರಮಾಡುವೆನು; ಗುಣದಲ್ಲಿ ಸ್ವಲ್ಪ ಕಮ್ಮಿಯಾದ ಬಾಲ್ಯಾವಸ್ಥೆಯಲ್ಲಿರುವ ದೇವತೆಗಳನ್ನು ನಮಸ್ಕರಿಸುವೆನು; ಯುವಕರಾದ ದೇವತೆಗಳಿಗೂ ನಮಸ್ಕಾರವು; ವಯೋವೃದ್ಧರಾದ ಎಂದರೆ ಹಿರಿಯರಾದ ದೇವತೆಗಳನ್ನು ವಂದಿಸುವೆನು. ನಮ್ಮ ಶಕ್ತಿಯಿರುವಷ್ಟು ಎಂದರೆ ನಮ್ಮ ಕೈಲಾದ ಮಟ್ಟಿಗೆ ಶ್ರೇಷ್ಠರಾದ ಈ ದೇವತೆಗಳನ್ನು ಸ್ತೋತ್ರಮಾಡಿ ಆರಾಧಿಸುವೆನು. ಎಲೈ ದೇವತೆಗಳೇ ಈ ರೀತಿ ಸ್ತೋತ್ರಮಾಡುವುದನ್ನು ನಾನು ನಿಲ್ಲಿಸುವುದಿಲ್ಲ (ಮಾಡುತ್ತಲೇ ಇರುವೆನು).

## English Translation.

Adoration to the great gods; adoration to the small gods; adoration to the young and adoration to the old (gods); we worship all the gods as well as we are able; may I not omit the praise of all these great divinities.

॥ ವಿಶೇಷವಿಷಯಗಳು ॥

ಅಗ್ನಿಪ್ರಾರ್ಥನಾನಂತರದಲ್ಲಿ ಅಗ್ನಿಪ್ರೇರಿತನಾದ ಶುನಶ್ಶೇಪನು ವಿಶ್ವೇದೇವತೆಗಳನ್ನು (ಎಲ್ಲಾ ದೇವತೆಗಳನ್ನು ಸಮಷ್ಟಿಯಾಗಿ) ಪ್ರಾರ್ಥಿಸುವನು. ಈ ವಿಷಯದಲ್ಲಿ—

**ತಮಗ್ನಿರುವಾಚ ವಿಶ್ವಾನ್ನು ದೇವಾನ್ ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸ ವಿಶ್ವಾನ್ದೇವಾಂಸ್ತುಷ್ಟಾವ ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯ ಇತ್ಯೇತಯರ್ಚಾ ॥**

(ಐ. ಬ್ರಾ ೭-೧೬)

ಎಂದು ಐತರೇಯಬ್ರಾಹ್ಮಣ ವಾಕ್ಯವಿರುವುದು.

**ಮಹದ್ಭ್ಯಃ—ಮಹಾಂತೋ ಗುಣೈರಧಿಕಾಃ ತೇಭ್ಯಃ ।** ಗುಣಗಳಲ್ಲಿ ಅಥವಾ ಶ್ರೇಷ್ಠತೆಯಲ್ಲಿ ಅಧಿಕರಾದ ದೇವತೆಗಳು.

**ಅರ್ಭಕೇಭ್ಯಃ**—ಗುಣಗಳಲ್ಲಿ ಕಮ್ಮಿಯಾದವರು (ಬಾಲಕರು).

**ಯುವಭ್ಯಃ**—ತರುಣರು.

**ಆಶಿನೇಭ್ಯಃ—ಆಶಿನಾ ವಯಸಾ ಪ್ರಾಪ್ತಾ ವೃದ್ಧಾಃ ।** ವಯಸ್ಸಿನಲ್ಲಿ ವೃದ್ಧರಾದವರು, ಹಿರಿಯರು.

**ಜ್ಯಾಯಸಃ**— ದೊಡ್ಡವರು, ಶ್ರೇಷ್ಠರು, ಉತ್ತಮಗುಣೋಪೇತರು ಅಥವಾ ವಯಸ್ಸಿನಿಂದ ಹಿರಿಯರಾದವರು.

**ಮಾ ವೃಕ್ಷಿ— ಓವ್ರಶ್ಚೂ ಛೇದನೇ ।** ವಿಚ್ಛಿನ್ನವಾಗುವಂತೆ ಮಾಡುವುದಿಲ್ಲ ಎಂದರೆ ಸ್ತೋತ್ರಮಾಡುವುದನ್ನು ನಿಲ್ಲಿಸುವುದಿಲ್ಲ ಮಾಡುತ್ತಲೇ ಇರುವೆನೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಆಶಿನೇಭ್ಯಃ**—ಅಶೂ ವ್ಯಾಪ್ತೌ ಧಾತು. ಸ್ವಾದಿ. **'ಬಹುಲಮನ್ಯತ್ರಾಪಿ'** (ಉ. ಸೂ. ೨-೨೦೭) ಎಂಬುದರಿಂದ ಉಣಾದಿಸಿದ್ಧವಾದ ಇನಚ್ ಪ್ರತ್ಯಯ ಬರುತ್ತದೆ. ಚತುರ್ಥೀ ಬಹುವಚನದಲ್ಲಿ ಆಶಿನೇಭ್ಯಃ ಎಂದು ರೂಪವಾಗುತ್ತದೆ. **'ಚಿತಃ'** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ.

**ಯಜಾಮ**—ಯಜ ದೇವಪೂಜಾ ಸಂಗತಿಕರಣದಾನೇಷು. ಧಾತು. ಭ್ವಾದಿ. **ಲೋಡುತ್ತಮಪುರುಷ** ಬಹುವಚನದಲ್ಲಿ ಯಜಾಮ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ **'ತಾಸ್ಯನು-**

**ದಾತ್ತೇತ್ '** (ಪಾ. ಸೂ. ೬-೧-೧೮೬) ಎಂಬುದರಿಂದ ಅದುಪದೇಶದ ಪರದಲ್ಲಿರುವುದರಿಂದ ಲ ಸಾರ್ವಧಾತುಕವು ಅನುದಾತ್ತವಾಗುತ್ತದೆ ಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ.

**ಶಕ್ನವಾಮ**—ಶಕ್ಲೃ ಶಕ್ತೌ ಧಾತು. ಲೋಡುತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ ಬರುತ್ತದೆ. **'ನಿತ್ಯಂ ಙಿತಃ '** (ಪಾ. ಸೂ ೩-೪-೯೯) ಎಂಬುದರಿಂದ ಮಸ್ಸಿನ ಸಕಾರಕ್ಕೆ ಲೋಪ ಬರುತ್ತದೆ. **'ಆಡುತ್ತ-ಮಸ್ಯಪಿಚ್ಚ '** (ಪಾ. ಸೂ. ೩-೪-೯೨) ಎಂಬುದರಿಂದ ಅದಕ್ಕೆ ಆಡಾಗಮ ಬರುತ್ತದೆ. ಸ್ವಾದಿಯಲ್ಲಿ ಸೇರಿರುವುದರಿಂದ **'ಸ್ವಾದಿಭ್ಯಃ ಶ್ನುಃ '** ಎಂಬುದರಿಂದ ಶ್ನು ವಿಕರಣಪ್ರತ್ಯಯ ಬರುತ್ತದೆ. ಶಕ್ನು+ಆಮ, ಎಂದಿರುವಾಗ ಗುಣ ಅವಾದೇಶಗಳು ಬಂದರೆ ಶಕ್ನವಾಮ ಎಂದು ರೂಪವಾಗುತ್ತದೆ. ಇಲ್ಲಿ ಆಟಿಗೆ ಪಿತ್ವವಿಧಾನಮಾಡಿರುವುದರಿಂದ ತಿಙ್ ಅನುದಾತ್ತವಾಗುತ್ತದೆ. ವಿಕರಣ ಸ್ವರವು ಸತಿಶಿಷ್ಟವಾಗುವುದರಿಂದ ಶಕ್ನವಾಮ ಎಂಬಲ್ಲಿ ನಕಾರದ ಮೇಲಿರುವ ಅಕಾರವು ಉದಾತ್ತವಾಗುತ್ತದೆ. ಯದಿ ಎಂಬುದು ಪೂರ್ವದಲ್ಲಿರುವುದರಿಂದ **'ನಿಪಾತೈರ್ಯದ್ಯದಿಹಂತ-'** (ಪಾ. ಸೂ. ೮-೧-೩) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ಜ್ಯಾಯಸಃ**—ಅತಿಶಯೇನ ಪ್ರಶಸ್ಯಃ ಎಂಬರ್ಥದಲ್ಲಿ ಪ್ರಶಸ್ಯ ಶಬ್ದಕ್ಕೆ ಈಯಸುನ್ ಪ್ರತ್ಯಯ ಬರುತ್ತದೆ. ಈಯಸುನ್ ಪರದಲ್ಲಿರುವಾಗ **'ಜ್ಯ ಚ '** (ಪಾ. ಸೂ ೫-೩-೬೧) ಎಂಬುದರಿಂದ ಪ್ರಶಸ್ಯ ಶಬ್ದಕ್ಕೆ ಜ್ಯ ಎಂಬ ಆದೇಶ ಬರುತ್ತದೆ ಅನೇಕಾಲಾದುದರಿಂದ ಸರ್ವಾದೇಶವಾಗಿ ಬರುತ್ತದೆ ಜ್ಯ+ಈಯಸ್ ಎಂದಿರುವಾಗ **' ಜ್ಯಾದಾದೀಯಸಃ '** (ಪಾ. ಸೂ. ೬-೪-೧೬೦) ಎಂಬುದರಿಂದ ಈಯಸುವಿನ ಆದಿಯ ಈಕಾರಕ್ಕೆ ಆಕಾರಾದೇಶ ಬರುತ್ತದೆ. ಜ್ಯಾಯಸ್ ಶಬ್ದವಾಗುತ್ತದೆ. ಷಷ್ಠೀ ಏಕವಚನದಲ್ಲಿ ಜ್ಯಾಯಸಃ ಎಂದು ರೂಪವಾಗುತ್ತದೆ. ಈಯಸುವಿನಲ್ಲಿ ನಕಾರ ಇತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ '** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಶಂಸಮ್**—ಶಂಸು ಸ್ತುತೌ ಧಾತು. **' ಹಲಶ್ಚ'** (ಪಾ. ಸೂ. ೩-೩-೧೨೧) ಎಂಬುದರಿಂದ ಘಞ್ ಪ್ರತ್ಯಯ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ಶಂಸಂ ಎಂದು ರೂಪವಾಗುತ್ತದೆ.

**ವೃಕ್ಷಿ**—ಓ ವ್ರಶ್ಚೂ ಛೇದನೇ ಧಾತು. ತುದಾದಿ ಪರಸ್ಮೈಪದಿ **' ವ್ಯತ್ಯಯೋ ಬಹುಲಂ '** (ಪಾ. ಸೂ. ೩-೧-೮೫) ಎಂಬುದರಿಂದ ಲುಙ್ ಉತ್ತಮಪುರುಷ ಏಕವಚನದಲ್ಲಿ ಆತ್ಮನೇ ಪದದ ಇಟ್ ಪ್ರತ್ಯಯ ಬರುತ್ತದೆ. ವ್ರಶ್ಚ್+ಇ, ಎಂದಿರುವಾಗ **'ಚ್ಲಿ ಲುಙಿ '** (ಪಾ. ಸೂ. ೩-೧-೪೩) ಎಂಬುದರಿಂದ ಪ್ರಾಪ್ತವಾದ ಚ್ಲಿಗೆ **' ಚ್ಲೇಃ ಸಿಚ್ '** (ಪಾ. ಸೂ. ೩-೧-೪೪) ಎಂಬುದರಿಂದ ಸಿಚಾದೇಶ ಬರುತ್ತದೆ. **'ಸ್ವರತಿ ಸೂತಿ ಸೂಯತಿ-'** (ಪಾ. ಸೂ. ೬-೨-೪೪) ಎಂಬುದರಿಂದ ಧಾತುವು ಊದಿತ್ತಾದುದರಿಂದ ಆರ್ಧಧಾತುಕವಾದ ಸಿಚ್ಚಿಗೆ ಇಡಾಗಮವು ವಿಕಲ್ಪವಾಗಿ ಬರುವುದರಿಂದ ಇಲ್ಲಿ ಬರುವುದಿಲ್ಲ. ವ್ರಶ್ಚ್ ಎಂಬಲ್ಲಿ ಚಕಾರ ಸಂಬಂಧದಿಂದ ಶಕಾರವಾದುದು. ಆದುದರಿಂದ **'ಸ್ಕೋಃ ಸಂಯೋಗಾದ್ಯೋರಂತೇ ಚ '** (ಪಾ. ಸೂ. ೮-೨-೨೯) ಎಂಬುದರಿಂದ ಸಕಾರ ಪರದಲ್ಲಿರುವುದರಿಂದ ಸಂಯೋಗದ ಆದಿಭೂತವಾದ ಸಕಾರಕ್ಕೆ ಲೋಪ ಬರುತ್ತದೆ. **' ವ್ರಶ್ಚಭ್ರಸ್ಜ-'** (ಪಾ. ಸೂ. ೮-೨-೩೬) ಎಂಬುದರಿಂದ ಧಾತುವಿಗೆ ಷತ್ವವು ಅಂತಾದೇಶವಾಗಿ ಬರುತ್ತದೆ, ಗ್ರಹಿಜ್ಯಾ ಸೂತ್ರದಿಂದ ಸಂಪ್ರಸಾರಣ ಬರುತ್ತದೆ. ವೃಷ್+ಸ್+ಇ, ಎಂದಿರುವಾಗ **'ಷಢೋಃ ಕಃ ಸಿ '** (ಪಾ. ಸೂ. ೮-೨-೪೧) ಎಂಬುದರಿಂದ ಷಕಾರಕ್ಕೆ ಕಕಾರ ಬರುತ್ತದೆ. **ಆದೇಶ**

**ಪ್ರತ್ಯಯಯೋಃ'** (ಪಾ. ಸೂ. ೮-೩-೫೯) ಎಂಬುದರಿಂದ ಕಕಾರದ ಪರದಲ್ಲಿರುವುದರಿಂದ ಸಿಚ್ ಸಕಾರಕ್ಕೆ ಷತ್ವ ಬರುತ್ತದೆ. ಕಕಾರ ಷಕಾರ ಯೋಗದಿಂದ ಕ್ಷಕಾರವಾಗುತ್ತದೆ. ವೃಕ್ಷಿ ಎಂದು ರೂಪವಾಗುತ್ತದೆ. ಮಾಙ್ ಯೋಗ ವಿರುವುದರಿಂದ **'ನಮಾಙ್ ಯೋಗೇ'** (ಪಾ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ ತಿಙಂತ ನಿಘಾತಸ್ವರ ಬರುತ್ತದೆ.

ಇಪ್ಪತ್ತೇಳನೆಯ ಸೂಕ್ತವು ಮುಗಿದುದು.

---

# ಇಪ್ಪತ್ತೆಂಟನೆಯ ಸೂಕ್ತವು

**ಯತ್ರ ಗ್ರಾವೇತಿ ಪಂಚಮಂ ಸೂಕ್ತಂ ನವರ್ಚಂ । ಆದಿತಃ ಷಡನುಷ್ಟುಭಃ । ಆಯಜೀ ಇತ್ಯಾದ್ಯಾಸ್ತಿಸ್ರೋ ಗಾಯತ್ರ್ಯಃ । ಆದಿತಶ್ಚತಸೃಣಾಮಿಂದ್ರೋ ದೇವತಾ । ತತೋ ದ್ವೇ ಉಲೂಖಲ ದೇವತ್ಯೇ । ತದನಂತರಭಾವಿನ್ಯಾವುಲೂಖಲಮುಸಲೋಭಯದೇವತಾಕೇ । ಅಂತ್ಯಾಯಾ ಉಚ್ಛಿಷ್ಟ-ಮಿತ್ಯಸ್ಯಾ ಹರಿಶ್ಚಂದ್ರಾಧಿಷವಣಚರ್ಮಸೋಮಾನಾಮನ್ಯತಮೋ ದೇವತಾ । ತಥಾ ಚ ಬೃಹದ್ದೇವತಾ-ಯಾಮುಕ್ತಂ । ಚರ್ಮಾಧಿಷವಣೀಯಂ ವಾ ಸೋಮಂ ವಾಂತ್ಯಾ ಪ್ರಶಂಸತಿ । ಬೃ ೩-೪೧೧ । ಇತಿ । ತದುತ್ತಮನುಕ್ರಮಣ್ಯಾಂ । ಯತ್ರ ಗ್ರಾವಾ ನವ ಷಳನುಷ್ಟುಬಾದಿ ಯಚ್ಚಿದ್ಧ್ಯಾ ಉಲೂಖಲ್ಯಾ ಪರೇ ಮೌಸಲ್ಯಾ ಚ ಪ್ರಜಾಪತೇರ್ಹರಿಶ್ಚಂದ್ರಸ್ಯಾಂತ್ಯಾ ಚರ್ಮಪ್ರಶಂಸಾ ವೇತಿ ॥ ಆದ್ಯಾಶ್ಚತಸ್ರೋಽಂ-ಜಃಸವೇ ಹೋಮೇ ವಿನಿಯುಕ್ತಾಃ । ಪಂಚಮ್ಯಾದ್ಯಾಶ್ಚತಸ್ರೋಽಭಿಷವೇ । ಅಂತ್ಯಾ ದ್ರೋಣಕಲಶೇ ಸೋಮಾವನಯನೇ । ತಥಾ ಚ ಬ್ರಾಹ್ಮಣಂ । ಅಥ ಹೈತಂ ಶುನಃಶೇಪೋಽಂಜಃಸವಂ ದದರ್ಶ ತಮೇ-ತಾಭಿಶ್ಚತಸೃಭಿರಭಿಸುಷಾವ ಯಚ್ಚಿದ್ಧಿ ತ್ವಂ ಗೃಹೇ ಗೃಹ ಇತ್ಯಥೈನಂ ದ್ರೋಣಕಲಶಮಭ್ಯವನಿನಾಯೋ-ಚ್ಛಿಷ್ಟಂ ಚಮ್ವೋರ್ಭರೇತ್ಯೇತಯರ್ಚಾಥ ಹಾಸ್ಮಿನ್ನನ್ವಾರಬ್ಧೇ ಪೂರ್ವಾಭಿಶ್ಚತಸೃಭಿಃ ಸಸ್ವಾಹಾಕಾರಾ-ಭಿರ್ಜುಹವಾಂಚಕಾರ । ಐ. ಬ್ರಾ. ೭-೧೭ । ಇತಿ ॥**

ಅನುವಾದವು- **ಯತ್ರ ಗ್ರಾವಾ** ಎಂಬುದು ಆರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಮೊದಲಿನ ಆರು ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು; **ಆಯಜೀ** ಎಂದು ಮೊದಲಾಗುವ ಮೂರು ಋಕ್ಕುಗಳು ಗಾಯತ್ರೀ ಛಂದಸ್ಸಿನವು. ಮೊದಲನೇ ನಾಲ್ಕು ಋಕ್ಕುಗಳಿಗೆ ಇಂದ್ರನು

ದೇವತೆಯು; ಅಲ್ಲಿಂದ ಮುಂದಿನ ಎರಡು ಋಕ್ಕುಗಳಿಗೆ ಉಲೂಖಲವು ದೇವತೆಯು; ಅಲ್ಲಿಂದ ಮುಂದಿನ ಎರಡು ಋಕ್ಕುಗಳಿಗೆ ಉಲೂಖಲ ಮತ್ತು ಮುಸಲಗಳು ದೇವತೆಯು; ಕೊನೆಯ ಋಕ್ಕಿಗೆ ಹರಿಶ್ಚಂದ್ರ, ಅಧಿಷವಣಚರ್ಮ, ಅಥವಾ ಸೋಮ ಇವರು ದೇವತೆಗಳು. ಈ ವಿಷಯವು ಬೃಹದ್ದೇವತಾ ಎಂಬ ಶೌನಕೋಕ್ತ ಗ್ರಂಥದಲ್ಲಿ— **ಚರ್ಮಾಧಿಷವಣೀಯಂ ವಾ ಸೋಮಂ ವಾಂತ್ಯಾ ಪ್ರಶಂಸತಿ । ಬೃ. ೩–೪೧೧ ।** ಎಂದು ಹೇಳಿರುವುದು ಅನುಕ್ರಮಣಿಕೆಯಲ್ಲಿಯೂ ಕೂಡ— **ಯತ್ರ ಗ್ರಾವಾ ನವ ಷಳನುಷ್ಟುಬಾದಿ ಯಚ್ಚಿದ್ಧ್ವ್ಯೌಲೂಖಲ್ಯೌ ಪರೇ ಮೌಸಲ್ಯೌ ಚ ಪ್ರಜಾಪತೇರ್ಹರಿಶ್ಚಂದ್ರಸ್ಯಾಂತ್ಯಾ ಚರ್ಮಪ್ರಶಂಸಾ ವೇತಿ ।** ಎಂದು ಹೇಳಿರುವುದು. ಈ ಸೂಕ್ತದ ವಿನಿಯೋಗವು ಈ ರೀತಿ ಇರುವುದು—ಮೊದಲನೆಯ ನಾಲ್ಕು ಋಕ್ಕುಗಳಿಗೆ ಅಂಜಸ್ಸವವೆಂಬ ಹೋಮದಲ್ಲಿ ವಿನಿಯೋಗವು; ಇವರಿಂದ ಮುಂದಿನ ನಾಲ್ಕು ಋಕ್ಕುಗಳಿಗೆ ಅಭಿಷವಕರ್ಮದಲ್ಲಿ ವಿನಿಯೋಗವು; ಕೊನೆಯ ಋಕ್ಕಿಗೆ ದ್ರೋಣಕಲಶವೆಂಬ ಸೋಮರಸವನ್ನು ಶೇಖರಿಸುವ ಮರದ ಪಾತ್ರೆಯಲ್ಲಿ ಸೋಮರಸವನ್ನು ಸುರಿಯುವಾಗ ಪಠಿಸ ಬೇಕಾದ ಮಂತ್ರಗಳಿಗಾಗಿ ವಿನಿಯೋಗವು. ಈ ವಿಷಯದಲ್ಲಿ—

> **ಅಥ ಹೈತಂ ಶುನಃಶೇಪೋಂಜಸ್ಸವಂ ದದರ್ಶ ತಮೇತಾಭಿಶ್ಚತಸೃಭಿರಭಿಸುಷಾವ ಯಚ್ಚಿದ್ಧಿ ತ್ವಂ ಗೃಹೇ ಗೃಹ ಇತ್ಯಥೈನಂ ದ್ರೋಣಕಲಶಮಭ್ಯವನಿನಾಯೋಚ್ಛಿಷ್ಟಂ ಚಮ್ವೋರ್ಭರೇತ್ಯೇತಯರ್ಚಾಥ ಹಾಸ್ಮಿನ್ನನ್ವಾರಬ್ಧೇ ಪೂರ್ವಾಭಿಶ್ಚತಸೃಭಿಃ ಸಸ್ವಾಹಾಕಾರಾಭಿರ್ಜುಹವಾಂ ಚಕಾರ । ಐ. ಬ್ರಾ. ೭–೧೭ । ಇತಿ ।**

ಎಂದು ಐತರೇಯಬ್ರಾಹ್ಮಣ ವಾಕ್ಯವಿರುವುದು. ಇದರ ಅರ್ಥವಿವರಣೆಯನ್ನು ನಾವು ಶುನಶ್ಶೇಪೋಪಾಖ್ಯಾನದಲ್ಲಿಯೇ ವಿವರಿಸಿರುವೆವು.

---

## ಸೂಕ್ತ—೨೮

॥ ಮಂಡಲ—೧ ॥ ಅನುವಾಕ—೬ ॥ ಸೂಕ್ತ—೨೮ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ—೨೫, ೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ಶುನಃಶೇಪ ಆಜೀಗರ್ತಿಃ ॥

॥ ದೇವತಾ—೧–೪. ಇಂದ್ರಃ । ೫–೬. ಉಲೂಖಲಂ ॥ ೭–೮. ಉಲೂಖಲಮುಸಲೌ । ೯. ಹರಿಶ್ಚಂದ್ರ ಅಧಿಷವಣಚರ್ಮ ವಾ ಸೋಮೋ ವಾ ॥

॥ ಛಂದಃ—೧–೬. ಅನುಷ್ಟುಪ್ । ೭–೯. ಗಾಯತ್ರೀ ॥

॥ ಸಂಹಿತಾಪಾಠಃ ॥

ಯತ್ರ ಗ್ರಾವಾ ಪೃಥುಬುಧ್ನ ಊರ್ಧ್ವೋ ಭವತಿ ಸೋತವೇ ।

ಉಲೂಖಲಸುತಾನಾಮವೇದ್ವಿಂದ್ರ ಜಲ್ಗುಲಃ ॥ ೧ ॥

॥ ಪದಪಾಠಃ ॥

ಯತ್ರ । ಗ್ರಾವಾ । ಪೃಥುಽಬುಧ್ನಃ । ಊರ್ಧ್ವಃ । ಭವತಿ । ಸೋತವೇ ।

ಉಲೂಖಲಽಸುತಾನಾಂ । ಅವ । ಇತ್ । ಊಂ ಇತಿ । ಇಂದ್ರ । ಜಲ್ಗುಲಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯತ್ರ ಯಸ್ಮಿನ್ನಂಜಃಸವೇ ಕರ್ಮಣಿ ಸೋತವೇಽಭಿಷವಾರ್ಥಂ ಗ್ರಾವಾ ಪಾಷಾಣಃ ಪೃಥುಬುಧ್ನಃ ಸ್ಥೂಲಮೂಲ ಊರ್ಧ್ವ ಉನ್ನತೋ ಭವತಿ ತಸ್ಮಿನ್ಕರ್ಮಣ್ಯುಲೂಖಲಸುತಾನಾಮುಲೂಖಲೇನಾಭಿಷುತಾನಾಂ ರಸಮವೇತ್ ಸ್ವಕೀಯತ್ವೇನಾವಗತ್ಯೈವ ಜಲ್ಗುಲಃ । ಭಕ್ಷಯ ॥ ಪೃಥುಬುಧ್ನಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಭವತಿ । ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ । ಸೋತವೇ । ಷುಞ್ ಅಭಿಷವೇ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಉಲೂಖಲಸುತಾನಾಂ । ಉಲೂಖಲೇನ ಸುತಾನಾಂ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಜಲ್ಗುಲಃ । ಗಲ ಅದನೇ । ಅಸ್ಮಾದ್ಯಙಂತಾಲ್ಲುಕಿ ಲೇಣ್ಮಧ್ಯಮೈಕವಚನೇ ಲೇಟೋಽಡಾಟಾವಿತ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಉಪಧಾಯಾ ಉತ್ವಂ ಚ ಹಲಾದಿಶೇಷಾಭಾವಶ್ಚ ಪೃಷೋದರಾದಿತ್ವಾತ್ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯತ್ರ—ಯಾವ ಯಜ್ಞಕರ್ಮದಲ್ಲಿ । ಸೋತವೇ—ಹಿಂಡುವುದಕ್ಕಾಗಿ । ಪೃಥುಬುಧ್ನಃ—ಅಗಲವಾದ ಅಡಿ ಭಾಗವುಳ್ಳ । ಗ್ರಾವಾ—ಕಲ್ಲು । ಊರ್ಧ್ವಃ ಭವತಿ—ಮೇಲಕ್ಕೆದ್ದು ನಿಂತಿದೆಯೋ (ಆ ಯಜ್ಞಕರ್ಮದಲ್ಲಿ) । ಉಲೂಖಲಸುತಾನಾಂ—ಒರಳಿನಲ್ಲಿ ಹಿಂಡಿದ (ಸೋಮರಸವನ್ನು) । ಅವೇದು—(ನಿನ್ನದೆಂಬುದಾಗಿ) ತಿಳಿದುಕೊಂಡೇ । ಜಲ್ಗುಲಃ—ಸೇವಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಯಜ್ಞಕರ್ಮದಲ್ಲಿ ಅಗಲವಾದ ತಳಭಾಗವುಳ್ಳ ಕಲ್ಲು ಸೋಮರಸವನ್ನು ಹಿಂಡುವುದಕ್ಕಾಗಿ ಒರಳಿನ ಮೇಲೆದ್ದು ನಿಂತಿದೆಯೋ ಆ ಯಜ್ಞಕರ್ಮದಲ್ಲಿ ಒರಳಿನಲ್ಲಿ ಹಿಂಡಿರತಕ್ಕ ಸೋಮರಸವನ್ನು ನಿನ್ನದೇ ಎಂದು ತಿಳಿದು ಸೇವಿಸು

## English Translation.

Indra, in the sacrifice in which flat-bottomed stone is raised to press the Soma-juice, partake of that Soma expressed in the mortar.

॥ ವಿಶೇಷವಿಷಯಗಳು ॥

**ಮುಖ್ಯಾಭಿಪ್ರಾಯವು**—ಎಲೈ ಇಂದ್ರನೇ, ಈ ಯಜ್ಞದಲ್ಲಿ ಸೋಮರಸವನ್ನು ಜಜ್ಜಿ ಹಿಂಡುವುದಕ್ಕಾಗಿ ಉಪಯೋಗಿಸುವ ಅಗಲವಾದ ತಳಭಾಗವೂ ಕೈಯಿಂದ ಹಿಡಿದುಕೊಳ್ಳುವುದಕ್ಕೆ ಅನುಕೂಲವಾಗುವಂತೆ ಉದ್ದವಾಗಿಯೂ ಇರುವ ಕಲ್ಲನ್ನು ಮೇಲಕ್ಕೆತ್ತಿ ಒರಳಿನಲ್ಲಿರುವ ಸೋಮಲತೆಯನ್ನು ಕುಟ್ಟಿ ಹಿಂಡಿ ರಸವನ್ನು ತೆಗೆಯುವರು. ಇಂತಹ ನಾವು ಮಾಡುತ್ತಿರುವ ಈ ಯಜ್ಞದಲ್ಲಿ ಒರಳಿನಲ್ಲಿ ಹಿಂಡಲ್ಪಟ್ಟು ನಿಂತಿರುವ ಸೋಮರಸವು ನಿನಗಾಗಿಯೇ ಸಿದ್ಧಪಡಿಸಿರುವುದೆಂದು ತಿಳಿದು ಅದನ್ನು ಸ್ವೀಕರಿಸಿ ಎಂದರೆ ಪಾನಮಾಡಿ ತೃಪ್ತನಾಗು.

ಸೋಮರಸವನ್ನು ಸಿದ್ಧಪಡಿಸುವಾಗ ಆಚರಿಸಬೇಕಾದ ಕ್ರಮವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು—ಸೋಮಯಾಗಗಳಲ್ಲಿ ಸೋಮಪಾನಕ್ಕಾಗಿ ಸೋಮಲತೆಯನ್ನು ಜಜ್ಜಿ, ಹಿಂಡಿ, ಬಟ್ಟೆಯಿಂದ ಸೋಸಿ ಸಂದರ್ಭಾನುಸಾರ ಅದಕ್ಕೆ ಮೊಸರು, ಹಾಲು, ಹಿಟ್ಟುಗಳನ್ನು ಬೆರಸಿ ದೇವತೆಗಳಿಗೆ ಅರ್ಪಿಸಿ ಬಳಿಕ ಯಜಮಾನ ಋತ್ವಿಜರು ತಾವೂ ಪಾನಮಾಡುವುದು ರೂಢಿಯಾಗಿದೆ. ಈ ರೀತಿ ಸೋಮರಸವನ್ನು ಸಿದ್ಧಪಡಿಸುವುದು ಯಜ್ಞದಲ್ಲಿ ಮುಖ್ಯವಾದ ದಿವಸದಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ನಡೆಯುವುದು. ಇದಕ್ಕೆ **ಅಭಿಷವಣ** ಅಥವಾ **ಸವನ**ವೆಂದು ಹೆಸರು. ಪ್ರಾತಃಕಾಲದ ಕರ್ಮಕ್ಕೆ **ಪ್ರಾತಃಸವನ**ವೆಂದೂ ಮಧ್ಯಾಹ್ನದಲ್ಲಿ ಮಾಡುವ ಸವನಕ್ಕೆ **ಮಾಧ್ಯಂದಿನಸವನ**ವೆಂದೂ, ಸಾಯಂಕಾಲದಲ್ಲಿ ಮಾಡುವ ಸವನಕ್ಕೆ **ತೃತೀಯಸವನ**ವೆಂದೂ ಹೆಸರು.

ಸೋಮಲತೆಯು ಈಗಿನ ಕಾಲದಲ್ಲಿ ಸಿಕ್ಕುವುದಿಲ್ಲ. ಹಿಂದೆ ನದೀತೀರಗಳಲ್ಲಿಯೂ ಪರ್ವತದ ಮೇಲೆಯೂ ಬೆಳೆಯುತ್ತಿತ್ತು. ಅದನ್ನು ಬಹು ಪ್ರಯಾಸದಿಂದ ತಂದು ಅಥವಾ ತಂದವರಿಂದ ಕ್ರಯಕ್ಕೆ ತೆಗೆದುಕೊಂಡು ಯಜ್ಞಗಳಲ್ಲಿ ಉಪಯೋಗಿಸುತ್ತಿದ್ದರು. ಈಗಲೂ ಯಜ್ಞಗಳಲ್ಲಿ ಸೋಮವಿಕ್ರಯಣವೆಂಬ ಕರ್ಮವು ನಡೆಯುತ್ತಿರುವುದು. ಸೋಮಲತೆಯು (ಬಳ್ಳಿಗಳ) **ಬಭ್ರು, ಅರುಣ** (ಮಾಸಲುಕೆಂಪು) ಅಥವಾ ಹಳದಿಮಿಶ್ರವಾದ ಕೆಂಪುಬಣ್ಣವುಳ್ಳದ್ದಾಗಿರುವುದು. ಪರ್ವತಗಳಲ್ಲಿ ಬಹಳ ಎತ್ತರದಲ್ಲಿ ಬೆಳೆದಿರುವ ಲತೆಯು ಶ್ರೇಷ್ಠವೆಂದೂ ಅದರಿಂದ ಹೆಚ್ಚು ರಸವನ್ನು ತೆಗೆಯಬಹುದೆಂದೂ ಹೇಳಿರುವುದರಿಂದ ಸಾಧ್ಯವಾದ ಸಂದರ್ಭಗಳಲ್ಲಿ ಸೋಮಲತೆಯನ್ನು ಪರ್ವತಗಳಿಂದಲೇ ತರುತ್ತಿದ್ದರು. ಇಂತಹ ಪರ್ವತಗಳಲ್ಲಿ **ಮೂಜವಂತ**ವೆಂಬ ಪರ್ವತವು ಪ್ರಸಿದ್ಧವಾಗಿದ್ದಿತು. ಈ ಸೋಮಲತೆಯ ಕುಡಿಯು **ಅಂಸ**ವೆಂಬ ಹೆಸರಿನಿಂದಲೂ (ಋ. ಸಂ. ೧-೧೬೮-೩; ೩-೪೮-೨ ಇತ್ಯಾದಿ) ಚಿಗರುಗಳಿಂದ ಕೂಡಿದ ಕುಡಿಗೆ

**ವಕ್ಷಣಾ** ಎಂದೂ (ಋ. ಸಂ ೮-೧-೧೭) **ವಾಣ** ಎಂದೂ (ಋ. ಸಂ. ೪-೨೪-೯; ೯-೫೦-೧) ಸೋಮರಸಕ್ಕೆ **ಅಂಧಃ** (ಋ. ಸಂ. ೧-೨೮-೭; ೩-೪೮-೧; ೪-೧೬-೧) ಸೋಮಲತೆಯ ದಂಡಕ್ಕೆ (ಬಳ್ಳಿಗೆ) **ಪರ್ವನ್** (ಋ. ಸಂ. ೧-೯-೧) ಎಂದೂ ಹೇಳುವ ರೂಢಿ ಇರುವುದು.

ಸೋಮರಸವನ್ನು ಸಿದ್ಧಪಡಿಸುವ ಕ್ರಮವು--ಸೋಮಲತೆಯಲ್ಲಿರುವ ಅಥವಾ ಬಳ್ಳಿಯಲ್ಲಿರುವ ಎಲೆಗಳನ್ನು ತೆಗೆದುಹಾಕಿ ಅದನ್ನು ಒರಳಿನಲ್ಲಿ ಹಾಕಿ ಕಲ್ಲಿನಿಂದ ಜಜ್ಜುವರು. ಲತೆಯು ಹೊಸದಲ್ಲದಿದ್ದರೆ ಒಂದೆರಡು ದಿನ ನೀರಿನಲ್ಲಿ ನೆನೆಹಾಕಿ ಮೆತ್ತಗಾದ ಮೇಲೆ ರಸವನ್ನು ತೆಗೆಯುವರು. ಸೋಮಲತೆಯನ್ನು ಜಜ್ಜುವ ಒರಳಿಗೆ **ಉಲೂಖಲ**ವೆಂದು ಹೆಸರು. ಇದು ಸಾಧಾರಣವಾಗಿ ಕಲ್ಲಿನಿಂದಲೇ ನಿರ್ಮಿತವಾಗಿರುವುದು, ಮರದಿಂದ ಮಾಡುವುದೂ ಉಂಟು. ಒರಳಿನಲ್ಲಿ ಹಾಕಿ ಮೇಲಿನಿಂದ ಕುಟ್ಟುವ ಕಲ್ಲಿಗೆ **ಗ್ರಾವಾ,** (ಋ. ಸಂ. ೧-೮೩-೬; ೧-೧೩೫-೭) **ಅದ್ರಿ,** (ಋ. ಸಂ. ೧-೧೩೦-೨; ೧-೧೩೫-೫; ೧-೧೩೭-೧) ಎಂಬ ಹೆಸರುಗಳಿರುವವು. **ಉಲೂಖಲ**ವೆಂದರೆ ಈಗ ನಾವು ಉಪಯೋಗಿಸುತ್ತಿರುವ ಒರಳಿನಂತಿರದೆ ಒಂದು ಕಲ್ಲಿನ ಮಧ್ಯಭಾಗದಲ್ಲಿ ಸ್ವಲ್ಪ ಹಳ್ಳ ಮಾತ್ರವಾಗಿತ್ತೆಂದು ಊಹಿಸ ಬಹುದು. ಈ ಉಲೂಖಲವೆಂಬ ಒರಳು **ಮುಸಲ** (ಒನಕೆ) ದಿಂದ ಧಾನ್ಯವನ್ನು ಕುಟ್ಟುವುದಕ್ಕಾಗಿ ಉಪಯೋಗಿಸ ಲ್ಪಡುತ್ತಿತ್ತು.

ದೇವತೆಗಳಿಗೆ ಸೋಮವನ್ನು ಅರ್ಪಿಸಲು ಇಡುವ ಪಾತ್ರೆಗೆ **ಚಮೂ** ಎಂದು ಹೆಸರು. ಋತ್ವಿಗ್ಜನರು ಸೋಮಪಾನಮಾಡುವುದಕ್ಕೆ ಉಪಯೋಗಿಸುವ ಪಾತ್ರೆಗಳಿಗೆ **ಕಲಶ, ಚಮಸ** ಎಂದು ಹೆಸರು. ಕೆಲವು ಸಂದರ್ಭ ಗಳಲ್ಲಿ **ಚಮೂ** ಎಂಬ ಶಬ್ದವು **ಉಲೂಖಲ, ಗ್ರಾವಾ** (ಒರಳು ಮತ್ತು ಜಜ್ಜುವಕಲ್ಲು, mortar and pestle) ಇವುಗಳನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಲ್ಪಟ್ಟಿರುವುದು. (ಋ. ಸಂ. ೧-೨೮-೯; ೪-೧೮-೩; ೬-೫೭-೨).

ಸೋಮಲತೆಗಳನ್ನು ಜಜ್ಜುವಾಗ ಸಾಧಾರಣವಾಗಿ ಅವುಗಳನ್ನು ಚರ್ಮಗಳ ಮೇಲೆ ಇಡುವುದು ರೂಢಿಯು ಈ ಚರ್ಮಕ್ಕೆ **ತ್ವಕ್** ಎಂದು ಹೆಸರು. ಇದಕ್ಕಾಗಿ ಗೋಚರ್ಮವನ್ನು ಉಪಯೋಗಿಸುತ್ತಿದ್ದರು (ಋ. ಸಂ. ೧೦-೯೪-೯; ೧೦-೧೧೬-೪) ಸೋಮವನ್ನು ಶೇಖರಿಸಿ ಇಡುವ ಪಾತ್ರೆಗಳಿಗೆ **ಕೋಶ** (ಋ. ಸಂ. ೭-೧೦೧-೪; ೮-೨೦-೮) **ಸದಸ್ಥ** (ಋ. ಸಂ. ೩-೬೨-೧೫; ೯-೧-೨; ೯-೧೭-೮) **ದ್ರು** (ಋ. ಸಂ. ೯-೧-೨; ೯-೬೫-೬; ೯-೯೮-೨) **ವನ** (ಋ. ಸಂ. ೨-೧೪-೯; ೯-೬೬-೯) **ದ್ರೋಣ** (ಋ. ಸಂ. ೯-೧೫-೭; ೯-೩೩-೨) ಇತ್ಯಾದಿ ಹೆಸರುಗಳಿವೆ. **ಸ್ರುವ** ಎಂದರೆ ಸೌಟು (ladle. ಋ. ಸಂ. ೧-೧೧೬-೨೪) ಸೋಮರಸವನ್ನು ಸೋಸುವ ಬಟ್ಟೆ ಅಥವಾ ಜಾಲರಿಗೆ **ಪವಿತ್ರ**ವೆಂದು ಹೆಸರು. ಕೆಲವು ಸಂದರ್ಭಗಳಲ್ಲಿ ಬೆರಳಿನ ಸಂದಿಗಳಿಂದಲೂ ಸೋಮವನ್ನು ಸೋಸುತ್ತಿದ್ದರು.

ಸೋಮರಸವನ್ನು ಬೇರೆ ಪದಾರ್ಥಗಳ ಮಿಶ್ರಣವಿಲ್ಲದೆ ಉಪಯೋಗಿಸುವುದಕ್ಕೆ **ಶುಕ್ರ** (ಋ. ಸಂ. ೧-೧೩೭-೧; ೩-೩೨-೨; ೮-೨-೧೦) **ಶುಚಿ** (ಋ. ಸಂ. ೧-೫-೫; ೧-೩೦-೨; ೮-೨-೯) ಎಂದು ಹೇಳುವರು. ಈ ರಸದ ವರ್ಣವು **ಬಭ್ರು,** (ಋ. ಸಂ. ೯-೩೩-೨; ೯-೬೩ ೪ & ೬) **ಹರಿತ** (ಋ. ಸಂ. ೯-೩-೯; ೯-೭-೬; ೯-೬೫-೮)

**ಅರುಣ** (ಋ. ಸಂ. ೯-೪೦-೨ ; ೯-೪೫-೩) **ಅರುಷ** (ಋ. ಸಂ. ೯-೬೧-೨೧) **ಶೋಣ** (ಋ. ಸಂ. ೯-೯೭-೧೩) ಎಂಬ ನಾನಾವಿಧ ವರ್ಣವುಳ್ಳದ್ದಾಗಿರುವುದೆಂದೂ ಸುವಾಸನೆಯಿಂದ ಕೂಡಿರುವುದಾಗಿಯೂ (ಋ. ಸಂ. ೯-೯೭-೯ ; ೯-೧೦೭-೨) ವಿಧವಿಧವಾದ ವರ್ಣನೆಗಳಿರುವುವು.

ಸೋಮರಸಕ್ಕೆ ರುಚಿಯನ್ನುಂಟುಮಾಡುವುದಕ್ಕಾಗಿ ಕೆಲವು ದ್ರವ್ಯಗಳನ್ನು ಮಿಶ್ರಮಾಡುವರು. ಈ ಮಿಶ್ರಣಕ್ಕೆ ಆಶಿರದ್ರವ್ಯಗಳೆಂದು ಹೆಸರು. ಹಾಲನ್ನು ಮಿಶ್ರಮಾಡಿದ ಸೋಮರಸಕ್ಕೆ **ಗವಾಶಿರ**ವೆಂದೂ, ಮೊಸರನ್ನು ಮಿಶ್ರಮಾಡಿದ ಸೋಮರಸಕ್ಕೆ **ದಧ್ಯಾಶಿರ**ವೆಂದೂ, ಹಿಟ್ಟನ್ನು ಮಿಶ್ರಮಾಡಿದ ಸೋಮರಸಕ್ಕೆ **ಯವಾಶಿರ**ವೆಂದೂ ಹೇಳುವರು. ಸೋಮರಸವು ತೀವ್ರವೆಂದು ಕೆಲವು ವೇಳೆ ಹೇಳಲ್ಪಡುವುದು. ಆಗ ಅದು ತೀಕ್ಷ್ಣವಾದ ವಾಸನೆಯಿಂದ ಅಥವಾ ರುಚಿಯಿಂದ (pungent flavour) ಕೂಡಿರುವುದೆಂದು ತಿಳಿಯಬೇಕು. ಸೋಮರಸವನ್ನು ತೆಗೆದ ಮೇಲೆ ಉಳಿಯುವ ಸಿಪ್ಪೆಯಂತಿರುವ ಭಾಗಕ್ಕೆ **ಋಜೀಷ**ವೆಂದು ಹೆಸರು.

**ಗ್ರಾವಾ**—ಸೋಮರಸವನ್ನು ಜಜ್ಜುವ ಕಲ್ಲು. ಈ ಕಲ್ಲು ಈ ಋಕ್ಕಿನಲ್ಲಿ **ಪೃಥುಬುಧ್ನಃ** ಎಂಬ ಶಬ್ದವು ವಿವರಿಸುವಂತೆ ಕೆಳಭಾಗದಲ್ಲಿ ಅಗಲವಾಗಿಯೂ, ಮೇಲೆ ಹಿಡಿಯಂತಿರುವುದಾಗಿಯೂ ಇರುವ ಗುಂಡುಕಲ್ಲು; ಕಲ್ಬತ್ತಿನಲ್ಲಿರುವ ಅರೆಯುವ ಕಲ್ಲಿನಂತೆ ಆಕಾರವುಳ್ಳ ಕಲ್ಲು. ಸಾಧಾರಣವಾಗಿ ಋಗ್ವೇದದಲ್ಲಿ ಸೋಮಲತೆಯನ್ನು ಜಜ್ಜುವುದಕ್ಕಾಗಿ ಉಪಯೋಗಿಸುವ ಕಲ್ಲುಗಳನ್ನು **ಗ್ರಾವಾ ಅದ್ರಿ** ಎಂಬ ಶಬ್ದಗಳಿಂದ ಕರೆಯುವರು.

**ಪೃಥುಬುಧ್ನಃ—ಸ್ಥೂಲಮೂಲ ಊರ್ಧ್ವ ಉನ್ನತಃ ।** ತಳಭಾಗವು ಅಗಲವಾಗಿರುವ ಉದ್ದವಾದ ಕಲ್ಲು ; ಕಲ್ಬತ್ತಿನಲ್ಲಿ ಅರೆಯುವ ಗುಂಡುಕಲ್ಲು.

**ಊರ್ಧ್ವೋ ಭವತಿ ಸೋತವೇ—**ಸೋಮಲತೆಯನ್ನು ಜಜ್ಜುವುದಕ್ಕಾಗಿ ಕಲ್ಲನ್ನು ಕೈಯಿಂದ ಮೇಲಕ್ಕೆತ್ತುವುದು. ಕಲ್ಲಿನ ಅಥವಾ ಒರಳಿನಲ್ಲಿರುವ ಲತೆಯನ್ನು ಕುಟ್ಟಬೇಕಾದರೆ ಬೇರೊಂದು ಕಲ್ಲನ್ನು ಕೈಯಿಂದ ಹಿಡಿದು ಮೇಲಕ್ಕೆ ಎತ್ತಿ ಕುಟ್ಟುವ ವಿಷಯವನ್ನು ಇಲ್ಲಿ ಹೇಳಿರುವುದು.

**ಉಲೂಖಲಸುತಾನಾಂ**—ಉಲೂಖಲವೆಂದರೆ ಮಧ್ಯಭಾಗದಲ್ಲಿ ಹಳ್ಳವಾಗಿರುವ ಕಲ್ಲು ಎಂದರೆ ಒರಳು. ಸೋಮಲತೆಯನ್ನು ಜಜ್ಜಿ ರಸವನ್ನು ತೆಗೆಯುವಾಗ ರಸವು ಹರಿದುಹೋಗದಿರುವುದಕ್ಕಾಗಿ ಕಲ್ಲಿನ ಮಧ್ಯಭಾಗದಲ್ಲಿ ಹಳ್ಳವಿರುವುದು. ಇದು ಒರಳಿನಂತಿರುವುದು. ಈ ಹಳ್ಳವಾದ ಭಾಗದಲ್ಲಿ ಸೋಮಲತೆಗಳನ್ನು ಹಾಕಿ **ಗ್ರಾವಾ** ಎಂಬ ಮತ್ತೊಂದು ಕಲ್ಲಿನಿಂದ ಜಜ್ಜಿ ರಸವನ್ನು ತೆಗೆಯುವರು. ಲತೆಯನ್ನು ಜಜ್ಜಿದ ಮೇಲೆ ರಸವು ಕಲ್ಲಿನಲ್ಲಿರುವ ಹಳ್ಳ ಭಾಗದಲ್ಲಿ ನಿಲ್ಲುವುದು. ಎಳ್ಳನ್ನು ಗಾಣವಾಡಿದ ಮೇಲೆ ಎಣ್ಣೆಯು ಗಾಣದಲ್ಲಿ ನಿಲ್ಲುವಂತೆ. ಉಲೂಖಲ ಶಬ್ದಕ್ಕೆ ಯಾಸ್ಕರು—

**ಉಲೂಖಲಂ । ಉಲೂಖಲಮುರುಕರಂ ವೋರ್ಧ್ವಖಂ ವೋರ್ಕ್ಕರಂ ವೋರು ಮೇ ಕುರ್ವಿತ್ಯಬ್ರವೀತ್ತದುಲೂಖಲಮಭವತ್ । ಉರುಕರಂ ವೈತತ್ತದುಲೂಖಲಮಿತ್ಯಾಚಕ್ಷತೇ ಪರೋಕ್ಷೇಣೇತಿ ಬ್ರಾಹ್ಮಣಂ ॥** (ನಿ. ೯-೨೦).

ಎಂದರೆ **ಉಲೂಖಲ**ವೆಂಬ ಶಬ್ದದಲ್ಲಿ ಲಕಾರಕ್ಕೆ ಬದಲಾಗಿ (ಲಕಾರ ರಕಾರಗಳಿಗೆ ಭೇದವಿಲ್ಲದ್ದರಿಂದ) ರಕಾರವನ್ನು ಇಟ್ಟುಕೊಳ್ಳಬೇಕು. ಆಗ ಉರುಖರಂ ಅಥವಾ ಉರುಕರಂ ಎಂದಾಗುವುದು. **ಈಗ ಉರುಕರಂ — ಉರು ಬಹು ಅಥವಾ ಬಹ್ವನ್ನಂ ಕರೋತಿ ಉರುಕರಂ ||** (ಇದರಲ್ಲಿ ಧಾನ್ಯಾದಿಗಳನ್ನು ಕುಟ್ಟುವುದರಿಂದ) ಬಹಳವಾದ ಅನ್ನವು (ಆಹಾರವು) ಉಂಟಾಗುವುದು. ಬಹಳವಾದದನ್ನು ಉಂಟುಮಾಡುವುದರಿಂದ ಇದಕ್ಕೆ **ಉರುಕರಂ** ಎಂದು ಹೆಸರು. ಅಥವಾ ಊರ್ಧ್ವ+ಖಂ=**ಊರ್ಧ್ವಖಂ=ಉರುಕರಂ** ಎಂದರೆ ಇದರಲ್ಲಿ ಧಾನ್ಯವನ್ನು ಹಾಕಿ ಮುಸಲದಿಂದ ಮೇಲಕ್ಕೆತ್ತಿ ಕುಟ್ಟುವುದರಿಂದ (ಖನ್–ಅಗಿ) ಉರುಕರವೆಂದು ಹೆಸರು. ಅಥವಾ **ಊರ್ಕರಂ=ಉರುಕರಂ ಊರ್ಕ್** ಎಂದರೆ ರಸವು, ಅದನ್ನು (ಸೋಮರಸವನ್ನು) ಉಂಟುಮಾಡುವುದರಿಂದ ಎಂದರೆ ಇದರಲ್ಲಿ ಸೋಮಲತೆಯನ್ನು ಜಜ್ಜಿ ಸೋಮರಸವನ್ನು ತೆಗೆಯುವುದರಿಂದ **ಊರ್ಕರಂ** ಅಥವಾ **ಉರುಕರ**ವೆಂದು ಹೆಸರು. ಅಥವಾ **ಉರು ಮೇ ಕುರು ಇತ್ಯಬ್ರವೀತ್** ಎಂಬ ವಾಕ್ಯವನ್ನು ಹೇಳುವಾಗ ಇದರ ಅರ್ಥವನ್ನನುಸರಿಸಿ **ಉರುಕರಂ** ಎಂದು ಹೆಸರು. **ಉರುಕರಂ** ಎಂದರೆ **ಉಲೂಖಲ**ವೆಂದು ಏಕೆ ಹೇಳಬೇಕೆಂದರೆ ಈ ವಿಷಯದಲ್ಲಿ—**ಉರುಕರಂ ವೈತತ್ತ್ದುಲೂಖಲಮಿತ್ಯಾಚಕ್ಷತೇ ಪರೋಕ್ಷೇಣೇತಿ ಚ ಬ್ರಾಹ್ಮಣಂ ||** ಎಂದರೆ ಉರುಕರವೆಂದರೆ ಉಲೂಖಲವು ಎಂದು ಬ್ರಾಹ್ಮಣವಾಕ್ಯವಿರುವುದು ಎಂದು ಅದನ್ನು ಇಲ್ಲಿ ಉದಾಹರಿಸಿರುವರು. ಪ್ರಕೃತಸಂದರ್ಭದಲ್ಲಿ **ಉಲೂಖಲಸುತಾನಾಂ** ಎಂಬ ಶಬ್ದಕ್ಕೆ **ಉಲೂಖಲ**ವೆಂದು ಕರೆಯಲ್ಪಡುವ ಒರಳಿನಲ್ಲಿ ಜಜ್ಜಿದ ಸೋಮರಸದ (ಭಾಗವನ್ನು ಎಂದರ್ಥವು ಈ ಉಲೂಖಲವು ಹತ್ತು ಯಜ್ಞಾಯುಧಗಳೆಂದು ಹೇಳಲ್ಪಡುವ ಯಜ್ಞಸಾಧನವಸ್ತುಗಳಲ್ಲಿ ಒಂದಾಗಿರುವುದು. ಈ ವಿಷಯದಲ್ಲಿ—

> **ಯೋ ವೈ ದಶ ಯಜ್ಞಾಯುಧಾನಿ ವೇದ ಮುಖತೋಽಸ್ಯ ಯಜ್ಞಃ ಕಲ್ಪತೇ ಸ್ಫ್ಯಶ್ಚ ಕಪಾಲಾನಿ ಚಾಗ್ನಿಹೋತ್ರಹವಣೀ ಚ ಶೂರ್ಪಂ ಚ ಕೃಷ್ಣಾಜಿನಂ ಚ ಶಮ್ಯಾ ಚೋಲೂಖಲಂ ಚ ಮುಸಲಂ ಚ ದೃಷಚ್ಚೋಪಲಾ ಚೈತಾನಿ ವೈ ದಶ ಯಜ್ಞಾಯುಧಾನಿ ಯ ಏವಂ ವೇದ ಮುಖತೋಽಸ್ಯ ಯಜ್ಞಃ ಕಲ್ಪತೇ ||** (ತೈ. ಸಂ. ೧–೬–೮)

ಎಂದು ಕೃಷ್ಣಯಜುರ್ವೇದ ತೈತ್ತಿರೀಯಸಂಹಿತಾ ವಚನವಿರುವುದು. ಎಂದರೆ ಯಜ್ಞದಲ್ಲಿ ಉಪಯೋಗಿಸುವ ಮುಖ್ಯಸಾಧನಗಳು ಹತ್ತು—

(೧) **ಸ್ಫ್ಯಃ—ಚ್ಛೇದನಾದಿಕೃತ್ |** ದರ್ಭೆ ಮೊದಲಾದವುಗಳನ್ನು ಕತ್ತರಿಸುವುದಕ್ಕಾಗಿ ಉಪಯೋಗಿಸುವ ಚಾಕು.

(೨) **ಕಪಾಲಾನಿ—ಹವಿರಧಿಶ್ರಯಣಾರ್ಥಾನಿ |** ಹವಿಸ್ಸನ್ನು ಎಂದರೆ ಪುರೋಡಾಶವೆಂಬ ಹವಿಸ್ಸನ್ನು ಬೆಂಕಿಯ ಮೇಲಿಟ್ಟು ಬೇಯಿಸುವ ಮಣ್ಣಿನ ತವೆ.

(೩) **ಅಗ್ನಿಹೋತ್ರಹವಣೀ**—ಹವಿಸ್ಸನ್ನು ಹೋಮಮಾಡುವುದಕ್ಕಾಗಿ ಉಪಯೋಗಿಸುವ ಸೌಟ ನಂತಿರುವ ಮರದ ಪಾತ್ರೆ.

(೪) **ಶೂರ್ಪ**—ಧಾನ್ಯವನ್ನು ಕೇರುವುದಕ್ಕಾಗಿ ಉಪಯೋಗಿಸುವ ಮರ.

(೫) **ಕೃಷ್ಣಾಜಿನಂ**—ಒರಳಿನ ಹತ್ತಿರ ಉಪಯೋಗಿಸುವ ಕೃಷ್ಣಾಜಿನವೆಂಬ ಜಿಂಕೆಯ ಚರ್ಮವು

(೬) **ಶಮ್ಯಾ**—ಯಜ್ಞದಲ್ಲಿ ಪಶುವನ್ನು ಕೊಲ್ಲುವುದಕ್ಕಾಗಿ ಉಪಯೋಗಿಸುವ ಆಯುಧ.

(೭) **ಉಲೂಖಲಂ**—ಧಾನ್ಯವನ್ನು ಕುಟ್ಟುವುದಕ್ಕೂ ಸೋಮರಸವನ್ನು ಜಜ್ಜುವುದಕ್ಕೂ ಉಪಯೋಗಿಸುವ ಒರಳು.

(೮) **ಮುಸಲಂ**—ಧಾನ್ಯವನ್ನು ಕುಟ್ಟುವ ವನಕೆಯು.

(೯) **ದೃಷತ್**—ಸೋಮರಸವನ್ನು ಜಜ್ಜುವಾಗ ಕೆಳಭಾಗದಲ್ಲಿ ಉಪಯೋಗಿಸುವ ಕಲ್ಲು, ಅಥವಾ ಕಲ್ಲುಬತ್ತು.

(೧೦) **ಉಪಲಾ**—ಮೇಲೆ ಹೇಳಿದ **ದೃಷತ್** ಎಂಬ ಕಲ್ಲಿನ ಮೇಲೆ ಇಡುವ ವಸ್ತುವನ್ನು ಅರೆಯುವುದಕ್ಕೆ ಉಪಯೋಗಿಸುವ ಗುಂಡುಕಲ್ಲು.

ಈ ಹತ್ತುವಿಧ ಯಜ್ಞಸಾಧನಗಳಲ್ಲಿ ಒನೆಯದಾದ **ಉಲೂಖಲವು** ಒಂದಾಗಿದೆ.

**ಅವ ಇತ್—ಅವಗತ್ಯೈವ ।** ತಿಳಿದು ಅಥವಾ ತಿಳಿದುಕೊಂಡೇ ಎಂದರೆ ಒರಳಿನಲ್ಲಿ ಹಿಂಡಿರುವ ಸೋಮರಸವು ನಿನಗಾಗಿಯೇ ಸಿದ್ಧಪಡಿಸಿರುವುದೆಂದು ತಿಳಿದು ಎಂದಭಿಪ್ರಾಯವು ಭಾಷ್ಯಕಾರರು **ಅವ** ಎಂಬ ಶಬ್ದಕ್ಕೆ ಅವಗಮನಾರ್ಥ (ತಿಳಿದುಕೋ ಎಂಬರ್ಥ) ವನ್ನು ಹೇಳಿರುವರು. ಸ್ಕಂದಸ್ವಾಮಿಯು **ಅವ ಇತ್** ಎಂಬ ಎರಡು ಶಬ್ದಗಳೂ ಉಪಸರ್ಗಗಳೆಂದೂ ಇವುಗಳನ್ನು **ಜಲ್ಗುಲಃ** ಎಂಬ ಕ್ರಿಯಾಪದದೊಡನೆ ಸೇರಿಸಿ ಅರ್ಥಮಾಡಬೇಕೆಂದೂ ಹೇಳಿ **ಅವ ಇತ್ ಜಲ್ಗುಲಃ** ಎಂಬ ಶಬ್ದಗಳಿಗೆ **ಪುನಃ ಪುನರ್ವಾ ಅವಗಿರ ಪಿಬೇತ್ಯರ್ಥಃ ।** ಮತ್ತೆ ಮತ್ತೆ ಪಾನಮಾಡು ಎಂದು ಅರ್ಥವಿವರಣೆ ಮಾಡಿರುವರು.

**ಜಲ್ಗುಲಃ—ಗಲ ಅದನೇ । ಭಕ್ಷಯ ॥** ತಿನ್ನು ಎಂದರೆ ಪಾನಮಾಡು, ಒರಳಿನಲ್ಲಿ ಸೋಮಲತೆಯನ್ನು ಜಜ್ಜಿ ಹಿಂಡಿ ತೆಗೆದಿರುವ ರಸವು ನಿನಗಾಗಿಯೇ ಸಿದ್ಧವಾಗಿರುವುದೆಂದು ತಿಳಿದು ಪಾನಮಾಡು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**'ಪೃಥು ಬುಧ್ನಃ—**ಬಹುವ್ರೀಹಿ ಸಮಾಸ. **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

**ಭವತಿ**—ಭೂ ಸತ್ತಾಯಾಂ ಧಾತು. ಲಟ್ ಪ್ರಥಮಪುರುಷ ಏಕವಚನರೂಪ. ಹಿಂದೆ ಯತ್ರ ಎಂಬ ಶಬ್ದದ ಸಂಬಂಧವಿರುವುದರಿಂದ **'ನಿಪಾತೈರ್ಯದ್ಯದಿ-'** (ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧಬರುತ್ತದೆ.

**ಸೋತವೇ—**ಷುಞ್ ಅಭಿಷವೇ ಧಾತು. ತುಮುನರ್ಥವು ತೋರುವಾಗ **'ತುಮರ್ಥೇ ಸೇಸೇನ್-'** (ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ ಬರುತ್ತದೆ. **'ಧಾತ್ವಾದೇಃ ಷಃ ಸಃ'** (ಪಾ. ಸೂ. ೬-೧-೬೪) ಎಂಬುದರಿಂದ ಧಾತುವಿಗೆ ಸತ್ವ ಬರುತ್ತದೆ **'ಸಾರ್ವಧಾತುಕಾರ್ಧಧಾತುಕಯೋಃ'** (ಪಾ. ಸೂ. ೭-೩-೮೪)

ಎಂಬುದರಿಂದ ತವೇನ್ಪ್ರತ್ಯಯ ಪರದಲ್ಲಿರುವುದರಿಂದ ಗುಣ ಬರುತ್ತದೆ. ಸೋತವೇ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ '**ಞ್ನಿತ್ಯಾದಿರ್ನಿತ್ಯಂ**' (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ

**ಉಲೂಖಲಸುತಾನಾಂ**—ಉಲೂಖಲೇನ ಸುತಾಃ ಉಲೂಖಲಸುತಾಃ ತೇಷಾಂ. '**ಸಮಾಸಸ್ಯ**' ಎಂಬುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ '**ತೃತೀಯಾ ಕರ್ಮಣಿ**' (ಪಾ. ಸೂ. ೬-೨-೪೮) ಕರ್ಮ ವಾಚಕಕ್ತಾಂತಪದವು ಪರದಲ್ಲಿರುವಾಗ ತೃತೀಯಾಂತವು ಪ್ರಕೃತಿಸ್ವರವನ್ನು ಹೊಂದುತ್ತದೆ ಎಂಬುದರಿಂದ ಪೂರ್ವ ಪದ ಪ್ರಕೃತಿಸ್ವರವು ಬರುತ್ತದೆ ಊಕಾರವು ಉದಾತ್ತವಾಗುತ್ತದೆ.

**ಜಲ್ಗುಲಃ**—ಗಲ ಅದನೇ ಧಾತು. ಚುರಾದಿ. ಭೃಶಾರ್ಥದಲ್ಲಿ ಯಙ್ ಬರುತ್ತದೆ. ಅದಕ್ಕೆ '**ಯಙೋಽಚಿ ಚ**' (ಪಾ. ಸೂ. ೨-೪-೭೪) ಎಂಬುದರಿಂದ ಲುಕ್ ಬರುತ್ತದೆ '**ಸನಾದ್ಯಂತಾ ಧಾತವಃ**' (ಪಾ. ಸೂ. ೩-೧-೩೨) ಎಂಬುದರಿಂದ ಸನಾದಿಯಲ್ಲಿ ಸೇರಿರುವುದರಿಂದ ಧಾತುಸಂಜ್ಞೆಯು ಬರುತ್ತದೆ. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬರುತ್ತದೆ. '**ಇತಶ್ಚ ಲೋಪಃ ಪರಸ್ಮೈಪದೇಷು**' (ಪಾ. ಸೂ. ೩-೪-೯೭) ಎಂಬುದರಿಂದ ಅದರ ಇಕಾರಕ್ಕೆ ಲೋಪ ಬರುತ್ತದೆ. '**ಲೇಟೋಽಡಾಟೌ**' (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ ಬರುತ್ತದೆ. '**ಸನ್ಯಙೋಃ**' (ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ '**ಹಲಾದಿಃ ಶೇಷಃ**' (ಪಾ. ಸೂ. ೭-೪-೬೦) ಎಂಬುದರಿಂದ ಲೋಪ ಪ್ರಾಪ್ತವಾದರೆ '**ಪೃಷೋದರಾದೀನಿ ಯಥೋಪದಿಷ್ಟಂ**' (ಪಾ. ಸೂ. ೭-೩-೧೦೯) ಎಂಬುದರಿಂದ ಇದನ್ನು ಅಲ್ಲಿ ಪಾಠಮಾಡುವುದರಿಂದ ಲೋಪ ಬರುವುದಿಲ್ಲ. ಉಪಧಾ ಅಕಾರಕ್ಕೆ ಉತ್ವವೂ ಆ ಸೂತ್ರದಿಂದಲೇ ಬರುತ್ತದೆ. ಜಲ್ಗುಲಸ್ ಎಂದಿರುವಾಗ ರುತ್ವ ವಿಸರ್ಗಗಳು ಬಂದರೆ ಜಲ್ಗುಲಃ ಎಂದು ರೂಪವಾಗುತ್ತದೆ. ನಿಘಾತಸ್ವರ ಬರುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ಯತ್ರ ದ್ವಾವಿವ ಜಘನಾಧಿಷವಣ್ಯಾ ಕೃತಾ।
ಉಲೂಖಲಸುತಾನಾಮವೇದ್ವಿಂದ್ರ ಜಲ್ಗುಲಃ ॥ ೨ ॥

॥ ಪದಪಾಠಃ ॥

ಯತ್ರ । ದ್ವೌಽಇವ । ಜಘನಾ । ಅಧಿಽಸವನ್ಯಾ । ಕೃತಾ ।
ಉಲೂಖಲಽಸುತಾನಾಂ । ಅವ । ಇತ್ । ಊಂ ಇತಿ । ಇಂದ್ರ । ಜಲ್ಗುಲಃ ॥ ೨ ॥

|| ಸಾಯಣಭಾಷ್ಯಂ ||

**ಯತ್ರ ಯಸ್ಮಿನ್ಕರ್ಮಣ್ಯಧಿಷವಣ್ಯಾ ಉಭೇ ಅಧಿಷವಣಫಲಕೇ ದ್ವಾವಿವ ಜಘನಾ ದ್ವೌ ಜಘನಪ್ರದೇಶಾವಿವ । ಜಘನಂ ಜಂಘನ್ಯತೇರಿತಿ ಯಾಸ್ಕಃ । ನಿ. ೯–೨೦ । ಕೃತಾ ವಿಸ್ತೀರ್ಣೇ ಕೃತೇ ಸಂಪಾದಿತೇ । ಅನ್ಯತ್ಪೂರ್ವವತ್ ॥ ಜಘನಾ । ಹಂತೇಃ ಶರೀರಾವಯವೇ ದ್ವೇ ಚ । ಉ. ೫–೩೨ । ಇತಿ ಹನ್ತ್ಯಾತೋರಚ್ । ದ್ವಿತ್ವಂ । ಕರ್ದಮಾದಿತ್ವಾನ್ಮಧ್ಯೋದಾತ್ತಃ । ಫಿ. ೩–೧೦ । ಸುಪಾಂ ಸುಲುಗಿತ್ಯಾ-ಕಾರಃ । ಅಧಿಷವಣ್ಯಾ । ಷುಞ್ ಅಭಿಷವೇ । ಲ್ಯುಟ್ । ಭವೇ ಛಂದಸೀತಿ ಯತ್ । ಉಪಸರ್ಗಾತ್ಸು-ನೋತೀತಿ ಷತ್ವಂ । ತಿತ್ಸ್ವರಿತ ಇತಿ ಸ್ವರಿತಃ । ನ ಚ ಯತೋಽನಾವ ಇತ್ಯಾದ್ಯುದಾತ್ತತ್ವಂ । ತತ್ರ ಹಿ ನಿಷ್ಠಾ ಚ ದ್ವ್ಯಜನಾತ್ । ಪಾ. ೬–೧–೨೦೫ । ಇತ್ಯಸ್ಯಾನುವೃತ್ತೇರ್ದ್ವ್ಯಚ್ಕಸ್ಯೈವ ತದಿತಿ । ಕೃತಾ । ಪೂರ್ವವದಾಕಾರಃ ॥**

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ಯತ್ರ**—ಯಾವ ಯಜ್ಞಕರ್ಮದಲ್ಲಿ । **ದ್ವಾವಿವ ಜಘನಾ**—ಎರಡು ಜಘನ ಪ್ರದೇಶಗಳಂತೆ ವಿಸ್ತಾರವಾಗಿರುವ । **ಅಧಿಷವಣ್ಯಾ**—ಸೋಮರಸವನ್ನು ಹಿಂಡತಕ್ಕ ಎರಡು ತಟ್ಟೆಗಳು । **ಕೃತಾ**— ಸಂಪಾದಿತವಾಗಿವೆಯೋ (ಆ ಯಜ್ಞಕರ್ಮದಲ್ಲಿ) । **ಉಲೂಖಲಸುತಾನಾಂ**—ಒರಳಿನಲ್ಲಿ ಹಿಂಡಿದ (ಸೋಮರಸವನ್ನು) । **ಅವೇತ್ ಉ**—(ನಿನ್ನದೇ ಎಂದು) ತಿಳಿದು । **ಜಲ್ಗುಲಃ**—ಸೇವಿಸು.

|| ಭಾವಾರ್ಥ ||

ಎಲೈ ಇಂದ್ರನೇ, ಯಾವ ಯಜ್ಞಕರ್ಮದಲ್ಲಿ ಸೋಮರಸವನ್ನು ಹಿಂಡಿಡತಕ್ಕ ಎರಡು ತಟ್ಟೆಗಳು (ಹೆಂಗಸರ) ಎರಡು ಜಘನ ಪ್ರದೇಶಗಳಂತೆ ವಿಸ್ತಾರವಾಗಿ ಸಂಪಾದಿತವಾಗಿವೆಯೋ ಆ ಯಜ್ಞಕರ್ಮದಲ್ಲಿ ಒರಳಿನಲ್ಲಿ ಹಿಂಡಿದ ಸೋಮರಸವನ್ನು ನಿನಗಾಗಿಯೇ ಸಿದ್ಧಪಡಿಸಿರುವುದೆಂದು ತಿಳಿದುಕೊಂಡು ಸೇವಿಸು.

## English Translation.

Where, Indra, the two halves (or platters) of the Soma-press are placed close together like the broad hips of a woman, partake of that Soma expressed in the mortar.

|| ವಿಶೇಷವಿಷಯಗಳು ||

**ಜಘನಾ ಅಧಿಷವಣ್ಯಾ**—ಜಘನಾ ಎಂದರೆ ಸ್ತ್ರೀಯರ ಎರಡು ಜಘನ ಪ್ರದೇಶಗಳು, ತೊಡೆಯ ಮೇಲು ಭಾಗಗಳು. ಅವು ಸಾಧಾರಣವಾಗಿ ಸ್ಥೂಲವಾಗಿ ಎಂದರೆ ದಪ್ಪವಾಗಿರುವವು. ಅಧಿಷವಣ ಎಂದರೆ ಸೋಮರಸವನ್ನು ತುಂಬುವ ಮರದ ಪಾತ್ರೆಗಳು. ಅವು ಜಘನಗಳಂತೆ ದೊಡ್ಡದಾಗಿರುವವು ಎಂದರೆ ಹೆಚ್ಚಾಗಿ ಸೋಮರಸವು ಹಿಡಿಯು ವಷ್ಟಿರುವುವು. ಅಥವಾ ಜಘನ ಪ್ರದೇಶಗಳು ಒಂದಕ್ಕೊಂದು ಸಮೀಪದಲ್ಲಿ ಇದ್ದು ಘರ್ಷಣೆಯಾಗುವಂತೆ ಸೋಮ

ರಸವನ್ನು ಹಿಂಡಿ ತೆಗೆಯುವಾಗ ಅಧಿಷವಣವೆಂಬ ಮರದ ಹಲಗೆಗಳು ಪರಸ್ಪರ ಘರ್ಷಣದಿಂದ ಸ್ಪರ್ಶಮಾಡುತ್ತಾ ಸೋಮರಸವನ್ನು ಹಿಂಡಿ ತೆಗೆಯುವವು ಎಂದಭಿಪ್ರಾಯವು. ಈ ಸಂದರ್ಭದಲ್ಲಿ ಅಧಿಷವಣವೆಂದರೆ ಸೋಮರಸವನ್ನು ಜಜ್ಜಿ ತೆಗೆಯುವುದಕ್ಕಾಗಿ ಉಪಯೋಗಿಸುವ ಎರಡು ಮರದ ಹಲಗೆಯಂತಿರುವ ತುಂಡುಗಳು. ಈ ಮರದ ತುಂಡುಗಳ ಮಧ್ಯದಲ್ಲಿ ಸೋಮಲತೆಯನ್ನು ಇಟ್ಟು ಜಜ್ಜಿ ರಸವನ್ನು ತೆಗೆಯುವರು. ಈ ಮರದ ತುಂಡುಗಳ ಪರಸ್ಪರ ಘರ್ಷಣೆಯನ್ನು ಸ್ತ್ರೀಯ ಜಘನಪ್ರದೇಶಗಳಿಗೆ ಹೋಲಿಸಿ ಋಷಿಯು ವರ್ಣನೆ ಮಾಡಿರುವನು. ಅಥವಾ ಭಾಷ್ಯಕಾರರು ಹೇಳಿರುವಂತೆ ಅಧಿಷವಣವೆಂದರೆ ಹಿಂಡಿತೆಗೆದ ಸೋಮರಸವನ್ನು ತುಂಬುವುದಕ್ಕಾಗಿ ಉಪಯೋಗಿಸುವ ದೊಡ್ಡ ಮರದ ಪಾತ್ರೆಗಳು. ಇವು ಸ್ತ್ರೀಯ ಜಘನಪ್ರದೇಶದಂತೆ ದೊಡ್ಡದಾಗಿರುವುದು ಎಂದರೆ ಹೆಚ್ಚುರಸವು ಹಿಡಿಸುವಂತಿರುವುದು ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಜಘನಾ**—ಹನ ಹಿಂಸಾಗತ್ಯೋಃ ಧಾತು. **‘ ಹಂತೇಃ ಶರೀರಾವಯವೇ ದ್ವೇ ಚ ’** (ಉ. ಸೂ. ೫-೭೧೦) ಎಂಬುದರಿಂದ ಹನ್ ಧಾತುವಿಗೆ ಅಚ್ ಪ್ರತ್ಯಯು ಬರುತ್ತದೆ. ತತ್ಸಂನಿಯೋಗದಿಂದ ಧಾತುವಿಗೆ ದ್ವಿತ್ವವೂ ಬರುತ್ತದೆ. ಅಭ್ಯಾಸಕ್ಕೆ ಹಲಾದಿಶೇಷ ಚುತ್ವವು ಬರುತ್ತದೆ. ಜಹನ್+ಅ, ಎಂದಿರುವಾಗ **‘ ಅಭ್ಯಾಸಾಚ್ಚ ’** (ಪಾ. ಸೂ. ೭-೩-೫೫) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಹನಿನ ಹಕಾರಕ್ಕೆ ಕುತ್ವ ಬರುತ್ತದ. ಜಘನ ಎಂದು ರೂಪವಾಗುತ್ತದೆ. **‘ಸುಪಾಂಸುಲುಕ್-‘** (ಪಾ. ಸೂ. ೭-೧-೩೯) ಎಂಬುದರಿಂದ ಪ್ರ. ದ್ವಿವಚನ ವಿಭಕ್ತಿಗೆ ಆಕಾರಾದೇಶ ಬರುತ್ತದೆ. **‘ ಕರ್ದಮಾದೀನಾಂ ಚ ’** (ಫಿ. ಸೂ. ೫೯) ಎಂಬುದರಿಂದ ಇದು ಕರ್ದಮಾದಿಯಲ್ಲಿ ಪಠಿತವಾಗಿರುವುದರಿಂದ ಮಧ್ಯೋದಾತ್ತಸ್ವರವು ಬರುತ್ತದೆ.

**ಅಧಿಷವಣ್ಯಾ**—ಷುಞ್ ಅಭಿಷವೇ ಧಾತು. ಇದಕ್ಕೆ ಲ್ಯುಟ್ ಪ್ರತ್ಯಯ ಬರುತ್ತದೆ. **‘ಯುವೋರನಾಕೌ’** (ಪಾ. ಸೂ. ೭-೧-೧) ಎಂಬುದರಿಂದ ಲ್ಯುಟನಲ್ಲಿ ಉಳಿಯುವ ಯುಕಾರಕ್ಕೆ ಅನಾದೇಶ:ಬರುತ್ತದೆ ಸವನ ಎಂದು ರೂಪವಾಗುತ್ತದೆ. ಸವನೇ ಭವಃ ಎಂಬರ್ಥದಲ್ಲಿ **‘ ಭವೇ ಛಂದಸಿ ’** (ಪಾ. ಸೂ. ೪-೪-೧೧೦) ಎಂಬರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಯ ಪರದಲ್ಲಿರುವಾಗ **‘ ಯಸ್ಯೇತಿ ಚ ’** (ಪಾ. ಸೂ. ೬-೪-೧೪೮) ಎಂಬುದರಿಂದ ಹಿಂದೆ ಇರುವ ಅಕಾರಕ್ಕೆ ಲೋಪ ಬರುತ್ತದೆ, ಸವನ್ಯ ಎಂದಾಗುತ್ತದೆ. ಅಧಿ ಸಂಬಂಧವಿರುವಾಗ **‘ ಉಪಸರ್ಗಾತ್ ಸುನೋತಿ-’** (ಪಾ. ಸೂ. ೮-೩-೬೫) ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ ಬರುತ್ತದೆ. **ಅಟ್‌ಕುಪ್ವಾಙ್-’** (ಪಾ. ಸೂ. ೮-೪-೨) ಸೂತ್ರದಿಂದ ಬಂದಿರುವ ಷಕಾರವನ್ನು ನಿಮಿತ್ತೀಕರಿಸಿ ಮುಂದಿರುವ ನಕಾರಕ್ಕೆ ಣತ್ವ ಬರುತ್ತದೆ. ಅಧಿಷವಣ ಎಂಬ ಶಬ್ದವಾಗುತ್ತದೆ. **‘ ಸುಪಾಂಸುಲುಕ್ ’** ಸೂತ್ರದಿಂದ ದ್ವಿವಚನಕ್ಕೆ ಯಾಚಾದೇಶ ಬರುತ್ತದೆ, ಅಧಿಷವಣ್ಯಾ ಎಂದು ರೂಪವಾಗುತ್ತದೆ. ಯತ್ ಪ್ರತ್ಯಯವು ತಿತ್ತಾದುದರಿಂದ **‘ ತಿತ್ಸ್ವರಿತಂ ’** (ಪಾ. ಸ೯. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಯದ್ಯಪಿ ಇಲ್ಲಿ, **ಯತೋಽನಾವಃ ’** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರವು ಪ್ರಾಪ್ತವಾಗುತ್ತದೆ. ಆದರೆ ಅಲ್ಲಿ **‘ ನಿಷ್ಠಾ ಚ ದ್ವ್ಯಜನಾತ್ ’** (ಪಾ. ಸೂ. ೬-೧-೨೦೫) ಎಂಬುದರಿಂದ ದ್ವ್ಯಚ್ ಎಂಬುದನ್ನು ಅನುವೃತ್ತಿಮಾಡಿಕೊಂಡಿರುವುದರಿಂದ ದ್ವ್ಯಚ್ಕವಾದುದರಲ್ಲಿಯೇ ಆ ಸ್ವರವು ಬರುವುದರಿಂದ ಇಲ್ಲಿ ಅನೇಕಾಚಾದುದರಿಂದ ಬರುವುದಿಲ್ಲ.

ಕೃತಾ—ಡುಕೃಞ್ ಕರಣೇ ಧಾತು. ಕ್ತಪ್ರತ್ಯಯ ಬರುತ್ತದೆ. ಇಲ್ಲಿಯೂ ದ್ವಿವಚನ ವಿಭಕ್ತಿಗೆ **ಸುಪಾಂ ಸುಲುಕ್-'** (ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ ಬರುತ್ತದೆ. ॥ ೨ ॥

॥ ಸಂಹಿತಾಪಾಠಃ ॥

ಯತ್ರ ನಾರ್ಯಪಚ್ಯವಮುಪಚ್ಯವಂ ಚ ಶಿಕ್ಷತೇ ।

ಉಲೂಖಲಸುತಾನಾಮವೇದ್ವಿನ್ದ್ರ ಜಲ್ಗುಲಃ ॥ ೩ ॥

॥ ಪದಪಾಠಃ ॥

ಯತ್ರ । ನಾರೀ । ಅಪಽಚ್ಯವಂ । ಉಪಽಚ್ಯವಂ । ಚ । ಶಿಕ್ಷತೇ ।

ಉಲೂಖಲಽಸುತಾನಾಂ । ಅವ । ಇತ್ । ಊಂ ಇತಿ । ಇನ್ದ್ರ । ಜಲ್ಗುಲಃ ॥ ೩ ॥

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ಕರ್ಮಣಿ ನಾರೀ ಪತ್ನ್ಯಪಚ್ಯವಂ ಶಾಲಾಯಾ ನಿರ್ಗಮನಮುಪಚ್ಯವಂ ಚ ಶಾಲಾಪ್ರಾಪ್ತಿಂ ಚ ಶಿಕ್ಷತೇ ಅಭ್ಯಾಸಂ ಕರೋತಿ । ಅನ್ಯತ್ಪೂರ್ವವತ್ ॥ ಅಪಚ್ಯವಂ । ಚ್ಯುಙ್ ಗತೌ । ಋದೋರಬಿತ್ಯಪ್ । ಗುಣಾವಾದೇಶೌ । ಥಾಥಾದಿನಾ । ಪಾ. ೬-೨-೧೪೪ । ಉತ್ತರಪದಾಂತೋದಾತ್ತತ್ವಂ । ಏವಮುಪಚ್ಯವಂ । ಶಿಕ್ಷತೇ । ಶಿಕ್ಷ ವಿದ್ಯೋಪಾದಾನೇ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಯತ್ರ**—ಯಾವ ಯಜ್ಞಕರ್ಮದಲ್ಲಿ । **ನಾರೀ**—(ಪತ್ನಿಯಾದ) ಹೆಂಗಸು **ಅಪಚ್ಯವಂ**—(ಯಜ್ಞಶಾಲೆಯಿಂದ) ಹೊರಕ್ಕೆ ಹೋಗುವುದನ್ನು । **ಉಪಚ್ಯವಂ**—(ಯಜ್ಞಶಾಲೆಯು) ಒಳಕ್ಕೆ ಬರುವುದನ್ನೂ । **ಶಿಕ್ಷತೇ**—ಅಭ್ಯಾಸಮಾಡುತ್ತಾಳೋ (ಆ ಯಜ್ಞಕರ್ಮದಲ್ಲಿ) । **ಉಲೂಖಲಸುತಾನಾಂ**—ಒರಳಿನಲ್ಲಿ ಹಿಂಡಿದ (ಸೋಮರಸವನ್ನು) । **ಅವೇದು**—(ನಿನ್ನದೇ ಎಂದು) ತಿಳಿದು । **ಜಲ್ಗುಲಃ**—ಸೇವಿಸು.

|| ಭಾವಾರ್ಥ ||

ಎಲೈ ಇಂದ್ರನೇ, ಯಾವ ಯಜ್ಞಕರ್ಮದಲ್ಲಿ ಯಜಮಾನನ ಪತ್ನಿಯಾದ ಹೆಂಗಸು ಯಜ್ಞಶಾಲೆಯಿಂದ ಹೊರಕ್ಕೆ ಹೋಗುತ್ತಲೂ ಮತ್ತು ಯಜ್ಞಶಾಲೆಯೊಳಕ್ಕೆ ಬರುತ್ತಲೂ ಇತ್ತಲಿಂದತ್ತ ಓಡಾಡುತ್ತಿರುವಳೊ ಅಂತಹ ಯಜ್ಞಕರ್ಮದಲ್ಲಿ ಒರಳಿನಲ್ಲಿ ಹಿಂಡಿದ ಸೋಮರಸವನ್ನು ನಿನ್ನದೇ ಎಂದು ತಿಳಿದುಕೊಂಡು ಸೇವಿಸು.

English Translation.

Indra, in the sacrifice in which the wife of the sacrificer, every now and then enters and goes out of the sacrificial chamber, partake of that Soma expressed in the mortar.

|| ವಿಶೇಷವಿಷಯಗಳು ||

ಯಜ್ಞದಲ್ಲಿ ಯಜಮಾನನ ಪತ್ನಿಯೇ ಮೊದಲಾದ ಸ್ತ್ರೀಯರು ಸಂಭ್ರಮದಿಂದ ಪದೇಪದೆ ಯಜ್ಞಶಾಲೆಯನ್ನು ಪ್ರವೇಶಮಾಡುವುದು ಮತ್ತು ಯಜ್ಞಶಾಲೆಯಿಂದ ಹೊರಗೆ ಹೋಗುವುದೂ ಮೊದಲಾದ ಆಗಮನ ನಿರ್ಗಮನಗಳಿಂದ ಶೋಭಿಸುತ್ತಿರುವ ಯಜ್ಞಶಾಲೆಯೆಂದು ಋಷಿಯು ವರ್ಣನೆ ಮಾಡಿರುವನು.

**ಅಪಚ್ಯವಂ ಉಪಚ್ಯವಂ--ಚ್ಯುಙ್ ಗತೌ |** ಅಪ ಮತ್ತು ಉಪ ಎಂಬ ಉಪಸರ್ಗದಿಂದ ಕೂಡಿದ ಈ ಗತ್ಯರ್ಥಕ ಧಾತುವಿನ ರೂಪಗಳಿಗೆ ನಿರ್ಗಮನ ಮತ್ತು ಪ್ರವೇಶಗಳೆಂಬ ಅರ್ಥವು ಯುಕ್ತವಾಗಿರುವುದು.

**ಶಿಕ್ಷತೇ**—ಅನೇಕಾವರ್ತಿ ಅಭ್ಯಾಸಮಾಡುವಂತೆ ಸ್ತ್ರೀಯರ ಆಗಮನ ನಿರ್ಗಮನಗಳು ಇರುವುದರಿಂದ ಇಲ್ಲಿ ಋಷಿಯು ಅಭ್ಯಾಸಾರ್ಥವನ್ನು ಹೇಳುವ ಶಿಕ್ಷತೇ ಎಂಬ ಶಬ್ದವನ್ನು ಪ್ರಯೋಗಿಸಿರುವನು.

|| ವ್ಯಾಕರಣಪ್ರಕ್ರಿಯಾ ||

**ಅಪಚ್ಯವಮ್**—ಚ್ಯುಙ್ ಗತೌ ಧಾತು. ಭ್ವಾದಿ. **'ಋದೋರಪ್'** (ಪಾ. ಸೂ. ೩-೩-೫೭) ಎಂಬುದರಿಂದ ಉವರ್ಣಾಂತವಾದುದರಿಂದ ಅಪ್ ಪ್ರತ್ಯಯ ಬರುತ್ತದೆ. ಅಪ್ ಪರದಲ್ಲಿರುವಾಗ ಧಾತುವಿಗೆ ಗುಣಾವಾದೇಶಗಳು ಬರುತ್ತವೆ. ಅಪ ಉಪಸರ್ಗ ಸೇರಿದರೆ ಅಪಚ್ಯವಮ್ ಎಂದು ರೂಪವಾಗುತ್ತದೆ. **'ಥಾಥಘಞ್-'** (ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರವು ಬರುತ್ತದೆ.

**ಉಪಚ್ಯವಮ್**—ಇದರ ಪ್ರಕ್ರಿಯೆಯೂ ಪೂರ್ವದಂತೆಯೇ ಆಗುತ್ತದೆ. ಉಪ ಎಂಬುದು ಉಪಸರ್ಗ ಮಾತ್ರ ಬೇರೆಯಾಗಿದೆ.

**ಶಿಕ್ಷತೇ**—ಶಿಕ್ಷ ವಿದ್ಯೋಪಾದಾನೇ ಧಾತು. ಭ್ವಾದಿ ಲಟ್ ಪ್ರಥಮಪುರುಷ ಏಕವಚನದಲ್ಲಿ ಶಿಕ್ಷತೇ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **'ತಾಸ್ಯನುದಾತ್ತೇತ್-'** (ಪಾ ಸೂ. ೬-೧-೧೮೬) ಎಂಬ ಸೂತ್ರದಿಂದ ಅನುದಾತ್ತವಾಗುತ್ತದೆ.

ಆಗ ಧಾತುವಿನ ಅಂತೋದಾತ್ತ ಸ್ವರವೇ ಉಳಿಯುತ್ತದೆ. ಶಿಕ್ಷತೇ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ಆದಿಯಲ್ಲಿ ಯತ್ರ ಎಂಬ ಪದವಿರುವುದರಿಂದ ಅದರ ಸಂಬಂಧ ಧಾತುವಿಗೆ ಇರುವುದರಿಂದ 'ನಿಪಾತೈರ್ಯದ್ಯದಿ-' (ಪಾ. ಸೂ. ೮-೧-೩೦) ಎಂಬುದರಿಂದ ನಿಘಾತ ಪ್ರತಿಷೇಧಿ ಬರುತ್ತದೆ. ॥ ೩ ॥

॥ ಸಂಹಿತಾಪಾಠಃ ॥

ಯತ್ರ ಮನ್ಥಾಂ ವಿಬಧ್ನತೇ ರಶ್ಮೀನ್ಯಮಿತವಾ ಇವ ।
ಉಲೂಖಲಸುತಾನಾಮವೇದ್ವಿನ್ದ್ರ ಜಲ್ಗುಲಃ ॥ ೪ ॥

॥ ಪದಪಾಠಃ ॥

ಯತ್ರ । ಮನ್ಥಾಂ । ವಿऽಬಧ್ನತೇ । ರಶ್ಮೀನ್ । ಯಮಿತವೈऽಇವ ।
ಉಲೂಖಲऽಸುತಾನಾಂ । ಅವ । ಇತ್ । ಊಂ ಇತಿ । ಇನ್ದ್ರ । ಜಲ್ಗುಲಃ ॥ ೪ ॥

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ಕರ್ಮಣಿ ಮಂಥಾಮಾಶಿರಮಥನಹೇತುಂ ಮಂಥಾನಂ ವಿಬಧ್ನಂತಿ । ತತ್ರ ದೃಷ್ಟಾಂತಃ । ರಶ್ಮೀನಶ್ವಬಂಧನಾರ್ಥಾನ್ಪ್ರಗ್ರಹಾನ್ಯಮಿತವಾ ಇವ । ನಿಯಂತುಮಿವ । ಅನ್ಯತ್ಪೂರ್ವವತ್ ॥ ಮಂಥಾಂ । ಪಥಿಮಥ್ಯೃಭುಕ್ಷಾಮಾತ್ । ೭-೧-೮೫ । ಇತಿ ದ್ವಿತೀಯಾಯಾಮಪಿ ವ್ಯತ್ಯಯೇನಾತ್ವಂ । ಪ್ರಾತಿಪದಿಕಸ್ವರೇಣಾಂತೋದಾತ್ತತ್ವೇ ಪ್ರಾಪ್ತೇ ಪಥಿಮಥೋಃ ಸರ್ವನಾಮಸ್ಥಾನೇ । ಪಾ. ೬-೧-೧೯೯ । ಇತ್ಯಾದ್ಯುದಾತ್ತತ್ವಂ । ಯದ್ವಾ । ಮಥ್ಯತೇऽನಯೇತಿ ಮಂಥಾ । ಮಥಿ ವಿಲೋಡನ ಇತ್ಯಸ್ಮಾದ್ಧಲಶ್ಚೇತಿ ಕರಣೇ ಘಞ್ । ತತಷ್ಟಾಪ್ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ವಿಬಧ್ನತೇ । ಬಂಧ ಬಂಧನೇ । ಕ್ರ್ಯಾದಿಭ್ಯಃ ಶ್ನಾ । ಅನಿದಿತಾಮಿತಿ ನಲೋಪಃ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಪ್ರತ್ಯಯಸ್ವರಃ । ತಿಙಿ ಚೋದಾತ್ತವತೀತಿ ಗತೇರ್ನಿಘಾತಃ । ಯಮಿತವೈ । ಯಮ ಉಪರಮೇ । ತುಮರ್ಥೇ ಸೇಸೇನಿತಿ ತವೈಪ್ರತ್ಯಯಃ । ಇಡಾಗಮಶ್ಛಾಂದಸಃ । ಯದ್ವಾ । ಣ್ಯಂತಾತ್ತವೈಪ್ರತ್ಯಯಸ್ಯೇಡಾಗಮೇ ಸತಿ ಣಿಲೋಪಶ್ಛಾಂದಸಃ । ಅಂತಶ್ಚ ತವೈ ಯುಗಪತ್ । ಪಾ. ೬-೧-೨೦೦ । ಇತ್ಯಾದ್ಯಂತಯೋರುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಯತ್ರ**—ಯಾವ ಯಜ್ಞಕರ್ಮದಲ್ಲಿ । **ರಶ್ಮೀನ್**—ಕಡಿವಾಣಗಳ ಲಗಾಮನ್ನು । **ಯಮಿತವೈ ಇವ**—(ಕುದುರೆಗಳನ್ನು) ತಡೆಯುವುದಕ್ಕಾಗಿ ಕಟ್ಟುವಂತೆ । **ಮಂಥಾಂ**—ಕಡೆಯುವ ಕೋಲನ್ನು । **ವಿಬಧ್ನತೇ**—(ಹಗ್ಗಗಳಿಂದ) ಕಟ್ಟುತ್ತಾರೋ (ಆ ಯಜ್ಞಕರ್ಮದಲ್ಲಿ) । **ಉಲೂಖಲಸುತಾನಾಂ**—ಒರಳಿನಲ್ಲಿ ಹಿಂಡಿದ (ಸೋಮರಸವನ್ನು) । **ಅವೇತ್ ಉ**—(ನಿನ್ನದೇ ಎಂದು) ತಿಳಿದು । **ಜಲ್ಗುಲಃ**—ಸೇವಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಯಜ್ಞಕರ್ಮದಲ್ಲಿ ಕುದುರೆಯನ್ನು ತಡೆಯುವುದಕ್ಕಾಗಿ ಕಡಿವಾಣ ಲಗಾಮನ್ನು ಕಟ್ಟುವಂತೆ ಕಡೆಯುವ ಕೋಲನ್ನು ಹಗ್ಗಗಳಿಂದ ಕಟ್ಟುತ್ತಾರೋ ಆ ಯಜ್ಞಕರ್ಮದಲ್ಲಿ ಒರಳಿನಲ್ಲಿ ಹಿಂಡಿದ ಸೋಮರಸವನ್ನು ನಿನ್ನದೇ ಎಂದು ತಿಳಿದುಕೊಂಡು ಸೇವಿಸು.

## English Translation.

Indra, where they bind the churning staff with ropes like reins to restrain (a horse), partake of that Soma expressed in the mortar.

॥ ವಿಶೇಷ ವಿಷಯಗಳು ॥

ಈ ಋಕ್ಕಿನಲ್ಲಿ ಯಜ್ಞಕ್ಕೆ ಬೇಕಾಗುವ ತುಪ್ಪ ಮೊದಲಾದ ವಸ್ತುಗಳನ್ನು ಪಡೆಯುವುದಕ್ಕೆ ಕಡಗೋಲಿನಿಂದ ಮೊಸರನ್ನು ಕಡೆಯುವುದನ್ನು ವರ್ಣಿಸುವಾಗ ಆ ಕಡಗೋಲಿಗೆ ಕಟ್ಟುವ ಹಗ್ಗವನ್ನು ಕುದುರೆಯನ್ನು ಕಟ್ಟುವ ಹಗ್ಗ ಅಥವಾ ಲಗಾಮಿಗೆ ಹೋಲಿಸಿ ಋಷಿಯು ವರ್ಣಿಸಿರುವನು. ಕುದುರೆಗೆ ಲಗಾಮನ್ನು ಕಟ್ಟುವುದರಿಂದ ಅದು ಸ್ವೇಚ್ಛೆಯಾಗಿ ಹೋಗದೆ ನಮ್ಮ ಇಚ್ಛಾನುಸಾರ ನಡೆಯುವಂತೆ ಕಡಗೋಲಿಗೆ ಹಗ್ಗವನ್ನು ಕಟ್ಟುವುದರಿಂದ ಅದು ಸ್ಥಳಪಲ್ಲಟವಿಲ್ಲದೆ ನಮ್ಮ ನಿಯಂತ್ರಣಕ್ಕೆ ಒಳಪಟ್ಟು ಕೆಲಸಮಾಡುವುದು ಎಂದು ಉಪಮಾನವನ್ನು ಹೇಳಿ ಇಂತಹ ಮಥನಾದಿ ಕಾರ್ಯಗಳಿಂದ ಶೋಭಿಸುತ್ತಿರುವ ಯಜ್ಞಕರ್ಮವೆಂದು ಋಷಿಯು ವರ್ಣನೆ ಮಾಡಿರುವನು.

**ಮಂಥಾಂ—ಮಥಿ ವಿಲೋಡನೇ । ಮಥ್ಯತೇಽನಯೇತಿ ಮಂಥಾ ।** ಕಡೆಯುವುದಕ್ಕೆ ಉಪಯೋಗಿಸುವ ಮಂಥ ಅಥವಾ ಕಡಗೋಲು.

**ರಶ್ಮೀನ್ ಯಮಿತವಾಇವ**—ಇಲ್ಲಿ ಅಶ್ವಶಬ್ದವು ನಿರ್ದಿಷ್ಟವಾಗಿಲ್ಲದಿದ್ದರೂ ಅರ್ಥವು ಹೊಂದುವುದಕ್ಕಾಗಿ ಅಶ್ವವನ್ನು ಕಟ್ಟುವ ಹಗ್ಗದಂತೆ ಎಂದು ಅರ್ಥವಿವರಣೆ ಮಾಡಿರುವದು. ರಶನಾ ಎಂದರೆ ಹಗ್ಗವೆಂದರ್ಥವಿದ್ದರೂ ರಶ್ಮಿ ಶಬ್ದಕ್ಕೆ ಈ ಅರ್ಥವು ಹೇಗಾಯಿತು ಎಂಬುದನ್ನು ಭಾಷ್ಯಕಾರರು ವಿವರಿಸಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಮಂಥಾಮ್**—ಮಥಿನ್ ಶಬ್ದದ ಮೇಲೆ ದ್ವಿತೀಯಾ ಏಕವಚನ ಪರದಲ್ಲಿರುವಾಗ ವ್ಯತ್ಯಯದಿಂದ **'ಪಥಿಮಥ್ಯೃಭುಕ್ಷಾಮಾತ್'** (ಪಾ. ಸೂ. ೭-೧-೮೫) ಎಂಬುದರಿಂದ ಸುಪರದಲ್ಲಿ ವಿಧಿಸಿರುವ ಆತ್ವವು ಬರುತ್ತದೆ.

**'ಇತೋತ್ಸರ್ವನಾಮಸ್ಥಾನೇ'** (ಪಾ. ಸೂ. ೭-೧-೮೬) ಎಂಬುದರಿಂದ ಇಕಾರಕ್ಕೆ ಅಕಾರಾದೇಶ ಬರುತ್ತದೆ. **'ಥೋಂಥಃ'** (ಪಾ. ಸೂ. ೭-೧-೮೭) ಎಂಬುದರಿಂದ ಸರ್ವನಾಮಸ್ಥಾನ ಪರದಲ್ಲಿರುವಾಗ ಥಕಾರಕ್ಕೆ ನ್ಥಾದೇಶ ಬರುತ್ತದೆ. ಮಂಥಾ+ಅಮ್, ಎಂದಿರುವಾಗ **'ಅಮಿಪೂರ್ವಃ'** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವ ರೂಪ ಬಂದರೆ ಮಂಥಾಂ ಎಂದು ರೂಪವಾಗುತ್ತದೆ. ಪ್ರಾತಿಪದಿಕ ಸ್ವರದಿಂದ ಅಂತೋದಾತ್ತವು ಪ್ರಾಪ್ತವಾದರೆ **'ಪಥಿಮಥೋಃ ಸರ್ವನಾಮಸ್ಥಾನೇ'** (ಪಾ. ಸೂ. ೬-೧-೧೯೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ **'ಮಥ್ಯತೇಽನಯಾ ಇತಿ ಮಂಥಾ'** ಮಥಿ ವಿಲೋಡನೇ ಧಾತು. **'ಹಲಶ್ಚ'** (ಪಾ. ಸೂ. ೩-೩-೧೨೧) ಎಂಬುದರಿಂದ ಇದಕ್ಕೆ ಘಞ್ ಪ್ರತ್ಯಯ ಬರುತ್ತದೆ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ ಬರುತ್ತದೆ. ಮಂಥ ಎಂದಿರುವಾಗ **'ಅಜಾದ್ಯತಷ್ಟಾಪ್'** ಎಂಬುದರಿಂದ ಟಾಪ್ ಪ್ರತ್ಯಯ ಬಂದರೆ ಮಂಥಾ ಎಂದು ರೂಪವಾಗುತ್ತದೆ. ಞಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತ ಸ್ವರವು ಬರುತ್ತದೆ.

**ವಿಬಧ್ನತೇ**—ಬಂಧ ಬಂಧನೇ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಬಹುವಚನ ಪರದಲ್ಲಿರುವಾಗ **'ಕ್ರ್ಯಾದಿಭ್ಯಃ ಶ್ನಾ'** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣಪ್ರತ್ಯಯ ಬರುತ್ತದೆ. ಅದು ಅಪಿತ್ತಾದುದ ರಿಂದ ಙಿತ್ತಾಗುತ್ತದೆ. ಆದುದರಿಂದ **'ಅನಿದಿತಾಂ ಹಲ ಉಪಧಾಯಾಃ-'** (ಪಾ. ಸೂ. ೬-೪-೨೪) ಎಂಬ ಸೂತ್ರದಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ಹ್ರಸ್ವಾಕಾರ ಪರದಲ್ಲಿ ಇಲ್ಲದಿರುವುದರಿಂದ ಝ ಪ್ರತ್ಯಯಕ್ಕೆ ಅತಾದೇಶ ಬರುತ್ತದೆ. **'ಟಿತಆತ್ಮನೇ-'** (ಪಾ. ಸೂ. ೩-೪-೭೯) ಎಂಬುದರಿಂದ ಏತ್ವ ಬರುತ್ತದೆ. ಬಧ್ನಾ+ಅತೇ, ಎಂದಿರುವಾಗ **'ಶ್ನಾಭ್ಯಸ್ತಯೋರಾತಃ'** (ಪಾ. ಸೂ. ೬-೪-೧೧೨) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಲೋಪ ಬಂದು, ಬಧ್ನತೇ ಎಂದು ಪ್ರಕೃತ ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಮಧ್ಯೋದಾತ್ತವಾಗುತ್ತದೆ. **'ತಿಙಿ ಚೋದಾತ್ತವತಿ'** (ಪಾ. ಸೂ. ೮-೧-೭೧) ಎಂಬುದರಿಂದ ಉದಾತ್ತಸ್ವರವುಳ್ಳ ತಿಙಂತ ಪರದಲ್ಲಿರುವುದ ರಿಂದ ವಿ ಎಂಬ ಗತಿಗೆ ನಿಘಾತಸ್ವರ ಬರುತ್ತದೆ.

**ಯಮಿತವೈ**—ಯಮ ಉಪರಮೇ ಧಾತು. ಭ್ವಾದಿ. ಯಂತುಂ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. **'ತುಮರ್ಥೇ ಸೇಸೇನಸೆ-'** (ಪಾ. ಸೂ. ೩-೪-೯) ಎಂಬುದರಿಂದ ತವೈಪ್ರತ್ಯಯ ಬರುತ್ತದೆ. ಧಾತುವು ಅನಿಟ್ಟಾ ದರೂ ತವೈಪ್ರತ್ಯಯಕ್ಕೆ ಇಡಾಗಮವನ್ನು ಛಾಂದಸವಾಗಿ ಹೇಳಬೇಕು. ಯಮಿತವೈ ಎಂದು ರೂಪವಾಗುತ್ತದೆ. ಅಥವಾ ಚೌರಾದಿಕವಾದ ಈ ಧಾತುವಿಗೆ ಸ್ವಾರ್ಥಿಕವಾಗಿ ಣಿಚ್ ಬರುವುದು. ಆಗ ಸ್ವರಸವಾಗಿ ಇಡಾಗಮ ಬರುತ್ತದೆ. **'ಣೇರನಿಟಿ'** (ಪಾ. ಸೂ. ೬-೪-೫೧) ಎಂಬುದರಿಂದ ಇಡಾಗಮ ಬರಲು ಇಲ್ಲಿಯೂ ಅವಕಾಶವಿರುವುದರಿಂದ (ಇಡಾದಿಯಾಗಿರುವುದರಿಂದ ಅನಿಟಾದಿಪ್ರತ್ಯಯ ಪರದಿಲ್ಲ) ಣಿಲೋಪವನ್ನು ಛಾಂದಸವೆಂದು ಸ್ವೀಕರಿಸಬೇಕು. **'ಅಂತಶ್ಚ ತವೈ ಯುಗಪತ್'** (ಪಾ ಸೂ. ೬-೧-೨೦೦) ಎಂಬುದರಿಂದ ಆದಿಗೂ ಅಂತಕ್ಕೂ ಏಕಕಾಲದಲ್ಲಿ ಉದಾತ್ತಸ್ವರ ಬರುವುದು. ಯಕಾರೋತ್ತರ ಅಕಾರವೂ ವಕಾರೋತ್ತರ ಐಕಾರವೂ ಉದಾತ್ತವಾಗುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಯಚ್ಚಿದ್ಧಿ ತ್ವಂ ಗೃಹೇಗೃಹ ಉಲೂಖಲಕ ಯುಜ್ಯಸೇ ।
ಇಹ ದ್ಯುಮತ್ತಮಂ ವದ ಜಯತಾಮಿವ ದುಂದುಭಿಃ ॥ ೫ ॥

॥ ಪದಪಾಠಃ ॥

ಯತ್ । ಚಿತ್ । ಹಿ । ತ್ವಂ । ಗೃಹೇಽಗೃಹೇ । ಉಲೂಖಲಕ । ಯುಜ್ಯಸೇ ।
ಇಹ । ದ್ಯುಮತ್ಽತಮಂ । ವದ । ಜಯತಾಂಽಇವ । ದುಂದುಭಿಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಉಲೂಖಲಕ ಯಚ್ಚಿದ್ಧಿ ಯದ್ಯಪಿ ತ್ವಮವಘಾತಾರ್ಥಂ ಗೃಹೇ ಗೃಹೇ ಯುಜ್ಯಸೇ ತಥಾಪೀಹ ವೈದಿಕೇ ಕರ್ಮಣಿ ತೀವ್ರಮುಸಲಪ್ರಹಾರೇಣ ದ್ಯುಮತ್ತಮಮತಿಶಯೇನ ದೀಪ್ತಂ ಪ್ರಭೂತಧ್ವನಿಯುಕ್ತಂ ಶಬ್ದಂ ವದ । ತತ್ರ ದೃಷ್ಟಾಂತಃ । ಜಯತಾಮಿವ ದುಂದುಭಿಃ । ಯಥಾ ಯುದ್ಧೇ ಜಯಂ ಪ್ರಾಪ್ನುವತಾಂ ರಾಜ್ಞಾಂ ದುಂದುಭಿರ್ಮಹಾಂತಂ ಧ್ವನಿಂ ಕರೋತಿ ತದ್ವತ್ । ಉಲೂಖಲಶಬ್ದಂ ಯಾಸ್ಕ ಏವಂ ವ್ಯಾಖ್ಯಾತವಾನ್ । ಉಲೂಖಲಮುರುಕರಂ ವೋರ್ಧ್ವಖಂ ವೋರ್ಕ್ಕರಂ ವೋರು ಮೇ ಕುರ್ವಿತ್ಯಬ್ರವೀತ್ತದುಲೂಖಲಮಭವದುರುಕರಂ ವೈ ತತ್ತದುಲೂಖಲಮಿತ್ಯಾಚಕ್ಷತೇ ಪರೋಕ್ಷೇಣೇತಿ ಚ ಬ್ರಾಹ್ಮಣಂ । ನಿ ೯-೨೦ । ಇತಿ ॥ ಉಲೂಖಲಕ । ಆಪಾದಾದಾವಿತಿ ಪರ್ಯುದಾಸಾದಾಷ್ಟಮಿಕನಿಘಾತಾಭಾವೇ ಷಾಷ್ಠಿಕಮಾದ್ಯುದಾತ್ತತ್ವಂ । ಯುಜ್ಯಸೇ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಯಕ್ಸ್ವರಃ ಶಿಷ್ಯತೇ । ನ ಚ ತಿಙ್ಙತಿಙ ಇತಿ ನಿಘಾತಃ । ನಿಪಾತೈರ್ಯದ್ಯದಿಹಂತೇತಿ ಪ್ರತಿಷೇಧಾತ್ । ದ್ಯುಮತ್ತಮಂ । ದೀವ್ಯತೇರ್ದೀಪ್ತ್ಯರ್ಥಸ್ಯ ಸಂಪದಾದಿಲಕ್ಷಣಃ ಕ್ವಿಪ್ । ದಿವ ಉತ್ । ಪಾ. ೬-೧-೧೩೧ । ಇತ್ಯುತ್ವಂ । ಯಣಾದೇಶೇ ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ನನು ದಿವ ಉದಿತ್ಯತ್ರ ಪ್ರಾತಿಪದಿಕಂ ಗೃಹ್ಯತೇ ನ ಧಾತುರಿತ್ಯುಕ್ತತ್ವಾತ್ । ಅಕ್ಷದ್ಯೂರಿತ್ಯಾದಾವಿವಾತ್ರಾಪ್ಯೂಠಾ ಭವಿತವ್ಯಂ । ಪಾ. ೬-೪-೧೯ । ಏವಂ ತರ್ಹಿ ದೀಪ್ತಿಮತ್ಸ್ವರ್ಗವಾಚಕೇನ ದಿವ್‌ಪ್ರಾತಿಪದಿಕೇನ ದೀಪ್ತಿರ್ಲಕ್ಷ್ಯತ ಇತ್ಯುತ್ವಂ ಭವಿಷ್ಯತಿ ॥

|| ಪ್ರತಿಪದಾರ್ಥ ||

**ಉಲೂಖಲಕ**—ಎಲೈ ಒರಳೇ | **ಯಚ್ಚಿದ್ಧಿ**—ಒಂದುವೇಳೆ | **ಗೃಹೇ ಗೃಹೇ**—ಪ್ರತಿಯೊಂದು ಮನೆಯಲ್ಲಿಯೂ | **ಯುಜ್ಯಸೇ**—ಇರುವೆಯಾದರೂ | **ಇಹ**—(ಮುಖ್ಯವಾಗಿ) ಈ ವೈದಿಕಕರ್ಮದಲ್ಲಿ | **ಜಯತಾಂ**—ಜಯಶಾಲಿಗಳ | **ದುಂದುಭಿಃ ಇವ**—ದುಂದುಭಿಯ ಜಯಘೋಷದಂತೆ | **ದ್ಯುಮತ್ತಮಂ**—ಅತ್ಯಂತ ಕಾಂತಿಯುತವಾದ ಘೋಷವನ್ನು | **ವದ**—ಉಂಟುಮಾಡು.

|| ಭಾವಾರ್ಥ ||

ಎಲೈ ಒರಳೇ, ನೀನು ಕುಟ್ಟುವುದಕ್ಕಾಗಿ ಪ್ರತಿಯೊಂದು ಮನೆಯಲ್ಲಿ ಇರುವುದು ಸಹಜವಾದರೂ ಸಹ ಮುಖ್ಯವಾಗಿ ಈ ವೈದಿಕಕರ್ಮದಲ್ಲಿ ಮಾತ್ರ ವಿಜಯಿಗಳ ದುಂದುಭಿಘೋಷದಂತೆ ಕಾಂತಿಯುತವಾದ ಎಂದಲೆ ಎಲ್ಲರಿಗೂ ಕೇಳಿಸುವಂತೆ, ಘೋಷವನ್ನು ಉಂಟುಮಾಡು. ಎಂದರೆ ಘಟ್ಟಿಯಾಗಿ ಶಬ್ದಮಾಡು.

English Translation.

O Mortar, although you are employed in every house (for household purposes), make a most roaring sound (in the sacrifice) like the drums of victorious warriors.

|| ವಿಶೇಷವಿಷಯಗಳು ||

**ಗೃಹೇ ಗೃಹೇ**—ಪ್ರತಿ ಮನೆಯಲ್ಲಿಯೂ; ಧಾನ್ಯವನ್ನು ಕುಟ್ಟುವುದಕ್ಕಾಗಿ ಒರಳು ಪ್ರತಿ ಮನೆಯಲ್ಲಿಯೂ ಇದ್ದೇ ಇರುವುದು.

**ಉಲೂಖಲಕ**—ಒರಳು, mortar, ಇಲ್ಲಿ ಉಲೂಖಲ ಎಂದು ಅಚೇತನವಾದ ಒರಳನ್ನು ಸಂಬೋಧನೆ ಮಾಡಿದ್ದರೂ ಈ ಉಲೂಖಲಾಭಿಮಾನಿಯಾದ ದೇವತೆಯನ್ನುದ್ದೇಶಿಸಿ ಸಂಬೋಧನೆಮಾಡಿರುವುದೆಂದು ತಿಳಿಯ ಬೇಕು ಉಲೂಖಲಶಬ್ದದ ಅರ್ಥಾದಿವಿವರಣೆಗಳನ್ನು ಈ ಸೂಕ್ತದ ಮೊದಲನೆಯ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಿದ್ದೇವೆ.

**ದ್ಯುಮತ್ತಮಂ—ಅತಿಶಯೇನ ದೀಪ್ತಂ | ಪ್ರಭೂತಧ್ವನಿಯುಕ್ತಂ |** ಅತಿಶಯವಾಗಿ ಕಾಂತಿಯುಳ್ಳ ಎಂದರೆ ಬಹಳ ಘಟ್ಟಿಯಾದ ಧ್ವನಿಯಿಂದ ಕೂಡಿದ. ಒರಳಿನಲ್ಲಿ ಸೋಮಲತೆಗಳನ್ನು ಹಾಕಿ ಗ್ರಾವದಿಂದ ಕುಟ್ಟು ತ್ತಿರುವಾಗ ಘಟ್ಟಿಯಾಗಿ ಧ್ವನಿಯು ಕೇಳಿಸುತ್ತಿರುವುದೆಂದಭಿಪ್ರಾಯವು.

**ಜಯತಾಮಿನ ದುಂದುಭಿಃ—ಯಥಾ ಯುದ್ಧೇ ಜಯಂ ಪ್ರಾಪ್ನುವತಾಂ ರಾಜ್ಞಾಂ ದುಂದುಭಿರ್ಮಹಾಂತಂ ಧ್ವನಿಂ ಕರೋತಿ ತದ್ವತ್ |** ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಜಯಶಾಲಿಗಳಾಗಿ ಹಿಂತಿರುಗುವ ರಾಜರು ಅಥವಾ ಯುದ್ಧಭಟರು ತಮ್ಮ ವಿಜಯಸೂಚಕವಾದ ನಗಾರಿಯನ್ನು ಘಟ್ಟಿಯಾಗಿ ಬಾರಿಸುವಂತೆ ಎಂದಭಿಪ್ರಾಯವು.

**ದುಂದುಭಿಃ**—ಭೇರಿ, ನಗಾರಿ.

॥ ವ್ಯಾಕರಣಪ್ರಕ್ರಿಯಾ ॥

**ಉಲೂಖಲಕ**—ಸಂಬುದ್ಧಿ ಏಕವಚನರೂಪ **'ಅಸಾದಾದೌ'** ಎಂದು ನಿಷೇಧಮಾಡಿರುವುದರಿಂದ ಆಷ್ಟಮಿಕ ಆಮಂತ್ರಿತನಿಘಾತವು ಬರುವುದಿಲ್ಲ. ಷಾಷ್ಠಿಕವಾದ ಆದ್ಯುದಾತ್ತಸ್ವರವು ಬರುತ್ತದೆ. ಉ ಎಂಬುದು ಉದಾತ್ತವಾಗುತ್ತದೆ.

**ಯುಜ್ಯಸೇ**— ಯುಜ ಸಮಾಧೌ ಧಾತು. ಕರ್ಮಣಿ ಲಟ್ ಮಧ್ಯಮಪುರುಷೈಕವಚನದಲ್ಲಿ ಯುಜ್ಯಸೇ ಎಂದು ರೂಪವಾಗುತ್ತದೆ. ಯಕ್ ಅಕಾರಾಂತವಾದುದರಿಂದ ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **'ತಾಸ್ಯನುದಾತ್ತೇತ್-'** (ಪಾ. ಸೂ. ೬-೧-೧೮೬) ಎಂಬ ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಯಕ್ಕಿನ ಸ್ವರವೇ ಉಳಿಯುವುದು. ಯುಜ್ಯಸೇ ಎಂಬುದು ಮಧ್ಯೋದಾತ್ತವಾದ ಶಬ್ದವಾಗುತ್ತದೆ. **'ತಿಙ್ಙತಿಙಃ'** (ಪಾ. ಸೂ. ೮-೧-೨೮) ಎಂಬುದರಿಂದ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರಲಿ ಎನ್ನಲು ಅವಕಾಶವಿಲ್ಲ. ಯಚ್ಚಿದ್ಧಿ ಎಂಬಲ್ಲಿರುವ ಯಚ್ಛಬ್ದದ ಯೋಗವಿರುವುದರಿಂದ **'ನಿಪಾತೈರ್ಯ್ಯದ್ಯದಿಹಂತ-'** (ಪಾ. ಸೂ. ೮-೧-೩೦) ಎಂಬುದರಿಂದ ಅದಕ್ಕೆ ಪ್ರತಿಷೇಧ ಬರುವುದು.

**ದ್ಯುಮತ್ತಮಮ್**—ದಿವ್ ಧಾತುವಿಗೆ ವಿಜಿಗೀಷಾದಿ ಅನೇಕಾರ್ಥಗಳು ಉಕ್ತವಾಗಿರುತ್ತವೆ. ದೀಪ್ತ್ಯರ್ಥಕ ವಾಗಿ ಇಲ್ಲಿ ಸ್ವೀಕರಿಸಿದೆ. ಇದು ಸಂಪದಾದಿಯಲ್ಲಿ ಸೇರಿರುವುದರಿಂದ **'ಸಂಪದಾದಿಭ್ಯಃ ಕ್ವಿಪ್'** (ವಾ. ೨೨೩) ಎಂಬುದರಿಂದ ಕ್ವಿಪ್ ಪ್ರತ್ಯಯ ಬರುತ್ತದೆ. ಕ್ವಿಪ್ಪಿನಲ್ಲಿ ಸರ್ವವೂ ಲೋಪವಾಗುತ್ತವೆ. **'ದಿವ ಉತ್'** (ಪಾ. ಸೂ. ೬-೧-೧೩೧) ಎಂಬುದರಿಂದ ಉಕಾರವು ಅಂತಾದೇಶವಾಗಿ ಬರುವುದು. ದಿ+ಉ, ಎಂದಿರುವಾಗ ಯಣಾದೇಶ ಬರುತ್ತದೆ. ಅಸ್ಯಾಸ್ತಿ ಎಂಬರ್ಥದಲ್ಲಿ ಪುನಃ ದ್ಯು ಶಬ್ದದ ಮೇಲೆ ಮತುಪ್ ಪ್ರತ್ಯಯ ಬರುತ್ತದೆ. ಆಮೇಲೆ ಅತಿಶಯಾರ್ಥದಲ್ಲಿ ಮತುಬಂತದ ಮೇಲೆ ತಮಪ್ ಪ್ರತ್ಯಯ, ದ್ಯುಮತ್ತಮಂ ಎಂದು ರೂಪವಾಗುತ್ತದೆ. ಇಲ್ಲಿ ಹ್ರಸ್ವದ ಪರದಲ್ಲಿ ಮತುಪ್ ಬಂದಿರುವುದರಿಂದ **'ಹ್ರಸ್ವನುಡ್ಭ್ಯಾಂ ಮತುಪ್'** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರವು ಬರುತ್ತದೆ. ಮತುಪೂ ಅಕಾರವು ಪಿತ್ಸ್ವರವನ್ನು ಬಾಧಿಸಿ ಉದಾತ್ತಸ್ವರವನ್ನು ಹೊಂದುವುದು. ಇಲ್ಲಿ ಒಂದು ಪೂರ್ವಪಕ್ಷವು ಉಂಟಾಗುತ್ತದೆ. **'ದಿವ ಉತ್'** (ಪಾ. ಸೂ. ೬-೧-೧೩೧) ಎಂದು ಹಿಂದೆ ಉತ್ವವನ್ನು ಮಾಡಿದೆಯಷ್ಟೆ. ಆದರೆ ಅಲ್ಲಿ ಪ್ರಾತಿಪದಿಕಕ್ಕೆ ಉತ್ವವನ್ನು ವಿಧಿಸಿರುತ್ತಾರೆ. ಇಲ್ಲಿ ಧಾತುವಾಗಿದೆ. ಆದುದರಿಂದ ಅಕ್ಷದ್ಯೂಃ ಇತ್ಯಾದಿ ಸ್ಥಳದಲ್ಲಿ ಹೇಗೆ **'ಚ್ಛ್ವೋಃ ಶೂಟ್ ಅನುನಾಸಿಕೇ ಚ'** (ಪಾ. ಸೂ. ೬-೪-೧೯) ಎಂಬುದರಿಂದ ಊಠಾದೇಶ ಬಂದಿದೆಯೋ ಅದರಂತೆ ಇಲ್ಲಿಯೂ ಊಠಾದೇಶವು ಪ್ರಾಪ್ತವಾಗುತ್ತದೆ. ಆದುದರಿಂದ ಉಕ್ತರೂಪ ಸಿದ್ಧಿಯಾಗಲಾರದು. ಆಗ ಬೇರೆ ರೀತಿಯಿಂದ ರೂಪಪ್ರಕ್ರಿಯೆಯನ್ನು ಹೇಳಬೇಕು. ದಿವ್ ಎಂಬುದು ಹಿಂದೆ ಹೇಳಿದಂತೆ ಕ್ರಿಯಾಪದವು ಬಂದಿದೆ. ಅದರಂತೆ ದೀಪ್ತಿವಿಶಿಷ್ಟವಾದ ಸ್ವರ್ಗವಾಚಕವಾದ ಒಂದು ಪ್ರಾತಿಪದಕವೂ ಇದೆ. ಆಗ ಪ್ರಾತಿಪದಕವಾದ ದಿವ್ ಎಂಬುದಕ್ಕೆ ಹಿಂದೆ ಹೇಳಿದಂತೆ ಉತ್ವವು ಬರುತ್ತದೆ. ಪ್ರಕೃತಾರ್ಥಾನ್ವಯಸಿದ್ಧಿಗೋಸ್ಕರ ವಿಶಿಷ್ಟವಾಚಕಶಬ್ದಕ್ಕೆ ವಿಶೇಷಣದಲ್ಲಿ ದೀಪ್ತಿಯಲ್ಲಿ ಲಕ್ಷಣಾವೃತ್ತಿಯಿಂದ ಅರ್ಥವನ್ನು ಹೇಳಬೇಕು. ಲಕ್ಷಣಾದಿಂದ ದೀಪ್ತಿಮಾತ್ರ ಅರ್ಥವು ತೋರುತ್ತದೆ ಎಂದು ತಾತ್ಪರ್ಯ. ॥ ೫ ॥

|| ಸಂಹಿತಾಪಾಠಃ ||

ಉತ ಸ್ಮ ತೇ ವನಸ್ಪತೇ ವಾತೋ ವಿ ವಾತ್ಯಗ್ರಮಿತ್ ।
ಅಥೋ ಇನ್ದ್ರಾಯ ಪಾತವೇ ಸುನು ಸೋಮಮುಲೂಖಲ ||೬||

|| ಪದಪಾಠಃ ||

ಉತ । ಸ್ಮ । ತೇ । ವನಸ್ಪತೇ । ವಾತಃ । ವಿ । ವಾತಿ । ಅಗ್ರಂ । ಇತ್ ।
ಅಥೋ ಇತಿ । ಇನ್ದ್ರಾಯ । ಪಾತವೇ । ಸುನು । ಸೋಮಂ । ಉಲೂಖಲ ||೬||

|| ಸಾಯಣ ಭಾಷ್ಯಂ ||

ಉತಾಪಿ ಚ ಹೇ ವನಸ್ಪತೇ ಉಲೂಖಲರೂಪ ವೃಕ್ಷ ತೇಽಗ್ರಮಿತ್ತ್ವ ಪುರತ ಏವ ವಾತೋ ವಿ ವಾತಿ ಸ್ಮ । ತ್ವರೋಪೇತಮುಸಲಪ್ರಹಾರೈರ್ವಾಯುರ್ವಿಶೇಷೇಣ ಪ್ರಸರತಿ ಖಲು । ಅಥೋ ಅನಂತರಂ ಹೇ ಉಲೂಖಲ ಇಂದ್ರಾಯೇಂದ್ರೋಪಕಾರಾರ್ಥಂ ಪಾತವೇ ಪಾತುಂ ಸೋಮಂ ಸುನು । ಸೋಮಾಭಿಷವಂ ಕುರು ॥ ವನಸ್ಪತೇ । ಪಾರಸ್ಕರಾದಿತ್ವಾತ್ಸುಟ್ । ಕಾರ್ಯೇ ಕಾರಣಶಬ್ದಃ । ಪಾತವೇ । ಪಾ ಪಾನೇ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ಸುನು । ಉತಶ್ಚ ಪ್ರತ್ಯಯಾದಸಂಯೋಗಪೂರ್ವಾದಿತಿ ಹೇರ್ಲುಕ್ । ವಿಕರಣಸ್ವರೇಣಾಂತೋದಾತ್ತತ್ವಂ । ಪಾದಾದಿತ್ವಾದನಿಘಾತಃ । ಉಲೂಖಲ । ಊರ್ಧ್ವಂ ಖಮಸ್ಯೇತ್ಯುಲೂಖಲಃ । ಪೃಷೋದರಾದಿಃ ॥

|| ಪ್ರತಿಪದಾರ್ಥ ||

**ಉತ**—ಮತ್ತು । **ವನಸ್ಪತೇ**—(ಒರಳಿನ ರೂಪದ) ಎಲೈ ವೃಕ್ಷವೇ (ಅಥವಾ ಮರದಿಂದ ನಿರ್ಮಿತವಾದ ಎಲೈ ಒರಳೇ) । **ತೇ**—ನಿನ್ನ । **ಅಗ್ರಮಿತ್**—ಮುಂದುಗಡೆಯೇನೆ । **ವಾತಃ**—ವಾಯುವು । **ವಿ ವಾತಿ ಸ್ಮ**—ವಿಶೇಷವಾಗಿ ಬೀಸುತ್ತಿದೆ । **ಅಥೋ**—ಆದ್ದರಿಂದಲೇ । **ಉಲೂಖಲ**—ಎಲೈ ಒರಳೇ । **ಇಂದ್ರಾಯ**—ಇಂದ್ರನಿಗೆ । **ಪಾತವೇ**—ಪಾನಮಾಡುವುದಕ್ಕಾಗಿ । **ಸೋಮಂ**—ಸೋಮರಸವನ್ನು । **ಸುನು**—ಹಿಂಡಿ ಸಿದ್ಧಪಡಿಸು ॥

|| ಭಾವಾರ್ಥ ||

ಒರಳಿನ ರೂಪದಲ್ಲಿರುವ ಎಲೈ ವೃಕ್ಷವೇ, ಅಥವಾ ಮರದಿಂದ ಮಾಡಲ್ಪಟ್ಟ ಎಲೈ ಒರಳೇ, ವಾಯುವು ನಿನ್ನ ಮುಂದುಗಡೆಯೇ ವಿಶೇಷವಾಗಿ ಬೀಸುತ್ತದೆ. ಆದ್ದರಿಂದ ಎಲೈ ಒರಳೇ, ಇಂದ್ರನ ಪಾನಾರ್ಥವಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸು.

## English Translation.

And, lord of the forest, the wind is blowing gently over your head ; therefore, O mortar, press out the Soma for Indra to drink.

॥ ವಿಶೇಷವಿಷಯಗಳು ॥

**ವನಸ್ಪತೇ**—ಇಲ್ಲಿ ಉಲೂಖಲವನ್ನು (ಒರಳನ್ನು) ವನಸ್ಪತಿಯೆಂದು ಋಷಿಯು ಸಂಬೋಧನೆಮಾಡಿರುವುದರಿಂದ ಒರಳು ಮರದಿಂದ ಮಾಡಲ್ಪಟ್ಟಿರುವುದೆಂದು ತಿಳಿಯಬೇಕು ಒರಳನ್ನು ಕಲ್ಲಿನಿಂದಲೂ ಮರದಿಂದಲೂ ಮಾಡುವರು. ಇಲ್ಲಿ ಉಪಯೋಗಿಸುತ್ತಿರುವ ಒರಳು ಮರದಿಂದ ಮಾಡಿದ್ದಾಗಿರಬಹುದು. ಆದುದರಿಂದಲೇ ವನಸ್ಪತಿಶಬ್ದವನ್ನು ಇಲ್ಲಿ ಪ್ರಯೋಗಿಸಲಾಗಿದೆ.

**ವಾತೋ ವಿ ವಾತ್ಯಗ್ರಮಿತ್**—ವಾಯುವು ಮುಂದೆ ಅಥವಾ ಮೇಲೆ ಬೀಸುತ್ತಿರುವುದು ಎಂದರೆ ಮುಸಲ (ವನಕೆ) ಪ್ರಹಾರದಿಂದ ವಾಯುಚಲನವಾಗಿ ವಾಯುವು ಬೀಸುವುದೆಂದು ಭಾಷ್ಯಕಾರರು ಹೇಳಿರುವರು. ಆದರೆ ಈ ಅರ್ಥವು ಅಷ್ಟು ಸಮಂಜಸವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ವನಸ್ಪತೇ**—'**ಪಾರಸ್ಕರ ಪ್ರಭೃತೀನಿ ಚ ಸಂಜ್ಞಾಯಾಂ**' (ಪಾ. ಸೂ. ೬-೧-೧೫೭) ಎಂಬುದರಿಂದ ಸುಡಾಗಮ ಬರುತ್ತದೆ. ಸಂಬುದ್ಧಿಯಲ್ಲಿ '**ಹ್ರಸ್ವಸ್ಯಗುಣಃ**' ಎಂಬುದರಿಂದ ಗುಣಬಂದು ಏಙ್ ನಿಮಿತ್ತಕವಾಗಿ ಸುಲೋಪವಾಗುತ್ತದೆ. ಇಲ್ಲಿಯೂ ಲಕ್ಷಣಾಪ್ರಯೋಗ: ಆಯುರ್ಘೃತಂ ಎಂಬಂತೆ ಕಾರ್ಯದಲ್ಲಿ ಕಾರಣಶಬ್ದವು ಪ್ರಯುಕ್ತವಾಗಿದೆ. ವನಸ್ಪತಿಯಿಂದ ಉಂಟಾಗುವುದು ಉಲೂಖಲ. ವನಸ್ಪತಿಯೇ ಅಲ್ಲ. ಲಕ್ಷಣಾದಿಂದ ಈ ರೀತಿ ಶಬ್ದಪ್ರಯೋಗ ಮಾಡಿರುತ್ತಾರೆ.

**ಪಾತವೇ**—ಪಾತುಂ (ಕುಡಿಯಲಿಕ್ಕೆ) ಎಂಬರ್ಥ ತೋರುವಾಗ '**ತುಮರ್ಥೇ ಸೇಸೇನಸೆ**' (ಪಾ. ಸೂ. ೩-೪-೯) ಎಂಬುದರಿಂದ ತುಮುನರ್ಥದಲ್ಲಿ ತವೇನ್ ಪ್ರತ್ಯಯ ಬರುತ್ತದೆ. '**ಞ್ನಿತ್ಯಾದಿರ್ನಿತ್ಯಂ**' (ಪಾ. ಸೂ. ೬-೧-೧೯೭) ಎಂಬುದರಿಂದ ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಸುನು**—ಷುಞ್ ಅಭಿಷವೇ ಧಾತು. ಲೋಟ್ ಮಧ್ಯಮಪುರುಷೈಕವಚನದ ಸಿಪ್ಪಿಗೆ ಹಿ ಆದೇಶಬರುತ್ತದೆ. '**ಸ್ವಾದಿಭ್ಯಃ ಶ್ನುಃ**' (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ ಪ್ರತ್ಯಯ ಬರುತ್ತದೆ. '**ಧಾತ್ವಾದೇಃ ಷಃ ಸಃ**' (ಪಾ. ಸೂ. ೬-೧-೬೪) ಎಂಬುದರಿಂದ ಧಾತುವಿನ ಷಕಾರಕ್ಕೆ ಸಕಾರ ಬರುತ್ತದೆ. ಸುನು-ಹಿ ಎಂದಿರುವಾಗ '**ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್**' (ಪಾ. ಸೂ. ೬-೪-೧೦೬) ಎಂಬುದರಿಂದ ಸಂಯೋಗ ಪೂರ್ವದಲ್ಲಿ ಇಲ್ಲದೇ ಇರುವ ಪ್ರತ್ಯಯದ ಉಕಾರದ ಪರದಲ್ಲಿರುವುದರಿಂದ ಹಿಗೆ ಲುಕ್ ಬರುತ್ತದೆ. ಸುನು ಎಂದು ರೂಪವಾಗುತ್ತದೆ. ವಿಕರಣಸ್ವರವು ಸತಿಶಿಷ್ಟವಾಗುವುದರಿಂದ ಸುನು ಎಂಬುದು ಅಂತೋದಾತ್ತವಾಗುತ್ತದೆ. ಪಾದದ ಆದಿಯಲ್ಲಿರುವುದರಿಂದ '**ಅಪಾದಾದೌ**' ಎಂದು ನಿಷೇಧಮಾಡಿರುವುದರಿಂದ '**ತಿಙ್ಙತಿಙಃ**' (ಪಾ ಸೂ. ೮-೧-೨೮) ಎಂಬುದರಿಂದ ನಿಘಾತಸ್ವರವು ಬರುವುದಿಲ್ಲ.

**ಉಲೂಖಲ—‘ ಊರ್ಧ್ವಂ ಖಂ ಯಸ್ಯ ಸಃ ಉಲೂಖಲಃ ’** ಮೇಲೆ ಆಕಾಶ (ಅವಕಾಶ) ಉಳ್ಳದ್ದು ಎಂದು ತಾತ್ಪರ್ಯ. ಇಲ್ಲಿ ಊರ್ಧ್ವಖ ಎಂದು ರೂಪವಾಗಬೇಕಾಗುತ್ತದೆ ಆದರೆ ಇದು ಪೃಷೋದರಾದಿಯಲ್ಲಿ ಸೇರಿರುವುದರಿಂದ **‘ ಪೃಷೋದರಾದೀನಿ ಯಥೋಪದಿಷ್ಟಂ ’** (ಪಾ. ಸೂ. ೬-೩-೧೦೯) ಎಂಬುದರಿಂದ ವರ್ಣ ಲೋಪ, ವರ್ಣಾಗಮ, ವರ್ಣವಿಪರ್ಯಾಯ ಎಲ್ಲವೂ ಬಂದು ಉಲೂಖಲ ಎಂದು ರೂಪವಾಗಿದೆ. **‘ಆಮಂತ್ರಿತಸ್ಯ ಚ’** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ || ೬ ||

|| ಸಂಹಿತಾಪಾಠಃ ||

ಆಯಜೀ ವಾಜಸಾತಮಾ ತಾ ಹ್ಯು೧ಚ್ಚಾ ವಿಜರ್ಭೃತಃ |
ಹರೀ ಇವಾನ್ಧಾಂಸಿ ಬಪ್ಸತಾ || ೭ ||

|| ಪದಪಾಠಃ ||

ಆಯಜೀ ಇತ್ಯಾಽಯಜೀ | ವಾಜಽಸಾತಮಾ | ತಾ | ಹಿ | ಉಚ್ಚಾ | ವಿಽಜರ್ಭೃತಃ |
ಹರೀ ಇವೇತಿ ಹರೀಽಇವ | ಅನ್ಧಾಂಸಿ | ಬಪ್ಸತಾ || ೭ ||

|| ಸಾಯಣಭಾಷ್ಯಂ ||

ಯೇ ಉಲೂಖಲಮುಸಲೇ ಆಯಜೀ ಸರ್ವತೋ ಯಜ್ಞಸಾಧನೇ ವಾಜಸಾತಮಾ ಅತಿಶಯೇನಾನ್ನಪ್ರದೇ ತಾ ಹಿ ತೇ ಖಲೂಚ್ಚಾ ಪ್ರೌಢಧ್ವನಿರ್ಯಥಾ ಭವತಿ ತಥಾ ವಿಜರ್ಭೃತಃ | ವಿಶೇಷೇಣ ಪುನಃಪುನರ್ವಿಹಾರಂ ಕುರುತಃ | ತತ್ರ ದೃಷ್ಟಾಂತಃ | ಅಂಧಾಂಸ್ಯನ್ನಾನಿ ಚಣಕಾದೀನಿ ಖಾದ್ಯಾನಿ ಬಪ್ಸತಾ ಭಕ್ಷಯಂತೌ ಹರೀ ಇವ ಇಂದ್ರಸ್ಯಾಶ್ವಾವಿವ | ಅತ್ರ ಯಾಸ್ಕ ಏವಂ ವ್ಯಾಚಖ್ಯೌ | ಆಯಜೀ ಆಯಷ್ಟವ್ಯೇ ಅನ್ನಾನಾಂ ಸಂಭಕ್ತೃತಮೇ ತೇ ಹ್ಯುಚ್ಚೈರ್ವಿಹ್ರಿಯೇತೇ ಹರೀ ಇವಾನ್ನಾನಿ ಭುಂಜಾನೇ | ನಿ. ೯-೩೬ | ಇತಿ || ಆಯಜೀ | ಯಜೇರೌಣಾದಿಕಃ ಕರಣ ಇಪ್ರತ್ಯಯಃ | ಕೃದುತ್ತರಪದಪ್ರಕೃತಿಸ್ವರತ್ವಂ | ವಾಜಸಾತಮಾ | ವಾಜಂ ಸನೋತೀತಿ ವಾಜಸಾಃ | ಷಣು ದಾನೇ | ಜನಸನೇತ್ಯಾದಿನಾ ವಿಟ್‌ಪ್ರತ್ಯಯಃ | ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ | ಕೃದುತ್ತರಪದಪ್ರಕೃತಿಸ್ವರತ್ವಂ | ಆತಿಶಾಯನಿಕಸ್ತಮಪ್ | ಸುಪಾಂ ಸುಲುಗಿತಿ ಪೂರ್ವಸವರ್ಣದೀರ್ಘಃ | ವಿಜರ್ಭೃತಃ | ಹೃಞ್ ಹರಣೇ | ಅಸ್ಮಾದ್ಯಙ್‌ಲುಕ್ಯಭ್ಯಾಸಹಲಾದಿಶೇಷೋರತ್‌ಜಶ್ತ್ವೇಷು ಕೃತೇಷು ರುಗ್ರಿಕೌ ಚ ಲುಕಿ | ಪಾ. ೭-೪-೯೧ | ಇತಿ ರುಗಾ-

ಗಮಃ । ತತಃ ಪ್ರತ್ಯಯಲಕ್ಷಣೇನ ಧಾತುಸಂಜ್ಞಾಯಾಂ ಲಿಟಿ ದ್ವಿವಚನಂ ತಸ್ । ಅದಾದಿವಚ್ಚೇತಿ ವಚನಾಚ್ಛಪೋ ಲುಕ್ । ಗುಣೇ ಪ್ರಾಪ್ತೇ ಕ್ಣಿತಿ ಚೇತಿ ಪ್ರತಿಷೇಧಃ । ಹೃಗ್ರಹೋರ್ಭಶ್ಛಂದಸೀತಿ ಭತ್ವಂ । ಪ್ರತ್ಯಯಸ್ವರಃ । ಹಿ ಚೇತಿ ನಿಘಾತಪ್ರತಿಷೇಧಃ । ಬಪ್ಸತಾ । ಭಸ ಭಕ್ಷಣದೀಪ್ತ್ಯೋಃ । ಲಟಃ ಶತೃ । ಜುಹೋತ್ಯಾದಿಭ್ಯಃ ಶ್ಲುಃ । ಘಸಿಭಸೋರ್ಹಲಿ ಚ । ಪಾ. ೬-೪-೧೦೦ । ಇತ್ಯುಪಧಾಲೋಪಃ । ನಾಭ್ಯಸ್ತಾಚ್ಛತುಃ । ಪಾ. ೭-೧-೭೮ । ಇತಿ ನುಮ್ಪ್ರತಿಷೇಧಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಆಯಜೀ**— ಯಜ್ಞದ ಉಪಕರಣಗಳೂ । **ವಾಜಸಾತಮಾ**—ಅತಿಶಯವಾಗಿ ಅನ್ನದಾತೃಗಳೂ ಆದ । **ತಾಹಿ**—ಆ (ಒರಳು ಮತ್ತು ಒನಕೆ) ಎರಡೂ ಸಹ । **ಉಚ್ಚಾ**—ಗಟ್ಟಿಯಾಗಿ ಶಬ್ದಮಾಡಿಕೊಂಡು । **ಅಂಧಾಂಸಿ**—(ಕಡಲೆ ಮುಂತಾದ) ಧಾನ್ಯಗಳನ್ನು । **ಬಪ್ಸತಾ**— ಅಗಿದು ತಿನ್ನುತ್ತಾ ಇರುವ । **ಹರೀ ಇವ**—ಇಂದ್ರನ ಕುದುರೆಗಳಂತೆ । **ವಿಜರ್ಭೃತಃ**— ವಿನೋದವಾಗಿ ಆಟವಾಡುತ್ತಿವೆ ॥

॥ ಭಾವಾರ್ಥ ॥

ಯಜ್ಞದ ಉಪಕರಣಗಳೂ ಮತ್ತು ಅತಿಶಯವಾಗಿ ಅನ್ನದಾತೃಗಳೂ ಆದ ಒರಳು ಮತ್ತು ಒನಕೆ ಎರಡೂ ಸಹ ಗಟ್ಟಿಯಾಗಿ ಶಬ್ದಮಾಡಿಕೊಂಡು ಕಡಲೆ ಮುಂತಾದ ಧಾನ್ಯಗಳನ್ನು ಅಗಿಯುತ್ತಾ ಆಟವಾಡುತ್ತಿರುವ ಇಂದ್ರನ ಕುದುರೆಗಳಂತೆ ವಿನೋದವಾಗಿ ಆಟವಾಡುತ್ತಿವೆ.

## English Translation.

For, these two impliments of sacrifice (mortal and pounder) bestowers of food are sporting like the horses of Indra chewing their fodder (grains).

॥ ವಿಶೇಷವಿಷಯಗಳು ॥

**ಆಯಜೀ—ಸರ್ವತೋ ಯಜ್ಞಸಾಧನೇ ।** ಯಜ್ಞೋಪಕರಣಗಳಾದ ಉಲೂಖಲ ಮುಸಲುಗಳು ಎಂದರೆ ಒರಳು ಮತ್ತು ಒನಕೆಗಳು. ಇದು ದ್ವಿವಚನಾಂತಶಬ್ದವು.

**ವಾಜಸಾತಮಾ—ವಾಜಂ ಸನೋತೀತಿ ವಾಜಸಾಃ । ಅತಿಶಯೇನ ವಾಜಸಾಃ ವಾಜಸಾತಮೌ ।** ವಾಜವೆಂದರೆ ಅನ್ನ, ಆಹಾರವೆಂದರ್ಥವು. ಅದನ್ನು ಕೊಡುವುದರಿಂದ ಒರಳು ಒನಕೆಗಳಿಗೆ ವಾಜಸಾತಮಾ ಎಂದು ಹೆಸರು ಬಂದಿರುವುದು. ಧಾನ್ಯಗಳನ್ನು ಒರಳಿನಲ್ಲಿ ಒನಕೆಯ ಸಹಾಯದಿಂದ ಕುಟ್ಟಿ ಆಹಾರವನ್ನು ಸಿದ್ಧಪಡಿಸುವುದರಿಂದ ಒರಳು ಒನಕೆಗಳು ಆಹಾರವನ್ನು ಒದಗಿಸುವುದಕ್ಕೆ ಸಹಾಯವಾಗುವವು. ಆದುದರಿಂದ ಅವುಗಳು ಅನ್ನಾದ್ಯಾಹಾರಗಳನ್ನು ಕೊಡುವವು ಎಂದು ವರ್ಣಿಸಲಾಗಿದೆ.

**ಉಚ್ಚಾ**—ಘಟ್ಟಿಯಾಗಿ ಶಬ್ದಮಾಡುತ್ತಾ । ಒರಳಿನಲ್ಲಿ ಒನಕೆಯಿಂದ ಧಾನ್ಯಾದಿಗಳನ್ನು ಕುಟ್ಟುವಾಗ ಘಟ್ಟಿಯಾಗಿ ಶಬ್ದವಾಗುವುದು ಸಹಜವು.

**ವಿಜರ್ಭೃತಃ**---**ಹೃಞ್ ಹರಣೇ ।** ವಿಹಾರಮಾಡುತ್ತಿರುವವು, ವಿಹಾರಮಾಡುವಂತೆ ತೋರುತ್ತಿರುವವು.

**ಹರೀಇವ**—ಇಂದ್ರನ ಕುದುರೆಗಳಂತೆ. ಇಂದ್ರನ ಎರಡು ಕುದುರೆಗಳಿಗೆ ಹರೀ ಎಂದು ಹೆಸರು. **ಹರೀ ಇಂದ್ರಸ್ಯ** ಎಂದು ನಿರುಕ್ತವಚನವಿರುವುದು.

**ಅಂಧಾಂಸಿ**—ಅನ್ನಾದ್ಯಾಹಾರಗಳನ್ನು; ಅಂಧಃ ಇತ್ಯನ್ನನಾಮ (ನಿ. ೫-೧) ಎಂದು ನಿರುಕ್ತವಚನವಿರುವುದು.

**ಬಪ್ಸತಾ**---**ಬಸ ಭಕ್ಷಣದೀಪ್ತ್ಯೋಃ ।** ತಿನ್ನುತ್ತಿರುವ, ಅಗಿಯುತ್ತಿರುವ; ಕುದುರೆಗಳು ಕಡಲೆ ಮುಂತಾದ ಧಾನ್ಯಗಳನ್ನು ಅಗಿದು ತಿನ್ನುತ್ತಿರುವಾಗ ಆಗುವ ಶಬ್ದದಂತೆ ಒರಳಿನಲ್ಲಿ ಒನಕೆಯಿಂದ ಕುಟ್ಟುವ ಶಬ್ದವು ಇರುವುದೆಂದು ಋಷಿಯು ವರ್ಣಿಸಿರುವನು.

॥ ವ್ಯಾಕರಣಪ್ರಕ್ರಿಯಾ ॥

**ಆಯಜೀ**—ಆಙ್ ಉಪಸರ್ಗ. ಯಜದೇವಪೂಜಾಸಂಗತಿಕರಣದಾನೇಷು ಧಾತು. ಕರಣಾರ್ಥದಲ್ಲಿ ಉಣಾದಿಸಿದ್ಧವಾದ ಇ ಪ್ರತ್ಯಯವು ಬರುತ್ತದೆ. ಗತಿ ಸಮಾಸವಾದಮೇಲೆ '**ಗತಿಕಾರಕೋಪಪದಾತ್ ಕೃತ್**' (ಪಾ. ಸೂ. ೬-೨-೧೩೯) ಎಂಬುದರಿಂದ ಕೃದಂತವಾದ ಉತ್ತರಪದವಿರುವುದರಿಂದ ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ. ಪ್ರಥಮಾದ್ವಿವಚನರೂಪ. ಆಯಜೀ ಎಂಬುದು ಅಂತೋದಾತ್ತವಾದ ಪದ.

**ವಾಜಸಾತಮಾ**—ವಾಜಂ ಸನೋತಿ ಇತಿ ವಾಜಸಾಃ ಷಣು ದಾನೇ ತನಾದಿ. '**ಜನಸನಖ**' (ಪಾ. ಸೂ. ೩-೨-೬೭) ಎಂಬುದರಿಂದ ವಿಟ್ ಪ್ರತ್ಯಯ ಬರುತ್ತದೆ ಧಾತ್ವಾದಿಗೆ ಸಕಾರ ಬರುತ್ತದೆ ಸನ್+ವಿಟ್ ಎಂದಿರುವಾಗ '**ವಿಡ್ವನೋರನುನಾಸಿಕಸ್ಯಾತ್**' (ಪಾ. ಸೂ. ೬-೪-೪೧) ಎಂಬುದರಿಂದ ವಿಟ್ ಪರದಲ್ಲಿರುವುದರಿಂದ ಅನುನಾಸಿಕವಾದ ಧಾತುವಿನ ನಕಾರಕ್ಕೆ ಆತ್ವ ಬರುತ್ತದೆ. ವಾಜಸಾ ಎಂದು ರೂಪವಾಗುತ್ತದೆ. ಕೃದಂತವಾದ ಉತ್ತರಪದವಿರುವುದರಿಂದಲೂ, ಕಾರಕಪೂರ್ವಪದವಿರುವುದರಿಂದಲೂ '**ಗತಿಕಾರಕೋಪಪದಾತ್ ಕೃತ್**' ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ. ಅತಿಶಯೇನ ವಾಜಸಾಃ ಎಂದು ಅತಿಶಯಾರ್ಥವನ್ನು ವಿವಕ್ಷಾಮಾಡಿದಾಗ '**ಅತಿಶಾಯನೇ ತಮಬಿಷ್ಠನೌ**' (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ ಬರುತ್ತದೆ. ಪ್ರಥಮಾದ್ವಿವಚನ ವಿವಕ್ಷಾಮಾಡಿದಾಗ '**ಸುಪಾಂ ಸುಲುಕ್**–' ಎಂಬುದರಿಂದ ಪೂರ್ವ ಸವರ್ಣದೀರ್ಘವು ಬರುತ್ತದೆ. ವಾಜಸಾತಮಾ ಎಂದು ರೂಪವಾಗುತ್ತದೆ

**ವಿಜರ್ಭೃತಃ**—ಹೃಞ್ ಹರಣೇ ಧಾತು. ಭ್ವಾದಿ. ಭೃಶಾರ್ಥ ಮತ್ತು ಪೌನಃಪುನ್ಯಾರ್ಥವನ್ನು ವಿವಕ್ಷೆ ಮಾಡಿದಾಗ ಯಙ್ ಬರುತ್ತದೆ. ಅದಕ್ಕೆ '**ಯಙೋಽಚಿಚ**' (ಪಾ ಸೂ. ೨-೪-೭೪) ಎಂಬುದರಿಂದ ಅಚ್ ಪರದಲ್ಲಿಲ್ಲದಿದ್ದರೂ ಲುಕ್ ಬರುತ್ತದೆ. '**ಸನ್ಯಙೋಃ**' (ಪಾ. ಸೂ ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹಲಾದಿಶೇಷ, ಉರದತ್ವ ಬರುತ್ತವೆ. '**ಕುಹೋಶ್ಚುಃ**' ಎಂಬುದರಿಂದ ಚುತ್ವವೂ ಅದಕ್ಕೆ ಜಶ್ತ್ವವೂ ಬಂದರೆ ಜಹೃ ಎಂದು ರೂಪವಾಗುತ್ತದೆ. '**ರುಗ್ರಿಕೌಚಲುಕಿ**' (ಪಾ. ಸೂ. ೭-೪-೯೧) ಎಂಬುದರಿಂದ ಅಭ್ಯಾಸಕ್ಕೆ ರುಕಾಗಮ ಬರುತ್ತದೆ. ಜರ್ಹೃ ಎಂದಿರುವಾಗ ಇದಕ್ಕೆ '**ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ**' (ಪಾ. ಸೂ. ೧-೧-೬೨) ಎಂಬುದರಿಂದ ಯಙಂತತ್ವವು ಇರುವುದರಿಂದ '**ಸನಾದ್ಯಂತಾ ಧಾತವಃ**' ಎಂಬುದರಿಂದ

ಧಾತುಸಂಜ್ಞಾ ಬರುತ್ತದೆ. ಆಗ ಲಿಟ್ ಪ್ರಥಮಪುರುಷ ದ್ವಿವಚನ ವಿವಕ್ಷಾ ಮಾಡಿದಾಗ ತಸ್ ಪ್ರತ್ಯಯ ಬರುತ್ತದೆ. ತಸ್ ಪರದಲ್ಲಿರುವಾಗ ಶಪ್ ವಿಕರಣ ಬರುತ್ತದೆ. **'ಅದಾದಿವಚ್ಚ'** (ಚರ್ಕರೀತಂ ಚ ಪಾಠಾಂತರ) ಎಂದು ಯಙ್ ಲುಙಂತವನ್ನು ಅದಾದಿಯಲ್ಲಿ ಸೇರಿಸಿ ಆದಾದಿಕ ಕಾರ್ಯಗಳನ್ನು ಹೇಳಿರುತ್ತಾರೆ. ಆದುದರಿಂದ **'ಅದಿ ಪ್ರಭೃತಿಭ್ಯಃ ಶಪಃ'** ಎಂಬುದರಿಂದ ಶಪಿಗೆ ಲುಕ್ ಬರುತ್ತದೆ. **'ಲಿಟಿ ಧಾತೋರನಭ್ಯಾಸಸ್ಯ'** ಎಂಬುದರಿಂದ ಅಭ್ಯಾಸ ಭಿನ್ನಕ್ಕೆ ದ್ವಿತ್ವವನ್ನು ಹೇಳಿರುವುದರಿಂದ ಇಲ್ಲಿ ಯಙ್ ನಿಮಿತ್ತವಾಗಿ ಪೂರ್ವದಲ್ಲಿ ದ್ವಿತ್ವ ಬಂದಿರುವುದರಿಂದ ಪುನಃ ದ್ವಿತ್ವ ಬರುವುದಿಲ್ಲ. **'ಸಾರ್ವಧಾತುಕಾರ್ಧಧಾತುಕಯೋಃ'** ಸೂತ್ರದಿಂದ ಋಕಾರಕ್ಕೆ ಗುಣವು ಪ್ರಾಪ್ತವಾದರೆ ತಸಿಗೆ **'ಅಸಂಯೋಗಾತ್ ಲಿಟ್ ಕಿತ್'** ಎಂಬುದರಿಂದ ಕಿತ್ವವನ್ನು ಹೇಳಿರುವುದರಿಂದ **'ಕ್ಙಿತಿಚ'** ಸೂತ್ರದಿಂದ ಗುಣ ನಿಷೇಧ ಬರುತ್ತದೆ. ಜರ್ಹೃತಃ ಎಂದು ರೂಪವಾಗುತ್ತದೆ. **'ಹೃಗ್ರಹೋರ್ಭಶ್ಛಂದಸಿ'** (ಪಾ. ಸೂ. ३-೧-೮೪. ವಾ. ೪೮-೨೩) ಎಂಬುದರಿಂದ ಛಂದಸ್ಸಿನಲ್ಲಿ ಧಾತುವಿನ ಹಕಾರಕ್ಕೆ ಭಕಾರಾದೇಶ ಬರುತ್ತದೆ. ಜರ್ಭೃತಃ ಎಂದು ರೂಪವಾಗುತ್ತದೆ. ತಸ್ ಅಪಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಜರ್ಭೃತಃ ಎಂಬುದು ಅಂತೋದಾತ್ತವಾದ ಪದವಾಗುತ್ತದೆ. **'ತಿಙಿಚೋದಾತ್ತವತಿ'** ಎಂಬುದರಿಂದ ಗತಿಗೆ ಉದಾತ್ತವತ್ತಾದ ತಿಙಂತವು ಪರದಲ್ಲಿರುವುದರಿಂದ ಅನುದಾತ್ತಸ್ವರವು ಬರುತ್ತದೆ. ಅತಿಙಂತದ ಪರದಲ್ಲಿದ್ದರೂ ಹಿ ಎಂಬುದು ಹಿಂದೆ ಇರುವುದರಿಂದ **'ಹಿಚ'** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ಬಪ್ಸತಾ**—ಭಸ ಭಕ್ಷಣದೀಪ್ತ್ಯೋಃ ಧಾತು. ಜುಹೋತ್ಯಾದಿ. ಲಡರ್ಥದಲ್ಲಿ ಶತೃ ಪ್ರತ್ಯಯ ಬರುತ್ತದೆ. ಶತೃ ಪ್ರತ್ಯಯ ಪರದಲ್ಲಿರುವಾಗ **'ಜುಹೋತ್ಯಾದಿಭ್ಯಃ ಶ್ಲುಃ'** ಎಂಬುದರಿಂದ ಶ್ಲು ವಿಕರಣ ಬರುತ್ತದೆ. ಶ್ಲು ಪರದಲ್ಲಿರುವಾಗ **'ಶ್ಲೌ'** ಎಂಬುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹಲಾದಿಶೇಷ ಜಸ್ತ್ವ ಬರುತ್ತದೆ. ಬಭಸ್+ಅತ್, ಎಂದಿರುವಾಗ **'ಘಸಿಭಸೋರ್ಹಲಿಚ'** (ಪಾ. ಸೂ. ೬-೪-೧೦೦) ಎಂಬುದರಿಂದ ಧಾತುವಿನ ಉಪಧೆಗೆ ಲೋಪ ಬರುತ್ತದೆ. ಆಗ ಖರ್ ಪರದಲ್ಲಿರುವುದರಿಂದ **'ಖರಿಚ'** ಎಂಬುದರಿಂದ ಚರ್ತ್ವ ಬಂದರೆ ಬಪ್ಸತ್ ಎಂದು ರೂಪವಾಗುತ್ತದೆ. ಪ್ರಥಮಾ ದ್ವಿವಚನ ಪರದಲ್ಲಿರುವಾಗ ವಿಭಕ್ತಿಗೆ (ಔ) **'ಸುಪಾಂ ಸುಲುಕ್–'** ಎಂಬುದರಿಂದ ಆಕಾರಾದೇಶವು ಬರುತ್ತದೆ. ಬಪ್ಸತಾ ಎಂದು ರೂಪವಾಗುತ್ತದೆ. **'ನಾಭ್ಯಸ್ತಾಚ್ಛತುಃ'** (ಪಾ. ಸೂ. ೭-೧-೭೮) ಎಂಬುದರಿಂದ ದ್ವಿತ್ವ ಬಂದುದರಿಂದ ಅಭ್ಯಸ್ತಸಂಜ್ಞೆ ಬಂದಿರುವುದರಿಂದ ಉಗಿತ್ತಾದರೂ ನುಮ್ ಬರುವುದಿಲ್ಲ. **'ಅಭ್ಯಸ್ತಾನಾಮಾದಿಃ'** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರವು ಪ್ರತ್ಯಯ ಸ್ವರವನ್ನು ಬಾಧಿಸಿ ಬರುತ್ತದೆ. ಬಪ್ಸತಾ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ॥ ೭ ॥

॥ ಸಂಹಿತಾಪಾಠಃ ॥

# ತಾ ನೋ ಅದ್ಯ ವನಸ್ಪತೀ ಋಷ್ವಾವೃಷ್ವೇಭಿಃ ಸೋತೃಭಿಃ ।
# ಇನ್ದ್ರಾಯ ಮಧುಮತ್ಸುತಂ ॥ ೮ ॥

॥ ಪದಪಾಠಃ ॥

ತಾ । ನಃ । ಅದ್ಯ । ವನಸ್ಪತೀ ಇತಿ । ಋಷ್ವೌ । ಋಷ್ವೇಭಿಃ । ಸೋತೃಽಭಿಃ ।
ಇನ್ದ್ರಾಯ । ಮಧುಽಮತ್ । ಸುತಂ ॥ ೮ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ಕರ್ಮಣಿ ಹೇ ವನಸ್ಪತೀ ಉಲೂಖಲಮುಸಲರೂಪೌ ತೌ ಯುವಾಮೃಷ್ವೇಭಿರ್ದರ್ಶನೀಯೈಃ ಸೋತೃಭಿರಭಿಷವಹೇತುಭಿಃ ಸಹ ಋಷ್ವೌ ದರ್ಶನೀಯೌ ಭೂತ್ವೇಂದ್ರಾಯೇಂದ್ರಾರ್ಥಂ ಮಧುಮತ್ ಮಾಧುರ್ಯೋಪೇತಂ ಸೋಮದ್ರವ್ಯಂ ನೋಽಸ್ಮದೀಯಂ ಸುತಂ । ಅಭಿಷುಣುತಂ ॥ ತಾ । ಸುಪಾಂ ಸುಲುಗಿತ್ಯಾಕಾರಃ । ನೋ ಅದ್ಯ । ಪ್ರಕೃತ್ಯಾಂತಃಪಾದಮಿತಿ ಪ್ರಕೃತಿಭಾವಃ । ವನಸ್ಪತೀ । ಉಭಯಪದಪ್ರಕೃತಿಸ್ವರೇ ಪ್ರಾಪ್ತ ಆಮಂತ್ರಿತಸ್ಯೇತಿ ಸರ್ವಾನುದಾತ್ತತ್ವಂ । ಪ್ಲುತಪ್ರಗೃಹ್ಯಾ ಅಚಿ । ಪಾ. ೬-೧-೧೨೫ । ಇತಿ ಪ್ರಕೃತಿಭಾವಃ । ಸುತಂ । ಷುಞ್ ಅಭಿಷವೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ನಿಘಾತಃ ॥

॥ ಪ್ರತಿಪದಾರ್ಥ ॥

**ವನಸ್ಪತೀ**—(ಒರಳು ಮತ್ತು ಒನಕೆ ರೂಪದಲ್ಲಿರುವ) ಎಲೈ ವೃಕ್ಷಗಳೇ (ನೀವಿಬ್ಬರೂ ಸಹ) । **ಋಷ್ವೇಭಿಃ**—ಮನೋಹರಗಳಾದ । **ಸೋತೃಭಿಃ**—ಸೋಮರಸದ ಸಾಮಗ್ರಿಗಳೊಡನೆ । **ಋಷ್ವಾ**—ಆಕರ್ಷಕವಾದ ರೂಪವುಳ್ಳವರಾಗಿ । **ಇಂದ್ರಾಯ**—ಇಂದ್ರನಿಗಾಗಿ । **ನಃ**—ನಮ್ಮದಾದ । **ಮಧುಮತ್**—ಮಧುರವಾದ ಸೋಮರಸವನ್ನು । **ಸುತಂ**—ಹಿಂಡಿರಿ.

॥ ಭಾವಾರ್ಥ ॥

ಒರಳು ಮತ್ತು ಒನಕೆ ರೂಪದಲ್ಲಿರುವ ಎಲೈ ವನಸ್ಪತಿಗಳೇ, ನೀವಿಬ್ಬರೂ ಸಹ ಮನೋಹರಗಳಾದ ಸೋಮರಸದ ಸಾಮಗ್ರಿಗಳೊಡನೆ ಆಕರ್ಷಕವಾದ ರೂಪವುಳ್ಳವರಾಗಿ ಇಂದ್ರನ ಪಾನಾರ್ಥವಾಗಿ ಈ ನಮ್ಮ ಯಜ್ಞದಲ್ಲಿ ಮಧುರವಾದ ಸೋಮರಸವನ್ನು ಹಿಂಡಿರಿ.

## English Translation.

Lords of the forest, (mortar and pounder) of pleasing appearance, prepare the sweet Soma-juice for Indra to drink.

॥ ವಿಶೇಷವಿಷಯಗಳು ॥

**ಅದ್ಯ**—ಈಗ, ಇಲ್ಲಿ ಎಂದರೆ ಈಗ ನಾವು ಮಾಡುತ್ತಿರುವ ಯಜ್ಞಕರ್ಮದಲ್ಲಿ ಎಂದಭಿಪ್ರಾಯವು.

**ವನಸ್ಪತೀ**—ಇಲ್ಲಿಯೂ ಸಹ ಹಿಂದಿನ ಋಕ್ಕಿನಂತೆ ಉಲೂಖಲಮುಸಲಗಳನ್ನು ವನಸ್ಪತಿಶಬ್ದದಿಂದ ಸಂಬೋಧಿಸಲಾಗಿದೆ. ಇವುಗಳು ಮರದಿಂದ ನಿರ್ಮಿತವಾಗಿರುವುದರಿಂದ ವನಸ್ಪತಿಯೆಂದು ಕರೆಯುವುದು ವಿಹಿತವಾಗಿದೆ.

**ಋಷ್ವೌ, ಋಷ್ವೇಭಿಃ— ದರ್ಶನೀಯೌ, ದರ್ಶನೀಯೈಃ ।** ಸುಂದರವಾದ, ನೋಡುವುದಕ್ಕೆ ಆಹ್ಲಾದ ಕರವಾದ ಆಕಾರವುಳ್ಳ. ಇಲ್ಲಿ ಋಷ್ವೌ ಎಂಬುದು ವನಸ್ಪತೀ ಎಂಬ ಶಬ್ದಕ್ಕೆ ವಿಶೇಷಣವು. ಋಷಿಭಿಃ ಎಂಬುದು ಸೋತೃಭಿಃ ಎಂಬ ಶಬ್ದಕ್ಕೆ ವಿಶೇಷಣವು. ಋಷ್ವೇಭಿಃ ಎಂದರೆ ಆಹ್ಲಾದಕರವಾದ, ರುಚಿಕರವಾದ ಎಂಬರ್ಥಗಳನ್ನು ಹೇಳಬಹುದು.

**ಸೋತೃಭಿಃ**—ಸೋಮರಸವನ್ನು ಹಿಂಡುವ ಸಾಮಗ್ರಿಗಳಿಂದ ಎಂದರೆ, ಒರಳು, ಒನಕೆ, ಸೋಮಲತೆ, ಕಲ್ಲು, ಸೋಸುವ ಬಟ್ಟೆ, ರಸವನ್ನು ಶೇಖರಿಸುವ ಕಲಶ ಇತ್ಯಾದಿಗಳು.

**ಮಧುಮತ್—ಮಾಧುರ್ಯೋಪೇತಂ ।** ಸಿಹಿಯಾದ, ರುಚಿಕರವಾದ ಸೋಮರಸವನ್ನು.

**ಸುತಂ**—ಹಿಂಡಿ ಸಿದ್ಧಪಡಿಸಿ । ಸುನೋತಿ ಧಾತುವಿನ ಲೋಟ್ ಮಧ್ಯಮಪುರುಷ ದ್ವಿವಚನವು.

॥ ವ್ಯಾಕರಣಪ್ರಕ್ರಿಯಾ ॥

**ತಾ**—ತಚ್ಛಬ್ದದ ಮೇಲೆ ಪ್ರಥಮಾದ್ವಿವಚನ ಪರದಲ್ಲಿರುವಾಗ **'ತ್ಯದಾದೀನಾಮಃ'** (ಪಾ. ಸೂ. ೭-೨-೧೦೨) ಎಂಬುದರಿಂದ ಅತ್ವವು ಅಂತಾದೇಶವಾಗಿ ಬರುತ್ತದೆ. **'ಅತೋಗುಣೇ'** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪವು ಬರುತ್ತದೆ. **'ಸುಪಾಂ ಸುಲುಕ್'** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ಬರುತ್ತದೆ. ಸವರ್ಣದೀರ್ಘ ಬಂದರೆ ತಾ ಎಂದು ರೂಪವಾಗುತ್ತದೆ.

**ನೋ ಅದ್ಯ**—**'ಪ್ರಕೃತ್ಯಾಂತಃ ಪಾದಮವ್ಯಯಪರೇ'** (ಪಾ ಸೂ. ೬-೧-೧೧೫) ಋಕ್ ಪಾದ ಮಧ್ಯದಲ್ಲಿರುವ ಏಙಿಗೆ ಹ್ರಸ್ವಾಕಾರ ಪರದಲ್ಲಿರುವಾಗ ಅದಕ್ಕೆ ಯಕಾರ ವಕಾರ ಪರದಲ್ಲಿ ಇಲ್ಲದೇ ಇರುವಾಗ ಪ್ರಕೃತಿ ಭಾವ ಬರುತ್ತದೆ. ಇಲ್ಲಿ ಓಕಾರಕ್ಕೆ ಅಕಾರ ಪರದಲ್ಲಿರುವುದರಿಂದ ಪ್ರಕೃತಿಭಾವ ಬರುವುದರಿಂದ ಪೂರ್ವರೂಪಸಂಧಿಯು ಬರುವುದಿಲ್ಲ.

**ವನಸ್ಪತೀ**—ಪ್ರಥಮಾ ದ್ವಿವಚನರೂಪ. **'ಉಭೇವನಸ್ಪತ್ಯಾದಿಷು ಯುಗಪತ್'** (ಪಾ. ಸೂ. ೬-೨-೧೪೦) ಎಂಬುದರಿಂದ ಪೂರ್ವೋತ್ತರಪದಗಳಲ್ಲಿ ಯುಗಪತ್ ಪ್ರಕೃತಿ ಸ್ವರವು ಪ್ರಾಪ್ತವಾದರೆ ಸಂಬುದ್ಧಿಯಾದುದ ರಿಂದ ಆಮಂತ್ರಿತಸಂಜ್ಞೆ ಇರುವುದರಿಂದ **'ಆಮಂತ್ರಿತಸ್ಯ ಚ'** (ಪಾ ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ ಸ್ವರ ಬರುತ್ತದೆ. ವನಸ್ಪತೀ+ಋಷ್ವೌ ಎಂದಿರುವಾಗ **'ಇಕೋಯಣಚಿ'** (ಪಾ. ಸೂ. ೬-೧-೭೭) ಎಂಬುದರಿಂದ ಯಣ್ ಪ್ರಾಪ್ತವಾಗುತ್ತದೆ. ಆದರೆ **'ಪ್ಲುತಪ್ರಗೃಹ್ಯಾಅಚಿ ನಿತ್ಯಂ'** (ಪಾ. ಸೂ. ೬-೧-೧೨೫) ಎಂಬುದರಿಂದ ಪ್ರಕೃತಿಭಾವವು ಬರುತ್ತದೆ. **'ಈದೂದೇದ್ದ್ವಿವಚನಂ ಪ್ರಗೃಹ್ಯಂ'** (ಪಾ. ಸೂ. ೧-೧-೧೧) ಎಂಬುದರಿಂದ ಇಲ್ಲಿ ವನಸ್ಪತೀ ಎಂಬುದು ದ್ವಿವಚನವಾದುದರಿಂದ ಪ್ರಗೃಹ್ಯ ಸಂಜ್ಞೆಯನ್ನು ಹೊಂದುತ್ತದೆ.

**ಸುತಮ್**—ಷುಞ್ ಅಭಿಷವೇ ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ ಬರುತ್ತದೆ. ಲೋಟೋ ಲಙ್ವತ್ ಎಂದುದರಿಂದ ಥಸಿಗೆ **'ತಸ್‌ಥಸ್‌ಥಮಿಪಾಂ ತಾಂತಂ ತಾಮಃ'** (ಪಾ. ಸೂ. ೩-೪-೧೦೧) ಎಂಬುದರಿಂದ ತಮ್ ಎಂಬ ಆದೇಶ ಬರುತ್ತದೆ. ಧಾತುವಿನ ಷಕಾರಕ್ಕೆ ಸಕಾರಾದೇಶ ಬರುತ್ತದೆ. ತಸ್ ಪರದಲ್ಲಿರು

ವಾಗ 'ಸ್ವಾದಿಭ್ಯಃ ಶ್ನುಃ' (ಪಾ. ಸೂ. ೩-೧-೭೩) ಎಂಬುದರಿಂದ ವಿಕರಣವು ಪ್ರಾಪ್ತವಾದರೆ 'ಬಹುಲಂ ಛಂದಸಿ' ಎಂಬುದರಿಂದ ಅದಕ್ಕೆ ಲುಕ್ ಬರುತ್ತದೆ. ಸುತಂ ಎಂದು ರೂಪವಾಗುತ್ತದೆ. ಅಪಿತ್ ಸಾರ್ವಧಾತುಕವಾದುದರಿಂದ ಙಿದ್ವದ್ಭಾವವನ್ನು ಹೇಳಿರುವುದರಿಂದ ತಮ್ ಪರದಲ್ಲಿರುವಾಗ ಗುಣವು ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೮ ॥

॥ ಸಂಹಿತಾಪಾಠಃ ॥

ಉಚ್ಛಿಷ್ಟಂ ಚಮ್ವೋರ್ಭರ ಸೋಮಂ ಪವಿತ್ರ ಆ ಸೃಜ ।
ನಿ ಧೇಹಿ ಗೋರಧಿ ತ್ವಚಿ ॥ ೯ ॥

॥ ಪದಪಾಠಃ ॥

ಉತ್ । ಶಿಷ್ಟಂ । ಚಮ್ವೋಃ । ಭರ । ಸೋಮಂ । ಪವಿತ್ರೇ । ಆ । ಸೃಜ ।
ನಿ । ಧೇಹಿ । ಗೋಃ । ಅಧಿ । ತ್ವಚಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಗ್ವಿಶೇಷ ಹರಿಶ್ಚಂದ್ರದೇವತಾಪಕ್ಷೇ ಹೇ ಹರಿಶ್ಚಂದ್ರೇತಿ ವಾ ಚಮ್ವೋಃ ಸೋಮಸ್ಯ ಭಕ್ಷತ್ವಸಂಪಾದಕಯೋರಧಿಷವಣಫಲಕಯೋಃ ಶಿಷ್ಟಮಭಿಷವರಾಹಿತ್ಯೇನಾವಶಿಷ್ಟಂ ಸೋಮಮುದ್ಧರ । ಶಕಟಸ್ಯೋಪರಿ ಹರ । ಸೋಮಮಭಿಷುತಂ ಸೋಮಂ ಪವಿತ್ರೇ ದಶಾಪವಿತ್ರ ಆ ಸೃಜ । ಆನೀಯ ಪ್ರಕ್ಷಿಪ । ಪ್ರಕ್ಷೇಪೇ ಸತ್ಯವಶಿಷ್ಟಂ ಸೋಮಂ ಗೋಸ್ತ್ವಚ್ಯಾನಡುಹೇ ಚರ್ಮಣ್ಯಧಿ ನಿ ಧೇಹಿ । ಅಧ್ಯಾರೋಪ್ಯ ಸ್ಥಾಪಯ ॥ ಚಮ್ವೋಃ । ಚಮು ಅದನೇ । ಚಮ್ಯತೇ ಭಕ್ಷ್ಯತೇಽತ್ರೇತಿ ಚಮೂಃ । ಕೃಷಿಚಮೀತ್ಯಾದಿನಾ । ಉ. ೧-೮೦ । ಔಣಾದಿಕ ಉಪ್ರತ್ಯಯಃ । ಪ್ರತ್ಯಯಸ್ವರಃ । ಸಪ್ತಮೀದ್ವಿವಚನಸ್ಯೋದಾತ್ತಸ್ವರಿತಯೋರ್ಯಣಃ ಸ್ವರಿತ ಇತಿ ಸ್ವರಿತತ್ವಂ । ಉದಾತ್ತಯಣೋ ಹಲ್ಪೂರ್ವಾದಿತಿ ವ್ಯತ್ಯಯೇನ ನ ಭವತಿ । ಭರ । ಹೃಗ್ರಹೋರ್ಭಃ । ಧೇಹಿ । ಘ್ವಸೋರೇದ್ಧಾವಭ್ಯಾಸಲೋಪಶ್ಚ । ಪಾ. ೬-೪-೧೧೯ । ಇತ್ಯೇತ್ವಾಭ್ಯಾಸಲೋಪೌ । ನಿಘಾತಃ । ತ್ವಚಿ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥ ೨೬ ॥

॥ ಪ್ರತಿಪದಾರ್ಥ ॥

**ಶಿಷ್ಟಂ**—(ಹಿಂಡದೇ) ಉಳಿದಿರುವ ಸೋಮವನ್ನು । **ಚಮ್ವೋಃ**—ಎರಡು ಸೌಟುಗಳಲ್ಲೂ । **ಉತ್-ಭರ**—ತಂದಿಡು । **ಸೋಮಂ**—(ಹಿಂಡುವ) ಸೋಮರಸವನ್ನು । **ಪವಿತ್ರೇ** ಹಿಂಡುವ ಬಟ್ಟೆಯಲ್ಲಿ । **ಆ ಸೃಜ**—ತಂದಿಡು (ಉಳಿದುದನ್ನು) । **ಗೋಃ ತ್ವಚಿ**—ಗೋಚರ್ಮದ ಮೇಲೆ । **ಅಧಿ ನಿ ಧೇಹಿ**—ಎತ್ತಿಡು ॥

॥ ಭಾವಾರ್ಥ ॥

ಹಿಂಡದೇ ಉಳಿದಿರುವ ಸೋಮವನ್ನು ಎರಡು ಸೌಟುಗಳಲ್ಲೂ ತಂದಿಡು. ಹಿಂಡುವ ಸೋಮರಸವನ್ನು ಹಿಂಡುವ ಬಟ್ಟೆಯಲ್ಲಿ ತಂದಿಡು. ಮತ್ತು ಅದನ್ನು ಗೋಚರ್ಮದ ಮೇಲೆ ಎತ್ತಿಡು.

## English Translation.

Fill the remaining Soma in the two jars, pour it on the sieve, and put it on the cow-hide.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಋಷಿಯು ಯಜ್ಞಕರ್ತನಾದ ಹರಿಶ್ಚಂದ್ರನನ್ನು ಅಥವಾ ಯಾವನಾದರೊಬ್ಬ ಋತ್ವಿಜನನ್ನು (ಬಹುಶಃ ಅಧ್ವರ್ಯುವನ್ನು) ಉದ್ದೇಶಿಸಿ ಹೇಳಿರುವನು.

**ಉಚ್ಛಿಷ್ಟಂ**—ಉಳಿದಿರುವ, ಮಿಕ್ಕಿರುವ ಸೋಮವು ಎಂದರೆ ಸೋಮಲತೆಯನ್ನು ಒರಳಿನಲ್ಲಿ ಹಾಕಿ ಜಜ್ಜಿದ ಮೇಲೆ ಕೆಳಭಾಗದಲ್ಲಿ ನಿಲ್ಲುವ ಸೋಮರಸವನ್ನು ದ್ರೋಣಕಲಶವೆಂಬ ದೊಡ್ಡ ಮರದ ಪಾತ್ರೆಯಲ್ಲಿ ತುಂಬಿದ ಮೇಲೆ ಒರಳಿನಲ್ಲಿ ಅಲ್ಪಸ್ವಲ್ಪ ಉಳಿದಿರುವ ಶೇಷಭಾಗವೆಂದರ್ಥವು.

**ಚಮ್ವೋಃ**—ಸೋಮಾಧಿಷವಣದಲ್ಲಿ ಉಪಯೋಗಿಸುವ ಮರದ ಪಾತ್ರೆಗಳಲ್ಲಿ (ಉಳಿದಿರುವ ಸೋಮವನ್ನು) ಚಮೂ ಎಂಬ ಶಬ್ದವು ದೇವತೆಗಳಿಗಾಗಿ ಸೋಮವನ್ನು ಅರ್ಪಿಸುವುದಕ್ಕಾಗಿ ಉಪಯೋಗಿಸುವ ಮರದ ಪಾತ್ರೆ. ಇಲ್ಲಿ ಸೋಮಾಭಿಷವಣ ಎಂದರೆ ಸೋಮಲತೆಯನ್ನು ಜಜ್ಜುವಾಗ ಹಲಗೆಯಂತಿರುವ ಎರಡು ಮರದ ತುಂಡುಗಳು. ಈ ಹಲಗೆಯ ಮಧ್ಯಭಾಗದಲ್ಲಿ ಸ್ವಲ್ಪ ಹಳ್ಳದಂತಿರುವುದು. ಅದರಲ್ಲಿ ನಿಂತಿರುವ ಸೋಮರಸವನ್ನು ಎಂದು ಇಲ್ಲಿ ಹೇಳಿರುವುದು. ಚಮ್ವೋಃ ಎಂಬುದು ಚಮೂ ಶಬ್ದದ ಸಪ್ತಮೀ ದ್ವಿವಚನವು ಸ್ಕಂದಸ್ವಾಮಿಯು ಈ ಶಬ್ದಕ್ಕೆ ಚಮಸ ಪಾತ್ರೆಯೆಂದು (ಋತ್ವಿಗ್ಜನರು ಸೋಮಪಾನಮಾಡುವ ಮರದ ಪಾತ್ರೆ) ಅರ್ಥಮಾಡಿ ಇಲ್ಲಿ ದ್ವಿವಚನವು ವ್ಯತ್ಯಯದಿಂದ ಪ್ರಯೋಗಿಸಲ್ಪಟ್ಟಿರುವುದೆಂದು ಹೇಳಿರುವರು.

**ಪವಿತ್ರೇ**—ಪವಿತ್ರಶಬ್ದಕ್ಕೆ ಯಾಸ್ಕರು ಪವಿತ್ರಂ ಪುನಾತೇಃ ಶುದ್ಧಿಮಾಡುವುದರಿಂದ ಇದಕ್ಕೆ ಪವಿತ್ರವೆಂದು ಹೆಸರು (ನಿ ೫-೬) ಎಂದು ಅರ್ಥವಿವರಣೆ ಮಾಡಿ, ಪವಿತ್ರವೆಂದರೆ ಮಂತ್ರ, ರಶ್ಮಿ, ಆಪ, ಅಗ್ನಿ ಎಂಬ ನಾನಾರ್ಥಗಳನ್ನು ಉದಾಹರಣೆಪೂರ್ವಕವಾಗಿ ವಿವರಿಸಿರುವರು. ಆದರೆ ಇಲ್ಲಿ ಪವಿತ್ರಶಬ್ದಕ್ಕೆ ಸೋಮರಸವನ್ನು ಶೋಧಿಸುವ ಬಟ್ಟೆ ಅಥವಾ ಜಾಲರಿ ಎಂದು ಹೇಳಬೇಕು. ಕೆಲವು ಸಂದರ್ಭಗಳಲ್ಲಿ ಕುಶವೆಂಬ ದರ್ಭೆಗಳನ್ನು ಸೋಮವನ್ನು

ಸೋಮರಸವನ್ನು ಶೋಧಿಸುವುದಕ್ಕಾಗಿ ಇಟ್ಟಿರುವ ಪಾತ್ರೆಯ ಮೇಲೆ ಹರಡಿ ಅದರ ಮೇಲೆ ಸೋಮರಸವನ್ನು ಸುರಿದು ಶುದ್ಧವಾದ ರಸವು ಪಾತ್ರೆಯ ಒಳಗೆ ಬೀಳುವಂತೆ ಮಾಡುವರು. ಆದುದರಿಂದ ಪವಿತ್ರವೆಂದರೆ ಇಲ್ಲಿ ಸೋಮರಸವನ್ನು ಶೋಧಿಸುವ ಸಾಧನವೆಂಬ (Filter) ಅರ್ಥವನ್ನು ಹೇಳಬಹುದು.

**ಗೋಃ ತ್ವಚಿ**— ಗೋಚರ್ಮದಲ್ಲಿ, ದ್ರೋಣಕಲಶ ಮೊದಲಾದ ಮರದ ಪಾತ್ರೆಗಳಲ್ಲಿ ಸೋಮರಸವನ್ನು ಶೇಖರಿಸಿ ಇಡುವುದಲ್ಲದೆ ಗೋಚರ್ಮದಿಂದ ಮಾಡಿದ ಒಂದು ಬಗೆಯಾದ ಚೀಲದಲ್ಲಿಯೂ ಸೋಮರಸವನ್ನು ತುಂಬಿ ಇಡುತ್ತಿದ್ದರೆಂಬ ವರ್ಣನೆಗಳು ಅಲ್ಲಲ್ಲಿ ಕಂಡುಬರುತ್ತವೆ. ಅಥವಾ ಮರದ ತುಂಡುಗಳಿಂದ ಸೋಮಲತೆಯನ್ನು ಜಜ್ಜು ವಾಗ ರಸವು ನೆಲಕ್ಕೆ ಬಿದ್ದು ಹರಿದುಹೋಗದಂತೆ ತುಂಡುಗಳ ಕೆಳಭಾಗದಲ್ಲಿ ಚರ್ಮವನ್ನು ಹಾಸುವ ರೂಢಿಯೂ ಉಂಟು. ಅಂತೂ ಸೋಮಾಭಿಷವಣಕಾರ್ಯದಲ್ಲಿ ಗೋಚರ್ಮವನ್ನು ಉಪಯೋಗಿಸಲಾಗುತ್ತಿತ್ತು.

॥ ವ್ಯಾಕರಣಪ್ರಕ್ರಿಯಾ ॥

**ಚಮ್ವೋಃ** —ಚಮು ಅದನೇ ಧಾತು. ಭ್ವಾದಿ ಚಮ್ಯತೇ ಭಕ್ಷ್ಯತೇ ಅತ್ರ ಇತಿ ಚಮೂಃ **'ಕೃಷಿಚಮಿತನಿಧನಿ'** (ಉ ಸೂ. ೧-೮೧) ಎಂಬುದರಿಂದ ಉ ಪ್ರತ್ಯಯ ಬರುತ್ತದೆ. ಚಮು ಎಂದು ಉಕಾರಾಂತ ಶಬ್ದವಾಗುತ್ತದೆ. ಸಪ್ತಮೀ ದ್ವಿವಚನದಲ್ಲಿ ಚಮ್ವೋಃ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಚಮು ಶಬ್ದವು ಅಂತೋದಾತ್ತವಾಗುತ್ತದೆ. ಉದಾತ್ತವಾದ ಉಕಾರಕ್ಕೆ ಯಣಾದೇಶವು ಬರುವುದರಿಂದ **'ಉದಾತ್ತಸ್ವರಿತಯೋರ್ಯಣಃ ಸ್ವರಿತಃ'** (ಪಾ. ಸೂ. ೮-೨-೪) ಎಂಬುದರಿಂದ ಸ್ವರಿತವು ಬರುತ್ತದೆ. ವಾಸ್ತವವಾಗಿ ಇಲ್ಲಿ, **'ಉದಾತ್ತಯಣೋಹಲ್ ಪೂರ್ವಾತ್'** (ಪಾ. ಸೂ. ೬-೧-೧೭೪) ಉದಾತ್ತಸ್ಥಾನದಲ್ಲಿ ಯಾವ ಯಣ್ ಬಂದಿದೆಯೋ ಅದಕ್ಕೆ ಹಲ್ ಪೂರ್ವದಲ್ಲಿಯೋ ಅದರ ಪರದಲ್ಲಿರುವ ನದಿಯೂ, ಶಸಾದಿವಿಭಕ್ತಿಯೂ ಉದಾತ್ತವಾಗುತ್ತದೆ. ಎಂಬುದರಿಂದ ಉದಾತ್ತಸ್ವರ ಬರಬೇಕಾಗುತ್ತದೆ. ಆದರೆ **'ವ್ಯತ್ಯಯೋ ಬಹುಲಂ'** (ಪಾ. ಸೂ. ೩-೧-೮೫) ಎಂಬುದರಿಂದ ಇಲ್ಲಿ ಉದಾತ್ತಸ್ವರವು ಬರುವುದಿಲ್ಲ. ಆದುದರಿಂದ ಪೂರ್ವಸೂತ್ರದಿಂದ ಸ್ವರಿತವು ಬರುತ್ತದೆ.

**ಭರ**—ಹೃಞ್ ಹರಣೇ ಧಾತು. ಭ್ವಾದಿ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಹರ ಎಂದು ರೂಪವಾಗುತ್ತದೆ. **'ಹೃಗ್ರಹೋರ್ಭಃ'** (ವಾ. ೪೮-೨೩) ಎಂಬುದರಿಂದ ಹಕಾರಕ್ಕೆ ಭಕಾರಾದೇಶ ಬಂದು ಭರ ಎಂದು ರೂಪವಾಗುತ್ತದೆ.

**ಧೇಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ ಲೋಟ್ ಮಧ್ಯಮಪುರುಷದಲ್ಲಿ ಸಿಪ್ ಬರುತ್ತದೆ. ಸಿಪ್ಪಿಗೆ **'ಅತೋಹೇಃ'** ಎಂಬುದರಿಂದ ಹಿ ಆದೇಶ ಬರುತ್ತದೆ. **'ಜುಹೋತ್ಯಾದಿಭ್ಯಃ ಶ್ಲುಃ'** ಎಂಬುದರಿಂದ ಶ್ಲು ವಿಕರಣ ಬರುತ್ತದೆ. ಅದು ಪರದಲ್ಲಿರುವಾಗ ಧಾತುವಿಗೆ ದ್ವಿತ್ವ ಬರುತ್ತದೆ ಅಭ್ಯಾಸಕ್ಕೆ ಹಲಾದಿ ಶೇಷ, ಹ್ರಸ್ವ, ಜಸ್ತ್ವಗಳು ಬಂದರೆ ದಧಾಹಿ ಎಂದಾಗುತ್ತದೆ. **'ಘ್ವಸೋರೇದ್ಧಾವಭ್ಯಾಸಲೋಪಶ್ಚ'** (ಪಾ. ಸೂ. ೬-೪-೧೧೯) ಎಂಬುದರಿಂದ ಧಾಧಾತುವಿಗೆ ಘುಸಂಜ್ಞಾ ಇರುವುದರಿಂದ ಅದಕ್ಕೆ ಹಿ ಪರದಲ್ಲಿರುವುದರಿಂದ ಅಭ್ಯಾಸ ಲೋಪವೂ ಧಾತುವಿನ ಅಕಾರಕ್ಕೆ ಏತ್ವವೂ ಬರುತ್ತದೆ. ಧೇಹಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರವು ಬರುತ್ತದೆ.

**ತ್ವಚಿ**—ತ್ವಚ್ ಶಬ್ದದ ಸಪ್ತಮೀ ಏಕವಚನದಲ್ಲಿ ತ್ವಚಿ ಎಂದು ರೂಪವಾಗುತ್ತದೆ. ತ್ವಚ್ಛಬ್ದವು ಏಕಾಚಾದುದರಿಂದ ಅದರ ಪರದಲ್ಲಿ ಸಪ್ತಮೀ ಏಕವಚನವು ಇರುವುದರಿಂದ **' ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ '** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ತ್ವಚಿ ಎಂಬುದು ಅಂತೋದಾತ್ತವಾದ ಪದವಾಗುತ್ತದೆ. ॥ ೯ ॥

ಇಪ್ಪತ್ತೆಂಟನೇ ಸೂಕ್ತವು ಸಮಾಪ್ತವಾಗಿದೆ

# ಇಪ್ಪತ್ತೊಂಭತ್ತನೆಯ ಸೂಕ್ತವು

**ಯಚ್ಚಿದ್ಧಿ ಸತ್ಯ ಸೋಮಪಾ ಇತಿ ಷಷ್ಠಂ ಸೂಕ್ತಂ ಸಪ್ತರ್ಚಂ ಶುನಃಶೇಪಸ್ಯಾರ್ಷಂ ಪಾಂಕ್ತಮೈಂದ್ರಂ । ಅನುಕ್ರಮಣಿಕಾ ಚ । ಯಚ್ಚಿದ್ಧಿ ಸಪ್ತ ಪಾಂಕ್ತಮಿತಿ ॥ ಪೃಷ್ಠ್ಯಷಡಹಸ್ಯ ಪಂಚಮೇಽಹನಿ ಮಾಧ್ಯಂದಿನೇ ಸವನೇ ಹೋತ್ರಕಾ ಯಚ್ಚಿದ್ಧೀತಿ ಸಪ್ತರ್ಚಂ ಸೂಕ್ತಂ ತ್ರೀಂಸ್ತೃಚಾನ್ಕೃತ್ವಾ ಸ್ವಸ್ವಶಸ್ತ್ರ ಏಕೈಕಂ ತೃಚಮಾವಪೇರನ್ । ಚತುರ್ಥೇಽಹನೀತಿ ಖಂಡೇ ಯಚ್ಚಿದ್ಧಿ ಸತ್ಯ ಸೋಮಪಾ ಇತ್ಯೇಕೈಕಮೇವಮೇವ । ಆ. ೭-೧೧ । ಇತಿ ಸೂತ್ರಿತಂ ॥**

ಅನುವಾದವು—**ಯಚ್ಚಿದ್ಧಿ ಸತ್ಯ ಸೋಮಪಾ** ಎಂಬುದು ಆರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಯಚ್ಚಿದ್ಧಿ ಸಪ್ತ ಪಾಂಕ್ತಮಿತಿ** ಎಂದು ಹೇಳಿರುವುದು ಎಂದರೆ **ಯಚ್ಚಿದ್ಧಿ** ಎಂಬ ಸೂಕ್ತದಲ್ಲಿ ಏಳು ಋಕ್ಕುಗಳಿರುವವು. ಇದಕ್ಕೆ ಶುನಶ್ಶೇಪನು ಋಷಿಯು, ಪಂಕ್ತಿಛಂದಸ್ಸು ಎಂದು. ಪೃಷ್ಠ್ಯಷಡಹವೆಂಬ ಸೋಮಯಾಗ ವಿಶೇಷದಲ್ಲಿ ಐದನೆಯದಿನ ಮಾಧ್ಯಂದಿನ ಸವನವೆಂಬ ಮಧ್ಯಾಹ್ನ ಕಾಲದಲ್ಲಿ ಮಾಡುವ ಸೋಮಾಭಿಷವಣಕಾರ್ಯದಲ್ಲಿ ಹೋತೃವಿನ ಸಹಾಯಕರಾದ ಮೂರು ಜನ ಋತ್ವಿಕ್ಕುಗಳು ಈ ಸೂಕ್ತದ ಋಕ್ಕುಗಳನ್ನು ತೃಚವನ್ನಾಗಿ (ಮೂರು ಋಕ್ಕುಗಳು) ವಿಂಗಡಿಸಿ ತಮ್ಮ ತಮ್ಮ ಶಸ್ತ್ರಮಂತ್ರಪಠನಮಾಡುವಾಗ ಪಠಿಸುವರೆಂದು ಆಶ್ವಲಾಯನ ಶ್ರೌತಸೂತ್ರದ **ಚತುರ್ಥೇಽಹನಿ** ಎಂಬ ಖಂಡದ **ಯಚ್ಚಿದ್ಧಿ ಸತ್ಯ ಸೋಮಪಾ** ಎಂಬ ಸೂತ್ರದಿಂದ ವಿವೃತವಾಗಿರುವುದು.

## ಸೂಕ್ತ—೨೯

|| ಮಂಡಲ—೧ || ಅನುವಾಕ—೬ || ಸೂಕ್ತ—೨೯ ||

|| ಅಷ್ಟಕ—೧ || ಅಧ್ಯಾಯ—೨ || ವರ್ಗ—೨೭ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ||

|| ಋಷಿಃ—ಶುನಃಶೇಪ ಆಜೀಗರ್ತಿಃ ||

|| ದೇವತಾ—ಇಂದ್ರಃ |

|| ಛಂದಃ—ಪಂಕ್ತಿಃ ||

|| ಸಂಹಿತಾಪಾಠಃ ||

ಯಚ್ಚಿದ್ಧಿ ಸತ್ಯ ಸೋಮಪಾ ಅನಾಶಸ್ತಾ ಇವ ಸ್ಮಸಿ |
ಆ ತೂ ನ ಇನ್ದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು
ತುವೀಮಘ || ೧ ||

|| ಪದಪಾಠಃ ||

ಯತ್ | ಚಿತ್ | ಹಿ | ಸತ್ಯ | ಸೋಮಽಪಾಃ | ಅನಾಶಸ್ತಾಃಽಇವ | ಸ್ಮಸಿ |
ಆ | ತು | ನಃ | ಇನ್ದ್ರ | ಶಂಸಯ | ಗೋಷು | ಅಶ್ವೇಷು | ಶುಭ್ರಿಷು |
ಸಹಸ್ರೇಷು | ತುವಿಽಮಘ || ೧ ||

|| ಸಾಯಣಭಾಷ್ಯಂ ||

ವಿಶ್ವೈರ್ದೇವೈಃ ಪ್ರೇರಿತಃ ಶುನಃಶೇಪ ಏತದಾದಿಕಾಭಿರ್ದ್ವಾವಿಂಶತಿಸಂಖ್ಯಾಕಾಭಿರ್ಋಗ್ಭಿರಿಂದ್ರಂ ತುಷ್ಟಾವ | ತಥಾ ಚ ಬ್ರಾಹ್ಮಣಂ | ತಂ ವಿಶ್ವೇ ದೇವಾ ಊಚುರಿಂದ್ರೋ ವೈ ದೇವಾನಾಮೋಜಿಷ್ಠೋ ಬಲಿಷ್ಠಃ ಸಹಿಷ್ಠಃ ಸತ್ತಮಃ ಪಾರಯಿಷ್ಣುತಮಸ್ತಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸ ಇಂದ್ರಂ ತುಷ್ಟಾವ ಯಚ್ಚಿದ್ಧಿ ಸತ್ಯ ಸೋಮಪಾ ಇತ್ಯೇತೇನ ಸೂಕ್ತೇನೋತ್ತರಸ್ಯ ಚ ಪಂಚದಶಭಿಃ | ಐ. ಬ್ರಾ.

೭-೧೬ । ಇತಿ ॥ ಹೇ ಸೋಮಪಾಃ ಸೋಮಸ್ಯ ಪಾತಃ ಸತ್ಯ ಸತ್ಯವಾದಿನ್ನಿಂದ್ರ ಯಚ್ಚಿದ್ಧಿ ಯದ್ಯಪಿ ವಯಮನಾಶಸ್ತಾ ಇವ ಸ್ಮಸಿ ಅಪ್ರಶಸ್ತಾ ಇವ ಭವಾಮಃ ತಥಾಪಿ ಹೇ ತುವೀಮಘ ಬಹುಧನೇಂದ್ರ ತ್ವಂ ಗೋಷ್ವಶ್ವೇಷು ಶುಭ್ರಿಷು ಶೋಭನೇಷು ಸಹಸ್ರೇಷು ಸಹಸ್ರಸಂಖ್ಯಾಕೇಷು ಚ ನಿಮಿತ್ತಭೂತೇಷು ನೋಽಸ್ಮಾನಾ ಶಂಸಯ । ಸರ್ವತಃ ಪ್ರಶಸ್ತಾನ್ಕುರು । ಅಸ್ಮದ್ದೋಷಮನಪೇಕ್ಷ್ಯ ಗವಾದೀನ್ಪ್ರಯಚ್ಛೇತ್ಯರ್ಥಃ ॥ ಸೋಮಪಾಃ । ವಿಜಂತಃ । ಆಮಂತ್ರಿತನಿಘಾತಃ । ಅನಾಶಸ್ತಾ ಇವ । ಶಸು ಸ್ತುತೌ । ನಿಷ್ಠೇತಿ ಭಾವೇ ಕ್ತಃ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ನಞೋ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸ್ಮಸಿ । ಇದಂತೋ ಮಸಿಃ । ತೂ ನಃ । ಋಚಿ ತುನುಘೇತ್ಯಾದಿನಾ ದೀರ್ಘಃ । ಗೋಷು । ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತತ್ವಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಅಶ್ವೇಷು । ಅಶ್ನುತೇಽಧ್ವಾನಮಿತ್ಯಶ್ವಃ । ಅಶಿಪ್ರುಷೀತ್ಯಾದಿನಾ ಕ್ವನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಶುಭ್ರಿಷು । ಶುಭ ದೀಪ್ತೌ । ಅದಿಶದಿಭೂಶುಭಿಭ್ಯಃ ಕ್ರಿನ್ । ಉ. ೪-೬೫ । ಇತಿ ಕ್ರಿನ್ಪ್ರತ್ಯಯಃ । ವ್ಯತ್ಯಯೇನಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಸೋಮಪಾಃ**—ಸೋಮರಸವನ್ನು ಪಾನಮಾಡುವವನೂ । **ಸತ್ಯ**—ಸತ್ಯವಾದಿಯೂ ಆದ ಎಲೈ ಇಂದ್ರನೇ । **ಯಚ್ಚಿದ್ಧಿ**—ಒಂದುವೇಳೆ । **ಅನಾಶಸ್ತಾ ಇವ ಸ್ಮಸಿ**—(ನಾವು) ಅನರ್ಹರಂತೆ ಇದ್ದರೂ ಸಹ (ಅನರ್ಹರಾದರೂ) । **ತುವೀಮಘ**—ಪ್ರಭೂತವಾದ ಧನವುಳ್ಳ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮನ್ನು । **ಸಹಸ್ರೇಷು**—ಸಹಸ್ರಸಂಖ್ಯಾಕವೂ । **ಶುಭ್ರಿಷು**—ಮಂಗಳಕರಗಳೂ ಆದ । **ಗೋಷು**—ಗೋವುಗಳಲ್ಲಿಯೂ । **ಅಶ್ವೇಷು**—ಕುದುರೆಗಳಲ್ಲಿಯೂ । **ಆ ಶಂಸಯ**—(ಅವುಗಳನ್ನು ಹೊಂದಲು) ಸಂಪೂರ್ಣವಾಗಿ ಅರ್ಹರಾದವರನ್ನಾಗಿ ಮಾಡು (ಎಂದರೆ ಸಾವಿರಾರು ಗೋವುಗಳನ್ನೂ ಅಶ್ವಗಳನ್ನೂ ನಮಗೆ ಕೊಡು) ॥

॥ ಭಾವಾರ್ಥ ॥

ಸೋಮರಸವನ್ನು ಪಾನಮಾಡುವವನೂ ಮತ್ತು ಸತ್ಯವಾದಿಯೂ ಆದ ಎಲೈ ಇಂದ್ರನೇ, ಒಂದುವೇಳೆ ನಿನ್ನ ಧನವನ್ನು ಪಡೆಯಲು ಅನರ್ಹರಾಗಿದ್ದರೂ ಸಹ ಪ್ರಭೂತಧನವುಳ್ಳ ನೀನು ನಮ್ಮ ನಿಮಿತ್ತ ಭೂತಗಳೂ ಮಂಗಳಕರಗಳೂ ಆದ ಸಹಸ್ರಸಂಖ್ಯಾಕವಾದ ಗೋವುಗಳನ್ನೂ ಕುದುರೆಗಳನ್ನೂ ಪಡೆಯಲು ನಮ್ಮನ್ನು ಅರ್ಹರಾದವರನ್ನಾಗಿ ಮಾಡಿ ನಮಗೆ ನಿನ್ನ ಐಶ್ವರ್ಯವನ್ನು ತುಂಬು.

## English Translation.

O truth-speaking Indra, drinker of Soma juice, although we do not deserve it, yet you Indra, of plentiful wealth, enrich us with thousands of excellent cows and horses.

|| ವಿಶೇಷವಿಷಯಗಳು ||

ಶುನಶ್ಶೇಪನು ನಮೋ ಮಹದ್ಭ್ಯಃ ಎಂಬ ಋಕ್ಕಿನಿಂದ ವಿಶ್ವೇದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು-ಎಲೈ ಶುನಶ್ಶೇಪನೇ ದೇವತೆಗಳಲ್ಲೆಲ್ಲಾ ಇಂದ್ರನೇ ಬಹಳ ಬಲಿಷ್ಠನು, ಶ್ರೇಷ್ಠನು, ಸಹಿಷ್ಣುವು, ಅವನೇ ನಿನ್ನನ್ನು ಈ ಬಂಧನದಿಂದ ಪಾರುಮಾಡಲು ಸಮರ್ಥನು. ಆದುದರಿಂದ ನೀನು ಆ ಇಂದ್ರನನ್ನು ಸ್ತುತಿಸು. ಬಳಿಕ ನಾವು ನಿನ್ನನ್ನು ಬಂಧಮುಕ್ತನನ್ನಾಗಿ ಮಾಡುವೆವು ಎಂದು ಹೇಳಲು, ಶುನಶ್ಶೇಪನು ಅವರ ಮಾತಿಗೆ ಸಮ್ಮತಿಸಿ **ಯಚ್ಚಿದ್ಧಿ ಸತ್ಯ ಸೋಮಪಾ** ಎಂಬ ಸೂಕ್ತದ ಏಳು ಋಕ್ಕುಗಳಿಂದಲೂ ಮುಂದಿನ **ಆ ವ ಇಂದ್ರಂ ಕ್ರಿವಿಂ ಯಥಾ** ಎಂಬ ಸೂಕ್ತದ ಹದಿನೈದು ಋಕ್ಕುಗಳಿಂದಲೂ ಒಟ್ಟು ಇಪ್ಪತ್ತೆರಡು ಋಕ್ಕುಗಳಿಂದ ಇಂದ್ರನನ್ನು ಸ್ತೋತ್ರಮಾಡುವನು. (ಐ. ಬ್ರಾ. ೭-೧೬). ಈ ವಿಷಯವನ್ನು ನಾವು ಶುನಶ್ಶೇಪಾಖ್ಯಾನದಲ್ಲಿಯೇ ವಿವರಿಸಿದ್ದೇವೆ.

**ಸತ್ಯ—ಸತ್ಯವಾದಿನ್** । ಸತ್ಯವನ್ನೇ ಹೇಳುವವನು.

**ಸೋಮಪಾಃ—ಸೋಮಸ್ಯ ಪಾತಃ** । ಸೋಮರಸವನ್ನು ಪಾನಮಾಡುವವನು.

**ಅನಾಶಸ್ತಾ ಇವ—ಶಸ್ತು ಸ್ತುತೌ । ಅನಾಶಸ್ತಾ ಇವ ಅಪ್ರಶಸ್ತಾ ಇವ । ಈಷಚ್ಛಂಸನಂ ಸ್ತುತಿರಾಶಸ್ತಂ ಅವಿದ್ಯಮಾನಂ ಆಶಸ್ತಂ ಯೇಷಾಂ ತೇ ಅನಾಶಸ್ತಾಃ ಈಷತ್ಸ್ತುತಿವರ್ಜಿತಾಃ** । ನಾವು ಪ್ರಶಂಸಾರ್ಹರಲ್ಲ ಅಥವಾ ಸ್ತುತಿಸಲ್ಪಡಲು ಯೋಗ್ಯರಲ್ಲದವರು ಎಂದರೆ ನಾವು ನಿನ್ನ ಅನುಗ್ರಹವನ್ನು ಪಡೆಯಲು ಅರ್ಹರಲ್ಲದವರು. ಆದರೂ ನಾವು ನಿನ್ನನ್ನು ಸ್ತುತಿಸುವುದರಿಂದ ನೀನು ಸಂತುಷ್ಟನಾಗಿ ನಮಗೆ ಬೇಕಾದ ಗೋ ಅಶ್ವಾದಿಗಳನ್ನು ಕೊಡಬೇಕೆಂದು ಪ್ರಾರ್ಥನೆಯು.

**ಆ ತೂ ನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ—**ಇಲ್ಲಿ ಗೋಷು ಅಶ್ವೇಷು ಶಂಸಯ ಎಂಬ ಶಬ್ದಗಳಿಗೆ, ಗೋವುಗಳಲ್ಲಿಯೂ ಅಶ್ವಗಳಲ್ಲಿಯೂ ನಮ್ಮನ್ನು ಪ್ರಶಸ್ತರನ್ನಾಗಿ ಮಾಡು ಎಂಬರ್ಥವು ಭಾಸವಾಗುವುದು ಎಂದರೆ ನಮಗೆ ಸಾವಿರಾರು ಗೋವುಗಳನ್ನೂ ಅಶ್ವಗಳನ್ನೂ ಕೊಟ್ಟು ನಾವು ಪ್ರಸಿದ್ಧರಾಗುವಂತೆಯೂ ಜನರು ನಮ್ಮನ್ನು ಪ್ರಶಂಸೆ ಮಾಡುವಂತೆಯೂ ಮಾಡು ಎಂದು ಮುಖ್ಯಾಭಿಪ್ರಾಯವು.

**ತುವೀಮಘ—** ತುವಿ ಎಂದರೆ ಬಹು (ನಿ. ೩-೧೩) ಮಘ ಎಂದರೆ ಧನ (ನಿ. ೩-೯). ಆದುದರಿಂದ ತುವೀಮಘವೆಂದರೆ ಬಹಳ ಧನವುಳ್ಳವನು ಎಂದರ್ಥವು.

|| ವ್ಯಾಕರಣಪ್ರಕ್ರಿಯಾ ||

**ಸೋಮಪಾಃ—'ಸೋಮಂ ಪಿಬತಿ ಇತಿ ಸೋಮಪಾಃ'** ಪಾ ಪಾನೇ ಧಾತು ಭ್ವಾದಿ. **'ಆತೋ ಮನಿನ್ ಕ್ವನಿಪ್ ವನಿಪಶ್ಚ'** (ಪಾ. ಸೂ. ೩-೨-೭೪) ಎಂಬುದರಿಂದ ಆದಂತವಾದುದರಿಂದ ವಿಚ್ ಪ್ರತ್ಯಯ ಬರುತ್ತದೆ. ವಿಚ್ಚಿನಲ್ಲಿ ಸರ್ವಲೋಪವಾಗುವುದರಿಂದ ಆದಂತವಾದ ಶಬ್ದವಾಗುತ್ತದೆ. ಸಂಬುದ್ಧಿಯಾದುದರಿಂದ **'ಆಮಂತ್ರಿತಸ್ಯ ಚ'** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅನಾಶಸ್ತಾ ಇವ—** ಶಂಸು ಸ್ತುತೌ ಧಾತು. ಭ್ವಾದಿ **'ನಿಷ್ಠಾ'** (ಪಾ ಸೂ. ೩-೨-೧೦೨) ಎಂಬುದರಿಂದ ಭಾವಾರ್ಥದಲ್ಲಿ ಕ್ತಪ್ರತ್ಯಯ ಬರುತ್ತದೆ. **'ಯಸ್ಯ ವಿಭಾಷಾ'** (ಪಾ. ಸೂ. ೭-೨-೧೫) ಎಂಬುದರಿಂದ ಆರ್ಧಧಾತುಕ

ವಾದರೂ ಇಟ್ ಬರುವುದಿಲ್ಲ. ಶಂಸ್+ತ ಎಂದಿರುವಾಗ **'ಅನಿದಿತಾಂ ಹಲಃ'** ಎಂಬುದರಿಂದ ಉಪಧಾಭೂತ ನಕಾರಕ್ಕೆ ಲೋಪಬರುತ್ತದೆ. ಶಸ್ತ ಎಂದು ರೂಪವಾಗುತ್ತದೆ. ಆಙ್ ಉಪಸರ್ಗ **'ನ ವಿದ್ಯತೇ ಆಶಸ್ತಂ ಯೇಷಾಂ ತೇ ಅನಾಶಸ್ತಾಃ'** ಬಹುವ್ರೀಹಿ ಸಮಾಸ. ಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾದರೆ **'ನಞಸುಭ್ಯಾಂ'** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರವು ಬರುತ್ತದೆ. ರುತ್ವಯತ್ವ ಲೋಪ ಬಂದರೆ ಅನಾಶಸ್ತಾ ಇವ ಎಂದು ರೂಪವಾಗುವುದು

**ಸ್ಮಸಿ**—ಅಸ ಭುವಿ ಧಾತು. ಅದಾದಿ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ ಬರುತ್ತದೆ. ಆಸ್+ಮಸ್ ಎಂದಿರುವಾಗ **'ಶ್ನಸೋರಲ್ಲೋಪಃ'** (ಪಾ. ಸೂ. ೬-೪-೧೧೧) ಎಂಬುದರಿಂದ ಮಸಿಗೆ ಜಿದ್ವದ್ಭಾವ ವಿರುವುದರಿಂದ ಅಸ್ಸಿನ ಅಕಾರಕ್ಕೆ ಲೋಪ ಬರುತ್ತದೆ. ಸ್+ಮಸ್ ಎಂದಿರುವಾಗ **'ಇದಂತೋ ಮಸಿ'** (ಪಾ. ಸೂ. ೭-೧-೪೬) ಎಂಬುದರಿಂದ ಮಸಿಗೆ ಇಕಾಗಮವು ಬರುತ್ತದೆ. ಸ್ಮಸಿ ಎಂದು ರೂಪವಾಗುತ್ತದೆ.

**ತೂ ನ**—**'ಋಚಿ ತುನುಘ'** (ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾಪಾಠದಲ್ಲಿ ತು ಎಂಬುದಕ್ಕೆ ದೀರ್ಘ ಬರುತ್ತದೆ.

**ಗೋಷು**—ಗೋ ಶಬ್ದವು ಏಕಾಚಾದುದರಿಂದ **'ಸಾವೇಕಾಚಸ್ತೃತೀಯಾದಿಃ'** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತವು ಪ್ರಾಪ್ತವಾದರೆ **'ನ ಗೋಶ್ವನ್ ಸಾವವರ್ಣ'** (ಪಾ. ಸೂ. ೬-೧-೧೮೨) ಎಂಬುದರಿಂದ ನಿಷೇಧ ಬರುವುದರಿಂದ ಆದ್ಯುದಾತ್ತವಾಗುತ್ತದೆ.

**ಅಶ್ವೇಷು**—**'ಅಶ್ನುತೇ ಅಧ್ವಾನಂ ಇತಿ ಅಶ್ವಃ'** ಅಶೂ ವ್ಯಾಪ್ತೌ ಧಾತು. ಸ್ವಾದಿ **'ಅಶಿಪ್ರುಷಿಲಟಿಕಣಿ'** (ಉ. ಸೂ. ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯ ಬರುತ್ತದೆ. ಅಶ್ವ ಎಂದು ರೂಪವಾಗುತ್ತದೆ. ಕ್ವನಿನಲ್ಲಿ ನಕಾರ ಇತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಶುಭ್ರಿಷು**—ಶುಭ ದೀಪ್ತೌ ಧಾತು. ಭ್ವಾದಿ. **'ಅದಿ ಶದಿಭೂಶುಭಿಭ್ಯಃಕ್ರಿನ್'** (ಉ. ಸೂ. ೪-೫೦೫) ಎಂಬುದರಿಂದ ಕ್ರಿನ್ ಪ್ರತ್ಯಯ ಬರುತ್ತದೆ. ಸಪ್ತಮೀ ಬಹುವಚನದಲ್ಲಿ ಶುಭ್ರಿಷು ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರವು ಪ್ರಾಪ್ತವಾದರೆ ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ. ಶುಭ್ರಿಷು ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ಶಿಪ್ರಿನ್ವಾಜಾನಾಂ ಪತೇ ಶಚೀವಸ್ತವ ದಂಸನಾ ।
ಆ ತೂ ನ ಇನ್ದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹ-
ಸ್ರೇಷು ತುವೀಮಘ ॥ ೨ ॥

॥ ಪದಪಾಠಃ ॥

ಶಿಪ್ರಿನ್ । ವಾಜಾನಾಂ । ಪತೇ । ಶಚೀಽವಃ । ತವ । ದಂಸನಾ ।
ಆ । ತು । ನಃ । ಇನ್ದ್ರ । ಶಂಸಯ । ಗೋಷು । ಅಶ್ವೇಷು । ಶುಭ್ರಿಷು । ಸಹ-
ಸ್ರೇಷು । ತುವಿಽಮಘ ॥ ೨ ॥

॥ ಸಾಯಣಭಾಷ್ಯಂ ॥

ಹೇ ಶಚೀವಃ ಶಕ್ತಿಮನ್ ಶಿಪ್ರಿನ್ ಶೋಭನಹನೂಯುಕ್ತ ವಾಜಾನಾಂ ಪತೇಽನ್ನಾನಾಂ ಪಾಲಕ ತವ ದಂಸನಾ ಕರ್ಮವಿಶೇಷೋಽನುಗ್ರಹರೂಪಃ ಸರ್ವದಾ ವರ್ತತೇ । ಅನ್ಯತ್ಪೂರ್ವವತ್ ॥ ಶಿಪ್ರಿನ್ । ಶಿಪ್ರೇ ಹನೂ ನಾಸಿಕೇ ವಾ । ನಿ. ೬-೧೭ । ಇತಿ ಯಾಸ್ಕಃ । ಅತ ಇನಿಠನಾವಿತಿ ಮತ್ವರ್ಥೀಯ ಇನಿಃ । ಆಮಂತ್ರಿತಾದ್ಯುದಾತ್ತತ್ವಂ । ವಾಜಾನಾಂ ಪತೇ । ಸುಬಾಮಂತ್ರಿತ ಇತಿ ಪರಾಂಗವದ್ಭಾವಾತ್ ಷಷ್ಠ್ಯಾ-ಮಂತ್ರಿತಸಮುದಾಯನಿಘಾತಃ । ನ ಚಾಮಂತ್ರಿತಂ ಪೂರ್ವಮವಿದ್ಯಮಾನವದಿತಿ ಶಿಪ್ರಿನ್ನಿತ್ಯಸ್ಯಾವಿದ್ಯ-ಮಾನವತ್ತ್ವೇನ ಪದಾದಪರತ್ವಾತ್ಪಾದಾದಿತ್ವಾಚ್ಚ ನ ನಿಘಾತಃ । ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮಿತ್ಯವಿದ್ಯಮಾನವತ್ತ್ವಪ್ರತಿಷೇಧಾತ್ । ಶಚೀವಃ । ಛಂದಸೀರ ಇತಿ ಮತುಪೋ ವತ್ವಂ। ಮತುವಸೋ ರುರಿತಿ ರುತ್ವೇ ಖರವಸಾನಯೋರ್ವಿಸರ್ಜನೀಯಃ । ಪಾ. ೮-೩-೧೫ । ಪಾದಾದಿತ್ವಾದಾ-ಮಂತ್ರಿತನಿಘಾತಾಭಾವಃ ॥

॥ ಪ್ರತಿಪದಾರ್ಥ ॥

**ಶಚೀವಃ**—ಪ್ರಭಾವಶಾಲಿಯೂ । **ಶಿಪ್ರಿನ್**—ಸುಂದರವಾದ ಕೆನ್ನೆ (ರೂಪ) ಯುಳ್ಳವನೂ, ಎಂದರೆ ಸುಂದರನೂ । **ವಾಜಾನಾಂ ಪತೇ**—ಅನ್ನಗಳ ಪಾಲಕನೂ ಆದ ಎಲೈ ಇಂದ್ರನೇ । **ತವ**—ನಿನ್ನ । **ದಂಸನಾ**—ಅನುಗ್ರಹಬುದ್ಧಿಯು (ಶಾಶ್ವತವಾಗಿ ನಮ್ಮ ಮೇಲೆ ಇರುತ್ತದೆ ಆದ್ದರಿಂದ) । **ತುವೀಮಘ**—ಪ್ರಭೂತವಾದ

ಧನವುಳ್ಳ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮನ್ನು । **ಸಹಸ್ರೇಷು**—ಸಹಸ್ರಸಂಖ್ಯಾಕವೂ । **ಶುಭ್ರಿಷು**—ಮಂಗಳಕರಗಳೂ ಆದ । **ಗೋಷು**—ಗೋವುಗಳಲ್ಲಿಯೂ । **ಅಶ್ವೇಷು**—ಕುದುರೆಗಳಲ್ಲಿಯೂ । **ಆ ಶಂಸಯ**—(ಅವುಗಳನ್ನು ಹೊಂದಲು) ಸಂಪೂರ್ಣವಾಗಿ ಅರ್ಹರಾದವರನ್ನಾಗಿ ಮಾಡು. (ಎಂದರೆ ಸಾವಿರಾರು ಗೋವುಗಳನ್ನೂ ಅಶ್ವಗಳನ್ನೂ ನಮಗೆ ಕೊಡು).

॥ ಭಾವಾರ್ಥ ॥

ಪ್ರಭಾವಶಾಲಿಯೂ, ಸುಂದರವಾದ ರೂಪವುಳ್ಳವನೂ ಮತ್ತು ಅನ್ನಗಳ ಪಾಲಕನೂ ಆದ ಎಲೈ ಇಂದ್ರನೇ ನಿನ್ನ ಅನುಗ್ರಹ ಬುದ್ಧಿಯು ನಮ್ಮ ಮೇಲೆ ಶಾಶ್ವತವಾಗಿ ಇದ್ದೇ ಇರುತ್ತದೆ. ಆದ್ದರಿಂದ ಪ್ರಭೂತವಾಗಿ ಧನವುಳ್ಳ ಎಲೈ ಇಂದ್ರನೇ, ಮಂಗಳಕರಗಳೂ ಮತ್ತು ಸಹಸ್ರ ಸಂಖ್ಯಾತಗಳೂ ಆದ ಗೋವು ಮತ್ತು ಕುದುರೆಗಳ ರೂಪದಲ್ಲಿರುವ ನಿನ್ನ ಐಶ್ವರ್ಯವನ್ನು ನಮಗೆ ತುಂಬಿಕೊಡು.

## English Translation.

Handsome and mighty lord of food, your exploits are ever before us; therefore, Indra of plentiful wealth, enrich us with thousands of excellant cows and horses.

॥ ವಿಶೇಷ ವಿಷಯಗಳು ॥

**ಶಿಪ್ರಿನ್—ಶೋಭನಹನೂಯುಕ್ತ**—ಸುಂದರವಾದ ಗಲ್ಲವುಳ್ಳವನು ಎಂದರ ಸುಂದರ ಮುಖವುಳ್ಳವನು, ಸುಂದರಾಕಾರನು.

**ಶಚೀವಃ, ದಂಸನಾ**— ಶಚೀ, ದಂಸಸ್ ಶಬ್ದಗಳು ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಶಚೀವಃ ಎಂದರೆ ಶಕ್ತಿಮಾನ್ ಶಕ್ತಿಯುಳ್ಳವನೆಂದೂ, ದಂಸಸಾ ಎಂದರೆ ಸಾಹಸ ಕರ್ಮ ಅಥವಾ ಕರ್ಮರೂಪವಾದ ಅನುಗ್ರಹವು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಶಿಪ್ರಿನ್—'ಶಿಪ್ರೇ ಹನೂ ನಾಸಿಕೇ ವಾ'** (ನಿರು. ೬–೧೭) ಇತಿ **ಯಾಸ್ಕಃ**. ಶಿಪ್ರ ಎಂದರೆ ದವಡೆ ಅಥವಾ ಮೂಗು ಎಂದು ಯಾಸ್ಕರು ವಿವರಿಸಿರುತ್ತಾರೆ. ಶಿಪ್ರೇ ಅಸ್ಯ ಸ್ತ ಇತಿ ಶಿಪ್ರೀ. **'ಅತ ಇನಿಠನೌ'** (ಪಾ. ಸೂ. ೫–೨–೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ ಬರುತ್ತದೆ. ಸಂಬುದ್ಧಿಯಲ್ಲಿ ಶಿಪ್ರಿನ್ ಎಂದು ರೂಪವಾಗುತ್ತದೆ ಪಾದದ ಆದಿಯಲ್ಲಿರುವುದರಿಂದ **'ಆಮಂತ್ರಿತಸ್ಯ'** (ಪಾ. ಸೂ. ೬–೧–೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಾಜಾನಾಂ ಪತೇ—'ಸುಬಾಮಂತ್ರಿತೇ ಪರಾಂಗವತ್ ಸ್ವರೇ'** (ಪಾ. ಸೂ. ೨–೧–೨) ಎಂಬುದರಿಂದ ಪರದಲ್ಲಿ ಆಮಂತ್ರಿತವಿರುವುದರಿಂದ ಪೂರ್ವದಲ್ಲಿರುವ ಸುಬಂತವು ಪರದ ಆಮಂತ್ರಿತದ ಅವಯವಭಾವವನ್ನು ಹೊಂದುತ್ತದೆ. ಆದುದರಿಂದ ಅಷ್ಟಮಿಕವಾದ **'ಆಮಂತ್ರಿತಸ್ಯ ಚ'** ಎಂಬ ಸೂತ್ರದಿಂದ ಬರುವ ಸರ್ವಾನುದಾತ್ತ

ಸ್ವರವು ಷಷ್ಠ್ಯಂತಸಹಿತವಾದ ಸಮುದಾಯಕ್ಕೇ ಬರುತ್ತದೆ. ಇಲ್ಲಿ ಪೂರ್ವದಲ್ಲಿಯೂ ಶಿಪ್ರಿನ್ ಎಂದು ಆಮಂತ್ರಿತವಿದೆ. ಆದುದರಿಂದ **'ಆಮಂತ್ರಿತಂ ಪೂರ್ವಮವಿದ್ಯಮಾನವತ್'** (ಪಾ. ಸೂ. ೮-೧-೭೨) ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವ ಬರುತ್ತದೆ. ಆಗ ವಾಜಾನಾಂ ಪತೇ ಎಂಬ ಆಮಂತ್ರಿತ ಸಮುದಾಯವು ಪೂರ್ವದಲ್ಲಿ ಪದವಿಲ್ಲದಿರುವುದರಿಂದ ಪಾದದ ಆದಿಯಲ್ಲಿ ಬಂದಂತಾಗುತ್ತದೆ. ಆಗ **'ಅಪಾದಾದೌ'** ಎಂದು ನಿಷೇಧಮಾಡಿರುವುದರಿಂದ ಆಷ್ಟಮಿಕ ನಿಘಾತವು ಬರಲು ಅವಕಾಶವಿಲ್ಲ. ಹೀಗಿರಲು ಪೂರ್ವದಲ್ಲಿ ಹೇಳಿದ ಪ್ರಕ್ರಿಯೆಯು ಹೇಗೆ ಸಂಗತವಾಗುತ್ತದೆ? ಎಂದರೆ, **'ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮ್'** (ಪಾ. ಸೂ. ೮-೧-೭೩) ಎಂಬುದರಿಂದ ಇಲ್ಲಿ ಎರಡು ಆಮಂತ್ರಿತಗಳಿಗೂ ಏಕಾರ್ಥವಾಚಿತ್ವವಿರುವುದರಿಂದ ಸಾಮಾನಾಧಿಕರಣ್ಯವು ಬಂದಂತಾಗುತ್ತದೆ. ಆದುದರಿಂದ ಅವಿದ್ಯಮಾನವದ್ಭಾವ ಬರುವುದಿಲ್ಲ. ಇದರಿಂದ ಪೂರ್ವದ ಆಶಂಕೆಗೆ ಅವಕಾಶವಿಲ್ಲ.

**ಶಚೀವಃ**—ಶಚೀ ಅಸ್ಯ ಅಸ್ತಿ ಇತಿ ಶಚೀಮತ್ **'ಛಂದಸೀರಃ'** (ಪಾ. ಸೂ. ೮-೨-೧೫) ಇಕಾರ, ರೇಫದ ಪರದಲ್ಲಿರುವ ಮತುಪಿನ ಮಕಾರಕ್ಕೆ ಛಂದಸ್ಸಿನಲ್ಲಿ ವತ್ವ ಬರುತ್ತದೆ ಎಂಬುದರಿಂದ ಇಲ್ಲಿ ಮಕಾರಕ್ಕೆ ವಕಾರ ಬರುತ್ತದೆ. **'ಮತುವಸೋರುಃ ಸಂಬುದ್ಧೌ'** (ಪಾ. ಸೂ. ೮-೩-೧) ಎಂಬುದರಿಂದ ರುತ್ವ ಬರುತ್ತದೆ. ಶಚೀವರ್ ಎಂದಿರುವಾಗ ಅವಸಾನಪರದಲ್ಲಿರುವುದರಿಂದ **'ಖರವಸಾನಯೋರ್ವಿಸರ್ಜನೀಯಃ'** (ಪಾ. ಸೂ, ೮-೩-೧೫) ಎಂಬುದರಿಂದ ರೇಫಕ್ಕೆ ವಿಸರ್ಗ ಬರುತ್ತದೆ. ಪಾದದ ಆದಿಯಲ್ಲಿರುವುದರಿಂದ ಆಷ್ಟಮಿಕನಿಘಾತವು ಬರುವುದಿಲ್ಲ. **'ಆಮಂತ್ರಿತಸ್ಯ'** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ. ॥ ೨ ॥

॥ ಸಂಹಿತಾಪಾಠಃ ॥

ನಿ ಷ್ವಾಪಯಾ ಮಿಥೂದೃಶಾ ಸಸ್ತಾಮಬುಧ್ಯಮಾನೇ ।
ಆ ತೂ ನ ಇನ್ದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹ-
ಸ್ರೇಷು ತುವೀಮಘ ॥ ೩ ॥

॥ ಪದಪಾಠಃ ॥

ನಿ । ಸ್ವಾಪಯ । ಮಿಥುಽದೃಶಾ । ಸಸ್ತಾಂ । ಅಬುಧ್ಯಮಾನೇ ಇತಿ ।
ಆ । ತು । ನಃ । ಇನ್ದ್ರ । ಶಂಸಯ । ಗೋಷು । ಅಶ್ವೇಷು । ಶುಭ್ರಿಷು । ಸಹ-
ಸ್ರೇಷು । ತುವಿಽಮಘ ॥ ೩ ॥

॥ ಸಾಯಣಭಾಷ್ಯಂ ॥

**ಮಿಥೂದೃಶಾ ಪರಸ್ಪರಂ ಸಂಗತತ್ವೇನ ದೃಶ್ಯಮಾನೇ ಯಮದೂತ್ಯೌ ನಿ ಷ್ವಾಪಯ । ನಿತರಾಂ ಸುಪ್ತೇ ಕುರು । ತೇ ಚಾಸ್ಮಾನ್ಮಾರಯಿತುಮಬುಧ್ಯಮಾನೇ ಸತ್ಯೌ ಸಸ್ತಾಂ । ನಿದ್ರಾಂ ಪ್ರಾಪ್ನುತಾಂ । ಅನ್ಯತ್ಪೂರ್ವವತ್ ॥ ನಿ ಷ್ವಾಪಯ । ಸುಷಾಮಾದಿತ್ವಾತ್ ಷತ್ವಂ । ಪಾ. ೮-೩-೯೮ । ಅನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ । ಮಿಥುನತಯಾ ಯುಗಲರೂಪೇಣ ಪಶ್ಯತ ಇತಿ ಮಿಥೂದೃಶಾ । ಕ್ವಿಪ್ಚೇತಿ ದೃಶೇಃ ಕರ್ತರಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಪೂರ್ವವತ್ಪೂರ್ವಪದಸ್ಯ ದೀರ್ಘಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಸಸ್ತಾಂ । ಷಸ ಸ್ವಪ್ನೇ । ಲೋಟಿ ತಸಸ್ತಾಮ್ । ಅದಿಪ್ರಭೃತಿಭ್ಯ ಇತಿ ಶಪೋ ಲುಕ್ । ಪ್ರತ್ಯಯಸ್ವರಃ । ಪಾದಾದಿತ್ವಾನ್ನಿಘಾತಾಭಾವಃ । ಅಬುಧ್ಯಮಾನೇ । ನಞ್ ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಮಿಥೂದೃಶಾ**—ಅವರವರನ್ನೇ ಪರಸ್ಪರವಾಗಿ ನೋಡಿಕೊಳ್ಳುತ್ತಿರುವ ಇಬ್ಬರು ಯಮದೂತಿಯರನ್ನೂ । **ನಿಷ್ವಾಪಯ**—ಸಂಪೂರ್ಣವಾಗಿ ನಿದ್ರೆಮಾಡುವಂತೆ ಮಾಡು (ಅವರು ನಮ್ಮನ್ನು ಕೊಲ್ಲಲು) । **ಅಬುಧ್ಯಮಾನೇ**—ಪುನಃ ಎಚ್ಚರಗೊಳ್ಳದಿರುವಂತೆ । **ಸಸ್ತಾಂ**—ನಿದ್ರೆಮಾಡಲಿ । **ತುವೀಮಘ**–ಪ್ರಭೂತವಾದ ಧನವುಳ್ಳ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮನ್ನು । **ಸಹಸ್ರೇಷು**—ಸಹಸ್ರಸಂಖ್ಯಾಕವೂ । **ಶುಭ್ರಿಷು**—ಶ್ರೇಷ್ಠವಾದವೂ ಆದ । **ಗೋಷು**—ಗೋವುಗಳಲ್ಲಿಯೂ । **ಅಶ್ವೇಷು**—ಕುದುರೆಗಳಲ್ಲಿಯೂ । **ಆ ಶಂಸಯ**—(ಅವುಗಳನ್ನು ಹೊಂದಲು) ಸಂಪೂರ್ಣವಾಗಿ ಅರ್ಹರಾದವರನ್ನಾಗಿ ಮಾಡು (ಎಂದರೆ ಸಾವಿರಾರು ಗೋವುಗಳನ್ನೂ ಅಶ್ವಗಳನ್ನೂ ನಮಗೆ ಕೊಡು.)

॥ ಭಾವಾರ್ಥ ॥

ನಮ್ಮನ್ನು ಕೊಲ್ಲಲು ಬಂದ ಇಬ್ಬರು ಯಮದೂತಿಯರನ್ನೂ ಸಹ ಪರಸ್ಪರ ಅವರವರನ್ನೇ ನೋಡಿಕೊಂಡು ಪುನಃ ಎಚ್ಚವಾಗದಿರುವಂತೆ ನಿದ್ರೆಮಾಡಿಸು. ಪ್ರಭೂತವಾದ ಧನವುಳ್ಳ ಎಲೈ ಇಂದ್ರನೇ, ಸಹಸ್ರಸಂಖ್ಯಾಕಗಳೂ ಶ್ರೇಷ್ಠವೂ ಆದ ನಿನ್ನ ಗೋವುಗಳು ಮತ್ತು ಅಶ್ವಗಳ ರೂಪದಲ್ಲಿರುವ ನಿನ್ನ ಐಶ್ವರ್ಯದಿಂದ ನಮ್ಮನ್ನು ತುಂಬು.

## English Translation

Send to sleep the two females that see each other, let them sleep and not be wakeful ; Indra, of plentiful wealth, enrich us with thousands of excellent cows and horses.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿಲ್ಲ. ಮರಣವನ್ನು ಎದುರುನೋಡುತ್ತಿರುವ ಶುನಶ್ಶೇಪನು ತನ್ನ ಮರಣ ಕಾಲದಲ್ಲಿ ಕಾಣಿಸಿಕೊಳ್ಳಬಹುದಾದ ಇಬ್ಬರು ಯಮದೂತಿಯರು ತನ್ನ ಪ್ರಾಣಾಪಹರಣ ಮಾಡದಿರಲೆಂದೂ ಅದಕ್ಕಾಗಿ

ಆ ದೂತಿಯರು ನಿದ್ರೆಗೈಯ್ಯುವಂತಾಗಲೆಂದೂ ಮುಂದೆ ಎಚ್ಚರಗೊಳ್ಳದಿರುವಂತೆಯೂ ಆಗಲೆಂದು ಇಂದ್ರನನ್ನು ಬೇಡಿಕೊಳ್ಳುವನು. ಭಾಷ್ಯಕಾರರೂ, ಸ್ಕಂದಸ್ವಾಮಿಯೂ ಈ ವಿಧವಾದ ಅರ್ಥವನ್ನು ಇಲ್ಲಿ ಕೆಲವು ಪದಗಳ ಅಧ್ಯಾಹಾರದಿಂದ ವಿವರಿಸಿರುವರು. ಋಕ್ಕಿನಲ್ಲಿ ಯಮದೂತಿಯರೆಂಬ ಶಬ್ದವಾಗಲಿ, ಮರಣಕಾಲವಾಗಲಿ ಸೂಚಿಸುವ ಯಾವ ಶಬ್ದವೂ ಇರುವುದಿಲ್ಲ. ಅನ್ಯೋನ್ಯವಾಗಿ ಒಬ್ಬರನ್ನೊಬ್ಬರು ನೋಡುತ್ತಿರುವ ಇಬ್ಬರು ವ್ಯಕ್ತಿಗಳನ್ನು ಮಾತ್ರ ಹೇಳಿರುವುದು. ಅಬುಧ್ಯಮಾನೇ ಎಂಬ ಶಬ್ದವು ಸ್ತ್ರೀಲಿಂಗವಾಗಿದ್ದು ದ್ವಿವಚನಾಂತವಾಗಿರುವುದು. ಆದುದರಿಂದ ಇಲ್ಲಿ ಮಿಥೂದೃಶಾ ಎಂಬ ಶಬ್ದಕ್ಕೆ ಪರಸ್ಪರಾವಲೋಕನವನ್ನು ಮಾಡುತ್ತಿರುವ ಯಮದೂತಿಯರೆಂದು ಹೇಳಿರುವರು. ಋಷಿಯ ಆಶಯವೇನೆಂಬುದು ಸ್ಪಷ್ಟವಾಗಿಲ್ಲ.

**ನಿ ಷ್ವಾಪಯ**--**ನಿತರಾಂ ಸುಪ್ತೇ ಕುರು |** ಚೆನ್ನಾಗಿ ನಿದ್ರೆಗೈಯ್ಯುವಂತೆ ಮಾಡು.

**ಮಿಥೂದೃಶಾ**—ಒಬ್ಬರನ್ನೊಬ್ಬರು ನೋಡುತ್ತಿರುವ ; ಯಮದೂತ್ಯಾ ಎಂಬ ಶಬ್ದವನ್ನು ಭಾಷ್ಯಕಾರರು ಅಧ್ಯಾಹಾರಮಾಡಿರುವರು. ಇದು ದ್ವಿವಚನಾಂತಶಬ್ದವು.

**ಸಸ್ತಾಂ**— **ಷಸ ಸ್ವಪ್ನೇ |** ನಿದ್ರೆಮಾಡಲಿ

**ಅಬುಧ್ಯಮಾನೇ**—ಎಚ್ಚರಗೊಳ್ಳದಿರುವವರು. ದ್ವಿವಚನಾಂತ ಶಬ್ದವು.

|| ವ್ಯಾಕರಣಪ್ರಕ್ರಿಯಾ ||

**ನಿ ಷ್ವಾಪಯ** — ಞಿ ಷ್ವಪ್ ಶಯೇ ಧಾತು. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಉಕ್ತರೂಪವಾಗುತ್ತದೆ. ಇಲ್ಲಿ ಪಾದದ ಆದಿಯಲ್ಲಿರುವುದರಿಂದ **' ಸಾತ್‌ಪದಾದ್ಯೋಃ '** ಎಂಬುದರಿಂದ ಷತ್ವನಿಷೇಧವು ಪ್ರಾಪ್ತವಾದರೆ **' ಸುಷಾಮಾದಿಷು ಚ '** (ಪಾ. ಸೂ. ೮-೩-೯೮) ಎಂಬುದರಿಂದ ಇದು ಸುಷಾಮಾದಿಯಲ್ಲಿ ಸೇರಿರುವುದರಿಂದ ಷತ್ವ ಬರುತ್ತದೆ. **' ಅನ್ಯೇಷಾಮಪಿದೃಶ್ಯತೇ '** (ಪಾ ಸೂ. ೬-೧-೧೩೭) ಎಂಬುದರಿಂದ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ.

**ಮಿಥೂದೃಶಾ**--**' ಮಿಥುನತಯಾ ಯುಗಲರೂಪೇಣ ಪಶ್ಯತಃ '** ಇತಿ ಮಿಥುನದೃಶಾ. ಜೊತೆಯಿಂದ ನೋಡುವವರು ಎಂದರ್ಥ. **' ಕ್ವಿಪ್‌ಚ '** ಎಂಬುದರಿಂದ ಸುಬಂತ ಉಪಪದವಾಗಿರುವಾಗ ದೃಶ್ ಧಾತುವಿಗೆ ಕರ್ತ್ರರ್ಥದಲ್ಲಿ ಕ್ವಿಪ್ ಬರುತ್ತದೆ. ಕ್ವಿಪಿನಲ್ಲಿ ಸರ್ವಲೋಪವಾಗುವುದರಿಂದ ಮಿಥುನದೃಶ್ ಎಂದು ರೂಪವಾಗುತ್ತದೆ. ಕೃದಂತೋತ್ತರಪದಕವಾದ ಸಮಾಸವಾದುದರಿಂದ **' ಗತಿಕಾರಕೋಪಪದಾತ್ ಕೃತ್ '** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ. ಋಕಾರವು ಉದಾತ್ತವಾಗುತ್ತದೆ. ಹಿಂದಿನಂತೆಯೇ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ. ದ್ವಿತೀಯಾದ್ವಿವಚನ ಪರದಲ್ಲಿರುವಾಗ ಔ ವಿಭಕ್ತಿಗೆ **' ಸುಪಾಂ ಸುಲುಕ್ '** ಎಂಬುದರಿಂದ ಆಕಾರಾದೇಶ ಬರುತ್ತದೆ.

**ಸಸ್ತಾಮ್**--ಷಸ ಸ್ವಪ್ನೇ ಧಾತು. ಅದಾದಿ **ಲೋಟ್** ಪ್ರಥಮಪುರುಷ ದ್ವಿವಚನದ ತಸಿಗೆ ಲಙ್ವದ್ಭಾವ ಹೇಳಿರುವುದರಿಂದ ತಾಮಾದೇಶ ಬರುತ್ತದೆ ಧಾತ್ವಾದಿಗೆ ಸತ್ವ ಬರುತ್ತದೆ. **' ಅದಿಪ್ರಭೃತಿಭ್ಯಃ ಶಪಃ '** (ಪಾ. ಸೂ. ೨-೪-೭೨) ಎಂಬುದರಿಂದ ವಿಕರಣಕ್ಕೆ ಲುಕ್ ಬರುತ್ತದೆ. ಸಸ್ತಾಮ್ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ

ಅಂತೋದಾತ್ತವಾಗುತ್ತದೆ. ಪಾದದ ಆದಿಯಲ್ಲಿ ಬಂದಿರುವುದರಿಂದ **'ತಿಙ್ಙತಿಙಃ'** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುವುದಿಲ್ಲ.

**ಅಬುಧ್ಯಮಾನೇ**—ನಞ್ ಸಮಾಸದಲ್ಲಿ **'ತತ್ಪುರುಷೇ ತುಲ್ಯಾರ್ಥ'** (ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದಪ್ರಕೃತಿಸ್ವರವು ಬರುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ ॥ ೩ ॥

---

॥ ಸಂಹಿತಾಪಾಠಃ ॥

ಸಸನ್ತು ತ್ಯಾ ಅರಾತಯೋ ಬೋಧನ್ತು ಶೂರ ರಾತಯಃ ।
ಆ ತೂ ನ ಇನ್ದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹ-
ಸ್ರೇಷು ತುವೀಮಘ ॥ ೪ ॥

॥ ಪದಪಾಠಃ ॥

ಸಸನ್ತು । ತ್ಯಾಃ । ಅರಾತಯಃ । ಬೋಧನ್ತು । ಶೂರ । ರಾತಯಃ ।
ಆ । ತು । ನಃ । ಇನ್ದ್ರ । ಶಂಸಯ । ಗೋಷು । ಅಶ್ವೇಷು । ಶುಭ್ರಿಷು । ಸಹ-
ಸ್ರೇಷು । ತುವಿಽಮಘ ॥ ೪ ॥

॥ ಸಾಯಣಭಾಷ್ಯಂ ॥

ತ್ಯಾ ಅಸ್ಮಾಭಿರದೃಶ್ಯಮಾನಾಃ ಪರೋಕ್ಷಾಸ್ತಾ ಅರಾತಯೋಽದಾನಶೀಲಾಃ ಶತ್ರವಃ ಸಸಂತು । ನಿದ್ರಾಂ ಕುರ್ವಂತು । ಹೇ ಶೂರ ಶೌರ್ಯಯುಕ್ತೇಂದ್ರ ರಾತಯೋ ದಾನಶೀಲಾ ಬಂಧವೋ ಬೋಧಂತು । ಅಸ್ಮಾನ್ಬುಧ್ಯಂತಾಂ । ಅನ್ಯತ್ಪೂರ್ವವತ್ ॥ ಸಸಂತು । ಪ್ರತ್ಯಯಸ್ವರಃ । ಅರಾತಯಃ । ರಾ ದಾನೇ । ಮಂತ್ರೇ ವೃಷೇತ್ಯಾದಿನಾ ಭಾವೇ ಕ್ತಿನ್ । ನ ವಿದ್ಯತೇ ರಾತಿರೇಷ್ವಿತಿ ಬಹುವ್ರೀಹೌ ಪೂರ್ವಪದ-ಪ್ರಕೃತಿಸ್ವರತ್ವಂ । ನಞ್‌ಸುಭ್ಯಾಮಿತಿ ತು ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೆ ಇತಿ ನ ಭವತಿ । ಯದ್ವಾ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕರ್ತರಿ ಕ್ತಿಚ್ । ನಞ್‌ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಬೋಧಂತು । ಪಾದಾದಿತ್ವಾತ್ತಿಙ್ಙತಿಙ ಇತಿ ನಿಘಾತಾಭಾವಃ ॥

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಶಾಲಿಯಾದ ಇಂದ್ರನೇ । **ತ್ಯಾಃ**—(ನಮ್ಮ ಪರೋಕ್ಷದಲ್ಲಿರುವ) ಆ । **ಅರಾತಯಃ**—ದಾನಸ್ವಭಾವವಿಲ್ಲದ ಶತ್ರುಗಳು । **ಸಸಂತು**—ನಿದ್ರೆ ಮಾಡಲಿ । **ರಾತಯಃ**—(ಉದಾರ) ದಾನಿಗಳಾದ ಮಿತ್ರರು । **ಬೋಧಂತು**—ನಮ್ಮನ್ನು (ತಿಳಿಯಲು) ಎಚ್ಚರವಾಗಿರಲಿ । **ತುವೀಮಘ**—ಪ್ರಭೂತವಾದ ಧನವುಳ್ಳ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮನ್ನು । **ಸಹಸ್ರೇಷು**—ಸಹಸ್ರಸಂಖ್ಯಾಕವೂ । **ಶುಭ್ರಿಷು**—ಮಂಗಳಕರಗಳೂ ಆದ । **ಗೋಷು**—ಗೋವುಗಳಲ್ಲಿಯೂ । **ಅಶ್ವೇಷು**—ಕುದುರೆಗಳಲ್ಲಿಯೂ । **ಆ ಶಂಸಯ**—(ಅವುಗಳನ್ನು ಹೊಂದಲು) ಸಂಪೂರ್ಣವಾಗಿ ಅರ್ಹರಾದವರನ್ನಾಗಿ ಮಾಡು (ಎಂದರೆ ಸಾವಿರಾರು ಗೋವುಗಳನ್ನೂ ಅಶ್ವಗಳನ್ನೂ ನಮಗೆ ಕೊಡು)

॥ ಭಾವಾರ್ಥ ॥

ಪರಾಕ್ರಮಶಾಲಿಯಾದ ಇಂದ್ರನೇ, ನಮ್ಮ ಪರೋಕ್ಷದಲ್ಲಿರುವ ಶತ್ರುಗಳು ನಮ್ಮನ್ನು ತಿಳಿಯದಂತೆ ಅಲ್ಲಿಯೇ ನಿದ್ರೆಮಾಡಲಿ. ಮತ್ತು ಉದಾರದಾನಿಗಳಾದ ನಮ್ಮ ಮಿತ್ರರು ನಮ್ಮನ್ನು ತಿಳಿಯುವಂತೆ ಎಚ್ಚರವಾಗಿರಲಿ. ಪ್ರಭೂತವಾದ ಧನವುಳ್ಳ ಎಲೈ ಇಂದ್ರನೇ, ನಮ್ಮನ್ನು ಸಹಸ್ರಸಂಖ್ಯಾಕವೂ ಮಂಗಳಕರಗಳೂ ಆದ ನಿನ್ನ ಗೋವುಗಳು ಮತ್ತು ಕುದುರೆಗಳ ರೂಪದಲ್ಲಿರುವ ಐಶ್ವರ್ಯದಿಂದ ತುಂಬು.

## English Translation.

O hero, may our enemies sleep and our friends be wakeful; Indra, of plentiful wealth, enrich us with thousands of excellent cows and horses.

॥ ವಿಶೇಷವಿಷಯಗಳು ॥

**ತ್ಯಾಃ**—ತ್ಯ ಶಬ್ದಕ್ಕೆ ತಚ್ಛಬ್ದಾರ್ಥವಿರುವುದು. ಆದುದರಿಂದ ತಾಃ ಎಂದರೆ ಆ ಎಂದರ್ಥವು those.

**ರಾತಯಃ, ಅರಾತಯಃ**—**ರಾ ದಾನೇ । ಅದಾನಶೀಲಾಃ ಅರಾತಯಃ ।** ರಾ ಎಂಬ ಧಾತುವಿಗೆ ಕೊಡುವುದು ಎಂದರ್ಥವು. ನಮಗೆ ಕೊಡುವವರು ಎಂದರೆ ಸಹಾಯ ಮಾಡುವವರಿಗೆ **ರಾತಯಃ** ಮಿತ್ರರೆಂದೂ, ನಮಗೆ ಏನನ್ನೂ ಕೊಡದೆ ಅಡ್ಡಿಪಡಿಸುವವರಿಗೆ **ಅರಾತಯಃ** ಶತ್ರುಗಳೆಂದೂ ಹೆಸರು.

**ಶೂರ**—ಪರಾಕ್ರಮಶಾಲಿಯಾದ ಇಂದ್ರ.

॥ ವ್ಯಾಕರಣಪ್ರಕ್ರಿಯಾ ॥

**ಸಸಂತು**—ಷಸ ಸ್ವಪ್ನೇ ಧಾತು ಲೋಟ್ ಪ್ರಥಮಪುರುಷ ಬಹುವಚನದ ರೂಪ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಸಸಂತು ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ.

**ಅರಾತಯಃ**—ರಾ ದಾನೇ ಧಾತು. ಅದಾದಿ ಇದಕ್ಕೆ '**ಮಂತ್ರೇ ವೃಷೇಷಪಚ**' (ಪಾ. ಸೂ ೩-೩-೯೬) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯು ಬರುತ್ತದೆ. ರಾತಿ ಎಂದು ರೂಪವಾಗುತ್ತದೆ. '**ನ ವಿದ್ಯತೇ ರಾತಿಃ**

**ಏಷು ತೇ ಅರಾತಯಃ '** ಬಹುವ್ರೀಹಿಸಮಾಸ. ಆದುದರಿಂದ **' ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ '** ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ. ವಾಸ್ತವವಾಗಿ ಇಲ್ಲಿ ನಞ್ ಪೂರ್ವಪದವಿರುವುದರಿಂದ **' ನಞ್ಸುಭ್ಯಾಂ '** ಎಂಬುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾಗುತ್ತದೆ. ಆದರೆ **' ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ '** ಎಂಬುದರಿಂದ ಅದು ವೈಕಲ್ಪವೆಂದು ಇಲ್ಲಿ ಬರುವುದಿಲ್ಲ. ಅಥವಾ **' ಕ್ತಿಚ್‌ಕ್ತೌ ಚ ಸಂಜ್ಞಾಯಾಂ '** (ಪಾ. ಸೂ. ೩-೩-೧೭೪) ಎಂಬುದರಿಂದ ಕರ್ತ್ರರ್ಥದಲ್ಲಿ ಕ್ತಿಚ್ ಪ್ರತ್ಯಯ ಬರುತ್ತದೆ. ರಾತಿ ಎಂದು ರೂಪವಾದಾಗ ನ ರಾತಯಃ ಅರಾತಯಃ ಎಂದು ನಞ್ತತ್ಪುರುಷ ಸಮಾಸವಾಗುತ್ತದೆ. ಆಗ **'ತತ್ಪುರುಷೇ ತುಲ್ಯಾರ್ಥ-'** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ (ನಞ್) ಪೂರ್ವಪದಪ್ರಕೃತಿಸ್ವರವು ಬರುತ್ತದೆ. ಅರಾತಯಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

**ಬೋಧಂತು**—ಬುಧ ಅವಗಮನೇ ಧಾತು. ಭ್ವಾದಿ ಲೋಟ್ ಪ್ರಥಮಪುರುಷ ಬಹುವಚನದ ರೂಪ. ಪಾದದ ಆದಿಯಲ್ಲಿರುವುದರಿಂದ **' ತಿಙ್ಙತಿಙಃ '** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುವದಿಲ್ಲ. ಶಪ್ ಅನುದಾತ್ತವಾದುದರಿಂದಲೂ ಲಸಾರ್ವಧಾತುಕವು **'ತಾಸ್ಯನುದಾತ್ತೇತ್-'** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾದುದರಿಂದಲೂ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಸಮಿನ್ದ್ರ ಗರ್ದಭಂ ಮೃಣ ನುವನ್ತಂ ಪಾಪಯಾಮುಯಾ ।
ಆ ತೂ ನ ಇನ್ದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹ-
ಸ್ರೇಷು ತುವೀಮಘ ॥ ೫ ॥

॥ ಪದಪಾಠಃ ॥

ಸಮ್ । ಇನ್ದ್ರ । ಗರ್ದಭಂ । ಮೃಣ । ನುವನ್ತಂ । ಪಾಪಯಾ । ಅಮುಯಾ ।
ಆ । ತು । ನಃ । ಇನ್ದ್ರ । ಶಂಸಯ । ಗೋಷು । ಅಶ್ವೇಷು । ಶುಭ್ರಿಷು । ಸಹ-
ಸ್ರೇಷು । ತುವಿऽಮಘ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅಮುಯಾನಯಾಸ್ಮಾಭಿಃ ಶ್ರೂಯಮಾಣಯಾ ಪಾಪಯಾ ನಿಂದಾರೂಪಯಾ ವಾಚಾ ನುವಂತಂ ಸ್ತುವಂತಂ । ಅಪಕೀರ್ತಿಂ ಪ್ರಕಟಯಂತಮಿತ್ಯರ್ಥಃ । ತಾದೃಶಂ ಗರ್ದಭಂ ಗರ್ದಭ-ಸಮಾನವೈರಿಣಂ ಸಂ ವೃಣ । ಸಮ್ಯಕ್ ಮಾರಯ । ಯಥಾ ಗರ್ದಭಃ ಶ್ರೋತುಮಶಕ್ಯಂ ಪರುಷಂ ಶಬ್ದಂ ಕರೋತಿ ತಥಾ ಶತ್ರುರಪಿ । ಅನ್ಯತ್ಪೂರ್ವವತ್ ॥ ಗರ್ದಭಂ ನರ್ದ ಗರ್ದ ಶಬ್ದೇ । ಕೃಗೃಶೃಶಲಿ-ಗರ್ದಿಭ್ಯೋಽಭಚ್ । ಉ. ३-೧೨೨ । ಚಿತ ಇತ್ಯಂತೋದಾತ್ತತ್ವಂ । ವೃಣ । ವೃಣ ಹಿಂಸಾಯಾಂ । ತೌದಾದಿಕಃ । ತಸ್ಯ ಙಿತ್ತ್ವಾದ್ಗುಣಾಭಾವಃ । ನುವಂತಂ । ಣು ಸ್ತುತೌ । ಶತರ್ಯದಿಪ್ರಭೃತಿತ್ವಾಚ್ಛಪೋ ಲುಕ್ । ಶತುರ್ಙಿತ್ತ್ವಾದ್ಗುಣಾಭಾವ ಉವಙಾದೇಶಃ । ಪ್ರತ್ಯಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಅಮುಯಾ**—ಈ (ನಮ್ಮ ಕಿವಿಗೆ ಬೀಳುತ್ತಿರುವ) । **ಪಾಪಯಾ**—ನಿಂದಾರೂಪವಾದ ವಾಕ್ಕಿನಿಂದ । **ನುವಂತಂ**—(ಅಪ) ಸ್ತುತಿಮಾಡುತ್ತಿರುವ । **ಗರ್ದಭಂ**—ಕತ್ತೆಗೆ ಸಮಾನನಾದ ಶತ್ರುವನ್ನು । **ಸಂ ವೃಣ**—ಚೆನ್ನಾಗಿ ಸಾಯಿಸು । **ತುವೀಮಘ**—ಪ್ರಭೂತವಾದ ಧನವುಳ್ಳ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮನ್ನು । **ಸಹಸ್ರೇಷು**—ಸಹಸ್ರಸಂಖ್ಯಾಕವೂ । **ಶುಭ್ರಿಷು**—ಮಂಗಳಕರಗಳೂ ಆದ । **ಗೋಷು**—ಗೋವುಗಳಲ್ಲಿಯೂ । **ಅಶ್ವೇಷು**—ಕುದುರೆಗಳಲ್ಲಿಯೂ । **ಆ ಶಂಸಯ**—(ಅವುಗಳನ್ನು ಹೊಂದಲು) ಸಂಪೂರ್ಣವಾಗಿ ಅರ್ಹರಾದವರನ್ನಾಗಿ ಮಾಡು (ಎಂದರೆ ಸಾವಿರಾರು ಗೋವುಗಳನ್ನೂ ಅಶ್ವಗಳನ್ನೂ ನಮಗೆ ಕೊಡು) ॥

॥ ಭಾವಾರ್ಥ ॥

ಎಲೈ ಇಂದ್ರನೇ, ಈ ನಿಂದಾರೂಪವಾದ ಕರ್ಕಶವಾಕ್ಕಿನಿಂದ ಅಪಸ್ತುತಿಮಾಡುತ್ತಿರುವ ಮತ್ತು ಕತ್ತೆಗೆ ಸಮಾನನಾದ ನಮ್ಮ ಶತ್ರುವನ್ನು ಸಂಪೂರ್ಣವಾಗಿ ನಾಶಮಾಡು. ಪ್ರಭೂತ ಧನವುಳ್ಳ ಎಲೈ ಇಂದ್ರನೇ, ನಮ್ಮನ್ನು ಸಹಸ್ರಸಂಖ್ಯಾಕವೂ ಮತ್ತು ಮಂಗಳಕರಗಳೂ ಆದ ನಿನ್ನ ಗೋವುಗಳು ಮತ್ತು ಕುದುರೆಗಳ ರೂಪದಲ್ಲಿರುವ ಐಶ್ವರ್ಯವನ್ನು ಹೊಂದುವಂತೆ ಮಾಡು.

## English Translation.

O Indra, kill this ass (enemy) praising you with such harsh speech ; Indra, of plentiful wealth, enrich us with thousands of excellent cows and horses.

॥ ವಿಶೇಷವಿಷಯಗಳು ॥

**ಗರ್ದಭಂ**—ಕತ್ತೆಯನ್ನು ; ಇಲ್ಲಿ ಭಾಷ್ಯಕಾರರು ಕತ್ತೆಗೆ ಸಮಾನನಾದ ನಮ್ಮ ಶತ್ರುವನ್ನು ಎಂದು ಹೇಳಿರುವರು.

**ನುವಂತಂ ಪಾಪಯಾ ಅಮುಯಾ**—ಕೆಟ್ಟದಾದ ಎಂದರೆ ನಿಂದಾರೂಪವಾದ, ಕರ್ಣಕಠೋರವಾದ ಶಬ್ದಗಳಿಂದ ನಿನ್ನನ್ನು ದೂಷಿಸುತ್ತಿರುವ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಗರ್ದಭಂ—** ನರ್ದ ಗರ್ದ ಶಬ್ದೇ ಧಾತು. ಇದಕ್ಕೆ **' ಕ್ವಾ ಗ್ವಾ ಶ್ವಾ ಶಲಿ ಗರ್ದಿಭ್ಯೋಽಭಚ್** (ಉ. ಸೂ. ೩-೪೦೨) ಎಂಬುದರಿಂದ ಅಭಚ್ ಪ್ರತ್ಯಯ ಬರುತ್ತದೆ ದ್ವಿತೀಯಾ ಏಕವಚನದಲ್ಲಿ ಗರ್ದಭಮ್ ಎಂದು ರೂಪವಾಗುತ್ತದೆ. **' ಚಿತಃ '** (ಪಾ. ಸೂ ೬-೧-೧೬೩) ಎಂಬುದರಿಂದ ಚಿತ್‌ಪ್ರತ್ಯಯಾಂತವಾದುದರಿಂದ ಅಂತೋದಾತ್ತವಾಗುತ್ತದೆ.

**ಮೃಣ—**ಮೃಣ ಹಿಂಸಾಯಾಂ ಧಾತು. ತುದಾದಿ. ಲೋಟ್ ಮಧ್ಯಮಪುರುಷ ಏಕವಚನದ ಸಿಪ್ಪಿಗೆ ಹಿ ಆದೇಶ ಬರುತ್ತದೆ. **' ತುದಾದಿಭ್ಯಃ ಶಃ '** (ಪಾ. ಸೂ. ೩-೧-೭೭) ಎಂಬುದರಿಂದ ಮಧ್ಯೆ ಶ ವಿಕರಣ ಬರುತ್ತದೆ. ಇದು ಅಪಿತ್ತಾದುದರಿಂದ ಙಿತ್ತಾಗುತ್ತದೆ. ಆದುದರಿಂದ ಲಘೂಪಧಗುಣವು ಬರುವುದಿಲ್ಲ. ಅಕಾರದ ಪರದಲ್ಲಿ ಹಿ ಇರುವುದರಿಂದ **' ಅತೋ ಹೇಃ '** (ಪಾ. ಸೂ. ೬-೪-೧೦೫) ಎಂಬುದರಿಂದ ಹಿ ಗೆ ಲುಕ್ ಬರುತ್ತದೆ. ಮೃಣ ಎಂದು ರೂಪವಾಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

**ನುವಂತಂ**—ಣು ಸ್ತುತೌ ಧಾತು. ಅದಾದಿ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ ಬರುತ್ತದೆ. ಶಪ್ ವಿಕರಣವು ಪ್ರಾಪ್ತವಾದರೆ ಅದಕ್ಕೆ **'ಅದಿಪ್ರಭೃತಿಭ್ಯಃ ಶಪಃ '** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್ ಧಾತ್ವಾದಿಗೆ ನಕಾರಾದೇಶ ಬರುವುದು. ನು+ಅತ್, ಎಂದಿರುವಾಗ ಅಪಿತ್ತಾದ ಸಾರ್ವಧಾತುಕವಾದುದರಿಂದ ಶತೃಙಿತ್ತಾಗುತ್ತದೆ. ಆದುದರಿಂದ ಸಾರ್ವಧಾತುಕನಿಮಿತ್ತಕವಾಗಿ ಧಾತುವಿಗೆ ಗುಣ ಬರುವುದಿಲ್ಲ **' ಅಚಿಶ್ನುಧಾತುಭ್ರುವಾಂ-'** (ಪಾ. ಸೂ. ೬-೪-೭೭) ಎಂಬುದರಿಂದ ಅಜಾದಿ ಪ್ರತ್ಯಯ ಪರದಲ್ಲಿರುವುದರಿಂದ ಉವರ್ಣಾಂತವಾದ ನು ಧಾತುವಿಗೆ ಉವಙಾದೇಶ ಬಂದು ನುವತ್ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ ಬಂದರೆ ನುವಂತಂ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ (ಆದ್ಯುದಾತ್ತ) ನುವಂತಂ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ಪತಾತಿ ಕುಣ್ಡೃಣಾಚ್ಯಾ ದೂರಂ ವಾತೋ ವನಾದಧಿ ।
ಆ ತೂ ನ ಇನ್ದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹ-
ಸ್ರೇಷು ತುವೀಮಘ ॥ ೬ ॥

॥ ಪದಪಾಠಃ ॥

ಪತಾತಿ । ಕುಣ್ಡೃಣಾಚ್ಯಾ । ದೂರಂ । ವಾತಃ । ವನಾತ್ । ಅಧಿ ।

ಆ । ತು । ನಃ । ಇನ್ದ್ರ । ಶಂಸಯ । ಗೋಷು । ಅಶ್ವೇಷು । ಶುಭ್ರಿಷು । ಸಹಸ್ರೇಷು । ತುವಿऽಮಘ ॥ ೬ ॥

॥ ಸಾಯಣಭಾಷ್ಯಂ ॥

ವಾತೋऽಸ್ಮತ್ಪ್ರತಿಕೂಲೋ ವಾಯುಃ ಕುಂಡೃಣಾಚ್ಯಾ ಕುಟಿಲಗತ್ಯಾ ಸ ತ್ವಸ್ಮಾನ್ಪರಿತ್ಯಜ್ಯ ವನಾದಧ್ಯರಣ್ಯಾದಪ್ಯಧಿಕಂ ದೂರಂ ದೇಶಂ ಪತಾತಿ । ಪತತು । ಅನ್ಯತ್ಪೂರ್ವವತ್ ॥ ಪತಾತಿ । ಲೇಟ್ಯಾಡಾಗಮಃ । ಕುಂಡೃಣಾಚ್ಯಾ । ಕುಡಿ ದಾಹೇ । ಅಸ್ಮಾತ್ ಲ್ಯುಡಂತೇ ಕುಂಡನಶಬ್ದೇ ಡಕಾರಾತ್ಪರಸ್ಯಾಕಾರಸ್ಯ ಋಕಾರಶ್ಛಾಂದಸಃ । ಋವರ್ಣಾಚ್ಚೇತಿ ವಕ್ತವ್ಯಮಿತಿ ಣತ್ವಂ । ತದಂಚತೀತಿ ಕುಂಡೃಣಾಚೀ । ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪೇऽಂಚತೇಶ್ಚೇತಿ ವಕ್ತವ್ಯಂ। । ಪಾ. ೪-೧-೬-೨ । ಇತಿ ಙೀಪ್ । ಅಚಃ । ಪಾ. ೬-೪-೧೩೮ । ಇತ್ಯಕಾರಲೋಪಃ । ಚೌ । ಪಾ. ೬-೩-೧೩೮ । ಇತಿ ಪೂರ್ವಪದಸ್ಯ ದೀರ್ಘತ್ವಂ । ಚೌ । ಪಾ. ೬-೧-೨೨೨ । ಇತ್ಯಾಕಾರಸ್ಯೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ವಾತಃ**—(ನಮಗೆ ಪ್ರತಿಕೂಲವಾದ) ವಾಯುವು । **ಕುಂಡೃಣಾಚ್ಯಾ**—ವಕ್ರವಾದ ಗಮನದಿಂದ (ನಮ್ಮನ್ನು ಬಿಟ್ಟುಬಿಟ್ಟು) । **ವನಾದಧಿ**—ಕಾಡಿಗಿಂತಲೂ ಹೊರಗಿರುವ । **ದೂರಂ**—ದೂರಪ್ರದೇಶದಲ್ಲಿ । **ಪತಾತಿ**—ಬೀಸಲಿ । **ತುವೀಮಘ**—ಪ್ರಭೂತವಾದ ಧನವುಳ್ಳ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮನ್ನು । **ಸಹಸ್ರೇಷು**—ಸಹಸ್ರಸಂಖ್ಯಾಕವೂ । **ಶುಭ್ರಿಷು**—ಶ್ರೇಷ್ಠಗಳೂ ಆದ । **ಗೋಷು**—ಗೋವುಗಳಲ್ಲಿಯೂ । **ಅಶ್ವೇಷು**—ಕುದುರೆಗಳಲ್ಲಿಯೂ । **ಆ ಶಂಸಯ**—(ಅವುಗಳನ್ನು ಹೊಂದಲು) ಸಂಪೂರ್ಣವಾಗಿ ಅರ್ಹರಾದವರನ್ನಾಗಿ ಮಾಡು (ಎಂದರೆ ಸಾವಿರಾರು ಗೋವುಗಳನ್ನೂ ಅಶ್ವಗಳನ್ನೂ ನಮಗೆ ಕೊಡು) ॥

॥ ಭಾವಾರ್ಥ ॥

ಪ್ರಭೂತವಾದ ಧನವುಳ್ಳ ಎಲೈ ಇಂದ್ರನೇ, ನಮಗೆ ಪ್ರತಿಕೂಲವಾಗಿಯೂ ವಕ್ರಗಮನವುಳ್ಳದ್ದಾಗಿಯೂ ಇರುವ ವಾಯುವು ನಮ್ಮನ್ನು ಬಿಟ್ಟು ಕಾಡಿಗಿಂತಲೂ ದೂರವಾದ ಪ್ರದೇಶದಲ್ಲಿ ಬೀಸಲಿ, ಮತ್ತು ಶ್ರೇಷ್ಠಗಳಾದ ಗೋವುಗಳನ್ನೂ ಕುದುರೆಗಳನ್ನೂ ಸಹ ಸಹಸ್ರಸಂಖ್ಯೆಯಲ್ಲಿ ನಮಗೆ ಕೊಟ್ಟು ನಮ್ಮನ್ನು ಐಶ್ವರ್ಯವಂತರನ್ನಾಗಿ ಮಾಡು.

## English Translation.

Let the (adverse) wind with crooked course blow away to far off places beyond the forest; Indra of plentiful wealth, enrich us with thousands of excellent cows and horses.

॥ ವಿಶೇಷವಿಷಯಗಳು ॥

**ವಾತಃ ಕುಂಡೃಣಾಚ್ಯಾ—ಕುಡಿ ದಾಹೇ । ಕುಟಿಲಗತ್ಯಾ ।** ಕೆಟ್ಟದಾರಿಯಿಂದ, ನಮಗೆ ಪ್ರತಿಕೂಲ ವಾಗಿ ಬೀಸುತ್ತಿರುವ ಗಾಳಿಯು.

**ದೂರಂ ವನಾದಧಿ ಪತಾತಿ**—ಕಾಡಿನಿಂದಾಚೆಗೆ ದೂರಪ್ರದೇಶದಲ್ಲಿ ಹೋಗಲಿ. ನಮ್ಮ ಸಮೀಪದಲ್ಲಿರ ದಂತಾಗಲಿ.

॥ ವ್ಯಾಕರಣಪ್ರಕ್ರಿಯಾ ॥

**ಪತಾತಿ—**ಪತ್ಲೃ ಗತೌ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ ಬರುತ್ತದೆ. ಶಪ್ ವಿಕರಣ ಬರುವುದು. ತಿಪ್ಪಿಗೆ **'ಲೇಟೋಽಡಾಟೌ'** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ ಬರುತ್ತದೆ. ಪತಾತಿ ಎಂದು ರೂಪವಾಗುತ್ತದೆ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಕುಂಡೃಣಾಚ್ಯಾ**—ಕುಡಿ ದಾಹೇ ಧಾತು. ಭ್ವಾದಿ ಇದಕ್ಕೆ ಲ್ಯುಟ್ ಪ್ರತ್ಯಯ ಬರುತ್ತದೆ. **'ಯುವೋರ-ನಾಕೌ'** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ ಬರುತ್ತದೆ. ಧಾತುವು ಇದಿತ್ತಾದುದರಿಂದ ನುಮಾಗಮ ಬರುತ್ತದೆ. ಕುಂಡನ ಎಂದು ರೂಪವಾಗುತ್ತದೆ. ಡಕಾರದ ಪರದಲ್ಲಿರುವ ಅಕಾರಕ್ಕೆ ಋಕಾರವು ಛಾಂದಸವಾಗಿ ಬರುವುದು. ಆಗ ಋಕಾರದ ಪರದಲ್ಲಿ ನಕಾರ ಬಂದುದರಿಂದ **'ಋವರ್ಣಾಚ್ಚೇತಿ ವಕ್ತವ್ಯಮ್'** (ವಾ. ೪೯೬೯) ಎಂಬುದರಿಂದ ಅದಕ್ಕೆ ಣತ್ವ. ಕುಂಡೃಣಂ ಅಂಚತಿ ಇತಿ ಕುಂಡೃಣಾಚೀ **'ಋತ್ವಿಕ್ ದಧೃಕ್'** (ಪಾ. ಸೂ ೩-೨-೫೯) ಎಂಬುದರಿಂದ ಸುಬಂತವು ಉಪಪದದಲ್ಲಿರುವುದರಿಂದ ಅಂಚು ಧಾತುವಿಗೆ ಕ್ವಿನ್ ಪ್ರತ್ಯಯ ಬರುತ್ತದೆ. ಕುಂಡೃಣ+ಅಂಚ್ ಎಂದಿರುವಾಗ **'ಅನಿದಿತಾಂ ಹಲ ಉ-'** (ಪಾ. ಸೂ. ೬-೪-೨೪) ಎಂಬುದರಿಂದ ಕಿತ್ ಪ್ರತ್ಯಯ ಪರದಲ್ಲಿರುವುದರಿಂದ ಉಪಧಾಭೂತವಾದ ನಕಾರಕ್ಕೆ ಲೋಪ. ಕುಂಡೃಣಾಚ್ ಶಬ್ದವಾಗುತ್ತದೆ. ಇದಕ್ಕೆ ಸ್ತ್ರೀತ್ವ ವಿವಕ್ಷಾಮಾಡಿದಾಗ **'ಅಂಚತೇಶ್ಚೇತಿ ವಕ್ತವ್ಯಮ್'** (ಪಾ. ಸೂ. ೪ ೧-೬-೨) ಎಂಬುದರಿಂದ ಜೀಪ್ ಬರುತ್ತದೆ. ಕುಂಡೃಣಾಚೀ ಶಬ್ದದ ಮೇಲೆ ತೃತೀಯಾ ಏಕವಚನ ಪರದಲ್ಲಿರುವಾಗ **'ಅಚಃ'** (ಪಾ. ಸೂ. ೬-೪-೧೩೮) ಎಂಬುದರಿಂದ ಲುಪ್ತ ಅಕಾರವುಳ್ಳ ಅಂಚುಧಾತು ಇರುವುದರಿಂದ ಭಸಂಜ್ಞಾ ಇರುವುದರಿಂದ ಅಕಾರ ಲೋಪ. ಕುಂಡೃಣ+ಚೀ+ಆ ಎಂದಿರುವಾಗ **'ಚೌ'** (ಪಾ. ಸೂ. ೬-೩-೧೩೮) ಎಂಬುದರಿಂದ ಲುಪ್ತ ಅಕಾರ ನಕಾರವುಳ್ಳ ಅಂಚುಧಾತುವು ಪರದಲ್ಲಿರುವುದರಿಂದ ಪೂರ್ವಪದಕ್ಕೆ ದೀರ್ಘ ಬರುತ್ತದೆ. ಕುಂಡೃಣಾಚ್ಯಾ ಎಂದು ರೂಪವಾಗುತ್ತದೆ. **'ಚೌ'** (ಪಾ. ಸೂ. ೬-೧-೨೨೨) ಎಂಬುದರಿಂದ ಲುಪ್ತಾಕಾರ ನಕಾರವುಳ್ಳ ಅಂಚುಧಾತುವು ಪರದಲ್ಲಿರುವುದರಿಂದ ಪೂರ್ವಪದದ ಅಂತ್ಯಾಕಾರಕ್ಕೆ ಉದಾತ್ತಸ್ವರವು ಬರುತ್ತದೆ ಣಕಾರೋತ್ತರಾಕಾರವು ಉದಾತ್ತ ವಾಗುತ್ತದೆ. ॥ ೬ ॥

॥ ಸಂಹಿತಾಪಾಠಃ ॥

ಸರ್ವಂ ಪರಿಕ್ರೋಶಂ ಜಹಿ ಜಮ್ಭಯಾ ಕೃಕದಾಶ್ವಂ ।
ಆ ತೂ ನ ಇನ್ದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹ-
ಸ್ರೇಷು ತುವೀಮಘ ॥ ೭ ॥

॥ ಪದಪಾಠಃ ॥

ಸರ್ವಂ । ಪರಿಽಕ್ರೋಶಂ । ಜಹಿ । ಜಮ್ಭಯ । ಕೃಕದಾಶ್ವಂ ।
ಆ । ತು । ನಃ । ಇನ್ದ್ರ । ಶಂಸಯ । ಗೋಷು । ಅಶ್ವೇಷು । ಶುಭ್ರಿಷು । ಸಹ-
ಸ್ರೇಷು । ತುವಿಽಮಘ ॥ ೭ ॥

॥ ಸಾಯಣಭಾಷ್ಯಂ ॥

ಪರಿಕ್ರೋಶಮಸ್ಮದ್ವಿಷಯೇ ಸರ್ವತ ಆಕ್ರೋಶಕರ್ತಾರಂ ಸರ್ವಂ ಪುರುಷಂ ಜಹಿ । ಮಾರಯ। ಕೃಕದಾಶ್ವಮಸ್ಮದ್ವಿಷಯೇ ಹಿಂಸಾಪ್ರದಂ ಶತ್ರುಂ ಜಂಭಯ । ಮಾರಯ । ಅನ್ಯತ್ಪೂರ್ವವತ್ ॥ ಪರಿಕ್ರೋಶಂ । ಕ್ರುಶ ಆಹ್ವಾನೇ । ಪರಿತಃ ಕ್ರೋಶಯತೀತಿ ಪರಿಕ್ರೋಶಃ । ಪಚಾದ್ಯಚ್ । ಕೃದುತ್ತರಪದಪ್ರಕೃತಿಸ್ವರತ್ವಂ । ಜಹಿ । ಹನ ಹಿಂಸಾಗತ್ಯೋಃ । ಹಂತೇರ್ಜಃ । ಪಾ. ೬–೪–೩೬ । ಇತಿ ಜಾದೇಶಃ । ತಸ್ಯಾಸಿದ್ಧವದತ್ರಾಭಾದಿತ್ಯಸಿದ್ಧತ್ವಾದತೋ ಹೇರಿತಿ ಹೇರ್ಲುಗ್ನ ಭವತಿ । ಜಂಭಯ । ಜಭಿ ನಾಶನೇ । ಚುರಾದಿತ್ವಾತ್ಸ್ವಾರ್ಥಿಕೋ ಣಿಚ್ । ಶಪಃ ಪಿತ್ವಾದನುದಾತ್ತತ್ವೇ ಣಿಚ ಏವ ಸ್ವರಃ ಶಿಷ್ಯತೇ । ಕೃಕದಾಶ್ವಂ ಕೃಞ್ ಹಿಂಸಾಯಾಂ । ಕೃದಾಧಾರಾರ್ಚಿಕಲಿಭ್ಯಃ ಕನ್। ಉ ೩–೪೦ । ಇತಿ ಭಾವೇ ಕನ್ಪ್ರತ್ಯಯಃ। ಕಿದಿತ್ಯನುವೃತ್ತೇರ್ಗುಣಾಭಾವಃ । ತಥಾ ಚ ಕೃತೋ ಹಿಂಸಾ । ತಾಂ ದಾಶತಿ ಪ್ರಯಚ್ಛತೀತಿ ಕೃಕದಾಶುಃ। ಬಹುಲಗ್ರಹಣಾದ್ದಾಶತೇರಪಿ ಕೃಕ ಉಪಪದೇ ಕೃಕೇ ವಚಃ ಕಶ್ಚ । ಉ. ೧–೬ । ಇತ್ಯುಞ್ । ಪ್ರತ್ಯಯಸ್ವರೇಣೋದಾತ್ತಃ । ದ್ವಿತೀಯಾಯಾಮಮಿ ಪೂರ್ವತ್ವೇ ಪ್ರಾಪ್ತೇ ವಾ ಛಂದಸೀತಿ ತಸ್ಯ ಬಾಧಿತತ್ವಾದ್ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತಿ ವಿಭಕ್ತೇಃ ಸ್ವರಿತತ್ವಂ ॥ ೨೭ ॥

|| ಪ್ರತಿಪದಾರ್ಥ ||

**ಪರಿಕ್ರೋಶಂ**—ನಮ್ಮನ್ನು ದ್ವೇಷಿಸಿ ದೂಷಿಸುವ । **ಸರ್ವಂ**—ಪ್ರತಿಯೊಬ್ಬನನ್ನೂ । **ಜಹಿ**—ನಾಶ ಮಾಡು । **ಕೃಕದಾಶ್ವಂ**—ನಮಗೆ ಹಿಂಸೆ ಮಾಡುವ ಶತ್ರುವನ್ನು । **ಜಂಭಯ**—ಸಾಯಿಸು । **ತುವೀಮಘ**—ಪ್ರಭೂತವಾದ ಧನವುಳ್ಳ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮನ್ನು । **ಸಹಸ್ರೇಷು**—ಸಹಸ್ರಸಂಖ್ಯಾಕವೂ । **ಶುಭ್ರಿಷು**—ಶ್ರೇಷ್ಠಗಳೂ ಆದ । **ಗೋಷು**—ಗೋವುಗಳಲ್ಲಿಯೂ । **ಅಶ್ವೇಷು**—ಕುದುರೆಗಳಲ್ಲಿಯೂ । **ಆ ಶಂಸಯ**—(ಅವುಗಳನ್ನು ಹೊಂದಲು) ಅರ್ಹರಾದವರನ್ನಾಗಿ ಮಾಡು (ಎಂದರೆ ಸಾವಿರಾರು ಗೋವುಗಳನ್ನೂ ಅಶ್ವಗಳನ್ನೂ ನಮಗೆ ಕೊಡು) ||

|| ಭಾವಾರ್ಥ ||

ಎಲೈ ಇಂದ್ರನೇ, ನಮ್ಮನ್ನು ದ್ವೇಷಿಸಿ ದೂಷಿಸುವ ಪ್ರತಿಯೊಬ್ಬ ಶತ್ರುವನ್ನೂ ನಾಶಮಾಡು. ನಮಗೆ ಹಿಂಸೆ ಮಾಡುವ ಸಕಲರನ್ನೂ ಸಾಯಿಸು. ಪ್ರಭೂತವಾದ ಧನವುಳ್ಳ ಎಲೈ ಇಂದ್ರನೇ, ನಿನ್ನ ಶ್ರೇಷ್ಠವಾದ ಐಶ್ವರ್ಯವಾದ ಗೋವುಗಳನ್ನೂ ಮತ್ತು ಕುದುರೆಗಳನ್ನೂ ಸಹ ಸಹಸ್ರಸಂಖ್ಯೆಯಲ್ಲಿ ನಮಗೆ ಕೊಟ್ಟು ನಮ್ಮನ್ನು ಐಶ್ವರ್ಯವಂತರನ್ನಾಗಿ ಮಾಡು.

English Translation.

Strike down everyone who reviles us ; destroy everyone that does us injury ; O Indra of plentiful wealth, enrich us with thousands of excellent cows and horses.

|| ವಿಶೇಷವಿಷಯಗಳು ||

**ಪರಿಕ್ರೋಶಂ—ಕ್ರುಶ ಆಹ್ವಾನೇ । ಪರಿತಃ ಕ್ರೋಶಯತೀತಿ ಪರಿಕ್ರೋಶಃ ತಂ ।** ನಮ್ಮ ವಿಷಯದಲ್ಲಿ ದ್ವೇಷಬುದ್ಧಿಯಿಂದ ಕೋಪಮಾಡುವ, ಅಥವಾ ದುರ್ಭಾಷೆಗಳನ್ನಾಡುವ ಪುರುಷನನ್ನು.

**ಜಹಿ—ಹನ ಹಿಂಸಾಗತ್ಯೋಃ ।** ನಿಗ್ರಹಿಸು, ಹಿಂಸಿಸು, ನಾಶಮಾಡು.

**ಜಂಭಯ—ಜಭಿ ನಾಶನೇ ।** ನಾಶಮಾಡು.

**ಕೃಕದಾಶ್ವಂ—ಕೃಞ್ ಹಿಂಸಾಯಾಂ । ಕೃಕೋ ಹಿಂಸಾ । ತಾಂ ದಾಶತಿ ಪ್ರಯಚ್ಛತೀತಿ ಕೃಕದಾಶುಃ ತಂ ।** ಹಿಂಸೆ ಮಾಡುವ ಪುರುಷನನ್ನು, ನಮಗೆ ಕೇಡನ್ನುಂಟುಮಾಡುವವನನ್ನು.

|| ವ್ಯಾಕರಣಪ್ರಕ್ರಿಯಾ ||

**ಪರಿಕ್ರೋಶಮ್**—ಕ್ರುಶ ಆಹ್ವಾನೇ ಧಾತು ಭ್ವಾದಿ ಪರಿತಃ ಕ್ರೋಶಯತಿ ಇತಿ ಪರಿಕ್ರೋಶಃ **'ನಂದಿಗ್ರಹ-'** (ಪಾ. ಸೂ. ೩-೧-೧೩೪) ಸೂತ್ರದಿಂದ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ ಬರುತ್ತದೆ. ಅಚ್ ಪರದಲ್ಲಿರುವಾಗ ಧಾತುವಿಗೆ ಲಘೂಪಧಗುಣ ಬರುತ್ತದೆ. ಪರಿಕ್ರೋಶಃ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನರೂಪ ಕೃದಂತೋತ್ತರಪದವಾಗಿರುವುದರಿಂದ **'ಗತಿಕಾರಕೋಪಪದಾತ್ ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ.

**ಜಹಿ**—**' ಹನ ಹಿಂಸಾಗತ್ಯೋಃ '** ಧಾತು. ಅದಾದಿ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬರುತ್ತದೆ. ಅದಕ್ಕೆ ಹಿ ಆದೇಶ ಬರುತ್ತದೆ. ಹಿ ಪರದಲ್ಲಿರುವಾಗ **' ಹಂತೇರ್ಜಃ '** (ಪಾ. ಸೂ. ೬-೪-೩೬) ಎಂಬುದರಿಂದ ಧಾತುವಿಗೆ ಜಾದೇಶ ಬರುತ್ತದೆ. ಜಹಿ ಎಂದು ರೂಪವಾಗುತ್ತದೆ. **' ಅಸಿದ್ಧವದತ್ರಾಭಾತ್ '** (ಪಾ ಸೂ ೬-೪-೨೨) ಎಂಬುದರಿಂದ ಜಾದೇಶವು ಅಸಿದ್ಧವಾದುದರಿಂದ **' ಅತೋಹೇಃ '** (ಪಾ ಸೂ. ೬-೪-೧೦೫) ಎಂಬುದರಿಂದ ಅದಂತನಿಮಿತ್ತಕವಾದ ಹಿಲೋಪವು ಬರುವುದಿಲ್ಲ.

**ಜಮ್ಭಯ**—ಜಭಿ ನಾಶನೇ ಧಾತು. ಚುರಾದಿ. ಚುರಾದಿಗಳಿಗೆ **' ಸತ್ಯಾಪಪಾಶ '** (ಪಾ ಸೂ. ೩-೧-೨೫) ಸೂತ್ರದಿಂದ ಸ್ವಾರ್ಥದಲ್ಲಿ ಣಿಚ್ ಬರುತ್ತದೆ. ಇದಿತ್ತಾದುದರಿಂದ ಧಾತುವಿಗೆ ನುಮ್ ಬರುತ್ತದೆ **' ಸನಾದ್ಯಂತಾಧಾತವಃ '** (ಪಾ. ಸೂ. ೩-೧-೩೨) ಎಂಬುದರಿಂದ ಜಂಭಿ ಎಂಬ ಣಿಜಂತವು ಧಾತು ಸಂಜ್ಞೆಯನ್ನು ಹೊಂದುವುದರಿಂದ ಅದರ ಮೇಲೆ ಲೋಟ್ ಬರುವುದು. ಶಪ್ ವಿಕರಣ ಬರುತ್ತದೆ. ಅದಂತದ ಪರದಲ್ಲಿರುವುದರಿಂದ ಲೋಟಿನ ಸಿಪ್ಪಿಗೆ ಆದೇಶ ವಾಗಿ ಬಂದ ಹಿಗೆ ಲುಕ್. ಶಪ್ ಪರದಲ್ಲಿರುವಾಗ ಣಿಚ್ಚಿಗೆ ಗುಣ ಅಯಾದೇಶಗಳು ಬಂದರೆ ಜಂಭಯ ಎಂದು ರೂಪ ವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುವುದು ಆಗ ಣಿಚ್ಚಿನ ಉದಾತ್ತಸ್ವರವೇ ಉಳಿಯುತ್ತದೆ. ಭಕಾರೋತ್ತರ ಅಕಾರವು ಉದಾತ್ತವಾಗುತ್ತದೆ.

**ಕೃಕದಾಶ್ವಮ್**—ಕೃಞ್ ಹಿಂಸಾಯಾಂ ಧಾತು ಕ್ರ್ಯಾದಿ. **' ಕೃದಾಧಾರಾರ್ಚಿಕಲಿಭ್ಯಃ ಕನ್ '** (ಉ. ಸೂ. ೩-೩೨೦) ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ಕನ್ ಪ್ರತ್ಯಯ. ಹಿಂದಿನ ಸೂತ್ರದಿಂದ ಕಿತ್ ಎಂದು ಅನುವೃತ್ತವಾಗುವುದರಿಂದ ಕ ಪ್ರತ್ಯಯವು ಕಿತ್ತಾಗುವುದರಿಂದ ಧಾತುವಿಗೆ ಆರ್ಧಧಾತುಕನಿಮಿತ್ತಕವಾಗಿ ಗುಣವು ಬರುವುದಿಲ್ಲ. ಕೃಕಃ ಎಂದು ರೂಪವಾಗುತ್ತದೆ. **' ಕೃಕಂ ಹಿಂಸಾಂ ದಾಶತಿ ಪ್ರಯಚ್ಛತಿ ಇತಿ ಕೃಕದಾಶುಃ '** ದಾಶೃ ದಾನೇ ಧಾತು. **' ಉಣಾದಯೋ ಬಹುಲಂ '** (ಪಾ. ಸೂ. ೩-೩-೧) ಎಂಬಲ್ಲಿ ಬಹುಲಗ್ರಹಣಮಾಡಿರು ವುದರಿಂದ ಕೃಕ ಎಂಬುದು ಉಪಪದವಾಗಿರುವಾಗ ದಾಶೃಧಾತುವಿಗೆ **' ಕೃಕೇ ವಚಃ ಕಶ್ಚ '** (ಉ. ಸೂ. ೧-೬) ಎಂಬುದರಿಂದ ಉಣ್ ಪ್ರತ್ಯಯ ಬರುತ್ತದೆ. ಕೃಕದಾಶುಃ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಕೃಕದಾಶು ಶಬ್ದವು ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಅಮ್ ವಿಭಕ್ತಿಯು ಬರುತ್ತದೆ. ಕೃಕದಾಶು+ಅಮ್ ಎಂದಿರುವಾಗ **' ಅಮಿ ಪೂರ್ವಃ '** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪವು ಪ್ರಾಪ್ತವಾದರೆ **' ವಾ ಛಂದಸಿ '** ಎಂದು ಛಂದಸ್ಸಿನಲ್ಲಿ ಎಲ್ಲಾ ಕಾರ್ಯವೂ ವಿಕಲ್ಪವಾದುದರಿಂದ ಇಲ್ಲಿ ಪೂರ್ವರೂಪವು ಬರುವುದಿಲ್ಲ. ಆಗ ಯಣಾದೇಶವು ಬಂದರೆ ಕೃಕದಾಶ್ವಮ್ ಎಂದು ರೂಪವಾಗುತ್ತದೆ. ಉದಾತ್ತವಾದ ಉಕಾರದ ಸ್ಥಾನದಲ್ಲಿ ಯಣಾದೇಶ ಬಂದಿರುವುದರಿಂದ **' ಉದಾತ್ತಸ್ವರಿತಯೋರ್ಯಣಃ '** (ಪಾ. ಸೂ. ೮-೨-೪) ಎಂಬುದರಿಂದ ವಿಭಕ್ತಿಗೆ ಸ್ವರಿತ ಸ್ವರವು ಬರುತ್ತದೆ. ಸ್ವರಿತಾಂತವಾದ ಪದವಾಗುತ್ತದೆ. ॥ ೭ ॥

ಇಪ್ಪತ್ತೊಂಭತ್ತನೆಯ ಸೂಕ್ತವು ಸಮಾಪ್ತವಾಗಿದೆ.

# ಮೂವತ್ತನೆಯ ಸೂಕ್ತವು

**ಆ ವ ಇಂದ್ರಮಿತಿ ದ್ವಾವಿಂಶತ್ಯೃಚಂ ಸಪ್ತಮಂ ಸೂಕ್ತಂ ಶುನಃಶೇಪಸ್ಯಾರ್ಷಂ ಗಾಯತ್ರಂ । ಅಸ್ಮಾಕಮಿತ್ಯೇಷಾ ಪಾದನಿಚೃದ್ಗಾಯತ್ರೀ । ತ್ರಯಃ ಸಪ್ತಕಾಃ ಪಾದನಿಚೃತ್ । ಅನು. ೪-೪ । ಇತ್ಯುಕ್ತತ್ವಾತ್ । ಶಶ್ವದಿಂದ್ರ ಇತ್ಯೇಷಾ ತ್ರಿಷ್ಟುಪ್ । ಆದಿತಃ ಷೋಡಶರ್ಚ ಐಂದ್ರ್ಯಃ । ಅಶ್ವಿನಾವಶ್ವಾವತ್ಯೇತ್ಯಾದ್ಯಾಸ್ತಿಸ್ರ ಆಶ್ವಿನ್ಯಃ । ಕಸ್ತ ಉಷ ಇತ್ಯಾದ್ಯಾಸ್ತಿಸ್ರ ಉಷೋದೇವತಾಕಾಃ । ತಥಾ ಚಾನುಕ್ರಮಣಿಕಾ । ಆ ವೋ ದ್ವ್ಯಧಿಕಾಸ್ಮಾಕಂ ಪಾದನಿಚೃಚ್ಛಶ್ವತ್ತ್ರಿಷ್ಟುಪ್ಪರಾ ತೃಚಾವಾಶ್ವಿನೋಷಸ್ಯಾವಿತಿ ॥**

ಅನುವಾದವು—**ಆ ವ ಇಂದ್ರಂ** ಎಂಬುದು ಆರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಇದಕ್ಕೆ ಶುನಶ್ಶೇಪನು ಋಷಿಯು, ಗಾಯತ್ರೀ ಛಂದಸ್ಸು. **ಅಸ್ಮಾಕಮಿತ್** ಎಂಬ ಋಕ್ಕು ಪಾದನಿಚೃದ್ಗಾಯತ್ರೀ ಛಂದಸ್ಸಿನದು. **ಶಶ್ವದಿಂದ್ರಃ** ಎಂಬ ಋಕ್ಕು ತ್ರಿಷ್ಟುಪ್ ಛಂದಸ್ಸಿನದು. ಮೊದಲ ಹದಿನಾರು ಋಕ್ಕುಗಳಿಗೆ ಇಂದ್ರನು ದೇವತೆಯು. **ಅಶ್ವಿನಾವಶ್ವಾವತ್ಯಾ** ಎಂಬ ಋಕ್ಕಿನಿಂದ ಮೂರು ಋಕ್ಕುಗಳಿಗೆ ಅಶ್ವಿನೀದೇವತೆಗಳೂ, **ಕಸ್ತ ಉಷಃ** ಎಂದು ಮೊದಲಾಗುವ ಮೂರು ಋಕ್ಕುಗಳಿಗೆ ಉಷೋದೇವತೆಯೂ, ದೇವತೆಗಳು; ಅನುಕ್ರಮಣಿಕೆಯಲ್ಲಿ- **ಆವೋದ್ವ್ಯಧಿಕಾಸ್ಮಾಕಂ ಪಾದನಿಚೃಚ್ಛಶ್ವತ್ತ್ರಿಷ್ಟುಪ್ಪರಾ ತೃಚಾವಾಶ್ವಿನೋಷಸ್ಯಾವಿತಿ**-ಎಂದು ಹೇಳಿರುವುದು.

## ಸೂಕ್ತ—೩೦

॥ ಮಂಡಲ—೧ ॥ ಅನುವಾಕ—೬ ॥ ಸೂಕ್ತ—೩೦ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ—೨೮, ೨೯, ೩೦, ೩೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨ ॥

॥ ಋಷಿಃ—ಶುನಃಶೇಪ ಆಜೀಗರ್ತಿಃ ॥

॥ ದೇವತಾ—೧-೧೬. ಇಂದ್ರಃ । ೧೭-೧೯. ಅಶ್ವಿನೌ । ೨೦-೨೨. ಉಷಾಃ ।

॥ ಛಂದಃ—೧-೧೦, ೧೨-೧೫, ೧೭-೨೨. ಗಾಯತ್ರೀ । ೧೧—ಪಾದನಿಚೃದ್ಗಾಯತ್ರೀ । ೧೬. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ವ ಇನ್ದ್ರಂ ಕ್ರಿವಿಂ ಯಥಾ ವಾಜಯನ್ತಃ ಶತಕ್ರತುಂ ।
ಮಂಹಿಷ್ಠಂ ಸಿಞ್ಚ ಇನ್ದುಭಿಃ ॥ ೧ ॥

॥ ಪದಪಾಠಃ ॥

ಆ । ವಃ । ಇನ್ದ್ರಂ । ಕ್ರಿವಿಂ । ಯಥಾ । ವಾಜಽಯನ್ತಃ । ಶತಽಕ್ರತುಂ ।
ಮಂಹಿಷ್ಠಂ । ಸಿಞ್ಚೇ । ಇನ್ದುಽಭಿಃ ॥ ೧ ॥

॥ ಸಾಯಣಭಾಷ್ಯಂ ॥

ವಾಜಯಂತೋಽನ್ನಮಿಚ್ಛಂತೋ ವಯಂ ಶುನಃಶೇಪಾ ಹೇ ಋತ್ವಿಗ್ಯಜಮಾನಾ ವೋ ಯುಷ್ಮಾಕಂ ಸಂಬಂಧಿನಮಿಮಮಿಂದ್ರಮಿಂದುಭಿಃ ಸೋಮೈರಾಸಿಂಚೇ । ಸರ್ವತಃ ಸಿಂಚಾಮಹೇ । ತರ್ಪಯಾಮಃ । ಕೀದೃಶಂ । ಶತಕ್ರತುಂ ಶತಸಂಖ್ಯಾಕಕರ್ಮೋಪೇತಂ ಮಂಹಿಷ್ಠಮತಿಶಯೇನ ಪ್ರವೃದ್ಧಂ । ಸೇಚನೇ ದೃಷ್ಟಾಂತಃ । ಯಥಾ ಯೇನ ಪ್ರಕಾರೇಣ ಕ್ರಿವಿಮವಟಂ ಜಲೇನ ಪೂರಯಂತಿ ತದ್ವತ್ । ಕ್ರಿವಿಶಬ್ದೋ ವವ್ರಿಃ ಕಾಟುರಿತ್ಯಾದಿಷು ಚತುರ್ದಶಸು ಕೂಪನಾಮಸು ಕ್ರಿವಿಃ ಕೂಪಃ ಸೂದ ಇತಿ ಪಠಿತಂ ॥ ಕ್ರಿವಿಂ । ಕೃತೀ ಛೇದನೇ । ಕೃತ್ಯತ ಇತಿ ಕ್ರಿವಿಃ । ಕ್ರಿವಿಘೃಷ್ವಿಚ್ಛವಿಸ್ಥವೀತ್ಯಾದೌ । ಉ. ೪-೫೬ । ಕ್ವಿನ್ಪ್ರತ್ಯಯಾಂತೋ ನಿಪಾತಿತಃ । ಅತ ಏವ ತಶಬ್ದಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಯಥಾ। ಯಥೇತಿ ಪಾದಾಂತೇ । ಫಿ. ೪-೧೭ । ಇತಿ ಸರ್ವಾನುದಾತ್ತತ್ವಂ । ವಾಜಯಂತಃ । ವಾಜಮಾತ್ಮನ ಇಚ್ಛಂತಃ । ಸುಪ ಆತ್ಮನಃ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ತ್ವದೀರ್ಘತ್ವಯೋರ್ನಿಷೇಧಃ । ಅಶ್ವಾಘಸ್ಯಾದಿತಿ ಪುನರ್ದೀರ್ಘವಿಧಾನಾಜ್ಜ್ಞಾಪಕಾತ್ । ಮಂಹಿಷ್ಠಂ । ಮಹಿ ವೃದ್ಧೌ । ಅತಿಶಯೇನ ಮಂಹಿತಾ ಮಂಹಿಷ್ಠಃ । ತುಶ್ಛಂದಸಿ । ಪಾ. ೫-೩-೫೯ । ಇತಿ ತೃಜಂತಾದಿಷ್ಠನ್ಪ್ರತ್ಯಯಃ । ತುರಿಷ್ಠೇಮೇಯಃಸು । ಪಾ. ೬-೪-೧೫೪ । ಇತಿ ತೃಲೋಪಃ । ಇಷ್ಠನೋ ನಿತ್ತ್ವಾದಾದ್ಯುದಾತ್ತತ್ವಂ । ಸಿಂಚೇ । ಷಿಚಿರ್ ಕ್ಷರಣೇ । ವ್ಯತ್ಯಯೇನೈಕವಚನಂ । ಶೇ ಮುಚಾದೀನಾಮಿತಿ ನುಮಾಗಮಃ ॥

॥ ಪ್ರತಿಪದಾರ್ಥ ॥

ವಾಜಯಂತಃ—ಅನ್ನವನ್ನು ಅಪೇಕ್ಷಿಸತಕ್ಕ ನಾವು । ವಃ—(ಋತ್ವಿಗ್ಯಜಮಾನರೂಪದಲ್ಲಿರುವ) ನಿಮ್ಮ ಸಂಬಂಧಿಯಾದ । ಶತಕ್ರತುಂ—ನೂರು ಕರ್ಮಗಳಿಂದ ಕೂಡಿದವನೂ । ಮಂಹಿಷ್ಠಂ—ಅತ್ಯಂತಪ್ರವೃದ್ಧನೂ

ಆದ । **ಇಂದ್ರಂ**—ಇಂದ್ರನನ್ನು । **ಇಂದುಭಿಃ—**ಸೋಮರಸಗಳಿಂದ । **ಯಥಾ ಕ್ರಿವಿಂ—**ಬಾವಿಯನ್ನು (ನೀರಿನಿಂದ) ತುಂಬುವಂತೆ । **ಆ ಸಿಂಚೇ**—ಸುತ್ತಲೂ ತುಂಬಿ ತೃಪ್ತಿಪಡಿಸುವೆವು.

॥ ಭಾವಾರ್ಥ ॥

ಅನ್ನವನ್ನು ಅಪೇಕ್ಷಿಸತಕ್ಕ ನಾವು ನೂರಾರು ಸಾಹಸಕರ್ಮಗಳಿಂದ ಕೂಡಿದವನೂ ಮತ್ತು ಅತ್ಯಂತ ಪ್ರವೃದ್ಧನೂ ಆದ ನಿಮ್ಮ ಈ ಇಂದ್ರನನ್ನು ಬಾವಿಯನ್ನು ನೀರಿನಿಂದ ತುಂಬುವಂತೆ ಸೋಮರಸಗಳಿಂದ ಸುತ್ತಲೂ ತುಂಬಿ ತೃಪ್ತಿಪಡಿಸುವೆವು.

## English Translation.

We, desirous of wealth satisfy this your Indra who is the mightiest (among gods) and (is the performer or is praised) in a hundred sacrifices with drops of Soma-juice as a well (is filled with water).

॥ ವಿಶೇಷವಿಷಯಗಳು ॥

**ಕ್ರಿವಿಂ**---ಕೂಪಃ ಕಾತುಃ ಮೊದಲಾದ ಹದಿನಾಲ್ಕು ಕೂಪನಾಮಗಳ ಮಧ್ಯದಲ್ಲಿ ಕ್ರಿವಿಃ ಎಂಬ ಶಬ್ದವು ಪಠಿತವಾಗಿರುವುದರಿಂದ ಕ್ರಿವಿಯೆಂದರೆ ಭಾವಿಯು. ಕ್ರಿವಿಂ ಯಥಾ ಎಂದರೆ ಭಾವಿಯಲ್ಲಿ ನೀರು ತುಂಬಿರುವಂತೆ ಇಂದ್ರನ ಉದರದಲ್ಲಿ ಸೋಮರಸವನ್ನು ತುಂಬುವೆವು ಎಂದರ್ಥವು. ಇಂದ್ರನ ಪಾನಾರ್ಥವಾಗಿ ಅಧಿಕವಾದ ಸೋಮ ರಸವನ್ನು ಸಿದ್ಧಪಡಿಸಿರುವೆವು ಎಂದಭಿಪ್ರಾಯವು.

**ಶತಕ್ರತುಂ—**ಕ್ರತುವೆಂದರೆ ಕರ್ಮವೆಂದೂ (ನಿ. ೩-೧) ಪ್ರಜ್ಞೆಯೆಂದೂ (ನಿ. ೩-೧೩) ಅರ್ಥವಿರುವುದ ರಿಂದ ಇಲ್ಲಿ ಶತಕ್ರತುವೆಂದರೆ ನೂರಾರು ಸಾಹಸಕೃತ್ಯಗಳನ್ನು ಮಾಡಿದವನು ಅಥವಾ ಬಹಳವಾದ ಪ್ರಜ್ಞಾವಂತನು ಎಂಬ ಅರ್ಥಗಳನ್ನೂ ಹೇಳಬಹುದು. ಪುರಾಣಾದಿಗಳಲ್ಲಿ ಶತಕ್ರತುವೆಂದರೆ ನೂರು ಯಜ್ಞಗಳನ್ನು ಮಾಡಿದವನು ಎಂಬರ್ಥವಿರುವುದು ಎಂದರೆ ಇಂದ್ರನು ನೂರು ಯಜ್ಞಗಳನ್ನು ಮಾಡಿ ಇಂದ್ರಪದವಿಯನ್ನು ಪಡೆದನೆಂದು ಹೇಳಿರು ವುದು. ಆದರೆ ಆ ಅರ್ಥವು ಇಲ್ಲಿ ಹೊಂದುವುದಿಲ್ಲ. ನೂರಾರು ಕರ್ಮಗಳನ್ನು ಅಥವಾ ಸಾಹಸಕರ್ಮಗಳನ್ನೆಸಗಿದವ ನೆಂಬ ಅರ್ಥವೇ ವಿಹಿತವಾಗಿರುವುದು.

**ಮಂಹಿಷ್ಠಂ**—**ಮಹಿ ವೃದ್ಧೌ । ಅತಿಶಯೇನ ಮಂಹಿತಾ ಮಂಹಿಷ್ಠಃ ।** ಅತಿಶಯವಾಗಿ ಪ್ರವೃದ್ಧ ನಾದ, ಶ್ರೇಷ್ಠನಾದ.

**ವ ಇಂದ್ರಂ**—ನಿಮ್ಮ ಇಂದ್ರನನ್ನು ಎಂದರೆ ನೀವು ಸ್ತುತಿಸುತ್ತಿರುವ ಇಂದ್ರನನ್ನು ವಃ ಎಂಬ ಶಬ್ದ ಪ್ರಯೋಗದಿಂದ ಇಲ್ಲಿ ಋತ್ವಿಗ್ಜನರನ್ನು ಉದ್ದೇಶಿಸಿ ಈ ವಾಕ್ಯವನ್ನು ಹೇಳಿರುವುದೆಂದು ತಿಳಿಯಬೇಕು.

**ಸಿಂಚೆ—ಷಿಚಿರ್ ಕ್ಷರಣೇ ।** ನೀರಿನಿಂದ ನೆನೆಯುವಂತೆ (ತುಂಬುವಂತೆ) ಮಾಡುವೆವು. ಇಲ್ಲಿ ಇಂದುಭಿಃ ಎಂಬ ಶಬ್ದವಿರುವುದರಿಂದ ಸೋಮರಸಗಳಿಂದ ಇಂದ್ರನನ್ನು ತೃಪ್ತಿಪಡಿಸುವೆವು ಎಂಬರ್ಥವನ್ನು ಹೇಳಬೇಕು.

‖ ವ್ಯಾಕರಣಪ್ರಕ್ರಿಯಾ ‖

**ಕ್ರಿವಿಮ್**—ಕೃತೀ ಛೇದನೇ ಧಾತು. ರುಧಾದಿ ಕೃತ್ಯತೇ ಇತಿ ಕ್ರಿವಿಃ **'ಕ್ರಿವಿ ಧೃಷ್ಣಿ ಚ್ಛವಿ ಸ್ಥವಿ'** (ಉ. ಸೂ. ೪-೪೬) ಎಂಬುದರಿಂದ ಕ್ರಿವಿ ಶಬ್ದವು ಕ್ವಿನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿಪಾತದಿಂದಲೇ ಲೋಪಶಾಸ್ತ್ರವಿಲ್ಲದಿದ್ದರೂ ಧಾತುವಿನ ತಕಾರಕ್ಕೆ ಲೋಪ ಬರುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನರೂಪ.

**ಯಥಾ—'ಪ್ರಕಾರವಚನೇ ಥಾಲ್'** (ಪಾ. ಸೂ. ೫-೩-೨೩) ಎಂಬುದರಿಂದ ಯಚ್ಛಬ್ದಕ್ಕೆ ಥಾಲ್ ಪ್ರತ್ಯಯ ಬರುತ್ತದೆ. ಇದಕ್ಕೆ ವಿಭಕ್ತಿಸಂಜ್ಞೆ ಇರುವುದರಿಂದ **'ತ್ಯದಾದೀನಾಮಃ'** (ಪಾ. ಸೂ. ೭-೨-೧೦೨) ಎಂಬುದರಿಂದ ಅತ್ವವು ಅಂತಾದೇಶವಾಗಿ ಬಂದರೆ ಯಥಾ ಎಂದು ರೂಪವಾಗುತ್ತದೆ. **'ಯಥೇತಿ ಪಾದಾಂತೇ'** (ಫಿ. ಸೂ. ೮೫) ಎಂಬುದರಿಂದ ಸರ್ವಾನುದಾತ್ತಸ್ವರವು ಬರುತ್ತದೆ.

**ವಾಜಯಂತಃ—'ವಾಜಂ ಆತ್ಮನಃ ಇಚ್ಛಂತಃ ವಾಜಯಂತಃ ಸುಪ ಆತ್ಮನಃ ಕ್ಯಚ್'** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ವಾಜ ಶಬ್ದದ ಮೇಲೆ ಕ್ಯಚ್ ಬರುತ್ತದೆ. ವಾಜ+ಯ ಎಂದಿರುವಾಗ **'ಕ್ಯಚಿ ಚ'** (ಪಾ. ಸೂ. ೭-೪-೩೩) ಎಂಬುದರಿಂದ ಈತ್ವಾದಿಗಳು ಪ್ರಾಪ್ತವಾದರೆ **'ನ ಛಂದಸ್ಯಪುತ್ರಸ್ಯ'** (ಪಾ. ಸೂ. ೭-೪-೩೫) ಪುತ್ರಭಿನ್ನವಾದ ಅದಂತ ಶಬ್ದಗಳಿಗೆ ದೀರ್ಘಾದಿಗಳು ಬರುವುದಿಲ್ಲ ಎಂಬುದರಿಂದ ಇಲ್ಲಿ ಇತ್ವ ದೀರ್ಘಗಳು ಬರುವುದಿಲ್ಲ. ಛಂದಸ್ಸಿನಲ್ಲಿ **'ಅಶ್ವಾಘಸ್ಯಾತ್'** (ಪಾ. ಸೂ. ೭-೪-೩೭) ಎಂಬುದರಿಂದ ದೀರ್ಘ ವಿಧಾನಮಾಡಿರುವುದೇ ಇತರ ಶಬ್ದಗಳಿಗೆ ಬರುವುದಿಲ್ಲ ಎಂದು ಜ್ಞಾಪಕವಾಗುತ್ತದೆ. ವಾಜಯ ಎಂಬುದು ಧಾತು ಸಂಜ್ಞೆಯನ್ನು ಹೊಂದುವುದರಿಂದ ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ ಬರುತ್ತದೆ. ಪ್ರಥಮಾ ಬಹುವಚನದಲ್ಲಿ ಉಗಿತ್ತಾದುದರಿಂದ ನುಮಾಗಮ ಬರುತ್ತದೆ. ವಾಜಯಂತಃ ಎಂದು ರೂಪವಾಗುತ್ತದೆ.

**ಮಂಹಿಷ್ಠ**—ಮಹಿ ವೃದ್ಧೌ ಧಾತು. ಭ್ವಾದಿ ಅತಿಶಯೇನ ಮಂಹಿತಾ ಮಂಹಿಷ್ಠಃ **'ತುಶ್ಛಂದಸಿ'** (ಪಾ. ಸೂ. ೫-೩-೫೯) ಎಂಬುದರಿಂದ ತೃಜಂತದ ಮೇಲೆ ಇಷ್ಠನ್ ಪ್ರತ್ಯಯ ಬರುತ್ತದೆ. ಮಂಹಿತೃ+ಇಷ್ಠ ಎಂದಿರುವಾಗ **'ತುರಿಷ್ಠೇಮೇಯಃಸು'** (ಪಾ. ಸೂ. ೬-೪-೧೫೪) ಎಂಬುದರಿಂದ ಇಷ್ಠನ್ ಪರದಲ್ಲಿರುವಾಗ ತೃಚ್ಚಿಗೆ ಲೋಪ ಬರುತ್ತದೆ. ಮಂಹಿಷ್ಠ ಎಂದು ರೂಪವಾಗುತ್ತದೆ. ಇಷ್ಠನ್ ನಿತ್ತಾದುದರಿಂದ ಆದ್ಯುದಾತ್ತಸ್ವರವು ಬರುತ್ತದೆ. ದ್ವಿತೀಯಾ ಏಕವಚನರೂಪ.

**ಸಿಂಚೇ**—ಷಿಚಿರ್ ಕ್ಷರಣೇ ಧಾತು. ತುದಾದಿ ಲಟ್ ಉತ್ತಮಪುರುಷ ಬಹುವಚನಕ್ಕೆ **'ವ್ಯತ್ಯಯೋ ಬಹುಲಂ'** (ಪಾ. ಸೂ. ೩-೧-೮೫) ಎಂಬುದರಿಂದ ಏಕವಚನ ಪ್ರತ್ಯಯ ಬರುತ್ತದೆ. ಧಾತುವಿನ ಆದಿಗೆ ಸಕಾರಾದೇಶ ಬರುತ್ತದೆ. **'ಟಿತ ಆತ್ಮನೇಪದ-'** (ಪಾ. ಸೂ. ೩-೪-೭೯) ಎಂಬುದರಿಂದ ಇಟ್ಟಿಗೆ ಏತ್ವ ಬರುತ್ತದೆ. **'ಶೇಮುಚಾದೀನಾಂ'** (ಪಾ. ಸೂ. ೭-೧-೫೯) ಎಂಬುದರಿಂದ ಈ ಧಾತುವು ಮುಚಾದಿಯಲ್ಲಿ ಸೇರಿರುವುದರಿಂದ ನುಮಾಗಮ ಬರುತ್ತದೆ. ಮಿತ್ತಾದುದರಿಂದ ಅಂತ್ಯಾಚ್ಚಿನ ಪರವಾಗಿ ಬಂದರೆ ಸಿಂಚೇ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ ತಿಜಂತ ನಿಘಾತಸ್ವರ ಬರುತ್ತದೆ. ‖ ೧ ‖

॥ ಸಂಹಿತಾಪಾಠಃ ॥

ಶತಂ ವಾ ಯಃ ಶುಚೀನಾಂ ಸಹಸ್ರಂ ವಾ ಸಮಾಶಿರಾಂ ।
ಏದು ನಿಮ್ನಂ ನ ರೀಯತೇ ॥ ೨ ॥

॥ ಪದಪಾಠಃ ॥

**ಶತಂ । ವಾ । ಯಃ । ಶುಚೀನಾಂ । ಸಹಸ್ರಂ । ವಾ । ಸಂಽಆಶಿರಾಂ ।**
**ಆ । ಇತ್ । ಊಂ ಇತಿ । ನಿಮ್ನಂ । ನ । ರೀಯತೇ ॥ ೨ ॥**

॥ ಸಾಯಣ ಭಾಷ್ಯಂ ॥

ಯ ಇಂದ್ರಃ ಶುಚೀನಾಂ ಶುದ್ಧಾನಾಂ ಸೋಮಾನಾಂ ಶತಂ ವಾ ಶತಸಂಖ್ಯಾಕಂ ಸಮೂಹಂ ವಾ । ಸಮಾಶಿರಾಂ ಸಮೀಚೀನೇನಾಶಿರಾಖ್ಯೇನ ಶ್ರಪಣದ್ರವ್ಯೇಣೋಪೇತಾನಾಂ ಸೋಮಾನಾಂ ಸಹಸ್ರಂ ವಾ ಸಹಸ್ರಸಂಖ್ಯಾಕಂ ಸಮೂಹಂ ವಾ ಏದುರೀಯತೇ । ಆಗಚ್ಛತ್ಯೇವ । ಸೋಽಸ್ಮಾನನುಗೃಹ್ಣಾತ್ವಿತಿ ಶೇಷಃ । ಸೋಮಪ್ರಾಪ್ತೌ ದೃಷ್ಟಾಂತಃ । ನಿಮ್ನಂ ನ । ಯಥಾ ನಿಮ್ನಪ್ರದೇಶಮಾಪ ಆಪ್ನುವಂತಿ ತದ್ವತ್ ॥ ಸಮಾಶಿರಾಂ । ಶ್ರೀಞ್ ಪಾಕ ಇತ್ಯಸ್ಯ ಸಮಾಙ್‌ಪೂರ್ವಸ್ಯ ಕ್ವಿಪ್ಯಪಸ್ಪೃಧೇಥಾಮಿತ್ಯಾದಾವಾಶೀರಾದೇಶೋ ನಿಪಾತಿತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ರೀಯತೇ । ರೀಙ್ ಶ್ರವಣೇ । ದಿವಾದಿಭ್ಯಃ ಶ್ಯನ್ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಶುಚೀನಾಂ**—ಶುದ್ಧವಾದ । **ಶತಂ ವಾ**—ನೂರು ಸೋಮರಸಗಳನ್ನೂ (ಮತ್ತು) । **ಸಮಾಶಿರಾಂ**—ಶೋಧಿಸಿ ಮಧುರದ್ರವ್ಯಗಳಿಂದ ಕೂಡಿದ ಸೋಮರಸಗಳ । **ಸಹಸ್ರಂ ವಾ**—ಸಹಸ್ರ ಸಂಖ್ಯೆ ಸೋಮರಸಗಳನ್ನೂ (ಸ್ವೀಕರಿಸಲು) । **ನಿಮ್ನಂ ನ**—ನೀರು ನಿಮ್ನ ಪ್ರದೇಶಕ್ಕೆ ಸ್ವಾಭಾವಿಕವಾಗಿಯೇ ಹರಿದುಹೋಗುವಂತೆ । **ಏದು ರೀಯತೇ**—(ಸ್ವಾಭಾವಿಕವಾಗಿ) ಬಂದೇಬರುತ್ತಾನೋ (ಆ ಇಂದ್ರನು ನಮ್ಮನ್ನು ಅನುಗ್ರಹಿಸಲಿ).

॥ ಭಾವಾರ್ಥ ॥

ಯಾವ ಇಂದ್ರನು ಶುದ್ಧವಾದ ನೂರು ಸೋಮರಸಗಳನ್ನು ಸ್ವೀಕರಿಸುವುದಕ್ಕೂ ಮತ್ತು ಶೋಧಿಸಿ ಮಧುರ ದ್ರವ್ಯಗಳಿಂದ ಕೂಡಿದ ಸಹಸ್ರ ಸೋಮರಸಗಳನ್ನು ಸ್ವೀಕರಿಸುವುದಕ್ಕೂ ಸಹ ತಗ್ಗುಪ್ರದೇಶದಲ್ಲಿ

ಸುಲಭವಾಗಿಯೂ ಸ್ವಾಭಾವಿಕವಾಗಿಯೂ ನೀರಿನ ಪ್ರವಾಹವು ಹೋಗುವಂತೆ ಸುಲಭವಾಗಿಯೇ ಬರುತ್ತಾನೋ ಆ ಇಂದ್ರನು ನಮಗೆ ಅನುಗ್ರಹವನ್ನುಂಟುಮಾಡಲಿ.

## English Translation.

May he who (drinks) of a hundred pure and thousand mixed libations of Soma come to this sacrifice as water runs to a low place.

॥ ವಿಶೇಷವಿಷಯಗಳು ॥

**ಶತಂ, ಸಹಸ್ರಂ**—ಇಲ್ಲಿ ಶತಂ ಸಹಸ್ರಂ ಎಂಬ ಶಬ್ದಗಳಿಗೆ ನೂರಾರು, ಸಾವಿರಾರು ಎಂದು ಮಾತ್ರ ಅರ್ಥವಿದ್ದರೂ ನೂರಾರುಸಲ, ಸಾವಿರಾರುಸಲ ಅಥವಾ ನೂರಾರು ಸಾವಿರಾರು ಕಲಶಗಳಲ್ಲಿ ಅಥವಾ ಯಜ್ಞಗಳಲ್ಲಿ ನಾವು ಸಮರ್ಪಿಸುವ ಸೋಮರಸವೆಂದಭಿಪ್ರಾಯವು.

**ಸಮಾಶಿರಾಂ**—ಆಶಿರದ್ರವ್ಯಗಳಿಂದ ಯುಕ್ತವಾದ ಸೋಮರಸಗಳ (ಶತಂ ಸಹಸ್ರಂ) ಎಂದರೆ ಸೋಮರಸಕ್ಕೆ ಹಾಲು, ಮೊಸರು ಅಥವಾ ಹಿಟ್ಟನ್ನು ಬೆರಸಿ ಸಿದ್ಧಪಡಿಸಿದ ಸೋಮರಸವೆಂದರ್ಥವು. ಆಶಿರವೆಂದರೆ ಸೋಮರಸಕ್ಕೆ ಬೆರಸುವ ಮಿಶ್ರಣದ್ರವ್ಯಗಳು. ಇವು ಸಾಧಾರಣವಾಗಿ ಹಾಲು, ಮೊಸರು, ಹಿಟ್ಟು ಇವುಗಳಲ್ಲೊಂದಾಗಿರುವುದು. ಹಾಲನ್ನು ಬೆರಸಿರುವ ಸೋಮರಸಕ್ಕೆ ಗವಾಶಿರವೆಂದೂ, ಮೊಸರನ್ನು ಬೆರಸಿರುವ ಸೋಮರಸಕ್ಕೆ ದಧ್ಯಾಶಿರವೆಂದೂ, ಹಿಟ್ಟನ್ನು ಬೆರಸಿರುವ ಸೋಮರಸಕ್ಕೆ ಯವಾಶಿರವೆಂದೂ ಹೆಸರು. ಈ ಋಕ್ಕಿನಲ್ಲಿ ಈ ಮೂರು ದ್ರವ್ಯಗಳಲ್ಲಿ ಯಾವುದನ್ನೂ ಸ್ಪಷ್ಟವಾಗಿ ನಿರ್ದೇಶಿಸಿರುವುದಿಲ್ಲವಾದ್ದರಿಂದ ಈ ದ್ರವ್ಯಗಳಲ್ಲಿ ಯಾವುದಾದರೊಂದು ದ್ರವ್ಯಮಿಶ್ರಿತವಾದ ಸೋಮರಸವೆಂದರ್ಥವು.

**ಆ ಇತ್ ಉ ರೀಯತೇ—ಆಗಚ್ಛತ್ಯೇವ, ಧಾವತ್ಯೇವ ।** ಬಂದೇ ಬರುವನು, ಶೀಘ್ರವಾಗಿಯೇ ಬರುವನು.

**ನಿಮ್ನಂ ನ**—ನಿಮ್ನವೆಂದರೆ ತಗ್ಗಾದ ಪ್ರದೇಶ, ಹಳ್ಳ. ತಗ್ಗಾದ ಪ್ರದೇಶಕ್ಕೆ ನೀರು ಸ್ವಾಭಾವಿಕವಾಗಿಯೇ ಹರಿದುಹೋಗುವಂತೆ ನಮ್ಮ ಯಜ್ಞದಲ್ಲಿ ಸೋಮಪಾನಮಾಡುವುದಕ್ಕಾಗಿ ಇಂದ್ರನು ಬಂದೇಬರುವನು ಎಂದಭಿಪ್ರಾಯವು. ಇಲ್ಲಿ ನಿಮ್ನಂ ನ ಎಂಬ ಶಬ್ದಗಳು ತಗ್ಗುಪ್ರದೇಶಗಳಂತೆ ಅಥವಾ ತಗ್ಗುಪ್ರದೇಶಗಳಿಗೆ ಹೋಗುವಂತೆ ಎಂಬರ್ಥವಾದರೂ ತಗ್ಗುಪ್ರದೇಶಗಳಿಗೆ ಹರಿದು ಹೋಗುವ ನೀರು ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಸಮಾಶಿರಾಮ್**—ಶ್ರೀಞ್ ಪಾಕೇ ಧಾತು. ಕ್ರ್ಯಾದಿ ಸಮ್, ಆಙ್ಪೂರ್ವಕವಾದ ಈ ಧಾತುವಿಗೆ **'ಕ್ವಿಪ್ ಚ'** (ಪಾ. ಸೂ ೩-೨-೭೬) ಎಂಬುದರಿಂದ ಕ್ವಿಪ್ ಬರುತ್ತದೆ. ಕ್ವಿಬಂತವಾದ ಈ ಧಾತುವಿಗೆ **'ಅಪಸ್ಪೃಧೇಥಾಮಾನೃಚುಃ'** (ಪಾ. ಸೂ. ೬-೧-೩೬) ಎಂಬುದರಿಂದ ಆಶೀರಾದೇಶವು ನಿಪಾತಿತವಾಗಿದೆ. ಷಷ್ಠೀ

ಬಹುವಚನದಲ್ಲಿ ಸಮಾಶಿರಾಂ ಎಂದು ರೂಪವಾಗುತ್ತದೆ. ಬಹುವ್ರೀಹಿಸಮಾಸವಾದುದರಿಂದ **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಸಮಾಸಸ್ವರವನ್ನು ಬಾಧಿಸಿ ಬರುತ್ತದೆ. ಆದ್ಯುದಾತ್ತವಾದ ಪದವಾಗುತ್ತದೆ.

**ರೀಯತೇ**—ರೀಙ್ ಶ್ರವಣೇ ಧಾತು. ದಿವಾದಿ ಉಪಸರ್ಗದಿಂದ ಧಾತ್ವರ್ಥವು ಬೇರೆಯಾಗುತ್ತದೆ. ಙಿತ್ತಾದುದರಿಂದ ಆತ್ಮನೇಪದ ಪ್ರತ್ಯಯವನ್ನು ಹೊಂದುತ್ತದೆ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ ಬಂದರೆ ಅದಕ್ಕೆ **'ಟಿತ ಆತ್ಮನೇಪದಾನಾಂ'** (ಪಾ. ಸೂ. ೩-೪-೭೯) ಎಂಬುದರಿಂದ ಏತ್ವ ಬರುತ್ತದೆ. **'ದಿವಾದಿಭ್ಯಃ ಶ್ಯನ್'** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ ಪ್ರತ್ಯಯ ರೀಯತೇ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ **'ತಿಙ್ಙತಿಙಃ'** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥

॥ ಸಂಹಿತಾಪಾಠಃ ॥

ಸಂ ಯನ್ಮದಾಯ ಶುಷ್ಮಿಣ ಏನಾ ಹ್ಯಸ್ಯೋದರೇ ।
ಸಮುದ್ರೋ ನ ವ್ಯಚೋ ದಧೇ ॥ ೩ ॥

॥ ಪದಪಾಠಃ ॥

**ಸಂ । ಯತ್ । ಮದಾಯ । ಶುಷ್ಮಿಣೇ । ಏನಾ । ಹಿ । ಅಸ್ಯ । ಉದರೇ ।**
**ಸಮುದ್ರಃ । ನ । ವ್ಯಚಃ । ದಧೇ ॥ ೩ ॥**

॥ ಸಾಯಣಭಾಷ್ಯಂ ॥

**ಯತ್ಪೂರ್ವೋಕ್ತಂ ಶತಂ ಸಹಸ್ರಂ ವಾ ಶುಷ್ಮಿಣೇ ಬಲವತ ಇಂದ್ರಸ್ಯ ಮದಾಯ ಮದಾರ್ಥಂ ಸಂಗತಂ ಭವತಿ । ಏನಾ ಹ್ಯನೇನೈವ ಶತೇನ ಸಹಸ್ರೇಣ ಚಾಸ್ಯೇಂದ್ರಸ್ಯೋದರೇ ವ್ಯಚೋ ವ್ಯಾಪ್ತಿರ್ದಧೇ । ಧೃತಾ ಭವತಿ । ತತ್ರ ದೃಷ್ಟಾಂತಃ । ಸಮುದ್ರೋ ನ ಸಮುದ್ರ ಇವ । ಯಥಾ ಸಮುದ್ರಮಧ್ಯೇ ಜಲಂ ವ್ಯಾಪ್ತಂ ತದ್ವತ್ ॥ ಏನಾ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ । ವ್ಯಚಃ । ವ್ಯಚೇಃ ಕುಟಾದಿತ್ವಮನಸಿ । ಕಾ. ೧-೨-೧-೧ । ಇತಿ ಙಿದ್ವದ್ಭಾವಸ್ಯ ಪ್ರತಿಷಿದ್ಧತ್ವಾದ್ಗ್ರಹಿಜ್ಯೇತ್ಯಾದಿನಾ ಸಂಪ್ರ-**

**ಸಾರಣಂ ನ ಭವತಿ ಅಸುನೋ ನಿತ್ತ್ವಾದಾದ್ಯುದಾತ್ತತ್ವಂ । ದಧೇ । ದಧಾತೇಃ ಕರ್ಮಣ್ಯಭ್ಯಾಸಹ್ರಸ್ವಜ-ಶ್ತ್ವೇಷು ಕೃತೇಷ್ವಾತೋ ಲೋಪ ಇಟಿ ಚೇತ್ಯಾಕಾರಲೋಪಃ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಹಿ ಚೇತಿ ಪ್ರತಿಷೇಧಾನ್ನಿಘಾತಾಭಾವಃ ॥**

॥ ಪ್ರತಿಪದಾರ್ಥ ॥

**ಯತ್**—(ಹಿಂದೆ ವರ್ಣಿತವಾದ) ಯಾವ ನೂರಾರು ಸೋಮರಸಗಳ ಹವಿಸ್ಸುಗಳು । **ಶುಷ್ಮಿಣೇ**—ಬಲ ಶಾಲಿಯಾದ ಇಂದ್ರನ । **ಮದಾಯ**—ತೃಪ್ತ್ಯರ್ಥವಾಗಿ (ಶೇಖರಿತವಾಗಿವೆಯೋ) । **ಏನಾ ಹಿ**—(ಆ ಸೋಮ ರಸಗಳು) ಇದೇ ಸಹಸ್ರ ಸಂಖ್ಯೆಗಳಿಂದ । **ಸಮುದ್ರೋ ನ**—ಸಮುದ್ರವು ನೀರಿನಿಂದ ತುಂಬಿರುವಂತೆ । **ಅಸ್ಯ**—ಈ ಇಂದ್ರನ । **ಉದರೇ**—ಹೊಟ್ಟೆಯಲ್ಲಿ । **ವ್ಯಚಃ ದಧೇ**—ತುಂಬಿಕೊಂಡಿವೆ.

॥ ಭಾವಾರ್ಥ ॥

ಹಿಂದೆ ವರ್ಣಿತವಾದ ಯಾವ ಸಹಸ್ರ ಸಂಖ್ಯಾತವಾದ ಸೋಮರಸಗಳ ಹವಿಸ್ಸುಗಳು ಬಲಶಾಲಿಯಾದ ಇಂದ್ರನ ತೃಪ್ತ್ಯರ್ಥವಾಗಿ ಶೇಖರಿತವಾಗಿವೆಯೋ ಅವೆಲ್ಲವೂ ಸಹ ಸಮುದ್ರವು ನೀರಿನಿಂದ ತುಂಬಿರುವಂತೆ ಆ ಇಂದ್ರನ ಉದರದಲ್ಲಿ ತುಂಬಿವೆ.

English Translation.

All those libations of Soma (which were mentioned above) are, for his intoxication, accumulated in the belly of powerful Indra as the water in the sea.

॥ ವಿಶೇಷವಿಷಯಗಳು ॥

**ಮದಾಯ**—ಸಂತೋಷಾರ್ಥವಾಗಿ, ಮದವನ್ನುಂಟುಮಾಡುವುದಕ್ಕಾಗಿ, for the sake of intoxication.

**ಶುಷ್ಮಿಣೇ—ಬಲವತೇ ।** ಬಲವುಳ್ಳ ಇಂದ್ರನಿಗೆ.

**ಸಮುದ್ರೋ ನ**—ಸಮುದ್ರದಲ್ಲಿ ನೀರು ಸೇರಿರುವಂತೆ ನಾವು ಅರ್ಪಿಸುವ ನೂರಾರು, ಸಾವಿರಾರು ಸೋಮ ಗಳು ಇಂದ್ರನ ಉದರದಲ್ಲಿ ಸೇರಿ ಇಂದ್ರನಿಗೆ ಸಂತೋಷ (ಮದ) ವನ್ನುಂಟುಮಾಡುವುದೆಂದಭಿಪ್ರಾಯವು.

**ವ್ಯಚೋ ದಧೇ—ವ್ಯಾಪ್ತಿರ್ದಧೇ । ಧೃತಾ ಭವತಿ ।** ವ್ಯಾಪಿಸಿರುವುದು ಎಂದರೆ ಒಟ್ಟುಗೂಡಿ ಉದರ ದಲ್ಲಿ ಶೇಖರಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಏನಾ—'ದ್ವಿತೀಯಾಟೌಸ್ಸ್ವೇನಃ'** (ಪಾ. ಸೂ. ೨-೪-೩೪) ಅನ್ವಾದೇಶವು ತೋರುತ್ತಿರುವಾಗ ದ್ವಿತೀಯಾ, ಟಾ, ಓಸ್ ವಿಭಕ್ತಿಗಳು ಪರದಲ್ಲಿರುವಾಗ ಇದಮ್, ಏತತ್ ಶಬ್ದಗಳಿಗೆ ಏನಾದೇಶ ಬರುತ್ತದೆ. ಎಂಬುದ ರಿಂದ ಇಲ್ಲಿ ಇದಮ್ ಶಬ್ದಕ್ಕೆ ಏನಾದೇಶ ಬರುವುದು. ಯಾವುದೋ ಕಾರ್ಯನಿಮಿತ್ತವಾಗಿ ಉಪಾತ್ತವಾದುದಕ್ಕೆ

ಬೇರೊಂದು ಕಾರ್ಯವನ್ನು ವಿಧಾನಮಾಡಲು ಪುನಃ ತೆಗೆದುಕೊಳ್ಳುವಲ್ಲಿ ಅನ್ವಾದೇಶವೆಂದು ವ್ಯವಹರಿಸುತ್ತಾರೆ. ಇಲ್ಲಿ ಟಾ ಪರದಲ್ಲಿರುವಾಗ ಏನಾದೇಶ ಬಂದಿರುತ್ತದೆ. **'ಸುಪಾಂ ಸುಲುಕ್'** (ಪಾ. ಸೂ. ೭-೧-೩೯) ಸೂತ್ರದಿಂದ ಟಾ ವಿಭಕ್ತಿಗೆ ಡಾದೇಶ ಬರುತ್ತದೆ. ಏನಾ ಎಂದು ರೂಪವಾಗುತ್ತದೆ.

**ವ್ಯಚಃ**—ವ್ಯಚ ವ್ಯಾಜೀಕರಣೇ ಧಾತು. ತುದಾದಿ. **'ಸರ್ವಧಾತುಭ್ಯೋಽಸುನ್'** (ಉ. ಸೂ ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ ಬರುತ್ತದೆ. ವ್ಯಚಸ್ ಎಂದು ಸಾಂತವಾದ ಶಬ್ದವಾಗುತ್ತದೆ. **'ವ್ಯಚೇಃ ಕುಟಾದಿತ್ವಮನಸಿ'** (ಕಾ. ೧-೨-೧-೧) ಅಸ್ ಭಿನ್ನವಾದ ಪ್ರತ್ಯಯ ಪರದಲ್ಲಿರುವಾಗ ವ್ಯಚ್ ಧಾತುವಿಗೆ ಕುಟಾದಿತ್ವವನ್ನು ಹೇಳಬೇಕು. ಎಂಬುದರಿಂದ ಇಲ್ಲಿ ಅಸಿಯೇ ಪರದಲ್ಲಿರುವುದರಿಂದ ಕುಟಾದಿತ್ವವು ಇರುವುದಿಲ್ಲ. ಆದುದರಿಂದ **'ಗಾಂಕುಟಾದಿ'** ಸೂತ್ರದಿಂದ ಧಾತುವಿನ ಪರದಲ್ಲಿರುವ ಪ್ರತ್ಯಯಕ್ಕೆ ಙಿದ್ವದ್ಭಾವವು ಬರುವುದಿಲ್ಲ. ಇದರಿಂದ **'ಗ್ರಹಿಜ್ಯಾವಯಿ'** (ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣವು ಬರುವುದಿಲ್ಲ. ಅಸುನ್ ನಿತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ದಧೇ**—ಡು ಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ ಕರ್ಮಣಿ ಲಿಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ ಬರುತ್ತದೆ. ಅದಕ್ಕೆ **'ಲಿಟಸ್ತಝಯೋರೇಶಿರೇಚ್'** (ಪಾ. ಸೂ. ೩-೪-೮೧) ಎಂಬುದರಿಂದ ಏಶ್ ಆದೇಶ ಬರುತ್ತದೆ. ಲಿಣ್ನಿಮಿತ್ತಕವಾಗಿ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹ್ರಸ್ವ, ಜಸ್ತ್ವಗಳು ಬಂದರೆ ದಧಾ+ಏ ಎಂದಾಗುತ್ತದೆ. **'ಆತೋ ಲೋಪ ಇಟಿಚ'** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ ಬರುತ್ತದೆ ದಧೇ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ದಧೇ ಎಂಬುದು ಅಂತೋದಾತ್ತವಾಗುತ್ತದೆ. ಹಿಂದೆ ಹಿ ಎಂಬುದರ ಯೋಗವಿರುವುದರಿಂದ **'ಹಿಚ'** (ಪಾ. ಸೂ. ೮-೧-೩೪) ಎಂಬುದರಿಂದ ಪ್ರತಿಷೇಧ ಮಾಡಿರುವುದರಿಂದ ತಿಙಂತನಿಘಾತಸ್ವರವು ಬರುವುದಿಲ್ಲ. ॥ ೩ ॥

॥ ಸಂಹಿತಾಪಾಠಃ ॥

ಅಯಮು ತೇ ಸಮತಸಿ ಕಪೋತಇವ ಗರ್ಭಧಿಂ ।
ವಚಸ್ತಚ್ಚಿನ್ನ ಓಹಸೇ ॥ ೪ ॥

॥ ಪದಪಾಠಃ ॥

**ಅಯಂ । ಊಂ ಇತಿ । ತೇ । ಸಂ । ಅತಸಿ । ಕಪೋತಃ ಽ ಇವ । ಗರ್ಭಽಧಿಂ ।**
**ವಚಃ । ತತ್ । ಚಿತ್ । ನಃ । ಓಹಸೇ ॥ ೪ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ಅಯಮು ಅಯಮಪಿ ದೃಶ್ಯಮಾನಃ ಸೋಮಸ್ತೇ ತ್ವದರ್ಥಂ ಸಂಪಾದಿತಃ । ಯಂ ಸೋಮಂ ಸಮತಸಿ ಸಮ್ಯಕ್ ಸಾತತ್ಯೇನ ಪ್ರಾಪ್ನೋಷಿ । ತತ್ರ ದೃಷ್ಟಾಂತಃ । ಕಪೋತ ಇವ । ಯಥಾ ಕಪೋತಾಖ್ಯಃ ಪಕ್ಷೀ ಗರ್ಭಧಿಂ ಗರ್ಭಧಾರಿಣೀಂ ಕಪೋತೀಂ ಪ್ರಾಪ್ನೋತಿ ತದ್ವತ್ । ತಚ್ಚಿತ್ತಸ್ಮಾದೇವ ಕಾರಣಾನ್ನೋಽಸ್ಮದೀಯಂ ವಚ ಓಹಸೇ । ಪ್ರಾಪ್ನೋಷಿ ॥ ಅತಸಿ । ಅತ ಸಾತತ್ಯಗಮನೇ । ಕಪೋತ ಇವ । ಕಪೇರೋತಚ್ ಪಶ್ಚ । ಉ. ೧-೬೨ । ಇತ್ಯೋತಚ್ । ವ್ಯತ್ಯಯೇನ ಮಧ್ಯೋದಾತ್ತಃ । ಗರ್ಭಧಿಂ । ಗರ್ಭೋಽಸ್ಯಾಂ ಧೀಯತ ಇತಿ ಗರ್ಭಧಿಃ । ಕರ್ಮಣ್ಯಧಿಕರಣೇ ಚ । ಪಾ. ೩-೩-೯೩ । ಇತಿ ಕಿಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವಂ । ಓಹಸೇ । ತುಹಿರ್ ದುಹಿರ್ ಉಹಿರ್ ಅರ್ದನೇ । ವ್ಯತ್ಯಯೇನಾತ್ಮನೇಪದಂ ॥**

॥ ಪ್ರತಿಪದಾರ್ಥ ॥

(**ಇಂದ್ರ**—ಎಲೈ ಇಂದ್ರನೇ) । **ಅಯಂ ಉ**—ಈ ಸೋಮರಸವೂ ಸಹ । **ತೇ**—ನಿನಗಾಗಿಯೇ (ಸಂಪಾದಿತವಾಗಿದೆ) । **ಕಪೋತಃ**—ಪಾರಿವಾಳ ಪಕ್ಷಿಯು । **ಗರ್ಭಧಿಂ ಇವ**—ಗರ್ಭಧಾರಿಣಿಯಾದ ತನ್ನ ಪ್ರಿಯೆಯನ್ನು ಸೇರುವಂತೆ । **ಸಮತಸಿ**—(ನೀನು ಈ ಸೋಮರಸವನ್ನು) ಸೇರಿ ಅದನ್ನು ಹೊಂದುತ್ತೀಯೆ । **ತಚ್ಚಿತ್**—ಆದ್ದರಿಂದಲೇ । **ನಃ**—ನಮ್ಮ । **ವಚಃ**—ಸ್ತೋತ್ರರೂಪವಾದ ವಾಕ್ಯನ್ನು । **ಓಹಸೇ**—ಸೇರುತ್ತೀಯೆ (ಸ್ವೀಕರಿಸುತ್ತೀಯೆ) ॥

॥ ಭಾವಾರ್ಥ ॥

ಎಲೈ ಇಂದ್ರನೇ, ಈ ಸೋಮರಸವೂ ಸಹ ನಿನಗಾಗಿಯೇ ಸಂಪಾದಿತವಾಗಿದೆ. ಪಾರಿವಾಳ ಪಕ್ಷಿಯು ಗರ್ಭಧಾರಿಣಿಯಾದ ತನ್ನ ಪ್ರಿಯೆಯನ್ನು ಸೇರುವಂತೆ ನೀನೂ ಸಹ ಈ ಸೋಮರಸವನ್ನು ಸೇರಿ ಅದನ್ನು ಹೊಂದುತ್ತೀಯೆ. ಆದ್ದರಿಂದಲೇ ನಮ್ಮ ಈ ಸ್ತೋತ್ರರೂಪವಾದ ವಾಕ್ಯನ್ನು ಸ್ವೀಕರಿಸುತ್ತೀಯೆ.

## English Translation.

This Soma-juice is prepared for you ; you approach this libation as a pigeon seeks his pregnant mate ; therefore you accept our prayer.

॥ ವಿಶೇಷವಿಷಯಗಳು ॥

**ಸಂ ಅತಸಿ—ಅತ ಸಾತತ್ಯಗಮನೇ । ಪ್ರಾಪ್ನೋಷಿ ।** ಸಮೀಪಕ್ಕೆ ಬರುವೆ, you approach.

**ಕಪೋತ ಇವ ಗರ್ಭಧಿಂ—ಗರ್ಭಧಿಂ । ಗರ್ಭೋಽಸ್ಯಾಂ ಧೀಯತ ಇತಿ ಗರ್ಭಧಿಃ ।** ಗರ್ಭವನ್ನು ಧರಿಸುವ ಎಂದರೆ ಹೆಣ್ಣು ಪಾರಿವಾಳೆಂದರ್ಥವು. ಗಂಡುಪಾರಿವಾಳವು ಹೆಣ್ಣು ಪಾರಿವಾಳವನ್ನು (ಪ್ರೀತಿಯಿಂದ) ಸಮೀಪಿಸುವಂತೆ ಎಂದು ಉಪಮಾರ್ಥವು. ಇಲ್ಲಿ ಗರ್ಭಧಿಂ ಎಂಬ ಶಬ್ದಕ್ಕೆ ಗರ್ಭವನ್ನು ಧರಿಸಿರುವ ಎಂದರ್ಥವಾದರೂ

ಗರ್ಭವನ್ನು ಧರಿಸುವುದು ಹೆಣ್ಣುಪಕ್ಷಿಯಾದ್ದರಿಂದ ಹೆಣ್ಣು ಪಾರಿವಾಳವನ್ನು ಸೂಚಿಸುವುದಕ್ಕಾಗಿ ಗರ್ಭಧಿಂ ಎಂಬ ಶಬ್ದವು ಉಪಯೋಗಿಸಲ್ಪಟ್ಟಿರುವುದೆಂದು ತಿಳಿಯಬೇಕು. ಗರ್ಭವನ್ನು ಧರಿಸಿರುವ ಪಾರಿವಾಳನನ್ನು ಎಂಬ ಅರ್ಥವನ್ನೇ ಹೇಳಬೇಕಾಗಿಲ್ಲ. ಏಕೆಂದರೆ ಗರ್ಭವನ್ನು ಧರಿಸಿಲ್ಲದ ಕಾಲದಲ್ಲಿಯೂ ಸಹ ಗಂಡು ಹಕ್ಕಿಯು ಹೆಣ್ಣು ಹಕ್ಕಿಯೊಡನೆ ವಿಹರಿಸುವುದನ್ನು ಎಲ್ಲರೂ ಬಲ್ಲರು. ಆದುದರಿಂದ ಇಲ್ಲಿ **ಕಪೋತ ಇವ ಗರ್ಭಧಿಂ** ಎಂಬ ಶಬ್ದಗಳಿಗೆ ಗಂಡು ಪಾರಿವಾಳವು ಹೆಣ್ಣು ಪಾರಿವಾಳದ ಸಮೀಪಕ್ಕೆ ಹೋಗುವಂತೆ ಎಂಬರ್ಥವನ್ನು ಹೇಳಬೇಕು.

**ವಚಸ್ತ್ವಚಿನ್ನ ಓಹಸೇ**—ನಮ್ಮ ವಚನವನ್ನು ಹೊಂದುವೆ ಎಂದರೆ ಮೇಲೆ ಹೇಳಿದ ಉಪಮಾನದಂತೆ ಇಂದ್ರನಾದ ನೀನು ನಮ್ಮ ವಚನವನ್ನು ಎಂದರೆ ಸ್ತುತಿಯನ್ನು ಪ್ರೀತಿಯಿಂದ ಸ್ವೀಕರಿಸುವೆ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅತಸಿ**—ಅತ ಸಾತತ್ಯಗಮನೇ ಧಾತು. ಭ್ವಾದಿ ಲಟ್ ಮಧ್ಯಮಪುರುಷ ಏಕವಚನದ ರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಕಪೋತ ಇವ**—**'ಕಬೇರೋತಚ್ ಪಶ್ಚ'** (ಉ. ಸೂ. ೧-೬೨) ಎಂಬುದರಿಂದ ಕಬೃಧಾತುವಿಗೆ ಓತಚ್ ಪ್ರತ್ಯಯ ಬರುತ್ತದೆ. ಬಕಾರಕ್ಕೆ ಪಕಾರಾದೇಶ ಬರುತ್ತದೆ. ಕಪೋತ ಎಂದು ರೂಪವಾಗುತ್ತದೆ. ಚಿತ್ ಪ್ರತ್ಯಯಾಂತವಾದುದರಿಂದ **'ಚಿತಃ'** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ **'ವ್ಯತ್ಯಯೋ ಬಹುಲಂ'** (ಪಾ. ಸೂ. ೩-೧-೮೫) ಎಂಬುದರಿಂದ ಮಧ್ಯೋದಾತ್ತಸ್ವರವು ಬರುತ್ತದೆ.

**ಗರ್ಭಧಿಂ**—**'ಗರ್ಭೋಽಸ್ಯಾಂ ಧೀಯತೇ ಇತಿ ಗರ್ಭಧಿಃ' 'ಕರ್ಮಣ್ಯಧಿಕರಣೇ ಚ'** (ಪಾ. ಸೂ. ೩-೩-೯೩) ಕರ್ಮವಾಚಕವು ಉಪಪದವಾಗಿರುವಾಗ ಅಧಿಕರಣಾರ್ಥದಲ್ಲಿ ಘುಸಂಜ್ಞಾವುಳ್ಳ ಧಾತುವಿಗೆ ಕಿ ಪ್ರತ್ಯಯ ಬರುತ್ತದೆ ಎಂಬುದರಿಂದ ಇಲ್ಲಿ ಧಾ ಧಾತುವಿಗೆ ಕಿ ಪ್ರತ್ಯಯ ಬರುತ್ತದೆ. ಧಾ+ಇ ಎಂದಿರುವಾಗ **'ಆತೋ ಲೋಪ ಇಟಿಚ'** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪ ಬರುತ್ತದೆ. ಗರ್ಭಧಿಂ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನದ ರೂಪ. ಕಾರಕಪೂರ್ವಪದವಾಗಿ ಕೃದಂತ ಉತ್ತರಪದವಾಗಿರುವುದರಿಂದ **'ಗತಿಕಾರಕೋಪಪದಾತ್ ಕೃತ್'** (ಪಾ. ಸೂ ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿ ಸ್ವರವು ಬರುತ್ತದೆ. ಗರ್ಭಧಿಂ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

**ಓಹಸೇ**—ತುಹಿರ್, ದುಹಿರ್, ಉಹಿರ್, ಅರ್ದನೇ ಧಾತು. ಪರಸ್ಮೈಪದಿ. ಭ್ವಾದಿ. **'ವ್ಯತ್ಯಯೋ ಬಹುಲಂ'** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದ ಪ್ರತ್ಯಯವು ಬರುತ್ತದೆ. ಲಟ್ ಮಧ್ಯಮಪುರುಷ ಏಕವಚನಕ್ಕೆ **'ಟಿತಆತ್ಮನೇ-'** (ಪಾ. ಸೂ. ೩-೪-೭೯) ಸೂತ್ರದಿಂದ ಏತ್ವ ಬಂದರೆ ಸೇ ಎಂದಾಗುತ್ತದೆ. **'ಕರ್ತರಿ ಶಪ್'** (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣ ಬರುತ್ತದೆ. **'ಪುಗಂತಲಘೂಪಧಸ್ಯ ಚ'** (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ ಬಂದರೆ ಓಹಸೇ ಎಂದು ರೂಪವಾಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಸ್ತೋತ್ರಂ ರಾಧಾನಾಂ ಪತೇ ಗಿರ್ವಾಹೋ ವೀರ ಯಸ್ಯ ತೇ ।
ವಿಭೂತಿರಸ್ತು ಸೂನೃತಾ ॥ ೫ ॥

॥ ಪದಪಾಠಃ ॥

ಸ್ತೋತ್ರಂ । ರಾಧಾನಾಂ । ಪತೇ । ಗಿರ್ವಾಹಃ । ವೀರ । ಯಸ್ಯ । ತೇ ।
ವಿऽಭೂತಿಃ । ಅಸ್ತು । ಸೂನೃತಾ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ರಾಧಾನಾಂ ಪತೇ ಧನಾನಾಂ ಪಾಲಕ ಗಿರ್ವಾಹೋ ಗೀರ್ಭಿರುಹ್ಯಮಾನ ವೀರ ಶೌರ್ಯೋಪೇತ ಯಸ್ಯ ತೇ ತವ ಸ್ತೋತ್ರಮೀದೃಶಂ ಭವತಿ ತಸ್ಯ ತವ ವಿಭೂತಿರ್ಲಕ್ಷ್ಮೀಃ ಸೂನೃತಾ ಪ್ರಿಯಸತ್ಯರೂಪಾಸ್ತು ॥ ಸ್ತೋತ್ರಂ । ದಾಮ್ನೀಶಸೇತಿ ಷ್ಟ್ರನ್ । ಪಾ. ೩-೨-೧೮೨ । ಪಶ್ಚಾದರ್ಶಆದ್ಯುಚ್ । ಅಥವಾ ಸ್ತೋತುರಿದಮಿತ್ಯರ್ಥೇಽಣ್ । ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ವೃದ್ಧಿರ್ನ । ರಾಧಾನಾಂ ಪತೇ । ರಾಧ್ನುವಂತ್ಯೇಭಿರಿತಿ ರಾಧಾನಿ ಧನಾನಿ । ಸುಬಾಮಂತ್ರಿತ ಇತಿ ಪರಾಂಗವದ್ಭಾವಾತ್ಷಾಷ್ಠ್ಯಾಮಂತ್ರಿತಸಮುದಾಯಸ್ಯ ನಿಘಾತಃ । ಗಿರ್ವಾಹಃ । ವಹ ಪ್ರಾಪಣೇ । ವಹಿಹಾಧಾಞ್ಭ್ಯಶ್ಛಂದಸೀತಿ ಕಾರಕಪೂರ್ವಸ್ಯಾಪಿ ವಹತೇರಸುನ್ಪ್ರತ್ಯಯಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚ । । ಉ. ೪-೨೨೬ । ಇತ್ಯುಕ್ತತ್ವಾತ್ । ಣಿದಿತ್ಯನುವೃತ್ತೇರುಪಧಾವೃದ್ಧಿಃ । ಪೂರ್ವಪದಸ್ಯ ರ್ವೋರುಪಧಾಯಾಃ । ಪಾ. ೮-೨-೭೬ । ಇತಿ ದೀರ್ಘಸ್ಯಾಭಾವಶ್ಛಾಂದಸಃ । ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ವಿಭೂತಿಃ । ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವಂ ॥ ॥ ೨೮ ॥

॥ ಪ್ರತಿಪದಾರ್ಥ ॥

**ರಾಧಾನಾಂ**—ಐಶ್ವರ್ಯಗಳಿಗೆ । **ಪತೇ**—ಪಾಲಕನೂ । **ಗಿರ್ವಾಹಃ**—ಸ್ತೋತ್ರಗಳಿಂದ (ಸ್ತೋತ್ರಗಳನ್ನು ಸ್ವೀಕರಿಸುವವನೂ ವಹಿಸಲ್ಪಡುವವನೂ) । **ವೀರ**—ಶೌರ್ಯದಿಂದ ಕೂಡಿದವನೂ ಆದ ಎಲೈ ಇಂದ್ರನೇ । **ಯಸ್ಯ**—ಯಾವನ (ಯಾವ ಭಕ್ತನು ಮಾಡುವ) । **ತೇ**—ನಿನ್ನ ಸಂಬಂಧವಾದ । **ಸ್ತೋತ್ರಂ**—ಸ್ತೋತ್ರವು (ಈರೀತಿಯಾಗಿರುತ್ತದೆಯೋ) । **ತಸ್ಯ**—ಅವನ । **ವಿಭೂತಿಃ**—ಐಶ್ವರ್ಯವು । **ಸೂನೃತಾ**—ಪ್ರಿಯವಾಗಿಯೂ ಸತ್ಯರೂಪವುಳ್ಳದ್ದಾಗಿಯೂ । **ಅಸ್ತು**—ಆಗಲಿ.

॥ ಭಾವಾರ್ಥ ॥

ಧನಗಳಿಗೆ ಪಾಲಕನೂ, ಸ್ತೋತ್ರಗಳನ್ನು ಸ್ವೀಕರಿಸುವವನೂ ಆದ ಎಲೈ ಇಂದ್ರನೇ ಯಾವ ಯಜಮಾನನು ನಿನ್ನನ್ನು ಚೆನ್ನಾಗಿ ಸ್ತೋತ್ರಮಾಡುತ್ತಾನೋ ಅವನ ಐಶ್ವರ್ಯವು ಪ್ರಿಯವಾಗಿಯೂ ಸತ್ಯರೂಪವುಳ್ಳದ್ದಾಗಿಯೂ ಆಗಲಿ.

## English Translation.

Indra, hero and lord of riches and accepter of praises, may genuine prosperity be the reward of him who praises you.

॥ ವಿಶೇಷವಿಷಯಗಳು ॥

**ಗಿರ್ವಾಹಸಃ—ಗಿರಃ ಸ್ತುತಯಃ ತಾ ಉಹ್ಯಂತೇ ಪ್ರಾಪ್ಯಂತೇ ಯತ್ರ ಸ್ತೋತೃಭಿಃ ಸ ಗಿರ್ವಾಹಃ ತಸ್ಯ ಸಂಬೋಧನಂ ಹೇ ಗಿರ್ವಾಹಃ । ಸ್ತುತಿಹವ್ಯ ॥** ಗಿರಃ ಎಂದರೆ ಸ್ತುತಿರೂಪವಾದ ವಾಕ್ಯಗಳು. ಅಂತಹ ವಾಕ್ಯಗಳಿಂದ ಸ್ತುತಿಸಲ್ಪಡುವವನು ಅಥವಾ ಸ್ತೋತ್ರಗಳನ್ನು ಸ್ವೀಕರಿಸುವವನು.

**ಯಸ್ಯ—**ಇಲ್ಲಿ ಯಚ್ಛಬ್ದಪ್ರಯೋಗವಿರುವುದರಿಂದ ತಸ್ಯ ಎಂಬ ಶಬ್ದವು ಅವಶ್ಯಕವು.

**ವಿಭೂತಿಃ—ವಿಭವತೀತಿ ವಿಭೂತಿಃ ।** ಸಂಪತ್ತು, ಐಶ್ವರ್ಯ, ವಿಭವ prosperity, wealth, riches &c.

**ಸೂನೃತಾ--ಪ್ರಿಯಸತ್ಯರೂಪಾ । ಅಥವಾ ಶೋಭನೇಷು ನೃಷು ಸ್ತುತಿಪರೇಷು ತಾಯತೆ ವಿಸ್ತೀರ್ಯತ ಇತಿ ಸೂನೃತಾ । ಸ್ತೋತೃಭ್ಯೋ ಭೋಗ್ಯೇತ್ಯರ್ಥಃ ।** ಪ್ರಿಯಸತ್ಯರೂಪವಾದ, genuine and well-liked ಅಥವಾ ಸ್ತೋತ್ರಮಾಡುವ ಜನರಲ್ಲಿ ಅಭಿವೃದ್ಧಿಯನ್ನುಂಟುಮಾಡುವ, ಸ್ತೋತ್ರಮಾಡುವವರಿಂದ ಅನುಭೋಗಿಸಲ್ಪಡುವ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಸ್ತೋತ್ರಂ**—ಷ್ಟುಞ್ ಸ್ತುತೌ ಧಾತು. ಅದಾದಿ. ಧಾತ್ವಾದಿಗೆ ಸಕಾರ ಬರುತ್ತದೆ. **' ದಾಮ್ನೀಶಸ-'** (ಪಾ. ಸೂ. ೩-೨-೧೮೨) ಎಂಬುದರಿಂದ ಷ್ಟ್ರನ್ ಪ್ರತ್ಯಯ. ಷಕಾರ ಇತ್ತಾದುದರಿಂದ ತ್ರ ಎಂದು ಉಳಿಯುತ್ತದೆ. ಆರ್ಧಧಾತುಕನಿಮಿತ್ತಕವಾಗಿ ಧಾತುವಿಗೆ ಗುಣ ಬರುತ್ತದೆ. ಸ್ತೋತ್ರ ಎಂದು ರೂಪವಾಗುತ್ತದೆ. ಸ್ತೋತ್ರಂ ಅಸ್ಯ ಅಸ್ತಿ ಎಂಬ ಮತ್ವರ್ಥದಲ್ಲಿ ಸ್ತೋತ್ರ ಶಬ್ದದ ಮೇಲೆ **' ಅರ್ಶ ಆದಿಭ್ಯೋಽಚ್ '** (ಪಾ. ಸೂ. ೫-೨-೧೨೭) ಎಂಬುದರಿಂದ ಅಚ್ ಪ್ರತ್ಯಯ ಬರುತ್ತದೆ. ಸ್ತೋತ್ರ+ಅ, ಎಂದಿರುವಾಗ **'ಯಸ್ಯೇತಿ ಚ '** (ಪಾ. ಸೂ. ೬-೪-೧೪೮) ಎಂಬುದರಿಂದ ಅಲೋಪ ಬಂದರೆ ಸ್ತೋತ್ರ ಎಂದೇ ರೂಪವಾಗುತ್ತದೆ. ಅಥವಾ ಷ್ಟುಞ್ ಧಾತುವಿಗೆ ಕರ್ತ್ರರ್ಥದಲ್ಲಿ ತೃಚ್ ಪ್ರತ್ಯಯ ಬರುವುದು. ಸ್ತೋತೃ ಶಬ್ದವಾಗುತ್ತದೆ. ಸ್ತೋತುಃ ಇದಮ್ ಎಂಬರ್ಥ ವಿವಕ್ಷಾಮಾಡಿದಾಗ **'ತಸ್ಯೇದಮ್ '** (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ ಬರುತ್ತದೆ. **'ತದ್ಧಿತೇಷ್ವಚಾಮಾದೇಃ'** (ಪಾ. ಸೂ. ೭-೨-೧೧೭) ಎಂಬುದರಿಂದ ಬರುವ ವೃದ್ಧಿಯು ಸಂಜ್ಞಾಪೂರ್ವಕ ವಿಧಿಯಾದುದರಿಂದ **'ಸಂಜ್ಞಾಪೂ**

**ರ್ವಕೋ ವಿಧಿರನಿತ್ಯಃ'** ಎಂಬುದರಿಂದ ಅನಿತ್ಯವೆಂದು ಸ್ವೀಕರಿಸಿರುವುದರಿಂದ ವೃದ್ಧಿಯು ಬರುವುದಿಲ್ಲ. ಸ್ತೋತ್ರ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತ ಸ್ವರವು ಬರುತ್ತದೆ.

**ರಾಧಾನಾಂ ಪತೇ**—ರಾಧ ಸಾಧ ಸಂಸಿದ್ಧೌ. ಧಾತು. ರಾಧ್ನುವಂತಿ ಏಭಿಃ ಇತಿ ರಾಧಾನಿ ಧನಾನಿ. **'ಸುಬಾಮಂತ್ರಿತೇ ಪರಾಂಗವತ್ ಸ್ವರೇ'** (ಪಾ. ಸೂ. ೨-೧-೨) ಎಂಬುದರಿಂದ ಪತೇ ಎಂಬ ಆಮಂತ್ರಿತಕ್ಕೆ ರಾಧಾನಾಂ ಎಂಬ ಸುಬಂತವು ಅಂಗವಾಗುವುದರಿಂದ **'ಆಮಂತ್ರಿತಸ್ಯ ಚ'** ಎಂಬುದರಿಂದ ಬರುವ ಆಷ್ಟಮಿಕ ನಿಘಾತಸ್ವರವು ಷಷ್ಠ್ಯಂತವಿಶಿಷ್ಟಸಮುದಾಯಕ್ಕೆ ಬರುತ್ತದೆ.

**ಗಿರ್ವಾಹಃ**—ವಹ ಪ್ರಾಪಣೇ ಧಾತು. ಭ್ವಾದಿ. **'ವಹಿ ಹಾ ದಾಞ್ಭ್ಯಶ್ಛಂದಸಿ'** (ಉ. ಸೂ. ೪-೬೬೦) ಎಂಬುದರಿಂದ ಕಾರಕ ಪೂರ್ವಪದವಾಗಿ ಉಳ್ಳ ವಹ್ ಧಾತುವಿಗೆ ಅಸುನ್ ಪ್ರತ್ಯಯ ಬರುತ್ತದೆ. ಮುಂದೆ **'ಗತಿ ಕಾರಕ (ಯೋರಪಿ) ಉಪಪದಯೋಃ ಪೂರ್ವಪದಪ್ರಕೃತಿಸ್ವರತ್ವಂ ಚ'** ಎಂದು ವಿಧಾನಮಾಡಿರುವುದರಿಂದ ಗತಿಕಾರಕ ಉಪಪದವಾಗಿರುವಾಗಲೂ ಪ್ರತ್ಯಯ ಬರುತ್ತದೆ ಎಂದು ಜ್ಞಾಪಿತವಾಗುತ್ತದೆ. **'ವಸೇರ್ಣಿತ್'** (ಉ.ಸೂ. ೪-೬೬೭) ಎಂಬುದರಿಂದ ಣಿತ್ ಎಂಬುದು ಅನುವೃತ್ತವಾಗುವುದರಿಂದ ಅಸುನ್ ಣಿದ್ವದ್ಭಾವವನ್ನು ಹೊಂದುತ್ತದೆ. ಆದುದರಿಂದ **'ಅತ ಉಪಧಾಯಾಃ'** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಬಂದರೆ ಗಿರ್ವಾಹಸ್ ಎಂದು ಸಾಂತವಾದ ಪದವಾಗುತ್ತದೆ. ಪೂರ್ವಪದಕ್ಕೆ **'ರ್ವೋರುಪಧಾಯಾ ದೀರ್ಘ ಇಕಃ'** (ಪಾ. ಸೂ. ೮-೨-೭೬) ಎಂಬುದರಿಂದ ಉಪಧಾದೀರ್ಘವು ಪ್ರಾಪ್ತವಾದರೆ **'ವಾ ಛಂದಸಿ'** ಎಂಬುದರಿಂದ ಇಲ್ಲಿ ಬರುವುದಿಲ್ಲ. ಸಂಬುದ್ಧಿಯಲ್ಲಿ ಸುಲೋಪ ರುತ್ವ ವಿಸರ್ಗಗಳು ಬಂದರೆ ಗಿರ್ವಾಹಃ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ **'ಆಮಂತ್ರಿತಸ್ಯ ಚ'** (ಪಾ. ಸೂ. ೬-೧-೧೯೮) ಎಂಬ ಷಾಷ್ಠಿಕಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಭೂತಿಃ**— ಭೂ ಸತ್ತಾಯಾಂ ಧಾತು. ಕ್ತಿನ್ ಪ್ರತ್ಯಯ ಬರುತ್ತದೆ. **'ತಾದೌ ಚ ನಿತಿ'** (ಪಾ. ಸೂ. ೬-೨-೫೦) ಎಂಬುದರಿಂದ ತಕಾರಾದಿಯಾಗಿಯೂ ನಿತ್ತಾಗಿರುವ ಕ್ತಿನ್ನಂತವಾದ ಭೂತಿಶಬ್ದವು ಪರದಲ್ಲಿರುವುದರಿಂದ ವಿ ಎಂಬ ಗತಿಗೆ ಪ್ರಕೃತಿಸ್ವರ ಬರುತ್ತದೆ. ವಿಭೂತಿಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ॥ ೫ ॥

|| **ಸಂಹಿತಾಪಾಠಃ** ||

ಊರ್ಧ್ವಸ್ತಿಷ್ಠಾ ನ ಊತಯೇಽಸ್ಮಿನ್ವಾಜೇ ಶತಕ್ರತೋ ।
ಸಮನ್ಯೇಷು ಬ್ರವಾವಹೈ ॥ ೬ ॥

॥ ಪದಪಾಠಃ ॥

ಊರ್ಧ್ವಃ । ತಿಷ್ಠ । ನಃ । ಊತಯೇ । ಅಸ್ಮಿನ್ । ವಾಜೇ । ಶತಕ್ರತೋ ಇತಿ ಶತಽಕ್ರತೋ ।
ಸಂ । ಅನ್ಯೇಷು । ಬ್ರವಾವಹೈ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಶತಕ್ರತೋ ಶತಸಂಖ್ಯಾಕಕರ್ಮೋಪೇತ ಅಸ್ಮಿನ್ಪ್ರಸಕ್ತೇ ವಾಜೇ ಸಂಗ್ರಾಮೇ ನೋಽಸ್ಮಾಕಮೂತಯೇ ರಕ್ಷಣಾಯೋರ್ಧ್ವ ಉನ್ನತ ಉತ್ಸುಕಸ್ತಿಷ್ಠ । ಭವ । ತ್ವಂ ಚಾಹಂ ಚ ಮಿಲಿತ್ವಾನ್ಯೇಷು ಕಾರ್ಯಾಂತರೇಷು ಸಂ ಬ್ರವಾವಹೈ । ಸಮ್ಯಕ್ ವಿಚಾರಯಾವಃ ॥ ತಿಷ್ಠ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಊತಯೇ । ಊತಿಯೂತೀತ್ಯಾದಿನಾಕ್ತಿನ ಉದಾತ್ತತ್ವಂ । ಅಸ್ಮಿನ್ । ಊಡಿದಮಿತ್ಯಾದಿನಾ ಸಪ್ತಮ್ಯಾ ಉದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಶತಕ್ರತೋ**—ನೂರು ಯಜ್ಞಕರ್ಮಗಳಿಂದ ಕೂಡಿದ ಇಂದ್ರನೇ । **ಅಸ್ಮಿನ್ ವಾಜೇ**—(ನಡೆಯುತ್ತಿರುವ) ಈ ಯುದ್ಧದಲ್ಲಿ । **ನಃ**—ನಮ್ಮ । **ಊತಯೇ**—ರಕ್ಷಣೆಗಾಗಿ । **ಊರ್ಧ್ವಃ ತಿಷ್ಠ**—ಮೇಲೆದ್ದು ನಿಲ್ಲು । (ಸಿದ್ಧನಾಗು) (ನಾವಿಬ್ಬರೂ ಸೇರಿ) । **ಅನ್ಯೇಷು**—ಇತರ ವಿಷಯಗಳಲ್ಲಿ । **ಸಂ ಬ್ರವಾವಹೈ**—ಆಲೋಚಿಸಿ ಮಾತನಾಡೋಣ ॥

॥ ಭಾವಾರ್ಥ ॥

ನೂರಾರು ಸಾಹಸ ಕರ್ಮಗಳಿಂದ ಕೂಡಿದ ಎಲೈ ಇಂದ್ರನೇ, ನಡೆಯುತ್ತಿರುವ ಈ ಯುದ್ಧದಲ್ಲಿ ನಮ್ಮ ರಕ್ಷಣೆಗಾಗಿ ಮೇಲೆದ್ದು ಸಿದ್ಧನಾಗಿ ನಿಲ್ಲು. ನಾವಿಬ್ಬರೂ ಸೇರಿ ಇತರ ವಿಷಯಗಳಲ್ಲಿ ಆಲೋಚಿಸಿ ಮಾತನಾಡೋಣ.

## English Translation.

O Satakratu, (Indra) get up (and be ready) to protect us in this battle ; we will converse together in other matters.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವು—ಎಲೈ ಇಂದ್ರನೇ ನೀನು ಅನೇಕ ಸಾಹಸಕರ್ಮಗಳನ್ನು ಮಾಡಿದವನು. ಆದುದರಿಂದ ಈಗ ನಡೆಯುತ್ತಿರುವ ಯುದ್ಧದಲ್ಲಿ ನಮ್ಮನ್ನು ಕಾಪಾಡಲು ತಡಮಾಡದೆ ಬೇಗನೆ ಎದ್ದೇಳು. ಇತರ ವಿಷಯಗಳನ್ನು ಆಮೇಲೆ ನಾವಿಬ್ಬರೂ ಸೇರಿ ಮಾತನಾಡೋಣ.

|| ವ್ಯಾಕರಣಪ್ರಕ್ರಿಯಾ ||

**ತಿಷ್ಠ**—ಷ್ಠಾ ಗತಿನಿವೃತ್ತೌ ಧಾತು ಭ್ವಾದಿ. ಲೋಟ್ ಮಧ್ಯಮಪುರುಷ ಏಕವಚನದ ಸಿಪ್ಪಿಗೆ ಹಿ ಆದೇಶ. **'ಪಾಘ್ರಾಧ್ಮಾ'** (ಪಾ. ಸೂ. ೭-೩-೭೮) ಸೂತ್ರದಿಂದ ಪ್ರಕೃತಿಗೆ ತಿಷ್ಠ ಎಂಬ ಆದೇಶ ಬರುತ್ತದೆ. ಶಪ್ ವಿಕರಣ ಬರುತ್ತದೆ. **'ಅತೋಹೇಃ'** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್ ಬಂದರೆ ತಿಷ್ಠ ಎಂಬ ರೂಪ ವಾಗುತ್ತದೆ. **'ದ್ವ್ಯಚೋಽತಸ್ತಿಙಃ'** (ಪಾ ಸೂ. ೬-೩-೧೩೫) ಎಂಬುದರಿಂದ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ.

**ಊತಯೇ**—**'ಊತಿಯೂತಿಜೂತಿ'** (ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತವಾದ ಕ್ತಿನ್ನಂತವಾಗಿ ನಿಪಾತಿತವಾಗಿದೆ. ಊತಯೇ ಎಂಬುದು ಚತುರ್ಥೀ ಏಕವಚನದ ರೂಪ. ಮಧ್ಯೋದಾತ್ತವಾದ ಪದವಾಗುತ್ತದೆ.

**ಅಸ್ಮಿನ್**—ಇದಂ ಶಬ್ದದ ಸಪ್ತಮೀ ಏಕವಚನದರೂಪ **'ತ್ಯದಾದೀನಾಮಃ'** (ಪಾ. ಸೂ ೭-೨-೧೦೨) ಎಂಬುದರಿಂದ ಪ್ರಕೃತಿಗೆ ಅತ್ವ ಬಂದಾಗ ಅದಂತ ಸರ್ವನಾಮ ನಿಮಿತ್ತಕವಾಗಿ ಙಿ ವಿಭಕ್ತಿಗೆ ಸ್ಮಿನ್ ಆದೇಶ ಬರುತ್ತದೆ. **'ಹಲಿ ಲೋಪಃ'** (ಪಾ. ಸೂ. ೭-೨-೧೧೩) ಎಂಬುದರಿಂದ ಇದಮಿನ ಇದಿಗೆ ಲೋಪವಾದರೆ ಅಸ್ಮಿನ್ ಎಂದು ರೂಪವಾಗುತ್ತದೆ. **'ಊಡಿದಂ ಪದಾದಿ'** (ಪಾ ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. || ೬ ||

|| ಸಂಹಿತಾಪಾಠಃ ||

ಯೋಗೇಯೋಗೇ ತವಸ್ತರಂ ವಾಜೇವಾಜೇ ಹವಾಮಹೇ ।
ಸಖಾಯ ಇನ್ದ್ರಮೂತಯೇ || ೭ ||

|| ಪದಪಾಠಃ ||

**ಯೋಗೇಽಯೋಗೇ । ತವಃಽತರಂ । ವಾಜೇಽವಾಜೇ । ಹವಾಮಹೇ ।**
**ಸಖಾಯಃ । ಇನ್ದ್ರಂ । ಊತಯೇ ೭ ||**

॥ ಸಾಯಣಭಾಷ್ಯಂ ॥

**ಯೋಗೇ ಯೋಗೇ ಪ್ರವೇಶೇ ಪ್ರವೇಶೇ ತತ್ತತ್ಕರ್ಮೋಪಕ್ರಮೇ ವಾಜೇ ವಾಜೇ ಕರ್ಮವಿಘಾತಿನಿ ತಸ್ಮಿಂಸ್ತಸ್ಮಿನ್ಸಂಗ್ರಾಮೇ ತವಸ್ತರಮತಿಶಯೇನ ಬಲಿನಮಿಂದ್ರಮೂತಯೇ ರಕ್ಷಾರ್ಥಂ ಸಖಾಯಃ ಸಖಿವತ್ಪ್ರಿಯಾ ವಯಂ ಹವಾಮಹೇ । ಆಹ್ವಯಾಮಃ ॥ ಯೋಗೇ ಯೋಗೇ । ಯುಜಿರ್ ಯೋಗೇ । ಹಲಶ್ಚೇತಿ ಘಞ್ । ಚಜೋಃ ಕು ಘಿಣ್ಯತೋಃ । ಪಾ. ೭-೩-೫೨ । ಇತಿ ಕುತ್ವಂ । ಘಞೋ ಞಿತ್ತ್ವಾದಾದ್ಯುದಾತ್ತತ್ವಂ । ನಿತ್ಯವೀಪ್ಸಯೋರಿತಿ ವೀಪ್ಸಾಯಾಂ ದ್ವಿರ್ಭಾವೇ ಸತ್ಯಾಮ್ರೇಡಿತಾನುದಾತ್ತತ್ವಂ । ತವಸ್ತರಂ । ತವಸಃ ಶಬ್ದಾದಸ್ಮಾಯಾಮೇಧೇತಿ । ಪಾ. ೫-೨-೧೨೧ । ಮತ್ವರ್ಥೀಯೋ ವಿನಿಃ । ತಸ್ಯ ಛಾಂದಸೋ ಲೋಪಃ ॥**

॥ ಪ್ರತಿಪದಾರ್ಥ ॥

**ಯೋಗೇಯೋಗೇ**—ಪ್ರತಿಯೊಂದು (ಕರ್ಮ ಪ್ರಾರಂಭದ) ಸಂದರ್ಭದಲ್ಲೂ (ಮತ್ತು) । **ವಾಜೇ-ವಾಜೇ**—(ಕರ್ಮ ವಿಘ್ನಕಾರಿಯಾದ) ಪ್ರತಿಯೊಂದು ಯುದ್ಧದಲ್ಲೂ ಸಹ । **ತವಸ್ತರಂ**—ಅತ್ಯಂತ ಬಲಶಾಲಿಯಾದ । **ಇಂದ್ರಂ**—ಇಂದ್ರನನ್ನು । **ಊತಯೇ**—ರಕ್ಷಣಾರ್ಥವಾಗಿ । **ಸಖಾಯಃ**—ಸ್ನೇಹಿತರಂತೆ (ಪ್ರಿಯರಾದ) ನಾವು । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಪ್ರತಿಯೊಂದು ಕರ್ಮಪ್ರಾರಂಭದ ಸಂದರ್ಭದಲ್ಲೂ ಮತ್ತು (ಕರ್ಮಕ್ಕೆ ವಿಘ್ನವನ್ನುಂಟುಮಾಡುವ) ಪ್ರತಿಯೊಂದು ಯುದ್ಧಕಾಲದಲ್ಲೂ ಸಹ ಅತ್ಯಂತ ಬಲಶಾಲಿಯಾದ ಇಂದ್ರನನ್ನು ರಕ್ಷಣಾರ್ಥವಾಗಿ ಸ್ನೇಹಿತರಂತೆ ಪ್ರಿಯರಾದ ನಾವು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

On every occasion and in every battle we, his friends invoke the powerful Indra for our protection.

॥ ವಿಶೇಷವಿಷಯಗಳು ॥

**ಯೋಗೇಯೋಗೇ—ಯುಜಿರ್ ಯೋಗೇ । ಪ್ರವೇಶೇ ಪ್ರವೇಶೇ ತತ್ತತ್ಕರ್ಮೋಪಕ್ರಮೇ ।** ಪ್ರತಿಯೊಂದು ಸಂದರ್ಭದಲ್ಲಿಯೂ, ಪ್ರತಿಯೊಂದು ಕಾರ್ಯಾರಂಭದಲ್ಲಿಯೂ.

**ತವಸ್ತರಂ**—ಓಜಃ ಪಾಜಃ ಮೊದಲಾದ ಇಪ್ಪತ್ತೊಂದು ಬಲನಾಮಗಳ ಮಧ್ಯದಲ್ಲಿ ತವಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ತವಃ ಎಂದರೆ ಬಲವು, ತವಸ್ತರಂ ಎಂದರೆ ಅತಿಶಯವಾಗಿ ಬಲವುಳ್ಳ (ಇಂದ್ರನನ್ನು) ಎಂದಭಿಪ್ರಾಯವು.

**ವಾಜೇವಾಜೇ**—ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ ವಾಜೇ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ವಾಜೇ ಎಂದರೆ ಯುದ್ಧದಲ್ಲಿ. ವಾಜೇವಾಜೇ ಎಂದು ದ್ವಿರುಕ್ತಿಯಿರುವಾಗ ಪ್ರತಿಯೊಂದು ಯುದ್ಧದಲ್ಲಿಯೂ ಎಂದರ್ಥವು.

**ಸಖಾಯಃ—ಸಖಿವತ್ಪ್ರಿಯಃ** । ಸ್ನೇಹಿತರಂತೆ ನಿನಗೆ ಪ್ರೀತಿಪಾತ್ರರಾದ ನಾವು.

॥ ವ್ಯಾಕರಣಪ್ರಕ್ರಿಯಾ ॥

**ಯೋಗೇಯೋಗೇ**—ಯುಜಿರ್ ಯೋಗೇ ಧಾತು. ರುಧಾದಿ '**ಹಲಶ್ಚ**' (ಪಾ. ಸೂ. ೩-೩-೧೨೧) ಎಂಬುದರಿಂದ ಘಞ್ ಪ್ರತ್ಯಯ ಬರುತ್ತದೆ. ಯುಜ್+ಅ ಎಂದಿರುವಾಗ '**ಚಜೋಃ ಕುಘಿಣ್ಣ್ಯತೋಃ**' (ಪಾ ಸೂ. ೭-೩-೫೨) ಎಂಬುದರಿಂದ ಘಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ ಜಕಾರಕ್ಕೆ ಕುತ್ವ ಬಂದರೆ '**ಸ್ಥಾನೇಂತರತಮಃ**' (ಪಾ. ಸೂ. ೧-೧-೫೦) ಪರಿಭಾಷೆಯಿಂದ ಗಕಾರ ಬರುತ್ತದೆ. ಸಪ್ತಮೀ ಏಕವಚನದಲ್ಲಿ ಯೋಗೇ ಎಂದು ರೂಪವಾಗುತ್ತದೆ. ಘಞ್ ಞಿತ್ತಾದುದರಿಂದ ಆದ್ಯುದಾತ್ತಸ್ವರವು ಬರುತ್ತದೆ. '**ನಿತ್ಯವೀಪ್ಸಯೋಃ**' (ಪಾ. ಸೂ ೮-೧-೪) ಎಂಬುದರಿಂದ ವೀಪ್ಸಾರ್ಥದಲ್ಲಿ ದ್ವಿತ್ವ ಬಂದಾಗ ಪರರೂಪಕ್ಕೆ '**ತಸ್ಯ ಪರಮಾಮ್ರೇಡಿತಮ್**' (ಪಾ. ಸೂ. ೮-೧-೨) ಎಂಬುದರಿಂದ ಆಮ್ರೇಡಿತಸಂಜ್ಞೆಯು ಬರುತ್ತದೆ. '**ಅನುದಾತ್ತಂ ಚ**' (ಪಾ. ಸೂ. ೮-೧-೩) ಎಂಬುದರಿಂದ ಪರರೂಪವು ಅನುದಾತ್ತವಾಗುತ್ತದೆ. ಯೋಗೇಯೋಗೇ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

**ತವಸ್ತರಮ್**—ತವಸ್ ಶಬ್ದದ ಮೇಲೆ ಅಸ್ಯ ಅಸ್ತಿ ಎಂಬ ಮತ್ವರ್ಥದಲ್ಲಿ '**ಅಸ್ಮಾಯಾಮೇಧ** (ಪಾ. ಸೂ. ೫-೨-೧೨೧) ಎಂಬುದರಿಂದ ವಿನಿ ಪ್ರತ್ಯಯ ಬರುತ್ತದೆ. ಅದಕ್ಕೆ ಛಂದಸ್ಸಿನಲ್ಲಿ ಲೋಪಬರುತ್ತದೆ. ಆಮೇಲೆ ಅತಿಶಯಾರ್ಥದಲ್ಲಿ ತರಪ್ ಪ್ರತ್ಯಯ ಬರುತ್ತದೆ ತರಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ॥ ೭ ॥

॥ ಸಂಹಿತಾಪಾಠಃ ॥

ಆ ಘಾ ಗಮದ್ಯದಿ ಶ್ರವತ್ಸಹಸ್ರಿಣೀಭಿರೂತಿಭಿಃ ।

ವಾಜೇಭಿರುಪ ನೋ ಹವಂ ॥ ೮ ॥

॥ ಪದಪಾಠಃ ॥

ಆ । ಘ । ಗಮತ್ । ಯದಿ । ಶ್ರವತ್ । ಸಹಸ್ರಿಣೀಭಿಃ । ಊತಿಽಭಿಃ ।
ವಾಜೇಭಿಃ । ಉಪ । ನಃ । ಹವಂ ॥ ೮ ॥

॥ ಸಾಯಣಭಾಷ್ಯಂ ॥

ಯದಿ ಶ್ರವತ್ ಯದ್ಯಯಮಿಂದ್ರೋ ನೋಽಸ್ಮದೀಯಂ ಹವಮಾಹ್ವಾನಂ ಶೃಣುಯಾತ್ ತದಾನೀಂ ಸ್ವಯಮೇವ ಸಹಸ್ರಿಣೀಭಿರೂತಿಭಿರ್ಬಹುಭಿಃ ಪಾಲನೈರ್ವಾಜೇಭಿರನ್ನೈಶ್ಚ ಸಹೋಪ ಸಮೀಪ ಆ ಘ ಅವಶ್ಯಮಾಗಮತ್ । ಆಗಚ್ಛೇತ್ ॥ ಘ । ಋಚಿ ತುನುಘೇತ್ಯಾದಿನಾ ಸಂಹಿತಾಯಾಂ ದೀರ್ಘಃ । ಗಮತ್ । ಲಿಙರ್ಥೇ ಲೇಟ್ । ಲೇಟೋಽಡಾಟಾವಿತ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಯದ್ವಾ । ಛಾಂದಸೇ ಲುಙಿ ಪುಷಾದಿದ್ಯುತಾದ್ಯ್ಲೃದಿತಃ ಪರಸ್ಮೈಪದೇಷು । ಪಾ. ೩-೧-೫೫ । ಇತಿ ಚ್ಲೇರಙಾದೇಶಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಶ್ರವತ್ । ಶ್ರು ಶ್ರವಣೇ । ಪೂರ್ವವಲ್ಲೇಟ್ಯಡಾಗಮಃ । ವಾಜೇಭಿಃ । ಬಹುಲಂ ಛಂದಸೀತಿ ಭಿಸ ಐಸಾದೇಶಾಭಾವಃ । ಹವಂ । ಭಾವೇಽನುಪಸರ್ಗಸ್ಯೇತಿ ಹ್ವಯತೇರಪ್ । ಸಂಪ್ರಸಾರಣಂ ಚ । ಅಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರೇಣಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

(**ಸಃ**—ಆ ಇಂದ್ರನು) । **ನಃ**—ನಮ್ಮ । **ಹವಂ**—ಆಹ್ವಾನವನ್ನು । **ಯದಿ ಶ್ರವತ್**—ಕೇಳಿದ್ದೇ ಆದರೆ । **ಸಹಸ್ರಿಣೀಭಿಃ**—ನಾನಾವಿಧವಾದ ರಕ್ಷಣೆಗಳಿಂದಲೂ । **ವಾಜೇಭಿಃ**—ಅನ್ನಗಳಿಂದಲೂ ಕೂಡಿಕೊಂಡು । **ಉಪ**—ನಮ್ಮ ಸಮೀಪಕ್ಕೆ । **ಆ ಘ**—ಖಂಡಿತವಾಗಿಯೂ । **ಆಗಮತ್**—ಬರಲಿ (ಬಂದೇ ಬರುವನು) ॥

॥ ಭಾವಾರ್ಥ ॥

ಇಂದ್ರನು ನಮ್ಮ ಪ್ರಾರ್ಥನಾಪೂರ್ವಕವಾದ ಆಹ್ವಾನವನ್ನು ಕೇಳಿದ್ದೇ ಆದರೆ ಅವನು ನಾನಾವಿಧವಾದ ರಕ್ಷಣೆಗಳಿಂದಲೂ ಮತ್ತು ಅನ್ನಗಳಿಂದಲೂ ಕೂಡಿಕೊಂಡು ನಮ್ಮ ಸಮೀಪಕ್ಕೆ ಖಂಡಿತವಾಗಿಯೂ ಬರಲಿ (ಬರುವನು).

## English Translation.

If he hears our invocation, he will surely come to us with numerous helpful bounties and abundant food.

|| ವಿಶೇಷವಿಷಯಗಳು ||

**ಸಹಸ್ರಿಣೇಭಿಃ ಊತಿಭಿಃ ವಾಜೇಭಿಃ**---ಊತಿಭಿಃ ಎಂದರೆ ರಕ್ಷಣೆಗಳು ನಮ್ಮನ್ನು ರಕ್ಷಿಸುವುದಕ್ಕೆ ಬೇಕಾದ ಸಾಧನಗಳಿಂದ, ವಾಜೇಭಿಃ ಎಂದರೆ ಅನ್ನಾದ್ಯಾಹಾರಗಳಿಂದ ಇವುಗಳನ್ನು ಸಾವಿರಗಟ್ಟಲೆಯಾಗಿ ಎಂದರೆ ಬಹಳವಾಗಿ ತೆಗೆದುಕೊಂಡು ನಮ್ಮ ಸಮೀಪಕ್ಕೆ ಬರುವನೆಂದಭಿಪ್ರಾಯವು

|| ವ್ಯಾಕರಣಪ್ರಕ್ರಿಯಾ ||

**ಘಾ**—**' ಋಚಿ ತೆನುಘ '** (ಪಾ. ಸೂ ೬-೩-೧೩೩) ಎಂಬುದರಿಂದ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ.

**ಗಮತ್**---ಗಮ್ಲೃ ಗತೌ ಧಾತು. **' ಲಿಙರ್ಥೇ ಲೇಟ್ '** (ಪಾ. ಸೂ. ೩-೪-೭) ಎಂಬುದರಿಂದ ಲೇಟ್ ಬರುತ್ತದೆ. ತಿಪ್ಪಿನ ಇಕಾರಕ್ಕೆ **' ಇತಶ್ಚ ಲೋಪಃ '** (ಪಾ. ಸೂ. ೩-೪-೯೭) ಸೂತ್ರದಿಂದ **ಲೋಪಬರುತ್ತದೆ. ' ಲೇಟೋಽಡಾಟೌ '** (ಪಾ. ಸೂ. ೩-೪-೯೪) ಸೂತ್ರದಿಂದ ತಿಪ್ಪಿಗೆ ಅಡಾಗಮ ಬರುತ್ತದೆ. ಗಮತ್ ಎಂದು ರೂಪವಾಗುತ್ತದೆ. ಅಥವಾ **' ಛಂದಸಿಲುಙ್‌ಲಙ್‌ಲಿಟಃ '** (ಪಾ. ಸೂ. ೩-೪-೬) ಎಂಬುದರಿಂದ ಲಙರ್ಥದಲ್ಲಿ ಲುಙ್ ಬರುತ್ತದೆ. **' ಚ್ಲಿ ಲುಙಿ '** (ಪಾ. ಸೂ ೩-೧-೪೩) ಎಂಬುದರಿಂದ ಚ್ಲಿ ಪ್ರಾಪ್ತವಾದರೆ ಅದಕ್ಕೆ **' ಪುಷಾದಿದ್ಯುತಾ-'** (ಪಾ. ಸೂ. ೩-೧-೫೫) ಎಂಬುದರಿಂದ ಅಙಾದೇಶ ಬರುತ್ತದೆ. **' ಬಹುಲಂಛಂದಸ್ಯಮಾಙ್‌ಯೋಗೇಽಪಿ '** (ಪಾ. ಸೂ. ೬-೪-೭೫) ಎಂಬುದರಿಂದ ಲುಙ್ ನಿಮಿತ್ತಕವಾದ ಅಡಾಗಮ ಬರುವುದಿಲ್ಲ. ಗಮತ್ ಎಂದು ರೂಪ ವಾಗುತ್ತದೆ.

**ಶ್ರವತ್**---ಶ್ರು ಶ್ರವಣೇ ಧಾತು. ಪೂರ್ವದಂತೆ ಲೇಟಿನಲ್ಲಿ ಅಡಾಗಮ ಬಂದರೆ ರೂಪವಾಗುತ್ತದೆ.

**ವಾಜೇಭಿಃ**—ವಾಜ ಶಬ್ದದ ಮೇಲಿರುವ ಭಿಸ್ಸಿಗೆ **' ಅತೋ ಭಿಸ ಐಸ್ '** (ಪಾ. ಸೂ. ೭-೧-೯) ಎಂಬುದ ರಿಂದ ಐಸ್ ಪ್ರಾಪ್ತವಾದರೆ **' ಬಹುಲಂ ಛಂದಸಿ '** (ಪಾ ಸೂ. ೭-೧-೧೦) ಎಂಬುದರಿಂದ ಐಸ್ ಬರುವುದಿಲ್ಲ. **' ಬಹುವಚನೇ ಝಲ್ಯೇತ್ '** (ಪಾ. ಸೂ. ೭-೩-೧೦೩) ಎಂಬುದರಿಂದ ಏತ್ವ ಬಂದರೆ ವಾಜೇಭಿಃ ಎಂದು ರೂಪ ವಾಗುತ್ತದೆ.

**ಹವಮ್**—ಹ್ವೇಞ್ ಸ್ಪರ್ಧಾಯಾಂ ಧಾತು. ಭ್ವಾದಿ **' ಭಾವೇಽನುಪಸರ್ಗಸ್ಯ '** (ಪಾ. ಸೂ. ೩-೩-೭೫ ಎಂಬುದರಿಂದ ಈ ಧಾತುವಿಗೆ ಅಪ್ ಪ್ರತ್ಯಯವೂ ಸಂಪ್ರಸಾರಣವೂ ಬರುತ್ತದೆ. **' ಸಂಪ್ರಸಾರಣಾಚ್ಚ '** ಎಂಬುದ ರಿಂದ ಪೂರ್ವರೂಪ ಬಂದರೆ ಹು+ಅ ಎಂದಿರುತ್ತದೆ. ಗುಣಾವಾದೇಶಗಳು ಬಂದರೆ ಹವಮ್ ಎಂದು ರೂಪವಾಗುತ್ತದೆ ಅಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ **' ಧಾತೋಃ '** ಎಂಬುದರಿಂದ ಬಂದಿರುವ ಧಾತುವಿನ ಅಂತೋದಾತ್ತಸ್ವರವೇ ಉಳಿಯುತ್ತದೆ ಹವಮ್ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ || ೮ ||

॥ ಸಂಹಿತಾಪಾಠಃ ॥

ಅನು ಪ್ರತ್ನಸ್ಯೌಕಸೋ ಹುವೇ ತುವಿಪ್ರತಿಂ ನರಂ ।

ಯಂ ತೇ ಪೂರ್ವಂ ಪಿತಾ ಹುವೇ ॥ ೯ ॥

॥ ಪದಪಾಠಃ ॥

ಅನು । ಪ್ರತ್ನಸ್ಯ । ಓಕಸಃ । ಹುವೇ । ತುವಿಽಪ್ರತಿಂ । ನರಂ ।

ಯಂ । ತೇ । ಪೂರ್ವಂ । ಪಿತಾ । ಹುವೇ ॥ ೯ ॥

॥ ಸಾಯಣಭಾಷ್ಯಂ ॥

ಪ್ರತ್ನಸ್ಯ ಪುರಾತನಸ್ಯೌಕಸಃ ಸ್ಥಾನಸ್ಯ ಸ್ವರ್ಗರೂಪಸ್ಯ ಸಕಾಶಾತ್ತುವಿಪ್ರತಿಂ ಬಹೂನ್ಯಜಮಾನಾನ್ಪ್ರತಿಗಂತಾರಂ ನರಂ ಪುರುಷಮಿಂದ್ರಮನು ಹುವೇ । ಅನುಕ್ರಮೇಣ ಕರ್ಮಸ್ವಾಹ್ವಯಾಮಿ । ಯಂ ತೇ ತ್ವಾಮಿಂದ್ರಂ ಪಿತಾಸ್ಮದೀಯೋ ಜನಕಃ ಪೂರ್ವಂ ಪುರಾ ಸ್ವಕೀಯಾನುಷ್ಠಾನಕಾಲೇ ಹುವೇ । ಆಹೂತವಾನ್ । ತಮಾಹ್ವಯಾಮೀತಿ ಪೂರ್ವತ್ರಾನ್ವಯಃ ॥ ಓಕಸಃ । ನಬ್ವಿಷಯಸ್ಯೇತ್ಯಾದ್ಯುದಾತ್ತತ್ವಂ । ಹುವೇ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಇಟಿ ಬಹುಲಂ ಛಂದಸೀತಿ ಸಂಪ್ರಸಾರಣಂ ಪರಪೂರ್ವತ್ವಂ । ಗುಣೇ । ಪ್ರಾಪ್ತೇ ಕ್ಙಿತಿ ಚೇತಿ ಪ್ರತಿಷೇಧಃ । ಉವಙಾದೇಶಃ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಪಾದಾದಿತ್ವಾದನಿಘಾತಃ । ತುವಿಪ್ರತಿಂ । ತುವೀನಾಂ ಬಹೂನಾಂ ಪ್ರತಿಗಂತಾರಂ । ಅತ್ರ ಪ್ರತಿಶಬ್ದೋ ಭೀಮಸೇನೋ ಭೀಮ ಇತಿವತ್ । ಪ್ರತಿಗಂತೃಶಬ್ದಂ ಲಕ್ಷಯಿತ್ವಾ ತದ್ದ್ವಾರಾ ತದರ್ಥಂ ಲಕ್ಷಯತಿ । ಅತಃ ಪ್ರತಿಃ ಪ್ರತಿನಿಧಿಪ್ರತಿದಾನಯೋಃ । ಪಾ. ೧-೪-೯೨ । ಇತಿವತ್ಸತ್ತ್ವವಚನತ್ವೇನಾನಿಪಾತತ್ವಾದನವ್ಯಯತ್ವೇ ಪೂರಣಗುಣೇತ್ಯಾದಿನಾ । ಪಾ. ೨-೨-೧೧ । ನ ಷಷ್ಠೀಸಮಾಸನಿಷೇಧಃ । ಹುವೇ । ಹ್ವೇಞೋ ಲಿಟಿ ಬಹುಲಂ ಛಂದಸೀತಿ ಪೂರ್ವವತ್ಸಂಪ್ರಸಾರಣಪರಪೂರ್ವತ್ವೇ । ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಂ । ಕಾ. ೬-೧-೮-೧ । ಇತಿ ದ್ವಿರ್ವಚನಾಭಾವಃ । ಯದ್ವೃತ್ತಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

**ಪ್ರತ್ನಸ್ಯ**—ಪುರಾತನವಾದ । **ಓಕಸ್ಯ**—(ಸ್ವರ್ಗರೂಪವಾದ) ವಾಸಸ್ಥಾನದಿಂದ । **ತುವಿಪ್ರತಿಂ**—ಅನೇಕ ಯಜಮಾನರನ್ನು ಉದ್ದೇಶಿಸಿ ಹೋಗತಕ್ಕ (ಮತ್ತು) । **ಯಂ ತೇ**—ಯಾವ ಇಂದ್ರನಾದ ನಿನ್ನನ್ನು ।

**ಪಿತಾ**—(ನಮ್ಮ) ತಂದೆಯು । **ಪೂರ್ವಂ**— ಹಿಂದೆ (ಯಜ್ಞಕಾಲದಲ್ಲೆಲ್ಲ) । **ಹುವೇ**—ಪ್ರಾರ್ಥಿಸಿ ಕರೆಯುತ್ತಿದ್ದನೋ ಅಂತಹ । **ನರಂ**— ಪುರುಷನಾದ ಇಂದ್ರನನ್ನು । **ಅನು ಹುವೇ**—ಪ್ರತಿಯೊಂದು ಕರ್ಮಗಳಲ್ಲೂ ಕರೆಯುತ್ತೇನೆ.

॥ ಭಾವಾರ್ಥ ॥

ಯಾವ ಇಂದ್ರನು ಪುರಾತನವಾದ ಸ್ವರ್ಗರೂಪವಾದ ವಾಸಸ್ಥಾನದಿಂದ ಅನೇಕ ಯಜಮಾನರನ್ನು ಉದ್ದೇಶಿಸಿ ಹೋಗುವನೋ ಮತ್ತು ಯಾವನನ್ನು ನಮ್ಮ ತಂದೆಯು ಹಿಂದೆ ಯಜ್ಞಕಾಲದಲ್ಲೆಲ್ಲಾ ಕರೆಯುತ್ತಿದ್ದನೋ ಅಂತಹ ಪುರುಷನಾದ ಇಂದ್ರನನ್ನು ಪ್ರತಿಯೊಂದು ಕರ್ಮಗಳಲ್ಲೂ ಪ್ರಾರ್ಥಿಸಿ ಕರೆಯುತ್ತೇನೆ.

English Translation.

I invoke the man (Indra) who goes to visit many worshippers from heaven, his ancient dwelling place; I invoke Indra whom my father formerly used to invoke.

॥ ವಿಶೇಷವಿಷಯಗಳು ॥

**ಪ್ರತ್ನಸ್ಯ—ಪುರಾತನಸ್ಯ** । ಬಹಳ ಹಳೆಯದಾದ, ಪುರಾತನವಾದ, ಪ್ರಾಚೀನವಾದ ಎಂದರೆ ಬಹು ಹಿಂದಿನ ಕಾಲದಿಂದಲೂ ಇರುವ.

**ಓಕಸಃ—ಓಕ ಇತಿ ನಿವಾಸನಾಮೋಚ್ಯತೇ** (ನಿ. ೩-೩) ಓಕವೆಂದರೆ ನಿವಾಸಸ್ಥಾನವು. ಇಲ್ಲಿ ಇಂದ್ರನ ನಿವಾಸಸ್ಥಾನವೆಂದರೆ ಸ್ವರ್ಗವು.

**ತುವಿಪ್ರತಿಂ—ತುವಿ** ಎಂದರೆ ಬಹು (ನಿ. ೩-೧೩). **ತುವೀನಾಂ ಬಹೂನಾಂ ಪ್ರತಿಗಂತಾರಂ** ಬಹು ಜನ ಯಜಮಾನರ ಬಳಿಗೆ ಹೋಗುವ (ಇಂದ್ರನನ್ನು) ಎಂದಭಿಪ್ರಾಯವು.

**ನರಂ—ನೇತಾರಂ** । ನಾಯಕ, ಶೂರ.

**ಯಂ ತೇ ಪೂರ್ವಂ ಪಿತಾ ಹುವೇ**—ಹಿಂದೆ ನಮ್ಮ ತಂದೆಯು ಯಾವ ಇಂದ್ರನನ್ನು ಆಹ್ವಾನಮಾಡುತ್ತಿದ್ದನೋ ಅಂತಹ ಇಂದ್ರನನ್ನೇ ಈಗ ನಾನು ಆಹ್ವಾನಮಾಡುವೆನೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಓಕಸಃ**—ಷಷ್ಠೀ ಏಕವಚನರೂಪ. **'ನಬ್ವಿಷಯಸ್ಯಾನಿಸಂತಸ್ಯ'** (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಹುವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಲಟ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ ಬರುತ್ತದೆ. **'ಟಿತ ಆತ್ಮನೇಪದಾನಾಂ-'** (ಪಾ. ಸೂ. ೩-೪-೭೯) ಸೂತ್ರದಿಂದ ಅದಕ್ಕೆ ಏತ್ವ ಬರುತ್ತದೆ. **'ಬಹುಲಂ ಛಂದಸಿ'** ಎಂಬುದರಿಂದ ಧಾತುವಿಗೆ ಸಂಪ್ರಸಾರಣ ಬರುತ್ತದೆ. ಪೂರ್ವರೂಪ ಬಂದರೆ ಹು+ಏ

ಎಂದಿರುತ್ತದೆ. ಸಾರ್ವಧಾತುಕನಿಮಿತ್ತಕವಾಗಿ ಗುಣವು ಪ್ರಾಪ್ತವಾದರೆ **'ಸಾರ್ವಧಾತುಕಮಪಿತ್'** (ಪಾ. ಸೂ. ೧-೨-೪) ಎಂಬುದರಿಂದ ಙಿತ್ವವನ್ನು ಹೇಳಿರುವುದರಿಂದ **'ಕ್ಙಿತಿಚ'** (ಪಾ. ಸೂ. ೧-೧-೫) ಎಂಬುದರಿಂದ ಗುಣ ನಿಷೇಧ ಬರುತ್ತದೆ. ಅಜಾದಿಪ್ರತ್ಯಯ ಪರದಲ್ಲಿರುವುದರಿಂದ **'ಅಚಿಶ್ನುಧಾತುಭ್ರುವಾಂ'** (ಪಾ. ಸೂ. ೬-೪-೭೭) ಸೂತ್ರದಿಂದ ಧಾತುವಿನ ಉಕಾರಕ್ಕೆ ಉವಙಾದೇಶ ಬರುತ್ತದೆ. ಹುವೇ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪಾದದ ಆದಿಯಲ್ಲಿರುವುದರಿಂದ ತಿಙಂತನಿಘಾತಸ್ವರ ಬರುವದಿಲ್ಲ.

**ತುವಿಪ್ರತಿಮ್**—ತುವೀನಾಂ ಬಹೂನಾಂ ಪ್ರತಿಗಂತಾರಂ ತುವಿಪ್ರತಿಮ್ **'ನಾಮ್ನೈಕದೇಶೇನಾಮ-ಗ್ರಹಣಂ'** ಒಂದು ಹೆಸರಿನ ಅರ್ಥವನ್ನು ತೆಗೆದುಕೊಂಡರೆ ಪೂರ್ತಿಯನ್ನು ತೆಗೆದುಕೊಳ್ಳಬೇಕು. ಸೇನ ಎಂದರೆ ಭೀಮಸೇನ ಎಂದರ್ಥವಾಗುತ್ತದೆ. ಅದರಂತೆ ಇಲ್ಲಿಯೂ ಪ್ರತಿ ಎಂಬುದು ಲಕ್ಷಣಾವೃತ್ತಿಯಿಂದ ಪ್ರತಿಗಂತೃ ಶಬ್ದವನ್ನು ತಿಳಿಸಿ ಆ ಮೂಲಕವಾಗಿ ಅದರ ಅರ್ಥವನ್ನೂ ಲಕ್ಷಣಾದಿಂದ ಬೋಧಿಸುತ್ತದೆ ಆದುದರಿಂದ **'ಪ್ರತಿಃ ಪ್ರತಿನಿಧಿ ಪ್ರತಿದಾನಯೋಃ'** (ಪಾ. ಸೂ. ೧-೪-೯೨) ಎಂಬಲ್ಲಿ ಪ್ರತಿ ಎಂಬುದು ಹೇಗೆ ಸತ್ವವಾಚಿಯಾದುದರಿಂದ (ದ್ರವ್ಯ) **'ಚಾದಯೋಽಸತ್ವೇ'**(ಪಾ. ಸೂ. ೧-೪-೫೭)ಎಂದುದರಿಂದ ನಿಪಾತಸಂಜ್ಞೆಯನ್ನು ಹೊಂದುವುದಿಲ್ಲವೋ ಅದರಂತೆ ಇಲ್ಲಿಯೂ ಸತ್ವವಾಚಿಯಾದುದರಿಂದ ನಿಪಾತಸಂಜ್ಞೆಯನ್ನು ಹೊಂದುವುದಿಲ್ಲ **'ಸ್ವರಾದಿನಿಪಾತಮವ್ಯಯಮ್'** ಪಾ. ಸೂ. ೧-೧-೩೭) ಎಂಬುದರಿಂದ ಅವ್ಯಯಸಂಜ್ಞೆಯನ್ನು ಹೇಳಿರುವುದರಿಂದ ಇಲ್ಲಿ ನಿಪಾತವಾಗದಿರುವುದರಿಂದ ಅವ್ಯಯಸಂಜ್ಞೆಯು ಬರುವುದಿಲ್ಲ. ಆದುದರಿಂದಲೇ **'ಪೂರಣಗುಣಸುಹಿತಾರ್ಥ'** (ಪಾ. ಸೂ. ೨-೨-೧೧) ಎಂಬುದರಿಂದ ಷಷ್ಠೀ ಸಮಾಸ ನಿಷೇಧವು ಬರುವುದಿಲ್ಲ. ಷಷ್ಠೀ ಸಮಾಸವನ್ನು ಹಿಂದೆ ತೋರಿಸಿದೆ.

**ಹುವೇ**—ಹಿಂದೆ ಉಕ್ತವಾದ ಧಾತು. ಲಿಟ್ಟಿನಲ್ಲಿ ಹಿಂದೆ ಹೇಳಿದಂತೆ **'ಬಹುಲಂ ಛಂದಸಿ'** ಎಂಬುದರಿಂದ ಸಂಪ್ರಸಾರಣ ಬರುತ್ತದೆ. **'ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮ್'** (ಪಾ. ಸೂ ೬-೧-೮-೨) ಎಂಬುದರಿಂದ ಛಂದಸ್ಸಿನಲ್ಲಿ ವಿಕಲ್ಪವೆಂದುದರಿಂದ ಲಿಣ್ನಿಮಿತ್ತಕವಾಗಿ ಧಾತುವಿಗೆ ದ್ವಿತ್ವಾದಿಗಳು ಬರುವುದಿಲ್ಲ. ಹಿಂದಿನಂತೆ ಉವಙಾದೇಶ ಬಂದರೆ ಹುವೇ ಎಂದು ರೂಪವಾಗುತ್ತದೆ. ಯಂತೇ ಎಂದು ಹಿಂದೆ ಯಚ್ಛಬ್ದದ ಸಂಬಂಧ ವಿರುವುದರಿಂದ **'ಯದ್ವೃತ್ತಯೋಗಾನ್ನಿತ್ಯಂ'** ಎಂಬುದರಿಂದ ತಿಙಂತನಿಘಾತ ಪ್ರತಿಷೇಧ ಬರುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೯ ॥

॥ ಸಂಹಿತಾಪಾಠಃ ॥

## ತಂ ತ್ವಾ ವಯಂ ವಿಶ್ವವಾರಾ ಶಾಸ್ಮಹೇ ಪುರುಹೂತ ।
## ಸಖೇ ವಸೋ ಜರಿತೃಭ್ಯಃ ॥ ೧೦ ॥

॥ ಪದಪಾಠಃ ॥

ತಂ । ತ್ವಾ । ವಯಂ । ವಿಶ್ವಽವಾರ । ಆ । ಶಾಸ್ಮಹೇ । ಪುರುಽಹೂತ ।

ಸಖೇ । ವಸೋ ಇತಿ । ಜರಿತೃಽಭ್ಯಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ವಿಶ್ವವಾರ ಸರ್ವೈರ್ವರಣೀಯ ಪುರುಹೂತ ಬಹುಭಿಃ ಸ್ವಸ್ವಕರ್ಮಣ್ಯಾಹೂತ ಸಖೇ ಸಖಿವತ್ಪ್ರಿಯ ವಸೋ ನಿವಾಸಹೇತೋ ಇಂದ್ರ ತಂ ಪೂರ್ವೋಕ್ತಗುಣಯುಕ್ತಂ ತ್ವಾಂ ಜರಿತೃಭ್ಯಃ ಸ್ತೋತೃಣಾಮನುಗ್ರಹಾರ್ಥಮಾಶಾಸ್ಮಹೇ । ಪ್ರಾರ್ಥಯಾಮಹೇ ॥ ಆ ಶಾಸ್ಮಹೇ । ಆಙಃ ಶಾಸು ಇಚ್ಛಾಯಾಂ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ವಸೋ ನಾಮಂತ್ರಿತೇ ಸಮಾನಾಧಿಕರಣ ಇತಿ ಪೂರ್ವಸ್ಯಾವಿದ್ಯಮಾನವತ್ತ್ವನಿಷೇಧಾತ್ಪರಾಂಗವದ್ಭಾವೇ ಸತಿ ಶೇಷನಿಘಾತೇನ ವಾಮಂತ್ರಿತಸ್ಯ ಚೇತಿ ವಾ ಸರ್ವಾನುದಾತ್ತತ್ವಂ । ಜರಿತೃಭ್ಯಃ । ಜರತಿಃ ಸ್ತುತಿಕರ್ಮಾ । ತೃಚಶ್ಚಿತ್ತ್ವಾದಂತೋದಾತ್ತತ್ವಂ ॥ ೨೯ ॥

॥ ಪ್ರತಿಪದಾರ್ಥ ॥

**ವಿಶ್ವವಾರ**—ಎಲ್ಲರಿಂದಲೂ (ಇಷ್ಟದಿಂದ) ಆರಿಸಲ್ಪಡುವವನೂ । **ಪುರುಹೂತ**—ಬಹುಜನರಿಂದ ಕರೆಯಲ್ಪಡುವವನೂ । **ಸಖೇ**—ಸ್ನೇಹಿತನಂತೆ ಪ್ರಿಯನಾದವನೂ । **ವಸೋ**—ವಾಸಸ್ಥಾನಕ್ಕೆ ಹೇತುವಾದವನೂ ಆದ ಎಲೈ ಇಂದ್ರನೇ । **ತಂ**—ಪೂರ್ವೋಕ್ತಗುಣಗಳಿಂದ ಕೂಡಿದ ನಿನ್ನನ್ನು । **ವಯಂ**—ನಾವು । **ಜರಿತೃಭ್ಯಃ**—ಸ್ತೋತ್ರಮಾಡುವವರ ಅನುಗ್ರಹಾರ್ಥವಾಗಿ । **ಆ ಶಾಸ್ಮಹೇ**—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಎಲ್ಲರಿಂದಲೂ ಪ್ರೀತಿಯಿಂದ ಆರಿಸಲ್ಪಡುವವನೂ, ಬಹುಜನರಿಂದ ಕರೆಯಲ್ಪಡುವವನೂ, ಸ್ನೇಹಿತನಂತೆ ಪ್ರಿಯನಾದವನೂ ವಾಸಸ್ಥಾನಕ್ಕೆ ಹೇತುವಾದವನೂ ಆದ ಇಂದ್ರನೇ, ಪೂರ್ವೋಕ್ತಗುಣಗಳಿಂದ ಕೂಡಿದ ನಿನ್ನನ್ನು ನಾವು ಸ್ತೋತ್ರಮಾಡುವವರ ಅನುಗ್ರಹಾರ್ಥವಾಗಿ ಪ್ರಾರ್ಥಿಸುತ್ತೇವೆ.

## English Translation.

We implore you, Indra, protector of dwellings, as our friend who is preferred and invoked by many to be favourable to your worshippers.

॥ ವಿಶೇಷವಿಷಯಗಳು ॥

**ವಿಶ್ವವಾರಾ—ಸರ್ವೈರ್ವರಣೀಯ** । ಎಲ್ಲರಿಂದಲೂ ಕರೆಯಲ್ಪಡುವ, ಎಲ್ಲರೂ ಅಪೇಕ್ಷಿಸುವ, invoked by all.

**ಆ ಶಾಸ್ಮಹೇ—ಶಾಸು ಇಚ್ಛಾಯಾಂ |** ಪ್ರಾರ್ಥಿಸುತ್ತೇವೆ.

**ಪುರುಹೂತ—ಬಹುಭಿಃ ಸ್ವಸ್ವಕರ್ಮಣ್ಯಾಹೂತ |** ಬಹುಜನರು ತಾವು ಮಾಡುವ ಯಜ್ಞಾದಿಕರ್ಮಗಳಲ್ಲಿ ಇಂದ್ರನನ್ನು ಆಹ್ವಾನ ಮಾಡುವುದರಿಂದ ಬಹುಜನರಿಂದ ಕರೆಯಲ್ಪಡುವವನು ಎಂದರ್ಥವು.

**ವಸೋ—ನಿವಾಸಹೇತೋ |** ವಾಸಸ್ಥಾನಗಳಿಗೆ ಕಾರಣಭೂತನು ಅಥವಾ ವಾಸಸ್ಥಾನಗಳ ಸಂರಕ್ಷಕನು.

**ಜರಿತೃಭ್ಯಃ—ಜರತಿಃ ಸ್ತುತಿಕರ್ಮಾ** ರೇಭಃ ಮೊದಲಾದ ಹದಿಮೂರು ಸ್ತೋತೃನಾಮಗಳ ಮಧ್ಯದಲ್ಲಿ ಜರಿತಾ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೯) ಜರಿತೃಭ್ಯಃ ಎಂದರೆ ಸ್ತೋತ್ರಮಾಡುವವರಿಗಾಗಿ ಸ್ತೋತ್ರಮಾಡುವವರ ಪರವಾಗಿ on behalf of the worshippers.

॥ ವ್ಯಾಕರಣಪ್ರಕ್ರಿಯಾ ॥

**ಆ ಶಾಸ್ಮಹೇ—**ಆಙಃ ಶಾಸು ಇಚ್ಛಾಯಾಂ ಧಾತು. ಅದಾದಿ. ಆಙ್ ಉಪಸರ್ಗಪೂರ್ವಕವಾಗಿಯೇ ಇರುತ್ತದೆ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ ಬರುತ್ತದೆ. ಟಿತ್ ಸಂಬಂಧಿಯಾದುದರಿಂದ ಅದಕ್ಕೆ ಏತ್ವ ಬರುತ್ತದೆ. **' ಅದಿಪ್ರಭೃತಿಭ್ಯಃ ಶಪಃ '** (ಪಾ. ಸೂ. ೨-೪-೭೨) ಎಂಬುದರಿಂದ ಶಪ್ ವಿಕರಣಕ್ಕೆ ಲುಕ್. ಆ ಶಾಸ್ಮಹೇ ಎಂದು ರೂಪವಾಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

**ವಸೋ—** ಸಂಬುದ್ಧಿಯ ರೂಪ. **' ನಾಮಂತ್ರಿತೇಸಮಾನಾಧಿಕರಣೇ ಸಾಮಾನ್ಯವಚನಮ್ '** (ಪಾ. ಸೂ. ೮-೧-೭೩) ಎಂಬುದರಿಂದ ಇಲ್ಲಿ ಏಕಾರ್ಥವಾಚಕತ್ವ ಇರುವುದರಿಂದ ಪೂರ್ವದಲ್ಲಿರುವ ಸಖೇ, ಎಂಬ ಆಮಂತ್ರಿತಕ್ಕೆ ಅವಿದ್ಯಮಾನವದ್ಭಾವ ಬರುವುದಿಲ್ಲ. ಇಲ್ಲಿ ಸಖೇ, ವಸೋ ಎಂದು ಎರಡು ಆಮಂತ್ರಿತಗಳು ಇವೆ. ಪಾದದ ಆದಿಯಲ್ಲಿರುವುದರಿಂದ ಅಷ್ಟಮಿಕ ನಿಘಾತವು ಬರುವುದಿಲ್ಲ. **' ಸುಬಾಮಂತ್ರಿತೇ ಪರಾಂಗವತ್ ಸ್ವರೇ '** ಎಂಬುದರಿಂದ ಪರಾಂಗವದ್ಭಾವವು ಸಖೇ ಎಂಬುದಕ್ಕೆ ಬರುತ್ತದೆ. ಆಗ ಶೇಷನಿಘಾತದಿಂದಾಗಲೀ **' ಆಮಂತ್ರಿತಸ್ಯ ಚ '** (ಪಾ. ಸೂ. ೮-೧-೧೯) ಎಂಬುದರಿಂದಾಗಲೀ ಸರ್ವಾನುದಾತ್ತಸ್ವರವು ಬರುತ್ತದೆ. ಸಖೇ ಎಂಬುದಕ್ಕೆ ಪಾದದ ಆದಿಯಲ್ಲಿರುವುದರಿಂದ ಷಾಷ್ಠ ಸೂತ್ರದಿಂದ ಆದ್ಯುದಾತ್ತಸ್ವರವು ಬರುತ್ತದೆ

**ಜರಿತೃಭಿಃ—**ಜ್ಯಾ ವಯೋಹಾನೌ ಧಾತು. ಇದಕ್ಕೆ ತೃಚ್ ಪ್ರತ್ಯಯ ಬರುತ್ತದೆ. ತೃಚ್ ಪರದಲ್ಲಿರುವಾಗ ಧಾತುವಿಗೆ ಗುಣವೂ ತೃಚ್ಚಿಗೆ ಇಡಾಗಮವೂ ಬಂದರೆ ಜರಿತೃ ಶಬ್ದವಾಗುತ್ತದೆ. ತೃತೀಯಾ ಬಹುವಚನದಲ್ಲಿ ಜರಿತೃಭಿಃ ಎಂದು ರೂಪವಾಗುತ್ತದೆ. ಇಲ್ಲಿ ಸ್ತುತಿಕರ್ಮಕವಾದ ಧಾತುವನ್ನು ಸ್ವೀಕರಿಸಬೇಕು. ಸ್ತುತಿಸುವವನು ಎಂದರ್ಥ. ತೃಚ್ ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ. ಋಕಾರವು ಉದಾತ್ತವಾಗುತ್ತದೆ. ॥ ೧೦ ॥

॥ ಸಂಹಿತಾಪಾಠಃ ॥

ಅಸ್ಮಾಕಂ ಶಿಪ್ರಿಣೀನಾಂ ಸೋಮಪಾಃ ಸೋಮಪಾವ್ನಾಂ ।
ಸಖೇ ವಜ್ರಿನ್ತ್ಸಖೀನಾಂ ॥ ೧೧ ॥

॥ ಪದಪಾಠಃ ॥

ಅಸ್ಮಾಕಂ । ಶಿಪ್ರಿಣೀನಾಂ । ಸೋಮಽಪಾಃ । ಸೋಮಽಪಾವ್ನಾಂ ।
ಸಖೇ । ವಜ್ರಿನ್ । ಸಖೀನಾಂ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಸೋಮಪಾಃ ಸೋಮಸ್ಯ ಪಾತಃ ಸಖೇ ಸಖಿವತ್ಪ್ರಿಯ ವಜ್ರಿನ್ವಜ್ರಯುಕ್ತೇಂದ್ರ ಸಖೀನಾಂ ಸಖಿವತ್ಪ್ರಿಯಾಣಾಂ ಸೋಮಪಾವ್ನಾಂ ಸೋಮಸ್ಯ ಪಾತೄಣಾಮಸ್ಮಾಕಂ ಶಿಪ್ರಿಣೀನಾಂ ದೀರ್ಘಾಭ್ಯಾಂ ಹನೂಭ್ಯಾಂ ನಾಸಿಕಾಭ್ಯಾಂ ವಾ ಯುಕ್ತಾನಾಂ ಗವಾಂ ಸಮೂಹಸ್ತ್ವತ್ಪ್ರಸಾದಾದಸ್ತ್ವಿತಿ ಶೇಷಃ ॥ ಶಿಪ್ರಿಣೀನಾಂ । ಋನ್ನೇಭ್ಯೋ ಙೀಬಿತಿ ಙೀಪ್ । ತಸ್ಯ ಪಿತ್ತ್ವಾದನುದಾತ್ತತ್ವೇ ಸತಿ ಪ್ರತ್ಯಯಸ್ವರಃ ಶಿಷ್ಯತೇ । ಸೋಮಪಾಃ । ಆಮಂತ್ರಿತಸ್ಯ ಸತಿ ಶಿಷ್ಟತ್ವಾದಾಮಂತ್ರಿತಾದ್ಯುದಾತ್ತತ್ವಂ । ಸೋಮಪಾವ್ನಾಂ । ಆತೋ ಮನಿನ್ನಿತ್ಯಾದಿನಾ ವನಿಪ್ । ಅಲ್ಲೋಪೋಽನಃ । ಪಾ. ೬-೪-೧೩೪ । ಇತ್ಯನೋಽಕಾರಸ್ಯ ಲೋಪಃ ॥

॥ ಪ್ರತಿಪದಾರ್ಥ ॥

**ಸೋಮಪಾಃ**—ಸೋಮರಸವನ್ನು ಪಾನಮಾಡತಕ್ಕವನೂ । **ಸಖೇ**—ಸ್ನೇಹಿತನಂತೆ ಪ್ರಿಯನಾದವನೂ, **ವಜ್ರಿನ್**—ವಜ್ರಾಯುಧವನ್ನು ಹಿಡಿದಿರುವವನೂ ಆದ ಇಂದ್ರನೇ । **ಸಖೀನಾಂ**—(ನಿನ್ನ) ಸ್ನೇಹಿತರೂ । **ಸೋಮಪಾವ್ನಾಂ**—ಸೋಮರಸವನ್ನು ಪಾನಮಾಡತಕ್ಕವರೂ ಆದ । **ಅಸ್ಮಾಕಂ**—ನಮಗೆ । **ಶಿಪ್ರಿಣೀನಾಂ**—ಉದ್ದವಾದ ದವಡೆಗಳುಳ್ಳ (ಮೂತಿಗಳುಳ್ಳ) ಹಸುಗಳ (ಸಮೂಹವನ್ನು ಅನುಗ್ರಹಿಸು) ॥

॥ ಭಾವಾರ್ಥ ॥

ಸೋಮರಸವನ್ನು ಪಾನಮಾಡತಕ್ಕವನೂ, ಸ್ನೇಹಿತನಂತೆ ಪ್ರಿಯನಾದವನೂ ಮತ್ತು ವಜ್ರಾಯುಧವನ್ನು ಹಿಡಿದಿರುವವನೂ ಆದ ಎಲೈ ಇಂದ್ರನೇ ನಿನ್ನ ಸ್ನೇಹಿತರೂ ಮತ್ತು ಸೋಮರಸವನ್ನು ಪಾನಮಾಡತಕ್ಕವರೂ ಆದ ನಮಗೆ ಉದ್ದವಾದ ದವಡೆಗಳುಳ್ಳ ಗೋವುಗಳನ್ನು ಅನುಗ್ರಹಿಸು.

## English Translation.

Drinker of the Soma-juice, weilder of the thunderbolt, O friend, bestow upon us a herd of cows with projecting jaws.

|| ವಿಶೇಷವಿಷಯಗಳು ||

**ಶಿಪ್ರಿಣೀನಾಂ**--ಶಿಪ್ರಿ ಎಂದರೆ ಗಲ್ಲ ಅಥವಾ ನಾಸಿಕ ಇಲ್ಲಿ ಶಿಪ್ರಿಣೀನಾಂ ಎಂದು ಸ್ತ್ರೀಲಿಂಗಶಬ್ದದ ಷಷ್ಠೀ ಬಹುವಚನವಿರುವುದರಿಂದ ಭಾಷ್ಯಕಾರರು ಈ ಶಬ್ದಕ್ಕೆ ಉದ್ದವಾದ ಮೂತಿಗಳುಳ್ಳ ಗೋವುಗಳ (ಸಮೂಹವು) ಎಂದು ಅರ್ಥವಿವರಣೆಮಾಡಿರುವರು.

**ಸೋಮಪಾಃ—ಸೋಮಸ್ಯ ಪಾತಃ** | ಸೋಮಪಾನಮಾಡುವ ಎಲೈ ಇಂದ್ರನೇ; ಈ ಶಬ್ದವು ಋಕಾರಾಂತ ಶಬ್ದವಾದ ಸೋಮಪಾತೃಶಬ್ದದ ಸಂಬುದ್ಧಿ ಪ್ರಥಮೈಕವಚನವು.

**ಸೋಮಪಾವ್ನಾಂ—ಸೋಮಪಾಸ್ಯ ಪಾತೄಣಾಮಸ್ಮಾಕಂ** | ಸೋಮಪಾನಮಾಡುವ ನಮಗೆ.

**ವಜ್ರಿನ್—ವಜ್ರಃ ವಜ್ರಾಯುಧಃ ಅಸ್ಯಾಸ್ತೀತಿ** | ವಜ್ರಾಯುಧವನ್ನು ಧರಿಸಿರುವ ಇಂದ್ರನು.

**ಸಖೀನಾಂ**—ಸ್ನೇಹಿತರಂತೆ ನಿನಗೆ ಪ್ರಿಯರಾದ ನಮ್ಮ.

|| ವ್ಯಾಕರಣಪ್ರಕ್ರಿಯಾ ||

**ಶಿಪ್ರಿಣೀನಾಮ್**—ಶಿಪ್ರೇ ಅಸ್ಯ ಸ್ತಃ ಎಂಬ ಮತ್ವರ್ಥದಲ್ಲಿ **'ಅತ ಇನಿ ಠನೌ'** ಎಂಬುದರಿಂದ ಇನಿ ಪ್ರತ್ಯಯ ಬರುತ್ತದೆ. ನಾಂತವಾದುದರಿಂದ ಸ್ತ್ರೀತ್ವವಿವಕ್ಷಾಮಾಡಿದಾಗ **'ಋನ್ನೇಭ್ಯೋ ಙೀಪ್'** (ಪಾ. ಸೂ. ೪-೧-೫) ಎಂಬುದರಿಂದ ಙೀಪ್ ಬರುತ್ತದೆ. ರೇಫದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ ಬರುತ್ತದೆ. ಶಿಪ್ರಿಣೀ ಶಬ್ದವಾಗುತ್ತದೆ. ಷಷ್ಠೀ ಬಹುವಚನದಲ್ಲಿ ಶಿಪ್ರಿಣೀನಾಂ ಎಂದು ರೂಪವಾಗುತ್ತದೆ. ಆಗ ಇನ್ ಪ್ರತ್ಯಯಸ್ವರವು ಸತಿಶಿಷ್ಟವಾಗುತ್ತದೆ. ಪ್ರಿ ಎಂಬಲ್ಲಿರುವ ಇಕಾರವು ಉದಾತ್ತವಾಗುತ್ತದೆ.

**ಸೋಮಪಾಃ**--ಸೋಮಂ ಪಿಬತಿ ಇತಿ ಸೋಮಪಾಃ ಸಂಬುದ್ಧಿ ಏಕವಚನದ ರೂಪ. ಪಾದದ ಆದಿಯಲ್ಲಿ ಬಂದುದರಿಂದ ನಿಘಾತಸ್ವರವು ಬರುವುದಿಲ್ಲ. ಆಮಂತ್ರಿತವು ಸತಿಶಿಷ್ಟವಾಗುವುದರಿಂದ ಷಾಷ್ಠಸೂತ್ರದಿಂದ **(ಆಮಂತ್ರಿತಸ್ಯ)** ಆದ್ಯುದಾತ್ತಸ್ವರವು ಬರುತ್ತದೆ.

**ಸೋಮಪಾವ್ನಾಂ—'ಆತೋ ಮನಿನ್ ಕ್ವನಿಪ್ ವನಿಪಶ್ಚ'** (ಪಾ. ಸೂ. ೩-೨-೭೪) ಎಂಬುದರಿಂದ ಆದಂತವಾದ ಪಾ ಧಾತುವಿಗೆ ಸುಬಂತವು ಉಪಪದವಾಗಿರುವಾಗ ವನಿಪ್ ಪ್ರತ್ಯಯ ಬರುತ್ತದೆ. ಸೋಮಪಾವನ್ ಶಬ್ದವಾಗುತ್ತದೆ. ಷಷ್ಠೀ ಬಹುವಚನದಲ್ಲಿ ಆಮ್ ಪ್ರತ್ಯಯ ಬರುತ್ತದೆ. **'ಅಲ್ಲೋಪೋಽನಃ'** (ಪಾ. ಸೂ. ೬-೪-೧೩೪) ಎಂಬುದರಿಂದ ಭಸಂಜ್ಞಾ ಇರುವುದರಿಂದ ಅನ್ನಿನ ಅಕಾರಕ್ಕೆ ಲೋಪ ಬರುತ್ತದೆ. ಸೋಮಪಾವ್ನಾಂ ಎಂದು ರೂಪವಾಗುತ್ತದೆ. ವನಿಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಧಾತುಸ್ವರವು ಉಳಿಯುತ್ತದೆ. || ೧೧ ||

॥ ಸಂಹಿತಾಪಾಠಃ ॥

ತಥಾ ತದಸ್ತು ಸೋಮಪಾಃ ಸಖೇ ವಜ್ರಿನ್ತಥಾ ಕೃಣು ।
ಯಥಾ ತ ಉಶ್ಮಸೀಷ್ಟಯೇ ॥ ೧೨ ॥

॥ ಪದಪಾಠಃ ॥

ತಥಾ । ತತ್ । ಅಸ್ತು । ಸೋಮಽಪಾಃ । ಸಖೇ । ವಜ್ರಿನ್ । ತಥಾ । ಕೃಣು ।
ಯಥಾ । ತೇ । ಉಶ್ಮಸಿ । ಇಷ್ಟಯೇ ॥ ೧೨ ॥

॥ ಸಾಯಣ ಭಾಷ್ಯಂ ॥

ಹೇ ಸೋಮಪಾಃ ಸಖೇ ವಜ್ರಿನ್ ಇಷ್ಟಯೇಽಭಿಲಷಿತಾರ್ಥಂ ತೇ ತವಾನುಗ್ರಹಂ ಯಥಾ ಯೇನ ಪ್ರಕಾರೇಣೋಶ್ಮಸಿ ವಯಂ ಕಾಮಯಾಮಹೇ ತ್ವಂ ತಥಾ ಕುರು । ತ್ವತ್ಪ್ರಸಾದಾತ್ತದಭೀಷ್ಟಂ ತಥಾಸ್ತು ॥ ಕೃಣು । ಕೃವಿ ಹಿಂಸಾಕರಣಯೋಶ್ಚ । ಇದಿತ್ತ್ವಾನ್ನುಮ್ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ತತ್ಸಂನಿಯೋಗೇನ ವಕಾರಸ್ಯ ಚಾಕಾರಃ । ಅತೋ ಲೋಪ ಇತಿ ತಸ್ಯ ಲೋಪಃ । ತಸ್ಯ ಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ । ಉತಶ್ಚ ಪ್ರತ್ಯಯಾದಸಂಯೋಗಪೂರ್ವಾದಿತಿ ಹೇರ್ಲುಕ್ । ಉಶ್ಮಸಿ । ವಶ ಕಾಂತೌ । ಇದಂತೋ ಮಸಿಃ । ಅದಾದಿತ್ವಾಚ್ಛಪೋ ಲುಕ್ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ಪ್ರತ್ಯಯಸ್ವರಃ । ಯದ್ವೃತ್ತಯೋಗಾದನಿಘಾತಃ । ಇಷ್ಟಯೇ । ಇಷು ಇಚ್ಛಾಯಾಂ । ಕ್ತಿನಿ ತಿತುತ್ರೇತ್ಯಾದಿನೇಟ್ಪ್ರತಿಷೇಧಃ । ಯದ್ವಾ । ಯಜತೇಃ ಕ್ತಿನಿ ವಚಿಸ್ವಪೀತ್ಯಾದಿನಾ । ಪಾ. ೬-೧-೧೫ । ಸಂಪ್ರಸಾರಣಂ । ವ್ರಶ್ಚಾದಿನಾ ಷತ್ವೇ ಷ್ಟುತ್ವಂ । ಪೂರ್ವಸ್ಮಿನ್ಪಕ್ಷೇ ಮಂತ್ರೇ ವೃಷೇತಿ ಕ್ತಿನ ಉದಾತ್ತತ್ವಂ । ದ್ವಿತೀಯೇ ತು ವ್ಯತ್ಯಯೇನ ॥

॥ ಪ್ರತಿಪದಾರ್ಥ ॥

**ಸೋಮಪಾಃ**—ಸೋಮರಸವನ್ನು ಪಾನಮಾಡುವವನೂ । **ಸಖೇ**—ಸ್ನೇಹಿತನೂ । **ವಜ್ರಿನ್**—ವಜ್ರಾಯುಧವನ್ನು ಹಿಡಿದಿರುವವನೂ ಆದ ಎಲೈ ಇಂದ್ರನೇ । **ಇಷ್ಟಯೇ**—(ನಮ್ಮ) ಇಷ್ಟಾರ್ಥವು ನೆರವೇರುವುದಕ್ಕಾಗಿ । **ತೇ**—ನಿನ್ನ (ಅನುಗ್ರಹವನ್ನು) । **ಯಥಾ**—ಯಾವ ವಿಧವಾಗಿ । **ಉಶ್ಮಸಿ**—ನಾವು ಅಪೇಕ್ಷಿಸುತ್ತೇವೆಯೋ । **ತಥಾ**—ಹಾಗೆಯೇ (ಅನುಗ್ರಹಿಸು) । **ತತ್**—ಆ ಇಷ್ಟಾರ್ಥವು । **ತಥಾ ಅಸ್ತು**—ಅದೇ ರೀತಿ ನೆರವೇರಲಿ ॥

॥ ಭಾವಾರ್ಥ ॥

ಸೋಮರಸವನ್ನು ಪಾನಮಾಡುವವನೂ, ವಜ್ರಾಯುಧವನ್ನು ಹಿಡಿದಿರುವವನೂ ಮತ್ತು ಸ್ನೇಹಿತನೂ ಆದ ಎಲೈ ಇಂದ್ರನೇ, ನಮ್ಮ ಇಷ್ಟಾರ್ಥವು ನೆರವೇರುವುದಕ್ಕಾಗಿ ನಾವು ನಿನ್ನ ಅನುಗ್ರಹವನ್ನು ಯಾವ ರೀತಿ ಅಪೇಕ್ಷಿಸುತ್ತೇವೆಯೋ ಅದೇ ರೀತಿ ಅನುಗ್ರಹಿಸು ಮತ್ತು ನಮ್ಮ ಇಷ್ಟಾರ್ಥವೂ ಸಹ ಅದೇ ರೀತಿ ನೆರವೇರಲಿ.

## English Translation.

O Soma-drinker, weilder of the thunderbolt, our friend, cause it to pass in such a manner as we wish to induce you to do.

॥ ವಿಶೇಷವಿಷಯಗಳು ॥

**ಇಷ್ಟಯೇ— ಅಭಿಲಷಿತಾರ್ಥಂ। ಅಥವಾ ಇಷ್ಟಯೇ ತವ ಯಾಗಾಯ ।** ನಮ್ಮ ಅಭೀಷ್ಟಸಿದ್ಧಿಗಾಗಿ. ಇಲ್ಲಿ ಇಷ್ಟಿ ಎಂದರೆ ಯಜ್ಞವೆಂದೂ ಅರ್ಥವಾಗುವುದರಿಂದ ಇಷ್ಟಯೇ ಎಂಬ ಶಬ್ದಕ್ಕೆ ನಿನ್ನನ್ನುದ್ದೇಶಿಸಿ ಯಜ್ಞ ಮಾಡುವುದಕ್ಕೋಸ್ಕರ ಎಂಬರ್ಥವನ್ನು ಬೇಕಾದರೂ ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಕೃಣು—** ಕೃವಿ ಹಿಂಸಾಕರಣಯೋಶ್ಚ ಧಾತು. ಭ್ವಾದಿ ಲೋಟ್, ಮಧ್ಯಮಪುರುಷ ಏಕವಚನದಲ್ಲಿ, ಸಿಪ್, ಹಿ ಆದೇಶ ಬರುತ್ತದೆ. ಇದಿತ್ತಾದುದರಿಂದ **'ಇದಿತೋನುಮ್ ಧಾತೋಃ'** (ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ ಬರುತ್ತದೆ. ಕೃನ್ ವ್+ಹಿ ಎಂದಿರುವಾಗ ಶಪ್ ವಿಕರಣವು ಪ್ರಾಪ್ತವಾದರೆ **'ಧಿನ್ವಿಕೃಣ್ವ್ಯೋರ ಚ'** (ಪಾ. ಸೂ. ೩-೧-೮೦) ಎಂಬುದರಿಂದ ಉ ಪ್ರತ್ಯಯವು ಬರುತ್ತದೆ. ತತ್ಸಂನಿಯೋಗದಿಂದ ಧಾತುವಿನ ವಕಾರಕ್ಕೆ ಅಕಾರ ಬರುತ್ತದೆ. ಆಗ ಕೃನ ಉ+ಹಿ ಎಂದಾಗುತ್ತದೆ. ಉ ಪರದಲ್ಲಿರುವಾಗ ಅದಂತವಾದುದರಿಂದ **'ಅತೋಲೋಪಃ'** (ಪಾ. ಸೂ ೬-೪-೪೮) ಎಂಬುದರಿಂದ ಅಕಾರಕ್ಕೆ ಲೋಪ ಬರುವುದು. **'ಅಚಃ ಪರಸ್ಮಿನ್‌ಪೂರ್ವವಿಧೌ'** (ಪಾ. ಸೂ. ೧-೧-೫೭) ಎಂಬುದರಿಂದ ಉ ನಿಮಿತ್ತವಾಗಿ ಅಲೋಪಬಂದಿರುವುದರಿಂದ ಅದರ ಪೂರ್ವಕ್ಕೆ ಕಾರ್ಯಮಾಡುವಾಗ ಸ್ಥಾನಿವದ್ಭಾವ ಬರುವುದರಿಂದ ಲಘೂಪಧವಾಗದಿರುವುದರಿಂದ ಋಕಾರಕ್ಕೆ ಲಘೂಪಧಗುಣವು ಬರುವುದಿಲ್ಲ. **'ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್'** (ಪಾ. ಸೂ. ೬-೪-೧೦೬) ಎಂಬುದರಿಂದ ಸಂಯೋಗ ಪೂರ್ವದಲ್ಲಿ ಇರದ ಉ ಪ್ರತ್ಯಯದ ಪರದಲ್ಲಿ ಹಿ ಬಂದುದರಿಂದ ಅದಕ್ಕೆ ಲುಕ್. ಋಕಾರದ ಪರದಲ್ಲಿ ನಕಾರ ಬಂದುದರಿಂದ ಣತ್ವ ಬರುತ್ತದೆ. ಕೃಣು ಎಂದು ರೂಪವಾಗುತ್ತದೆ ತಿಙಂತ ನಿಘಾತಸ್ವರ ಬರುತ್ತದೆ.

**ಉಶ್ಮಸಿ—** ವಶ ಕಾಂತೌ ಧಾತು. ಅದಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **'ಇದಂತೋಮಸಿ'** (ಪಾ. ಸೂ. ೭-೧-೪೬) ಎಂಬುದರಿಂದ ಅದಕ್ಕೆ ಇಕಾಗಮ. **'ಅದಿಪ್ರಭೃತಿಭ್ಯಃ ಶಪಃ'** (ಪಾ. ಸೂ ೨-೪-೭೨) ಎಂಬುದರಿಂದ ಶಪ್ಪಿಗೆ ಲುಕ್ ಬರುತ್ತದೆ. ಮಸ್ಸಿಗೆ ಙಿದ್ವದ್ಭಾವವಿರುವುದರಿಂದ **'ಗ್ರಹಿಜ್ಯಾವಯಿ-'** (ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ ಬರುತ್ತದೆ. **'ಸಂಪ್ರಸಾರಣಾಚ್ಚ'**

ಎಂಬುದರಿಂದ ಪೂರ್ವರೂಪ ಬಂದರೆ ಉಶ್ಮಸಿ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಕಾರೋತ್ತರಾಕಾರವು ಉದಾತ್ತವಾಗುತ್ತದೆ. ಯಥಾ ಎಂದು ಪೂರ್ವದಲ್ಲಿ ಸಂಬಂಧವಿರುವುದರಿಂದ **' ಯದ್ವೃತ್ತಯೋಗಾನ್ನಿತ್ಯಂ '** ಎಂಬುದರಿಂದ ತಿಙಂತ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ಇಷ್ಟಯೇ**—ಇಷು ಇಚ್ಛಾಯಾಂ ಧಾತು. ದಿವಾದಿ. **'ಸ್ತ್ರಿಯಾಂಕ್ತಿನ್ '** (ಪಾ. ಸೂ ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ ಬರುತ್ತದೆ. **'ತಿತುತ್ರತಥಸಿ-'** (ಪಾ. ಸೂ. ೭-೨-೯) ಎಂಬುದರಿಂದ ಅದಕ್ಕೆ ಇಣ್ನಿಷೇಧ ಬರುತ್ತದೆ. ಷ್ಟುತ್ವ ಬಂದರೆ ಇಷ್ಟಿ ಎಂದು ರೂಪವಾಗುತ್ತದೆ. ಅಥವಾ ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಭ್ವಾದಿ. ಇದಕ್ಕೆ ಕ್ತಿನ್ ಪರದಲ್ಲಿರುವಾಗ **' ವಚಿಸ್ವಪಿಯಜಾದೀನಾಂ ಕಿತಿ '** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ ಬರುತ್ತದೆ. **'ಸಂಪ್ರಸಾರಣಾಚ್ಚ'** ಎಂಬುದರಿಂದ ಪೂರ್ವರೂಪ ಬಂದರೆ ಇಜ್+ತಿ, ಎಂದು ರೂಪವಾಗುತ್ತದೆ. **'ವ್ರಶ್ಚಭ್ರಸ್ಜ-'** ಸೂತ್ರದಿಂದ ಜಕಾರಕ್ಕೆ ಷತ್ವ ಬರುತ್ತದೆ. ಹಿಂದಿನಂತೆ ಷ್ಟುತ್ವದಿಂದ ಇಷ್ಟಿ ಎಂದು ರೂಪವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಇಷ್ಟಯೇ ಎಂದು ರೂಪವಾಗುತ್ತದೆ. ಪೂರ್ವಪಕ್ಷದಲ್ಲಿ **'ಮಂತ್ರೇ ವೃಷ-'** (ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ನಿನ ಉದಾತ್ತಸ್ವರ ಬರುತ್ತದೆ. ದ್ವಿತೀಯಪಕ್ಷದಲ್ಲಿ ಆದ್ಯುದಾತ್ತವು ಪ್ರಾಪ್ತವಾದರೆ **'ವ್ಯತ್ಯಯೋ ಬಹುಲಂ '** (ಪಾ. ಸೂ. ೩-೧-೮೫) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ರೇವತೀರ್ನಃ ಸಧಮಾದ ಇಂದ್ರೇ ಸಂತು ತುವಿವಾಜಾಃ ।
ಕ್ಷುಮಂತೋ ಯಾಭಿರ್ಮದೇಮ ॥ ೧೩ ॥

॥ ಪದಪಾಠಃ ॥

ರೇವತೀಃ । ನಃ । ಸಧಽಮಾದೇ । ಇಂದ್ರೇ । ಸಂತು । ತುವಿಽವಾಜಾಃ ।
ಕ್ಷುಽಮಂತಃ । ಯಾಭಿಃ । ಮದೇಮ ॥ ೧೩ ॥

॥ ಸಾಯಣಭಾಷ್ಯಂ ॥

**ಕ್ಷುಮಂತೋಽನ್ನವಂತೋ ವಯಂ ಯಾಭಿರ್ಗೋಭಿಃ ಸಹ ಮದೇಮ ಹೃಷ್ಯೇಮ ಇಂದ್ರೇ ಸಧಮಾದೇಽಸ್ಮಾಭಿಃ ಸಹ ಹರ್ಷಯುಕ್ತೇ ಸತಿ ನೋಽಸ್ಮಾಕಂ ತಾ ಗಾವೋ ರೇವತೀಃ ಕ್ಷೀರಾಜ್ಯಾದಿಧನವತ್ಯಃ ತುವಿವಾಜಾಃ ಪ್ರಭೂತಬಲಾಶ್ಚ ಸಂತು ॥ ರೇವತೀಃ । ರಯಿಶಬ್ದಾನ್ಮತುಪಿ ರಯೇರ್ಮತೌ**

**ಬಹುಲಮಿತಿ ಸಂಪ್ರಸಾರಣಂ ಪರಪೂರ್ವತ್ವಂ । ಛಂದಸೀರ ಇತಿ ಮತುಪೋ ವತ್ವಂ । ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ಆರೇಶಬ್ದಾಚ್ಚ ಮತುಪ ಉದಾತ್ತತ್ವಂ ವಕ್ತವ್ಯಮಿತಿ ರೇಶಬ್ದಾದುತ್ತರಸ್ಯಾಪಿ ಭವತೀತಿ ಪೂರ್ವಮೇವೋಕ್ತಂ । ಸಧಮಾದೇ । ಮದ ತೃಪ್ತಿಯೋಗೇ । ಚೌರಾದಿಕಃ । ಸಹ ಮಾದಯತೀತಿ ಸಧಮಾದಃ । ಪಚಾದ್ಯಚ್ । ಸಧ ಮಾದಸ್ಥಯೋಶ್ಛಂದಸಿ । ಪಾ. ೬-೩-೯೬ । ಇತಿ ಸಹಶಬ್ದಸ್ಯ ಸಧಾದೇಶಃ । ಥಾಥಾದಿನೋತ್ತರಪದಾಂತೋದಾತ್ತತ್ವೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ತುವಿವಾಜಾಃ । ತು ಇತಿ ಸೌತ್ರೋ ಧಾತುರ್ವೃದ್ಧ್ಯರ್ಥಃ । ಅಚ ಇರಿತಿ ಇಃ । ಸಂಜ್ಞಾಪೂರ್ವಕತ್ವಾದ್ಗುಣೋ ನ ಭವತಿ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಕ್ಷುಮಂತಃ । ಟುಕ್ಷು ಶಬ್ದೇ । ಅಸ್ಮಾತ್ಕ್ವಿಪಿ ತುಗಭಾವಶ್ಛಾಂದಸಃ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಮದೇಮ । ಮದೀ ಹರ್ಷೇ । ವ್ಯತ್ಯಯೇನ ಶಪ್ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶಪಃ ಪಿತ್ತ್ವಾದನುದಾತ್ತತ್ವಂ । ತತೋ ಧಾತುಸ್ವರಃ ಶಿಷ್ಯತೇ ॥**

॥ ಪ್ರತಿಪದಾರ್ಥ ॥

ಇಂದ್ರ— ಎಲೈ ಇಂದ್ರನೇ । **ಸಧಮಾದೇ**— ( ನಮ್ಮೊಂದಿಗೆ ನೀನೂ ) ಹರ್ಷಯುಕ್ತನಾಗಲು । **ಕ್ಷುಮಂತಃ**—ಅನ್ನ ಸಂಪತ್ತಿನಿಂದ ಕೂಡಿದ ನಾವು । **ಯಾಭಿಃ**—ಯಾವ ಗೋವುಗಳೊಡನೆ । **ಮದೇಮ**—ಸಂತೋಷಪಡುತ್ತೇವೆಯೋ । **ನಃ**—ನಮ್ಮ ( ಆ ಗೋವುಗಳು ) । **ರೇವತೀಃ**—ಹಾಲು, ತುಪ್ಪ ಮುಂತಾದ ಸಂಪತ್ತುಗಳಿಂದ ಕೂಡಿಯೂ । **ತುವಿವಾಜಾಃ**—ಅತ್ಯಂತ ಬಲವುಳ್ಳವುಗಳಾಗಿಯೂ । **ಸಂತು**—ಆಗಿರಲಿ ।

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮೊಂದಿಗೆ ನೀನೂ ಹರ್ಷಯುಕ್ತನಾಗಿರಲು ಅನ್ನ ಸಂಪತ್ತಿನಿಂದ ಕೂಡಿದ ನಾವು ಯಾವ ನಮ್ಮ ಗೋವುಗಳೊಡನೆ ಸಂತೋಷಪಡುತ್ತೇವೆಯೋ ನಮ್ಮ ಆ ಗೋವುಗಳು ಹಾಲು, ತುಪ್ಪ ಮುಂತಾದ ಸಂಪತ್ತುಗಳಿಂದ ಕೂಡಿಯೂ ಮತ್ತು ಅತ್ಯಂತ ಬಲವುಳ್ಳವುಗಳಾಗಿಯೂ ಆಗಿರಲಿ.

## English Translation.

So Indra, rejoicing along with us, we may have abundant food and may our cows be robust and rich in milk, so that we may be happy.

॥ ವಿಶೇಷವಿಷಯಗಳು ॥

**ರೇವತೀಃ**— ಈ ಶಬ್ದಕ್ಕೆ ಭಾಷ್ಯಕಾರರು ಕ್ಷೀರಾಜ್ಯಾದಿಧನವತ್ಯಃ ಗಾವಃ ಎಂದರೆ ಹಾಲು ತುಪ್ಪ ಮೊದಲಾದವುಗಳಿಂದ ಸಂಪನ್ನವಾದ ಗೋವುಗಳನ್ನು ಎಂದರ್ಥಮಾಡಿರುವರು. ಸ್ಕಂದಸ್ವಾಮಿಯು ಈ ಶಬ್ದಕ್ಕೆ **ಧನವತ್ಯಃ ಸ್ತುತಯಃ** ಎಂದರೆ ನಾವು ಮಾಡುವ ಸ್ತೋತ್ರಗಳು ಧನಪ್ರದಗಳಾಗಿ ಆಗಲಿ ಎಂದು ವಿವರಿಸಿರುವರು. ಈ ಋಕ್ಕಿನಲ್ಲಿ ಗೋಶಬ್ದವಿಲ್ಲದ್ದರಿಂದ ಈ **ರೇವತೀಃ** ಎಂಬಶಬ್ದಕ್ಕೆ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು.

**ಸಧಮಾದೇ—ಸಹ ಮದೇಮ । ಇಂದ್ರೇ ಸಧಮಾದೇ ಇಂದ್ರೇ ಅಸ್ಮಾಭಿಃ ಸಹ ಹರ್ಷಯುಕ್ತೇ ಸತಿ ।** ಇಲ್ಲಿ ಸಧಶಬ್ದಕ್ಕೆ ಸಹ ಎಂಬರ್ಥವನ್ನು ಹೇಳಬೇಕು. ಇಂದ್ರನು ನಮ್ಮೊಡನೆ ಹರ್ಷಯುಕ್ತನಾಗಿರಲಾಗಿ ಎಂದರ್ಥವು. ಯಾಸ್ಕರು ಸಧಮಾದ ಶಬ್ದಕ್ಕೆ **ಸದಮಾದಂ ಸಹಮದನಂ** ಎಂದು ನಿರ್ವಚನವನ್ನು ಹೇಳಿರುವರು (ನಿ. ೭-೩೧).

**ತುವಿವಾಜಾಃ**— ತುವಿ ಎಂದರೆ ಪ್ರಭೂತ, ಬಹು. (ನಿ. ೩-೧೩) ವಾಜವೆಂದರೆ ಬಲ. (ನಿ. ೩-೯) ಆದುದರಿಂದ ತುವಿವಾಜಾಃ**—**ಬಹು ಬಲವುಳ್ಳ ಎಂದರ್ಥವು.

**ಕ್ಷುಮಂತಃ—**ಕ್ಷು ಎಂದರೆ ಅನ್ನವು (ನಿ. ೩-೯) ಕ್ಷುಮಂತಃ ಎಂದರೆ ಅನ್ನವಂತಃ ಅನ್ನವುಳ್ಳವರು.

॥ ವ್ಯಾಕರಣಪ್ರಕ್ರಿಯಾ ॥

**ರೇವತೀಃ—**ರಯಿ ಶಬ್ದಕ್ಕೆ ಮತುಪ್ ಪರದಲ್ಲಿರುವಾಗ **'ರಯೇರ್ಮತೌ ಬಹುಲಂ'** (ವಾ. ೩೫೪೦) ಎಂಬುದರಿಂದ ಸಂಪ್ರಸಾರಣವು ಬರುತ್ತದೆ. **'ಸಂಪ್ರಸಾರಣಾಚ್ಚ'** ಎಂಬುದರಿಂದ ಪೂರ್ವರೂಪ ಬಂದರೆ ರ+ಇ+ ಮತ್, ಎಂದಾಗುತ್ತದೆ. **'ಛಂದಸೀರಃ'** (ಪಾ. ಸೂ. ೮-೨-೧೫) ಎಂಬುದರಿಂದ ಇಕಾರದ ಪರದಲ್ಲಿರುವುದರಿಂದ ಮತುಪ್ಪಿನ ಮಕಾರಕ್ಕೆ ವಕಾರಾದೇಶ ಬರುತ್ತದೆ. ಗುಣಬಂದರೆ ರೇವತ್ ಶಬ್ದವಾಗುತ್ತದೆ. ಇದಕ್ಕೆ ಸ್ತ್ರೀತ್ವವಿವಕ್ಷಾ ಮಾಡಿದಾಗ **'ಉಗಿತಶ್ಚ'** (ಪಾ. ಸೂ. ೪-೧-೬) ಎಂಬುದರಿಂದ ಮತುಪ್ ಪ್ರತ್ಯಯದಲ್ಲಿ ಉಕಾರ ಇತ್ತಾದ್ದರಿಂದ ಙೀಪ್ ಬಂದು ರೇವತೀ ಶಬ್ದವಾಗುತ್ತದೆ. ಇದಕ್ಕೆ ಪ್ರಥಮಾ ಬಹುವಚನವಾದ ಜಸ್ ಪರದಲ್ಲಿರುವಾಗ **'ದೀರ್ಘಾಜ್ಜಸಿ ಚ'** (ಪಾ. ಸೂ. ೬-೧-೧೦೫) ಎಂಬುದರಿಂದ ಪೂರ್ವಸವರ್ಣದೀರ್ಘ ನಿಷೇಧ ಬಂದರೂ **'ವಾ ಛಂದಸಿ'** (ಪಾ. ಸೂ. ೬-೧-೧೦೬) ಎಂಬುದರಿಂದ ಛಂದಸ್ಸಿನಲ್ಲಿ ವೈಕಲ್ಪಿತವಾದುದರಿಂದ ಪೂರ್ವಸವರ್ಣದೀರ್ಘವು ಬರುವುದರಿಂದ ರೇವತೀಃ ಎಂದು ರೂಪವಾಗುತ್ತದೆ. **'ಆರೇ ಶಬ್ದಾಚ್ಚ ಮತುಪಃ ಉದಾತ್ತತ್ವಂ ವಕ್ತವ್ಯಮ್'** ಎಂಬ ವಚನದಿಂದ ಆರೇ ಶಬ್ದದ ಪರದಲ್ಲಿರುವ ಮತುಪಿಗೆ ಹೇಗೆ ಉದಾತ್ತತ್ವವು ಬರುವುದೋ ಆದರಂತೆ ರೇ ಶಬ್ದದ ಪರದಲ್ಲಿರುವ ಮತುಪಿಗೂ ಉದಾತ್ತವು ಬರುತ್ತದೆಂದು ಹಿಂದೆ ಉಪಪಾದಿತವಾಗಿದೆ. ಆಗ ಪಿತ್ ಸ್ವರವು ಬಾಧಿತವಾಗಿ ಉದಾತ್ತವು ಬರುವುದರಿಂದ ರೇವತೀಃ ಎಂಬಲ್ಲಿ ವಕಾರೋತ್ತರಾಕಾರವು ಉದಾತ್ತವಾಗುತ್ತದೆ.

**ಸಧಮಾದೇ**—ಸಹ ಮಾದಯಂತಿ ಇತಿ ಸದಮಾದಃ ಮದ ತೃಪ್ತಿಯೋಗೇ ಧಾತು. ಚುರಾದಿ. ಸ್ವಾರ್ಥಿಕವಾಗಿ **'ಸತ್ಯಾಪಪಾಶ-'** ಸೂತ್ರದಿಂದಣಿಚ್. ಣಿಜಂತದಮೇಲೆ ಕರ್ತ್ರರ್ಥದಲ್ಲಿ **'ನಂದಿಗ್ರಹಪಚಾದಿ-'** (ಪಾ.ಸೂ. ೩-೧-೧೩೪) ಎಂಬುದರಿಂದ ಅಚ್‌ಪ್ರತ್ಯಯ ಬಂದರೆ **'ಣೇರನಿಟಿ'** (ಪಾ. ಸೂ. ೬-೪-೫೧) ಎಂಬುದರಿಂದ ಅಚ್ ಪರದಲ್ಲಿರುವಾಗ ಣಿಲೋಪದಿಂದ ಮಾದ ಎಂದು ರೂಪವಾಗುತ್ತದೆ. **'ಸಧಮಾದಸ್ಥಯೋಶ್ಛಂದಸಿ'** (ಪಾ. ಸೂ. ೬-೩-೯೬) ಎಂಬುದರಿಂದ ಮಾದಶಬ್ದವು ಪರದಲ್ಲಿರುವಾಗ ಸಹಶಬ್ದಕ್ಕೆ ಸಧಾದೇಶ. ಸಧಮಾದೇ ಸಪ್ತಮೀ ಏಕವಚನದ ರೂಪ. ಅಜಂತವಾದುದರಿಂದ **'ಥಾಥಘಞ್‌ಕ್ತಾಜಬಿತ್ರಕಾಣಾಮ್'** (ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರವು ಪ್ರಾಪ್ತವಾದರೆ **'ಪರಾದಿಶ್ಛಂದಸಿ ಬಹುಲಂ'** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರವು ಬರುತ್ತದೆ.

**ತುವಿವಾಜಾಃ**— ತು ಎಂಬುದು ವೃಧ್ಯರ್ಥವುಳ್ಳ ಸೂತ್ರನಿರ್ದಿಷ್ಟವಾದ ಧಾತು. **'ಅಚ ಇಃ'** (ಉ. ಸೂ. ೪-೫೭೮) ಎಂಬುದರಿಂದ ಅಜಂತವಾದುದರಿಂದ ಇಪ್ರತ್ಯಯ. **'ಸಾರ್ವಧಾತುಕಾರ್ಧಧಾತುಕಯೋಃ'** (ಪಾ. ಸೂ. ೭-೩-೮೪) ಎಂಬುದರಿಂದ ಗುಣವು ಪ್ರಾಪ್ತವಾದರೆ ಸಂಜ್ಞಾಪೂರ್ವಕವಾದ ಕಾರ್ಯವಾದುದರಿಂದ **'ಸಂಜ್ಞಾಪೂರ್ವಕೋ ವಿಧಿರನಿತ್ಯಃ'** (ಪರಿ-೯೫) ಎಂಬುದರಿಂದ ಬರುವುದಿಲ್ಲ. **'ಅಚಿಶ್ನುಧಾತುಭ್ರುವಾಂ-'**(ಪಾ. ಸೂ. ೬-೪-೭೭) ಎಂಬುದರಿಂದ ಉವಜಾದೇಶ. ತುವಿಃ ಎಂದು ರೂಪವಾಗುತ್ತದೆ. ಬಹುವ್ರೀಹಿ ಸಮಾಸ. **'ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ತುವಿ ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತ.

**ಕ್ಷುಮಂತಃ**—ಟು ಕ್ಷು ಶಬ್ದೇ ಧಾತು. ಅದಾದಿ. **'ಆದಿರ್ಞಿಟುಡವಃ'** (ಪಾ. ಸೂ. ೧-೩-೫) ಎಂಬುದರಿಂದ ಟುಲೋಪ. **'ಕ್ವಿಪ್ ಚ'** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್. ಕ್ವಿಪ್ಪಿನಲ್ಲಿ ಸರ್ವಲೋಪ. ಪಿತ್ತಾದುದರಿಂದ **'ಹ್ರಸ್ವಸ್ಯಪಿತಿಕೃತಿತುಕ್'** (ಪಾ ಸೂ. ೬-೧-೭೧) ಎಂಬುದರಿಂದ ಪೂರ್ವಕ್ಕೆ ತುಗಾಗಮವು ಪ್ರಾಪ್ತವಾದರೆ ಛಾಂದಸವಾಗಿ ಬರುವುದಿಲ್ಲವೆನ್ನಬೇಕು. ಕ್ಷು ಏಷಾಂ ಅಸ್ತಿ ಇತಿ ಕ್ಷುಮಂತಃ **'ತದಸ್ಯಾ'** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್. ಪ್ರಥಮಾಬಹುವಚನದರೂಪ. **'ಹ್ರಸ್ವನುಡ್ಭ್ಯಾಂ ಮತುಪ್'** (ಪಾ. ಸೂ. ೬-೧-೧೭೬) ಎಂಬುದರಿಂದ ಹ್ರಸ್ವದ ಪರದಲ್ಲಿರುವುದರಿಂದ ಅನುದಾತ್ತಸ್ವರವು ಬಾಧಿತತವಾಗಿ ಮತುಪ್ಪಿಗೆ ಉದಾತ್ತಸ್ವರ ಬರುತ್ತದೆ.

**ಮದೇಮ**—ಮದೀ ಹರ್ಷೇ ಧಾತು. ದಿವಾದಿ. **'ವ್ಯತ್ಯಯೋ ಬಹುಲಂ'** (ಪಾ. ಸೂ ೩-೧-೮೫) ಎಂಬುದರಿಂದ ಶಪ್ ವಿಕರಣ. ಲಿಙ್ ಉತ್ತಮಪುರುಷ ಬಹುವಚನ ಮಸಿಗೆ **'ನಿತ್ಯಂ ಙಿತಃ'** (ಪಾ. ಸೂ. ೩-೪-೯೯) ಎಂಬುದರಿಂದ ಅಂತ್ಯಲೋಪ. **'ಯಾಸುಟ್‌ಪರಸ್ಮೈಪದೇಷೂದಾತ್ತೋ ಙಿಚ್ಚ'** (ಪಾ. ಸೂ. ೩-೪-೧೦೩) ಎಂಬುದರಿಂದ ಬಂದಿರುವ ಯಾಸುಟ್ಟಿಗೆ **'ಅತೋ ಯೇಯಃ'** (ಪಾ. ಸೂ. ೭-೨-೮೦) ಎಂಬುದರಿಂದ ಇಯಾದೇಶ. ಶಪ್ಪಿಗೆ ಇಯ್ ಪರದಲ್ಲಿರುವಾಗ ಗುಣ. ಮದೇಯ್‌ಮ ಎಂದಿರುವಾಗ **'ಲೋಪೋವ್ಯೋರ್ವಲಿ'** (ಪಾ. ಸೂ. ೬-೧-೬೬) ಎಂಬುದರಿಂದ ಯಲೋಪ. ಮದೇಮ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ **'ಅನುದಾತ್ತೌ ಸುಪ್ಪಿತೌ'** (ಪಾ. ಸೂ. ೩-೧-೩) ಎಂಬುದರಿಂದ ಅನುದಾತ್ತವಾಗುತ್ತದೆ. ಶಪ್ಪಿನ ಪರದಲ್ಲಿರುವ ಲಸಾರ್ವಧಾತುಕವು. **'ತಾಸ್ಯನುದಾತ್ತೇತ್-'** ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರವು ಉಳಿಯುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ॥ ೧೩ ॥

---

॥ ಸಂಹಿತಾಪಾಠಃ ॥

ಆ ಘ ತ್ವಾವಾನ್ತ್ಮನಾಪ್ತಃ ಸ್ತೋತೃಭ್ಯೋ ಧೃಷ್ಣವಿಯಾನಃ ।
ಋಣೋರಕ್ಷಂ ನ ಚಕ್ರ್ಯೋಃ ॥ ೧೪ ॥

॥ ಪದಪಾಠಃ ॥

ಆ । ಘ । ತ್ವಾऽವಾನ್ । ತ್ಮನಾ । ಆಪ್ತಃ । ಸ್ತೋತೃऽಭ್ಯಃ । ಧೃಷ್ಣೋ ಇತಿ । ಇಯಾನಃ ।

ಋಣೋಃ । ಅಕ್ಷಂ । ನ । ಚಕ್ರ್ಯೋಃ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಧೃಷ್ಣೋ ಧಾರ್ಷ್ಟ್ಯಯುಕ್ತೇಂದ್ರ ತ್ವಾವಾನ್ ತ್ವತ್ಸದೃಶೋ ದೇವತಾವಿಶೇಷಸ್ತ್ಮನಾಪ್ತ-ಸ್ತ್ವದನುಗ್ರಹವಶಾತ್ಸ್ವಯಮೇವಾಪ್ತಃ ಸನ್ ಇಯಾನೋಽಸ್ಮಾಭಿರ್ಯಾಚ್ಯಮಾನಃ ಸ್ತೋತೃಭ್ಯಃ ಸ್ತೋತೄಣಾಮನುಗ್ರಹಾಯ ತದಭೀಷ್ಟಮರ್ಥಂ ಘ ಅವಶ್ಯಮಾ ಋಣೋಃ । ಆನೀಯ ಪ್ರಕ್ಷಿಪತು । ತತ್ರ ದೃಷ್ಟಾಂತಃ । ಚಕ್ರ್ಯೋಃ ರಥಸ್ಯ ಚಕ್ರಯೋರಕ್ಷಂ ನ । ಯಥಾಕ್ಷಂ ಪ್ರಕ್ಷಿಪಂತಿ ತದ್ವತ್ ॥ ತ್ವಾವಾನ್ । ವತುಪ್ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಂ । ಪಾ. ೫-೨-೩೯-೧ । ಇತಿ ವತುಪ್ । ಪ್ರತ್ಯಯೋತ್ತರಪದಯೋಶ್ಚೇತಿ ಮಪರ್ಯಂತಸ್ಯ ತ್ವಾದೇಶಃ । ಆ ಸರ್ವ-ನಾಮ್ನಃ । ಪಾ. ೬-೩-೯೧ । ಇತಿ ದಕಾರಸ್ಯಾತ್ವಂ । ವತುಪಃ । ಪಿತ್ತ್ವಾದನುದಾತ್ತತ್ವೇ ಪ್ರಾತಿಪದಿಕಸ್ವರಃ ಶಿಷ್ಯತೇ । ತ್ಮನಾ । ಮಂತ್ರೇಷ್ವಾಙ್ಯಾದೇರಾತ್ಮನಃ । ಪಾ. ೬-೪-೧೪೧ । ಇತ್ಯಾಕಾರಲೋಪಃ । ಧೃಷ್ಣೋ । ಞಿಧೃಷಾ ಪ್ರಾಗಲ್ಭ್ಯೇ । ತ್ರಸಿಗೃಧಿಧೃಷಿಕ್ಷಿಪೇಃ ಕ್ನುಃ । ಪಾ. ೩-೨-೧೪೦ । ಆಮಂತ್ರಿತಾನುದಾತ್ತತ್ವಂ । ಇಯಾನಃ । ಈಙ್ ಗತೌ । ಛಂದಸಿ ಲಿಟ್ । ಪಾ. ೩-೨-೧೦೫ । ತಸ್ಯ ಲಿಟಃ ಕಾನಜ್ವೇತಿ ಕಾನಜಾ-ದೇಶಃ । ಅಚಿ ಶ್ನುಧಾತ್ವಿತ್ಯಾದಿನಾ । ಪಾ. ೬-೪-೭೭ । ಇಯಙಾದೇಶಃ । ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮಿತಿ ವಚನಾದಭ್ಯಾಸೋ ನ ಕ್ರಿಯತೇ । ಚಿತ ಇತ್ಯಂತೋದಾತ್ತತ್ವಂ । ಋಣೋಃ । ಋಣ ಗತೌ । ಲಙಿ ವ್ಯತ್ಯಯೇನ ತಿಪಃ ಸಿಪೀತಶ್ಚ । ಪಾ. ೩-೪-೧೦೦ । ಇತೀಕಾರಲೋಪಃ । ತನಾದಿಕೃಞ್ಭ್ಯ ಉಃ । ಪಾ. ೩-೧-೭೯ । ಸಾರ್ವಧಾತುಕಗುಣಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಾಗಮಾ-ಭಾವಃ । ವಿಕರಣಸ್ವರೇಣೋದಾತ್ತತ್ವಂ । ಅಕ್ಷಂ । ಅಕ್ಷಸ್ಯಾದೇವನಸ್ಯ । ಫಿ. ೨-೧೨ । ಇತ್ಯಾದ್ಯುದಾ-ತ್ತತ್ವಂ । ಚಕ್ರ್ಯೋಃ । ಅಕಾರಸ್ಯೇಕಾರಶ್ಛಾಂದಸಃ ।

॥ ಪ್ರತಿಪದಾರ್ಥ ॥

**ಧೃಷ್ಣೋ**—ಧೈರ್ಯಶಾಲಿಯಾದ ಇಂದ್ರನೇ । **ತ್ವಾವಾನ್**—ನಿನಗೆ ಸದೃಶನಾದ ಇತರ ಯಾವುದಾದರೂ ದೇವತೆಯು । **ತ್ಮನಾಪ್ತಃ**—(ನಿನ್ನ ಅನುಗ್ರಹದಿಂದ) ತಾನಾಗಿಯೇ ಪ್ರಿಯನಾಗಿ । **ಇಯಾನಃ**—ನಮ್ಮಿಂದ ಪ್ರಾರ್ಥಿಸಲ್ಪಟ್ಟು । **ಸ್ತೋತೃಭ್ಯಃ**—(ನಿನ್ನ) ಸ್ತೋತೃಗಳ (ಇಷ್ಟಾರ್ಥವನ್ನು) । **ಘ**—ಖಂಡಿತವಾಗಿಯೂ । **ಚಕ್ರ್ಯೋಃ**—ರಥದ ಚಕ್ರಗಳ । **ಅಕ್ಷಂ ನ**—ಇರಚಿಪಟ್ಟೆಯಂತೆ । **ಆ ಋಣೋಃ**—ತಂದು ಒದಗಿಸಲಿ.

॥ ಭಾವಾರ್ಥ ॥

ಧೈರ್ಯಶಾಲಿಯಾದ ಎಲೈ ಇಂದ್ರನೇ, (ಎಲೈ ಧೃಷ್ಣುವೇ) ನಿನಗೆ ಸದೃಶನಾದ ಇತರ ಯಾವುದಾದರೂ ಸಹ ದೇವತೆಯು ನಿನ್ನ ಅನುಗ್ರಹದಿಂದ ತಾನೇ ಪ್ರಿಯನಾಗಿ ನಮ್ಮಿಂದ ಪ್ರಾರ್ಥಿಸಲ್ಪಟ್ಟಾಗ ನಿನ್ನ ಸ್ತೋತೃಗಳ ಇಷ್ಟಾರ್ಥವನ್ನು ರಥದ ಎರಡು ಚಕ್ರಗಳ ಮಧ್ಯದಲ್ಲಿರುವ ಅಚ್ಚಿನಂತೆ ಖಂಡಿತವಾಗಿಯೂ ತಂದು ಒದಗಿಸಲಿ.

## English Translation.

O brave Indra let some such god as you are, being praised, promptly bestow upon your praisers when implored, the bounties as the axle of the wheels of a car.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸರಿಯಾಗಿ ಹೊಂದುವುದಿಲ್ಲ. ಉಪಮಾನವು ಸರಿಯಾಗಿಲ್ಲ. ಋಷಿಯ ಅಭಿಪ್ರಾಯವು ನಿರ್ದಿಷ್ಟವಾಗಿಲ್ಲ. ಭಾಷ್ಯಕಾರರು ಒಂದುವಿಧವಾಗಿ ಅರ್ಥಸಮನ್ವಯ ಮಾಡಿರುವರು.

**ತ್ವಾವಾನ್—ತ್ವತ್ಸದೃಶಃ ದೇವತಾವಿಶೇಷಃ ।** ನಿನ್ನಂತೆ ಇರುವ ಬೇರೊಬ್ಬ ದೇವತೆಯು.

**ತ್ಮನಾ—**ತ್ಮನಾ ಎಂದರೆ ಆತ್ಮನಾ (ತನ್ನಿಂದ) ಎಂದು ಯಾಸ್ಕರು ಕತರಾ ಪೂರ್ವಾ ಎಂಬ ಋಕ್ಕಿನ ನಿರ್ವಚನದಲ್ಲಿಯೂ (ನಿ. ೩-೨೨) ತನ್ನ ಸ್ತೂರೀಪಮುದ್ಭೃತಂ ಎಂಬ ಋಕ್ಕಿನ ನಿರ್ವಚನದಲ್ಲಿಯೂ (ನಿ. ೬-೨೧) ಅರ್ಥ ವಿವರಣೆ ಮಾಡಿರುವರು.

**ಧೃಷ್ಣೋ—ಧಾರ್ಷ್ಟ್ಯಯುಕ್ತೇಂದ್ರ ।** ಸ್ಥೈರ್ಯ ಅಥವಾ ಪರಾಕ್ರಮಯುಕ್ತನಾದ ಇಂದ್ರನು.

**ಇಯಾನಃ— ಅಸ್ಮಾಭಿರ್ಯಾಚ್ಯಮಾನಃ ।** ನಮ್ಮಿಂದ ಪ್ರಾರ್ಥಿಸಲ್ಪಟ್ಟವನಾಗಿ.

**ಋಣೋಃ— ಋಣ ಗತೌ ಆನೀಯ ಪ್ರಕ್ಷಿಪತು ।** ತಂದು ಇಡಲಿ ಎಂದರೆ ತಂದುಕೊಡಲಿ.

**ಅಕ್ಷಂ ನ ಚಕ್ರ್ಯೋಃ—** ಈ ಉಪಮಾನಕ್ಕೆ ಭಾಷ್ಯಕಾರರು ರಥದ ಚಕ್ರಗಳ ಮಧ್ಯದಲ್ಲಿ ಅಚ್ಚನ್ನು ಯಾವ ರೀತಿ ಇಡುವರೋ ಅದರಂತೆ ಎಂದು ಮಾತ್ರ ಹೇಳಿರುವರು ಇದರ ಅರ್ಥವು ಸ್ಪಷ್ಟವಾಗಿಲ್ಲ. ಸ್ಕಂದಸ್ವಾಮಿಯು ರಥ ಚಕ್ರಗಳ ಮಧ್ಯದಲ್ಲಿರುವ ಅಚ್ಚು ಯಾವರೀತಿ ವೇಗವಾಗಿ ಚಲಿಸುವುದೋ ಅದರಂತೆ ನಮ್ಮ ಇಷ್ಟಾರ್ಥಗಳನ್ನು ಬೇಗನೆ ನೆರವೇರಿಸಲಿ ಎಂದು ಹೇಳಿರುವರು. ಅಥವಾ ರಥದ ಚಕ್ರಗಳ ಮಧ್ಯದಲ್ಲಿರುವ ಅಚ್ಚು ಯಾವರೀತಿ ವೇಗವಾಗಿ ಚಲಿಸುವುದೋ ಅಂತಹ ವೇಗಯುಕ್ತನಾಗಿ ಬಂದು ನಮ್ಮ ಇಷ್ಟಾರ್ಥಗಳನ್ನು ಕೊಡಲಿ ಎಂದಭಿಪ್ರಾಯವಿರಬಹುದು. ಇಲ್ಲಿ ಭಾಷ್ಯಕಾರರು ಚಕ್ರ್ಯೋಃ ಎಂದರೆ ರಥದ ಚಕ್ರಗಳ ಎಂಬರ್ಥವನ್ನು ಹೇಳಿರುವರು. ಆದರೆ ಚಕ್ರ್ಯೋಃ ಎಂಬ ಶಬ್ದವು ಚಕ್ರಿನ್ ಶಬ್ದದ ಷಷ್ಠೀದ್ವಿವಚನ. ಇದಕ್ಕೆ—**ಚಕ್ರೌ ಅಸ್ಯ ಸ್ತಃ ಇತಿ ಚಕ್ರೀ ರಥ ಇತ್ಯರ್ಥಃ ತಯೋಃ ಚಕ್ರ್ಯೋಃ** ' ಎಂದು ವಿಗ್ರಹವನ್ನು ಹೇಳಿದರೆ ಚಕ್ರಿ ಶಬ್ದಕ್ಕೆ ಚಕ್ರವುಳ್ಳ ರಥವೆಂದರ್ಥವಾಗುವುದು. ಚಕ್ರ್ಯೋಃ ಎಂದರೆ ಎರಡು ರಥಗಳ ಎಂಬರ್ಥವು ಇಲ್ಲಿ ಸರಿಯಾಗಿ ಹೊಂದುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ತ್ವಾವಾನ್**—**' ವತುಪ್ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯೇ ಉಪಸಂಖ್ಯಾನಮ್ '** (ಪಾ. ಸೂ ೫-೨-೩೯-೧) ಎಂಬುದರಿಂದ ಸಾದೃಶ್ಯಾರ್ಥದಲ್ಲಿ ವತುಪ್ ಪ್ರತ್ಯಯ. ಯುಷ್ಮದ್+ವತ್ ಎಂದಿರುವಾಗ **' ಪ್ರತ್ಯಯೋತ್ತರಪದಯೋಶ್ಚ '** (ಪಾ ಸೂ. ೭-೨-೯೮) ಎಂಬುದರಿಂದ ಮಪರ್ಯಂತದವರೆಗೆ ತ್ವಾದೇಶಃ ತ್ವ+ಅದ್+ವತ್ ಎಂದಿರುವಾಗ **' ಅತೋ ಗುಣೇ '** (ಪಾ. ಸೂ ೬-೧-೯೭) ಎಂಬುದರಿಂದ ಪರರೂಪ **' ಆಸರ್ವನಾಮ್ನಃ '** (ಪಾ. ಸೂ. ೬-೩-೯೧) ದೃಕ್ ದೃಶ ವತು ಪರದಲ್ಲಿರುವಾಗ ಸರ್ವನಾಮಶಬ್ದಗಳಿಗೆ ಆತ್ವವು ಬರುತ್ತದೆ ಎಂಬುದರಿಂದ ವತುಪ್ ಪರದಲ್ಲಿರುವುದರಿಂದ ದಕಾರಕ್ಕೆ ಆತ್ವ. ತ್ವಾವತ್ ಶಬ್ದದ ಪ್ರಥಮಾಏಕವಚನದಲ್ಲಿ ನುಮಾಗಮ. **' ಅತ್ವಸಂತಸ್ಯ ಚಾಧಾತೋಃ '** (ಪಾ. ಸೂ. ೬-೪-೧೪) ಎಂಬುದರಿಂದ ದೀರ್ಘ. **' ಹಲ್ ಙ್ಯಾಭ್ಯೋ-'** ಎಂಬುದರಿಂದ ಸುಲೋಪ. **' ಸಂಯೋಗಾಂತಸ್ಯ-'** ಎಂಬುದರಿಂದ ತಲೋಪ. ತ್ವಾವಾನ್ ಎಂದು ರೂಪವಾಗುತ್ತದೆ. ವತುಪ್ ಪಿತ್ತಾದುದರಿಂದ **' ಅನುದಾತ್ತೌ ಸುಪ್ಪಿತೌ '** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಆಗ ಪ್ರಾತಿಪದಿಕಸ್ವರವು ಉಳಿಯುತ್ತದೆ. ಆದ್ಯುದಾತ್ತವಾದ ಪದವಾಗುತ್ತದೆ.

**ತ್ಮನಾ**—ಆತ್ಮನ್ ಶಬ್ದದ ತೃತೀಯಾ ಏಕವಚನರೂಪ. **' ಮಂತ್ರೇಷ್ವಾಙ್ಯಾದೇರಾತ್ಮನಃ '** (ಪಾ.ಸೂ. ೬-೪-೧೪೧) ಎಂಬುದರಿಂದ ಆದಿಯ ಆಕಾರಕ್ಕೆ ಲೋಪ.

**ಧೃಷ್ಣೋ**—ಞಿ ಧೃಷಾ ಪ್ರಾಗಲ್ಭ್ಯೇ ಧಾತು. ಸ್ವಾದಿ. **' ತ್ರಸಿ ಗೃಧಿ ಧೃಷಿ ಕ್ಷಿಪೇಃ ಕ್ನುಃ '** (ಪಾ. ಸೂ. ೩-೨-೧೪೦) ಎಂಬುದರಿಂದ ಕ್ನು ಪ್ರತ್ಯಯ. ನು ಉಳಿಯುತ್ತದೆ. **' ಷ್ಟುನಾ ಷ್ಟುಃ '** (ಪಾ. ಸೂ. ೮-೪-೪೧) ಎಂಬುದರಿಂದ ಷಕಾರದ ಪರದಲ್ಲಿರುವುದರಿಂದ ನುವಿಗೆ ಷ್ಟುತ್ವ. ಧೃಷ್ಣು ಶಬ್ದ. ಸಂಬುದ್ಧಿಯಲ್ಲಿ **' ಹ್ರಸ್ವಸ್ಯ ಗುಣಃ '** ಎಂಬುದರಿಂದ ಗುಣ. **' ಏಙ್ಹ್ರಸ್ವಾತ್ಸಂಬುದ್ಧೇಃ '** (ಪಾ. ಸೂ ೬-೧-೬೯) ಎಂಬುದರಿಂದ ಸುಲೋಪ. ಧೃಷ್ಣೋ ಎಂದು ರೂಪವಾಗುತ್ತದೆ. **' ಆಮಂತ್ರಿತಸ್ಯ ಚ '** ಎಂಬ ಆಷ್ಟಮಿಕಸೂತ್ರದಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಇಯಾನಃ**—ಈಙ್ ಗತೌ ಧಾತು. ದಿವಾದಿ. **' ಛಂದಸಿ ಲಿಟ್ '** (ಪಾ. ಸೂ. ೩-೨-೧೦೫) ಎಂಬುದರಿಂದ ಲಿಟ್. ಅದಕ್ಕೆ ಛಂದಸ್ಸಿನಲ್ಲಿ **' ಲಿಟಃ ಕಾನಜ್ವಾ '** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚ್ ಆದೇಶ. ಕಾನಚ್ಚಿನಲ್ಲಿ ಆನ ಉಳಿಯುತ್ತದೆ. ಇ+ಆನ ಎಂದಿರುವಾಗ **' ಅಚಿಶ್ನುಧಾತುಭ್ರುವಾಂ-'** (ಪಾ. ಸೂ. ೬-೪-೭೭) ಎಂಬುದರಿಂದ ಅಜಾದಿಪ್ರತ್ಯಯ ಪರದಲ್ಲಿರುವುದರಿಂದ ಇಯಙಾದೇಶ. **' ದ್ವಿರ್ವಚನಪ್ರಕರಣೇಛಂದಸಿ ವೇತಿವಕ್ತವ್ಯಮ್ '** ಎಂಬ ವಚನದಿಂದ ಲಿಣ್ಣಿಮಿತ್ತಕವಾಗಿ ಧಾತುವಿಗೆ ದ್ವಿತ್ವಾದಿಗಳು ಬರುವುದಿಲ್ಲ ಇಯಾನ ಶಬ್ದ. ಪ್ರಥಮಾಏಕವಚನದಲ್ಲಿ ಇಯಾನಃ ಎಂದು ರೂಪವಾಗುತ್ತದೆ. ಕಾನಚ್ ಚಿತ್ತಾದುದರಿಂದ **' ಚಿತಃ '** ಎಂಬುದರಿಂದ ಅಂತೋದಾತ್ತವಾಗುತ್ತದೆ.

**ಋಣೋಃ**—ಋಣ ಗತೌ ಧಾತು. ತನಾದಿ. ಲಙಿನಲ್ಲಿ **' ವ್ಯತ್ಯಯೋ ಬಹುಲಂ '** ಎಂಬುದರಿಂದ ತಿಪ್ಪಿಗೆ ಬದಲಾಗಿ ಸಿಪ್ ಬರುತ್ತದೆ. ಸಿಪ್ಪಿನಲ್ಲಿ **' ಇತಶ್ಚ '** (ಪಾ ಸೂ. ೩-೪-೧೦೦) ಎಂಬುದರಿಂದ ಇಕಾರಲೋಪ.

ಋಣ್+ಸ್ ಎಂದಿರುವಾಗ '**ತನಾದಿಕೃಞ್ಭ್ಯಉಃ**' (ಪಾ.ಸೂ. ೩-೧-೭೯) ಎಂಬುದರಿಂದ ಉವಿಕರಣ ಬರುತ್ತದೆ. ಋಣು+ಸ್ ಎಂದಿರುವಾಗ '**ಸಾರ್ವಧಾತುಕಾರ್ಧಧಾತುಕಯೋಃ**' (ಪಾ. ಸೂ. ೭-೩-೮೪) ಎಂಬುದರಿಂದ ಉಕಾರಕ್ಕೆ ಗುಣ. '**ಸಸಜುಷೋರುಃ**' (ಪಾ. ಸೂ. ೮-೨-೬೬) ಎಂಬುದರಿಂದ ವಿಭಕ್ತಿಯ ಸಕಾರಕ್ಕೆ ರುತ್ವ. '**ಖರವಸಾನ–**' ಎಂಬುದರಿಂದ ಅದಕ್ಕೆ ವಿಸರ್ಗ. '**ಬಹುಲಂಛಂದಸ್ಯಮಾಙ್ಯೋಗೇಽಪಿ**' (ಪಾ. ಸೂ. ೬–೪–೭೫) ಎಂಬುದರಿಂದ ಅಂಗಕ್ಕೆ ಲಙ್‌ನಿಮಿತ್ತಕವಾಗಿ ಅಡಾಗಮ ಬರುವುದಿಲ್ಲ. ಋಣೋಃ ಎಂದು ರೂಪವಾಗುತ್ತದೆ. ವಿಕರಣಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಕ್ಷಮ್**—'**ಅಕ್ಷಸ್ಯಾದೇವನಸ್ಯ**' (ಫಿ. ಸೂ. ೩೫) ಎಂಬುದರಿಂದ ಕ್ರೀಡನಾರ್ಥಕೋರದಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಚಕ್ರ್ಯೋಃ**—ಚಕ್ರ ಶಬ್ದದ ಷಷ್ಠೀದ್ವಿವಚನಾಂತದರೂಪ. ಇಲ್ಲಿ ಅಕಾರಕ್ಕೆ ಇಕಾರವು ಛಾಂದಸವಾಗಿ ಬಂದಿರುತ್ತದೆ. ‖ ೧೪ ‖

॥ ಸಂಹಿತಾಪಾಠಃ ॥

ಆ ಯದ್ದುವಃ ಶತಕ್ರತವಾ ಕಾಮಂ ಜರಿತೄಣಾಂ ।

ಋಣೋರಕ್ಷಂ ನ ಶಚೀಭಿಃ ‖ ೧೫ ‖

॥ ಪದಪಾಠಃ ॥

ಆ । ಯತ್ । ದುವಃ । ಶತಕ್ರತೋ ಇತಿ ಶತಽಕ್ರತೋ । ಆ । ಕಾಮಂ । ಜರಿತೄಣಾಂ ।

ಋಣೋಃ । ಅಕ್ಷಂ । ನ । ಶಚೀಭಿಃ ‖ ೧೫ ‖

॥ ಸಾಯಣಭಾಷ್ಯಂ ॥

**ಹೇ ಶತಕ್ರತೋ ಇಂದ್ರ ಯದ್ದುವೋ ಧನಂ ಕಾಮಿತಾರ್ಥರೂಪಮಾ ಸ್ತೋತೃಭಿರಾಪ್ತವ್ಯಮಸ್ತಿ ತಂ ಕಾಮಂ ಜರಿತೄಣಾಂ ಸ್ತೋತೄಣಾಮನುಗ್ರಹಾಯ ಆ ಋಣೋಃ । ಆನೀಯ ಪ್ರಕ್ಷಿಪಸಿ । ತತ್ರ ದೃಷ್ಟಾಂತಃ । ಶಚೀಭಿಃ ಕರ್ಮಭಿಃ ಶಕಟೋಚಿತವ್ಯಾಪಾರವಿಶೇಷೈರಕ್ಷಂ ನ । ಯಥಾಕ್ಷಂ ಪ್ರಕ್ಷಿಪಂತಿ ತದ್ವತ್ ‖ ಶಚೀಭಿಃ । ಶಚೀಶಬ್ದಃ ಶಾರ್ಙ್ಗರವಾದಿಙೀನಂತ ಆದ್ಯುದಾತ್ತಃ ‖ ಪಾ. ೪-೧-೭೩ ‖ ‖ ೩೦ ‖**

॥ ಪ್ರತಿಪದಾರ್ಥ ॥

**ಶತಕ್ರತೋ**—ಎಲೈ ಇಂದ್ರನೇ । **ಯದ್ದುವಃ**—ಯಾವ ಅಪೇಕ್ಷಿಸಿದ ಧನವನ್ನು । **ಆ**—(ನಿನ್ನ) ಭಕ್ತರು ಹೊಂದಬೇಕೋ । **ಕಾಮಂ**—ಇಷ್ಟಧನವನ್ನು । **ಜರಿತೃಣಾಂ**—ಸ್ತೋತ್ರಗಳ ಅನುಗ್ರಹಕ್ಕಾಗಿ । **ಶಚೀಭಿಃ**—(ಬಂಡಿಗಳ) ತಿರುಗುವ ವ್ಯಾಪಾರಗಳಿಂದ । **ಅಕ್ಷಂ ನ**—ಅಚ್ಚು ತಿರುಗಿಸಿ ಇಡುವಂತೆ । **ಆ ಋಣೋಃ**—ತಂದೊದಗಿಸು ।

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಧನವನ್ನು ನಿನ್ನ ಭಕ್ತರು ಹೊಂದಬೇಕೆಂದು ಅಪೇಕ್ಷಿಸುತ್ತಾರೋ ಆ ಇಷ್ಟವಾದ ಧನವನ್ನು ನಿನ್ನ ಸ್ತೋತ್ರಗಳ ಅನುಗ್ರಹಕ್ಕಾಗಿ ಬಂಡಿಗಳ ಇರಚಿಯು (ಅಚ್ಚು) ತನ್ನ ವ್ಯಾಪಾರಗಳಿಂದ ತಿರುಗಿಸಿ ಇಡುವಂತೆ ಅವರಿಗೆ ತಂದೊದಗಿಸು.

## English Translation.

O Satakratu (Indra), you bestow upon your praisers such wealth as they desire as the axle revolves with the acts (movements of the cart).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಸಹ ಉಪಮಾನವು ಸರಿಯಾಗಿ ಹೊಂದುವುದಿಲ್ಲ. ರಥಚಕ್ರಗಳ ಮಧ್ಯದಲ್ಲಿರುವ ಅಚ್ಚು ಯಾವರೀತಿ ಬೇಗಬೇಗನೆ ತಿರುಗುವುದೋ ಅದರಂತೆ ನನ್ನ ಇಷ್ಟಾರ್ಥಗಳನ್ನು ಬೇಗಬೇಗನೆ ಸಲ್ಲಿಸು ಎಂದು ಅಭಿಪ್ರಾಯವಿರಬಹುದು.

**ದುವಃ**—ಭಾಷ್ಯಕಾರರು ಈ ಶಬ್ದಕ್ಕೆ ಧನವೆಂದೂ, ಸ್ಕಂದಸ್ವಾಮಿಯು **ಪರಿಚರ್ಯಾ** ಎಂದೂ ಅರ್ಥ ವಿವರಣೆ ಮಾಡಿರುವರು. ವೆಂಕಟಮಾಧವರು ಸ್ಕಂದಸ್ವಾಮಿಯ **ಪರಿಚರಣಂ ಕರ್ಮ** ಎಂಬ ಅರ್ಥವನ್ನೇ ಅನುಮೋದಿಸಿರುವರು.

**ಜರಿತೃಣಾಂ—ಸ್ತೋತೃಣಾಂ** । ಸ್ತೋತ್ರಮಾಡುವವರ

**ಶಚೀಭಿಃ—ಕರ್ಮಭಿಃ । ಶಕಟೋಚಿತವ್ಯಾಪಾರವಿಶೇಷೈಃ ।**

ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಶಚೀ ಎಂಬ ಶಬ್ದವು ಪಠಿತವಾಗಿರುವುದರಿಂದ ಶಚೀಭಿಃ ಎಂದರೆ ಕರ್ಮಗಳಿಂದ, ಕೆಲಸಗಳಿಂದ. ಇಲ್ಲಿ ಚಕ್ರ್ಯೋಃ ಎಂಬ ಶಬ್ದಪ್ರಯೋಗವಿರುವುದರಿಂದ ಚಕ್ರಗಳ ಅಥವಾ ರಥದ ಕಾರ್ಯಗಳಿಂದ ಎಂದರೆ ವೇಗವಾಗಿ ಚಲಿಸುವ ಕಾರ್ಯಗಳಿಂದ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಶಚೀಭಿಃ**—**'ಶಾರ್ಙ್ಗರವಾದಿಭ್ಯೋ ಙೀನ್'** (ಪಾ. ಸೂ. ೪-೧-೭೩) ಎಂಬುದರಿಂದ ಸ್ತ್ರೀತ್ವದಲ್ಲಿ ಙೀನ್. ಶಚಿ ಶಬ್ದವು ಶಾರ್ಙ್ಗರವಾದಿಗಣದಲ್ಲಿ ಪಠಿತವಾಗಿದೆ. ಶಚೀ ಶಬ್ದ, ತೃತೀಯಾಬಹುವಚನದಲ್ಲಿ ಭಿಸ್‌ಪ್ರತ್ಯಯ

ರುತ್ವವಿಸರ್ಗಗಳು ಬಂದರೆ ಶಚೀಃ ಎಂದು ರೂಪವಾಗುತ್ತದೆ. ಙೀಷ್ ಪ್ರತ್ಯಯ ಙಿತ್ತಾದುದರಿಂದ **' ಞ್ನಿತ್ಯಾದಿರ್ನಿತ್ಯಂ '** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಪ್ರತ್ಯಯವು (ಭಿಸ್) **' ಅನುದಾತ್ತೌ ಸುಪ್ಪಿತೌ '** ಎಂಬುದರಿಂದ ಅನುದಾತ್ತ. **' ಉದಾತ್ತಾದನುದಾತ್ತಸ್ಯ ಸ್ವರಿತಃ '** ಎಂಬುದರಿಂದ ಚಕಾರೋತ್ತರ ಈಕಾರ ಸ್ವರಿತ.

**ಶತಕ್ರತೋ**— **' ಆಮಂತ್ರಿತಸ್ಯಚ '** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ.

**ಋಣೋಃ**— ಹಿಂದಿನ ಸೂಕ್ತದಲ್ಲಿ ವ್ಯಾಖ್ಯಾತವಾಗಿದೆ. ಪಾದದ ಆದಿಯಲ್ಲಿರುವುದರಿಂದ **' ಅಪಾದಾದೌ '** ಎಂದು ನಿಷೇಧಮಾಡಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ.

**ಜರಿತೄಣಾಂ**— ಹತ್ತನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಷಷ್ಠೀ ಬಹುವಚನದ ರೂಪ. ‖ ೧೫ ‖

‖ ಸಂಹಿತಾಪಾಠಃ ‖

ಶಶ್ವದಿನ್ದ್ರಃ ಪೋಪ್ರುಥದ್ಭಿರ್ಜಿಗಾಯ ನಾನದದ್ಭಿಃ ಶಾಶ್ವಸದ್ಭಿರ್ಧನಾನಿ ।
ಸ ನೋ ಹಿರಣ್ಯರಥಂ ದಂಸನಾವಾನ್ತ್ಸ ನಃ ಸನಿತಾ ಸನಯೇ ಸ ನೋಽದಾತ್ ‖ ೧೬ ‖

‖ ಪದಪಾಠಃ ‖

**ಶಶ್ವತ್ । ಇನ್ದ್ರಃ । ಪೋಪ್ರುಥತ್ಽಭಿಃ । ಜಿಗಾಯ । ನಾನದತ್ಽಭಿಃ । ಶಾಶ್ವಸತ್ಽಭಿಃ । ಧನಾನಿ ।**
**ಸಃ । ನಃ । ಹಿರಣ್ಯಽರಥಂ । ದಂಸನಾಽವಾನ್ । ಸಃ । ನಃ । ಸನಿತಾ । ಸನಯೇ । ಸಃ । ನಃ । ಅದಾತ್ ‖ ೧೬ ‖**

|| ಸಾಯಣಭಾಷ್ಯಂ ||

ತುಷ್ಟೇನೇಂದ್ರೇಣ ದತ್ತಂ ಹಿರಣ್ಯರಥಮನಯಾ ಪ್ರತಿಜಗ್ರಾಹ । ತಥಾ ಚ ಬ್ರಾಹ್ಮಣಂ । ತಸ್ಮಾ ಇಂದ್ರಃ ಸ್ತೂಯಮಾನಃ ಪ್ರೀತೋ ಮನಸಾ ಹಿರಣ್ಯರಥಂ ದದೌ ತಮೇತಯಾ ಪ್ರತೀಯಾಯ ಶಶ್ವದಿಂದ್ರ ಇತಿ । ಐ. ಬ್ರಾ. ೭-೧೬ । ಇತಿ ॥ ಇಂದ್ರಃ ಶಶ್ವತ್ಸರ್ವದಾ ಧನಾನಿ ವೈರಿಸಂಬಂಧೀನಿ ಜಿಗಾಯ । ಜಿತವಾನ್ । ಅಶ್ವೈರಿತಿ ಶೇಷಃ। ಕೀದೃಶೈಃ। ಪೋಪ್ರುಥದ್ಭಿಃ । ಘಾಸಭಕ್ಷಣಾನಂತರಭಾವಿನಮೋಷ್ಠಶಬ್ದಂ ಕುರ್ವದ್ಭಿಃ ನಾನದದ್ಭಿರ್ನಾದಮಾಸ್ಯಗತಂ ಹೇಷಾಶಬ್ದಂ ಕುರ್ವದ್ಭಿಃ ಶಾಶ್ವಸದ್ಭಿಃ ಪುನಃಪುನರ್ಭೃಶಂ ವಾ ಶ್ವಸದ್ಭಿಃ । ದಂಸನಾವಾನ್ ಕರ್ಮವಾನ್ ಸನಿತಾ ದಾತಾ ಸ ಇಂದ್ರೋ ನೋಽಸ್ಮಾಕಂ ಸನಯೇ ಸಂಭಜನಾರ್ಥಂ ಹಿರಣ್ಯರಥಂ ಸುವರ್ಣೇನ ನಿರ್ಮಿತಂ ರಥಮದಾತ್ । ದತ್ತವಾನ್ । ಸ ನಃ ಸ ನ ಇತಿ ದ್ವಿರುಕ್ತಿರಾದರಾರ್ಥಂ ॥ ಪೋಪ್ರುಥದ್ಭಿಃ । ಪ್ರೋಥೃ ಪರ್ಯಾಪ್ತೌ । ಅಸ್ಮಾದ್ಯಙ್ಲುಕ್ಯಭ್ಯಾಸಹಲಾದಿಶೇಷೌ । ಹ್ರಸ್ವಃ । ಪಾ. ೭-೪-೫೯ । ಇತಿ ಹ್ರಸ್ವತ್ವೇ ಕೃತೇ ಗುಣೋ ಯಙ್ಲುಕೋಃ । ಪಾ ೭-೪-೮೨ । ಇತಿ ಗುಣಃ । ಧಾತೋರುಪಧಾಯಾ ಉತ್ವಂ ಛಾಂದಸಂ । ಅಸ್ಮಾದ್ಯಙ್ಲುಗಂತಾಚ್ಛತರ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಜಿಗಾಯ । ಜಿ ಜಯೇ । ಲಿಟೋ ಣಲಿ ವೃದ್ಧಿಃ । ದ್ವಿರ್ವಚನೇಽಚೀತಿ ಸ್ಥಾನಿವದ್ಭಾವಾಜ್ಜಿ ಇತ್ಯಸ್ಯ। ದ್ವಿರ್ವಚನಂ । ಸನ್‌ಲಿಟೋರ್ಜೇಃ। ಪಾ. ೭-೩-೫೭। ಇತ್ಯಭ್ಯಾಸಾದುತ್ತರಸ್ಯ ಕುತ್ವಂ । ನಾನದದ್ಭಿಃ । ಣದ ಅವ್ಯಕ್ತೇ ಶಬ್ದೇ । ಪೂರ್ವವದ್ಯಙ್ಲುಕಿ ದೀರ್ಘೋಽಕಿತ ಇತ್ಯಭ್ಯಾಸಸ್ಯ ದೀರ್ಘಃ । ಪೂರ್ವವದಾದ್ಯುದಾತ್ತತ್ವಂ । ಶಾಶ್ವಸದ್ಭಿಃ । ಶ್ವಸ ಪ್ರಾಣನೇ । ಅನ್ಯತ್ಸರ್ವಂ ಪೂರ್ವವತ್ । ಹಿರಣ್ಯರಥಂ । ಸಮಾಸಸ್ಯೇತ್ಯಂತೋದಾತ್ತತ್ವಂ । ಅದಾತ್ । ಗಾತಿಸ್ಥೇತಿ ಸಿಚೋ ಲುಕ್ । ದಂಸನಾವಾನ್ । ದಂಸಶಬ್ದ ಅಪ್ನೋ ದಂಸೋ ವೇಷ ಇತಿ ಕರ್ಮನಾಮಸು ಪಠಿತಃ । ದಂಸ ಏವ ದಂಸನಾ । ತದಸ್ಯಾಸ್ತೀತಿ ಮತುಪ್ । ದಸ್ಯತೇಽನೇನೇತಿ ದಂಸನಾ ॥

|| ಪ್ರತಿಪದಾರ್ಥ ||

**ಇಂದ್ರಃ**—ಇಂದ್ರನು । **ಪೋಪ್ರುಥದ್ಭಿಃ**—ಅಗಿಯುವ ಶಬ್ದವನ್ನು ಮಾಡುತ್ತಲೂ । **ನಾನದದ್ಭಿಃ**—ಹೇಷಾರವವನ್ನೂ ಮಾಡುತ್ತಲೂ (ಇರುವ ಕುದುರೆಗಳ ಸಹಾಯದಿಂದ) । **ಧನಾನಿ**—(ಶತ್ರುಗಳ) ಐಶ್ವರ್ಯಗಳನ್ನು । **ಶಶ್ವತ್**—ಯಾವಾಗಲೂ । **ಜಿಗಾಯ**—ಗೆದ್ದಿರುತ್ತಾನೆ । **ದಂಸನಾವಾನ್**—ಕರ್ಮಯುಕ್ತನಾಗಿಯೂ । **ಸನಿತಾ**—ದಾತನಾಗಿಯೂ ಇರುವ । **ಸಃ**—ಆ ಇಂದ್ರನು । **ನಃ**—ನಮಗೆ । **ಸನಯೇ**—ಪಾರಿತೋಷಿಕವಾಗಿ । **ಹಿರಣ್ಯರಥಂ**—ಸುವರ್ಣನಿರ್ಮಿತವಾದ ರಥವನ್ನು । **ಅದಾತ್**—ಕೊಟ್ಟನು ।

|| ಭಾವಾರ್ಥ ||

ಇಂದ್ರನು ಅಗಿಯುವ ಶಬ್ದವನ್ನು ಮಾಡುತ್ತಲೂ, ಕೆನೆಯುವ ಶಬ್ದವನ್ನು ಮಾಡುತ್ತಲೂ ಮತ್ತು ಗಟ್ಟಿಯಾಗಿ ಉಸಿರು ಬಿಡುತ್ತಲೂ ಇರುವ ಕುದುರೆಗಳ ಸಹಾಯದಿಂದ ಶತ್ರುಗಳ ಐಶ್ವರ್ಯಗಳನ್ನು, ಯಾವಾಗಲೂ ಕರ್ಮಯುಕ್ತನಾಗಿಯೂ ದಾತನಾಗಿಯೂ ಇರುವ ಆ ಇಂದ್ರನು ನಮಗೆ ಪಾರಿತೋಷಿಕವಾಗಿ ಸುವರ್ಣನಿರ್ಮಿತವಾದ ರಥವನ್ನು ಕೊಟ್ಟನು.

## English Translation.

Indra has always won riches (from his enemies) with the help of champing, neighing and snorting horses; he the performer of brave deeds, the giver of bounties, has given us a golden chariot as a present.

॥ ವಿಶೇಷವಿಷಯಗಳು ॥

ಶುನಃಶೇಪನು ಇಂದ್ರನನ್ನು ಸ್ತುತಿಸಲಾಗಿ ಇಂದ್ರನು ಸಂತುಷ್ಟನಾಗಿ ಶುನಶ್ಶೇಪನಿಗೆ ಸುವರ್ಣನಿರ್ಮಿತವಾದ ರಥವನ್ನು ಕೊಟ್ಟನು. ಅದನ್ನು ಶುನಶ್ಶೇಪನು ಈ ಋಕ್ಕಿನಲ್ಲಿ ಪ್ರಶಂಸೆ ಮಾಡಿರುವನು. ಈ ವಿಷಯದಲ್ಲಿ **ತಸ್ಮಾ ಇಂದ್ರ ಸ್ತೂಯಮಾನಃ ಪ್ರೀತೋ ಮನಸಾ ಹಿರಣ್ಯರಥಂ ದದೌ ತಮೇತಯಾ ಪ್ರತೀಯಾಯ ಶಶ್ವದಿಂದ್ರ ಇತಿ** (ಐ. ಬ್ರಾ. ೭-೧೬.) ಎಂದು ಐತರೇಯ ಬ್ರಾಹ್ಮಣವಾಕ್ಯವಿರುವುದು. ಇದರ ಅರ್ಥವನ್ನು ನಾವು ಹಿಂದೆಯೇ (ಶುನಶ್ಶೇಪೋಪಾಖ್ಯಾನದಲ್ಲಿ) ವಿವರಿಸಿರುವೆವು.

**ಶಶ್ವತ್—ಸರ್ವದಾ** । ಯಾವಾಗಲೂ

**ಪ್ರೋಥದ್ಭಿಃ—ಪ್ರೋಥೃ ಪರ್ಯಾಪ್ತೌ । ಘಾಸಭಕ್ಷಣಾನಂತರಭಾವಿನಮೋಷ್ಠಶಬ್ದಂ ಕುರ್ವದ್ಭಿಃ । ಅತ್ಯಂತಂ ಸಮರ್ಥೈರಶ್ವೈಃ ।** ಆಹಾರಭಕ್ಷಣಾನಂತರ ತಮ್ಮ ತೃಪ್ತಿಯನ್ನು ಸೂಚಿಸುವ ಓಷ್ಠಶಬ್ದವನ್ನು ಮಾಡುತ್ತಿರುವ ಅತ್ಯಂತ ಸಮರ್ಥವಾದ ಕುದುರೆಗಳಿಂದ ಎಂದಭಿಪ್ರಾಯವು. ಈ ಋಕ್ಕಿನಲ್ಲಿ ಅಶ್ವಶಬ್ದವನ್ನು ಸೂಚಿಸುವ ಯಾವ ಶಬ್ದವೂ ಇಲ್ಲದಿದ್ದರೂ **ನಾನದದ್ಭಿಃ ಶಾಶ್ವಸದ್ಭಿಃ** ಮೊದಲಾದ ಅಶ್ವಶಬ್ದಗಳನ್ನು ವಿವರಿಸುವ ಶಬ್ದಗಳಿರುವುದರಿಂದ **ಅಶ್ವೈಃ** ಎಂಬ ಶಬ್ದವನ್ನು ಇಲ್ಲಿ ಅಧ್ಯಾಹಾರಮಾಡಿಕೊಳ್ಳಬೇಕು.

**ನಾನದದ್ಭಿಃ—ಣದ ಅವ್ಯಕ್ತೇ ಶಬ್ದೇ । ನಾದಮಾಸ್ಯಗತಂ ಹೇಷಾಶಬ್ದಂ ಕುರ್ವದ್ಭಿಃ ।** ಕೆನೆಯುತ್ತಿರುವ, ಹೇಷಾಶಬ್ದವನ್ನು ಮಾಡುತ್ತಿರುವ neighing horses.

**ಶಾಶ್ವಸದ್ಭಿಃ—ಶ್ವಸ ಪ್ರಾಣನೇ । ಪುನಃ ಪುನಃಭೃಶಂ ಶ್ವಸದ್ಭಿಃ ।** ವೇಗವಾದ ಗಮನವುಳ್ಳದ್ದರಿಂದ ಬೇಗಬೇಗನೆ ಉಸಿರನ್ನು ಬಿಡುತ್ತಿರುವ, snorting and panting.

**ಧನಾನಿ**—ಈ ಋಕ್ಕಿನಲ್ಲಿ ಜಿಗಾಯ ಗೆದ್ದುತಂದನು ಎಂಬ ಶಬ್ದಪ್ರಯೋಗವಿರುವುದರಿಂದ ಧನಾನಿ ಎಂದರೆ ಶತ್ರುಗಳಲ್ಲಿದ್ದ ಧನವನ್ನು ಎಂದಭಿಪ್ರಾಯವು

**ಹಿರಣ್ಯರಥಂ**—ಚಿನ್ನದಿಂದಮಾಡಲ್ಪಟ್ಟ ಉತ್ತಮವಾದ ರಥವನ್ನು

**ದಂಸನಾವಾನ್—ಕರ್ಮವಾನ್ । ದಂಸ ಇತಿ ಕರ್ಮನಾಮ** ( ನಿ. ೩-೧ ) ಸಾಹಸಕೃತ್ಯಗಳನ್ನು **ಪಶ್ಯತೀಽನೇನೇತಿ ದಂಸನಾ** । ಮಾಡುವವನು, ಪರಾಕ್ರಮಶಾಲಿಯು.

**ಸನಿತಾ—ದಾತಾ** । ಕೊಡುವವನು.

**ಸನಯೇ—ಸಂಭಜನಾರ್ಥಂ** ನಮ್ಮ ಲಾಭಕ್ಕಾಗಿ, ನಮ್ಮ ಪ್ರಾಪ್ತಿಗಾಗಿ.

ಈ ಋಕ್ಕಿನಲ್ಲಿ ಸಃ ನಃ ಎಂಬ ಶಬ್ದಗಳು ಎರಡಾವರ್ತಿ ಪಠಿತವಾಗಿರುವವು. ಈ ವಿಧವಾದ ದ್ವಿರುಕ್ತಿಯು ದಾತನಾದ ಇಂದ್ರನ ಆದರಾತಿಶಯವನ್ನು ಸೂಚಿಸುವುದಕ್ಕಾಗಿ ಪಠಿತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಪೋಪ್ರುಥದ್ಭಿಃ**—ಪ್ರೋಥೃ ಪರ್ಯಾಪ್ತೌ ಧಾತು. '**ಯಙೋಽಚಿ ಚ**' (ಪಾ. ಸೂ. ೨-೪-೭೪) ಎಂಬುದರಿಂದ ಅತಿಶಯಾರ್ಥದಲ್ಲಿ ಯಙ್‌ಲುಕ್. '**ಸನ್ಯಙೋಃ**' (ಪಾ.ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. '**ಹಲಾದಿಃ ಶೇಷಃ**' (ಪಾ. ಸೂ. ೭-೪-೬೦) ಎಂಬುದರಿಂದ ಅಭ್ಯಾಸದ ಆದಿಹಲ್ ವರ್ಜವಾಗಿ ಉಳಿದವುಗಳಿಗೆ ಲೋಪ. '**ಹ್ರಸ್ವಃ**' (ಪಾ ಸೂ. ೭-೪-೫೯) ಅಭ್ಯಾಸದ ಅಚ್ಚಿಗೆ ಹ್ರಸ್ವ ಬರುತ್ತದೆ ಎಂಬುದರಿಂದ ಹ್ರಸ್ವ. '**ಏಚ ಇಕ್ ಹ್ರಸ್ವಾದೇಶೇ**' (ಪಾ. ಸೂ. ೧-೧-೪೮) ಎಂಬುದರಿಂದ ಓಕಾರಕ್ಕೆ ಉಕಾರರೂಪ ಹ್ರಸ್ವ. ಹ್ರಸ್ವ ಬಂದಮೇಲೆ ಪುಪ್ರೋಥ ಎಂದಿರುವಾಗ '**ಗುಣೋ ಯಙ್‌ಲುಕೋಃ**' (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಪುನಃ ಗುಣ. ಪೋಪ್ರೋಥೆ ಎಂಬಲ್ಲಿ ಧಾತುವಿನ ಉಪಧಾಭೂತವಾದ ಓಕಾರಕ್ಕೆ ಛಾಂದಸವಾಗಿ ಉತ್ವ. ಪೋಪ್ರುಥ ಎಂಬುದು ಯಙಿಗೆ ಸ್ಥಾನಿವದ್ಭಾವದಿಂದ ಯಙಂತವಾದುದರಿಂದ '**ಸನಾದ್ಯಂತಾ ಧಾತವಃ**' ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ '**ಲಟಃಶತೃಶಾನಚೌ-**' ಎಂಬುದರಿಂದ ಶತೃ ಪ್ರತ್ಯಯ. ಪೋಪ್ರುಥತ್ ಶಬ್ದ. ತೃತೀಯಾಬಹುವಚನದಲ್ಲಿ ಪೋಪ್ರುಥದ್ಭಿಃ ಎಂದು ರೂಪವಾಗುತ್ತದೆ. '**ಅಭ್ಯಸ್ತಾನಾಮಾದಿಃ**' (ಪಾ. ಸೂ. ೬-೧-೧೭೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜಿಗಾಯ—**ಜಿ ಜಯೇ ಧಾತು. ಭ್ವಾದಿ. ಲಿಟ್ ಪ್ರಥಮಪುರುಷದಲ್ಲಿ ಣಲ್. ಣಿತ್ತಾದುದರಿಂದ '**ಅಚೋಞ್ಣಿತಿ**' ಎಂಬುದರಿಂದ ವೃದ್ಧಿ '**ದ್ವಿರ್ವಚನೇಽಚಿ**' (ಪಾ. ಸೂ. ೧-೧-೫೯) ದ್ವಿತ್ವನಿಮಿತ್ತಕವಾದ ಅಚ್ ಪರದಲ್ಲಿರುವಾಗ ಅಚ್ ಸ್ಥಾನಕ್ಕೆ ಬಂದಿರುವ ಆದೇಶಕ್ಕೆ ಸ್ಥಾನಿವದ್ಭಾವ ಬರುತ್ತದೆ ಎಂಬುದರಿಂದ ಇಲ್ಲಿ ವೃದ್ಧಿ ಬಂದರೂ ಸ್ಥಾನಿವದ್ಭಾವವಾದ ಜಿ ಶಬ್ದಕ್ಕೆ ಲಿಣ್ಣಿಮಿತ್ತಕವಾದ ದ್ವಿತ್ವ. '**ಏಚೋಽಯವಾಯಾವಃ**' ಎಂಬುದರಿಂದ ಐಕಾರಕ್ಕೆ ಆಯಾದೇಶ. ಜಿಜಾಯ ಎಂದಿರುವಾಗ '**ಸನ್‌ಲಿಟೋರ್ಜೇಃ**' (ಪಾ. ಸೂ. ೭-೩-೫೭) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತುವಿನ ಜಕಾರಕ್ಕೆ ಕುತ್ವದಿಂದ ಗಕಾರಾದೇಶ. ಜಿಗಾಯ ಎಂದು ರೂಪಸಿದ್ಧಿಯಾಗುತ್ತದೆ.

**ನಾನದದ್ಭಿಃ—**ಣದ ಅವ್ಯಕ್ತೇ ಶಬ್ದೇ. ಧಾತು. ಭ್ವಾದಿ. '**ಣೋ ನಃ**' ಎಂಬುದರಿಂದ ಧಾತುವಿನ ಆದಿ ಣಕಾರಕ್ಕೆ ನತ್ವ. ಹಿಂದಿನಂತೆಯೇ (ಪೋಪ್ರುಥದ್ಭಿಃ) ಯಙ್‌ಲುಕ್. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿ ಶೇಷ ಬಂದಮೇಲೆ '**ದೀರ್ಘೋಽಕಿತಃ**' (ಪಾ. ಸೂ. ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ನಾನದ್ ಎಂಬ ಯಙ್‌ಲುಗಂತದಮೇಲೆ ಹಿಂದಿನಂತೆ ಶತೃಪ್ರತ್ಯಯ. ತೃತೀಯಾ ಬಹುವಚನದರೂಪ. ಹಿಂದಿನಂತೆ ಆದ್ಯುದಾತ್ತಸ್ವರ ಬರುತ್ತದೆ.

**ಶಾಶ್ವಸದ್ಭಿಃ**—ಶ್ವಸ ಪ್ರಾಣನೇ ಧಾತು. ಅದಾದಿ. ಹಿಂದಿನಂತೆ ಪ್ರಕ್ರಿಯಾ ತಿಳಿಯಬೇಕು.

**ಹಿರಣ್ಯರಥಮ್—**ಹಿರಣ್ಯಸ್ಯ ರಥಃ ಹಿರಣ್ಯರಥಃ ತಂ ಹಿರಣ್ಯರಥಮ್. ಷಷ್ಠೀತತ್ಪುರುಷಸಮಾಸ. '**ಸಮಾಸಸ್ಯ**' (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅದಾತ್**—ಡುದಾಞ್ ದಾನೇ. ಧಾತು ಜುಹೋತ್ಯಾದಿ. '**ಆದಿರ್ಞಿಟುಡವಃ**' (ಪಾ. ಸೂ. ೧-೩-೫) ಎಂಬುದರಿಂದ ಆದಿಯಲ್ಲಿರುವ ಡು ಇತ್ತಾಗುತ್ತದೆ. ಲುಙಿನಲ್ಲಿ ಪ್ರಥಮಪುರುಷಏಕವಚನ. '**ಇತಶ್ಚ**' ಎಂಬುದರಿಂದ ಅದರ ಇಕಾರಕ್ಕೆ ಲೋಪ. '**ಚ್ಲಿಲುಙಿ**' ಎಂಬುದರಿಂದ ಪ್ರಾಪ್ತವಾದ ಚ್ಲಿಗೆ '**ಚ್ಲೇ ಸಿಚ್**' ಎಂಬುದರಿಂದ ಸಿಚಾದೇಶ. '**ಗಾತಿಸ್ಥಾಘುಪಾ-**' (ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. '**ಲುಙ್‌ಲಙ್ ಲೃಙ್-**' ಎಂಬುದರಿಂದ ಲುಙ್‌ಪರದಲ್ಲಿರುವುದರಿಂದ ಅಂಗಕ್ಕೆ ಅಡಾಗಮ. ಅದಾತ್ ಎಂದು ರೂಪಸಿದ್ಧಿಯಾಗುತ್ತದೆ.

**ದಂಸನಾವಾನ್**—ದಂಸ ಶಬ್ದವು '**ಅಪ್ನಃ ದಂಸಃ ವೇಷಃ**' (ನಿರುಕ್ತ. ೨-೧-೩) ಎಂದು ಕರ್ಮಪರ್ಯಾಯದಲ್ಲಿ ಪಠಿತವಾಗಿದೆ. ದಂಸ ಏವ ದಂಸನಾ. '**ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್**' (ಪಾ. ಸೂ. ೫-೨-೯೪) ಎಂಬುದರಿಂದ ದಂಸನಾ ಶಬ್ದದ ಮೇಲೆ ಮತುಪ್. '**ಮಾದುಪಧಾಯಾಶ್ಚ**' (ಪಾ. ಸೂ. ೮-೨-೪) ಎಂಬುದರಿಂದ ಆಕಾರದ ಪರದಲ್ಲಿರುವುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಅಥವಾ ದಸ್ಯತೇ ಅನೇನ ಇತಿ ದಂಸನಾ. ಕರಣಾರ್ಥದಲ್ಲಿ ಲ್ಯುಟ್. '**ಯುವೋರನಾಕೌ**' ಎಂಬುದರಿಂದ ಅದಕ್ಕೆ ಅನಾದೇಶ. ಅದರ ಮೇಲೆ ಹಿಂದಿನಂತೆ ಮತುಪ್. ಪ್ರಥಮಾ ಸುಪರದಲ್ಲಿರುವಾಗ '**ಉಗಿದಚಾಂ-**' (ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ. '**ಅತ್ವಸಂತಸ್ಯ-**' (ಪಾ. ಸೂ. ೬-೪-೧೪) ಎಂಬುದರಿಂದ ಉಪಧಾದೀರ್ಘ. ಹಲ್‌ಙ್ಯಾದಿ ಸೂತ್ರದಿಂದ ಸುಲೋಪ. ಸಂಯೋಗಾಂತಲೋಪದಿಂದ ತಲೋಪ. ದಂಸನಾವಾನ್ ಎಂದು ರೂಪಸಿದ್ಧಿಯಾಗುತ್ತದೆ. ॥ ೧೬ ॥

॥ ಸಂಹಿತಾಪಾಠಃ ॥

ಆಶ್ವಿನಾವಶ್ವಾವತ್ಯೇಷಾ ಯಾತಂ ಶವೀರಯಾ ।

ಗೋಮದ್ದಸ್ರಾ ಹಿರಣ್ಯವತ್ ॥ ೧೭ ॥

॥ ಪದಪಾಠಃ ॥

ಆ । ಅಶ್ವಿನಾ । ಅಶ್ವಽವತ್ಯಾ । ಇಷಾ । ಯಾತಂ । ಶವೀರಯಾ ।

ಗೋಽಮತ್ । ದಸ್ರಾ । ಹಿರಣ್ಯಽವತ್ ॥ ೧೭ ॥

॥ ಸಾಯಣಭಾಷ್ಯಂ ॥

ಪ್ರಾತರನುವಾಕೆ ಆಶ್ವಿನೇ ಕ್ರತೌ ಗಾಯತ್ರೇ ಛಂದಸ್ಯಾಶ್ವಿನಾಶ್ವಾವತ್ಯೇತಿ ತೃಚಃ । ಅಥಾಶ್ವಿನ ಇತಿ ಖಂಡೇಽಶ್ವಿನಾ ಯಜ್ವರೀರಿಷ ಆಶ್ವಿನಾವಶ್ವಾವತ್ಯಾ । ಆ. ೪-೧೫ । ಇತಿ ಸೂತ್ರಿತಂ ।

ಇಂದ್ರೇಣ ಪ್ರೇರಿತಃ ಶುನಃಶೇಫೋಽಶ್ವಿನೌ ತುಷ್ಟಾವ । ತಥಾ ಚ ಬ್ರಾಹ್ಮಣಂ । ತಮಿಂದ್ರ ಉವಾಚಾಶ್ವಿನೌ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸೋಽಶ್ವಿನೌ ತುಷ್ಟಾವಾತ ಉತ್ತರೇಣ ತೃಚೇನ । ಐ. ಬ್ರಾ. ೭-೧೬ । ಇತಿ ॥ ಹೇ ಅಶ್ವಿನೌ ಅಶ್ವಾವತ್ಯಾ ಬಹುಭಿರಶ್ವೈರ್ಯುಕ್ತಯಾ ಶವೀರಯಾ ಪ್ರೇರ್ಯಮಾಣಯೇಷಾನ್ನೇನ ಸಹ ಆ ಯಾತಂ । ಅಸ್ಮಿನ್ಕರ್ಮಣ್ಯಾಗಚ್ಛತಂ । ಹೇ ದಸ್ರಾ ಅಶ್ವಿನೌ ಯುವಯೋಃ ಪ್ರಸಾದಾದ್ಗೋಮದ್ಬಹುಭಿರ್ಗೋಭಿರ್ಯುಕ್ತಂ । ಹಿರಣ್ಯವದ್ಬಹುನಾ ಹಿರಣ್ಯೇನ ಯುಕ್ತಮಸ್ಮದೀಯಂ ಗೃಹಮಸ್ತ್ವಿತಿ ಶೇಷಃ ॥ ಅಶ್ವಾವತ್ಯಾ । ಮಂತ್ರೇ ಸೋಮಾಶ್ವೇಂದ್ರಿಯವಿಶ್ವದೇವ್ಯಸ್ಯ ಮತೌ । ಪಾ. ೬-೩-೧೩೧ । ಇತಿ ದೀರ್ಘತ್ವಂ । ಇಷಾ । ಸಾವೇಕಾಚ ಇತಿ ತೃತೀಯಾಯಾ ಉದಾತ್ತತ್ವಂ । ಯಾತಂ । ಯಾ ಪ್ರಾಪಣೇ । ಲೋಟಿ ತಸಸ್ತಂ । ಅದಾದಿತ್ವಾಚ್ಛಪೋ ಲುಕ್ । ಶವೀರಯಾ । ಶು ಗತೌ । ಕೃಶೄಪೄಕಟಿಪಟಿಶೌಟಿಭ್ಯ ಈರನ್ । ಉ. ೪. ೩೦ । ಇತೀರನ್ಪ್ರತ್ಯಯೋ ಬಹುಲವಚನಾದಸ್ಮಾದಪಿ ಭವತಿ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಶ್ವಿನೌ**—ಎಲೈ ಅಶ್ವಿದೇವತೆಗಳೇ । **ಅಶ್ವಾವತ್ಯಾ**—(ಅನೇಕ) ಅಶ್ವಗಳಿಂದ ಹೊತ್ತುತರಲ್ಪಟ್ಟದ್ದೂ । **ಶವೀರಯಾ**--ಪ್ರೇರಿಸಲ್ಪಡತಕ್ಕದ್ದೂ ಆದ । **ಇಷಾ**—ಅನ್ನದೊಂದಿಗೆ । **ಆ ಯಾತಂ**—(ಈ ಯಜ್ಞಕರ್ಮಕ್ಕೆ) ಬನ್ನಿರಿ । **ದಸ್ರಾ**—ಎಲೈ ಅಶ್ವಿದೇವತೆಗಳೇ, (ನಿಮ್ಮ ಅನುಗ್ರಹದಿಂದ ನಮ್ಮ ಗೃಹವು) । **ಗೋಮತ್**—ಗೋವುಗಳಿಂದ ಕೂಡಿದುದಾಗಿಯೂ । **ಹಿರಣ್ಯವತ್**—ಹೆಚ್ಚು ಸುವರ್ಣದಿಂದ ಕೂಡಿದುದಾಗಿಯೂ (ಆಗಲಿ) ॥

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಶ್ವಗಳಿಂದ ಹೊತ್ತು ತರಲ್ಪಟ್ಟ ವೃಷ್ಟ್ಯಾನ್ನಗಳೊಡನೆ ಕೂಡಿಕೊಂಡು ನಮ್ಮ ಈ ಯಜ್ಞಕರ್ಮಕ್ಕೆ ದಯಮಾಡಿ. ಎಲೈ ಅಶ್ವಿನೀದೇವತೆಗಳೇ, ನಮ್ಮ ಈ ಗೃಹವು ನಿಮ್ಮ ಅನುಗ್ರಹದಿಂದ ಅಧಿಕವಾದ ಗೋವುಗಳಿಂದಲೂ ಸುವರ್ಣದಿಂದಲೂ ಕೂಡಿದುದಾಗಿ ಆಗಲಿ.

## English Translation.

Aswins, come hither with food borne on fast moving horses; Dasras, (destroyers of foes) let our dwelling be filled with cattle and with gold.

॥ ವಿಶೇಷವಿಷಯಗಳು ॥

ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಗಾಯತ್ರೀ ಛಂದಸ್ಸಿನ ಋಕ್ಕುಗಳನ್ನು ಪಠಿಸುವಾಗ **ಅಶ್ವಿನಾವತ್ಯಾ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ತೃಚ) ಪಠಿಸಬೇಕೆಂದು ಅಶ್ವಲಾಯನ

ಸೂತ್ರದ **ಅಥಾಶ್ವಿನ** ಎಂಬ ಖಂಡದಲ್ಲಿ **ಅಶ್ವಿನಾ ಯಜ್ವರೀರಿಷ ಆಶ್ವಿನಾವಶ್ವಾವತ್ಯಾ** ಎಂಬ ಸೂತ್ರದಿಂದ ವಿವೃತ ವಾಗಿರುವುದು (ಆ. ೪–೧೫).

ಶುನಶ್ಶೇಪನು ಇಂದ್ರನನ್ನು ಸ್ತುತಿಸಿದನಂತರ ಅವನಿಂದ ಪ್ರೇರಿತನಾಗಿ ಆಶ್ವಿನಾವತ್ಯಾ ಎಂದು ಮೊದಲಾಗುವ ಮೂರು ಋಕ್ಕುಗಳಿಂದ ಅಶ್ವಿನೀದೇವತೆಗಳನ್ನು ಸ್ತುತಿಸುವನು. ಈ ವಿಷಯದಲ್ಲಿ–**ತಮಿಂದ್ರ ಉವಾಚಾಶ್ವಿನೌ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸೋಽಶ್ವಿನೌ ತುಷ್ಟಾವಾತ ಉತ್ತರೇಣ ತೃಚೇನ** (ಐ. ಬ್ರಾ. ೭–೧೬) ಎಂದು ಐತರೇಯ ಬ್ರಾಹ್ಮಣವಾಕ್ಯವಿರುವುದು. ಇದರ ಅರ್ಥವನ್ನು ನಾವು ಶುನಶ್ಶೇಪಾಖ್ಯಾನದಲ್ಲಿ ಹಿಂದೆಯೇ ವಿವರಿಸಿರುವೆವು.

**ಅಶ್ವಾವತ್ಯಾ, ಶವೀರಯಾ** ಎಂಬ ಶಬ್ದಗಳು ಇಷಾ ಎಂಬ ತೃತೀಯೈಕವಚನಶಬ್ದಕ್ಕೆ ವಿಶೇಷಣಗಳಾಗಿ ಉಪಯೋಗಿಸಲ್ಪಟ್ಟಿರುವವು. ಅಶ್ವಾವತ್ಯಾ ಎಂದರೆ ಅಶ್ವಗಳಿಂದ ಕೂಡಿರುವ, ಶವೀರಯಾ–ವೇಗವಾದ ಗಮನವುಳ್ಳ ಎಂದರ್ಥವು. ಭಾಷ್ಯಕಾರರು ಶವೀರಯಾ ಎಂಬ ಶಬ್ದಕ್ಕೆ ಪ್ರೇರ್ಯಮಾಣ–ಪ್ರೇರಿಸಲ್ಪಡುವ ಅಂದರೆ ಕೊಡುವ ಎಂಬರ್ಥವನ್ನು ಹೇಳಿರುವರು. ಶವೀರಯಾ ಎಂಬ ಶಬ್ದವು **ಶು ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದ ವಾದುದರಿಂದ ಇದಕ್ಕೆ ಗಮನವುಳ್ಳ ಎಂಬರ್ಥವನ್ನು ಹೇಳುವಾಗ ಅಶ್ವಾವತ್ಯಾ ಎಂಬ ಶಬ್ದಕ್ಕೆ ವಿಶೇಷಣಪದವನ್ನಾಗಿ ಹೇಳಬೇಕು.

**ಗೋಮತ್, ಹಿರಣ್ಯವತ್**—ಗೋವುಗಳುಳ್ಳದ್ದು, ಸುವರ್ಣವುಳ್ಳದ್ದು. ಇಲ್ಲಿ ಗೃಹ ಎಂಬ ಶಬ್ದವಿಲ್ಲ ದಿದ್ದರೂ ಗೋಮತ್, ಹಿರಣ್ಯವತ್ ಎಂಬ ಶಬ್ದಗಳ ಅರ್ಥವು ಹೊಂದುವುದಕ್ಕಾಗಿ ಗೃಹಂ ಎಂಬ ಶಬ್ದವನ್ನು ಅಧ್ಯಾ ಹಾರಮಾಡಿರುವರು. ಗೋವುಗಳು ಸುವರ್ಣಾದಿಧನಗಳು ಇವುಗಳಿಂದ ಕೂಡಿದ ಗೃಹವನ್ನು ಕೊಡಬೇಕೆಂದಭಿ ಪ್ರಾಯವು.

**ದಸ್ರಾ**—ಶತ್ರುನಾಶಕರಾದ ಅಶ್ವಿನೀದೇವತೆಗಳು. ದಸ್ರಾ ಎಂಬ ಶಬ್ದವು ಇಬ್ಬರು ಅಶ್ವಿನೀದೇವತೆಗಳಲ್ಲಿ ಒಬ್ಬನನ್ನು ಸೂಚಿಸುವುದಾದರೂ ಇಲ್ಲಿ ಇಬ್ಬರನ್ನು ನಿರ್ದೇಶಿಸಲು ದ್ವಿವಚನಾಂತವಾಗಿ ಪ್ರಯೋಗಿಸಲಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಾವತ್ಯಾ**—ಅಶ್ವಾಃ ಅಸ್ಯಾಃ ಸಂತಿ ಎಂಬರ್ಥದಲ್ಲಿ '**ತದಸ್ಯಾ**' ಸೂತ್ರದಿಂದ ಮತುಪ್ ಅಕಾರದ ಪರದಲ್ಲಿ ಬಂದುದರಿಂದ ಮಕಾರಕ್ಕೆ ವಕಾರ ಸ್ತ್ರೀತ್ವದಲ್ಲಿ '**ಉಗಿತಶ್ಚ**' ಎಂಬುದರಿಂದ ಙೀಪ್. ತೃತೀಯಾ ಏಕವಚನದ ರೂಪ. '**ಮಂತ್ರೇ ಸೋಮಾಶ್ವೇಂದ್ರಿಯ ವಿಶ್ವದೇವ್ಯಸ್ಯ ಮತೌ**' (ಪಾ. ಸೂ. ೬–೩–೧೩೧) ಎಂಬುದರಿಂದ ಅಶ್ವಶಬ್ದಕ್ಕೆ ಸಂಹಿತಾಪಾಠದಲ್ಲಿ ಮತುಪ್ ಪರದಲ್ಲಿರುವಾಗ ದೀರ್ಘ ಬರುತ್ತದೆ.

**ಇಷಾ**—ತೃತೀಯಾ ಏಕವಚನದ ರೂಪ. '**ಅನುದಾತ್ತೌ ಸುಪ್ಪಿತೌ**' (ಪಾ. ಸೂ. ೩–೧–೪) ಎಂಬುದ ರಿಂದ ವಿಭಕ್ತಿಗೆ ಅನುದಾತ್ತಸ್ವರವು ಪ್ರಾಪ್ತವಾದರೆ '**ಸಾವೇಕಾಚಸ್ತೃತೀಯಾದಿಃ**' (ಪಾ. ಸೂ. ೬–೧–೧೬೮) ಎಂಬುದರಿಂದ ತೃತೀಯಾಕ್ಕೆ ಉದಾತ್ತಸ್ವರ ಬರುತ್ತದೆ.

**ಯಾತಮ್**—ಯಾ ಪ್ರಾಪಣೇ ಧಾತು. ಅದಾದಿ, ಲೋಟ್ ಪ್ರಥಮಪುರುಷ ದ್ವಿವಚನದಲ್ಲಿ ತಸ್ ಪ್ರತ್ಯಯ. ಲೋಟ್ಟಿಗೆ ಲಙ್ವದ್ಭಾವವನ್ನು '**ಲೋಟೋ ಲಙ್ವತ್**' (ಪಾ. ಸೂ. ೩–೪–೮೫) ಎಂಬುದರಿಂದ ವಿಧಿಸಿರುವುದರಿಂದ

**‘ ತಸ್ಥಸ್–’** (ಪಾ. ಸೂ. ೩–೪–೧೦೧) ಸೂತ್ರದಿಂದ ತಸ್ಸಿಗೆ ತವಾದೇಶ. **‘ ಅದಿಪ್ರಭೃತಿಭ್ಯಃ ಶಪಃ ’** (ಪಾ. ಸೂ. ೨–೪–೭೨) ಎಂಬುದರಿಂದ ಶಪ್ ಪ್ರಾಪ್ತವಾದರೆ ಅದಕ್ಕೆ ಲುಕ್. ಯಾತಮ್ ಎಂದು ರೂಪಸಿದ್ಧಿಯಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಶವೀರಯಾ**—ಶು ಗತೌ ಧಾತು. **‘ ಕೃ ಶೄ ಪೄ ಕಟಿಪಟಿ ಶೌಟಿಭ್ಯಃ ಈರನ್ ’** (ಉ. ಸೂ. ೪–೪೭೦) ಎಂಬುದರಿಂದ ವಿಧಿಸಿರುವ ಈರನ್ ಪ್ರತ್ಯಯವು ಬಹುಲಗ್ರಹಣವಿರುವುದರಿಂದ ಸೂತ್ರನಿರ್ದಿಷ್ಟವಾಗದಿದ್ದರೂ ಈ ಧಾತುವಿಗೆ ಬರುತ್ತದೆ ಶು+ಈರ ಎಂದಿರುವಾಗ **‘ ಸಾರ್ವಧಾತುಕಾರ್ಧಧಾತುಕಯೋಃ ’** (ಪಾ. ಸೂ. ೭–೩–೮೪) ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. ಅಚ್ ಪರದಲ್ಲಿರುವುದರಿಂದ **‘ ಏಚೋ–’** (ಪಾ. ಸೂ. ೬–೧–೭೮) ಎಂಬ ಸೂತ್ರದಿಂದ ಅವಾದೇಶ. ಸ್ತ್ರೀತ್ವ ವಿವಕ್ಷಾಮಾಡಿದಾಗ **‘ ಅಜಾದ್ಯತಷ್ಟಾಪ್ ’** (ಪಾ. ಸೂ. ೪–೧–೪) ಎಂಬುದರಿಂದ ಟಾಪ್. ತೃತೀಯಾ ಏಕವಚನದಲ್ಲಿ ಶವೀರಯಾ ಎಂದು ರೂಪವಾಗುತ್ತದೆ ಈರನ್ ಪ್ರತ್ಯಯದಲ್ಲಿ ನಕಾರವು ಇತ್ತಾದುದರಿಂದ **‘ ಞ್ನಿತ್ಯಾದಿರ್ನಿತ್ಯಂ ’** (ಪಾ. ಸೂ. ೬–೧–೧೯೭) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ. ॥ ೧೭ ॥

॥ ಸಂಹಿತಾಪಾಠಃ ॥

ಸಮಾನಯೋಜನೋ ಹಿ ವಾಂ ರಥೋ ದಸ್ರಾವಮರ್ತ್ಯಃ ।
ಸಮುದ್ರೇ ಅಶ್ವಿನೇಯತೇ ॥ ೧೮ ॥

॥ ಪದಪಾಠಃ ॥

**ಸಮಾನऽಯೋಜನಃ । ಹಿ । ವಾಂ । ರಥಃ । ದಸ್ರೌ । ಅಮರ್ತ್ಯಃ ।**
**ಸಮುದ್ರೇ । ಅಶ್ವಿನಾ । ಈಯತೇ ॥ ೧೮ ॥**

॥ ಸಾಯಣಭಾಷ್ಯಂ ॥

**ಹೇ ದಸ್ರಾವಶ್ವಿನೌ ವಾಂ ಯುವಯೋಃ ಸಂಬಂಧೀ ರಥಃ ಸಮಾನಯೋಜನಸ್ತುಲ್ಯಯೋಜನಃ ಯುವಯೋರ್ದ್ವಯೋರೇಕರಥಾರೂಢತ್ವಾದುಭಯಾರ್ಥಂ ಸಕೃದೇವ ಯುಜ್ಯತೇ । ಯುಕ್ತಃ ಸ ರಥೋಽಮರ್ತ್ಯೋ ವಿನಾಶರಹಿತಃ । ಅಪ್ರತಿಹತಗತಿರಿತ್ಯರ್ಥಃ । ಅತ ಏವ ಹೇ ಅಶ್ವಿನೌ ಹಿ ಯಸ್ಮಾತ್ಸ-**

ಮುದ್ರೇಽಂತರಿಕ್ಷ ಈಯತೇ ಗಚ್ಛತಿ । ಅಂತರಿಕ್ಷನಾಮಸು ಪಠಿತಂ ಸಮುದ್ರಶಬ್ದಂ ಯಾಸ್ಕ ಏವಂ ವ್ಯಾಚಖ್ಯೌ । ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ಭೂತಾನಿ ಸಮುದ್ರಕೋ ಭವತಿ ಸಮುನತ್ತೀತಿ ವಾ । ನಿ. ೨-೧೦ । ಇತಿ ॥ ಸಮಾನಯೋಜನಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅಮರ್ತ್ಯಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ। ಈಯತೇ। ಈಙ್ ಗತೌ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ। ಹಿ ಚೇತಿ ನಿಘಾತಪ್ರತಿಷೇಧಃ ॥

॥ ಪ್ರತಿಪದಾರ್ಥ ॥

**ದಸ್ರೌ**—ಎಲೈ ಅಶ್ವಿದೇವತೆಗಳೇ । **ವಾಂ**—ನಿಮ್ಮ । **ರಥಃ**—ರಥವು (ಇಬ್ಬರಿಗೂ) । **ಸಮಾನಯೋಜನಃ**—ಒಂದೇ ಸಮನಾಗಿ ಕಟ್ಟಲ್ಪಟ್ಟು । **ಅಮರ್ತ್ಯಃ**—ನಾಶರಹಿತವಾಗಿ (ಅಪ್ರತಿಹತವಾದ ಗಮನವುಳ್ಳದ್ದಾಗಿ) । **ಹಿ**—ಆ ಕಾರಣದಿಂದಲೇ । **ಸಮುದ್ರೇ**—ಅಂತರಿಕ್ಷದಲ್ಲಿ । **ಈಯತೇ**—ಸಂಚರಿಸುತ್ತದೆ.

॥ ಭಾವಾರ್ಥ ॥

ಎಲೈ ಅಶ್ವಿದೇವತೆಗಳೇ, ನಿಮ್ಮ ರಥವು ನಿಮ್ಮಿಬ್ಬರಿಗೂ ಒಂದೇ ಸಮನಾಗಿ ಕಟ್ಟಲ್ಪಟ್ಟು ಅಪ್ರತಿಹತವಾದ ಗಮನವುಳ್ಳದ್ದಾಗಿಯೂ ನಾಶರಹಿತವಾಗಿಯೂ ಇರುತ್ತದೆ. ಆ ಕಾರಣದಿಂದಲೇ ಅದು ಅಂತರಿಕ್ಷದಲ್ಲಿ ಸಂಚರಿಸುತ್ತದೆ.

## English Translation.

Dasras, your chariot harnessed and drawn by a common team (of horses) is imperishable ; Aswins, it travels through the air.

॥ ವಿಶೇಷವಿಷಯಗಳು ॥

**ಸಮಾನಯೋಜನಃ**— **ಯುವಯೋರ್ದ್ವಯೋರೇಕರಥಾರೂಢತ್ವಾದುಭಯಾರ್ಥಂ ಸಕೃದೇವ ಯುಜ್ಯತೇ** ಇಬ್ಬರು ಅಶ್ವಿನೀದೇವತೆಗಳ ರಥವು ಒಂದೇ ಆದುದರಿಂದ ಇಬ್ಬರಿಗಾಗಿ ರಥವು ಏಕಕಾಲದಲ್ಲಿ ಸಜ್ಜುಗೊಳಿಸಲ್ಪಡುವುದು. ಇಬ್ಬರ ರಥವೂ ಒಂದೇ ಆದುದರಿಂದ ಸಮಾನಯೋಜನಃ ಎಂಬ ಶಬ್ದವನ್ನು ಉಪಯೋಗಿಸಲಾಗಿದೆ.

**ಅಮರ್ತ್ಯಃ**—**ವಿನಾಶರಹಿತಃ** । ನಾಶವಾಗದಿರುವ, ಅಪ್ರತಿಹತವಾದ ಗಮನವುಳ್ಳ । imperishable, indestructible.

**ಸಮುದ್ರೇ**—**ಅಂತರಿಕ್ಷೇ** । ಅಂಬರಂ, ವಿಯತ್ ಮೊದಲಾದ ಹದಿನಾರು ಅಂತರಿಕ್ಷನಾಮಗಳ ಮಧ್ಯದಲ್ಲಿ ಸಮುದ್ರ ಶಬ್ದವು ಪಠಿತವಾಗಿರುವುದರಿಂದ ಸಮುದ್ರೇ ಎಂದರೆ ಅಂತರಿಕ್ಷದಲ್ಲಿ ಎಂದರ್ಥವು. ಸಮುದ್ರಶಬ್ದಾರ್ಥ ವಿಚಾರದಲ್ಲಿ ಯಾಸ್ಕರು—

**ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ॥**

(ನಿ. ೨-೧೦)

ಎಂದರೆ ಇದರ ನೀರಿನಿಂದ ಅಲೆಗಳು, ನೊರೆಗಳು ಮುಂತಾದವು ಮೇಲೆದ್ದು ಕಾಣುವುದರಿಂದ ಇದಕ್ಕೆ ಸಮುದ್ರವೆಂದು ಹೆಸರು; ಸಮುದ್ರದ ನೀರಿನಲ್ಲಿ ಜಲಚರಪ್ರಾಣಿಗಳು ವಿಹರಿಸುತ್ತವೆ. ಆದುದರಿಂದ ಇದಕ್ಕೆ ಸಮುದ್ರವೆಂದು ಹೆಸರು; ಉದಕವು ಇದರಲ್ಲಿ ಮಿಳಿತವಾಗಿ ಶೇಖರಿಸಲ್ಪಡುವುದರಿಂದ ಸಮುದ್ರವೆಂದು ಹೆಸರು; ಇದರ ನೀರು ಎಲ್ಲವನ್ನೂ ನೆನೆಯಿಸುವುದರಿಂದ ಇದಕ್ಕೆ ಸಮುದ್ರವೆಂದು ಹೆಸರು ಎಂದು ಸಮುದ್ರ ಶಬ್ದಕ್ಕೆ ಅವಯವಾರ್ಥವನ್ನು ವಿವರಿಸಿರುವರು. ಆದರೆ ಈ ವಿಧವಾದ ಅರ್ಥಗಳೆಲ್ಲಾ ಸಮುದ್ರಶಬ್ದದ ಅಂತರಿಕ್ಷವೆಂಬ ಅರ್ಥದ ಪರವಾಗಿರುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಸಮಾನಯೋಜನಃ**—**'ಸಮಾನಂ ಯೋಜನಂ ಯಸ್ಯ ಸಃ ಸಮಾನಯೋಜನಃ'** ಬಹುವ್ರೀಹಿ ಸಮಾಸ. **'ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ. ಸಮಾನಶಬ್ದದಲ್ಲಿರುವ ನಕಾರೋತ್ತರಾಕಾರ ಉದಾತ್ತವಾಗುತ್ತದೆ.

**ವಾಮ್**—ಯುಷ್ಮಚ್ಛಬ್ದದ ಷಷ್ಠೀ ದ್ವಿವಚನ ರೂಪ. **'ಯುಷ್ಮದಸ್ಮದೋಃ ಷಷ್ಠೀ ಚತುರ್ಥೀ'** (ಪಾ. ಸೂ. ೮-೧-೨೦) ಎಂಬುದರಿಂದ ವಿಭಕ್ತ್ಯಂಶಕ್ಕೆ ವಾಮ್ ಎಂಬ ಆದೇಶ ಬರುತ್ತದೆ. ಇದು ಅನುದಾತ್ತ.

**ಅಮರ್ತ್ಯಃ**—**'ನ ಮರ್ತ್ಯಃ ಅಮರ್ತ್ಯಃ'** ನಞ್ ತತ್ಪುರುಷ ಸಮಾಸ. **'ತತ್ಪುರುಷೇ ತುಲ್ಯಾರ್ಥ'** (ಪಾ. ಸೂ ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ಆದ್ಯುದಾತ್ತವಾದ ಪದವಾಗುತ್ತದೆ.

**ಈಯತೇ**—ಈಙ್ ಗತೌ ಧಾತು ದಿವಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯಕ್ಕೆ **'ಟಿತ ಆತ್ಮನೇಪದಾನಾಂ-'** (ಪಾ. ಸೂ. ೩-೪-೭೯) ಎಂಬುದರಿಂದ ಏತ್ವ ಬರುತ್ತದೆ. **'ದಿವಾದಿಭ್ಯಃ ಶ್ಯನ್'** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ ಈಯತೇ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿರುವುದರಿಂದ **'ತಾಸ್ಯನುದಾತ್ತೇತ್'** (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕಕ್ಕೆ ಅನುದಾತ್ತಸ್ವರ ಬರುತ್ತದೆ. ಶ್ಯನ್ ನಿತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಅತಿಙಂತದ ಪರದಲ್ಲಿದ್ದರೂ ಹಿಂದೆ ಹಿ ಎಂಬುದರ ಸಂಬಂಧವಿರುವುದರಿಂದ **'ಹಿ ಚ'** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ಅಶ್ವಿನಾ**—ಸಂಬೋಧನದ್ವಿವಚನಾಂತದ ರೂಪ. **'ಸುಪಾಂ ಸುಲುಕ್'** (ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ. ॥ ೧೮ ॥

॥ ಸಂಹಿತಾಪಾಠಃ ॥

ನ್ಯಘ್ನ್ಯಸ್ಯ ಮೂರ್ಧನಿ ಚಕ್ರಂ ರಥಸ್ಯ ಯೇಮಥುಃ ।
ಪರಿ ದ್ಯಾಮನ್ಯದೀಯತೇ ॥ ೧೯ ॥

॥ ಪದಪಾಠಃ ॥

ನಿ । ಅಘ್ನ್ಯಸ್ಯ । ಮೂರ್ಧನಿ । ಚಕ್ರಂ । ರಥಸ್ಯ । ಯೇಮಥುಃ ।
ಪರಿ । ದ್ಯಾಂ । ಅನ್ಯತ್ । ಈಯತೇ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಮಘ್ನ್ಯಸ್ಯ ಹಂತುಂ ವಿನಾಶಯಿತುಮಶಕ್ಯಸ್ಯ ದೃಢಸ್ಯ ಪರ್ವತಸ್ಯ ಮೂರ್ಧನ್ಯುಪರಿ ಚಕ್ರಂ ಭವದೀಯರಥಸಂಬಂಧ್ಯೇಕಂ ಚಕ್ರಂ ನಿ ಯೇಮಥುಃ । ನಿಯಮಿತವಂತೌ । ಅನ್ಯಚ್ಚಕ್ರಂ ಪರಿ ದ್ಯಾಂ ದ್ಯುಲೋಕಸ್ಯ ಪರಿತ ಈಯತೇ । ಗಚ್ಛತಿ ॥ ಅಘ್ನ್ಯಸ್ಯ । ಅಹನನಮಘ್ನಃ । ಘಞರ್ಥೇ ಕವಿಧಾನಂ ಸ್ಥಾಸ್ನಾಪಾವ್ಯಧಿಹನಿಯುಧ್ಯರ್ಥಂ । ಪಾ. ೩-೩-೫೮-೪ । ಇತಿ ಹಂತೇಃ ಕಪ್ರತ್ಯಯಃ । ಅಘ್ನಮರ್ಹತ್ಯಘ್ನ್ಯಃ । ಛಂದಸಿ ಚ । ಪಾ. ೫-೧-೬೭ । ಇತಿ ಯಪ್ರತ್ಯಯಃ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಯೇಮಥುಃ । ಯಮ ಉಪರಮೇ । ಕಿತ ಲಿಟ್ಯತ ಏಕಹಲ್ಮಧ್ಯೇ । ಪಾ. ೬-೪-೧೨೦ । ಇತ್ಯೇತ್ವಾಭ್ಯಾಸಲೋಪೌ ॥

॥ ಪ್ರತಿಪದಾರ್ಥ ॥

**ದಸ್ರಾ**—(ಎಲೈ ಅಶ್ವಿನೀದೇವತೆಗಳೇ ನೀವು) । **ಅಘ್ನ್ಯಸ್ಯ**—(ಯಾರಿಂದಲೂ) ನಾಶಮಾಡಲು ಸಾಧ್ಯವಿಲ್ಲದೇ ದೃಢವಾಗಿರತಕ್ಕ ಪರ್ವತದ । **ಮೂರ್ಧನಿ**—ಮೇಲುಭಾಗದ ಶಿಖರದಲ್ಲಿ । **ಚಕ್ರಂ**—(ನಿಮ್ಮ ರಥದ) ಒಂದು ಚಕ್ರವನ್ನು । **ನಿ ಯೇಮಥುಃ**—ಸ್ಥಾಪಿಸಿದ್ದೀರಿ । **ಅನ್ಯತ್**—ಇನ್ನೊಂದು ಚಕ್ರವು । **ಪರಿದ್ಯಾಂ**—ದ್ಯುಲೋಕದ ಸುತ್ತಲೂ । **ಈಯತೇ**—ಸಂಚರಿಸುತ್ತದೆ ॥

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥದ ಒಂದು ಚಕ್ರವನ್ನು ಯಾರಿಂದಲೂ ನಾಶಮಾಡಲಾಗದ ಪರ್ವತದ ಮೇಲುಭಾಗದ ಶಿಖರದಲ್ಲಿ ಸ್ಥಾಪಿಸಿದ್ದೀರಿ. ಮತ್ತು ಇನ್ನೊಂದು ಚಕ್ರವು ದ್ಯುಲೋಕದ ಸುತ್ತಲೂ ಸಂಚರಿಸುತ್ತದೆ.

## English Translation.

You have placed one wheel on the summit of the solid mountain, the other goes round the heaven.

॥ ವಿಶೇಷವಿಷಯಗಳು ॥

**ಅಘ್ನ್ಯಸ್ಯ—ಹಂತುಂ ವಿನಾಶಯಿತುಮಶಕ್ಯಸ್ಯ ದೃಢಸ್ಯ ಪರ್ವತಸ್ಯ ।** ನಾಶಮಾಡುವುದಕ್ಕೆ ಅಸಾಧ್ಯವಾದ ಎಂದರೆ ಘಟ್ಟಿಯಾದ ಅಥವಾ ಸ್ಥಿರವಾದ ಪರ್ವತದ ಎಂದು ಭಾಷ್ಯಕಾರರ ವಿವರಣೆಯು. ಸ್ಕಂದಸ್ವಾಮಿಯು ಈ ಶಬ್ದಕ್ಕೆ ಪ್ರಜಾಪತಿಯು ಅಥವಾ ಸೂರ್ಯನ ಎಂಬರ್ಥವನ್ನು ಹೇಳಿರುವರು. ಏಕೆಂದರೆ—

**ಸಪ್ತ ಯುಂಜಂತಿ ರಥಮೇಕ ಚಕ್ರಮೇಕೋ ಅಶ್ವೋ ವಹತಿ ಸಪ್ತನಾಮಾ ।**

(ಋ. ಸಂ. ೧-೧೬೪-೨)

ಎಂದು ಹೇಳಿರುವುದರಿಂದ ಅಶ್ವಿನೀದೇವತೆಗಳ ರಥಕ್ಕೆ ಮೂರು ಚಕ್ರಗಳಿದ್ದರೂ ಅವುಗಳಲ್ಲಿ ಒಂದು ಸೂರ್ಯನ ಸಮೀಪದಲ್ಲಿರುವುದೆಂದು ಹೇಳಿರುವುದನ್ನು ಈ ಋಕ್ಕು ಸಮರ್ಥಿಸುವುದು.

**ನಿ ಯೇಮಥುಃ—ಯಮ ಉಪರಮೇ ।** ಇಟ್ಟಿರುವಿರಿ, ಸ್ಥಾಪಿಸಿರುವಿರಿ.

**ಪರಿ ದ್ಯಾಮನ್ಯದೀಯತೆ**—ಮತ್ತೊಂದು (ಚಕ್ರವು) ಸ್ವರ್ಗ ಅಥವಾ ಅಂತರಿಕ್ಷದ ಸುತ್ತಲೂ ಸಂಚರಿಸುವುದು.

ಅಶ್ವಿನೀದೇವತೆಗಳ ರಥಕ್ಕೆ ಮೂರು ಚಕ್ರಗಳಿರುವುವೆಂದು ಅನೇಕ ಕಡೆ ಹೇಳಿರುವುದರಿಂದ (ಋ. ಸಂ. ೧-೩೪-೯ ಇತ್ಯಾದಿ) ಮೂರನೆಯ ಚಕ್ರವು ಎಲ್ಲಿರುವುದೆಂದು ಈ ಋಕ್ಕಿನಲ್ಲಿ ಹೇಳಿರುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಅಘ್ನ್ಯಸ್ಯ**—ಅಹನನಂ ಅಘ್ನಃ **'ಘಞರ್ಥೇ ಕವಿಧಾನಂ ಸ್ಥಾಸ್ನಾಪಾವ್ಯಧಿಹನಿಯುಧ್ಯರ್ಥಮ್'** ಪಾ. ಸೂ. ೩-೩-೫೮-೪) ಎಂಬುದರಿಂದ ಹನ್ ಧಾತುವಿಗೆ ಘಞರ್ಥದಲ್ಲಿ ಕಪ್ರತ್ಯಯ. ಕಿತ್ತಾದುದರಿಂದ ಅದು ಪರದಲ್ಲಿರುವಾಗ **'ಗಮಹನ'** (ಪಾ. ಸೂ. ೬-೪-೯೮) ಸೂತ್ರದಿಂದ ಧಾತುವಿನ ಉಪಧಾಕ್ಕೆ ಲೋಪ. **'ಹೋ ಹಂತೇರ್ಞ್ಣಿನ್ನೇಷು'** (ಪಾ ಸೂ. ೭-೩-೫೪) ಎಂಬುದರಿಂದ ನಕಾರ ಪರದಲ್ಲಿರುವಾಗ ಹಕಾರಕ್ಕೆ ಕುತ್ವದಿಂದ ಘಕಾರಾದೇಶ. ಘ್ನ ಶಬ್ದದಿಂದ ನಞ್ ಸಮಾಸ. ಅಘ್ನಂ ಅರ್ಹತಿ ಎಂಬರ್ಥದಲ್ಲಿ **'ಛಂದಸಿ ಚ'** (ಪಾ. ಸೂ. ೫-೧-೬೭) ಎಂಬುದರಿಂದ ಯತ್ ಪ್ರತ್ಯಯ ಬರುತ್ತದೆ ಅಘ್ನ+ಯ ಎಂದಿರುವಾಗ **'ಯಸ್ಯೇತಿ ಚ'** (ಪಾ. ಸೂ. ೬-೪-೧೪೮) ಎಂಬುದರಿಂದ ಯಕಾರದ ಪೂರ್ವದಲ್ಲಿರುವ ಅಕಾರಕ್ಕೆ ಲೋಪ. ಅಘ್ನ್ಯ ಎಂದು ರೂಪವಾಗುತ್ತದೆ. ಅಘ್ನ್ಯಸ್ಯ ಎಂಬುದು ಷಷ್ಠೀ ಏಕವಚನದರೂಪ ಪ್ರತ್ಯಯಕ್ಕೆ ಆದ್ಯುದಾತ್ತಸ್ವರವಿಧಾನಮಾಡಿರುವುದರಿಂದ ಅಘ್ನ ಶಬ್ದವು ಅಂತೋದಾತ್ತವಾಗುತ್ತದೆ. ನಾಶಮಾಡಲು ಅಶಕ್ಯವಾದುದು ಎಂದರ್ಥ.

**ಮೂರ್ಧನಿ—'ವಿಭಾಷಾ ಙಿಶ್ಯೋಃ'** (ಪಾ. ಸೂ. ೬-೪-೧೩೬) ಎಂಬುದರಿಂದ ಅನ್ನಿನ ಅಕಾರಕ್ಕೆ ಭಸಂಜ್ಞಾ ಇರುವಾಗ ವಿಕಲ್ಪವಾಗಿ ಲೋಪ.

**ಯೇಮಥುಃ**—ಯಮ ಉಪರಮೇ ಧಾತು. ಭ್ವಾದಿ ಲಿಟ್ ಮಧ್ಯಮಪುರುಷದಲ್ಲಿ ಥಸ್ ಪ್ರತ್ಯಯಕ್ಕೆ **'ಪರಸ್ಮೈಪದಾನಾಂ'** (ಪಾ. ಸೂ. ೩-೪-೮೨) ಎಂಬುದರಿಂದ ಅಥುಸ್ ಆದೇಶ **'ಅಸಂಯೋಗಾಲ್ಲಿಟ್ ಕಿತ್'** (ಪಾ. ಸೂ. ೧-೨-೫) ಸಂಯುಕ್ತಾಕ್ಷರದ ಪರದಲ್ಲಿ ಇರದ ಅಪಿತ್ತಾದ ಲಿಟ್ ಕಿತ್ತಾಗುತ್ತದೆ ಎಂಬುದರಿಂದ ಇಲ್ಲಿ ಅಥುಸ್ ಕಿತ್ ಆಗುತ್ತದೆ ಆದುದರಿಂದ **'ಅತ ಏಕಹಲ್ ಮಧ್ಯೇ'** (ಪಾ. ಸೂ. ೬-೪-೧೨೦) ಎಂಬುದರಿಂದ ಲಿಣ್ಣಿಮಿತ್ತಕ ದ್ವಿತ್ವ ಬಂದಮೇಲೆ ಏತ್ವಾಭ್ಯಾಸ ಲೋಪಗಳು ಬರುತ್ತವೆ. ಯೇಮಥುಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ

**ಈಯತೇ**—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ॥ ೧೯ ॥

॥ ಸಂಹಿತಾಪಾಠಃ ॥

ಕಸ್ತ ಉಷಃ ಕಧಪ್ರಿಯೇ ಭುಜೇ ಮರ್ತೋ ಅಮರ್ತ್ಯೇ ।

ಕಂ ನಕ್ಷಸೇ ವಿಭಾವರಿ ॥ ೩೦ ॥

॥ ಪದಪಾಠಃ ॥

ಕಃ । ತೇ । ಉಷಃ । ಕಧಽಪ್ರಿಯೇ । ಭುಜೇ । ಮರ್ತಃ । ಅಮರ್ತ್ಯೇ ।

ಕಂ । ನಕ್ಷಸೇ । ವಿಭಾಽವರಿ ॥ ೩೦ ॥

॥ ಸಾಯಣ ಭಾಷ್ಯಂ ॥

**ಪ್ರಾತರನುವಾಕ ಆಶ್ವಿನಶಸ್ತ್ರ ಉಷಸ್ಯೇ ಕ್ರತೌ ಗಾಯತ್ರೇ ಛಂದಸಿ ಕಸ್ತ ಉಷ ಇತಿ ತೃಚಃ । ಅಥೋಷಸ್ಯ ಇತಿ ಖಂಡೇ ಕಸ್ತ ಉಷ ಇತಿ ತಿಸ್ರಃ । ಆ. ೪-೧೪ । ಇತಿ ಸೂತ್ರಿತಂ ॥**

**ಅಶ್ವಿಭ್ಯಾಂ ಪ್ರೇರಿತಃ ಶುನಃಶೇಪ ಉಷಸಂ ತುಷ್ಟಾವ । ತಥಾ ಚ ಬ್ರಾಹ್ಮಣಂ । ತಮಶ್ವಿನಾ ಊಚತುರುಷಸಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸ ಉಷಸಂ ತುಷ್ಟಾವಾತ ಉತ್ತರೇಣ ತೃಚೇನ ತಸ್ಯ ಹ ಸ್ಮರ್ಚ್ಯೃಚ್ಯುಕ್ತಾಯಾಂ ವಿ ಪಾಶೋ ಮುಮುಚೇ ಕನೀಯ ಐಕ್ಷ್ವಾಕಸ್ಯೋದರಂ ಭವತ್ಯು-ತ್ತಮಸ್ಯಾಮೇವರ್ಚ್ಯುಕ್ತಾಯಾಂ ವಿ ಪಾಶೋ ಮುಮುಚೇಽಗದ ಐಕ್ಷ್ವಾಕ ಆಸ । ಐ. ಬ್ರಾ. ೭-೧೬ । ಇತಿ ॥ ಹೇ ಕಧಪ್ರಿಯೇ ಸ್ತುತಿಪ್ರಿಯೇ ಅಮರ್ತ್ಯೇ ಮರಣರಹಿತೇ ಉಷ ಏತಚ್ಛಬ್ದಾಭಿಧೇಯ ಉಷಃ-ಕಾಲಾಭಿಮಾನಿನಿ ದೇವತೇ ಭುಜೇ ತವ ಭೋಗಾಯ ಮರ್ತೋ ಮನುಷ್ಯಃ ಕೋ ವಿದ್ಯತೇ । ಹೇ**

ವಿಭಾವರಿ ವಿಶೇಷಪ್ರಭಾವಯುಕ್ತೇ ಉಷೋ ದೇವಿ ಕಂ ಪುರುಷಂ ನಕ್ಷಸೇ । ಪ್ರಾಪ್ನೋಷಿ । ತವೋಚಿತಂ ಭೋಗಂ ದಾತುಂ ನ ಕೋಽಪಿ ಮನುಷ್ಯಃ ಸಮರ್ಥಃ । ಅತ ಏವ ತ್ವಂ ಕಮಪಿ ಪುರುಷಂ ಭೋಗಾಪೇಕ್ಷಯಾ ನ ಪ್ರಾಪ್ನೋಷಿ । ಈದೃಶಸ್ತವ ಮಹಿಮೇತ್ಯರ್ಥಃ । ತೇ । ತೇಮಯಾವೇಕವಚನಸ್ಯ । ಪಾ. ೮-೧-೨೨ । ಇತಿ ಯುಷ್ಮಚ್ಛಬ್ದಸ್ಯ ತೇ ಆದೇಶಃ ಸರ್ವಾನುದಾತ್ತಃ । ಕಥಪ್ರಿಯೇ । ಕಥ ವಾಕ್ಯಪ್ರಬಂಧೇ । ಚುರಾದಿರದಂತಃ । ಣಾವತೋ ಲೋಪಸ್ಯ ಸ್ಥಾನಿವದ್ಭಾವಾದುಪಧಾವೃದ್ಧ್ಯಭಾವಃ । ಚಿಂತಿಪೂಜಿಕಥಿಕುಂಬಿಚರ್ಚಶ್ಚ । ಪಾ. ೩-೩-೧೦೫ । ಇತ್ಯಙ್ಪ್ರತ್ಯಯಃ । ಣೇರನಿಟೀತಿ ಣಿಲೋಪಃ । ತತಷ್ಟಾಪ್ । ಷಷ್ಠೀಸಮಾಸೇ ಙ್ಯಾಪೋಃ ಸಂಜ್ಞಾಛಂದಸೋರ್ಬಹುಲಂ । ಪಾ. ೬-೩-೬೩ । ಇತಿ ಹ್ರಸ್ವತ್ವಂ । ಥಕಾರಸ್ಯ ಧಕಾರಶ್ಛಾಂದಸಃ । ಆಮಂತ್ರಿತಾನುದಾತ್ತತ್ವಂ । ಭುಜೇ । ಭುಜ ಪಾಲನಾಭ್ಯವಹಾರಯೋಃ । ಸಂಪದಾದಿಲಕ್ಷಣಃ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಮರ್ತಃ । ಅಸಿಹಸೀತ್ಯಾದಿನಾ ತನ್ಪ್ರತ್ಯಯಾಂತ ಆದ್ಯುದಾತ್ತಃ । ನಕ್ಷಸೇ । ಣಕ್ಷ ಗತೌ । ವಿಭಾವರಿ । ಭಾ ದೀಪ್ತೌ । ವಿಪೂರ್ವಾದಸ್ಮಾದಾತೋ ಮನಿನ್ಕ್ವನಿಬ್ವನಿಪಶ್ಚೇತಿ ವನಿಪ್। ವನೋ ರ ಚ । ಪಾ. ೪-೧-೭ । ಇತಿ ಙೀಪ್। ತತ್ಸಂನಿಯೋಗೇನ ನಕಾರಸ್ಯ ರೇಫಾದೇಶಃ । ಅಂಬಾರ್ಥನದ್ಯೋರ್ಹ್ರಸ್ವಃ । ಪಾ. ೭-೩-೧೦೭ । ಇತಿ ಹ್ರಸ್ವತ್ವಂ ॥

॥ ಪ್ರತಿಪದಾರ್ಥ ॥

**ಕಥಪ್ರಿಯೇ**—ಸ್ತುತಿಪ್ರಿಯಳೂ । **ಅಮರ್ತ್ಯೇ**—ಮರಣರಹಿತಳೂ ಆದ । **ಉಷಃ**—ಎಲೈ ಉಷೋದೇವಿಯೇ । **ಭುಜೇ**—ನಿನ್ನ ಭೋಗಕ್ಕಾಗಿ । **ಮರ್ತಃ**—ಮಾನವನು । **ಕಃ**—ಯಾವನಿದ್ದಾನೆ । **ವಿಭಾವರಿ**—ವಿಶೇಷ ಪ್ರಭಾವದಿಂದ ಕೂಡಿದ ಉಷೋದೇವಿಯೇ । **ಕಂ**—ಯಾವ ಪುರುಷನನ್ನು (ತಾನೇ) । **ನಕ್ಷಸೇ**—ಹೊಂದುತ್ತೀಯೆ.

॥ ಭಾವಾರ್ಥ ॥

ಸ್ತುತಿಪ್ರಿಯಳೂ ಮತ್ತು ಮರಣರಹಿತಳೂ ಆದ ಎಲೈ ಉಷೋದೇವಿಯೇ, ನಿನ್ನ ಭೋಗಕ್ಕಾಗಿ ಮಾನವನಾದವನು ಯಾವನು ತಾನೇ ಇದ್ದಾನೆ ? ವಿಶೇಷಪ್ರಭಾವದಿಂದ ಕೂಡಿದ ಉಷೋದೇವಿಯೇ, ನೀನು ಯಾವ ಪುರುಷನನ್ನು ತಾನೇ ಸೇರುತ್ತೀಯೆ ?

## English Translation.

O immortal Ushas, fond of praises, what mortal is fit for your enjoyment ? O fair one, to whom do you go ?

॥ ವಿಶೇಷವಿಷಯಗಳು ॥

ಶುನಃಶ್ಶೇಪನು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿದ ಮೇಲೆ ಅವರಿಂದ ಪ್ರೇರಿತನಾಗಿ ಈ ಋಕ್ಕಿನಿಂದಲೂ ಮುಂದಿನ ಎರಡು ಋಕ್ಕುಗಳಿಂದಲೂ ಉಷೋದೇವತೆಯನ್ನು ಸ್ತೋತ್ರಮಾಡುವನು. ಈ ವಿಷಯದಲ್ಲಿ—**ತಮಶ್ವಿನಾ**

**ಊಚತುರುಷಸಂ ನು ಸ್ತುಹ್ಯಥ ತ್ವೋತ್ಸ್ರಕ್ಷ್ಯಾಮ ಇತಿ ಸ ಉಷಸಂ ತುಷ್ಟಾವಾತ ಉತ್ತರೇಣ ತೃಚೇನ ತಸ್ಯ ಹ ಸ್ಮರ್ಚ್ಯೃಚ್ಯುಕ್ತಾಯಾಂ ವಿ ಪಾಶೋ ಮುಮುಚೇ ಕನೀಯ ಐಕ್ಷ್ವಾಕಸ್ಯೋದರಂ ಭವತ್ಯುತ್ತ-ಮಸ್ಯಾಮೇವರ್ಚ್ಯುಕ್ತಾಯಾಂ ವಿ ಪಾಶೋ ಮುಮುಚೇಽಗದ ಐಕ್ಷ್ವಾಕ ಆಸ ||** (ಐ. ಬ್ರಾ. ೭-೧೬) ಎಂದು ಐತರೇಯ ಬ್ರಾಹ್ಮಣವಾಕ್ಯವಿರುವುದು. ಇದರ ಅರ್ಥವನ್ನು ನಾವು ಶುನಶ್ಶೇಪೋಪಾಖ್ಯಾನದಲ್ಲಿ ಹಿಂದೆಯೇ ವಿವರಿಸಿದೇವೆ.

ಈ ಋಕ್ಕಿಗೂ ಮುಂದಿನ ಎರಡು ಋಕ್ಕುಗಳಿಗೂ ಉಷಃಕಾಲವು ಅಥವಾ ಉಷಃಕಾಲಾಭಿಮಾನಿಯು ದೇವತೆಯು. ಋಗ್ವೇದದಲ್ಲಿ ಉಷೋದೇವತಾಕವಾದ ಸುಮಾರು ಇಪ್ಪತ್ತು ಸೂಕ್ತಗಳಿವೆ. ಇವುಗಳೆಲ್ಲಾ ಬಹಳ ಉತ್ತಮ ಶ್ರೇಣಿಗೆ ಸೇರಿದ ಸೂಕ್ತಗಳು ಎಂದರೆ ವರ್ಣನೆಯಲ್ಲಿಯೂ, (ಪದಗಳ ಜೋಡಣೆಯಲ್ಲಿಯೂ, ವಿಷಯನಿರೂಪಣೆಯಲ್ಲಿಯೂ) ಬಹಳ ಮಹತ್ತ್ವಪೂರಿತವಾಗಿವೆ. ಸೂರ್ಯೋದಯಕ್ಕೆ ಮುಂಚೆ ರಾತ್ರಿ ಕಳೆದು ಬೆಳಕು ಹರಿಯುವಾಗ ಉಂಟಾಗುವ ಪ್ರಕಾಶವೇ ಉಷಃಕಾಲವು. ಈ ಉಷಃಕಾಲವು ಆಗಿನ ಕಾಲದ ಋಷಿಗಳಿಗೂ ಜನರಿಗೂ ಬಹಳ ಆನಂದವನ್ನುಂಟುಮಾಡಿರಬೇಕು. ಆದುದರಿಂದ ಅವರು ಉಷಃಕಾಲವರ್ಣನೆಯನ್ನು ಬಹಳ ಚೆನ್ನಾಗಿ ಮಾಡಿದಾರೆ. ಸಾಧಾರಣವಾಗಿ ಉಷಃಕಾಲವನ್ನು ಶರೀರಯುಕ್ತಳಾದ ಓರ್ವ ಸ್ತ್ರೀಯಂತೆ ಭಾವಿಸಿ ಆ ದೇವತೆಯ ಗುಣಗಳನ್ನೂ ಅಲಂಕಾರಾದಿಗಳನ್ನು ವಿಧವಿಧವಾಗಿ ವರ್ಣಿಸಿರುವರು. ಅಂತರಿಕ್ಷದಿಂದ ನಮಗೆ ಬೆಳಕು ಬರುವುದರಿಂದ ಉಷಃಕಾಲವನ್ನು **ದುಹಿತರ್ದಿವಃ** ಎಂದರೆ ಅಂತರಿಕ್ಷದ ಅಥವಾ ಸ್ವರ್ಗದ ಪುತ್ರಿ ಎಂದು ವರ್ಣಿಸಿರುವುದು ಸಹಜವಾಗಿಯೇ ಇದೆ. ಈ ದೇವತೆಯು ಪ್ರತಿದಿನವೂ ಉದಯಿಸುತ್ತಿರುವುದರಿಂದ ಯಾವಾಗಲೂ ನವಯೌವನಭರಿತಳಾದ ತರುಣಿಯೆಂದೂ, ದಿನಗಳು ಕಳೆದಂತೆಲ್ಲಾ ಮನುಷ್ಯರ ಆಯುಸ್ಸನ್ನು ಕಡಮೆ ಮಾಡುವವಳೆಂದೂ ತಾನು ಉದಯಿಸಿದೊಡನೆಯೇ ಸಕಲ ಪ್ರಾಣಿಗಳಿಗೂ ಸಂತೋಷಮಾಡುವಳೆಂದೂ, ರಾತ್ರಿಯಲ್ಲಿ ಸಂಚಾರಮಾಡುವ ರಾಕ್ಷಸಪಿಶಾಚಾದಿನಿಶಾಚರರನ್ನು ತಾನು ಉದಯಿಸಿ ಓಡಿಸುವಳೆಂದೂ, ಪ್ರಾತಃಕಾಲದಲ್ಲಿ ಬೆಳಕನ್ನುಂಟುಮಾಡಿ ಗೋವುಗಳು ಕೊಟ್ಟಿಗೆಯಿಂದ ಹೊರಗೆ ಬರುವಂತೆ ಮಾಡುವುದರಿಂದ ಗೋವುಗಳ ತಾಯಿಯೆಂದೂ, ಸೂರ್ಯೋದಯಕಾಲದಲ್ಲಿ ಸೂರ್ಯರಶ್ಮಿಗಳು ಸ್ವಲ್ಪ ಕೆಂಪಾಗಿರುವುದರಿಂದ ಈ ದೇವತೆಯು ಕೆಂಪು ಕುದುರೆಗಳನ್ನು ಅಥವಾ ಎತ್ತುಗಳನ್ನು ಕಟ್ಟಿದ ರಥದಲ್ಲಿ ಕುಳಿತು ವೇಗವಾಗಿ ಸಂಚರಿಸುವಳೆಂದೂ ವಿಧವಿಧವಾದ ವರ್ಣನೆಗಳಿವೆ.

ಉಷಶ್ಶಬ್ದದ ರೂಪನಿಷ್ಪತ್ತಿಯ ವಿಚಾರದಲ್ಲಿ ಯಾಸ್ಕಮಹರ್ಷಿಗಳ ವಿವರಣೆಯು ಈ ರೀತಿ ಇರುವುದು—

**ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ||**

ಉಷಾ ಎಂಬ ಶಬ್ದವು ಹೇಗುಂಟಾಯಿತು ಎಂದರೆ—

**ಉಚ್ಛತೀತಿ ಸತ್ಯಾಃ । ಉಚ್ಛೀ ವಿವಾಸೇ । ವಿವಾಸಯತಿ ಹೀಯಂ ತಮಾಂಸಿ ತಸ್ಮಾದುಚ್ಛ-ತೀತ್ಯೇನಮುಸ್ಯಾ ಉಷಾ ಇತ್ಯೇತದಭಿಧಾನಂ ಭವತಿ । ಪುನರಿಯಮುಷಾ ? ರಾತ್ರೇರಪರಃ ಕಾಲಃ ||**

(ನಿ. ೨-೧೮)

ಉಷಾಃ ಎಂಬ ಶಬ್ದವು ಉಚ್ಛೀ ಎಂಬ ಧಾತುವಿನಿಂದ ಉಂಟಾಗಿದೆ. ಈ ಧಾತುವಿಗೆ ಹೊರದೂಡುವುದು ಎಂದರ್ಥವು. ಏನನ್ನು ಹೊರದೂಡುವುದು ಎಂದರೆ ಕತ್ತಲೆಯನ್ನು. ಕತ್ತಲೆಯನ್ನು ಹೊರದೂಡಿ ಬೆಳಕನ್ನುಂಟು

ಮಾಡುವುದರಿಂದ ಈ ದೇವತೆಗೆ ಉಷಾಃ ಎಂದು ಹೆಸರು. ಈ ದೇವತೆಯು ಯಾರು ಎಂದರೆ ರಾತ್ರಿಯ ಕೊನೆಯ ಭಾಗವು, ಎಂದರೆ ರಾತ್ರಿಯು ಕಳೆದು ಸೂರ್ಯೋದಯಕ್ಕೆ ಪೂರ್ವದಲ್ಲಿ ಬೆಳಕು ಹರಿಯುವ ಕಾಲವು. ಇದಕ್ಕೆ ರಾತ್ರೇರಪರಃಕಾಲಃ ಎಂದು ಹೆಸರು. ಯಾಸ್ಕರು ತಮ್ಮ ನಿರುಕ್ತದ ಮತ್ತೊಂದು ಸ್ಥಳದಲ್ಲಿ ಇನ್ನೊಂದು ವಿಧವಾದ ಅರ್ಥವನ್ನು ಹೇಳಿರುವರು—

**ಉಷಾಃ ವಷ್ಟೇಃ ಕಾಂತಿಕರ್ಮಣ ಉಚ್ಛತೇರಿತರಾ ಮಾಧ್ಯಮಿಕಾ ।**

(ನಿ. ೧೨-೭)

ಎಂದರೆ ಉಷಶ್ಶಬ್ದವು '**ವಶ ಕಾಂತೌ**' ಎಂಬ ಧಾತುವಿನಿಂದ ಉಂಟಾಗಿದೆ. ಪ್ರಕಾಶವನ್ನುಂಟುಮಾಡುವುದರಿಂದ ಈ ದೇವತೆಗೆ ಉಷಾಃ ಎಂದು ಹೆಸರು (ಕತ್ತಲೆಯನ್ನು) ಹೊರದೂಡುವುದು ಎಂಬ ಅರ್ಥವನ್ನು ಕೊಡುವ ಉಚ್ಛತಿ ಧಾತುವಿನಿಂದ ಈ ಶಬ್ದ ನಿಷ್ಪತ್ತಿಯಾಗಿರುವುದನ್ನು ಮಾಧ್ಯಮಿಕವೆಂದು (optional) ಹೇಳಬೇಕು.

ಈ ಉಷೋದೇವತೆಯನ್ನು ಋಷಿಗಳು—ಸೂರ್ಯನು ಹಿಂಬಾಲಿಸುವುದರಿಂದ ಸೂರ್ಯನ ಪ್ರಿಯತಮೆ, ರಾತ್ರಿ ಮುಗಿದು ಬಳಿಕ ಉಷಃಕಾಲವು ಹುಟ್ಟುವುದರಿಂದ ರಾತ್ರಿಯ ಪುತ್ರಿ, ಆದಿತ್ಯ, ಭಗ, ವರುಣ ಇವರುಗಳ ಸಹೋದರಿ, ಸ್ವರ್ಗದ ಪುತ್ರಿ, ಅಶ್ವಿನೀದೇವತೆಗಳ ಸಖಿ ಮುಂತಾದ ವಿಶೇಷಣಗಳಿಂದ ಅನೇಕವಿಧವಾಗಿ ವರ್ಣಿಸಿದ್ದಾರೆ.

**ದುಹಿತರ್ದಿವಃ**—ಸ್ವರ್ಗದ ಅಥವಾ ಅಂತರಿಕ್ಷದ ಪುತ್ರಿ. ಬೆಳಕು ಎಂದರೆ ಸೂರ್ಯನ ಬೆಳಕು ನಮಗೆ ಅಂತರಿಕ್ಷ (ಸ್ವರ್ಗ) ದಿಂದ ಲಭಿಸುವುದರಿಂದಲೂ, ಸೂರ್ಯೋದಯಕ್ಕೆ ಪೂರ್ವಭಾವಿಯಾಗಿಯೇ ಉಷಃಕಾಲವು ಉಂಟಾಗುವುದರಿಂದಲೂ ಉಷೋದೇವತೆಯು **ದುಹಿತರ್ದಿವಃ** ಸ್ವರ್ಗದ ಪುತ್ರಿ daughter of heaven ಎಂದು ಕರೆಯಲ್ಪಡುವಳು.

**ಕಥಪ್ರಿಯೇ—ಸ್ತೋತ್ರಪ್ರಿಯೇ** । ಸ್ತೋತ್ರಗಳನ್ನು ಕೇಳುವುದರಲ್ಲಿ ಆಸಕ್ತಿಯುಳ್ಳವಳು.
**ಭುಜೇ—ಭುಜ ಪಾಲನಾಭ್ಯವಹಾರಯೋಃ । ಭೋಗಾಯ ।** ಭೋಗಕ್ಕಾಗಿ for enjoyment.
**ನಕ್ಷಸೇ—ಣಕ್ಷ ಗತೌ ।** ಹೊಂದುವಿ, ಅಪೇಕ್ಷಿಸುವಿ.
**ವಿಭಾವರಿ—ಭಾ ದೀಪ್ತೌ ।** ಪ್ರಕಾಶ ಅಥವಾ ಕಾಂತಿಯಿಂದ ಬೆಳಗುತ್ತಿರುವವಳು (ನಿ. ೨-೧೯).

ಸ್ಕಂದಸ್ವಾಮಿಯು ಭುಜೇ ಎಂಬ ಶಬ್ದಕ್ಕೆ ಪಾಲನಾಯ ಸಂರಕ್ಷಿಸುವುದಕ್ಕಾಗಿ ಎಂದು ಅರ್ಥಮಾಡಿ, **ಕಂ ನಕ್ಷಸೇ ಭುಜೇ** ಎಂಬ ಶಬ್ದಗಳಿಗೆ—ನೀನು ಯಾವ ಮನುಷ್ಯನನ್ನು ಸಂರಕ್ಷಿಸುವುದಕ್ಕಾಗಿ ಹೋಗುವೆ ? ಎಂದರ್ಥ ವಿವರಣೆಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ತೇ**—ಯುಷ್ಮಚ್ಛಬ್ದದ ಷಷ್ಠೀ ಏಕವಚನದ ರೂಪ. '**ತೇ ಮಯಾವೇಕವಚನಸ್ಯ**' (ಪಾ. ಸೂ. ೮-೧-೨೨) ಎಂಬುದರಿಂದ ವಿಭಕ್ತ್ಯಂತಕ್ಕೆ ತೇ ಎಂಬ ಆದೇಶ. '**ಅನುದಾತ್ತಂ ಸರ್ವಮಪಾದಾದೌ**' (ಪಾ. ಸೂ. ೮-೧-೧೮) ಎಂಬುದರಿಂದ ಸರ್ವಾನುದಾತ್ತವಾಗಿ ಬರುತ್ತದೆ.

**ಕಥಪ್ರಿಯೇ**—ಕಥ ವಾಕ್ಯಪ್ರಬಂಧೇ ಧಾತು. ಚುರಾದಿ, ಇದು ಅದಂತವಾದ ಧಾತು. ಚುರಾದಿಗೆ '**ಸತ್ಯಾಪಪಾಶ**' (ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥವಾಗಿ ಣಿಚ್ ಬರುತ್ತದೆ. ಣಿಪರದಲ್ಲಿರುವಾಗ '**ಅತೋ ಲೋಪಃ**' (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಲೋಪ. '**ಸನಾದ್ಯಂತಾ ಧಾತವಃ**' (ಪಾ. ಸೂ ೩-೧-೩೨) ಎಂಬುದರಿಂದ ಕಥಿ ಎಂಬುದು ಧಾತುವಾಗುತ್ತದೆ. '**ಅಚಃಪರಸ್ಮಿನ್ ಪೂರ್ವವಿಧೌ**' (ಪಾ. ಸೂ. ೧-೧-೫೭) ಸೂತ್ರದಿಂದ ಅಲೋಪಕ್ಕೆ ಸ್ಥಾನಿವದ್ಭಾವವಿರುವುದರಿಂದ ಣಿತ್ ನಿಮಿತ್ತಕವಾಗಿ '**ಅತ ಉಪಧಾಯಾಃ**' (ಪಾ. ಸೂ. ೭-೨-೧೧೬) ಸೂತ್ರದಿಂದ ಧಾತುವಿನ ಉಪಧೆಗೆ ವೃದ್ಧಿ ಬರುವುದಿಲ್ಲ. '**ಚಿಂತಿಪೂಜಿ ಕಥಿಕುಂಬಿ ಚರ್ಚಶ್ಚ**' (ಪಾ. ಸೂ. ೩-೩-೧೦೫) ಎಂಬುದರಿಂದ ಕಥಿ ಎಂಬುದಕ್ಕೆ ಅಙ್ ಪ್ರತ್ಯಯ ವಿಹಿತವಾಗಿದೆ. ಅಪರದಲ್ಲಿರುವಾಗ '**ಣೇರನಿಟಿ**' (ಪಾ. ಸೂ. ೬-೪-೫೧) ಎಂಬುದರಿಂದ ಣಿಲೋಪ. ಕಥ ಎಂಬ ಅದಂತಶಬ್ದವಾಗುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ '**ಅಜಾದ್ಯತಃ**' (ಪಾ. ಸೂ. ೪-೧-೪) ಸೂತ್ರದಿಂದ ಟಾಪ್. ಕಥಾ ಎಂದು ಆದಂತ ಶಬ್ದವಾಗುತ್ತದೆ. ಕಥಾಯಾಃ ಪ್ರಿಯಾ ಕಥಾಪ್ರಿಯಾ ಷಷ್ಠೀಸಮಾಸ. '**ಙ್ಯಾಪೋಃ ಸಂಜ್ಞಾಛಂದಸೋರ್ಬಹುಲಂ**' (ಪಾ. ಸೂ. ೬-೩-೬೩) ಎಂಬುದರಿಂದ ಛಂದಸ್ಸಿನಲ್ಲಿ ಸಂಬುದ್ಧಿಯಲ್ಲಿ ಕಥಪ್ರಿಯೆ ಎಂದು ರೂಪವಾಗುತ್ತದೆ. ಥಕಾರಕ್ಕೆ ಧಕಾರವು ಛಾಂದಸವಾಗಿ ಬರುತ್ತದೆ. '**ಆಮಂತ್ರಿತಸ್ಯ ಚ**' ಎಂಬುದರಿಂದ ಅಪಾದಾದಿಯಲ್ಲಿರುವುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಭುಜೇ**—ಭುಜ ಪಾಲನಾಭ್ಯವಹಾರಯೋಃ ಧಾತು. ರುಧಾದಿ '**ಸಂಪದಾದಿಭ್ಯಃ ಕ್ವಿಪ್**' (ವಾ ೨೨೩೩) ಎಂಬುದರಿಂದ ಸಂಪದಾದಿಯಲ್ಲಿ ಇದು ಸೇರಿರುವುದರಿಂದ ಇದಕ್ಕೆ ಕ್ವಿಪ್. ಕ್ವಿಪ್ಪಿನಲ್ಲಿ ಸರ್ವಲೋಪ. ಭುಜ್ ಶಬ್ದ. ಚತುರ್ಥೀ ಏಕವಚನದಲ್ಲಿ ಭುಜೇ ಎಂದು ರೂಪವಾಗುತ್ತದೆ. '**ಅನುದಾತ್ತೌ ಸುಪ್ಪಿತೌ**' ಎಂಬುದರಿಂದ ವಿಭಕ್ತಿಗೆ ಅನುದಾತ್ತಸ್ವರವು ಪ್ರಾಪ್ತವಾದರೆ '**ಸಾವೇಕಾಚಸ್ತೃತೀಯಾದಿಃ**' (ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚ್ಚಿನ ಪರದಲ್ಲಿರುವುದರಿಂದ ಉದಾತ್ತಸ್ವರ ಬರುತ್ತದೆ.

**ಮರ್ತಃ**—ಮೃಙ್ ಪ್ರಾಣತ್ಯಾಗೇ ಧಾತು. '**ಅಸಿಹಸಿ**' ಎಂಬ ಸೂತ್ರದಿಂದ ತನ್‌ಪ್ರತ್ಯಯ. ತಪರದಲ್ಲಿರುವಾಗ ಆರ್ಧಧಾತುಕನಿಮಿತ್ತಕವಾಗಿ ಧಾತುವಿನ ಋಕಾರಕ್ಕೆ ಗುಣ ಮರ್ತ ಎಂದು ರೂಪವಾಗುತ್ತದೆ. ತನ್ ನಿತ್ತಾದುದರಿಂದ '**ಞ್ನಿತ್ಯಾದಿರ್ನಿತ್ಯಂ**' (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನಕ್ಷಸೇ**—ತೃಕ್ಷ ಸ್ತೃಕ್ಷ, ಣಕ್ಷ ಗತೌ ಧಾತು. '**ಣೋ ನಃ**' (ಪಾ. ಸೂ. ೬-೧-೬೫) ಎಂಬುದರಿಂದ ಧಾತುವಿನ ಆದಿಯ ಣಕಾರಕ್ಕೆ ನಕಾರಾದೇಶ. ಮಧ್ಯಮಪುರುಷ ಏಕವಚನದ ಥಾಸಿಗೆ '**ಥಾಸಃ ಸೇ**' (ಪಾ. ಸೂ. ೩-೪-೮೦) ಎಂಬುದರಿಂದ ಸೇ ಎಂಬ ಆದೇಶ. '**ಕರ್ತರಿ ಶಪ್**' (ಪಾ. ಸೂ. ೩-೧-೬೮) ಎಂಬುದರಿಂದ ಶಬ್ವಿಕರಣ. ನಕ್ಷಸೇ ಎಂದು ರೂಪವಾಗುತ್ತದೆ.

**ವಿಭಾವರಿ**—ಭಾ ದೀಪ್ತೌ ಧಾತು. ಅದಾದಿ. '**ಆತೋ ಮನಿನ್‌ಕ್ವನಿಪ್ ವನಿಪಶ್ಚ**' (ಪಾ.ಸೂ. ೩-೪-೭೪) ಎಂಬುದರಿಂದ ವಿ ಉಪಸರ್ಗ ಪೂರ್ವದಲ್ಲಿರುವಾಗ ವನಿಪ್ ಪ್ರತ್ಯಯ ಬರುತ್ತದೆ. ವಿಭಾವನ್ ಶಬ್ದ. ಇದಕ್ಕೆ ಸ್ತ್ರೀತ್ವದಲ್ಲಿ '**ವನೋರಚ**' (ಪಾ. ಸೂ. ೪-೧-೭) ಎಂಬುದರಿಂದ ಙೀಪ್. ಙೀಪ್ ಬರುವಾಗ ತತ್ಸಂನಿಯೋಗದಿಂದ ನಕಾರಕ್ಕೆ ರೇಫಾದೇಶ. ವಿಭಾವರೀ ಎಂದು ಙ್ಯಂತಶಬ್ದ. ಸಂಬುದ್ಧಿಯಲ್ಲಿ '**ಅಂಬಾರ್ಥನದ್ಯೋರ್ಹ್ರಸ್ವಃ**'

(ಪಾ. ಸೂ. ೭-೩-೧೦೭) ಎಂಬುದರಿಂದ ನದಿಗೆ (ಈಕಾರ) ಹ್ರಸ್ವ. ವಿಭಾವರಿ ಎಂದು ರೂಪವಾಗುತ್ತದೆ. **' ಆಮಂತ್ರಿತಸ್ಯ ಚ '** ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ. ‖ ೨೦ ‖

---

‖ ಸಂಹಿತಾಪಾಠಃ ‖

ವಯಂ ಹಿ ತೇ ಅಮನ್ಮಹ್ಯಾನ್ತಾದಾ ಪರಾಕಾತ್ ।

ಅಶ್ವೇ ನ ಚಿತ್ರೇ ಅರುಷಿ ‖ ೨೧ ‖

‖ ಪದಪಾಠಃ ‖

ವಯಂ । ಹಿ । ತೇ । ಅಮನ್ಮಹಿ । ಆ । ಅನ್ತಾತ್ । ಆ । ಪರಾಕಾತ್ ।

ಅಶ್ವೇ । ನ । ಚಿತ್ರೇ । ಅರುಷಿ ‖ ೨೧ ‖

‖ ಸಾಯಣಭಾಷ್ಯಂ ‖

ಅಶ್ವೇ ವ್ಯಾಪನಶೀಲೇ ಚಿತ್ರೇ ಚಾಯನೀಯೇ ಅರುಷಿ ಆರೋಚಮಾನ ಉಷಃಕಾಲಾಭಿಮಾನಿನಿ ದೇವತೇ ತವ ಸ್ವರೂಪಮಾಂತಾತ್ಸಮೀಪಪರ್ಯಂತಮಾ ಪರಾಕಾದ್ದೂರಪರ್ಯಂತಂ ವಯಂ ಮನುಷ್ಯಾ ನಾಮನ್ಮಹಿ । ನ ಬೋದ್ಧುಂ ಸಮರ್ಥಾಃ । ಹಿಶಬ್ದಃ ಪ್ರಸಿದ್ಧೌ । ದೇವತಾಮಹಿಮ್ನಃ ಪಾರಾವಾರಯೋರಜ್ಞಾನಮಸ್ಮಾಸು ಪ್ರಸಿದ್ಧಮಿತ್ಯರ್ಥಃ ‖ ಅಮನ್ಮಹಿ । ಮನ ಜ್ಞಾನೇ । ಬಹುಲಂ ಛಂದಸೀತಿ ಬಹುಲವಚನಾತ್ ಶ್ಯನೋ ಲುಕ್ । ಲುಙ್ಲಙ್ಲೃಙ್ಕ್ಷ್ವಡುದಾತ್ತಃ । ಹಿ ಚೇತಿ ನಿಘಾತಪ್ರತಿಷೇಧಃ । ಅಶ್ವೇ । ಅಶೂ ವ್ಯಾಪ್ತೌ । ಅಶಿಪ್ರುಷೀತ್ಯಾದಿನಾ ಕ್ವನ್ಪ್ರತ್ಯಯಃ । ಆಮಂತ್ರಿತಾದ್ಯುದಾತ್ತತ್ವಂ ‖

‖ ಪ್ರತಿಪದಾರ್ಥ ‖

**ಅಶ್ವೇ**—ವಿಸ್ತಾರವಾಗಿ ವ್ಯಾಪಿಸಿರುವವಳೂ । **ಚಿತ್ರೇ**—ನಾನಾವಿಧವಾದ ಛಾಯೆಯುಳ್ಳವಳೂ । **ಅರುಷಿ**—ಪ್ರಕಾಶಮಾನಳೂ ಆದ ಎಲೈ ಉಷೋದೇವಿಯೇ (ನಿನ್ನ ಮಹಿಮೆಯನ್ನು) । **ಆಂತಾತ್**—(ನಿನ್ನ) ಹತ್ತಿರದಲ್ಲಿರುವ ಸ್ವರೂಪದಿಂದಾಗಲಿ । **ಆ ಪರಾಕಾತ್**—ದೂರದಲ್ಲಿರುವ ಸ್ವರೂಪದಿಂದಾಗಲಿ । **ವಯಂ**—(ಮಾನವರಾದ) ನಾವು । **ನ ಅಮನ್ಮಹಿ**—ತಿಳಿಯಲಾರೆವು ‖

॥ ಭಾವಾರ್ಥ ॥

ವಿಸ್ತಾರವಾದ ವ್ಯಾಪ್ತಿಯುಳ್ಳವಳೂ ನಾನಾವಿಧವಾದ ಛಾಯೆಯುಳ್ಳವಳೂ ಮತ್ತು ಪ್ರಕಾಶಮಾನಳೂ ಆದ ಎಲೈ ಉಷೋದೇವಿಯೇ, ನಿನ್ನ ಮಹಿಮೆಯು ಅಪಾರವಾದುದು. ನಮ್ಮ ಹತ್ತಿರದಲ್ಲಿರುವ ನಿನ್ನ ಸ್ವರೂಪದಿಂದಾಗಲಿ, ದೂರದಲ್ಲಿರುವುದರಿಂದಾಗಲಿ ನಿನ್ನ ಮಹಿಮೆಯನ್ನು ಸರಿಯಾಗಿ ತಿಳಿಯಲು ಮಾನವರಾದ ನಾವು ಅಶಕ್ತರಾಗಿದ್ದೇವೆ.

## English Translation.

O Ushas, spreading in all places, with tinted and brilliant rays we do not know your limit whether we are near or far off.

॥ ವಿಶೇಷವಿಷಯಗಳು ॥

**ಅಶ್ವೇ—ಅಶೂ ವ್ಯಾಪ್ತೌ ।** ತನ್ನ ಕಿರಣಗಳಿಂದ (ಬೆಳಕಿನಿಂದ) ಎಲ್ಲವನ್ನೂ (ಎಲ್ಲಾ ಪ್ರದೇಶವನ್ನೂ) ವ್ಯಾಪಿಸುವವಳು.

**ಚಿತ್ರೇ**—ನಾನಾವಿಧವಾದ ಕಾಂತಿಯಿಂದ ಯುಕ್ತಳಾದವಳು.

**ಅರುಷೇ**—ಪ್ರಕಾಶಮಾನಳಾದವಳು.

**ಅಶ್ವೇ ಚಿತ್ರೇ ಅರುಷಿ**—ಎಂಬ ಶಬ್ದಗಳಿಗೆ ಸ್ಕಂದಸ್ವಾಮಿಯು ವಿಚಿತ್ರವಾದ ಎಂದರೆ ನಾನಾವಿಧವರ್ಣೋಪೇತವಾದ ಕುದುರೆಗಳಿಂದ ಯುಕ್ತಳಾದವಳೂ. ಚಿತ್ರೇ ಎಂದರೆ ಪೂಜ್ಯಳೂ ಎಂದು ಅರ್ಥವಿವರಣೆಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ತೇ**—ಮೂವತ್ತನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಅಮನ್ಮಹಿ**—ಮನ ಜ್ಞಾನೇ ಧಾತು. ದಿವಾದಿ ಲಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ **'ದಿವಾದಿಭ್ಯಃ ಶ್ಯನ್'** ಎಂಬುದರಿಂದ ಶ್ಯನ್ ವಿಕರಣಪ್ರತ್ಯಯವು ಪ್ರಾಪ್ತವಾದರೆ ಅದಕ್ಕೆ **'ಬಹುಲಂ ಛಂದಸಿ'** (ಪಾ. ಸೂ. ೬-೪-೭೧) ಎಂಬುದರಿಂದ ಅಂಗಕ್ಕೆ ಅಡಾಗಮ ಅಮನ್ಮಹಿ ಎಂದು ರೂಪವಾಗುತ್ತದೆ. ಅಟ್ **'ಉದಾತ್ತಃ'** ಎಂದುದರಿಂದ ಇದು ಆದ್ಯುದಾತ್ತವಾದ ಪದ. **'ಹಿಚ'** (ಪಾ. ಸೂ. ೮-೧-೩೪) ಎಂಬುದರಿಂದ ತಿಙಂತನಿಘಾತ ಸ್ವರ ಪ್ರತಿಷೇಧ ಬರುತ್ತದೆ.

**ಅಶ್ವೇ**—ಸಂಬೋಧನಾ ದ್ವಿವಚನಾಂತರೂಪ. ಅಶೂ ವ್ಯಾಪ್ತೌ ಧಾತು. ರುಧಾದಿ. **'ಅಶಿಪ್ರುಷಿಲಟಿಕಣಿ'** (ಉ. ಸೂ. ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯ. ಎಂದಾಗುತ್ತದೆ. ಪಾದದ ಆದಿಯಲ್ಲಿರುವುದರಿಂದ ಅಪಾದಾದೌ ಎಂದು ನಿಘಾತಸ್ವರ ಬರುವಲ್ಲಿ ಪ್ರತಿಷೇಧಮಾಡಿರುವುದರಿಂದ ಸರ್ವಾನುದಾತ್ತ ಸ್ವರವು ಬರುವುದಿಲ್ಲ. **'ಆಮಂತ್ರಿತಸ್ಯ'** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಚಿತ್ರೇ । ಅರುಷಿ—'ಆಮಂತ್ರಿತಸ್ಯ ಚ'** (ಪಾ. ಸೂ ೮-೧-೧೯) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ. ॥ ೨೧ ॥

॥ ಸಂಹಿತಾಪಾಠಃ ॥

ತ್ವಂ ತ್ಯೇಭಿರಾ ಗಹಿ ವಾಜೇಭಿರ್ದುಹಿತರ್ದಿವಃ ।
ಅಸ್ಮೇ ರಯಿಂ ನಿ ಧಾರಯ ॥ ೨೨ ॥

॥ ಪದಪಾಠಃ ॥

ತ್ವಂ । ತ್ಯೇಭಿಃ । ಆ । ಗಹಿ । ವಾಜೇಭಿಃ । ದುಹಿತಃ । ದಿವಃ ।
ಅಸ್ಮೇ ಇತಿ । ರಯಿಂ । ನಿ । ಧಾರಯ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ದಿವೋ ದುಹಿತರ್ದ್ಯುದೇವತಾಯಾಃ ಪುತ್ರಿ ಉಷೋ ದೇವಿ ತ್ಯೇಭಿರ್ವಾಜೇಭಿಸ್ತೈರನ್ನೈಃ ಸಹ ತ್ವಮಾ ಗಹಿ । ಅತ್ರಾಗಚ್ಛ । ಅಸ್ಮೇ । ಅಸ್ಮಾಸು ರಯಿಂ ಧನಂ ನಿ:ಧಾರಯ । ನಿತರಾಂ ಸ್ಥಾಪಯ ॥ ತ್ಯೇಭಿಃ । ಬಹುಲಂ ಛಂದಸೀತಿ ತ್ಯದ್‌ಶಬ್ದಾದ್ಭಿಸ ಐಸಾದೇಶಾಭಾವಃ । ಗಹಿ । ಅಸಕೃದುಕ್ತಂ । ದುಹಿತರ್ದಿವಃ । ಪರಸ್ಯಾಪಿ ದಿವ ಇತ್ಯಸ್ಯ ದಿವೋ ದುಹಿತರಿತ್ಯನ್ವಯೇ ಸತಿ ಪೂರ್ವವತ್ಸಾತ್ಸುಬಾಮಂತ್ರಿತ ಇತಿ ಪರಾಂಗವದ್ಭಾವೇನ ಷಷ್ಠ್ಯಾಮಂತ್ರಿತಸಮುದಾಯಸ್ಯ ಸರ್ವಾನುದಾತ್ತತ್ವಂ । ಯದ್ವಾ । ಕಾರ್ಯಕಾಲಂ ಹಿ ಸಂಜ್ಞಾಪರಿಭಾಷಂ । ಪರಿ ೩ । ಇತಿ ನ್ಯಾಯೇನ ಸುಬಾಮಂತ್ರಿತ ಇತ್ಯಸ್ಯಾಮಂತ್ರಿತಸ್ಯ ಚೇತ್ಯಾಷ್ಟಮಿಕೇನ ಯೋಗೇನೈಕವಾಕ್ಯತ್ವೇ ಸತಿ ಪರತ್ವಾತ್ ಪರಾಂಗವದ್ಭಾವೇ ಸತಿ ಸರ್ವಾನುದಾತ್ತತ್ವಂ । ಕೃತಸ್ವರಯೋಃ ಷಷ್ಠ್ಯಾಮಂತ್ರಿತಯೋಃ ಪಶ್ಚಾದ್ವ್ಯತ್ಯಯೋ ಬಹುಲಮಿತಿ ವ್ಯತ್ಯಸ್ತಪ್ರಯೋಗಃ । ಅಸ್ಮೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇ ಆದೇಶಃ ॥ ॥೩೧॥ ॥೬॥

॥ ಪ್ರತಿಪದಾರ್ಥ ॥

**ದಿವಃ**—ದ್ಯುಲೋಕಾಧಿದೇವತೆಯ । **ದುಹಿತಃ**—ಪುತ್ರಿಯಾದ ಎಲೈ ಉಷೋದೇವತೆಯೇ । **ತ್ಯೇಭಿಃ ವಾಜೇಭಿಃ**—ಆ ಮೃಷ್ಟಾನ್ನಗಳೊಡನೆ । **ತ್ವಂ**—ನೀನು । **ಆ ಗಹಿ**—ಇಲ್ಲಿಗೆ ದಯಮಾಡು । **ಅಸ್ಮೇ**—ನಮ್ಮಲ್ಲಿ । **ರಯಿಂ**—ಧನವನ್ನು । **ನಿ ಧಾರಯ**—ಶಾಶ್ವತವಾಗಿ ಬೆಳೆಸು.

॥ ಭಾವಾರ್ಥ ॥

ದ್ಯುಲೋಕಾಧಿದೇವತೆಯ ಪುತ್ರಿಯಾದ ಎಲೈ ಉಷೋದೇವಿಯೇ, ನೀನು ಆ ಮೃಷ್ಟಾನ್ನಗಳೊಡನೆ ಇಲ್ಲಿಗೆ ದಯಮಾಡು ಮತ್ತು ನಮ್ಮಲ್ಲಿ ಧನವನ್ನು ಶಾಶ್ವತವಾಗಿ ವೃದ್ಧಿಯಾಗುವಂತೆ ಮಾಡು.

## English Translation.

Daughter of heaven, come to us with plenty of food and place wealth among us.

॥ ವಿಶೇಷವಿಷಯಗಳು ॥

**ತ್ಯೇಭಿಃ**—ಇಲ್ಲಿ ತ್ಯ ಶಬ್ದಕ್ಕೆ ತಚ್ಛಬ್ದಾರ್ಥವಿರುವುದು. ತ್ಯೇಭಿಃ ಎಂದರೆ ತೈಃ ಅವುಗಳಿಂದ ಎಂದರ್ಥವು.

**ಅಸ್ಮೇ ರಯಿಂ ನಿಧಾರಯ**—ನಮ್ಮಲ್ಲಿ ವಿಶೇಷವಾಗಿ ಧನವನ್ನು ಇಡು ಎಂದರೆ ನಮಗೆ ವಿಶೇಷವಾಗಿ ಧನವನ್ನು ಕೊಡು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ತ್ಯೇಭಿಃ**—ತ್ಯದ್ ಸರ್ವನಾಮ ಶಬ್ದ. ಇದಕ್ಕೆ ತೃತೀಯಾ ಬಹುವಚನದಲ್ಲಿ ಭಿಸ್ ಪ್ರತ್ಯಯ. '**ತ್ಯದಾದೀನಾಮಃ**' (ಪಾ. ಸೂ. ೭-೨-೧೦೨) ಎಂಬುದರಿಂದ ಅಂತ್ಯಕ್ಕೆ ಅಕಾರಾದೇಶ. '**ಅತೋ ಗುಣೇ**' (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ಬಂದರೆ ತ್ಯ+ಭಿಸ್ ಎಂದಾಗುತ್ತದೆ. ಅಕಾರದ ಪರದಲ್ಲಿರುವುದರಿಂದ ಭಿಸಿಗೆ ಐಸ್ ಆದೇಶವು ಪ್ರಾಪ್ತವಾದರೆ '**ಬಹುಲಂ ಛಂದಸಿ**' (ಪಾ. ಸೂ. ೭-೧-೧೦) ಎಂಬುದರಿಂದ ಐಸಾದೇಶ ಬರುವುದಿಲ್ಲ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗಗಳು ಬಂದರೆ ತ್ಯೇಭಿಃ ಎಂದು ರೂಪವಾಗುತ್ತದೆ.

**ಗಹಿ**—ಗಮ್ಲೃ ಗತೌ ಧಾತು. ಲೋಟ್ ಮಧ್ಯಮಪುರುಷದಲ್ಲಿ ಸಿಪ್ಪಿಗೆ ಹಿ ಆದೇಶ. ಅದಕ್ಕೆ ಅಪಿತ್ವ ವಿಧಾನಮಾಡಿರುವುದರಿಂದ ಙಿದ್ವದ್ಭಾವ. '**ಅನುದಾತ್ತೋಪದೇಶ**' (ಪಾ. ಸೂ. ೬-೪-೩೭) ಎಂಬುದರಿಂದ ಮಕಾರಲೋಪ. '**ಅಸಿದ್ಧವದತ್ರಾ ಭಾತ್**' (ಪಾ. ಸೂ. ೬-೪-೨೨) ಎಂಬುದರಿಂದ ಮಲೋಪವು ಅಸಿದ್ಧವಾದುದರಿಂದ '**ಅತೋಹೇಃ**' (ಪಾ. ಸೂ. ೬-೪-೧೦೫) ಎಂಬುದರಿಂದ ಹಿಲುಕ್ ಬರುವುದಿಲ್ಲ.

**ವಾಜೇಭಿಃ**—'**ಬಹುಲಂ ಛಂದಸಿ**' ಎಂಬುದರಿಂದ ಭಿಸ್ಸಿಗೆ ಐಸಾದೇಶ ಬರುವುದಿಲ್ಲ.

**ದುಹಿತರ್ದಿವಃ**—ಇಲ್ಲಿ ದಿವಃ ಎಂಬುದು ಪರದಲ್ಲಿದ್ದರೂ ದಿವಃ ದುಹಿತಃ ಎಂದು ಅನ್ವಯಮಾಡುವಾಗ ಪೂರ್ವತ್ವವು ಬರುವುದರಿಂದ '**ಸುಬಾಮಂತ್ರಿತೇ ಪರಾಂಗವತ್ ಸ್ವರೇ**' (ಪಾ. ಸೂ. ೨-೧-೨) ಎಂಬುದರಿಂದ ಸ್ವರವಿಧಾನದಲ್ಲಿ ದುಹಿತಃ ಎಂದು ಪರದಲ್ಲಿರುವ ಆಮಂತ್ರಿತಕ್ಕೆ ಅಂಗವಾದುದರಿಂದ "**ಆಮಂತ್ರಿತಸ್ಯಚ**" ಎಂಬುದರಿಂದ ಬರುವ ಸರ್ವಾನುದಾತ್ತಸ್ವರವು ಷಷ್ಠ್ಯಂತ ಸಮುದಾಯಕ್ಕೆ ಬರುತ್ತದೆ. ಅಥವಾ "**ಕಾರ್ಯಕಾಲಂ-ಸಂಜ್ಞಾ ಪರಿಭಾಷಂ**" (ಪರಿ. ೩) ಸಂಜ್ಞಾಸೂತ್ರಗಳು ಪರಿಭಾಷಾಸೂತ್ರಗಳು ಕಾರ್ಯವಿಧಾಯಕ ಸೂತ್ರದಲ್ಲಿ ಆಕ್ಷಿಪ್ತಗಳಾಗಿ ಅವುಗಳೊಡನೆ ಏಕವಾಕ್ಯತೆಯನ್ನು ಹೊಂದಿ ಅರ್ಥವನ್ನು ತಿಳಿಸುತ್ತವೆ. ಇದರಿಂದ "**ಸುಬಾ-ಮಂತ್ರಿತೇ**—ಎಂಬ ಪರಿಭಾಷಾಸೂತ್ರವು—"**ಆಮಂತ್ರಿತಸ್ಯಚ**" ಎಂಬ ಅಷ್ಟಮಿಕ ಸೂತ್ರಸ್ಥಳದಲ್ಲಿ ಉಪಸ್ಥಿತವಾಗಿ ಏಕವಾಕ್ಯತೆಯನ್ನು ಹೊಂದಿ ಅರ್ಥಬೋಧಕವಾಗುತ್ತದೆ. ಆದುದರಿಂದ ಪರನಿಮಿತ್ತತವಾಗಿ ಮೊದಲು ಪರಾಂಗವ-

ದ್ಭಾವ ಬರುವುದರಿಂದ ಸರ್ವಾನುದಾತ್ತಸ್ವರವು ಬರುತ್ತದೆ. ದಿವಃ ದುಹಿತಃ ಎಂಬಲ್ಲಿ ಸ್ವರಬಂದಮೇಲೆ **"ವ್ಯತ್ಯಯೋ ಬಹುಲಂ"** ಎಂಬುದರಿಂದ ವ್ಯತ್ಯಸ್ತ ಪ್ರಯೋಗವನ್ನು ಹೇಳಬೇಕು. ಆಗ ಯಾವ ಆಶಂಕೆಗೂ ಕಾರಣವಿಲ್ಲ.

**ಅಸ್ಮೇ**—ಅಸ್ಮಚ್ಛಬ್ದ ಸಪ್ತಮೀ ಬಹುವಚನದ ಸುಪ್ಪಿಗೆ **"ಸುಪಾಂ ಸುಲುಕ್"** (ಪಾ. ಸೂ. ೭-೧-೩೯) ಸೂತ್ರದಿಂದ ಶೇ ಎಂಬ ಆದೇಶ. ಶಿತ್ತಾದುದರಿಂದ ಸರ್ವಾದೇಶವಾಗಿ ಬರುತ್ತದೆ. **"ಶೇಷೇಲೋಪಃ"** (ಪಾ. ಸೂ ೭-೨-೯೦) ಎಂಬುದರಿಂದ ಅಸ್ಮದಿನ ಅದಿಗೆ ಲೋಪ. ಅಸ್ಮೇ ಎಂದು ರೂಪವಾಗುತ್ತದೆ. ॥ ೨೨ ॥

ಮೂವತ್ತನೇ ಸೂಕ್ತವು ಸಮಾಪ್ತವಾಗಿದೆ.

# ಮೂವತ್ತೊಂದನೆಯ ಸೂಕ್ತವು

**ಸಪ್ತಮೇಽನುವಾಕೇ ಪಂಚ ಸೂಕ್ತಾನಿ । ತತ್ರ ತ್ವಮಗ್ನೇ ಪ್ರಥಮ ಇತಿ ಪ್ರಥಮಂ ಸೂಕ್ತಮಷ್ಟಾದಶರ್ಚಂ । ಆಂಗಿರಸೋ ಹಿರಣ್ಯಸ್ತೂಪ ಋಷಿಃ । ಅಷ್ಟಮೀಷೋಡಶ್ಯಷ್ಟಾದಶ್ಯಸ್ತ್ರಿಷ್ಟುಭಃ । ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ । ಅಗ್ನಿರ್ದೇವತಾ । ತಥಾ ಚಾನುಕ್ರಮಣಿಕಾ । ತ್ವಮಗ್ನೇ ದ್ವ್ಯೂನಾ ಹಿರಣ್ಯಸ್ತೂಪ ಆಗ್ನೇಯಂ ತ್ರಿಷ್ಟುಬಂತ್ಯಾಷ್ಟಮೀಷೋಳಶ್ಯೌ ಚೇತಿ ॥ ಪ್ರಾತರನುವಾಕ ಆಗ್ನೇಯೇ ಕ್ರತಾವಾಶ್ವಿನಶಸ್ತ್ರೇ ಚ ತ್ವಮಗ್ನೇ ಪ್ರಥಮ ಇತಿ ಸೂಕ್ತಂ । ಅಥೈತಸ್ಯಾ ರಾತ್ರೇರಿತಿ ಖಂಡೇ ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ನೂ ಚಿತ್ಸಹೋಜಾ ಅಮೃತೋ ನಿ ತುಂದತೇ । ಆ. ೪-೧೩ । ಇತಿ ಸೂತ್ರಿತಂ ॥ ಅಭಿಪ್ಲವಷಡಹಸ್ಯ ತೃತೀಯೇಽಹನ್ಯಾಗ್ನಿಮಾರುತೇ ಶಸ್ತ್ರ ಇದಂ ಸೂಕ್ತಂ ಜಾತವೇದಸ್ಯನಿವಿದ್ಧಾನೀಯಂ । ತಥಾ ಚ ತೃತೀಯಸ್ಯ ತ್ರ್ಯಹಿರ್ಯಮೇತಿ ಖಂಡೇ ಸೂತ್ರಿತಂ । ತ್ವಮಗ್ನೇ ಪ್ರಥಮೋ ಅಂಗಿರಾ ಇತ್ಯಾಗ್ನಿಮಾರುತಂ । ಆ. ೭-೭ । ಇತಿ ॥ ವಾಜಪೇಯ ಆಗ್ನಿಮಾರುತ ಏತತ್ಸೂಕ್ತಂ ಜಾತವೇದಸ್ಯಂ ನಿವಿದ್ಧಾನೀಯಂ ತೃತೀಯೇನಾಭಿಪ್ಲವಿಕೇನೋಕ್ತಂ ತೃತೀಯಸವನಂ । ಆ. ೯-೯ । ಇತ್ಯತಿದಿಷ್ಟತ್ವಾತ್ ॥**

ಅನುವಾದವು—ಈ ಸೂಕ್ತದಿಂದ ಏಳನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಐದು ಸೂಕ್ತಗಳಿರುವವು. (೩೧-೩೫ ಸೂಕ್ತಗಳು) ಅವುಗಳಲ್ಲಿ **ತ್ವಮಗ್ನೇಪ್ರಥಮ** ಎಂಬ ಮೊದಲನೆಯ ಸೂಕ್ತದಲ್ಲಿ ಹದಿನೆಂಟು ಋಕ್ಕಗಳಿರುವವು. ಈ ಸೂತ್ರಕ್ಕೆ ಅಂಗಿರಸಪುತ್ರನಾದ ಹಿರಣ್ಯಸ್ತೂಪನು ಋಷಿಯು. ಈ ಸೂಕ್ತದ

ಎಂಟು, ಹದಿನಾರು, ಮತ್ತು ಹದಿನೆಂಟನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಉಳಿದ ಋಕ್ಕುಗಳು ಜಗತೀ ಛಂದಸ್ಸಿನವು. ಅಗ್ನಿಯೇ ದೇವತೆಯು. ಅನುಕ್ರಮಣಿಕೆಯಲ್ಲಿ-**ತ್ವಮಗ್ನೇ ದ್ವ್ಯೂನಾ ಹಿರಣ್ಯಸ್ತೂಪ ಆಗ್ನೇಯಂ ತ್ರಿಷ್ಟುಬಂತ್ಯಾಷ್ಟಮಿಷೋಳಶ್ಯೌ ಚ ।** ಎಂದಿರುವುದು. ಆಶ್ವಲಾಯನಶ್ರೌತಸೂತ್ರದ **ರಾತ್ರೇಃ** ಎಂಬ ಖಂಡದಲ್ಲಿ **ತ್ವಮಗ್ನೇ ಪ್ರಥಮ** ಎಂಬ ಈ ಸೂಕ್ತವನ್ನು ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಮತ್ತು ಆಶ್ವಿನಶಸ್ತ್ರಸಂಬಂಧವಾದ ಮಂತ್ರಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹೇಳಿರುವುದು. (ಅ. ೪-೧೩)

ಅಭಿಪ್ಲವಷಡಹವೆಂಬ ಯಾಗದ ಮೂರನೆಯ ದಿವಸದಲ್ಲಿ ಅಗ್ನಿಮಾರುತಶಸ್ತ್ರಮಂತ್ರಗಳಿಗಾಗಿ ಈ ಸೂಕ್ತವನ್ನು ಪಠಿಬೇಕೆಂದು ಆಶ್ವಲಾಯನಶ್ರೌತಸೂತ್ರದ **ತಥಾ ಚ ತೃತೀಯಸ್ಯ ತ್ರ್ಯರ್ಯಮಾ** ಎಂಬ ಖಂಡದಲ್ಲಿ **ತ್ವಮಗ್ನೇ ಪ್ರಥಮೋ ಅಂಗಿರಾ ಇತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಅ. ೭-೭)

ವಾಜಪೇಯವೆಂಬ ಯಾಗದಲ್ಲಿಯೂ ಸಹ ಆಗ್ನಿಮಾರುತಶಸ್ತ್ರಮಂತ್ರಪಠನದಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದಲ್ಲಿ **ಜಾತವೇದಸ್ಯಂ ನಿವಿದ್ಧಾನೀಯಂ ತೃತೀಯೇನಾಭಿಪ್ಲವಿಕೇನೋಕ್ತಂ ತೃತೀಯಸವನಂ** ಎಂದು ಹೇಳಿರುವುದು. (ಅ. ೯-೯)

## ಸೂಕ್ತ—೩೧

॥ ಮಂಡಲ—೧ ॥ ಅನುವಾಕ—೭ ॥ ಸೂಕ್ತ—೩೧ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ—೩೨, ೩೩, ೩೪, ೩೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೮ ॥

॥ ಋಷಿಃ—ಹಿರಣ್ಯಸ್ತೂಪ ಅಂಗಿರಸಃ ॥

॥ ದೇವತಾ—ಅಗ್ನಿಃ ॥

॥ ಛಂದಃ—೧-೭, ೯-೧೫, ೧೭. ಜಗತೀ । ೮, ೧೬, ೧೮ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತ್ವಮಗ್ನೇ ಪ್ರಥಮೋ ಅಙ್ಗಿರಾ ಋಷಿರ್ದೇವೋ ದೇವಾನಾಮ-
ಭವಃ ಶಿವಃ ಸಖಾ ।

ತವ ವ್ರತೇ ಕವಯೋ ವಿದ್ಮನಾಪಸೋಽಜಾಯನ್ತ ಮರುತೋ ಭ್ರಾಜದೃಷ್ಟಯಃ ॥ ೧ ॥

॥ ಪದಪಾಠಃ ॥

ತ್ವಂ । ಅಗ್ನೇ । ಪ್ರಥಮಃ । ಅಙ್ಗಿರಾಃ । ಋಷಿಃ । ದೇವಃ । ದೇವಾನಾಂ । ಅಭವಃ । ಶಿವಃ । ಸಖಾ ।

ತವ । ವ್ರತೇ । ಕವಯಃ । ವಿದ್ಮನಾಽಅಪಸಃ । ಅಜಾಯನ್ತ । ಮರುತಃ । ಭ್ರಾಜತ್ಽಋಷ್ಟಯಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಪ್ರಥಮ ಆದ್ಯ ಅಂಗೀರಸಾನಾಮೃಷೀಣಾಂ ಸರ್ವೇಷಾಂ ಜನಕತ್ವಾತ್ । ತಾದೃಶೋಽಂಗಿರೋನಾಮಕ ಋಷಿರಭವಃ । ತಥಾ ಚ ಬ್ರಾಹ್ಮಣಂ । ಯೇಽಂಗಾರಾ ಆಸಂಸ್ತೇಽಂಗಿರಸೋಽಭವನ್ । ಐ. ಬ್ರಾ. ೩-೩೪ । ಇತಿ । ತಥಾ ಸ್ವಯಂ ದೇವೋ ಭೂತ್ವಾ ದೇವಾನಾಮನ್ಯೇಷಾಂ ಶಿವಃ ಶೋಭನಃ ಸಖಾಭವಃ । ತವ ವ್ರತೇ ತ್ವದೀಯೇ ಕರ್ಮಣಿ ಕವಯೋ ಮೇಧಾವಿನೋ ವಿದ್ಮನಾಪಸೋ ಜ್ಞಾನೇನ ವ್ಯಾಪ್ನುವಾನಾ ಜ್ಞಾತಕರ್ಮಾಣೋ ವಾ ಭ್ರಾಜದೃಷ್ಟಯೋ ದೀಪ್ಯಮಾನಾಯುಧಾ ಮರುತೋ ಮರುತ್ಸಂಜ್ಞಕಾ ದೇವಾ ಅಜಾಯಂತ ॥ ವಿದ್ಮನಾಪಸಃ । ವಿದ ಜ್ಞಾನೇ । ವಿದ್ಮೋ ವೇದನಂ । ಬಹುಲಗ್ರಹಣಾದೌಣಾದಿಕೋ ಮಕ್ಪ್ರತ್ಯಯಃ । ತದಸ್ಯಾಸ್ತೀತಿ ಪಾಮಾದಿಲಕ್ಷಣೋ ನಃ । ಪಾ. ೫-೨-೧೦೦ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ವಿದ್ಮನಾನ್ಯಪಾಂಸಿ ಯೇಷಾಂ ತೇ ವಿದ್ಮನಾಪಸಃ । ಪೂರ್ವಪದಸ್ಯಾನ್ಯೇಷಾಮಪಿ ದೃಶ್ಯತ ಇತಿ ದೃಶಿಗ್ರಹಣಾದವಗ್ರಹಸಮಯೇಽಪಿ ದೀರ್ಘತ್ವಂ । ಅಜಾಯಂತ । ಜನೀ ಪ್ರಾದುರ್ಭಾವೇ । ತಸ್ಯ ಶ್ಯನಿ ಜ್ಞಾಜನೋರ್ಜಾ । ಪಾ. ೭-೩-೭೯ । ಇತಿ ಜಾದೇಶಃ । ಭ್ರಾಜದೃಷ್ಟಯಃ । ಭ್ರಾಜೃ ದೀಪ್ತೌ । ವ್ಯತ್ಯಯೇನ ಶತೃ । ತಸ್ಯ ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಋಷೀ ಗತಾವಿತ್ಯಸ್ಮಾತ್ ಕ್ತಿಚ್ಕ್ತೌ ಚ ಸಂಜ್ಞಾಯಾಮಿತಿ ಕ್ತಿಜಂತ ಋಷ್ಟಿಶಬ್ದಃ । ತತೋ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಪ್ರಥಮಃ**—ಮೊದಲನೆಯವನಾದ । **ಅಂಗಿರಾಃ ಋಷಿಃ**—ಅಂಗಿರೋನಾಮಕ ಋಷಿಯಾಗಿ (ಅಂಗಿರೋನಾಮಕ ಋಷಿಗಳಲ್ಲೆಲ್ಲಾ ಮೊದಲನೆಯವನಾಗಿ) । **ಅಭವಃ**—ಆಗಿದ್ದೀಯೆ । **ದೇವಃ**—(ಸ್ವಯಂ) ದೇವತಾತ್ಮನಾಗಿ । **ದೇವಾನಾಂ**—ಇತರ ದೇವತೆಗಳಿಗೆಲ್ಲಾ । **ಶಿವಃ**—ಮಂಗಳಕರನಾದ । **ಸಖಾ**—ಸ್ನೇಹಿತನಾಗಿದ್ದೀಯೆ । **ತವ ವ್ರತೇ**—ನಿನ್ನನ್ನು ಉದ್ದೇಶಿಸಿದ ಕರ್ಮದಲ್ಲಿ । **ಕವಯಃ**—ಮೇಧಾವಿಗಳೂ । **ವಿದ್ಮನಾಪಸಃ**—ಜ್ಞಾನದಿಂದ ಸಕಲವನ್ನೂ ವ್ಯಾಪಿಸುವವರೂ ಅಥವಾ ಸಕಲ ಕರ್ಮಗಳನ್ನೂ ತಿಳಿದವರೂ । **ಭ್ರಾಜದೃಷ್ಟಯಃ**—ಪ್ರಕಾಶಮಾನಗಳಾದ ಆಯುಧಗಳುಳ್ಳವರೂ ಆದ । **ಮರುತಃ**—ಮರುದ್ದೇವತೆಗಳು । **ಅಜಾಯಂತ**—ಸೃಷ್ಟರಾದರು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಅಂಗಿರೋನಾಮಕ ಋಷಿಗಳಲ್ಲೆಲ್ಲಾ ಮೊದಲನೆಯವನಾಗಿದ್ದೀಯೆ. ಸ್ವಯಂ ದೇವತಾತ್ಮನಾಗಿ ಇತರ ದೇವತೆಗಳಿಗೆಲ್ಲಾ ಮಂಗಳಕರನಾದ ಸ್ನೇಹಿತನಾಗಿದ್ದೀಯೆ. ನಿನ್ನನ್ನು ಉದ್ದೇಶಿಸಿ ನೆರವೇರಿಸಿದ ಕರ್ಮದಲ್ಲಿ ಮೇಧಾವಿಗಳೂ, ಜ್ಞಾನದಿಂದ ಸಕಲವನ್ನೂ ತಿಳಿಯುವವರೂ, ಪ್ರಕಾಶಮಾನಗಳಾದ ಆಯುಧಗಳುಳ್ಳವರೂ ಆದ ಮರುದ್ದೇವತೆಗಳು ಸೃಷ್ಟರಾದರು.

English Translation.

O Agni, you are the first Angiras Raishi; a good friend of the gods; in your rite, the wise, the skilful and the bright-weaponed Maruts were born.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗ್ನಿಯು ಅಂಗಿರಾಋಷಿಗಳಲ್ಲಿ ಮೊದಲನೆಯವನೆಂದು ಹೇಳಿದೆ ಎಂದರೆ ಅಂಗಿರಾಋಷಿಗಳಿಗೆ ಅಗ್ನಿಯು ಮೂಲಪುರುಷನೆಂದಾಯಿತು. ಈ ಸೂಕ್ತದಲ್ಲಿಯೂ ಋಗ್ವೇದದ ಇನ್ನೂ ಅನೇಕ ಇತರ ಋಕ್ಕುಗಳಲ್ಲಿಯೂ **ಅಂಗಿರಃ** ಎಂಬ ಶಬ್ದವನ್ನು ಅಗ್ನಿಯನ್ನು ಸಂಬೋಧಿಸುವುದಕ್ಕಾಗಿ ಉಪಯೋಗಿಸಿದೆ. ಈ ವಿಚಾರದಲ್ಲಿ ವಿವರಣೆಯು ಅವಶ್ಯಕವಾಗಿರುವುದು. **ಯೇಽಙ್ಗಾರಾ ಆಸಂಸ್ತೇಽಙ್ಗಿರಸೋಽಭವನ್** (ಐ. ಬ್ರಾ. ೩-೩೪) ಅಗ್ನಿ ಸಂಬಂಧವಾದ ಅಂಗಾರಗಳು (ಕೆಂಡಗಳು) ಅಂಗಿರಸರೆಂದು ಹೆಸರನ್ನು ಪಡೆದವು-ಎಂದು ಐತರೇಯಬ್ರಾಹ್ಮಣದಲ್ಲಿ ಪ್ರಜಾಪತಿದುಹಿತೃಧ್ಯಾನೋಪಾಖ್ಯಾನದಲ್ಲಿ ಹೇಳಿದೆ. ಪೂರ್ವದಲ್ಲಿ ಪ್ರಜಾಪತಿಯು (ಬ್ರಹ್ಮನು) ತನ್ನ ಮಗಳನ್ನು (ಉಷಸ್ಸು ಅಥವಾ ದ್ಯೋರೂಪ) ಕೆಟ್ಟಭಾವನೆಯಿಂದ (ಕಾಮಲಾಲಸೆಯಿಂದ) ಮನಸ್ಸಿನಲ್ಲಿ ಧ್ಯಾನಿಸಿದನು. ಅದು ದೇವತಗಳಿಗೆ ಗೊತ್ತಾಗಿ ಈ ಕೆಟ್ಟಕೆಲಸವನ್ನು ಮಾಡದಂತೆ ತಡೆಯಬೇಕೆಂದು ಯೋಚಿಸಿದರು. ಆದರೆ ಪ್ರಜಾಪತಿಯನ್ನು ಶಿಕ್ಷಿಸಿ ಈ ಕೆಲಸಮಾಡದಂತೆ ನಿರ್ಬಂಧಪಡಿಸಲು ದೇವತೆಗಳಿಗೆ ಶಕ್ತಿಯಿರಲಿಲ್ಲ. ಆದುದರಿಂದ ದೇವತೆಗಳೆಲ್ಲರೂ ಸೇರಿ ಘೋರವಾದ ತಮ್ಮ ತಮ್ಮ ಸ್ವರೂಪವನ್ನು ಒಟ್ಟಿಗೆ ಒಂದುಗೂಡಿಸಿ ರುದ್ರನೆಂಬ ದೇವನನ್ನು ಉತ್ಪನ್ನ

ಮಾಡಿ, ಈ ಪ್ರಜಾಪತಿಯನ್ನು ಶಿಕ್ಷಿಸೆಂದು ಹೇಳಿದರು. ಇದನ್ನು ತಿಳಿದು ಪ್ರಜಾಪತಿಯು ಭೀತನಾಗಿ ಮೃಗರೂಪ ವನ್ನು ಧರಿಸಿ ಅಂತರಿಕ್ಷಕ್ಕೆ ನೆಗೆದನು. ಮೃಗನಕ್ಷತ್ರವೆಂಬ ಹೆಸರಿನಿಂದ ಇರುವ ಪ್ರಜಾಪತಿಯನ್ನು ಈಗಲೂ ನೋಡ ಬಹುದು. ಆಗ ರುದ್ರನು ಆರ್ದ್ರಾನಕ್ಷತ್ರರೂಪದಿಂದ ಕಾಣಿಸಿಕೊಂಡು ಪ್ರಜಾಪತಿಯಮೇಲೆ ಬಾಣಪ್ರಯೋಗ ಮಾಡಿದನು. ಆಗ ಪ್ರಜಾಪತಿಗೆ ವೀರ್ಯಸ್ಖಲನವಾಯಿತು. ಆ ವೀರ್ಯವನ್ನು ಮರುತ್ತುಗಳು ನಾನಾ ದೆಸೆಗೆ ಹರಡಿ ಭಸ್ಮಮಾಡಿದವು. ಅದರಿಂದ (ಆ ವೀರ್ಯದಿಂದ) ಮೊದಲು ಆದಿತ್ಯನೂ ಬಳಿಕ ಭೃಗುವಾರುಣಿಯೂ ಹುಟ್ಟಿದರು. ಉಳಿದ ಅಂಗಾರಗಳಿಂದ (ಕೆಂಡಗಳಿಂದ) ಅಂಗಿರಸರೆಂಬುವರ ಉತ್ಪತ್ತಿಯಾಯಿತು ಎಂದು ಹೇಳಿದೆ.

ಪುರಾಣಾದಿಗಳಲ್ಲಿ ಅಂಗಿರಾಃ ಎಂಬ ಋಷಿಯು ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬನೆಂದು ಹೇಳಿದೆ. ವೇದ ಗಳಲ್ಲಿ ಈ ಅಂಗಿರನೆಂಬುವನು ಬಹುಮುಖ್ಯನಾದ ಒಬ್ಬ ಋಷಿಯು ಮತ್ತು ಅನೇಕ ಪ್ರಸಿದ್ಧರಾದ ಋಷಿಗಳಿಗೆ ಮೂಲ ಪುರುಷನು. ಮಹಾಭಾರತದ ವನಪರ್ವದಲ್ಲಿ ಮಾರ್ಕಂಡೇಯಯುಧಿಷ್ಠಿರಸಂವಾದದಲ್ಲಿ ಈ ವಿಷಯವಿದೆ. ಕಾರಣಾಂತರ ದಿಂದ ಅಗ್ನಿಯು ತನ್ನ ಕರ್ತವ್ಯವನ್ನು ಬಿಟ್ಟು ಪ್ರಚ್ಛನ್ನವೇಷದಿಂದ ವನಕ್ಕೆ ಹೊರಟು ಹೋದನು. ಆಗ ಅಂಗಿರಾ ಎಂಬ ಋಷಿಯು ಅಗ್ನಿಗೆ ಬದಲಾಗಿ ಯಜ್ಞದಲ್ಲಿ ದೇವತೆಗಳಿಗೆ ಹವಿರ್ಭಾಗಗಳನ್ನು ಒಯ್ಯುತ್ತ ಅಗ್ನಿಯ ಕೆಲಸವನ್ನು ಮಾಡುತ್ತಿದ್ದನು. ಮತ್ತು ಅಗ್ನಿಯನ್ನು ಹಿಂದಕ್ಕೆ ಬಂದು ತನ್ನ ಕರ್ತವ್ಯವನ್ನು ನೆರವೇರಿಸಬೇಕೆಂದು ಪ್ರಾರ್ಥಿಸಿದನು. ಅಗ್ನಿಯ ಕರ್ತವ್ಯಗಳನ್ನು ನೆರವೇರಿಸುತ್ತಿದ್ದುದರಿಂದ ಈ ಅಂಗಿರಾಋಷಿಗೆ ಅಗ್ನಿಯ ಪುತ್ರನೆಂದೂ ಈ ಋಷಿಯ ವಂಶೀಕರಿಗೆ ಅಂಗಿರಸ್ಸುಗಳೆಂದೂ ಹೆಸರು ಪ್ರಸಿದ್ಧವಾಯಿತು.

ಇಂತಹ ಇನ್ನೂ ಕೆಲವು ಉಪಾಖ್ಯಾನಗಳು ಪುರಾಣಗಳಲ್ಲಿ ಇರುವವು. ಇವಲ್ಲದೆ ಋಗ್ವೇದ ಸಂಹಿತೆ ಯಲ್ಲಿಯೇ—

**ತೇ ಅಂಗಿರಸಃ ಸೂನವಸ್ತೇ ಅಗ್ನೇಃ ಪರಿಜಜ್ಞಿರೇ ।**

(ಋ. ಸಂ. ೧೦–೬೨–೫)

ಎಂದರೆ ಅಂಗಿರಸ್ಸೆಂಬ ಋಷಿಗಳು ಅಗ್ನಿಯ ಪುತ್ರರು ಎಂದು ಸ್ಪಷ್ಟವಾಗಿ ಹೇಳಿದೆ. ಈ ಋಕ್ಕನ್ನು ಭಾಷ್ಯಕಾರರು ಏಕೆ ಉದಹರಿಸಲಿಲ್ಲವೋ ತಿಳಿಯುವುದಿಲ್ಲ.

ಈ ಅಂಗಿರಾ ಎಂಬ ಋಷಿಯು ಬಹು ಪುರಾತನಕಾಲದವನೆಂದೂ ಋಗ್ವೇದದ ಅನೇಕ ಋಷಿಗಳು ಈತನನ್ನು ತಮ್ಮ ವಂಶದ ಮೂಲಪುರುಷನೆಂದು ಅಲ್ಲಲ್ಲಿ ಹೇಳಿಕೊಂಡಿರುವುದೂ ಋಗ್ವೇದದ ಕೆಲವು ಋಕ್ಕುಗಳಿಂದ ವ್ಯಕ್ತ ವಾಗುವುದು.

**ಮನುಷ್ವದಗ್ನೇ ಅಂಗಿರಸ್ವದಂಗಿರೋ ಯಯಾತಿವತ್ಸದನೇ ಪೂರ್ವವಚ್ಛುಚೇ ॥**

(ಋ. ಸಂ. ೧–೩೧–೧೭)

**ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ॥**

(ಋ. ಸಂ. ೧–೪೫–೩)

**ದಧ್ಯಙ್ ಹ ಮೇ ಜನುಷಂ ಪೂರ್ವೋ ಅಂಗಿರಾಃ ಪ್ರಿಯಮೇಧಃ ಕಣ್ವೋ ಅತ್ರಿರ್ಮನುರ್ವಿ**

**ದುಸ್ತ್ರೇ ಮೇ ಪೂರ್ವೇ ಮನುರ್ವಿದುಃ ॥**

(ಋ. ಸಂ. ೧-೧೩೯-೯)

ಈ ಋಕ್ಕುಗಳು ಅಂಗಿರಾಋಷಿಯು ಅನೇಕ ಋಷಿಗಳಿಗೆ ಪೂರ್ವಿಕನೆಂದು ತಿಳಿಸುವವು. ಈ ಅಂಗಿರಾಋಷಿಯ ವಂಶದವರಲ್ಲಿ ಅಥರ್ವನ್ ಎಂಬುವನು ಮುಖ್ಯನಾದವನು. ಇವನಿಗೆ ಬೃಹಸ್ಪತಿ, ಗೋತಮ, ವೃಷಣ ಎಂಬ ಮೂವರು ಪುತ್ರರು. ವೃಷಣನೆಂಬವನು ಈ ಅಥರ್ವಣನಿಗೆ ಪಥ್ಯಾ ಎಂಬ ಪತ್ನಿಯಲ್ಲಿ ಹುಟ್ಟಿದ ಪುತ್ರನು. ಇವನ ವಿಚಾರವು ವೇದದಲ್ಲಿ ಅನೇಕಕಡೆ ಸೂಚಿಸಲ್ಪಟ್ಟಿದೆ. ವೃಷಣನ ಮಗನು ಸುಧನ್ವಾನ್ ಆಂಗಿರನೆಂಬುವನು ಈ ಸುಧನ್ವನಿಗೆ ಋಭು, ವಿಭ್ವನ್, ವಾಜ ಎಂಬ ಮೂವರು ಪುತ್ರರು. ಈ ಮೂವರೂ ಋಭುಗಳೆಂದೇ ವೇದದಲ್ಲಿ ಹೇಳಲ್ಪಟ್ಟಿರುವರು ಇವರು ತ್ವಷ್ಟೃಪ್ರಜಾಪತಿಯ ಶಿಷ್ಯರೆಂದು ಹೇಳಿದೆ. ಈ ಅಂಗಿರಾಋಷಿಯ ವಂಶದಲ್ಲಿ ಬೃಹಸ್ಪತಿ ಎಂಬ ಹೆಸರಿನ ಋಷಿಗಳು ಮೂವರಿದ್ದರು. ಹಿಂದೆ ಹೇಳಿದ ಋಭುಗಳೂ ಬೃಹಸ್ಪತಿಯೂ ದೇವತೆಗಳೆಂದು ಭಾವಿಸಲ್ಪಟ್ಟು ಅವರ ಸ್ತೋತ್ರರೂಪವಾದ ಅನೇಕ ಋಕ್ಕುಗಳು ಋಗ್ವೇದದಲ್ಲಿವೆ. ಈ ಮೂವರು ಬೃಹಸ್ಪತಿಗಳಲ್ಲಿ ಮೊದಲನೆಯವನು ಪಣಿ ಎಂಬ ದಸ್ಯುರಾಜನನ್ನು ಕೊಂದು ಅವನು ಅಪಹರಿಸಿದ್ದ ಗೋವುಗಳನ್ನು ಹಿಂದಕ್ಕೆ ತಂದನೆಂದೂ; ಅಂಶುಮತೀ ಎಂಬ ನದಿಯ ದಡದ ಮೇಲೆ ರಾಜ್ಯವಾಳುತ್ತಿದ್ದ ದಾಸನೆಂಬ ಮತ್ತೊಬ್ಬ ದಸ್ಯುಮುಖಂಡನನ್ನು ತನ್ನ ಹತ್ತುಸಾವಿರ ಅನುಚರರೊಡನೆ ಯುದ್ಧಮಾಡಿ ಸೋಲಿಸಿದನೆಂದೂ ಇತಿಹಾಸವಿದೆ. ಮತ್ತೊಬ್ಬ ಬೃಹಸ್ಪತಿಯ ಮಗನಾದ ಭರದ್ವಾಜ ನೆಂಬ ಋಷಿಯು ಶಂಬರನೆಂಬ ದೈತ್ಯನನ್ನು ಸಂಹರಿಸಿದ ದಿವೋದಾಸನೆಂಬುವನಿಗೆ ಪುರೋಹಿತನಾಗಿದ್ದನು. ಅಂತೂ ಅಂಗಿರಾಋಷಿಯ ವಂಶವು ಬಹು ದೊಡ್ಡದು ಮತ್ತು ಅನೇಕ ಪ್ರಸಿದ್ಧಪುರುಷರು ಈ ವಂಶದವರಾಗಿದ್ದರು. ಋಗ್ವೇದದಲ್ಲಿ ಅನೇಕಕಡೆ ಎಂದರೆ ಅಗ್ನಿಶಬ್ದವನ್ನು ಉಪಯೋಗಿಸಬೇಕಾದ ಕಡೆಗಳಲ್ಲಿ ಅಂಗಿರ ಎಂಬ ಶಬ್ದದ ಪ್ರಯೋಗವು ಬಹಳವಾಗಿದೆ.

ಈ ಸೂಕ್ತದ ಋಷಿಯಾದ ಹಿರಣ್ಯಸ್ತೂಪನು ಅಂಗಿರಸವಂಶೋದ್ಭವನಾದುದರಿಂದ ತನ್ನ ವಂಶಕ್ಕೆ ಮೂಲ ಪುರುಷನಾದ ಅಗ್ನಿಯನ್ನು ಬಹು ಚೆನ್ನಾಗಿಯೂ ಅರ್ಥಗರ್ಭಿತವಾಗಿಯೂ ಇರುವ ಋಕ್ಕುಗಳಿಂದ ಸ್ತೋತ್ರಮಾಡಿರು ವನು. ಈ ಸೂಕ್ತದಲ್ಲಿ ಬಹುಭಾಗ ಋಕ್ಕುಗಳು ತ್ವಮಗ್ನೇ ಅಥವಾ ತ್ವಂ ನೋ ಅಗ್ನೇ ಎಂಬ ಶಬ್ದಗಳಿಂದಲೇ ಪ್ರಾರಂಭವಾಗಿರುವವು. ಈ ಹಿರಣ್ಯಸ್ತೂಪಋಷಿಯು ಋಗ್ವೇದಸಂಹಿತೆಯಲ್ಲಿ ಪ್ರಥಮ ಮಂಡಲದ ૩೧-૩૩ (೭೧ ಋಕ್ಕುಗಳು) ಸೂಕ್ತಗಳಿಗೂ ಒಂಭತ್ತನೆಯ ಮಂಡಲದ ೪ನೆಯ ಸೂಕ್ತಕ್ಕೂ (೧೦ ಋಕ್ಕುಗಳು) ಹತ್ತನೆಯ ಮಂಡಲದ ೬೯ನೆಯ ಸೂಕ್ತಕ್ಕೂ (೧೦ ಋಕ್ಕುಗಳು) ಒಟ್ಟು ೯೧ ಋಕ್ಕುಗಳಿಗೆ ಋಷಿಯಾಗಿರುವನು. ಈ ಋಷಿಯ ಸೂಕ್ತಗಳೆಲ್ಲವೂ ಪ್ರೌಢಶೈಲಿಯಲ್ಲಿಯೇ ಇವೆ.

**ದೇವೋ ದೇವಾನಾಮಭವಃ ಶಿವಃ ಸಖಾ**—ದೇವತೆಗಳಿಗೆ ಉತ್ತಮನಾದ ಸ್ನೇಹಿತನಾಗಿರುವೆ.

**ತವ ವ್ರತೇ—ತ್ವದೀಯೇ ಕರ್ಮಣಿ ।** ನಿನ್ನ ಸಂಬಂಧವಾದ ಕರ್ಮದಲ್ಲಿ ಎಂದರೆ, ನಿನ್ನ ಸಹಾಯದಿಂದ ಮಾಡುವ ಯಜ್ಞಯಾಗಾದಿಕರ್ಮಗಳಲ್ಲಿ ಎಂದರ್ಥವು.

**ಕವಯಃ—ಮೇಧಾವಿನಃ ।** ಬುದ್ಧಿವಂತರು.

**ವಿದ್ಮನಾಪಸಃ**—**ವಿದ ಜ್ಞಾನೇ । ವಿದ್ಮೋ ವೇದನಂ । ತದಸ್ಯಾಸ್ತೀತಿ ವಿದ್ಮನಂ ವಿದ್ಮನಾನ್ಯಪಾಂಸಿ ಯೇಷಾಂ ತೇ ವಿದ್ಮನಾಪಸಃ । ಜ್ಞಾನೇನ ಪ್ರಾಪ್ನುವಾನಾ ಜ್ಞಾತಕರ್ಮಾಣೋ ವಾ ॥** ವಿದಧಾತುವಿಗೆ ಜ್ಞಾನ, ತಿಳುವಳಿಕೆ ಎಂದರ್ಥವು ಜ್ಞಾನದಿಂದ ತಿಳಿಯಲ್ಪಡುವವರಾದ ಅಥವ ಯಜ್ಞಾದಿಕರ್ಮಗಳ ಸ್ವರೂಪವನ್ನು ತಿಳಿದವರಾದ

**ಭ್ರಾಜದೃಷ್ಟಯಃ**—ಇಲ್ಲಿ **ಭ್ರಾಜತ್+ಋಷ್ಟಿಃ= ಭ್ರಾಜದೃಷ್ಟಿಃ** ಎಂದು ಪದಚ್ಛೇದಮಾಡಬೇಕು. **ಭ್ರಾಜೃ ದೀಪ್ತೌ । ಋಷೀ ಗತೌ ।** ಭ್ರಾಜತ್ ಎಂದರೆ ಪ್ರಕಾಶಮಾನವಾದ, ಋಷ್ಟಿ ಎಂದರೆ ಆಯುಧ. ಆದುದರಿಂದ ಭ್ರಾಜದೃಷ್ಟಯಃ ಎಂದರೆ ಪ್ರಕಾಶಮಾನವಾದ ಆಯುಧಗಳುಳ್ಳವರು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅಭವಃ**—ಭೂ ಸತ್ತಾಯಾಂ ಧಾತು. ಲಙ್ ಮಧ್ಯಮಪುರುಷ ಏಕವಚನದ ರೂಪ. **' ತಿಙ್ಙತಿಙಃ '** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ವಿದ್ಮನಾಪಸಃ**—ವಿದ ಜ್ಞಾನೇ ಧಾತು. ಅದಾದಿ. ವಿದ್ಮೋ ವೇದನಮ್ (ತಿಳುವಳಿಕೆ). **' ಉಣಾದಯೋ ಬಹುಲಂ '** (ಪಾ. ಸೂ. ೩-೩-೧) ಎಂಬುದರಿಂದ ಬಹುಲಗ್ರಹಣದಿಂದ ಉಣಾದಿಯಲ್ಲಿ ಹೇಳಿರುವ ಮಕ್ ಪ್ರತ್ಯಯ ಬರುತ್ತದೆ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ವಿದ್ಮ ಅಸ್ಯ ಅಸ್ತಿ ಇತಿ ವಿದ್ಮನಂ. ಮತ್ವರ್ಥದಲ್ಲಿ **' ಲೋಮಾದಿ ಪಾಮಾದಿ ಪಿಚ್ಛಾದಿಭ್ಯಃ ಶನೇಲಚಃ '** (ಪಾ. ಸೂ. ೫-೨-೧೦೦) ಎಂಬುದರಿಂದ ನ ಪ್ರತ್ಯಯ. ಇದು ಪಾಮಾದಿಯಲ್ಲಿ ಸೇರಿರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇದು ಅಂತೋದಾತ್ತವಾಗುತ್ತದೆ. ವಿದ್ಮನಾನಿ ಅಪಾಂಸಿ ಯೇಷಾಂ ತೇ ವಿದ್ಮನಾಪಸಃ. **' ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ '** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. **' ಅನ್ಯೇಷಾಮಪಿ ದೃಶ್ಯತೇ '** (ಪಾ. ಸೂ. ೬-೩-೧೩೭) ಎಂಬಲ್ಲಿ ದೃಶಧಾತುವನ್ನು ಗ್ರಹಣಮಾಡಿರುವುದರಿಂದ ಪೂರ್ವಪದಕ್ಕೆ ಅವಗ್ರಹ ಸಮಯದಲ್ಲಿಯೂ ದೀರ್ಘ ಬರುತ್ತದೆ.

**ಅಜಾಯಂತ**—ಜನೀ ಪ್ರಾದುರ್ಭಾವೇ ಧಾತು. ದಿವಾದಿ. ಲಙ್ ಪ್ರಥಮಪುರುಷ ಬಹುವಚನ ಝ ಪ್ರತ್ಯಯಕ್ಕೆ ಅಂತಾದೇಶ. **' ದಿವಾದಿಭ್ಯಃ ಶ್ಯನ್ '** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. ಶ್ಯನ್‌ಪರದಲ್ಲಿರುವಾಗ **' ಜ್ಞಾಜನೋರ್ಜಾ '** (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾ ಎಂಬ ಆದೇಶ. ಲಙ್ ನಿಮಿತ್ತಕವಾಗಿ ಅಂಗಕ್ಕೆ ಅಡಾಗಮ. ಅಜಾಯ+ಅಂತ ಎಂದಿರುವಾಗ **' ಅತೋ ಗುಣೇ '** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ಬಂದರೆ ಅಜಾಯಂತ ಎಂದು ರೂಪವಾಗುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಭ್ರಾಜದೃಷ್ಟಯಃ**—ಭ್ರಾಜೃ ದೀಪ್ತೌ ಧಾತು. ಭ್ವಾದಿ. ಆತ್ಮನೇ ಪದಿ. **' ವ್ಯತ್ಯಯೋ ಬಹುಲಂ '** (ಪಾ. ಸೂ. ೩-೧-೮೫) ಎಂಬುದರಿಂದ ವ್ಯತ್ಯಯವಾಗಿ ಲಡರ್ಥದಲ್ಲಿ ಶತೃಪ್ರತ್ಯಯ. ಶಬ್ವಿಕರಣ. ಭ್ರಾಜತ್ ಎಂಬ ಶಬ್ದವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಶಪ್ಪಿನ ಪರದಲ್ಲಿರುವುದರಿಂದ ಲಸಾರ್ವಧಾತುಕವಾದ ಶತೃ

ಪ್ರತ್ಯಯವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ.

ಋಷೀ ಗತೌ. ಧಾತು. ಇದಕ್ಕೆ ಕ್ತಿಚ್‌ಕ್ತೌ ಚ ಸಂಜ್ಞಾಯಾಂ (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್. ಋಷ್+ತಿ ಎಂದಿರುವಾಗ **'ಷ್ಟುನಾ ಷ್ಟುಃ'** (ಪಾ. ಸೂ. ೮-೪-೪೧) ಎಂಬುದರಿಂದ ಷ್ಟುತ್ವ. ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಋಷ್ಟಿ ಎಂದು ಶಬ್ದವಾಗುತ್ತದೆ. ಭ್ರಾಜಂತಿ (ಜಂತ್ಯ) ಋಷ್ಟಯಃ ಯೇಷಾಂ ತೇ ಭ್ರಾಜದೃಷ್ಟಯಃ ಬಹುವ್ರೀಹಿಸಮಾಸ. **'ಬಹುವ್ರೀಹೌ ಪ್ರಕೃತ್ಯಾ'** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ ॥ ೧ ॥

॥ ಸಂಹಿತಾಪಾಠಃ ॥

ತ್ವಮ॑ಗ್ನೇ ಪ್ರಥ॒ಮೋ ಅಙ್ಗಿ॑ರಸ್ತಮಃ ಕ॒ವಿರ್ದೇ॒ವಾನಾ॒ಂ ಪರಿ॑
ಭೂಷಸಿ ವ್ರ॒ತಮ್ ।
ವಿ॒ಭುರ್ವಿಶ್ವ॑ಸ್ಮೈ॒ ಭುವ॑ನಾಯ॒ ಮೇಧಿ॑ರೋ ದ್ವಿಮಾ॒ತಾ ಶ॒ಯುಃ
ಕ॑ತಿ॒ಧಾ ಚಿ॑ದಾ॒ಯವೇ॑ ॥ ೨ ॥

॥ ಪದಪಾಠಃ ॥

ತ್ವಮ್ । ಅ॒ಗ್ನೇ॒ । ಪ್ರ॒ಥ॒ಮಃ । ಅಙ್ಗಿ॑ರಃಽತಮಃ । ಕ॒ವಿಃ । ದೇ॒ವಾನಾ॑ಮ್ । ಪರಿ॑ ।
ಭೂ॒ಷ॒ಸಿ॒ । ವ್ರ॒ತಮ್ ।
ವಿ॒ಽಭುಃ । ವಿಶ್ವ॑ಸ್ಮೈ । ಭುವ॑ನಾಯ । ಮೇಧಿ॑ರಃ । ದ್ವಿ॒ಽಮಾ॒ತಾ । ಶ॒ಯುಃ ।
ಕ॒ತಿ॒ಧಾ । ಚಿ॒ತ್ । ಆ॒ಯವೇ॑ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಪ್ರಥಮ ಆದ್ಯ ಅಂಗಿರಸ್ತಮೋಽತಿಶಯೇನಾಂಗಿರಾ ಭೂತ್ವಾ ಕವಿರ್ಮೇಧಾವೀ ಸನ್ ದೇವಾನಾಮನ್ಯೇಷಾಂ ವ್ರತಂ ಕರ್ಮ ಪರಿ ಭೂಷಸಿ । ಪರಿತೋಽಲಂಕರೋಷಿ । ಕೀದೃಶಸ್ತ್ವಂ । ವಿಶ್ವಸ್ಮೈ ಭುವನಾಯ ಸಮಸ್ತಲೋಕಾನುಗ್ರಹಾರ್ಥಂ ವಿಭುರ್ಬಹುವಿಧಃ । ಆಹವನೀಯಾದ್ಯನೇಕ-ರೂಪಧಾರೀತ್ಯರ್ಥಃ । ಮೇಧಿರೋ ಮೇಧಾವಾನ್ ದ್ವಿಮಾತಾ ದ್ವಯೋರರಣ್ಯೋರುತ್ಪನ್ನಃ । ಯದ್ವಾ । ದ್ವಯೋರ್ಲೋಕಯೋರ್ನಿರ್ಮಾತಾ । ಆಯವೇ ಮನುಷ್ಯಾರ್ಥಂ ಕತಿಧಾ ಚಿತ್ ಕತಿಭಿಃ ಪ್ರಕಾರೈಃ ಸರ್ವತ್ರ ಶಯುಃ ಶಯಾನಃ । ತತ್ತನ್ಮನುಷ್ಯಗೃಹೇಽವಸ್ಥಿತಸ್ಯ ತವ ಪ್ರಕಾರಾ ಇಯಂತ ಇತಿ ನ ಕೇನಾಪಿ ಜ್ಞಾಯತ ಇತ್ಯರ್ಥಃ ॥ ಭೂಷಸಿ । ಭೂಷ ಅಲಂಕಾರೇ । ಭೌವಾದಿಕಃ । ವಿಭುಃ । ವಿಪ್ರಸಂಭ್ಯೋ ಡ್ವಸಂಜ್ಞಾಯಾಂ । ಪಾ. ೩-೨-೧೮೦ । ಇತಿ ವಿಪೂರ್ವಾದ್ಭವತೇರ್ಡುಪ್ರತ್ಯಯಃ । ಕೃದುತ್ತರಪದಪ್ರಕೃತಿ-ಸ್ವರತ್ವಂ । ಭುವನಾಯ । ಭೂಸೂಧೂಭ್ರಸ್ಜಿಭ್ಯಶ್ಛಂದಸಿ । ಉ. ೨-೮೦ । ಇತಿ ಕ್ಯುನ್ । ಯೋರನಾ-ದೇಶೇ ನಿತ್ಸ್ವರೇಣಾದ್ಯುದಾತ್ತತ್ವಂ । ಮೇಧಿರಃ । ಮೇಧೃ ಸಂಗಮೇ ಚ । ಅಸ್ಮಾದ್ಬಾಹುಲಕ ಇರನ್ಪ್ರ-ತ್ಯಯಃ । ನಿತ್ಸ್ವರಃ । ದ್ವಿಮಾತಾ । ದ್ವೌ ಮಾತರೌ ಯಸ್ಯಾಸೌ ದ್ವಿಮಾತಾ। ನದ್ಯೃತಶ್ಚ ।ಪಾ. ೫-೪-೧೫೩ । ಇತಿ ಕಪ್ರತ್ಯಯೋ ನ ಭವತಿ । ಮಾತೃಮಾತೃಕಯೋರ್ಭೇದೇನೋಪಾದಾನಾನ್ನದ್ಯೃತಶ್ಚೇತಿ ಕಬಪಿ ವಿಭಾಷ್ಯತ ಇತಿ ತಸ್ಯ ಮಾತೃಶಬ್ದವಿಷಯೇ ಪಾಕ್ಷಿಕತ್ವೋಕ್ತಿಃ । ತ್ರಿಚಕ್ರಾದಿತ್ವಾದುತ್ತರಪದಾಂತೋದಾ-ತ್ತತ್ವಂ । ಯದ್ವಾ । ದ್ವಯೋರ್ಮಾತಾ । ದ್ವಿಮಾತಾ । ಸಮಾಸಸ್ಯೇತ್ಯಂತೋದಾತ್ತತ್ವಂ । ಶಯುಃ । ಶೀಙ್ ಸ್ವಪ್ನೇ । ಭೃಮೃಶೀತ್ಯಾದಿನಾ । ಉ. ೧-೭ । ಉಪ್ರತ್ಯಯಃ । ಕತಿಧಾ । ಡತ್ಯಂತಸ್ಯ ಕಿಂಶಬ್ದಸ್ಯ ಬಹುಗಣವತುಡತಿ ಸಂಖ್ಯಾ । ಪಾ. ೧-೧-೨೩ । ಇತಿ ಸಂಖ್ಯಾಸಂಜ್ಞಾಯಾಂ ಸಂಖ್ಯಾಯಾ ವಿಧಾರ್ಥೇ ಧಾ । ಪಾ. ೫-೩-೪೨ । ಇತಿ ಧಾಪ್ರತ್ಯಯಃ । ಆಯವೇ । ಛಂದಸೀಣಃ । ಉ. ೧-೨ । ಇತ್ಯೇತೇರುಣ್-ಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಪ್ರಥಮಃ ಅಂಗಿರಸ್ತಮಃ**—ಅಂಗಿರೋನಾಮಕ ಋಷಿಗಳಲ್ಲಿ ಮೊದಲನೆಯವನಾಗಿಯೂ ಮತ್ತು ಅತ್ಯಂತ ಶ್ರೇಷ್ಠನಾಗಿಯೂ । **ಕವಿಃ**—ಪ್ರಾಜ್ಞನಾಗಿಯೂ । **ವಿಶ್ವಸ್ಮೈ-ಭುವನಾಯ**—ಸಕಲಲೋಕದ ಅನುಗ್ರಹಾರ್ಥವಾಗಿ । **ವಿಭುಃ**—ಆಹವನೀಯಾದಿ ನಾನಾವಿಧ ರೂಪವುಳ್ಳವನಾಗಿಯೂ । **ಮೇಧಿರಃ**—ಮೇಧಾವಿಯಾಗಿಯೂ । **ದ್ವಿಮಾತಾ**—(ಅರಣಿರೂಪದ) ಎರಡು ತಾಯಿಗೆ ಹುಟ್ಟಿದವನಾಗಿಯೂ ಅಥವಾ ಎರಡು ಲೋಕಗಳನ್ನು ನಿರ್ಮಿಸಿದವನಾಗಿಯೂ । **ಆಯವೇ**—ಮಾನವನಿಗೋಸ್ಕರ । **ಕತಿಧಾ ಚಿತ್**—ನಾನಾ ಪ್ರಕಾರಗಳಿಂದ । **ಶಯುಃ** – ಹರಡಿದವನಾಗಿಯೂ ಆಗಿ । **ದೇವಾನಾಂ** – (ಇತರ) ದೇವತೆಗಳ । **ವ್ರತಂ**—ಕರ್ಮವನ್ನು । **ಪರಿ ಭೂಷಸಿ**—ಸುತ್ತಲೂ ಅಲಂಕರಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಅಂಗಿರೋನಾಮಕ ಋಷಿಗಳಲ್ಲಿ ಮೊದಲನೆಯವನಾಗಿಯೂ ಮತ್ತು ಅತ್ಯಂತ

ಶ್ರೇಷ್ಠನಾಗಿಯೂ, ಪ್ರಾಜ್ಞನಾಗಿಯೂ ಸಕಲ ಲೋಕದ ಅನುಗ್ರಹಾರ್ಥವಾಗಿ ಆಹವನೀಯಾದಿ ನಾನಾರೂಪವುಳ್ಳವನಾಗಿಯೂ, ಮೇಧಾವಿಯಾಗಿಯೂ, ಅರಣಿರೂಪದ ಇಬ್ಬರು ತಾಯಂದಿರುಗಳನ್ನುಳ್ಳವನಾಗಿಯೂ ಮತ್ತು ಮಾನವನಿಗೋಸ್ಕರ ನಾನಾ ಪ್ರಕಾರಗಳಿಂದ ಹರಡಿದವನಾಗಿಯೂ ಇದ್ದು ಇತರ ದೇವತೆಗಳ ಕರ್ಮವನ್ನು ಸುತ್ತಲೂ ಅಲಂಕರಿಸುತ್ತೀಯೆ.

## English Translation.

O Agni, you are the very first and foremost among Angiras; you conduct the work (sacrifice or worship) of the gods; you are wise, son of two mothers; manifold for the benefit of all the world you reside in every house for the use of man.

॥ ವಿಶೇಷವಿಷಯಗಳು ॥

**ದೇವಾನಾಂ ಪರಿಭೂಷಸಿ ವ್ರತಂ**—ದೇವತೆಗಳ ಕರ್ಮಗಳನ್ನು ಅಲಂಕರಿಸುತ್ತಿ ಎಂದರೆ ದೇವತೆಗಳನ್ನುದ್ದೇಶಿಸಿ ಮಾಡುವ ಯಜ್ಞಯಾಗಾದಿಕರ್ಮಗಳಲ್ಲಿ ಅಗ್ನಿಯಾದ ನೀನು ಮುಖ್ಯಪಾತ್ರವನ್ನು ವಹಿಸಿ ಯಜ್ಞವನ್ನು ನೆರವೇರಿಸುತ್ತೀಯೆ. ಅಗ್ನಿಯಿಲ್ಲದೆ ಯಜ್ಞವಿಲ್ಲವಾದುದರಿಂದ ಅಗ್ನಿಯೇ ಯಜ್ಞಾದಿಕರ್ಮಗಳಿಗೆ ಅಲಂಕಾರಪ್ರಾಯನೆಂದಭಿಪ್ರಾಯವು.

**ವಿಭುಃ—ವಿಪೂರ್ವಾದ್ಭವತೇರ್ಡುಪ್ರತ್ಯಯಃ । ವಿಶೇಷೇಣ ಬಹುಪ್ರಕಾರೇಣ ಭವತೀತಿ ವಿಭುಃ ।** ಯಜ್ಞಗಳಲ್ಲಿ ಆಹವನೀಯಾದಿರೂಪಗಳಿಂದಲೂ ಅನೇಕ ಗೃಹಗಳಲ್ಲಿ ಇರುವುದರಿಂದಲೂ ಅನೇಕ ರೂಪಗಳಿಂದ ಇರುವವನು ಎಂದಭಿಪ್ರಾಯವು.

**ವಿಶ್ವಸ್ಮೈ ಭುವನಾಯ**—ಸಮಸ್ತ ಪ್ರಪಂಚಕ್ಕೂ, For all the world.

**ಮೇಧಿರಃ—ಮೇಧೃ ಸಂಗಮೇ ಚ । ಮೇಧಾವಾನ್ ।** ಬುದ್ಧಿವಂತನು, ಪ್ರಜ್ಞಾಶಾಲಿಯು.

**ದ್ವಿಮಾತಾ—ದ್ವಯೋರ್ಮಾತಾ । ದ್ವಯೋರರಣ್ಯೋರುತ್ಪನ್ನಃ । ಯದ್ವಾ ದ್ವಯೋರ್ಲೋಕಯೋರ್ನಿರ್ಮಾತಾ ।** ಯಜ್ಞದಲ್ಲಿ ಅಗ್ನಿಯನ್ನು ಉತ್ಪತ್ತಿಮಾಡುವಾಗ ಅರಣಿಗಳೆಂಬ ಎರಡು ಮರದ ತುಂಡುಗಳನ್ನು ಒಂದರ ಮೇಲೊಂದನ್ನಿಟ್ಟು ಕಡೆಯುವುದರಿಂದ ಅದರಲ್ಲಿ ಅಗ್ನಿಯು ಹುಟ್ಟುವುದು. ಆದುದರಿಂದ ಅಗ್ನಿಯ ಉತ್ಪತ್ತಿಗೆ ಕಾರಣವಾದ ಅರಣಿಗಳನ್ನು ಅಗ್ನಿಯ ಇಬ್ಬರು ತಾಯಂದಿರೆಂದು ಭಾವಿಸಿ ಅಗ್ನಿಯನ್ನು ದ್ವಿಮಾತಾ-ಇಬ್ಬರು ತಾಯಂದಿರುಳ್ಳ ಎಂಬ ವಿಶೇಷಣದಿಂದ ಕರೆಯಲಾಗಿದೆ. ಅಥವಾ ಸೃಷ್ಟಿಕ್ರಮವನ್ನು ಶ್ರುತಿಯು ಹೇಳುವಾಗ **ಅಗ್ನೇ ರಾಪಃ । ಅದ್ಭ್ಯಃ ಪೃಥಿವೀ** ಎಂಬ ಶ್ರುತಿವಚನಾನುಸಾರ ಅಗ್ನಿಯಿಂದ ಅಂತರಿಕ್ಷಲೋಕವೂ (ಆಪಃ ಎಂದರೆ ಅಂತರಿಕ್ಷ. ನಿ. ೨-೧೦) ಭೂಲೋಕವೂ ಉಂಟಾದುದರಿಂದ ಅಗ್ನಿಯನ್ನು **ದ್ವಯೋರ್ನಿರ್ಮಾತಾ**--ಭೂಮ್ಯಂತರಿಕ್ಷಗಳೆಂಬ ಎರಡು ಲೋಕಗಳ ನಿರ್ಮಾಪಕನೆಂದು ಹೇಳುವರು.

**ಆಯವೇ—ಆಯುಃ ಅಯನಾತ್ ಏತಿ ಹ್ಯಸೌ ವಿಶ್ವಂ ।** ಪ್ರಪಂಚವೆಲ್ಲವನ್ನೂ ವ್ಯಾಪಿಸುವುದಕ್ಕಾಗಿ.

**ಶಯುಃ— ಶೀಙ್ ಸ್ವಪ್ನೇ |** ಮಲಗಿರುವವನು ಎಂದರೆ ಸೌಮ್ಯಭಾವದಿಂದ ಇರುವವನು.

॥ ವ್ಯಾಕರಣಪ್ರಕ್ರಿಯಾ ॥

**ಭೂಷಸಿ**—ಭೂಷ ಅಲಂಕಾರೇ ಧಾತು. ಭ್ವಾದಿ. ಮಧ್ಯಮಪುರುಷ ಏಕವಚನದ ರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವಿಭುಃ**—ಭೂ ಸತ್ತಾಯಾಂ ಧಾತು. ಇದಕ್ಕೆ ವಿ ಉಪಸರ್ಗ ಪೂರ್ವದಲ್ಲಿರುವಾಗ **'ವಿಪ್ರಸಂಭ್ಯೋ ಡ್ವಸಂಜ್ಞಾಯಾಂ'** (ಪಾ. ಸೂ. ೩-೨-೧೮೦) ಎಂಬುದರಿಂದ ಡು ಪ್ರತ್ಯಯ. ಅಲ್ಲಿ ಡಕಾರ ಇತ್. ವಿಭೂ+ಉ ಎಂದಿರುವಾಗ ಪ್ರತ್ಯಯ ಡಿತ್ತಾದುದರಿಂದ ಟಿಲೋಪ. ವಿಭು ಎಂದು ರೂಪವಾಗುತ್ತದೆ. ಗತಿ ಪೂರ್ವದಲ್ಲಿದ್ದು ಕೃದಂತ ವಾದ ಪದವು ಉತ್ತರಪದವಾಗಿರುವುದರಿಂದ **'ಗತಿಕಾರಕೋಪಪದಾತ್ ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ. ಅಂತೋದಾತ್ತವಾದ ಪದವಾಗುತ್ತದೆ.

**ಭುವನಾಯ**—ಪೂರ್ವೋಕ್ತವಾದ ಧಾತು. **'ಭೂಸೂಧೂಭ್ರಸ್ಜಿಭ್ಯಶ್ಛಂದಸಿ'** (ಉ. ಸೂ ೨-೨೬೮) ಎಂಬುದರಿಂದ ಕ್ಯನ್. ಯು ಉಳಿಯುತ್ತದೆ. **'ಯುವೋರನಾಕೌ'** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯ ಪರದಲ್ಲಿರುವಾಗ ಧಾತುವಿಗೆ ಗುಣ ಅವಾದೇಶ. ಭುವನ ಶಬ್ದವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಭುವನಾಯ ಎಂದು ರೂಪವಾಗುತ್ತದೆ ಪ್ರತ್ಯಯ ನಿತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಮೇಧಿರಃ**—ಮೇಧೃ ಸಂಗಮೇ ಚ ಧಾತು. ಭ್ವಾದಿ. **'ಉಣಾದಯೋ ಬಹುಲಂ'** (ಪಾ. ಸೂ. ೩-೩-೧) ಎಂಬಲ್ಲಿ ಬಹುಲಗ್ರಹಣಸ್ವರಸದಿಂದ ಇದಕ್ಕೆ ಇರನ್ ಪ್ರತ್ಯಯ. ಮೇಧಿರಃ ಎಂದು ರೂಪವಾಗುತ್ತದೆ ನಿತ್ತಾದುದರಿಂದ ಹಿಂದಿನಂತೆ ಆದ್ಯುದಾತ್ತಸ್ವರ ಬರುತ್ತದೆ.

**ದ್ವಿಮಾತಾ—'ದ್ವೇ ಮಾತರೌ ಯಸ್ಯ ಅಸೌ ದ್ವಿಮಾತಾ'** ಸಂಖ್ಯಾಪೂರ್ವಪದ ಬಹುವ್ರೀಹಿ. ಋಕಾ ರಾಂತವಾದುದರಿಂದ **'ನದ್ಯೃತಶ್ಚ'** (ಪಾ. ಸೂ. ೫-೪-೧೫೩) ಎಂಬುದರಿಂದ ಕಪ್ ಸಮಾಸಾಂತವು ಪ್ರಾಪ್ತವಾಗು ತ್ತದೆ. ಆದರೆ ಆ ಸೂತ್ರದಿಂದ ಕಪ್ ಸಮಾಸಾಂತವಾಗಿ ಬಂದರೆ, ಮಾತೃ ಮಾತೃಕ ಶಬ್ದಗಳಿಗೆ ಭೇದವು ಲೋಕದಲ್ಲಿ ದೃಷ್ಟವಾದುದರಿಂದ ಇಲ್ಲಿಯೂ ಅರ್ಥಭೇದವು ಪ್ರತೀತವಾದೀತು ಎಂದು ಮಾತೃಶಬ್ದದ ವಿಷಯದಲ್ಲಿ ಅದಕ್ಕೆ ವಿಕಲ್ಪವನ್ನು ಹೇಳಿರುತ್ತಾರೆ. ಮಾತೃಶಬ್ದಕ್ಕೆ ತಾಯಿ, ಅಳೆಯುವವನು ಮುಂತಾದ ಅನೇಕಾರ್ಥಗಳು ಇರುತ್ತವೆ. ಆದುದರಿಂದ ಇಲ್ಲಿ ಕಪ್ ಬರುವುದಿಲ್ಲ. ತ್ರಿಚಕ್ರಾದಿಯಲ್ಲಿ ಇದು ಸೇರಿರುವುದರಿಂದ ಉತ್ತರಪದಾಂತೋದಾತ್ತಸ್ವರವು ಬರುತ್ತದೆ. ಅಥವಾ ದ್ವಯೋಃ ಮಾತಾ ದ್ವಿಮಾತಾ. ತತ್ಪುರುಷಸಮಾಸ. ಇಲ್ಲಿ ಕಬಾಶಂಕೆಗೂ ಅವಕಾಶವಿಲ್ಲ. **'ಸಮಾಸಸ್ಯ'** ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ.

**ಶಯುಃ**—ಶೀಙ್ ಸ್ವಪ್ನೇ ಧಾತು. ಅದಾದಿ. **'ಭೃಮೃಶೀ'** (ಉ. ಸೂ. ೧-೭) ಎಂಬುದರಿಂದ ಉ ಪ್ರತ್ಯಯ. ಧಾತುವಿಗೆ ಆರ್ಧಧಾತುಕನಿಮಿತ್ತಕವಾಗಿ ಗುಣ ಅಯಾದೇಶ ಶಯುಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ.

**ಕತಿಧಾ**—**'ಕಿಮಃ ಸಂಖ್ಯಾಪರಿಮಾಣೇ ಡತಿ ಚ'** (ಪಾ. ಸೂ. ೫-೨-೪೧) ಎಂಬುದರಿಂದ ಕಿಮ್ ಶಬ್ದಕ್ಕೆ ಡತಿ ಪ್ರತ್ಯಯ ಅತಿ ಉಳಿಯುತ್ತದೆ. ಡಿತ್ತಾದುದರಿಂದ ಟಿಲೋಪ. ಕತಿ ಶಬ್ದವಾಗುತ್ತದೆ. ಡತ್ಯಂತವಾದುದರಿಂದ **'ಬಹುಗಣವತುಡತಿ ಸಂಖ್ಯಾ'** (ಪಾ. ಸೂ. ೧-೧-೨೩) ಎಂಬುದರಿಂದ ಇದಕ್ಕೆ ಸಂಖ್ಯಾ ಸಂಜ್ಞಾ. ಸಂಖ್ಯಾ ಸಂಜ್ಞೆ ಇರುವಾಗ **'ಸಂಖ್ಯಾಯಾ ವಿಧಾರ್ಥೇ ಧಾ'** (ಪಾ. ಸೂ. ೫-೩-೪೨) ಎಂಬುದರಿಂದ ಧಾ ಪ್ರತ್ಯಯ ಬರುತ್ತದೆ. ಅನೇಕ ಪ್ರಕಾರ ಎಂದು ಅರ್ಥ ತೋರುತ್ತದೆ. ಕತಿಧಾ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾದ ಪದ.

**ಆಯವೇ**—ಇಣ್ ಗತೌ ಧಾತು. ಅದಾದಿ. **'ಛಂದಸೀಣಃ'** (ಉ. ಸೂ. ೧-೨) ಎಂಬುದರಿಂದ ಇದಕ್ಕೆ ಉಣ್ ಪ್ರತ್ಯಯ. ಣಿತ್ತಾದುದರಿಂದ **'ಅಚೋಞ್ಣಿತಿ'** (ಪಾ. ಸೂ. ೭-೨-೧೧೫) ಎಂಬುದರಿಂದ ಧಾತುವಿಗೆ ವೃದ್ಧಿ. ಐ+ಉ ಎಂದಿರುವಾಗ **'ಏಚೋಽಯವಾಯಾವಃ'** (ಪಾ. ಸೂ. ೬-೧-೭೮) ಎಂಬುದರಿಂದ ಆಯಾದೇಶ. ಆಯು ಎಂಬ ಶಬ್ದವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಆಯವೇ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಮಧ್ಯೋದಾತ್ತವಾದ ಪದ. ॥ ೨ ॥

॥ ಸಂಹಿತಾಪಾಠಃ ॥

ತ್ವಮ॑ಗ್ನೇ ಪ್ರಥ॒ಮೋ ಮಾ॒ತರಿ॑ಶ್ವನ ಆ॒ವಿರ್ಭ॑ವ ಸುಕ್ರತೂ॒ಯಾ

ವಿ॒ವಸ್ವ॑ತೇ ।

ಅರೇ॑ಜೇತಾಂ॒ ರೋದ॑ಸೀ ಹೋತೃ॒ವೂರ್ಯೇ॑ಽಸಘ್ನೋ॑ರ್ಭಾ॒ರ-

ಮಯ॑ಜೋ ಮ॒ಹೋ ವ॑ಸೋ ॥ ೩ ॥

॥ ಪದಪಾಠಃ ॥

ತ್ವಂ । ಅ॒ಗ್ನೇ॒ । ಪ್ರ॒ಥ॒ಮಃ । ಮಾ॒ತ॒ರಿಶ್ವ॑ನೇ । ಆ॒ವಿಃ । ಭ॒ವ॒ । ಸು॒ಕ್ರ॒ತು॒ಽಯಾ ।

ವಿ॒ವಸ್ವ॑ತೇ ।

ಅರೇಜೇತಾಂ । ರೋದಸೀ ಇತಿ । ಹೋತೃಽವೂರ್ಯೇ । ಅಸಘ್ನೋಃ । ಭಾರಂ ।

ಅಯಜಃ । ಮಹಃ । ವಸೋ ಇತಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಮಾತರಿಶ್ವನೇ ಪ್ರಥಮೋ ಮುಖ್ಯೋಭೂತ್ವಾ ವರ್ತಸೇ। ಅಗ್ನಿರ್ವಾಯುರಾದಿತ್ಯ ಇತಿ ವಾಯ್ವಪೇಕ್ಷಯಾ ಸರ್ವತ್ರ ಮುಖ್ಯತ್ವಾವಗಮಾತ್ । ತಾದೃಶಸ್ತ್ವಂ ಸುಕ್ರತೂಯಾ ಶೋಭನಕರ್ಮೇಚ್ಛಯಾ ವಿವಸ್ವತೇ ಪರಿಚರತೇ ಯಜಮಾನಾಯಾವಿರ್ಭವ । ಪ್ರಕಟೋ ಭವ । ತವ ಸಾಮರ್ಥ್ಯಂ ದೃಷ್ಟ್ವಾ ರೋದಸೀ ದ್ಯಾವಾಪೃಥಿವ್ಯಾವರೇಜೇತಾಂ । ಅಕಂಪೇತಾಂ । ಭ್ಯಸತೇ ರೇಜತ ಇತಿ ಭಯವೇಪನಯೋಃ । ನಿ. ೩-೨೧ । ಇತಿ ಯಾಸ್ಕಃ । ಹೋತೃವೂರ್ಯೇ ಹೋತೃವರಣಯುಕ್ತೇ ಕರ್ಮಣಿ ಭಾರಂ ಭರಣಮಸಘ್ನೋಃ । ಊಢವಾನಸಿ । ಹೇ ವಸೋ ನಿವಾಸಹೇತೋ ವಹ್ನೇ ಮಹಃ ಪೂಜ್ಯಾನ್ದೇವಾನಯಜಃ । ಇಷ್ಟವಾನಸಿ ॥ ಮಾತರಿಶ್ವನೇ । ನಿರ್ಮಾಣಹೇತುತ್ವಾನ್ಮಾತಾಂತರಿಕ್ಷಂ । ತತ್ರ ಶ್ವಸಿತಿ ಪ್ರಾಣಿತೀತಿ ಮಾತರಿಶ್ವಾ ವಾಯುಃ । ಶ್ವನ್ನುಕ್ಷನ್ನಿತ್ಯಾದೌ । ಉ. ೧-೧೫೮ । ಮಾತರಿಶ್ವನ್‌ಶಬ್ದಃ ಕನ್ಪ್ರತ್ಯಯಾಂತೋ ನಿಪಾತಿತಃ । ಸುಕ್ರತೂಯಾ । ಸುಕ್ರತುಮಾತ್ಮನ ಇಚ್ಛತಿ । ಸುಪ ಆತ್ಮನಃ ಕ್ಯಚ್ । ಅಕೃತ್ಸಾರ್ವಧಾತುಕಯೋರಿತಿ ದೀರ್ಘಃ । ಪಾ. ೭-೪-೨೫ । ಕ್ಯಂಜತಸ್ಯ ಧಾತುಸಂಜ್ಞಾಯಾಂ ಅ ಪ್ರತ್ಯಯಾತ್ । ಪಾ. ೩-೩-೧೦೨ । ಇತಿ ಭಾವೇಽಕಾರಪ್ರತ್ಯಯಃ । ತತಷ್ಟಾಪ್ । ಸುಪಾಂ ಸುಲುಗಿತಿ ತೃತೀಯೈಕವಚನಸ್ಯ ಡಾದೇಶಃ । ಟಿ ಲೋಪ ಉದಾತ್ತನಿವೃತ್ತಿಸ್ವರೇಣ ತಸ್ಯೋದಾತ್ತತ್ವಂ । ಸಂಹಿತಾಯಾಮನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘಃ । ವಿವಸ್ವತೇ । ವಿವಾಸತಿಃ ಪರಿಚರಣಕರ್ಮಾ । ಅಸ್ಮಾತ್ಸಂಪದಾದಿಲಕ್ಷಣಃ ಕ್ವಿಪ್ । ವ್ಯತ್ಯಯೇನೋಪಧಾಹ್ರಸ್ವತ್ವಂ । ತದಸ್ಯಾಸ್ತೀತಿ ಮತುಪ್ । ಮಾದುಪಧಾಯಾ ಇತಿ ಮತೋರ್ವತ್ವಂ । ತಸೌ ಮತ್ವರ್ಥ ಇತಿ ಭತ್ವೇನ ಪದತ್ವಾಭಾವಾದ್ರುತ್ವಾಭಾವಃ । ಮತುಪಃ ಪಿತ್ತ್ವಾದನುದಾತ್ತತ್ವಂ । ಧಾತುಸ್ವರಃ ಶಿಷ್ಯತೇ । ರೋದಸೀ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ ॥ ಹೋತೃವೂರ್ಯೇ । ಹೋತಾ ವ್ರಿಯತ ಇತಿ ಹೋತೃವೂರ್ಯೋ ಯಜ್ಞಃ । ವೃಞ್ ವರಣೇ । ಬಹುಲಗ್ರಹಣಾದೌಣಾದಿಕಃ ಕ್ಯಪ್ । ಉದೋಷ್ಠ್ಯಪೂರ್ವಸ್ಯೇತ್ಯುತ್ವಂ । ಹಲಿ ಚೇತಿ ದೀರ್ಘಃ । ಯದ್ವಾ । ವೃಞ್ ವರಣ ಇತ್ಯಸ್ಮಾದೇತಿಸ್ತುಶಾಸ್ವಿತ್ಯಾದಿನಾ । ಪಾ. ೩-೧-೧೦೯ । ಕ್ಯಪ್ । ಅನಿತ್ಯಮಾಗಮಶಾಸನಮಿತಿ ತುಗಭಾವಃ । ಅಕೃತ್ಸಾರ್ವಧಾತುಕಯೋರಿತಿ ದೀರ್ಘತ್ವೇ ಪೂರ್ವವದುತ್ವದೀರ್ಘೌ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಅಸಘ್ನೋಃ । ಷಘ ಹಿಂಸಾಯಾಮತ್ರ ತು ವಹನಾರ್ಥಃ । ಸ್ವಾದಿಭ್ಯಃ ಶ್ನುಃ । ಪಾದಾದಿತ್ವಾದನಿಘಾತಃ । ಅಯಜಃ । ಭಾರಮಿತ್ಯಸ್ಯ ಪೂರ್ವಪದಸ್ಯ ವಾಕ್ಯಾಂತರಗತತ್ವಾತ್ತದಪೇಕ್ಷಯಾಸ್ಯ ನಿಘಾತೋ ನ ಭವತಿ । ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾಃ । ಪಾ. ೮-೧-೧೮-೫ । ಇತಿ

**ವಚನಾತ್ । ಮಹಃ । ಮಹ ಪೂಜಾಯಾಂ । ಕ್ವಿಪ್ಚೇತಿ ಕ್ವಿಪ್ । ಸುಪಾಂ ಸುಪೋ ಭವಂತೀತಿ ಶಸೋ ಜಸಾದೇಶಃ । ಸಾವೇಕಾಚ ಇತಿ ತಸ್ಯೋದಾತ್ತತ್ವಂ । ಯದ್ವಾ । ಶಸಿ ಮಹಚ್ಛಬ್ದಸ್ಯಾಚ್ಛಬ್ದಲೋಪ- ಶ್ಛಾಂದಸಃ । ಬೃಹನ್ಮಹತೋರುಪಸಂಖ್ಯಾನಮಿತಿ ಶಸ ಉದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಮಾತರಿಶ್ವನೇ**—ವಾಯುವಿಗೆ । **ಪ್ರಥಮಃ**— ಪ್ರಧಾನನಾಗಿ । **ಸುಕ್ರತೂಯಾ**—ಶ್ರೇಷ್ಠವಾದ ಕರ್ಮವನ್ನು ಇಚ್ಛಿಸಿ ಮೆಚ್ಚುವುದರಿಂದ । **ವಿವಸ್ವತೇ**— (ನಿನ್ನನ್ನು) ಪೂಜಿಸತಕ್ಕ ಯಜಮಾನನಿಗೆ । **ಆವಿರ್ಭವ**—ವ್ಯಕ್ತನಾಗಿ ಕಾಣಿಸಿಕೊ । **ರೋದಸೀ**—ದ್ಯಾವಾ ಪೃಥಿವಿಗಳೆರಡೂ ಸಹ । **ಅರೇಜೇತಾಂ**—(ನಿನ್ನ ಮಹಿಮೆಯನ್ನು ನೋಡಿ) ನಡಗುತ್ತವೆ । **ಹೋತೃವೂರ್ಯೇ**— ಹೋತೃವನ್ನು ಆರಿಸುವ ಯಜ್ಞ ಕರ್ಮದಲ್ಲಿ । **ಭಾರಂ**—(ಕರ್ಮದ) ನಿರ್ವಹಣ ಭಾರವನ್ನು । **ಅಸಘ್ನೋಃ**— (ನೀನು) ವಹಿಸಿದ್ದೀಯೆ । **ವಸೋ**— ವಸುರೂಪದಲ್ಲಿರುವ ಅಗ್ನಿಯೇ । **ಮಹಃ**—ಪೂಜ್ಯರಾದ ದೇವತೆಗಳನ್ನು **ಆಯಜಃ**—ಪೂಜಿಸಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ವಾಯುವಿಗೆ ಪ್ರಧಾನನಾಗಿದ್ದು ಶ್ರೇಷ್ಠವಾದ ಯಜ್ಞಕರ್ಮವನ್ನು ಇಚ್ಛಿಸಿ ಮೆಚ್ಚುವ ಸಲುವಾಗಿ ನಿನ್ನನ್ನು ಪೂಜಿಸತಕ್ಕ ಯಜಮಾನನ ಮುಂದೆ ವ್ಯಕ್ತನಾಗಿ ಕಾಣಿಸಿಕೊ. ನಿನ್ನ ಮಹಿಮೆಯನ್ನು ಕಂಡು ದ್ಯಾವಾಪೃಥಿವಿಗಳೆರಡೂ ಸಹ ಕಂಪಿಸುತ್ತವೆ. ಮತ್ತು ಹೋತೃಪ್ರಧಾನವಾದ ಯಜ್ಞ ಕರ್ಮದಲ್ಲಿ ಹೋತೃವನ್ನು ನಿಯಮಿ ಸಿರುವಾಗ ನೀನು ಕರ್ಮದ ನಿರ್ವಹಣಭಾರವನ್ನು ವಹಿಸಿದ್ದೀಯೆ. ವಸುರೂಪದಲ್ಲಿರುವ ಅಗ್ನಿಯೇ, ನೀನು ಪೂಜ್ಯರಾದ ದೇವತೆಗಳನ್ನು ಪೂಜಿಸಿದ್ದೀಯೆ.

## English Translation.

O Agni, you are the first or emminent over the wind ; become manifes to the worshipper in appreciation of his services ; heaven and earth tremble at your power ; you have taken over the responsibility in the rite in which the priest (Hotri) was appointed ; O Vasu, you have worshipped the great· gods.

॥ ವಿಶೇಷವಿಷಯಗಳು ॥

**ಪ್ರಥಮೋ ಮಾತರಿಶ್ವನೇ—ತ್ವಂ ಮಾತರಿಶ್ವನೇ ಪ್ರಥಮೋ ಮುಖ್ಯೋ ಭೂತ್ವಾ ವರ್ತಸೇ । ಅಗ್ನಿರ್ವಾಯುರಾದಿತ್ಯಃ ಇತಿ ವಾಯ್ವಪೇಕ್ಷಯಾ ಮುಖ್ಯತ್ವಾವಗಮಾತ್ ।** ವಾಯುವಿಗೆ ಅಗ್ನಿಯು ಮುಖ್ಯ ನಾಗಿ ಬೇಕಾದವನಾಗಿರುವನು. **ಅಗ್ನಿರ್ವಾಯುರಾದಿತ್ಯಃ** ಎಂಬ ಶ್ರುತಿವಾಕ್ಯದಲ್ಲಿ ಅಗ್ನಿ, ವಾಯು, ಆದಿತ್ಯ ಮೊದಲಾದ ದೇವತೆಗಳಲ್ಲಿ ಅಗ್ನಿಯನ್ನೇ ಮೊದಲು ಸೂಚಿಸಿರುವುದರಿಂದ ಅಗ್ನಿಯೇ ಮೊದಲಿನವನು, ಮುಖ್ಯನು

ಎಂದರೆ ಅಗ್ನಿಗೂ, ವಾಯುವಿಗೂ ನಿಕಟಸಂಬಂಧವಿರುವುದು. ಇವರಿಬ್ಬರಲ್ಲಿ ಅಗ್ನಿಯೇ ಮುಖ್ಯನಾದವನು ಎಂದಭಿಪ್ರಾಯವು.

ಸ್ಕಂದಸ್ವಾಮಿಯು **ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ** ಎಂಬ ವಾಕ್ಯಕ್ಕೆ ಬೇರೆ ವಿಧವಾಗಿ ಅರ್ಥವಿವರಣೆ ಮಾಡಿರುವರು—ಎಲೈ ಅಗ್ನಿಯೇ, ನೀನು ಪ್ರಾರಂಭದೆಶೆಯಲ್ಲಿ ಎಂದರೆ ಎಲ್ಲಕ್ಕಿಂತಲೂ ಮೊದಲು ವಾಯುವಿಗೆ ಪ್ರತ್ಯಕ್ಷನಾಗಿ ಕಾಣಿಸಿಕೊಂಡೆ ಎಂದು. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಒಂದು ಪೂರ್ವೇತಿಹಾಸ ವನ್ನು ಅಲ್ಲಿಯೇ ಹೇಳಿರುವರು—ಪೂರ್ವದಲ್ಲಿ ಪ್ರಪಂಚವೆಲ್ಲವೂ ಅಂಧಕಾರಮಯವಾಗಿತ್ತು. ಆಗ ಮಾತರಿಶ್ವನು (ವಾಯುವು) ಆಕಾಶದಲ್ಲಿ ಸೂಕ್ಷ್ಮರೂಪದಲ್ಲಿದ್ದ ಅಗ್ನಿಯನ್ನು ನೋಡಿದನು. ಆಗ ಅಥರ್ವಾ, ಪರಾಶರ, ಭರದ್ವಾಜಾದಿ ಋಷಿಗಳು ಅಗ್ನಿಯನ್ನು ಅರಣಿಯಲ್ಲಿ ಮಥನಮಾಡಿ ಉತ್ಪತ್ತಿಮಾಡಿದರು. ಈ ವಿಷಯವು—

**ಮಥೀದ್ಯದೀಂ ವಿಷ್ಟೋ ಮಾತರಿಶ್ವಾ ಹೋತಾರಂ ವಿಶ್ವಾಪ್ಸುಂ ವಿಶ್ವದೇವ್ಯಂ ॥**
(ಋ. ಸಂ. ೧-೧೪೮-೧)

**ತ್ವಾಮಗ್ನೇ ಪುಷ್ಕರಾದಥರ್ವಾ ನಿರಮಂಥತ ॥**
(ಋ. ಸಂ. ೬-೧೬-೧೩)

ಎಂಬ ಋಕ್ಕುಗಳಲ್ಲಿ ವರ್ಣಿತವಾಗಿರುವುದು. ಆಗ ಅಗ್ನಿಯು ಮಹಾಜ್ವಾಲೆಯಿಂದ ಪ್ರಕಾಶಿತನಾಗಿ ಅವರಿಗೆ ಗೋಚರಿಸಿದನು. ಅಗ್ನಿಯು ಪ್ರಥಮದಲ್ಲಿ (ಮೊದಲು) ಮಾತರಿಶ್ವನಿಗೆ ಕಾಣಿಸಿದ್ದರಿಂದ ಆ ವಿಷಯವು ಇಲ್ಲಿ ವರ್ಣಿತ ವಾಗಿರುವುದು ಎಂದು.

**ಸುಕ್ರತೂಯಾ—ಸುಕ್ರತುಮಾತ್ಮನ ಇಚ್ಛತಿ । ಶೋಭನಕರ್ಮೇಚ್ಛಯಾ ।** ಉತ್ತಮಕರ್ಮಗಳಲ್ಲಿ ಅಪೇಕ್ಷೆಯಿಂದ.

**ವಿವಸ್ವತೇ—**ವಿವಸತಿ ಅಥವಾ ವಿವಾಸತಿ ಶಬ್ದಕ್ಕೆ ಪರಿಚರಣಕರ್ಮ (ನಿ ೩-೧೩) ಎಂದರ್ಥವಿರುವುದರಿಂದ ವಿವಸ್ವತೇ ಎಂದರೆ (ವಿವಸ್ವನ್ ಶಬ್ದದ ಚತುರ್ಥ್ಯೇಕವಚನ) ಪರಿಚರ್ಯೆಯನ್ನು ಎಂದರೆ ಸೇವೆಯನ್ನು ಮಾಡುತ್ತಿರುವ ಯಜಮಾನನಿಗೆ ಎಂದರ್ಥವು. ವಿವಸ್ವಾನ್ ಎಂದರೆ ಮನುವಿಗೂ ಹೆಸರು ಮುಂದಿನ ಋಕ್ಕಿನಲ್ಲಿ **ಮನವೇ** ಎಂಬ ಶಬ್ದದ ವಿಷಯದಲ್ಲಿ ಕೊಟ್ಟಿರುವ ವಿಶೇಷವಿಷಯವನ್ನು ನೋಡಿ.

**ರೋದಸೀ—**ಸ್ವಧೇ ಪುರಂಧೀ ಮೊದಲಾದ ಇಪ್ಪತ್ತುನಾಲ್ಕು ದ್ಯಾವಾಪೃಥಿವೀನಾಮಗಳ ಮಧ್ಯದಲ್ಲಿ ರೋದಸೀ ಎಂಬ ಶಬ್ದವು ಪಠಿತವಾಗಿರುವುದರಿಂದ ರೋದಸೀ ಎಂದರೆ ದ್ಯಾವಾಪೃಥಿವಿಗಳು, ಸ್ವರ್ಗಲೋಕ ಭೂಲೋಕಗಳು (ನಿ. ೩-೨೨).

**ಹೋತ್ರವೂರ್ಯೇ—ಹೋತ್ರಾ ವ್ರಿಯತ ಇತಿ ಹೋತ್ರವೂರ್ಯೋ ಯಜ್ಞಃ । ಹೋತ್ರವರಣ-ಯುಕ್ತೇ ।** ಹೋತೃವೆಂಬ ಋತ್ವಿಕ್ಕನ್ನು ನೇಮಿಸುವ ಯಜ್ಞದಲ್ಲಿ.

**ಭಾರಂ—ಭರಣಂ ।** ಭಾರವನ್ನು, ಕರ್ತವ್ಯವನ್ನು, ಜವಾಬ್ದಾರಿಯನ್ನು, ಭಾರವನ್ನು ವಹಿಸುವ ವಿಷಯದಲ್ಲಿ ಸ್ಕಂದಸ್ವಾಮಿಯು ಒಂದು ಪೂರ್ವೇತಿಹಾಸವನ್ನು ವಿವರಿಸಿರುವರು—

**ಅಸಘ್ನೋಃ ಭಾರಂ । ಅತ್ರೇತಿಹಾಸಮಾಚಕ್ಷತೇ । ದೇವಾಃ ಕಿಲ ಸ್ವಯಮೇವ ಸ್ವಾನಿ ಸ್ವಾನಿ ಹವೀಂಷ್ಯಾಹೃತ್ಯಾಭಕ್ಷಯನ್ । ತೇಷಾಂ ಕೇಚಿದ್ವೋಢುಂ ನಾಶಕ್ನುವನ್ । ಏಕೈಕಾಹುತಿಸ್ತ್ರೈಲೋಕ್ಯಭಾರಾದತಿರಿಚ್ಯತೇ । ಕಾಂಶ್ಚಿತ್ತು ಶಕ್ನುವತೋಽಪ್ಯಸುರಾ ಅಭ್ಯದ್ರವನ್ ತೇ ಸರ್ವೇಽಗ್ನಿಮಬ್ರುವನ್—ಹವ್ಯಂ ನೋ ವಹೇತಿ । ಸ ತಲ್ಲೀಲಾಯಮಾನೋಽವಹತ್ । ತದಿಹೋಚ್ಯತೇ—ಅಸಘ್ನೋರ್ಭಾರಮಿತಿ ॥**

ಎಂದರೆ ಪೂರ್ವದಲ್ಲಿ ದೇವತೆಗಳು ತಮಗೆ ಅರ್ಪಿಸಿದ ಆಹುತಿಗಳನ್ನು ತಾವೇ ಬಂದು ತೆಗೆದುಕೊಂಡು ಹೋಗಿ ಭಕ್ಷಿಸುತ್ತಿದ್ದರು. ಯಜ್ಞದಲ್ಲಿ ಹೋಮಮಾಡುವ ಒಂದೊಂದು ಆಹುತಿಯೂ ಮೂರು ಲೋಕಗಳ ಭಾರಕ್ಕಿಂತ ಅಧಿಕವಾಗಿರುವುದೆಂದು ಪ್ರಸಿದ್ಧಿಯಿರುವುದರಿಂದ ಕೆಲವು ದೇವತೆಗಳಿಗೆ ತಮ್ಮ ಹವಿಸ್ಸನ್ನು ತೆಗೆದುಕೊಂಡು ಹೋಗಲು ಶಕ್ತಿಯಿಲ್ಲವಾಯಿತು. ಆಗ ಅಸುರರು ಅವರ ಆಹುತಿಗಳನ್ನು ಅಪಹರಿಸಿ ಓಡಿಹೋದರು. ಇದನ್ನು ಕಂಡ ದೇವತೆಗಳು ಅಗ್ನಿಯ ಸಮೀಪಕ್ಕೆ ಬಂದು—ಎಲೈ ಅಗ್ನಿಯೇ, ನೀನು ನಮಗಾಗಿ ಯಜ್ಞದಲ್ಲಿ ಅರ್ಪಿಸಲ್ಪಡುವ ಆಹುತಿಗಳನ್ನು ವಹಿಸಿ, ತಂದು ನಮಗೆ ತಲಪಿಸು ಎಂದು ಪ್ರಾರ್ಥಿಸಲು ಅಗ್ನಿಯು ಅದಕ್ಕೆ ಸಮ್ಮತಿಸಿ ಅಷ್ಟು ಭಾರವಾದ ಆಹುತಿಗಳನ್ನು ಲೀಲಾಮಾತ್ರದಿಂದ ವಹಿಸಿದನು. ಈ ವೃತ್ತಾಂತವೇ ಇಲ್ಲಿ **ಅಸಘ್ನೋರ್ಭಾರಂ** ಎಂಬ ಶಬ್ದಗಳಿಂದ ವರ್ಣಿಸಲ್ಪಟ್ಟಿರುವುದು ಎಂದು ಹೇಳಿರುವರು.

**ಮಹಃ—ಮಹ ಪೂಜಾಯಾಂ । ಪೂಜ್ಯಾನ್ ದೇವಾನ್ ।** ಪೂಜ್ಯರಾದ ದೇವತೆಗಳನ್ನು.

**ವಸೋ—ನಿವಾಸಹೇತೋ !** ವಾಸಸ್ಥಾನಗಳಿಗೆ ಕಾರಣಭೂತನಾದ ಅಥವಾ ಪಾಲಕನಾದ ಅಗ್ನಿಯೇ,

॥ ವ್ಯಾಕರಣಪ್ರಕ್ರಿಯಾ ॥

**ಮಾತರಿಶ್ವನೇ**—ನಿರ್ಮಾಣಹೇತುತ್ವಾತ್ ಮಾತಾ ಅಂತರಿಕ್ಷಮ್. ಆಕಾಶ ಎಂದರ್ಥ. ತತ್ರ ಶ್ವಸಿತಿ ಪ್ರಾಣಿತಿ ಇತಿ ಮಾತರಿಶ್ವಾ ವಾಯುಃ ಆಕಾಶದಲ್ಲಿ ಜೀವಂತವಾಗಿರುವುದು ಗಾಳಿ. **'ಶ್ವನ್ನುಕ್ಷನ್'** (ಉ. ಸೂ. ೧-೧೫೭) ಎಂಬ ಸೂತ್ರದಿಂದ ಮಾತರಿಶ್ವನ್ ಶಬ್ದವು ಕನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. (ಕಾರ್ಯಾಂತರಗಳನ್ನು ಸೇರಿಸಿ ನಿರ್ದೇಶಿಸುವುದೇ ನಿಪಾತ)

**ಸುಕ್ರತೂಯಾ**—ಸುಕ್ರತುಂ ಆತ್ಮನಃ ಇಚ್ಛತಿ. ಎಂಬರ್ಥದಲ್ಲಿ **'ಸುಪ ಆತ್ಮನಃ ಕ್ಯಚ್'** (ಪಾ. ಸೂ ೩-೧-೮) ಎಂಬುದರಿಂದ ಸುಕ್ರತು ಶಬ್ದದ ಮೇಲೆ ಕ್ಯಚ್. ಸುಕ್ರತು+ಯ ಎಂದಿರುವಾಗ **'ಅಕೃತ್ ಸಾರ್ವಧಾತುಕಯೋರ್ದೀರ್ಘಃ'** (ಪಾ. ಸೂ ೭-೪-೨೫) ಎಂಬುದರಿಂದ ಉಕಾರಕ್ಕೆ ದೀರ್ಘ. ಸುಕ್ರತೂಯಾ ಎಂಬುದು **'ಸನಾದ್ಯಂತಾ ಧಾತವಃ'** (ಪಾ. ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಪ್ರತ್ಯಯಾಂತಧಾತುವಾದುದರಿಂದ **'ಅ ಪ್ರತ್ಯಯಾತ್'** (ಪಾ. ಸೂ. ೩-೩-೧೦೨) ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ಅಕಾರರೂಪ ಪ್ರತ್ಯಯ. **'ಅತೋ ಲೋಪಃ'** (ಪಾ. ಸೂ. ೬-೪-೪೮) ಎಂಬುದರಿಂದ ಕ್ಯಚ್ಚಿನ ಅಕಾರಕ್ಕೆ ಲೋಪ. ಸುಕ್ರತೂಯ ಶಬ್ದ. ಇದಕ್ಕೆ ಸ್ತ್ರೀತ್ವ ವಿವಕ್ಷಾಮಾಡಿದಾಗ **'ಅಜಾದ್ಯತಷ್ಟಾಪ್'** (ಪಾ. ಸೂ. ೪-೧-೪) ಎಂಬುದರಿಂದ ಅದಂತವಾದುದರಿಂದ ಟಾಪ್. ಸುಕ್ರತೂಯಾ ಎಂಬ ಆದಂತವಾದ ಶಬ್ದವಾಗುತ್ತದೆ.

ತೃತೀಯಾ ಏಕವಚನದಲ್ಲಿ **' ಸುಪಾಂ ಸುಲುಕ್ '** (ಪಾ. ಸೂ ೭-೧-೩೯) ಸೂತ್ರದಿಂದ ವಿಭಕ್ತಿಗೆ ಡಾ ಎಂಬ ಆದೇಶ. ಡಿತ್ತಾದುದರಿಂದ ಪೂರ್ವದ ಟಿ ಸಂಜ್ಞೆಯುಳ್ಳ ಆಕಾರಕ್ಕೆ ಲೋಪ. ಸುಕ್ರತೂಯಾ ಎಂದು ರೂಪವಾಗುತ್ತದೆ. ಇಲ್ಲಿ ವಿಭಕ್ತಿಗೆ ಅನುದಾತ್ತ ಸ್ವರವಿದ್ದರೂ **' ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ '** (ಪಾ ಸೂ. ೬-೧-೧೬೧) ಎಂಬುದರಿಂದ ಅದು ಪರದಲ್ಲಿರುವಾಗ ಪೂರ್ವದ ಪ್ರತ್ಯಯಸ್ವರದಿಂದ ಬಂದಿರುವ ಉದಾತ್ತಾಕಾರಕ್ಕೆ ಲೋಪಬಂದುದರಿಂದ ಆ ಅನುದಾತ್ತಕ್ಕೆ ಉದಾತ್ತಸ್ವರ ಬರುತ್ತದೆ ಅಂತೋದಾತ್ತವಾದ ಪದವಾಗುತ್ತದೆ. ಸಂಹಿತಾಪಾಠದಲ್ಲಿ **' ಅನ್ಯೇಷಾಮಪಿ ದೃಶ್ಯತೇ '** ಎಂಬುದರಿಂದ ಪೂರ್ವಪದಕ್ಕೆ ದೀರ್ಘ ಬರುತ್ತದೆ.

**ವಿವಸ್ವತೇ**—ವಿವಾಸತಿಃ ಪರಿಚರಣಕರ್ಮಾ. ಸೇವಾಕರ್ಮವಾಗಿರುವ ಧಾತುವೆಂದರ್ಥ. ಇದಕ್ಕೆ **' ಸಂಪಾದಿಭ್ಯಃ ಕ್ವಿಪ್ '** (ವಾ. ೨೨೩೩) ಎಂಬುದರಿಂದ ಕ್ವಿಪ್. ಕ್ವಿಪ್ ಪರದಲ್ಲಿರುವಾಗ **' ವ್ಯತ್ಯಯೋ ಬಹುಲಂ '** ಎಂಬುದರಿಂದ ಉಪಧಾಹ್ರಸ್ವ. ವಿವಸ್ ಎಂದಾಗುತ್ತದೆ. ಆಮೇಲೆ ವಿವಸ್ ಅಸ್ಯ ಅಸ್ತಿ ಎಂದು ಅರ್ಥ ವಿವಕ್ಷಾ ಮಾಡಿದಾಗ **' ತದಸ್ಯಾ '** ಸೂತ್ರದಿಂದ ಮತುಪ್ ಇಲ್ಲಿ ಅಕಾರವು ಉಪಧೆಯಾಗಿರುವುದರಿಂದ **' ಮಾದುಪಧಾಯಾಃ '** (ಪಾ. ಸೂ. ೮-೨-೯) ಎಂಬುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ. **' ತಸೌ ಮತ್ವರ್ಥೇ '** (ಪಾ. ಸೂ. ೧-೪-೧೯) ಎಂಬುದರಿಂದ ಇಲ್ಲಿ ಸಾಂತಕ್ಕೆ ಮತುಪ್ ಪರದಲ್ಲಿರುವಾಗ ಭಸಂಜ್ಞೆ ಇರುವುದರಿಂದ ಪದಾಂತತ್ವ ಇಲ್ಲದಿರುವುದರಿಂದ ಸಕಾರಕ್ಕೆ ರುತ್ವ ಬರುವುದಿಲ್ಲ. ವಿವಸ್ವತ್ ಶಬ್ದ. ಚತುರ್ಥೀ ಏಕವಚನ ರೂಪ. ಮತುಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರವು ಉಳಿಯುತ್ತದೆ.

**ರೋದಸೀ**—ದ್ವಿತೀಯಾ ದ್ವಿವಚನ ಔ ಪರದಲ್ಲಿರುವಾಗ **' ವಾ ಛಂದಸಿ '** (ಪಾ. ಸೂ. ೬-೧-೧೦೬) ಎಂಬುದರಿಂದ ಪೂರ್ವಸವರ್ಣದೀರ್ಘ.

**ಹೋತೃವೂರ್ಯೇ**—ಹೋತ್ರಾ ವ್ರೀಯತೇ ಇತಿ ಹೋತೃವೂರ್ಯೋ ಯಜ್ಞಃ ಹೋತೃವಿನಿಂದ ಸ್ವೀಕರಿಸಲ್ಪಡುವುದು ಎಂದರ್ಥ. ವೃಞ್ ವರಣೇ ಧಾತು. ಸ್ವಾದಿ. **' ಏತಿಸ್ತುಶಾಸ್ '** (ಪಾ. ಸೂ. ೩-೧-೧೦೯) **ಎಂಬುದ**ರಿಂದ ಇದಕ್ಕೆ ಕ್ಯಪ್. ಪಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ **' ಹ್ರಸ್ವಸ್ಯ ಪಿತಿಕೃತಿತುಕ್ '** ಎಂಬುದರಿಂದ ತುಕ್ ಪ್ರಾಪ್ತವಾಗುತ್ತದೆ. **' ಆಗಮಶಾಸ್ತ್ರಮನಿತ್ಯಂ '** ಎಂಬುದರಿಂದ ತುಕಾಗಮವಾದುದರಿಂದ ಅನಿತ್ಯಾಶ್ರಯಣದಿಂದ ಇಲ್ಲಿ ಬರುವುದಿಲ್ಲ. ಹೋತೃವೃ+ಯ ಎಂದಿರುವಾಗ **' ಅಕೃತ್ಸಾರ್ವಧಾತುಕಯೋರ್ದೀರ್ಘಃ '** ಎಂಬುದರಿಂದ ಋಕಾರಕ್ಕೆ ದೀರ್ಘ. **' ಉದೋಷ್ಠ್ಯಪೂರ್ವಸ್ಯ '** (ಪಾ. ಸೂ. ೬-೧-೧೦೨) ಎಂಬುದರಿಂದ ಋೂಕಾರಕ್ಕೆ ಉತ್ವ. **' ಹಲಿ ಚ '** ಎಂಬುದರಿಂದ ಉಪಧಾದೀರ್ಘ. ಹೋತೃವೂರ್ಯ ಶಬ್ದವಾಗುತ್ತದೆ. ಸಪ್ತಮೀ ಏಕವಚನದ ರೂಪ ಕ್ಯಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ. ಊಕಾರ ಉದಾತ್ತವಾಗುತ್ತದೆ. ಕೃದಂತವಾದ ಉತ್ತರಪದವಾದುದರಿಂದ **' ಗತಿಕಾರಕೋಪಪದಾತ್ ಕೃತ್ '** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ

**ಅಸಘ್ನೋಃ**—ಸಘ ಹಿಂಸಾಯಾಂ ಧಾತು. ಸ್ವಾದಿ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ವಹನಾರ್ಥದಲ್ಲಿ ಪ್ರಯುಕ್ತವಾಗಿದೆ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಅದರ

ಇಕಾರಕ್ಕೆ ಲೋಪ. **ಸ್ವಾದಿಭ್ಯಃ ಶ್ನುಃ** ಎಂಬುದರಿಂದ ಶ್ನು ವಿಕರಣ. ಧಾತುವಿನ ಆದಿಯ ಷಕಾರಕ್ಕೆ ಸಕಾರಾದೇಶ. ಸಘ್+ನು+ಸ್ ಎಂದಿರುವಾಗ ಪ್ರತ್ಯಯನಿಮಿತ್ತಕವಾಗಿ ವಿಕರಣದ ಉಕಾರಕ್ಕೆ ಗುಣ. ಅಂಗಕ್ಕೆ ಲಙ್ ನಿಮಿತ್ತಕವಾಗಿ ಅಡಾಗಮ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗಬಂದರೆ ಅಸಘ್ನೋಃ ಎಂದು ರೂಪವಾಗುತ್ತದೆ ಪಾದದ ಆದಿಯಲ್ಲಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಯಜಃ**—ಯಜ ದೇವಪೂಜಾಸಂಗತಿಕರಣದಾನೇಷು. ಲಙ್ ಮಧ್ಯಮಪುರುಷ ಏಕವಚನರೂಪ. ಯದ್ಯಪಿ ಇಲ್ಲಿ ಹಿಂದೆ ಭಾರಂ ಎಂದಿರುವುದರಿಂದ ಅದನ್ನಿಟ್ಟುಕೊಂಡು ನಿಘಾತಸ್ವರ ಬರಬೇಕಾಗುತ್ತದೆ. ಆದರೆ **'ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾಃ'** (ಪಾ. ಸೂ. ೮-೧-೧೮-೫) ಎಂಬ ವಚನದಲ್ಲಿ ಏಕವಾಕ್ಯದಲ್ಲಿ ನಿಘಾತಸ್ವರವನ್ನು ಹೇಳಬೇಕೆಂದು ವಿಧಿಸಿರುತ್ತಾರೆ ಇಲ್ಲಿ ಭಾರಂ ಎಂಬ ಪೂರ್ವಪದವು ವಾಕ್ಯಾಂತರಕ್ಕೆ ಸಂಬಂಧಪಟ್ಟಿರುತ್ತದೆ. ಆದುದರಿಂದ ಅದನ್ನು ಅಪೇಕ್ಷಿಸಿ ತಿಙಂತಕ್ಕೆ ನಿಘಾತಸ್ವರ ಬರುವುದಿಲ್ಲ. ಅಟ್ಟಿನ ಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಮಹಃ**—ಮಹ ಪೂಜಾಯಾಂ ಧಾತು. **ಕ್ವಿಪ್ ಚ** ಸೂತ್ರದಿಂದ ಇದಕ್ಕೆ ಕ್ವಿಪ್. ಕ್ವಿಪ್ಪಿನಲ್ಲಿ ಸರ್ವಲೋಪ. ಮಹ್ ಶಬ್ದದ ಮೇಲೆ ಶಸ್. **ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಶಸ್ಸಿನ ಸ್ಥಾನದಲ್ಲಿ ಜಸ್. ಮಹ್+ಅಸ್ ಎಂದಿರುವಾಗ ರುತ್ವವಿಸರ್ಗಬಂದರೆ ಮಹಃ ಎಂದು ರೂಪವಾಗುತ್ತದೆ. ಏಕಾಚಿನ ಪರದಲ್ಲಿ ವಿಭಕ್ತಿಯು ಬಂದುದರಿಂದ **'ಸಾವೇಕಾಚ'** (ಪಾ. ಸೂ. ೬-೧-೧೬೮) ಎಂಬುದರಿಂದ ಉದಾತ್ತಸ್ವರವು ಬರುತ್ತದೆ. ಅಥವಾ ಶಸ್‌ಪರದಲ್ಲಿರುವಾಗ ಮಹಚ್ಛಬ್ದದ ಅತ್ ಎಂಬುದಕ್ಕೆ ಛಾಂದಸವಾಗಿ ಲೋಪಬರುತ್ತದೆ. ಮಹಃ ಎಂದು ರೂಪವಾಗುತ್ತದೆ. **ಬೃಹನ್ಮಹತೋರುಪಸಂಖ್ಯಾನಮ್** ಎಂಬುದರಿಂದ ಮಹಚ್ಛಬ್ದದ ಪರದಲ್ಲಿರುವುದರಿಂದ ಶಸ್ಸಿಗೆ ಉದಾತ್ತಸ್ವರ ಬರುತ್ತದೆ. ॥ ೩ ॥

॥ ಸಂಹಿತಾಪಾಠಃ ॥

ತ್ವಮ॑ಗ್ನೇ ಮನ॑ವೇ ದ್ಯಾಮ॑ವಾಶಯಃ ಪುರೂರ॑ವಸೇ ಸುಕೃತೇ॑ ಸುಕೃತ್ತ॑ರಃ ।

ಶ್ವಾತ್ರೇಣ॒ ಯತ್ಪಿತ್ರೋರ್ಮುಚ್ಯ॑ಸೇ ಪರ್ಯಾ ತ್ವಾ॒ ಪೂರ್ವ॑ಮನಯನ್ನಾಪ॑ರಂ ಪುನಃ॑ ॥ ೪ ॥

॥ ಪದಪಾಠಃ ॥

ತ್ವಂ । ಅಗ್ನೇ । ಮನವೇ । ದ್ಯಾಂ । ಅವಾಶಯಃ । ಪುರೂರವಸೇ । ಸುಽಕೃತೇ । ಸುಕೃತ್ಽತರಃ ।

ಶ್ವಾತ್ರೇಣ । ಯತ್ । ಪಿತ್ರೋಃ । ಮುಚ್ಯಸೇ । ಪರಿ । ಆ । ತ್ವಾ । ಪೂರ್ವಂ । ಅನಯನ್ । ಆ । ಅಪರಂ । ಪುನರಿತಿ ॥ ೪ ॥

॥ ಸಾಯಣ ಭಾಷ್ಯಂ ॥

ಹೇ ಅಗ್ನೇ ತ್ವಂ ಮನವೇ ಮನೋರನುಗ್ರಹಾರ್ಥಂ ದ್ಯಾಂ ದ್ಯುಲೋಕಮವಾಶಯಃ । ಶಬ್ದಿತವಾನಸಿ । ಪುಣ್ಯಕರ್ಮಭಿಃ ಸಾಧ್ಯೋ ದ್ಯುಲೋಕ ಇತಿ ಪ್ರಕಟಿತವಾನಸಿ । ಸುಕೃತೇ ತವ-ಪರಿಚರಣಂ ಕುರ್ವತೇ ಪುರೂರವಸ ಏತನ್ನಾಮಕಸ್ಯ ರಾಜ್ಞೋಽನುಗ್ರಹಾರ್ಥಂ ಸುಕೃತ್ತರೋಽತಿ-ಶಯೇನ ಶೋಭನಫಲಕಾರ್ಯೇರ್ಭೂಃ । ಯದ್ಯದಾ ಪಿತ್ರೋರರಣ್ಯೋಃ ಶ್ವಾತ್ರೇಣ ಕ್ಷಿಪ್ರಮಥನೇನ ಪರಿ ಮುಚ್ಯಸೇ ಪರಿತೋ ಮುಕ್ತೋ ಭವಸಿ । ಉತ್ಪದ್ಯಸ ಇತ್ಯರ್ಥಃ । ತದಾನೀಂ ತ್ವಾ ಅರ-ಣ್ಯೋರುತ್ಪನ್ನಂ ತ್ವಾಂ ಪೂರ್ವಂ ವೇದೇಃ ಪೂರ್ವದೇಶಮಾನಯನ್ । ಆಹವನೀಯತ್ವೇನ ಸ್ಥಾಪಿತವಂತಃ । ಪುನಃ ಪಶ್ಚಾದಪರಂ ಪಶ್ಚಿಮದೇಶಮಾನಯನ್ । ಗಾರ್ಹಪತ್ಯರೂಪೇಣ ಸ್ಥಾಪಿತ-ವಂತಃ । ಆಹವನೀಯಕರ್ಮಾನುಷ್ಠಾನಾದೂರ್ಧ್ವಂ ಗಾರ್ಹಪತ್ಯರೂಪೇಣ ಧಾರಿತವಂತ ಇತ್ಯರ್ಥಃ ॥ ಅವಾಶಯಃ । ವಾಶೃ ಶಬ್ದೇ । ಪುರೂರವಸೇ । ಪುರು ರೌತೀತಿ ಪುರೂರವಾಃ । ರು ಶಬ್ದೇ । ಅಸ್ಮಾದೌ-ಣಾದಿಕೇಽಸುನಿ ಪುರಸಿ ಚ ಪುರೂರವಾಃ । ಉ. ೪-೧೩೧ । ಇತಿ ಪೂರ್ವಪದಸ್ಯ ದೀರ್ಘೋ ನಿಪಾತ್ಯತೇ । ಸುಕೃತೇ । ಸುಕರ್ಮಪಾಪಮಂತ್ರಪುಣ್ಯೇಷು ಕೃಞಃ । ಪಾ. ೩-೨-೮೯ । ಇತಿ ಕ್ವಿಪ್ । ತತಸ್ತುಕ್ । ಪಿತ್ರೋಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ಮುಚ್ಯಸೇ । ಅದುಪದೇಶಾ-ಲ್ಲಸಾರ್ವಧಾತುಕಾನುದಾತ್ತತ್ವಂ । ಯದ್ಯಪಿ ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ವಚನಾದ್ವಿಕರಣಸ್ವರಃ ಸತಿ ಶಿಷ್ಟೋಽಪಿ ಲಸಾರ್ವಧಾತುಕಸ್ವರಸ್ಯ ಬಾಧಕೋ ನ ಭವತಿ ತಥಾಪಿ ಧಾತು-ಸ್ವರಂ ಬಾಧತ ಏವ ಧಾತುಸ್ವರಂ ಶ್ಯಾಸ್ವರ ಇತ್ಯುಕ್ತತ್ವಾತ್ । ಅತೋ ಯಕ ಏವ ಸ್ವರೇ ಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಮನವೇ**—ಮನುವಿಗಾಗಿ । **ದ್ಯಾಂ**—ದ್ಯುಲೋಕವನ್ನು । **ಅವಾಶಯಃ**—ಪ್ರಕಟಿಸಿರುವೆ । **ಸುಕೃತೇ**—ನಿನ್ನನ್ನು ಪೂಜಿಸುವ ಸತ್ಕಾರ್ಯವನ್ನು ಮಾಡತಕ್ಕ ।

**ಪುರೂರವಸೇ**—ಪುರೂರವಸ್ಸಿಗೆ । **ಸುಕೃತ್ತರಃ**—ಅತ್ಯಂತ ಶ್ರೇಷ್ಠವಾದ ಫಲಗಳನ್ನು ಕೊಟ್ಟಿರುವೆ । **ಯತ್**—ಯಾವಾಗ । **ಪಿತ್ರೋಃ**—ಅರಣಿದ್ವಯದ । **ಶ್ವಾತ್ರೇಣ**—ವೇಗವಾದ ಮಥನದಿಂದ । **ಪರಿಮುಚ್ಯಸೇ**—ಹೊರಕ್ಕೆ ಉದ್ಭವಿಸುತ್ತೀಯೋ (ಆಗ) । **ತ್ವಾ**—ನಿನ್ನನ್ನು । **ಪೂರ್ವಂ** - (ಯಜ್ಞವೇದಿಕೆಯ) ಪೂರ್ವಭಾಗದಲ್ಲಿ । **ಆ ಅನಯನ್** (ಆಹವನೀಯ ರೂಪದಿಂದ) ಸ್ಥಾಪಿಸುತ್ತಾರೆ । **ಪುನಃ**—ಅನಂತರ । **ಅಪರಂ**—ಪಶ್ಚಿಮಭಾಗದಲ್ಲಿ । **ಆ ಅನಯನ್**—(ಗಾರ್ಹಪತ್ಯರೂಪದಿಂದ) ಸ್ಥಾಪಿಸುತ್ತಾರೆ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಮನುವಿಗಾಗಿ ದ್ಯುಲೋಕವನ್ನು ಪ್ರಕಟಿಸಿರುವೆ ನಿನ್ನನ್ನು ಪೂಜಿಸುವ ಸತ್ಕಾರ್ಯವನ್ನು ಮಾಡತಕ್ಕ ಪುರೂರವಸ್ಸಿಗೆ ಅತ್ಯಂತ ಶ್ರೇಷ್ಠವಾದ ಫಲಗಳನ್ನು ಕೊಟ್ಟಿರುವೆ. ನೀನು ಯಾವಾಗ ಅರಣಿದ್ವಯಗಳ ವೇಗವಾದ ಮಥನದಿಂದ ಉದ್ಭವಿಸುತ್ತೀಯೋ ಆಗ ನಿನ್ನನ್ನು ಮೊದಲು ಯಜ್ಞವೇದಿಕೆಯ ಪೂರ್ವಭಾಗದಲ್ಲಿ ಆಹವನೀಯ ರೂಪದಲ್ಲೂ, ಅನಂತರ ಪಶ್ಚಿಮ ಭಾಗದಲ್ಲಿ ಗಾರ್ಹಪತ್ಯರೂಪದಿಂದಲೂ ಸ್ಥಾಪಿಸುತ್ತಾರೆ.

## English Translation.

O Agni, you announced heaven to Manu; you were the benefactor to the king Pururavas who worshipped you; when you, after being kindled were released from your parents, they brought you first to the east, then to the west (of the altar).

॥ ವಿಶೇಷವಿಷಯಗಳು ॥

**ಮನವೇ ದ್ಯಾಮವಾಶಯಃ**—ಮನುಪ್ರಜಾಪತಿಗೆ ಸ್ವರ್ಗಫಲವನ್ನು ಕೊಟ್ಟೆನೆಂದು ಪ್ರಕಟಿಸಿದೆ. ಋಗ್ವೇದದಲ್ಲಿ ಮನುವಿನ ಹೆಸರು ಅನೇಕ ಋಕ್ಕುಗಳಲ್ಲಿ ಪಠಿತವಾಗಿದೆ. ಋ. ಸಂ. ೧-೮೦-೧೬ ; ೨-೩೩-೧೩ ; ೮-೬೩-೧ ; ೧೦-೧೦೦-೫ ; ಯಜುರ್ವೇದ ತೈತ್ತಿರೀಯ ಸಂಹಿತಾ ೧-೫-೧-೩ ; ೭-೫-೧೫-೩ ; ೨-೫-೯-೧ ; ೨-೬-೭-೧ ; ೩-೩-೨-೧ ; ೫-೪-೧೦-೫ ; ೬-೬-೬-೧ ; ಅಥರ್ವವೇದ. ೧೪-೨-೪೧ ; ಕಾಠಕ ಸಂಹಿತಾ. ೮-೧೫ ; ಶತಪಥ ಬ್ರಾಹ್ಮಣ. ೧-೧-೪-೧೪ ; ಜೈಮಿನೀಯ ಉಪನಿಷದ್ಬ್ರಾಹ್ಮಣ. ೩-೧೫-೨ ಇತ್ಯಾದಿ ಅನೇಕ ಮಂತ್ರಗಳಲ್ಲಿ ಮನುವಿನ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದು. ಋಗ್ವೇದದಲ್ಲಿ ಈ ಮನುವು ಮಾನವಕುಲಕ್ಕೆ ಮೂಲಪುರುಷನೆಂದು, ಯಜ್ಞಮಾಡುವುದರಲ್ಲಿಯೂ ಇತರ ವಿಚಾರಗಳಲ್ಲಿಯೂ ಮುಂದಾಳೆಂದೂ ಹೇಳಲ್ಪಟ್ಟಿರುವುದು. ತೈತ್ತಿರೀಯ ಸಂಹಿತೆಯ ೩-೧-೯-೪ ರಲ್ಲಿಯೂ ಐತರೇಯ ಬ್ರಾಹ್ಮಣ. ೫-೧೪-೧-೨ ರಲ್ಲಿಯೂ ಈ ಮನುವಿನ ಪುತ್ರನಾದ ನಾಭಾನೇದಿಷ್ಠನು ತನ್ನ ಪಿತ್ರಾರ್ಜಿತ ಆಸ್ತಿಯಲ್ಲಿ ತನ್ನ ದಾಯಭಾಗಕ್ಕಾಗಿ ಪ್ರಯತ್ನಿಸಿದ ವರ್ಣನೆ ಇದೆ. ಮನುವಿಗೆ ಋಗ್ವೇದದಲ್ಲಿ ವಿವಸ್ವಾನ್ (ಋ. ಸಂ. ೮-೫೦-೧) ಅಥವಾ ವಿವಸ್ವಂತನ ಮಗನಾದ ವೈವಸ್ವತ (ಋ. ಸಂ. ೮-೧೦-೨೪ ; ಶತ. ಬ್ರಾ. ೧೩-೪-೩-೩ ; ಆಶ್ವಲಾಯನಶ್ರೌತಸೂತ್ರ ೧೦-೭ ; ನಿರುಕ್ತ ೧೨-೧೦) ಎಂಬ ಹೆಸರೂ ಇರುವುದು. ಮತ್ತು ಸವರ್ಣಾ ಅಥವಾ ಸರಣ್ಯೂ ಎಂಬುವಳ ವಂಶಸ್ಥನೆಂದೂ ಆದುದರಿಂದ ಸಾವರ್ಣಿ (ಋ. ಸಂ. ೮-೧೦-೨೪ ಇತ್ಯಾದಿ) ಎಂಬ ಹೆಸರೂ ಸಂವರಣನ ವಂಶಸ್ಥನಾದುದರಿಂದ ಸಾಂವರಣಿ (ಋ. ಸಂ. ೮-೫೧-೧) ಎಂಬ ಹೆಸರೂ ಸಹ ಇರುವುದು. ಋಗ್ವೇದಸಂಹಿತೆಯಲ್ಲಿ ಎಂಟನೇ ಮಂಡಲದಲ್ಲಿ

೨೭-೩೧ ಸೂಕ್ತಗಳಿಗೆ (೫೯ ಋಕ್ಕುಗಳಿಗೆ) ಮನುಃ ವೈವಸ್ವತಃ ಎಂಬುವನೂ ಒಂಭತ್ತನೇ ಮಂಡಲದ ೧೦೧ ನೇ ಸೂಕ್ತದಲ್ಲಿ ೧೦-೧೨ ನೆಯ ಋಕ್ಕುಗಳಿಗೆ (೩ ಋಕ್ಕುಗಳಿಗೆ) ಮನುಃ ಸಾಂವರಣಃ ಎಂಬುವನೂ ಋಷಿಯಾಗಿರುವರು. ಆದುದರಿಂದ ವೈವಸ್ವತನೂ ಸಾಂವರಣಿಯೂ ಬೇರೆ ಬೇರೆ ವ್ಯಕ್ತಿಗಳೆಂದು ಹೇಳಬೇಕಾಗುವುದು.

**ಅವಾಶಯಃ— ವಾಶೃ ಶಬ್ದೇ । ಶಬ್ದಿತವಾನಸಿ, ಪ್ರಕಟಿತವಾನಸಿ ।** ಉಚ್ಚರಿಸಿದೆ, ಮಾತನಾಡಿದೆ, ಇತ್ಯಾದಿ.

**ಪುರೂರವಸೇ— ಪುರು ರೌತೀತಿ ಪುರುರವಾಃ । ರು ಶಬ್ದೇ ।** ಮುಂದುಗಡೆ ಶಬ್ದ ಮಾಡುವವನು ಎಂದು ಪುರೂರವಶಬ್ದಕ್ಕೆ ಅವಯವಾರ್ಥವು. ಯಾಸ್ಕರು **ಪುರೂರವಾ ಬಹುಧಾ ರೋರೂಯತೇ** ಎಂದು ಹೇಳಿರುವರು (ನಿ. ೧೦-೪೬). ಈ ಋಕ್ಕಿನಲ್ಲಿ ಪುರೂರವಸೇ ಎಂಬ ಶಬ್ದವು ಆ ಹೆಸರಿನ ಒಬ್ಬ ರಾಜನನ್ನು ಸೂಚಿಸುವುದು. **ಪುರೂರವೋಽನು ತೇ ಕೇತಮಾಯಂ ರಾಜಾ ಮೇ ವೀರ ತನ್ವಸ್ತದಾಸೀಃ ।** (ಋ. ಸಂ. ೧೦-೯೫-೫) ಎಂಬ ಋಕ್ಕು ಪುರೂರವನು ಒಬ್ಬ ರಾಜನೆಂಬ ವಿಷಯವನ್ನು ಸಮರ್ಥಿಸುವುದು. ಋಗ್ವೇದ ಸಂಹಿತೆಯ ಹತ್ತನೆಯ ಮಂಡಲದಲ್ಲಿರುವ ೯೫ ನೇ ಸೂಕ್ತದಲ್ಲಿ ಪುರೂರವನೆಂಬ ಈ ರಾಜನಿಗೂ ಅಪ್ಸರೆಯಾದ ಊರ್ವಶಿಗೂ ನಡೆದ ಸಂಭಾಷಣೆ ಇರುವುದು ಶತಪಥ ಬ್ರಾಹ್ಮಣದಲ್ಲಿ (ಶತ. ಬ್ರಾ. ೧೧-೫-೧-೧) ಈ ಸಂವಾದವು ಒಂದು ಕಥೆಯ ರೂಪದಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿರುವುದು. ಈ ರಾಜನು ಇಳಾದೇವಿಯ ಪುತ್ರನೆಂದು ಶತಪಥ ಬ್ರಾಹ್ಮಣದಲ್ಲಿ ಹೇಳಿದೆ. (ಶತ. ಬ್ರಾ. ೧೧-೫-೧-೧) ಋಗ್ವೇದದಲ್ಲಿ ಈ ರಾಜನು ಇಳಾದೇವಿಯ ಪುತ್ರ ಎಂದರೆ ಐಲಃ ಪುರೂರವಾಃ ಎಂಬ ಹೆಸರಿನಿಂದ ಹತ್ತನೆಯ ಮಂಡಲದ ೯೫ ನೆಯ ಸೂಕ್ತದಲ್ಲಿ ೧, ೩, ೬, ೮-೧೦, ೧೨, ೧೪, ೧೭ ಎಂಬ ಒಟ್ಟು ೯ ಋಕ್ಕುಗಳಿಗೆ ಋಷಿಯಾಗಿರುವನು. ಪುರಾಣಾದಿಗಳಲ್ಲಿ ಈ ಪುರೂವಸ್ಸೆಂಬ ರಾಜನ ವೃತ್ತಾಂತವು ಪ್ರಕಾರಾಂತರವಾಗಿ ವರ್ಣಿತವಾಗಿದೆ

**ಸುಕೃತೇ—ತವ ಪರಿಚರಣಂ ಕುರ್ವತೇ ।** ನಿನ್ನ ಸೇವಾರೂಪವಾದ ಕರ್ಮವನ್ನು ಮಾಡುತ್ತಿರುವ.

**ಸುಕೃತ್ತರಃ—ಅತಿಶಯೇನ ಶೋಭನಫಲಕಾರ್ಯಭೂಃ ।** ಬಹಳವಾಗಿ ಶೋಭನಫಲಗಳನ್ನು ಉಂಟು ಮಾಡುವವನು.

**ಶ್ವಾತ್ರೇಣ—ಕ್ಷಿಪ್ರಮುಥನೇನ ।** ಬೇಗ ಕಡೆಯುವುದರಿಂದ (ಉತ್ಪನ್ನನಾದವನು) **ಶ್ವಾತ್ರಮಿತಿ ಕ್ಷಿಪ್ರನಾಮಾಶು ಅತನಂ ಭವತಿ** ಎಂದು ನಿರುಕ್ತವಚನವಿರುವುದು (ನಿ. ೫-೩).

**ಪಿತ್ರೋರ್ಮುಚ್ಯಸೇ—**ಇಲ್ಲಿ ಪಿತ್ರೋಃ ಎಂದರೆ ಮಾತಾಪಿತ್ರೋಃ-ತಾಯಿತಂದೆಗಳಾದ ಅಥವಾ ಉತ್ಪತ್ತಿಗೆ ಕಾರಣಭೂತಗಳಾದ ಅರಣಿಗಳು ಎಂದರ್ಥವು ಅವುಗಳಿಂದ ಮುಕ್ತನಾದ ಎಂದರೆ ಅವುಗಳಿಂದ ಉತ್ಪನ್ನನಾಗಿರುವೆ ಎಂದಭಿಪ್ರಾಯವು. ಸ್ಕಂದಸ್ವಾಮಿಯು ಪಿತ್ರೋಃ ಎಂಬ ಶಬ್ದಕ್ಕೆ ದ್ಯಾವಾಪೃಥಿವ್ಯೋಃ-ಸ್ವರ್ಗಲೋಕ ಭೂಲೋಕಗಳಿಂದ ಎಂದು ಅರ್ಥವಿವರಣೆ ಮಾಡಿರುವರು'

**ಆತ್ವಾ ಪೂರ್ವಮನಯನ್, ಆ ಅಪರಂ ಪುನಃ—**ಅಗ್ನಿಯನ್ನು ಅರಣಿಯಲ್ಲಿ ಉತ್ಪತ್ತಿಮಾಡಿದ ಮೇಲೆ ಮೊದಲು ಯಜ್ಞವೇದಿಕೆಯ ಪೂರ್ವಭಾಗದಲ್ಲಿರುವ ಆಹವನೀಯಾಗ್ನಿ ಎಂಬ ಎಂಬ ಅಗ್ನಿಕುಂಡದಲ್ಲಿ ಸ್ಥಾಪಿಸುವರು.

ಬಳಿಕ ಅಲ್ಲಿಂದ ಎಂದರೆ ಆ ಅಗ್ನಿಯಿಂದ ಪಶ್ಚಿಮಭಾಗದಲ್ಲಿರುವ ಗಾರ್ಹಪತ್ಯವೆಂಬ ಅಗ್ನಿಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಿಸುವರು ಎಂದಭಿಪ್ರಾಯವು. ಈ ಕ್ರಮವು ಯಜ್ಞಗಳಲ್ಲಿ ಈಗಲೂ ಅನುಸರಿಸಲ್ಪಡುತ್ತಿರುವುದು. ಈ ವಿಷಯ ಗಳೆಲ್ಲಾ ಶ್ರೌತಸೂತ್ರಗಳಲ್ಲಿ ಹೇಳಲ್ಪಟ್ಟಿರುವವು

|| ವ್ಯಾಕರಣಪ್ರಕ್ರಿಯಾ ||

**ಅವಾಶಯಃ**—ವಾಶೃ ಶಬ್ದೇ ಧಾತು. ದಿವಾದಿ. ಶ್ಯನ್ ವಿಕರಣ. ಣಿಜಂತದ ಮೇಲೆ ಲಙ್ ಮಧ್ಯಮ ಪುರುಷ ಏಕವಚನದ ರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪುರೂರವಸೇ**—ಪುರು ರೌತಿ ಇತಿ ಪುರೂರವಾಃ ರು ಶಬ್ದೇ ಧಾತು. ಅದಾದಿ. **ಸರ್ವಧಾತುಭ್ಯೋಽಸುನ್** ಎಂಬುದರಿಂದ ಇದಕ್ಕೆ ಅಸುನ್ ಪ್ರತ್ಯಯ. ರವಸ್ ಎಂದು ಸಾಂತವಾದ ಪದವಾಗುತ್ತದೆ. **'ಪುರಸಿ ಚ ಪುರೂರವಾಃ'** (ಉ. ಸೂ. ೪–೬೭೧) ಎಂಬಲ್ಲಿ ಪೂರ್ವಪದಕ್ಕೆ ದೀರ್ಘವು ನಿಪಾತಿತವಾಗಿರುತ್ತದೆ. ಚತುರ್ಥೀ ಏಕವಚನದಲ್ಲಿ ಪುರೂರವಸೇ ಎಂದು ರೂಪವಾಗುತ್ತದೆ.

**ಸುಕೃತೇ**—ಡುಕೃಞ್ ಕರಣೇ ಧಾತು. **'ಸುಕರ್ಮ ಪಾಪ ಮಂತ್ರಪುಣ್ಯೇಷು ಕೃಞಃ'** (ಪಾ. ಸೂ. ೩–೨–೮೯) ಸು ಮುಂತಾದ ಶಬ್ದಗಳು ಉಪಪದವಾಗಿರುವಾಗ ಕೃಞ್ ಧಾತುವಿಗೆ ಕ್ವಿಪ್ ಬರುತ್ತದೆ ಎಂಬುದರಿಂದ ಇಲ್ಲಿ ಸು ಉಪಪದವಾಗಿರುವುದರಿಂದ ಕ್ವಿಪ್. ಪಿತ್ತಾದುದರಿಂದ ಅದು ಪರದಲ್ಲಿರುವಾಗ **ಹ್ರಸ್ವಸ್ಯ** ಸೂತ್ರದಿಂದ ಋಕಾರಕ್ಕೆ ತುಕಾಗಮ. ಸುಕೃತ್ ಶಬ್ದವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಸುಕೃತೇ ಎಂದು ರೂಪವಾಗುತ್ತದೆ.

**ಪಿತ್ರೋಃ**—ಪಿತೃ ಶಬ್ದದ ಮೇಲೆ ಓಸ್ ವಿಭಕ್ತಿ ಪರದಲ್ಲಿರುವಾಗ ಯಣಾದೇಶ ಬಂದರೆ ಪಿತ್ರೋಃ ಎಂದು ರೂಪವಾಗುತ್ತದೆ. **'ಉದಾತ್ತಯಣೋ ಹಲ್‌ಪೂರ್ವಾತ್'** (ಪಾ ಸೂ. ೬–೧–೧೭೪) ಹಲ್ ಪೂರ್ವವಾಗಿರುವ ಉದಾತ್ತದ ಸ್ಥಾನದಲ್ಲಿ ಬಂದಿರುವ ಯಣಿನ ಪರದಲ್ಲಿರುವ ವಿಭಕ್ತಿಯು ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಓಕಾರವಿಭಕ್ತಿಯು ಉದಾತ್ತವಾಗುತ್ತದೆ.

**ಮುಚ್ಯಸೇ**—ಮುಚ್ಲೃ ಮೋಕ್ಷಣೇ ಧಾತು ತುದಾದಿ. ಕರ್ಮಣಿ ಲಟ್ ಮಧ್ಯಮಪುರುಷ ಏಕವಚನರೂಪ **'ಸಾರ್ವಧಾತುಕೇ ಯಕ್'** (ಪಾ. ಸೂ. ೩–೧–೬೭) ಎಂಬುದರಿಂದ ಯಕ್ ವಿಕರಣ ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **'ತಾಸ್ಯನುದಾತ್ತೇತ್'** ಸೂತ್ರದಿಂದ ಅನುದಾತ್ತ. ಇಲ್ಲಿ ಮೊದಲು ಧಾತುಸ್ವರ ಆಮೇಲೆ ಪ್ರತ್ಯಯಸ್ವರ ಆಮೇಲೆ ವಿಕರಣಸ್ವರ ಹೀಗೆ ಕ್ರಮವು ವಿಹಿತವಾಗಿದೆ. ಬಾಧ್ಯಬಾಧಕವಿಚಾರದಲ್ಲಿ **'ಸತಿಶಿಷ್ಟ ಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯಃ'** ಎಂದು ಹೇಳಿರುತ್ತಾರೆ. ವಿಕರಣಸ್ವರವನ್ನು ಬಿಟ್ಟು ಬೇರೆಡೆಯಲ್ಲಿ ಸ್ವರಬಲೀಯಸ್ತ್ವವಿಚಾರ ಎಂದು ತಾತ್ಪರ್ಯ. ಆದುದರಿಂದ ಇಲ್ಲಿ ವಿಕರಣಸ್ವರವು ಲಸಾರ್ವಧಾತುಕಸ್ವರಕ್ಕೆ ಬಾಧಕವಾಗು ವುದಿಲ್ಲ. ಆದರೂ **ಧಾತುಸ್ವರಂ ಶ್ನಾ ಸ್ವರಃ** ಎಂದು ಬೇರೆಡೆಯಲ್ಲಿ ಹೇಳಿರುತ್ತಾರೆ. ವಿಕರಣ ಸ್ವರವು ಧಾತುಸ್ವರ ವನ್ನು ಬಾಧಿಸುತ್ತದೆ ಎಂದು ತಾತ್ಪರ್ಯ. ಆದುದರಿಂದ ಇಲ್ಲಿ ಯಕ್‌ವಿಕರಣಸ್ವರವು ಧಾತುಸ್ವರವನ್ನು ಬಾಧಿಸಿಯೇ ಬಾಧಿಸುವುದು. ಇದರಿಂದ ಯಕ್ಕಿನ ಆದ್ಯುದಾತ್ತಸ್ವರವೇ ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಯಕ್ಕಿನ ಸ್ವರ ಬರದೇ ಧಾತುಸ್ವರವೇ ಬಂದು ಆದ್ಯುದಾತ್ತವಾಗುತ್ತದೆ.

**ಅನಯನ್**––ಣೀಞ್ ಪ್ರಾಪಣೇ ಧಾತು. ಭ್ವಾದಿ. ಲಙ್ ಪ್ರಥಮ ಪುರುಷ ಬಹುವಚನರೂಪ. ಪೂರ್ವಂ ಎಂಬ ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ತ್ವಮಗ್ನೇ ವೃಷಭಃ ಪುಷ್ಟಿವರ್ಧನ ಉದ್ಯತಸ್ರುಚೇ ಭವಸಿ
ಶ್ರವಾಯ್ಯಃ ।
ಯ ಆಹುತಿಂ ಪರಿ ವೇದಾ ವಷಟ್ಕೃತಿಮೇಕಾಯುರಗ್ರೇ ವಿಶ
ಆವಿವಾಸಸಿ ॥ ೫ ॥

॥ ಪದಪಾಠಃ ॥

ತ್ವಂ । ಅಗ್ನೇ । ವೃಷಭಃ । ಪುಷ್ಟಿऽವರ್ಧನಃ । ಉದ್ಯತऽಸ್ರುಚೇ । ಭವಸಿ ।
ಶ್ರವಾಯ್ಯಃ ।
ಯಃ । ಆऽಹುತಿಂ । ಪರಿ । ವೇದ । ವಷಟ್ऽಕೃತಿಂ । ಏಕऽಆಯುಃ । ಅಗ್ರೇ ।
ವಿಶಃ । ಆऽವಿವಾಸಸಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ವೃಷಭಃ ಕಾಮಾನಾಂ ವರ್ಷಿತಾ ಪುಷ್ಟಿವರ್ಧನೋ ಯಜಮಾನಸ್ಯ ಧನಾದಿಪೋಷಾಭಿವೃದ್ಧಿಹೇತುಃ ಉದ್ಯತಸ್ರುಚೇ ಉದ್ಧೃತಯಾ ಸ್ರುಚಾ ಯುಕ್ತಾಯ ಯಜಮಾನಾಯ ತದನುಗ್ರಹಾರ್ಥಂ ಶ್ರವಾಯ್ಯೋ ಮಂತ್ರೈಃ ಶ್ರವಣೀಯೋ ಭವಸಿ । ಯೋ ಯಜಮಾನೋ ವಷಟ್ಕೃತಿಂ ವಷಟ್ಕಾರಯುಕ್ತಾಮಾಹುತಿಂ ಪರಿ ವೇದ ಪರಿತೋ ಜಾನಾತಿ । ಸಮರ್ಪಯತೀತ್ಯರ್ಥಃ । ಏಕಾಯು–

ಮುರ್ಖ್ಯಾನ್ನಸ್ತ್ವಮಗ್ರೇ ಪ್ರಥಮಂ ತಂ ಯಜಮಾನಂ ವಿಶಸ್ತದನುಕೂಲಾಃ ಪ್ರಜಾ ಆವಿವಾಸಸಿ । ಸರ್ವತಃ ಪ್ರಕಾಶಯಸಿ ॥ ಪುಷ್ಟಿವರ್ಧನಃ । ವೃಧು ವೃದ್ಧೌ । ಅಸ್ಮಾಣಿಜಂತಾನ್ನಂದ್ಯಾದಿತ್ವಾತ್ ಲ್ಯುಃ । ಲಿತ್ಸ್ವರೇಣೋತ್ತರಪದಸ್ಯಾದ್ಯುದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಉದ್ಯತಸ್ರುಚೇ । ಯಮು ಉಪರಮೇ । ಅಸ್ಮಾದುತ್ಪೂರ್ವಾನ್ನಿಷ್ಠೇತಿ ಕ್ತಪ್ರತ್ಯಯ ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಉದ್ಯತಾ ಸ್ರುಗ್ಯೇನೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವೇದ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ ॥ ೩೨ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ವೃಷಭಃ**—(ಇಷ್ಟಾರ್ಥಗಳನ್ನು) ವರ್ಷಿಸುವವನಾಗಿಯೂ । **ಪುಷ್ಟಿವರ್ಧನಃ**—(ಯಜಮಾನನಿಗೆ) ಪೋಷಕವಾದ ಐಶ್ವರ್ಯವನ್ನು ವೃದ್ಧಿಪಡಿಸುವವನಾಗಿಯೂ । **ಉದ್ಯತಸ್ರುಚೇ**—ಸೌಟನ್ನು ಮೇಲಕ್ಕೆತ್ತಿದ ಯಜಮಾನನಿಗಾಗಿ । **ಶ್ರವಾಯ್ಯಃ**—(ಮಂತ್ರಗಳಿಂದ) ಕರೆಯಲ್ಪಡುವವನಾಗಿಯೂ । **ಭವಸಿ**—ಆಗಿದ್ದೀಯೆ । **ಯಃ**—ಯಾವ ಯಜಮಾನನು । **ವಷಟ್ಕೃತಿಂ**—ವಷಟ್ಕಾರ ಸಹಿತವಾದ । **ಆಹುತಿಂ**—ಆಹುತಿಯನ್ನು । **ಪರಿ ವೇದ**—ಚೆನ್ನಾಗಿ ತಿಳಿದುಕೊಳ್ಳುತ್ತಾನೆಯೋ (ತಿಳಿದುಕೊಂಡು ಸಮರ್ಪಿಸುತ್ತಾನೆಯೋ) । **ಏಕಾಯುಃ**—(ಅವನ) ಮುಖ್ಯಸ್ಥಿತಿಗೆ ಕಾರಣನಾದ ನೀನು । **ಅಗ್ರೇ**—ಮೊದಲು (ಆ ಯಜಮಾನನನ್ನೂ) । **ವಿಶಃ**—(ಅನಂತರ) ಅವನಿಗೆ ಅನುಕೂಲರಾದ ಪ್ರಜೆಗಳನ್ನೂ । **ಆವಿವಾಸಸಿ**—ಪ್ರಕಾಶಿಸುವಂತೆ ಮಾಡುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಇಷ್ಟಾರ್ಥಗಳನ್ನು ವರ್ಷಿಸುವವನೂ ಯಜಮಾನನಿಗೆ ಪೋಷಕವಾದ ಐಶ್ವರ್ಯವನ್ನು ವೃದ್ಧಿಪಡಿಸುವವನೂ ಆಗಿರುವೆ. ಮತ್ತು ಆಹುತಿಗಾಗಿ ಸೌಟನ್ನು ಮೇಲಕ್ಕೆತ್ತಿ ಯಜಮಾನನು ನಿನ್ನನ್ನು ಕರೆಯುವುದನ್ನೂ ಕೇಳುವಿ. ಯಾವ ಯಜಮಾನನು ವಷಟ್ಕಾರ ಸ್ತೋತ್ರಸಹಿತವಾದ ಆಹುತಿಯನ್ನು ಚೆನ್ನಾಗಿ ತಿಳಿದುಕೊಂಡು ಅದನ್ನು ಸಮರ್ಪಿಸುತ್ತಾನೆಯೋ ಅವನ ಮುಖ್ಯಸ್ಥಿತಿಗೆ ಕಾರಣನಾದ ನೀನು ಮೊದಲು ಆ ಯಜಮಾನನನ್ನೂ ಅನಂತರ ಅವನಿಗೆ ಅನುಕೂಲರಾದ ಪ್ರಜೆಗಳನ್ನೂ ಪ್ರಕಾಶಿಸುವಂತೆ ಮಾಡುತ್ತೀಯೆ. (ಎಂದರೆ ಇಷ್ಟಾರ್ಥಗಳನ್ನು ಕೊಡುವುದರಿಂದ ಸಂತೋಷಪಡಿಸುತ್ತೀಯೆ).

## English Translation.

O Agni, you are the showerer of desires, the increaser of prosperity of your worshipper ; you will hear the hymns of the worshipper as soon as the ladle is lifted (to pour the oblation on the fire). Upon him who fully understands the invocation and makesthe olation with the word Vashatkriti at the moment of pouring the clarified butter on the fire, you, the provider of food, first bestow light, and then upon all men.

|| ವಿಶೇಷವಿಷಯಗಳು ||

**ವೃಷಭಃ--ಕಾಮಾನಾಂ ವರ್ಷಿತಾ** | ಇಷ್ಟಾರ್ಥಗಳನ್ನು ಸುರಿಸುವವನು, the bestower of desires.

**ಪುಷ್ಟಿವರ್ಧನಃ—ವೃಧು ವೃದ್ಧೌ | ಪುಷ್ಟೇಃ ವರ್ಧಿತಾ** | ಯಜಮಾನನಿಗೆ ಧನ, ಆಹಾರ ಮೊದಲಾದ ವಸ್ತುಗಳನ್ನು ಕೊಟ್ಟು ಪೋಷಿಸುವವನು, ಪುಷ್ಟಿಯನ್ನು ಅಭಿವೃದ್ಧಿಪಡಿಸುವವನು.

**ಉದ್ಯತಸ್ರುಚೇ—**ಸ್ರುಕ್ ಎಂದರೆ ಹೋಮಮಾಡುವ ಮರದ ಸೌಟು. ಅಂತಹ ಸೌಟನಿಂದ ಹೋಮ ಮಾಡುವುದಕ್ಕಾಗಿ ಅದಕ್ಕೆ ತುಪ್ಪವನ್ನು ತುಂಬಿಕೊಂಡು ಅದನ್ನು ಅಗ್ನಿಯಲ್ಲಿ ಹಾಕಲು ಸೌಟನ್ನು ಮೇಲಕ್ಕೆ ಎತ್ತಿ ಹಿಡಿದಿರುವ (ಯಜಮಾನನಿಗೆ).

**ಶ್ರವಾಯ್ಯಃ—ಶ್ರವಣೀಯೋ ಭವಸಿ** | ಯಜಮಾನನ ಆಹ್ವಾನವನ್ನು ಕೇಳುವೆ.

**ಯ ಆಹುತಿಂ ಪರಿ ವೇದಾ ವಷಟ್ಕೃತಿಂ**—ಅಗ್ನಿಯಲ್ಲಿ ಹೋಮಮಾಡುವಾಗ ಆಯಾ ದೇವತಾಕವಾದ ಯಾಜ್ಯಾಮಂತ್ರವನ್ನು ಪಠಿಸಿ ಆಮಂತ್ರದ ಕೊನೆಯಲ್ಲಿ ವಷಟ್ ಎಂಬ ಶಬ್ದವನ್ನು ಸೇರಿಸಿ ಹೋಮಮಾಡುವರು. ಇದಕ್ಕೆ ವಷಟ್ಕೃತಿಯೆಂದು ಹೇಳುವರು. ಈ ವಿಧಾನವನ್ನು ತಿಳಿದು ಅದರಂತೆ ವಷಟ್ಕಾರಪೂರ್ವಕವಾಗಿ ಯಾವ ಯಜಮಾನನು ಹೋಮಮಾಡುವನೋ ಅವನು ಕರ್ಮವಿಧಿಗಳನ್ನು ತಿಳಿದವನು ಎಂದಭಿಪ್ರಾಯವು.

**ಏಕಾಯುಃ—ಮುಖ್ಯಾನ್ನಸ್ತ್ವಂ** | ಅನ್ನವನ್ನು ಕೊಡುವವರಲ್ಲಿ ಮುಖ್ಯನಾದವನು. ಈ ಶಬ್ದದ ಅರ್ಥದ ವಿಷಯದಲ್ಲಿ ಸ್ಕಂದಸ್ವಾಮಿಯು ಒಂದು ಇತಿಹಾಸವನ್ನು ಹೇಳಿರುವರು—ಪೂರ್ವದಲ್ಲಿ ಊರ್ವಶಿಯೆಂಬ ಅಪ್ಸರೆಯ ಪುತ್ರನಾದ ಆಯುವೆಂಬ ಗಂಧರ್ವನು ಗಂಧರ್ವಲೋಕದಿಂದ ಅಗ್ನಿಯನ್ನು ತಂದು ಯಜ್ಞಮಾಡಿದನು. ಆದುದರಿಂದ ಅಗ್ನಿಯು ಆ ಆಯುವೆಂಬುವನಿಗೆ ಮೊದಲು ಅನುಗ್ರಹಮಾಡಿ ಬಳಿಕ ಇತರ ದೇವಪ್ರಜೆಗಳಿಗೆ ಅನುಗ್ರಹಮಾಡಿದ ನೆಂದೂ ಆ ವಿಷಯವು ಇಲ್ಲಿ ಏಕಾಯುರಗ್ರೇ ಎಂಬ ಶಬ್ದಗಳಿಂದ ನಿರೂಪಿಸಲ್ಪಟ್ಟಿರುವುದೆಂದೂ ಹೇಳಿರುವರು

**ವಿಶಃ—ಪ್ರಜಾಃ** | ಪ್ರಜೆಗಳನ್ನೂ, ಇತರ ಜನರನ್ನೂ.

**ಆವಿವಾಸಸಿ—ಸರ್ವತಃ ಪ್ರಕಾಶಯತಿ** | ಪ್ರಕಾಶಪಡಿಸುವೆ ಎಂದರೆ ತೃಪ್ತಿಪಡಿಸುವೆ, ಸಂತೋಷ ಗೊಳಿಸುವೆ.

|| ವ್ಯಾಕರಣಪ್ರಕ್ರಿಯಾ ||

**ಪುಷ್ಟಿವರ್ಧನಃ**—ವೃಧು ವೃದ್ಧೌ ಧಾತು. ಭ್ವಾದಿ. '**ಹೇತುಮತಿ ಚ**' (ಪಾ. ಸೂ. ೩-೧-೨೬) ಎಂಬುದ ರಿಂದ ಣಿಚ್. ಣಿಜಂತದ ಮೇಲೆ '**ನಂದಿಗ್ರಹಪಚಾದಿಭ್ಯೋಲ್ಯುಣಿನ್ಯಚಃ**' (ಪಾ. ಸೂ. ೭-೧-೧೩೪) ಎಂಬುದ ರಿಂದ ಲ್ಯು ಪ್ರತ್ಯಯ ಬರುತ್ತದೆ. ಣಿಜಂತವಾದ ಈ ಧಾತುವು ನಂದ್ಯಾದಿಯಲ್ಲಿ ಸೇರಿದೆ. ಲ್ಯು ಪ್ರತ್ಯಯದಲ್ಲಿ ಲಕಾರ ಇತ್. '**ಯುವೋರನಾಕೌ**' (ಪಾ. ಸೂ. ೬-೧-೧) ಎಂಬುದರಿಂದ ಯು ಎಂಬುದಕ್ಕೆ ಅನಾದೇಶ. ಅನ ಪರದಲ್ಲಿ ರುವಾಗ ಧಾತುವಿಗೆ ಲಘೂಪಧಗುಣ. ವರ್ಧನ ಎಂದು ಶಬ್ದವಾಗುತ್ತದೆ. ಲಿತ್‌ಪ್ರತ್ಯಯಾಂತವಾದುದರಿಂದ '**ಲಿತಿ**'

(ಪಾ. ಸೂ. ೬-೧-೯३) ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಪುಷ್ಟಿಂ ವರ್ಧಯತಿ ಇತಿ ಪುಷ್ಟಿವರ್ಧನಃ. ಕಾರಕ ಪೂರ್ವ ಪೂರ್ವಪದವಾಗಿದ್ದು ಕೃದಂತ ಉತ್ತರಪದವಾಗಿರುವುದರಿಂದ **'ಗತಿಕಾರಕೋಪಪದಾತ್ ಕೃತ್'** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ.

**ಉದ್ಯತಸ್ರುಚೇ**—ಯಮು ಉಪರಮೇ ಧಾತು ಭ್ವಾದಿ. ಉತ್ ಉಪಸರ್ಗಪೂರ್ವಕವಾದ ಈ ಧಾತುವಿಗೆ **'ನಿಷ್ಠಾ'** (ಪಾ. ಸೂ. ३-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಉದ್ಯಮ್+ತ ಎಂದಿರುವಾಗ ಕ್ತಿತ್ತಾದ ಪ್ರತ್ಯಯ ಪರದಲ್ಲಿ ರುವುದರಿಂದ **'ಅನುದಾತ್ತೋಪದೇಶ'** (ಪಾ. ಸೂ. ೬-೪-३೭) ಎಂಬುದರಿಂದ ಯಮಿನ ಮಕಾರಕ್ಕೆ ಲೋಪ. ಉದ್ಯತ ಎಂಬ ಶಬ್ದವಾಗುತ್ತದೆ. **'ಗತಿರನಂತರಃ'** (ಪಾ. ಸೂ. ೬-೨-೪೯) ಕರ್ಮಾರ್ಥ. ಕ್ತಪ್ರತ್ಯಯಾಂತ ಶಬ್ದವು ಪರದಲ್ಲಿರುವಾಗ ಅವ್ಯವಹಿತ ಪೂರ್ವದಲ್ಲಿರುವ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತದೆ ಎಂಬುದರಿಂದ ಉತ್ ಪ್ರಕೃತಿಸ್ವರವನ್ನು ಹೊಂದುತ್ತದೆ. ಉದ್ಯತಾ ಸ್ರುಕ್ ಯೇನ ಸಃ ಉದ್ಯತಸ್ರುಕ್. ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ. ಚತುರ್ಥೀ ಏಕವಚನದಲ್ಲಿ ಉದ್ಯತಸ್ರುಚೇ ಎಂದು ರೂಪವಾಗುತ್ತದೆ.

**ವೇದ**—ವಿದ ಜ್ಞಾನೇ ಧಾತು. ಅದಾದಿ. **'ವಿದೋ ಲಟೋವಾ'** (ಪಾ. ಸೂ. ३-೪-೮३) ಎಂಬುದರಿಂದ ಧಾತುವಿನ ಪರದಲ್ಲಿರುವ ಲಟಿನ ಪರಸ್ಮೈಪದಕ್ಕೆ (ಪ್ರ. ಪು. ಏಕವಚನಕ್ಕೆ) ಣಲಾದೇಶ. ಣಲ್‌ಪರದಲ್ಲಿರುವಾಗ ಧಾತುವಿಗೆ ಲಘೂಪಧ ಗುಣ. ವೇದ ಎಂದು ರೂಪವಾಗುತ್ತದೆ. ಯಃ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. **'ದ್ವ್ಯಚೋಽತಸ್ತಿಙಃ'** (ಪಾ. ಸೂ. ೬-३-೧३೫) ಎಂಬುದರಿಂದ ವೇದ ಎಂಬುದು ದ್ವ್ಯಚ್ಕವಾಗಿರುವುದರಿಂದ ಅದರ ಅಕಾರಕ್ಕೆ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ತ್ವಮಗ್ನೇ ವೃಜಿನವರ್ತನಿಂ ನರಂ ಸಕ್ಮನ್ಪಿಪರ್ಷಿ ವಿದಥೇ ವಿಚರ್ಷಣೇ ।
ಯಃ ಶೂರಸಾತಾ ಪರಿತಕ್ಮ್ಯೇ ಧನೇ ದಭ್ರೇಭಿಶ್ಚಿತ್ಸಮೃತಾ ಹಂಸಿ ಭೂಯಸಃ ॥ ೬ ॥

॥ ಪದಪಾಠಃ ॥

ತ್ವಂ । ಅಗ್ನೇ । ವೃಜಿನऽವರ್ತನಿಂ । ನರಂ । ಸಕ್ಮನ್ । ಪಿಪರ್ಷಿ । ವಿದಥೇ ।
ವಿऽಚರ್ಷಣೇ ।
ಯಃ । ಶೂರऽಸಾತಾ । ಪರಿऽತಕ್ಮ್ಯೇ । ಧನೇ । ದಭ್ರೇಭಿಃ । ಚಿತ್ । ಸಂऽ-
ಋತಾ । ಹಂಸಿ । ಭೂಯಸಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ವಿಚರ್ಷಣೇ ವಿಶಿಷ್ಟಜ್ಞಾನಯುಕ್ತಾಗ್ನೇ ತ್ವಂ ವೃಜಿನವರ್ತನಿಂ ವಿಪ್ಲುತಮಾರ್ಗಂ ಸದಾ-ಚಾರರಹಿತಂ ನರಂ ಪುರುಷಂ ಸಕ್ಮನ್ ಸಚನೀಯೇ ಸಮವೇತುಂ ಯೋಗ್ಯೇ ವಿದಥೇ ಕರ್ಮಣಿ ಪಿಪರ್ಷಿ । ಪಾಲಯಸಿ ಪೂರಯಸಿ ವಾ । ಸತ್ಕರ್ಮಾನುಷ್ಠಾನಯುಕ್ತಂ ಕರೋಷೀತ್ಯರ್ಥಃ । ಯಸ್ತ್ವಂ ಪರಿತಕ್ಮ್ಯೇ ಪರಿತೋ ಗಂತವ್ಯೇ ಧನೇ ಧನವಚ್ಛೂರಾಣಾಂ ಪ್ರಿಯತಮೇ ಶೂರಸಾತಾ ಶೂರೈಃ ಸಂಭಜ-ನೀಯೇ ಯುದ್ಧೇ ದಭ್ರೇಭಿಶ್ಚಿದಲ್ಪೈರಪಿ ಶೌರ್ಯರಹಿತೈಃ ಪುರುಷೈಃ । ದಭ್ರಮರ್ಭಕಮಿತ್ಯಲ್ಪಸ್ಯ । ನಿ. ೩-೨೦ । ಇತಿ ಯಾಸ್ಕಃ । ಸಮೃತಾ ಸಮ್ಯಕ್ ಯೋದ್ಧುಂ ಪ್ರಾಪ್ತೇ ಸತಿ ತದನುಗ್ರಹಾರ್ಥಂ ಭೂಯಸಃ ಪ್ರೌಢಾನ್ಪ್ರತಿಪಕ್ಷಿಣಃ ಶತ್ರೂನ್ ಹಂಸಿ ಮಾರಯಸಿ । ಈದೃಶಸ್ತವ ಮಹಿಮೇತ್ಯರ್ಥಃ ॥ ವೃಜಿನವರ್ತನಿಂ । ವೃಜಿನಾ ವರ್ತನಿರ್ಯಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸಕ್ಮನ್ । ಷಚ ಸಮವಾಯೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ನೇಡ್ವಶಿ ಕೃತೀತೀಟ್ಪ್ರತಿಷೇಧಃ । ನ್ಯಂಕ್ವಾದಿತ್ವಾತ್ । ಪಾ. ೭-೩-೫೩ । ಕುತ್ವಂ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಪಿಪರ್ಷಿ । ಪೄ ಪಾಲನಪೂರಣಯೋಃ । ಸಿಪಿ ಶ್ಲೌ ದ್ವಿರ್ಭಾವಹ್ರಸ್ವೋರದತ್ವಹಲಾದಿಶೇಷಾಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಶೂರಸಾತಾ । ಶು ಗತೌ । ಶುಸಿಚಿಮೀನಾಂ ದೀರ್ಘಶ್ಚ । ಉ. ೨-೨೫ । ಇತಿ ಶೂರಶಬ್ದೋ ರನ್ಪ್ರತ್ಯಯಾಂತ ಆದ್ಯುದಾತ್ತಃ । ವನ ಷಣ ಸಂಭಕ್ತಾವಿತ್ಯಸ್ಮಾತ್ ಕ್ತಿನಂತಃ ಸಾತಿಶಬ್ದಃ । ಜನಸನಖನಾಂ ಸನ್ಝಲೋರಿತ್ಯಾತ್ವಂ । ಶೂರಾಣಾಂ ಸಾತಿಃ ಸಂಭಜನಮತ್ರೇತಿ ಬಹುವ್ರೀಹೌ ಪೂರ್ವ-ಪದಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ । ಪರಿತಕ್ಮ್ಯೇ । ತಕ ಹಸನೇ । ಅಸ್ಮಾ-ದೌಣಾದಿಕೋ ಭಾವೇ ಮಕ್ । ತದರ್ಹತೀತಿ ಛಂದಸಿ ಚ । ಪಾ. ೫-೧-೬೭ । ಇತಿ ಯಃ । ಪ್ರಾದಯೋ ಗತಾದ್ಯರ್ಥೇ ಪ್ರಥಮಯೇತಿ ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ದಭ್ರೇಭಿಃ । ದನ್ಭು ದಂಭೇ । ಸ್ಫಾಯಿತಂಚೀತ್ಯಾದಿನಾ ರಕ್ । ಬಹುಲಂ ಛಂದಸೀತಿ ಭಿಸ ಐಸಾದೇಶಾಭಾವಃ । ಸಮೃತಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಪೂರ್ವವದಾಕಾರಃ । ಹಂಸಿ । ಹಂತೇಃ ಸಿಪಿ ನಶ್ಚಾಪ-ದಾಂತಸ್ಯ ಝಲಿ । ಪಾ. ೮-೩-೨೪ । ಇತ್ಯನುಸ್ವಾರಃ । ಯದ್ವೃತ್ತಯೋಗಾದನಿಘಾತಃ । ಭೂಯಸಃ ।

**ಬಹೋರ್ಲೋಪೋ ಭೂ ಚ ಬಹೋಃ । ಪಾ. ೬-೪-೧೫೮ । ಇತಿ ಬಹುಶಬ್ದಾದುತ್ತರಸ್ಯೇಯಸುನ ಈಕಾರಲೋಪೋ ಬಹೋರ್ಭೂಭಾವಶ್ಚ । ನಿತ್ತ್ವಾದಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ವಿಚರ್ಷಣೇ**—ಶ್ರೇಷ್ಠವಾದ ಜ್ಞಾನದಿಂದ ಕೂಡಿದ । **ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ವೃಜಿನವರ್ತನಿಂ**—ಅಸನ್ಮಾರ್ಗದಲ್ಲಿ ಹೋಗತಕ್ಕ । **ನರಂ**—ಪುರುಷನನ್ನು । **ಸಕ್ಮನ್**—(ಸೇರಲು) ಯೋಗ್ಯವಾದ । **ವಿದಥೇ**—ಕರ್ಮದಲ್ಲಿ । **ಪಿಪರ್ಷಿ**—ಸೇರಿಸುತ್ತೀಯೆ (ಸತ್ಕರ್ಮ ಮಾರ್ಗದಲ್ಲಿ ಸೇರಿಸಿ ರಕ್ಷಿಸುತ್ತೀಯೆ) । **ಯಃ**—ಯಾವ ನೀನು । **ಪರಿತಕ್ಮ್ಯೇ**—ಸುತ್ತಲೂ ಹರಡಿರತಕ್ಕ । **ಧನೇ**—(ಶೂರರಿಂದ ಮಾತ್ರ ಹೊಂದಲು ಸಾಧ್ಯವಾದ ಧನದಂತೆ) । **ಶೂರಸಾತಾ**—ಶೂರರಿಂದ ಆದರಿಸಲ್ಪಡುವ ಯುದ್ಧದಲ್ಲಿ । **ದಭ್ರೇಭಿಶ್ಚಿತ್**—ಶೌರ್ಯರಹಿತರಾದ ಅಲ್ಪರಿಂದಲೂ ಕೂಡ । **ಸಮೃತಾ**—ಯುದ್ಧಸಂಭವಕಾಲದಲ್ಲಿ । **ಭೂಯಸಃ**—ಪರಾಕ್ರಮಿಗಳಾದ ಶತ್ರುಗಳನ್ನೂ ಸಹ । **ಹಂಸಿ**—ಕೊಲ್ಲಿಸುತ್ತೀಯೆ ॥

॥ ಭಾವಾರ್ಥ ॥

ಶ್ರೇಷ್ಠವಾದ ಜ್ಞಾನದಿಂದ ಕೂಡಿದ ಎಲೈ ಅಗ್ನಿಯೇ, ನೀನು ಅಸನ್ಮಾರ್ಗದಲ್ಲಿ ಹೋಗತಕ್ಕ ಪುರುಷನನ್ನು ಸತ್ಕರ್ಮದಲ್ಲಿ ಸೇರಿಸಿ ಅವನನ್ನು ರಕ್ಷಿಸುತ್ತೀಯೆ. ಮತ್ತು ನಾನಾಕಡೆ ಹರಡಿರತಕ್ಕ ಧನವು ಶೂರರಿಂದ ಮಾತ್ರ ಸಂಪಾದಿಸಲು ಯೋಗ್ಯವಾಗಿರುವಂತೆ ಶೂರರಿಂದ ಮಾತ್ರ ಆದರಿಸಲ್ಪಡುವ ಯುದ್ಧಸಂಭವ ಕಾಲದಲ್ಲಿ ನಿನ್ನ ಅನುಗ್ರಹದಿಂದ ಪರಾಕ್ರಮಿಗಳಾದ ಶತ್ರುಗಳನ್ನೂ ಸಹ ಶೌರ್ಯರಹಿತರಾದ ಅಲ್ಪರಿಂದ ಕೊಲ್ಲಿಸುತ್ತೀಯೆ.

## English Translation.

All-knowing Agni, you direct the man who follows improper paths to acts that are fitted to make him good; in a battle where the great warriors strive for wealth you kill the many by means of the few.

॥ ವಿಶೇಷವಿಷಯಗಳು ॥

**ವೃಜಿನವರ್ತನಿಂ—ಕುಟಿಲವರ್ತನಿಂ । ಸದಾಚಾರರಹಿತಂ ।** ದುರ್ಮಾರ್ಗಪ್ರವರ್ತಕನಾದ, ಸದಾಚಾರ ಸತ್ಕರ್ಮಾಚರಣೆಗಳನ್ನು ಮಾಡದಿರುವ (ಪುರುಷನನ್ನು).

**ವಿದಥೇ—ವೇದನೇ ಸ್ವಕರ್ಮಾಧಿಕಾರಯುಕ್ತೇ ।** ತನಗೆ ಉಚಿತವಾದ ಕರ್ಮಗಳಲ್ಲಿ ಆಸಕ್ತನಾಗುವಂತೆ । ಅಥವಾ ವಿದಥಃ ಎಂದರೆ ಯಜ್ಞವು, (ನಿ. ೩-೧೯) ಯಜ್ಞಾನುಷ್ಠಾನದಲ್ಲಿ ಪ್ರವೃತ್ತನಾಗುವಂತೆ.

**ಸಕ್ಮನ್—ಸಚನೀಯೇ ಸಮವೇತುಂ ಯೋಗ್ಯೇ ।** ಯೋಗ್ಯವಾದ, ಅರ್ಹವಾದ.

**ವಿಶ್ವಚರ್ಷಣೇ—ವಿಶಿಷ್ಟಜ್ಞಾನಯುಕ್ತ ।** ಸಮಸ್ತವನ್ನೂ ತಿಳಿದವನು.

**ಶೂರಸಾತಾ—ಶೂರಾಣಾಂ ಸಾತಿಃ ಸಂಭಜನಮತ್ರ । ಶೂರೈಃ ಸಂಭಜನೀಯೇ ಯುದ್ಧೇ ।** ಶೂರರಾದ ಯುದ್ಧಭಟರಿಂದ ತುಂಬಿರುವ ಯುದ್ಧದಲ್ಲಿ.

**ಪರಿತಕ್ಮ್ಯೇ—ಪರಿತೋ ಗಂತವ್ಯೇ ಧನೇ ।** ಧನದಂತೆ ಶೂರರಿಗೆ ಇಷ್ಟವಾದ (ಯುದ್ಧದಲ್ಲಿ) ; ಸಾಮಾನ್ಯ ಜನರಿಗೆ ಧನವು ಇಷ್ಟವಾಗಿರುವಂತೆ ಶೂರರಿಗೆ ಯುದ್ಧವೆಂದರೆ ಇಷ್ಟವು ಎಂದಭಿಪ್ರಾಯವು.

**ದಭ್ರೇಭಿಃ**—ದಭ್ರಂ ಅರ್ಭಕಂ ಮೊದಲಾದ ಅಲ್ಪಾರ್ಥನಾಮಗಳ ಮಧ್ಯದಲ್ಲಿ ದಭ್ರಶಬ್ದವು ಪಠಿತವಾಗಿರುವುದರಿಂದ (ನಿ. ೩-೨೦) **ದಭ್ರೇಭಿಃ** ಎಂದರೆ ಅಲ್ಪರಿಂದ, ಶೂರರಲ್ಲದ ಶಕ್ತಿಹೀನರಿಂದ.

**ಸಮೃತಾ—ಋ ಗತೌ । ಸಮ್ಯಕ್ ಯೋದ್ಧುಂ ಪ್ರಾಪ್ತೇ ಸತಿ ।** ಯುದ್ಧಮಾಡುವುದಕ್ಕೆ ಹೊರಟಿರುವಾಗ (ಆ ಯುದ್ಧದಲ್ಲಿ).

**ಭೂಯಸಃ—ಪ್ರೌಢಾನ್ ಪ್ರತಿಪಕ್ಷಿಣಃ ।** ಶತ್ರುವರ್ಗದವರಲ್ಲಿ ಅತ್ಯಂತ ಬಲಶಾಲಿಗಳಾದ ಭಟರನ್ನು, ಶೂರರಾದ ಶತ್ರುವರ್ಗದವರನ್ನು, ಬಲಿಷ್ಠರಾದವರನ್ನು.

॥ ವ್ಯಾಕರಣಪ್ರಕ್ರಿಯಾ ॥

**ವೃಜಿನವರ್ತನಿಮ್**—ವೃಜಿನಾ ವರ್ತನಿಃ ಯಸ್ಯ ಸಃ ವೃಜಿನವರ್ತನಿಃ ತಮ್. ಬಹುವ್ರೀಹಿಸಮಾಸ. **'ಬಹುವ್ರೀಹೌಪ್ರಕೃತ್ಯಾ' ಪೂರ್ವಪದಮ್** ಎಂಬುದರಿಂದ ಸಮಾಸಸ್ವರಕ್ಕೆ ಬಾಧಕವಾಗಿ ಪೂರ್ವಪದಪ್ರಕೃತಿ ಸ್ವರವು ಬರುತ್ತದೆ.

**ಸಕ್ಮನ್**—ಷಚ ಸಮವಾಯೇ ಧಾತು. ಧಾತುವಿನ ಆದಿಗೆ **ಧಾತ್ವಾದೇಃ ಷಃ ಸಃ** ಎಂಬುದರಿಂದ ಸಕಾರಾದೇಶ. **'ಅನ್ಯೇಭ್ಯೋಽಪಿ ದೃಶ್ಯಂತೇ'** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ ಬರುತ್ತದೆ. ವಲಾದ್ಯಾರ್ಧಧಾತುಕವಾದರೂ **'ನೇಡ್ವಶಿಕೃತಿ'** (ಪಾ. ಸೂ. ೭-೨-೮) ಎಂಬುದರಿಂದ ಇಣ್ಣಿಷೇಧಃ ಸಚ್+ಮನ್ ಎಂದಿರುವಾಗ ಇದು ನ್ಯಂಕ್ವಾದಿಯಲ್ಲಿ ಸೇರಿರುವುದರಿಂದ **'ನ್ಯಙ್ಕ್ವಾದೀನಾಂ ಚ'** (ಪಾ. ಸೂ. ೭-೩-೫೩) ಎಂಬುದರಿಂದ ಧಾತುವಿನ ಚಕಾರಕ್ಕೆ ಕುತ್ವ. ಸಕ್ಮನ್ ಶಬ್ದವಾಗುತ್ತದೆ. ಸಪ್ತಮೀ ಏಕವಚನದಲ್ಲಿ **ಸುಪಾಂ ಸುಲುಕ್** ಸೂತ್ರದಿಂದ ಸಪ್ತಮಿಗೆ ಲುಕ್ ಬಂದರೆ ಸಕ್ಮನ್ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಪಿಪರ್ಷಿ**—ಪೄ ಪಾಲನ ಪೂರಣಯೋಃ ಧಾತು. ಜುಹೋತ್ಯಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಸಿಪ್ ಪರದಲ್ಲಿರುವಾಗ **ಜುಹೋತ್ಯಾದಿಭ್ಯಃ ಶ್ಲುಃ** ಎಂಬುದರಿಂದ ಶ್ಲು ವಿಕರಣ. ಶ್ಲು ಪರದಲ್ಲಿರುವಾಗ **'ಶ್ಲೌ'** ಎಂಬುದರಿಂದ ಧಾತುವಿಗೆ ದ್ವಿತ್ವ. ದ್ವಿತ್ವ ಬಂದ ಮೇಲೆ ಅಭ್ಯಾಸದ ಋಕಾರಕ್ಕೆ **ಹ್ರಸ್ವಃ** ಎಂಬುದರಿಂದ ಹ್ರಸ್ವ. **ಉರತ್** ಎಂಬುದರಿಂದ ಆ ಹ್ರಸ್ವ ಋಕಾರಕ್ಕೆ ಅತ್ವ. **ಉರಣ್ರಪರಃ** ಎಂಬುದರಿಂದ ಅದು ರಪರವಾಗಿ ಬರುತ್ತದೆ. **ಹಲಾದಿಃ ಶೇಷಃ** ಎಂಬುದರಿಂದ ಆದಿಯ ಹಲ್‌ವರ್ಜವಾಗಿ ಉಳಿದವುಗಳಿಗೆ **ಲೋಪ.** ಪಪೄ+ಸಿ ಎಂದಿರುವಾಗ **'ಅರ್ತಿಪಿಪರ್ತ್ಯೋಶ್ಚ'** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸದ ಅಕಾರಕ್ಕೆ ಇತ್ವ. ಸಿಪ್ ಸಾರ್ವಧಾತುಕ

ನಿಮಿತ್ತಕವಾಗಿ ಧಾತುವಿನ ಇಕ್ಕಿಗೆ ಗುಣ. **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯಕ್ಕೆ ಷತ್ವ ಬಂದರೆ ಪಿಪರ್ಷಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ಶೂರಸಾತಾ**—ಶು ಗತೌ ಸೌತ್ರ ಧಾತು. **'ಶುಸಿಚಿಮಿಾನಾಂ ದೀರ್ಘಶ್ಚ'** (ಉ. ಸೂ. ೨–೧೮೩) ಎಂಬುದರಿಂದ ಕ್ರನ್ ಪ್ರತ್ಯಯ. ಅದರೊಡನೆ ಪ್ರಕೃತಿಗೂ ದೀರ್ಘ ಬರುತ್ತದೆ. ಕಿತ್ತಾದುದರಿಂದ ಗುಣನಿಷೇಧ. ನಿತ್ ಪ್ರತ್ಯಯಾಂತವಾದುದರಿಂದ ಶೂರ ಶಬ್ದವು ಆದ್ಯುದಾತ್ತವಾಗುತ್ತದೆ. ವನ **ಷಣ** ಸಂಭಕ್ತೌ ಧಾತು. ಭ್ವಾದಿ. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಇದಕ್ಕೆ ಕ್ತಿನ್ ಪ್ರತ್ಯಯ. ಧಾತ್ವಾದಿಗೆ ಸಕಾರಾದೇಶ. ಸನ್+ತಿ ಎಂದಿರುವಾಗ **'ಜನಸನಖನಾಂ ಸಞ್ಝಲೋಃ'** (ಪಾ. ಸೂ. ೬–೪–೪೨) ಎಂಬುದರಿಂದ ಧಾತ್ವಂತ್ಯಕ್ಕೆ ಆಕಾರಾದೇಶ ಸಾತಿ ಎಂಬ ಇಕಾರಾಂತ ಶಬ್ದವಾಗುತ್ತದೆ. ಶೂರಾಣಾಂ ಸಾತಿಃ ಸಂಭಜನಂ ಅತ್ರ, ಶೂರಸಾತಿಃ. ಬಹುವ್ರೀಹಿಸಮಾಸ. **ಬಹುವ್ರೀಹೌ** ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತವೆ. ಸಪ್ತಮಿಾ ಏಕವಚನದಲ್ಲಿ **'ಸುಪಾಂ ಸುಲುಕ್'** (ಪಾ. ಸೂ. ೭–೧–೩೯) ಸೂತ್ರದಿಂದ ಸಪ್ತಮಿಗೆ ಡಾದೇಶ ಬರುತ್ತದೆ. ಡಿತ್ತಾದುದರಿಂದ ಪ್ರಕೃತಿಯ ಇಕಾರಕ್ಕೆ ಲೋಪ. ಶೂರಸಾತಾ ಎಂದು ರೂಪವಾಗುತ್ತದೆ.

**ಪರಿತಕ್ಮ್ಯೇ**—ತಕ ಹಸನೇ ಧಾತು. ಭ್ವಾದಿ. ಇದಕ್ಕೆ ಉಣಾದಿಸಿದ್ಧವಾದ ಮಕ್ ಪ್ರತ್ಯಯ ಭಾವಾರ್ಥ ದಲ್ಲಿ ಬರುತ್ತದೆ. ತಕ್ಮ ಎಂದು ಶಬ್ದವಾಗುತ್ತದೆ. ತಕ್ಮಂ ಅರ್ಹತಿ ಎಂಬರ್ಥದಲ್ಲಿ **'ಛಂದಸಿ ಚ'** (ಪಾ. ಸೂ. ೫–೧–೬೭) ಎಂಬುದರಿಂದ ಯ ಪ್ರತ್ಯಯ. ತಕ್ಮ್ಯಂ ಎಂದು ರೂಪವಾಗುತ್ತದೆ. **'ಪ್ರಾದಯೋ ಗತಾದ್ಯರ್ಥೇ ಪ್ರಥಮಯಾ'** (ಪಾ. ವ. ೨–೨–೧೮–೪) ಎಂಬುದರಿಂದ ಪ್ರಥಮಾಂತವಾದ ತಕ್ಮ್ಯ ಶಬ್ದದೊಡನೆ ಪರಿ ಎಂಬು ದಕ್ಕೆ ಸಮಾಸ. ಅವ್ಯಯಪೂರ್ವಪದವಾಗಿರುವುದರಿಂದ **'ತತ್ಪುರುಷೇ ತುಲ್ಯಾರ್ಥ'** (ಪಾ. ಸೂ. ೬–೨–೨) ಎಂಬುದರಿಂದ ಸಮಾಸಸ್ವರವು ಬಾಧಿತವಾಗಿ ಅವ್ಯಯ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

**ದಭ್ರೇಭಿಃ**—ದಂಭು ದಂಭೇ ಧಾತು. ಸ್ವಾದಿ. **'ಸ್ಫಾಯಿತಂಚಿ ವಂಚಿ ಶಕಿ'** (ಉ. ಸೂ. ೨–೧೭೦) ಎಂಬುದರಿಂದ ರಕ್. ಕಿತ್ತಾದುದರಿಂದ **'ಅನಿದಿತಾಂ ಹಲ ಉಪಧಾಯಾಃ'** (ಪಾ. ಸೂ ೬–೪–೨೪) ಸೂತ್ರ ದಿಂದ ಧಾತುವಿನ ಉಪಧೆಯಾದ **ನಕಾರಕ್ಕೆ ಲೋಪ.** ದಭ್ರ ಶಬ್ದವಾಗುತ್ತದೆ. ದಭ್ರ+ಭಿಸ್ ಎಂದಿರುವಾಗ **'ಅತೋ ಭಿಸ ಐಸ್'** (ಪಾ. ಸೂ. ೭–೧–೯) ಎಂಬುದರಿಂದ ಭಿಸ್ಸಿಗೆ ಐಸ್ ಪ್ರಾಪ್ತವಾದರೆ **'ಬಹುಲಂ ಛಂದಸಿ'** (ಪಾ. ಸೂ ೩–೧–೧೦) ಎಂಬುದರಿಂದ ಛಂದಸಿ ವಿಕಲ್ಪವೆಂದುದರಿಂದ ಬರುವುದಿಲ್ಲ. ರುತ್ವವಿಸರ್ಗ ಬಂದರೆ ದಭ್ರೇಭಿಃ ಎಂದು ರೂಪವಾಗುತ್ತದೆ.

**ಸವೃತಾ**—ಸಪ್ತಮಿಯಲ್ಲಿ ಹಿಂದಿನಂತೆ **'ಸುಪಾಂ ಸುಲುಕ್'** (ಪಾ. ಸೂ. ೭–೧–೩೯) ಸೂತ್ರದಿಂದ ಡಾ ಆದೇಶ. **'ಗತಿರನಂತರಃ'** (ಪಾ. ಸೂ ೬–೨–೪೯) ಎಂಬುದರಿಂದ ಕ್ತಾಂತವು ಪರದಲ್ಲಿರುವುದರಿಂದ ಸಮ್ ಎಂಬ ಗತಿಗೆ ಪ್ರಕೃತಿಸ್ವರ ಬರುತ್ತದೆ. ಆದ್ಯುದಾತ್ತವಾದ ಪದವಾಗುತ್ತದೆ.

**ಹಂಸಿ**—ಹನ ಹಿಂಸಾಗತ್ಯೋಃ ಧಾತು. ಅದಾದಿ. ಇದಕ್ಕೆ ಲಟ್ ಮಧ್ಯಮಪುರುಷದ ಸಿಪ್. ಸಿಪ್ ಪರ ದಲ್ಲಿರುವಾಗ **'ನಶ್ಚಾಪದಾಂತಸ್ಯ ಝಲಿ'** (ಪಾ. ಸೂ. ೮–೩–೨೪) ಎಂಬುದರಿಂದ ಅಪದಾಂತವಾದುದರಿಂದ ಧಾತು

ವಿನ ನಕಾರಕ್ಕೆ ಅನುಸ್ವಾರ ಬಂದರೆ ಹಂಸಿ ಎಂದು ರೂಪವಾಗುತ್ತದೆ. ಯಃ ಎಂದು ಆದಿಯಲ್ಲಿ ಸಂಬಂಧವಿರುವುದರಿಂದ **ಯದ್ವೃತ್ತಯೋಗಾನ್ನಿತ್ಯಂ** ಎಂಬುದರಿಂದ ತಿಙಂತನಿಘಾತಸ್ವರ ಪ್ರತಿಷೇಧ ಬರುತ್ತದೆ. ಸಿಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಭೂಯಸಃ**—ಬಹು ಶಬ್ದಕ್ಕೆ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. '**ಬಹೋರ್ಲೋಪೋ ಭೂ ಚ ಬಹೋಃ**' (ಪಾ. ಸೂ. ೬-೪-೧೫೮) ಎಂಬುದರಿಂದ ಬಹುಶಬ್ದದ ಪರದಲ್ಲಿರುವ ಈಯಸುನಿನ ಈಕಾರಕ್ಕೆ ಲೋಪ. ಬಹುಶಬ್ದಕ್ಕೆ ಭೂ ಎಂಬ ಆದೇಶ. ಭೂಯಸ್ ಶಬ್ದವಾಗುತ್ತದೆ. ದ್ವಿತೀಯಾ ಬಹುವಚನದಲ್ಲಿ ಭೂಯಸಃ ಎಂದು ರೂಪವಾಗುತ್ತದೆ. ಈಯಸುನ್ ನಿತ್ತಾದುದರಿಂದ '**ಞ್ನಿತ್ಯಾದಿರ್ನಿತ್ಯಂ**' (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುತ್ತವಾಗುತ್ತದೆ. ॥ ೬ ॥

---

॥ ಸಂಹಿತಾಪಾಠಃ ॥

ತ್ವಂ ತಮ॑ಗ್ನೇ ಅಮೃತ॒ತ್ವ ಉ॑ತ್ತ॒ಮೇ ಮರ್ತಂ॑ ದಧಾಸಿ॒ ಶ್ರವ॑ಸೇ
ದಿ॒ವೇದಿ॑ವೇ ।
ಯಸ್ತಾ॑ತೃಷಾ॒ಣ ಉ॒ಭಯಾ॑ಯ॒ ಜನ್ಮ॑ನೇ॒ ಮಯಃ॑ ಕೃ॒ಣೋಷಿ॒
ಪ್ರಯ॒ ಆ ಚ॑ ಸೂ॒ರಯೇ॑ ॥ ೭ ॥

॥ ಪದಪಾಠಃ ॥

ತ್ವಂ । ತಂ । ಅ॒ಗ್ನೇ॒ । ಅ॒ಮೃ॒ತ॒ಽತ್ವೇ । ಉ॒ತ್ಽತ॒ಮೇ । ಮರ್ತಂ॑ । ದ॒ಧಾ॒ಸಿ॒ ।
ಶ್ರವ॑ಸೇ । ದಿ॒ವೇಽದಿ॑ವೇ ।
ಯಃ । ತ॒ತೃ॒ಷಾ॒ಣಃ । ಉ॒ಭಯಾ॑ಯ । ಜನ್ಮ॑ನೇ । ಮಯಃ॑ । ಕೃ॒ಣೋಷಿ॑ । ಪ್ರಯಃ॑ ।
ಆ । ಚ॒ । ಸೂ॒ರಯೇ॑ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಂ ತಂ ಮರ್ತಂ ತಥಾವಿಧಂ ತ್ವತ್ಸೇವಿನಂ ಮನುಷ್ಯಂ ದಿವೇದಿವೇ ಪ್ರತಿದಿನಂ ಶ್ರವಸೇಽನ್ನಾರ್ಥಮುತ್ತಮೇಽಮೃತತ್ವ ಉತ್ಕೃಷ್ಟೇ ಮರಣರಹಿತೇ ಪದೇ ದಧಾಸಿ। ಧಾರಯಸಿ। ಯೋ ಯಜಮಾನ ಉಭಯಾಯ ಜನ್ಮನೇ ದ್ವಿವಿಧಜನ್ಮಾರ್ಥಂ। ದ್ವಿಪದಾಂ ಚತುಷ್ಪದಾಂ ಲಾಭಾಯೇತ್ಯರ್ಥಃ। ತತೃಷಾಣೋಽತಿಶಯೇನ ತೃಷ್ಣಾಯುಕ್ತೋ ಭವತಿ ತಸ್ಮೈ ಸೂರಯೇಽಭಿಜ್ಞಾಯ ಯಜಮಾನಾಯ ಮಯಃ ಸುಖಂ। ಯದ್ವೈ ಸುಖಂ ತನ್ಮಯ ಇತಿ ಶ್ರುತ್ಯಂತರಾತ್। ಪ್ರಯಶ್ಚಾನ್ನಮಸ್ಮಾ ಕೃಣೋಷಿ। ಸರ್ವತಃ ಕರೋಷಿ॥ ತತೃಷಾಣಃ। ಞಿತೃಷಾ ಪಿಪಾಸಾಯಾಂ। ಲಿಟಃ ಕಾನಚ್। ಚಿತ್ತ್ವಾದಂತೋದಾತ್ತತ್ವಂ। ಸಂಹಿತಾಯಾಂ ದೀರ್ಘಶ್ಛಾಂದಸಃ। ಕೃಣೋಷಿ। ಕೃವಿ ಹಿಂಸಾಕರಣಯೋಶ್ಚ। ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ। ಚಾದಿಲೋಪೇ ವಿಭಾಷೇತಿ ನಿಘಾತಪ್ರತಿಷೇಧಃ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ। **ತ್ವಂ**—ನೀನು। **ತಂ ಮರ್ತಂ**—(ನಿನ್ನನ್ನು ಪೂಜಿಸತಕ್ಕ) ಆ ಮನುಷ್ಯನನ್ನು। **ದಿವೇದಿವೇ**—ಪ್ರತಿದಿನವೂ। **ಶ್ರವಸೇ**—ಅನ್ನಕ್ಕಾಗಿ। **ಉತ್ತಮೇ**—ಶ್ರೇಷ್ಠವಾಗಿಯೂ। **ಅಮೃತತ್ವೇ**—ಮರಣರಹಿತವಾಗಿಯೂ ಇರುವ ಸ್ಥಾನದಲ್ಲಿ। **ದಧಾಸಿ**—ಇರಿಸುತ್ತೀಯೆ। **ಯಃ**—ಯಾವ ಯಜಮಾನನು। **ಉಭಯಾಯ ಜನ್ಮನೇ**—ಎರಡು ವಿಧವಾದ ಜನ್ಮವುಳ್ಳ ಪ್ರಾಣಿಗಳಿಗಾಗಿ ಅಥವಾ ದ್ವಿಪಾದಿಗಳಾದ ಮತ್ತು ಚತುಷ್ಪಾದಿಗಳಾದ ಪ್ರಾಣಿಗಳ ಲಾಭಕ್ಕಾಗಿ। **ತತೃಷಾಣಃ**—ಅತಿಯಾಗಿ ಆಸೆಪಡುತ್ತಾನೋ। **ಸೂರಯೇ**—ಪ್ರಾಜ್ಞನಾದ ಅಂತಹ ಯಜಮಾನನಿಗೆ। **ಮಯಃ**—ಸುಖವನ್ನೂ। **ಪ್ರಯಃ ಚ**—ಅನ್ನವನ್ನೂ ಕೂಡ। **ಆ ಕೃಣೋಷಿ**—ಸಂಪೂರ್ಣವಾಗಿ ಒದಗಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ನಿನ್ನನ್ನು ಪೂಜಿಸತಕ್ಕ ಮನುಷ್ಯನನ್ನು ಅನ್ನಾರ್ಥವಾಗಿ, ಪ್ರತಿದಿನವೂ ಶ್ರೇಷ್ಠವಾಗಿಯೂ ಮತ್ತು ಮರಣರಹಿತವಾಗಿಯೂ ಇರುವ ಸ್ಥಾನದಲ್ಲಿ ಇರಿಸುತ್ತೀಯೆ. ಮತ್ತು ಯಾವ ಯಜಮಾನನು ದ್ವಿಪಾದಿಗಳಾದ ಮನುಷ್ಯರ ಮತ್ತು ಚತುಷ್ಪಾದಿಗಳಾದ ಪಶ್ವಾದಿಗಳ ಎಂದು ಎರಡು ವಿಧವಾದ ಜನ್ಮವುಳ್ಳ ಪ್ರಾಣಿಗಳ ಲಾಭಕ್ಕಾಗಿ ಅತಿಯಾಗಿ ಆಸೆಪಡುತ್ತಾನೆಯೋ ಅಂತಹ ಪ್ರಾಜ್ಞನಾದ ಯಜಮಾನನಿಗೆ ಸುಖವನ್ನೂ ಅನ್ನವನ್ನೂ ಸಂಪೂರ್ಣವಾಗಿ ಒದಗಿಸುತ್ತೀಯೆ.

## English Translation.

O Agni, you always keep that mortal in the highest immortality by daily food; you bestow on the prudent man who desires wealth consisting creatures of both kinds of birth, happiness and food.

|| ವಿಶೇಷವಿಷಯಗಳು ||

**ಅಮೃತತ್ವೇ—ಮರಣರಹಿತೇ ಪದೇ ।** ಮರಣರಹಿತವಾದ ಸ್ಥಾನದಲ್ಲಿ ಎಂದರೆ ಉತ್ತಮವಾದ ಸ್ವರ್ಗಾದಿ ಸ್ಥಾನಗಳಲ್ಲಿ.

**ಶ್ರವಸೇ—ಅನ್ನಾರ್ಥಂ ।** ಅನ್ನಾದ್ಯಾಹಾರಕ್ಕಾಗಿ.

**ದಿವೇದಿವೇ—ಪ್ರತಿದಿನಂ ।** ಪ್ರತಿದಿನದಲ್ಲಿಯೂ.

**ತತೃಷಾಣಃ—ಅತಿಶಯೇನ ತೃಷ್ಣಾಯುಕ್ತಃ ।** ಬಹಳವಾಗಿ ಅಪೇಕ್ಷಿಸುವವನು, ತುಂಬಾ ಆಸೆ ಪಡುವವನು.

**ಉಭಯಾಯ ಜನ್ಮನೇ**—ಎರಡು ವಿಧವಾದ ಜನ್ಮಗಳುಳ್ಳ ಪ್ರಾಣಿಗಳಿಗಾಗಿ ಎಂದರೆ ಎರಡು ಕಾಲುಗಳುಳ್ಳ ಪ್ರಾಣಿಗಳೆಂದರೆ ಪುತ್ರಪೌತ್ರಭಟರಾದಿಯಾದ ತನ್ನ ಪರಿವಾರ ಜನಗಳು. ನಾಲ್ಕು ಕಾಲುಗಳುಳ್ಳ ಪ್ರಾಣಿಗಳೆಂದರೆ, ಗೋವುಗಳು, ಕುದುರೆಗಳು ಮೊದಲಾದ ಉಪಯುಕ್ತವಾದ ಪಶುಗಳು ಎಂದರ್ಥವು. ಈ ಎರಡು ವಿಧವಾದ ಸಂಪತ್ತಿಗಾಗಿ ಆಸೆಪಡುವ ಯಜಮಾನನು ಎಂದರ್ಥವು.

**ಮಯಃ**—ಸುಖವು, ಮಯವೆಂದರೆ ಸುಖವೆಂದು ಶ್ರುತಿವಾಕ್ಯವಿರುವುದು. ಶಿಂಬಾತಾ, ಶತರಾ ಮೊದಲಾದ ಇಪ್ಪತ್ತು ಸುಖನಾಮಗಳ ಮಧ್ಯದಲ್ಲಿ ಮಯಃ ಎಂಬ ಶಬ್ದವು ಪಠಿತವಾಗಿರುವುದರಿಂದ ಮಯಃ ಎಂದರೆ ಸುಖವು (ನಿ. ೩-೧೩).

**ಪ್ರಯಃ**—ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಪ್ರಯಃ ಎಂಬ ಶಬ್ದವು ಪಠಿತವಾಗಿರುವುದರಿಂದ ಪ್ರಯಃ ಎಂದರೆ ಅನ್ನವು (ನಿ. ೩-೯).

**ಸೂರಯೇ—ಅಭಿಜ್ಞಾಯ ಯಜಮಾನಾಯ ।** ತಿಳುವಳಿಕೆಯುಳ್ಳ ಅಥವಾ ವಿವೇಕಶಾಲಿಯಾದ ಯಜಮಾನನಿಗೆ.

|| ವ್ಯಾಕರಣಪ್ರಕ್ರಿಯಾ ||

**ದಧಾಸಿ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಟ್ ಮಧ್ಯಮಪುರುಷ ಏಕವಚನ ರೂಪ ಅತಿಙಂತದ ಪರದಲ್ಲಿರುವುದರಿಂದ '**ತಿಙ್ಙತಿಙಃ**' (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮರ್ತಃ**—೧-೨-೩೦. ೨೦ ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಶ್ರವಸೇ**—ಶ್ರು ಶ್ರವಣೇ ಧಾತು. ಭ್ವಾದಿ, ಔಣಾದಿಕ ಅಸುನ್ ಪ್ರತ್ಯಯ. ಶ್ರವಸ್ ಶಬ್ದ. ಚತುರ್ಥೀ ಏಕವಚನದಲ್ಲಿ ಶ್ರವಸೇ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತತೃಷಾಣಃ**—ಞಿತೃಷಾ ಪಿಪಾಸಾಯಾಂ ಧಾತು. ಇದಕ್ಕೆ **' ಲಿಟಃ ಕಾನಜ್ವಾ '** (ಪಾ. ಸೂ. ೩-೨-೧೦೬) ಎಂಬುದರಿಂದ **ಕಾನಚ್.** ತೃಷ್+ಆನ ಎಂದಿರುವಾಗ ಲಿಟ್ಟಿನ ಸ್ಥಾನಕ್ಕೆ ಬಂದುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸದಲ್ಲಿ ಹಲಾದಿಶೇಷದಿಂದ ತೃ ಉಳಿಯುತ್ತದೆ. **ಉರತ್** ಸೂತ್ರದಿಂದ ಅಭ್ಯಾಸದ ಋಕಾರಕ್ಕೆ ಅತ್ವ. ಅದು **ಉರಣ್‌ರಪರಃ** ಪರಿಭಾಷೆಯಿಂದ ರಪರವಾಗಿ ಬರುತ್ತದೆ. ತತೃಷಾನ ಎಂದಿರುವಾಗ **ಅಟ್‌ಕುಪ್ವಾಙ್** ಸೂತ್ರದಿಂದ ನಕಾರಕ್ಕೆ ಣಕಾರಾದೇಶ. ತತೃಷಾಣ ಎಂದು ರೂಪವಾಗುತ್ತದೆ. ಕಾನಿಚ್ ಚಿತ್ತಾದುದರಿಂದ **:' ಚಿತಃ '** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ತುಜಾದಿತ್ವವನ್ನು ಕಲ್ಪನಮಾಡಿದರೆ ಪದಕಾಲದಲ್ಲಿಯೂ ದೀರ್ಘ ಬರಬೇಕಾಗುವುದರಿಂದ ಛಾಂದಸವಾಗಿ ಸ್ವೀಕರಿಸಬೇಕು.

**ಕೃಣೋಷಿ**—ಕೃವಿ ಹಿಂಸಾಕರಣಯೋಶ್ಚ ಧಾತು. ಭ್ವಾದಿ ಲಟ್ ಮಧ್ಯಮಪುರುಷದಲ್ಲಿ ಸಿಪ್. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. **ಋವರ್ಣಾನ್ನಸ್ಯ ಣತ್ವಂ ವಾಚ್ಯಂ** ಎಂಬುದರಿಂದ ನುಮ್ಮಿನ ನಕಾರಕ್ಕೆ ಣತ್ವ. **' ಧಿನ್ವಿಕೃಣ್ವ್ಯೋರಚ '** (ಪಾ. ಸೂ. ೩-೧-೮೦) ಈ ಎರಡು ಧಾತುಗಳಿಗೆ ಉ ಪ್ರತ್ಯಯವು ವಿಕರಣವಾಗಿ ಬರುತ್ತದೆ. ಅಕಾರವು ಧಾತುವಿಗೆ ಅಂತಾದೇಶವಾಗಿ ಬರುತ್ತದೆ; **' ಅತೋ ಲೋಪಃ '** (ಪಾ. ಸೂ. ೬-೪-೪೮) ಎಂಬುದರಿಂದ ಉಪ್ರತ್ಯಯು ಪರದಲ್ಲಿರುವಾಗ ಅಕಾರಕ್ಕೆ ಲೋಪ ಬರುತ್ತದೆ. ಸಿಪ್ ನಿಮಿತ್ತಕವಾಗಿ ಉಕಾರಕ್ಕೆ ಗುಣ. ಇಣ್ಣಿನ ಪರದಲ್ಲಿರುವುದರಿಂದ ಪ್ರತ್ಯಯಾವಯವಸಕಾರಕ್ಕೆ **ಆದೇಶ ಪ್ರತ್ಯಯಯೋಃ** ಎಂಬುದರಿಂದ ಷತ್ವ ಬಂದರೆ ಕೃಣೋಷಿ ಎಂದು ರೂಪವಾಗುತ್ತದೆ. ಅಕಾರಲೋಪಕ್ಕೆ **' ಅಚಃ ಪರಸ್ಮಿನ್ ಪೂರ್ವವಿಧೌ '** ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಉ ನಿಮಿತ್ತಕವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **' ಚಾದಿಲೋಪೇ ವಿಭಾಷಾ '** (ಪಾ. ಸೂ. ೮-೧-೬೩) ಎಂಬುದರಿಂದ ಚಲೋಪವಿರುವುದರಿಂದ ತಿಙಂತನಿಘಾತ ಸ್ವರವು ಬರುವುದಿಲ್ಲ. ॥ ೭ ॥

॥ ಸಂಹಿತಾಪಾಠಃ ॥

ತ್ವಂ ನೋ ಅಗ್ನೇ ಸನಯೇ ಧನಾನಾಂ ಯಶಸಂ ಕಾರುಂ ಕೃಣುಹಿ

ಸ್ತವಾನಃ ।

ಋಧ್ಯಾಮ ಕರ್ಮಾಪಸಾ ನವೇನ ದೇವೈರ್ದ್ಯಾವಾಪೃಥಿವೀ

ಪ್ರಾವತಂ ನಃ ॥ ೮ ॥

॥ ಪದಪಾಠಃ ॥

ತ್ವಂ । ನಃ । ಅಗ್ನೇ । ಸನಯೇ । ಧನಾನಾಂ । ಯಶಸಂ । ಕಾರುಂ । ಕೃಣುಹಿ । ಸ್ತವಾನಃ ।

ಋಧ್ಯಾಮ । ಕರ್ಮ । ಅಪಸಾ । ನವೇನ । ದೇವೈಃ । ದ್ಯಾವಾಪೃಥಿವೀ ಇತಿ । ಪ್ರ । ಅವತಂ । ನಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸ್ತವಾನಃ ಸ್ತೂಯಮಾನಸ್ತ್ವಂ ನೋಽಸ್ಮಾಕಂ ಧನಾನಾಂ ಸನಯೇ ದಾನಾರ್ಥಂ ಯಶಸಂ ಯಶೋಯುಕ್ತಂ ಕಾರುಂ ಕರ್ಮಣಾಂ ಕರ್ತಾರಂ ಪುತ್ರಂ ಕೃಣುಹಿ । ಕುರು । ನವೇನ ನೂತನೇನಾಪಸಾ ಪ್ರಾಪ್ತೇನ ತ್ವದ್ದತ್ತೇನ ಪುತ್ರೇಣ ಕರ್ಮ ಯಾಗದಾನಾದಿರೂಪಮೃಧ್ಯಾಮ । ವರ್ಧಯಾಮ । ಹೇ ದ್ಯಾವಾಪೃಥಿವೀ ಉಭೇ ದೇವತೇ ದೇವೈರನ್ಯೈಃ ಸಹ ನೋಽಸ್ಮಾನ್ಪ್ರಾವತಂ । ಪ್ರಕರ್ಷೇಣ ರಕ್ಷತಂ ॥ ಯಶಸಂ ಅರ್ಶಆದಿತ್ವಾದಚ್‌ಪ್ರತ್ಯಯಃ । ವ್ಯತ್ಯಯೇನ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಯದ್ವಾ । ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಕ್ತವ್ಯಃ । ಮ. ೩-೧-೧೧-೩ । ಇತಿ ಯಶಸ್‌ಶಬ್ದಾತ್ ಕ್ವಿಪ್ । ತಸ್ಯ ಪ್ರತ್ಯಯಾಂತಸ್ಯ ಸನಾದ್ಯಂತತ್ವಾದ್ಧಾತುಸಂಜ್ಞಾಯಾಂ ಕ್ವಿಪ್ಚೇತಿ ಕ್ವಿಪ್ಪ್ರತ್ಯಯಾಂತಧಾತೋಃ ಸತಿ ಶಿಷ್ಟತ್ವಾದ್ಧಾತೋರಿತ್ಯಂತೋದಾತ್ತತ್ವಂ । ಕೃಣುಹಿ । ಉತಶ್ಚ ಪ್ರತ್ಯಯಾಚ್ಛಂದೋವಾ ವಚನಂ । ಪಾ. ೬-೪-೧೦೬-೧ ಇತಿ ಹೇರ್ಲುಗಾಭಾವಃ । ಸ್ತವಾನಃ । ಸಮ್ಯಾನಚ್ ಸ್ತುವಃ । ಉ. ೨-೮೬ । ಇತಿ ಬಹುಲವಚನಾತ್ಕೇವಲಸ್ಯಾಪಿ ಸ್ತೌತೇರಾನಚ್‌ಪ್ರತ್ಯಯಃ । ವೃಷಾದಿತ್ವಾದಾದ್ಯುದಾತ್ತತ್ವಂ । ಋಧ್ಯಾಮ । ಋಧು ವೃದ್ಧೌ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಯಾಸುಟ ಉದಾತ್ತತ್ವಂ । ದ್ಯಾವಾಪೃಥಿವೀ । ದಿವೋ ದ್ಯಾವಾ । ಪಾ. ೬-೩-೨೯ । ಇತಿ ದ್ಯಾವಾದೇಶಃ । ಆಮಂತ್ರಿತಾನುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸ್ತವಾನಃ**—ಸ್ತುತಿಸಲ್ಪಡುವ । **ತ್ವಂ**—ನೀನು । **ನಃ**—ನಮಗೆ । **ಧನಾನಾಂ**—ಧನಗಳ । **ಸನಯೇ**—ದಾನಾರ್ಥವಾಗಿ । **ಯಶಸಂ**—ಯಶಸ್ಸಿನಿಂದ ಕೂಡಿದ । **ಕಾರುಂ**—ಕರ್ಮಗಳನ್ನು ಮಾಡತಕ್ಕ ಪುತ್ರನನ್ನು । **ಕೃಣುಹಿ**—ಅನುಗ್ರಹಿಸು । **ನವೇನ**—ನೂತನವಾದ । **ಅಪಸಾ**—(ನಿನ್ನಿಂದ) ಅನುಗ್ರಹೀತವಾದ ಪುತ್ರನಿಂದ । **ಕರ್ಮ**—ಯಜ್ಞಾದಿಕರ್ಮಗಳನ್ನು । **ಋಧ್ಯಾಮ**—ಬೆಳೆಸುತ್ತೇವೆ । **ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿ ಲೋಕಗಳ ಅಧಿದೇವತೆಗಳೇ । **ದೇವೈಃ**—ಇತರ ದೇವತೆಗಳೊಡನೆ । **ನಃ**—ನಮ್ಮನ್ನು । **ಪ್ರಾವತಂ**—ರಕ್ಷಿಸಿರಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನೀನು ನಮ್ಮಿಂದ ಸ್ತುತನಾಗಿ ನನುಗೆ ಧನಗಳ ದಾನಾರ್ಥವಾಗಿ ಯಶೋಯುಕ್ತವಾದ ಕರ್ಮಗಳನ್ನು ಮಾಡತಕ್ಕ ಪುತ್ರನನ್ನು ಅನುಗ್ರಹಿಸು. ನಾವು ನಿನ್ನಿಂದ ಅನುಗೃಹೀತನಾದ ಆ ನೂತನನಾದ ಪುತ್ರ ನಿಂದ ಯಜ್ಞಾದಿಕರ್ಮಗಳದ್ದು ಬೆಳೆಸುತ್ತೇವೆ. ಎಲೈ ದ್ಯಾವಾಪೃಥಿವಿಲೋಕಗಳ ಅಧಿದೇವತೆಗಳೇ, ಇತರ ದೇವತೆ ಗಳೊಡನೆ ನಮ್ಮನ್ನು ರಕ್ಷಿಸಿರಿ.

## English Translation.

Agni, who are praised by us for the sake of wealth, give us an illustrious son the performer of the sacrifice ; we may increase (or improve) the act by a new offspring (given by you) ; Heaven and Earth, protect us with the other gods.

|| ವಿಶೇಷವಿಷಯಗಳು ||

**ಕಾರುಂ—ಕರ್ಮಣಾಂ ಕರ್ತಾರಂ** । ಕಾರ್ಯಗಳನ್ನು ಮಾಡುವ. ಇಲ್ಲಿ ಭಾಷ್ಯಕಾರರು ಪುತ್ರಂ ಎಂಬ ಶಬ್ದವನ್ನು ಅಧ್ಯಾಹಾರಮಾಡಿರುವರು.

**ಸ್ತವಾನಃ—ಸ್ತೂಯಮಾನಃ** । ಸ್ತೋತ್ರಮಾಡಲ್ಪಡುವ

**ಋಧ್ಯಾಮ—ಋಧು ವೃದ್ಧೌ । ವರ್ಧಯಾಮ** । ಅಭಿವೃದ್ಧಿಮಾಡೋಣ.

**ಯಶಸಂ—ಯಶೋಯುಕ್ತಂ** । ಯಶಸ್ಸಿನಿಂದ ಕೂಡಿದ ಅಥವಾ ಯಶಃ ಎಂದರೆ ಅನ್ನವೆಂದೂ ಅರ್ಥ ವಾಗುವುದು (ನಿ. ೩-೯).

|| ವ್ಯಾಕರಣಪ್ರಕ್ರಿಯಾ ||

**ಯಶಸಮ್**—ಯಶಃ ಅಸ್ಯ ಅಸ್ತಿ ಎಂಬ ಮತ್ವರ್ಥದಲ್ಲಿ **'ಅರ್ಶ ಆದಿಭ್ಯೋಽಚ್'** (ಪಾ. ಸೂ. ೫-೨-೧೨೭) ಎಂಬುದರಿಂದ ಯಶಸ್ ಶಬ್ದಕ್ಕೆ ಅಚ್ ಪ್ರತ್ಯಯ ದ್ವಿತೀಯಾ ಏಕವಚನದಲ್ಲಿ ಯಶಸಮ್ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರವು ಪ್ರಾಪ್ತವಾದರೆ **'ವ್ಯತ್ಯಯೋ ಬಹುಲಂ'** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಮಧ್ಯೋದಾತ್ತವಾದ ಪದವಾಗುತ್ತದೆ. ಅಥವಾ **'ಸರ್ವಪ್ರಾತಿಪದಿಕೇಭ್ಯಃ ಕ್ವಿಪ್ ವಕ್ತವ್ಯಃ'** (ಪಾ. ಮ. ೩-೧-೧೧-೩) ಎಂಬುದರಿಂದ ಕ್ರಿಯಾ ವಿವಕ್ಷಾಮಾಡಿದಾಗ ಯಶಸ್ ಶಬ್ದಕ್ಕೆ ಕ್ವಿಪ್. ಇದು ಸನಾದಿಯಲ್ಲಿ ಸೇರಿರುವುದರಿಂದ **'ಸನಾದ್ಯಂತಾ ಧಾತವಃ'** ಎಂಬುದರಿಂದ ಯಶಸ್ ಎಂಬುದಕ್ಕೆ ಧಾತುಸಂಜ್ಞೆ ಬರುತ್ತದೆ. ಪುನಃ ಅದಕ್ಕೆ **'ಕ್ವಿಪ್ ಚ'** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಕೃತ್ ಪ್ರತ್ಯಯ ಬರುತ್ತದೆ ಆಮೇಲೆ **'ಕೃತ್ತದ್ಧಿತಸಮಾಸಾಶ್ಚ'** ಎಂಬುದರಿಂದ ಪ್ರಾತಿಪದಕಸಂಜ್ಞೆ. ದ್ವಿತೀಯಾ ಏಕವಚನದ ರೂಪ. **'ಧಾತೋಃ'** ಎಂಬುದರಿಂದ ಧಾತುವೇ ಸತಿಶಿಷ್ಟವಾಗುವುದರಿಂದ ಧಾತುವಿನ ಅಂತೋದಾತ್ತ ಸ್ವರ ಬರುತ್ತದೆ.

**ಕೃಣಿಹಿ**—ಕೃವಿ. ಹಿಂಸಾಕರಣಯೋಶ್ಚ. ಧಾತು ಲೋಟ್ ಮಧ್ಯಮಪುರುಷದ ಸಿಪ್ಪಿಗೆ ಹಿ ಆದೇಶ. **ಧಿನ್ವಿಕೃಣ್ವ್ಯೋರಚ** ಎಂಬುದರಿಂದ ಹಿಂದಿನಂತೆ (೧–೨–೩೧–೭) ಕೃಣು ಎಂದು ಅಂಗವಾಗುತ್ತದೆ. **'ಉತಶ್ಚ-ಪ್ರತ್ಯಯಾದಸಂಯೋಗ ಪೂರ್ವಾತ್'** (ಪಾ. ಸೂ. ೬–೪–೧೦೬) ಎಂಬುದರಿಂದ ಹಿಲುಕ್ ಪ್ರಾಪ್ತವಾದರೆ **'ಉತಶ್ಚ ಪ್ರತ್ಯಯಾಚ್ಛಂದೋವಾವಚನಮ್'** (ಪಾ. ಸೂ. ೬–೪–೧೦೬–೧) ಎಂಬುದರಿಂದ ಛಂದಸ್ಸಿನಲ್ಲಿ ವಿಕಲ್ಪವಾದುದರಿಂದ ಲುಕ್ ಬರುವುದಿಲ್ಲ. ಕೃಣುಹಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಸ್ತವಾನಃ**— ಷ್ಟುಞ್ ಸ್ತುತೌ ಧಾತು. ಅದಾದಿ. ಧಾತ್ವಾದಿಗೆ ಸಕಾರಾದೇಶ. **' ಸಮ್ಯಾನಚ್ ಸ್ತುವಃ '** (ಉ. ಸೂ. ೨–೨೪೬) ಎಂಬಲ್ಲಿ ಸಮ್ ಪೂರ್ವಕವಾದ ಷ್ಟುಞ್ ಧಾತುವಿಗೆ ಆನಚ್ ಪ್ರತ್ಯಯ ಹೇಳಿದರೂ ಉಣಾದಿ ಯಲ್ಲಿ ಬಹುಳಗ್ರಹಣವಿರುವುದರಿಂದ ಕೇವಲವಾದ ಧಾತುವಿಗೂ ಆನಚ್ ಪ್ರತ್ಯಯ ಬರುತ್ತದೆ. ಆನಚ್ ಪರದಲ್ಲಿರು ವಾಗ ತನ್ನಿಮಿತ್ತಕವಾಗಿ ಧಾತುವಿಗೆ ಗುಣ. ಅಚ್ ಪರದಲ್ಲಿರುವುದರಿಂದ ಗುಣದ ಓಕಾರಕ್ಕೆ ಅವಾದೇಶ. ಸ್ತವಾನಃ ಎಂದು ರೂಪವಾಗುತ್ತದೆ. **' ಚಿತಃ '** (ಪಾ. ಸೂ. ೬–೧–೧೬೩) ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾದರೆ ಇದು ವೃಷಾದಿಯಲ್ಲಿ ಸೇರಿರುವುದರಿಂದ **' ವೃಷಾದೀನಾಂ ಚ '** (ಪಾ. ಸೂ ೬ ೧–೨೦೩) ಎಂಬುದರಿಂದ ಅಂತೋ ದಾತ್ತಸ್ವರವು ಬಾಧಿತವಾಗಿ ಆದ್ಯುದಾತ್ತಸ್ವರ ಬರುತ್ತದೆ.

**ಋಧ್ಯಾಮ**—ಋಧು ವೃದ್ಧೌ ಧಾತು. ದಿವಾದಿ ವಿಧಿಲಿಙ್ ಉತ್ತಮಪುರುಷದಲ್ಲಿ ಮಸ್ ಪ್ರತ್ಯಯ. **' ನಿತ್ಯಂ ಙಿತಃ '** (ಪಾ. ಸೂ. ೩–೪–೯೯) ಎಂಬುದರಿಂದ ಮಸಿನ ಸಕಾರಕ್ಕೆ ಲೋಪ. **' ಯಾಸುಟ್‌ಪರಸ್ಮೈಪದೇ ಷೂದಾತ್ತೋ ಙಿಚ್ಚ '** (ಪಾ. ಸೂ. ೩–೪–೧೦೩) ಎಂಬುದರಿಂದ ಪ್ರತ್ಯಯಕ್ಕೆ ಯಾಸುಟಾಗಮ **ಬಹುಲಂ ಛಂದಸಿ** ಸೂತ್ರದಿಂದ **ದಿವಾದಿಭ್ಯಃ ಶ್ಯನ್** ಎಂಬುದರಿಂದ ಪ್ರಾಪ್ತವಾದ ಶ್ಯನ್ ವಿಕರಣಕ್ಕೆ ಲುಕ್. ಯಾಸುಟ್ ಙಿತ್ತಾದುದ ರಿಂದ ಧಾತುವಿಗೆ ಲಘೂಪಧಗುಣ ಬರುವುದಿಲ್ಲ. ಋಧ್ಯಾಮ ಎಂದು ರೂಪವಾಗುತ್ತದೆ. ಯಾಸುಟ್ಟಿಗೆ ಉದಾತ್ತತ್ವ ವನ್ನು ವಿಧಾನಮಾಡಿರುವುದರಿಂದ ಋಧ್ಯಾಮ ಎಂಬಲ್ಲಿ ಆಕಾರವು ಉದಾತ್ತವಾಗುತ್ತದೆ. ಪಾದದ ಆದಿಯಲ್ಲಿರುವುದ ರಿಂದ ಆಷ್ಟಮಿಕ ನಿಘಾತಸ್ವರವು ಬರುವುದಿಲ್ಲ.

**ದ್ಯಾವಾಪೃಥಿವೀ**—ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವೀ. ಇತರೇತರಯೋಗ ದ್ವಂದ್ವಸಮಾಸ. **'ದಿವೋ ದ್ಯಾವಾ'** (ಪಾ. ಸೂ. ೬–೩–೨೯) ಎಂಬುದರಿಂದ ದಿವ್ ಶಬ್ದಕ್ಕೆ ದ್ಯಾವಾ ಎಂಬ ಆದೇಶ ಸಮಾಸದಲ್ಲಿ ಬರುತ್ತದೆ. ದ್ಯಾವಾಪೃಥಿವೀ ಶಬ್ದಕ್ಕೆ ಸಂಬೋಧನಾ ದ್ವಿವಚನದಲ್ಲಿ **' ಸುಪಾಂ ಸುಲುಕ್ '** (ಪಾ. ಸೂ. ೭–೧–೩೯) ಸೂತ್ರದಿಂದ ಪೂರ್ವಸವರ್ಣ ದೀರ್ಘವು ಏಕಾದೇಶವಾಗಿ ಬರುತ್ತದೆ. **ಆಮಂತ್ರಿತಸ್ಯ ಚ** ಎಂಬುದರಿಂದ ಸರ್ವಾನುದಾತ್ತ ಸ್ವರ ಬರುತ್ತದೆ.

**ಅವತಮ್**—ಅವ ರಕ್ಷಣೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷ ದ್ವಿವಚನ ರೂಪ. ತಿಙಂತನಿಘಾತ ಸ್ವರ ಬರುತ್ತದೆ. ॥ ೮ ॥

॥ ಸಂಹಿತಾಪಾಠಃ ॥

ತ್ವಂ ನೋ ಅಗ್ನೇ ಪಿತ್ರೋರುಪಸ್ಥ ಆ ದೇವೋ ದೇವೇಷ್ವನವದ್ಯ
ಜಾಗೃವಿಃ ।
ತನೂಕೃದ್ಬೋಧಿ ಪ್ರಮತಿಶ್ಚ ಕಾರವೇ ತ್ವಂ ಕಲ್ಯಾಣ ವಸು
ವಿಶ್ವಮೋಪಿಷೇ ॥ ೯ ॥

॥ ಪದಪಾಠಃ ॥

ತ್ವಂ । ನಃ । ಅಗ್ನೇ । ಪಿತ್ರೋಃ । ಉಪಽಸ್ಥೇ । ಆ । ದೇವಃ । ದೇವೇಷು ।
ಅನವದ್ಯ । ಜಾಗೃವಿಃ ।
ತನೂಽಕೃತ್ । ಬೋಧಿ । ಪ್ರಽಮತಿಃ । ಚ । ಕಾರವೇ । ತ್ವಂ । ಕಲ್ಯಾಣ ।
ವಸು । ವಿಶ್ವಂ । ಆ । ಊಪಿಷೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅನವದ್ಯ ದೋಷರಹಿತಾಗ್ನೇ ದೇವೇಷು ಸರ್ವೇಷು ಮಧ್ಯೇ ಜಾಗೃವಿರ್ಜಾಗರೂಕಸ್ತ್ವಂ ಪಿತ್ರೋರ್ಮಾತೃಪಿತೃರೂಪಯೋರ್ದ್ಯಾವಾಪೃಥಿವ್ಯೋರುಪಸ್ಥೇ ಸಮೀಪಸ್ಥಾನೇ ವರ್ತಮಾನಃ ಸನ್ನೋಽಸ್ಮಾಕಂ ತನೂಕೃತ್ ಪುತ್ರರೂಪಶರೀರಕಾರೀ ಭೂತ್ವಾ ಬೋಧಿ । ಬುಧ್ಯಸ್ವ । ಅನುಗೃಹಾಣೇತ್ಯರ್ಥಃ । ತಥಾ ಕಾರವೇ ಕರ್ಮಕರ್ತ್ರೇ ಯಜಮಾನಾಯ ಪ್ರಮತಿಶ್ಚಾನುಗ್ರಹರೂಪಪ್ರಕೃಷ್ಟಮತಿಯುಕ್ತಶ್ಚ ಭವೇತಿ ಶೇಷಃ । ಹೇ ಕಲ್ಯಾಣ ಮಂಗಲರೂಪಾಗ್ನೇ ತ್ವಂ ವಿಶ್ವಂ ವಸು ಸರ್ವಮಪಿ ಧನಮೋಪಿಷೇ । ಯಜಮಾನಾರ್ಥಮಾವಪಸಿ ॥ ಉಪಸ್ಥೇ । ಸುಪಿ ಸ್ಥಃ । ಪಾ. ೩-೨-೪ । ಇತಿ ತಿಷ್ಠತೇಃ ಕಃ ಪ್ರತ್ಯಯಃ ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಂ । ಪಾ. ೬-೨-೧೦೬-೨ । ಇತಿ ಪೂರ್ವಪದಾಂತೋದಾತ್ತತ್ವಂ । ಜಾಗೃವಿಃ । ಜಾಗೃ ನಿದ್ರಾಕ್ಷಯೇ ಜೄಶೄಸ್ತೄಜಾ-

**ಗೃಭ್ಯಃ ಕ್ತಿನ್ । ಉ. ४. ३४ । ಇತಿ ಕ್ತಿನ್ । ನಿತ್ವಾದಾದ್ಯುದಾತ್ತತ್ವಂ । ಬೋಧಿ । ಬುಧ ಅವಗಮನೇ । ಬಹುಲಂ ಛಂದಸೀತಿ ಶಪೋ ಲುಕ್ । ವಾ ಛಂದಸೀತಿ ಹೇರಪಿತ್ತ್ವಸ್ಯ ವಿಕಲ್ಪಿತತ್ವೇನ ಪಿತ್ತ್ವಾದಜಿತ್ವೇ ಸತ್ಯಜಿತಶ್ಚ । ಪಾ. ೬-೪-೧೦೩ । ಇತಿ ಹೇರ್ಧಿರಾದೇಶಃ । ಲಘೂಪಧಗುಣಃ । ಧಾತೋರಂತ್ಯಲೋಪ-ಶ್ಛಾಂದಸಃ । ಪ್ರಮತಿಃ । ಮನ ಜ್ಞಾನೇ । ಕ್ತಿನ್ಯನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಪ್ರಕೃಷ್ಟಾ ಮತಿರ್ಯಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಊಪಿಷೇ । ಡುವಪ್ ಬೀಜ-ತಂತುಸಂತಾನೇ । ಛಾಂದಸೇ ಲಿಟಿ ಥಾಸಃ ಸೇ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಪರಪೂರ್ವತ್ವೇ ದ್ವಿರ್ಭಾವಹಲಾದಿಶೇಷೌ । ಕ್ರಾದಿನಿಯಮಾದಿಟ್ ॥**

॥ ಪ್ರತಿಪದಾರ್ಥ ॥

**ಅನವದ್ಯ**—ದೋಷರಹಿತನಾದ । **ಅಗ್ನೇ**—ಎಲೈ ಅಗ್ನಿಯೇ । **ದೇವೇಷು**—ಸಕಲ ದೇವತೆಗಳ ಮಧ್ಯದಲ್ಲಿ । **ಜಾಗೃವಿಃ**—ಜಾಗರೂಕನಾಗಿ । **ತ್ವಂ**—ನೀನು । **ಪಿತ್ರೋಃ**—ಮಾತಾಪಿತೃರೂಪರಾದ ದ್ಯಾವಾ ಪೃಥಿವಿಗಳ । **ಉಪಸ್ಥೇ**—ಸಮೀಪದಲ್ಲಿ (ದ್ದುಕೊಂಡು) । **ನಃ**—ನಮಗೆ । **ತನೂಕೃತ್**—ಪುತ್ರರೂಪದಿಂದ ನಮ್ಮ ಶರೀರ ರಕ್ಷಕನಾಗಿ । **ಬೋಧಿ**—ಎಚ್ಚರಗೊಳಿಸು । **ಕಾರವೇ**—ಯಜ್ಞಕರ್ಮವನ್ನು ಮಾಡತಕ್ಕ ಯಜಮಾನನಿಗೆ । **ಪ್ರಮತಿಶ್ಚ**—ಅನುಗ್ರಹಬುದ್ಧಿಯುಳ್ಳವನಾಗಿಯೂ (ಇರು) । **ಕಲ್ಯಾಣ**—ಮಂಗಳರೂಪದಲ್ಲಿರುವ ಅಗ್ನಿಯೇ । **ತ್ವಂ**—ನೀನು । **ವಿಶ್ವಂ ವಸು**—ಸಕಲ ಧನವನ್ನೂ । **ಓಪಿಷೇ**—(ಯಜಮಾನನಿಗಾಗಿ) ಬಿತ್ತುತ್ತೀಯೆ (ಅನುಗ್ರಹಿಸಿಕೊಡುತ್ತೀಯೆ).

॥ ಭಾವಾರ್ಥ ॥

ಎಲೈ ದೋಷರಹಿತನಾದ ಅಗ್ನಿಯೇ, ನೀನು ಸಕಲ ದೇವತೆಗಳ ಮಧ್ಯದಲ್ಲಿ ಜಾಗರೂಕನಾಗಿ, ಮಾತಾಪಿತೃರೂಪರಾದ ದ್ಯಾವಾಪೃಥಿವಿಗಳ ಸಮೀಪದಲ್ಲಿಯೂ ಇದ್ದುಕೊಂಡು ನಮಗೆ ಪುತ್ರರೂಪದಿಂದ ನಮ್ಮ ಶರೀರ ರಕ್ಷಕನಾಗಿ ನಮ್ಮನ್ನು ಎಚ್ಚರಗೊಳಿಸು. ಯಜ್ಞಕರ್ಮವನ್ನು ಮಾಡತಕ್ಕ ಯಜಮಾನನಿಗೆ ಅನುಗ್ರಹಬುದ್ಧಿಯುಳ್ಳವನಾಗಿರು. ಮಂಗಳರೂಪದಲ್ಲಿರುವ ಎಲೈ ಅಗ್ನಿಯೇ, ನೀನು ಸಕಲ ಧನವನ್ನೂ ಯಜಮಾನನಿಗಾಗಿ ಅನುಗ್ರಹಿಸಿ ಕೊಡುತ್ತೀಯೆ.

## English Translation.

O stainless Agni, you are a watchful god among gods living in the proximity of your parents (Heaven and Earth) and bestowing upon us progeny, awake us ; be well disposed to the offerer of the oblation ; you grant us all that is good and auspicious.

॥ ವಿಶೇಷವಿಷಯಗಳು ॥

**ಅನವದ್ಯ— ದೋಷರಹಿತ ।** ದೋಷರಹಿತನಾದ, ಸ್ತುತ್ಯಾರ್ಹನಾದ, irreproachable.

**ಪಿತ್ರೋಃ**— ತಂದೆತಾಯಿಗಳ ಎಂದರೆ ದ್ಯಾವಾಪೃಥಿವಿಗಳ ಸಮೀಪದಲ್ಲಿ.

**ಜಾಗೃವಿಃ**— ಜಾಗರೂಕನಾಗಿ, vigilant, watchful.

**ತನೂಕೃತ್**— ಪುತ್ರಾದಿಸಂತತಿಗಳನ್ನು ಉಂಟುಮಾಡುವವನು, ಎಂದರೆ ಕೊಡುವವನು.

**ಊಪಿಷೇ—ಡುವಪ್ ಬೀಜತಂತುಸಂತಾನೇ ।** ಬಿತ್ತುತ್ತೀಯೆ, ಎಂದರೆ ಅನುಗ್ರಹಿಸುತ್ತೀಯೆ.

॥ ವ್ಯಾಕರಣಪ್ರಕ್ರಿಯಾ ॥

**ಉಪಸ್ಥೇ—**ಷ್ಠಾ ಗತಿನಿವೃತ್ತೌ ಧಾತು. **'ಸುಪಿಸ್ಥಃ'** (ಪಾ ಸೂ. ೩–೨–೪) ಎಂಬುದರಿಂದ ಸಬಂತವು ಉಪಪದವಾಗಿರುವಾಗ ಷ್ಠಾಧಾತುವಿಗೆ ಕ ಪ್ರತ್ಯಯ. ಕ ಪ್ರತ್ಯಯದಲ್ಲಿ ಅ ಉಳಿಯುತ್ತದೆ. ಕಿತ್ತಾದ ಅಜಾದಿಪ್ರತ್ಯಯ ಪರದಲ್ಲಿರುವುದರಿಂದ **'ಆತೋ ಲೋಪ ಇಟಿ ಚ'** (ಪಾ ಸೂ. ೬–೪–೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಸ್ಥ ಎಂದಾಗುತ್ತದೆ. ಗತಿ ಸಂಜ್ಞೆಯುಳ್ಳ ಉಪ ಎಂಬುದರೊಡನೆ ಸಮಾಸವಾದ ಮೇಲೆ ಉಪಸ್ಥ ಎಂದಾಗುತ್ತದೆ. ಸಪ್ತಮೀ ಏಕವಚನ ರೂಪ. **'ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಮ್'** (ಪಾ. ಸೂ. ೬–೨–೧೦೬–೨) ಎಂಬುದರಿಂದ ಪೂರ್ವಪದ ಅಂತೋದಾತ್ತ ಸ್ವರವು ಬರುತ್ತದೆ.

**ಜಾಗೃವಿಃ**— ಜಾಗೃ ನಿದ್ರಾಕ್ಷಯೇ ಧಾತು. ಅದಾದಿ. **'ಜ್ಯಾ ಶ್ಯಾ ಸ್ತೃ ಜಾಗೃಭ್ಯಃ ಕ್ವಿನ್'** (ಉ. ಸೂ. ೪–೫೪) ಎಂಬುದರಿಂದ ಕ್ವಿನ್. ಕ್ವಿನ್ನಿನಲ್ಲಿ ವಿ ಉಳಿಯುತ್ತದೆ. ಕಿತ್ತಾದುದರಿಂದ ತನ್ನಿಮಿತ್ತಕವಾಗಿ ಧಾತುವಿನ ಇತಿಗೆ ಗುಣ ಬರುವುದಿಲ್ಲ. ಜಾಗೃವಿಃ ಎಂದು ರೂಪವಾಗುತ್ತದೆ. ಕ್ವಿನ್ ನಿತ್ತಾದುದರಿಂದ **'ಞ್ನಿತ್ಯಾದಿರ್ನಿತ್ಯಂ'** (ಪಾ. ಸೂ. ೬–೧–೧೯೭) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಬೋಧಿ**— ಬುಧ ಅವಗಮನೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷದಲ್ಲಿ ಹಿ ಆದೇಶ **'ಕರ್ತರಿ ಶಪ್'** (ಪಾ. ಸೂ. ೩–೧–೬೮) ಎಂಬುದರಿಂದ ಪ್ರಾಪ್ತವಾದ ಶಪ್ಪಿಗೆ **ಬಹುಲಂ ಛಂದಸಿ** ಸೂತ್ರದಿಂದ ಲುಕ್. ಹಿ ಆದೇಶವು ಅಪಿತ್ತಾದರೂ **'ವಾ ಛಂದಸಿ'** (ಪಾ. ಸೂ. ೩–೪–೮೮) ಎಂಬುದರಿಂದ ಛಂದಸ್ಸಿನಲ್ಲಿ ವಿಕಲ್ಪವಾಗಿ ಙಿತ್ತಾಗುತ್ತದೆ. ಆದುದರಿಂದ ಹಿ ಪರದಲ್ಲಿರುವಾಗ ಧಾತುವಿಗೆ ಲಘೂಪಧಗುಣ ಬರುತ್ತದೆ. ಬೋಧ+ಹಿ ಎಂದಿರುವಾಗ **'ಅಙಿತಶ್ಚ'** (ಪಾ. ಸೂ. ೬–೪–೧೦೩) ಎಂಬುದರಿಂದ ಙಿತ್ತ್ವವಿಲ್ಲದಿರುವುದರಿಂದ ಹಿಗೆ ಧಿ ಆದೇಶ. ಧಾತುವಿನ ಅಂತ್ಯಕ್ಕೆ ಛಾಂದಸವಾಗಿ ಲೋಪ. ಬೋಧಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಪ್ರಮತಿಃ**— ಮನ ಜ್ಞಾನೇ ಧಾತು. **'ಸ್ತ್ರಿಯಾಂ ಕ್ತಿನ್'** (ಪಾ. ಸೂ. ೩–೩–೯೪) ಸೂತ್ರದಿಂದ ಕ್ತಿನ್. ಮನ್+ತಿ ಎಂದಿರುವಾಗ **'ಅನುದಾತ್ತೋಪದೇಶ'** (ಪಾ. ಸೂ ೬–೪–೩೭) ಎಂಬುದರಿಂದ ಕಿತ್ ಪ್ರತ್ಯಯಪರದಲ್ಲಿರುವುದರಿಂದ ಧಾತುವಿನ ಅನುನಾಸಿಕ ನಕಾರಕ್ಕೆ ಲೋಪ. ಮತಿ ಎಂದು ರೂಪವಾಗುತ್ತದೆ. ಪ್ರಕೃಷ್ಟಾ ಮತಿಃ ಯಸ್ಯ ಸಃ ಪ್ರಮತಿಃ ಬಹುವ್ರೀಹಿಸಮಾಸ. **'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ'** (ಪಾ. ಸೂ. ೬–೨–೧) ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಊಷಿಷೇ**—ಡುವಪ್ ಬೀಜಸಂತಾನೇ. ಧಾತು. ಭ್ವಾದಿ. '**ಆದಿರ್ಞಿಟುಡವಃ**' (ಪಾ ಸೂ. ೧-೩-೫) ಸೂತ್ರದಿಂದ ಆದಿಯ ಡುವಿಗೆ ಲೋಪ. '**ಛಂದಸಿಲುಙ್ಲಙ್ಲಿಟಃ**' (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಮಧ್ಯಮಪುರುಷ ಏಕವಚನದ ಥಾಸಿಗೆ '**ಥಾಸಃ ಸೇ**' (ಪಾ. ಸೂ. ೩-೪-೮೦) ಎಂಬುದರಿಂದ ಸೇ ಆದೇಶ. '**ವಚಿಸ್ವಪಿ ಯಜಾದೀನಾಂ ಕಿತಿ**' (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ **ಅಸಂಯೋಗಾಲ್ಲಿಟ್‌ಕಿತ್** ಎಂಬುದರಿಂದ ಇಲ್ಲಿ ಪಿತ್ತು ಇಲ್ಲದಿರುವುದರಿಂದ ಲಿಡಾದೇಶಕ್ಕೆ ಕಿತ್ವವು ಇರುತ್ತದೆ. ಲಿಣ್ಣಿಮಿತ್ತಕವಾಗಿ ಧಾತುವಿಗೆ ದ್ವಿತ್ವ. **ಹಲಾದಿಃ ಶೇಷಃ** ಸೂತ್ರದಿಂದ ಅಭ್ಯಾಸದ ಆದಿಯ ಹಲ್ಲಿಗೆ ಶೇಷ ಸವರ್ಣದೀರ್ಘ. '**ಕೃಸೃಭೃವೃಸ್ತುದ್ರು**' (ಪಾ. ಸೂ. ೭-೨-೧೩) ಎಂಬಲ್ಲಿ ಪ್ರಕೃತ್ಯಾಶ್ರಯವಾಗಿ ಅಥವಾ ಪ್ರತ್ಯಯಾಶ್ರವಾಗಿ ಬರುವ ಇಣ್ನಿಷೇಧವು ಲಿಟ್ಟಿನಲ್ಲಿ ಬರುವುದಾದರೆ ಕ್ರ್ಯಾದಿಗಳಿಗೆ ಮಾತ್ರ ಎಂದು ನಿಯಮ ಮಾಡಿರುವುದರಿಂದ ವಪ್ ಧಾತುವು ಅನಿಟ್ಟಾದರೂ ಇದರ ಪರದಲ್ಲಿರುವ ವಲಾದಿಯಾದ ಸೇ ಪ್ರತ್ಯಯಕ್ಕೆ ಇಡಾಗಮ ಬರುತ್ತದೆ. ಇಣ್ಣಿನ ಪರದಲ್ಲಿರುವುದರಿಂದ ಅದಕ್ಕೆ ಷತ್ವ ಬಂದರೆ ಊಷಿಷೇ ಎಂದು ರೂಪವಾಗುತ್ತದೆ. || ೯ ||

|| ಸಂಹಿತಾಪಾಠಃ ||

ತ್ವಮ॑ಗ್ನೇ ಪ್ರಮ॑ತಿಸ್ತ್ವಂ ಪಿ॒ತಾಸಿ॑ ನ॒ಸ್ತ್ವಂ ವ॑ಯ॒ಸ್ಕೃತ್ತವ॑
ಜಾ॒ಮಯೋ॑ ವ॒ಯಂ ।
ಸಂ ತ್ವಾ॒ ರಾಯ॑ಃ ಶ॒ತಿನ॒ಃ ಸಂ ಸ॑ಹ॒ಸ್ರಿಣ॑ಃ ಸು॒ವೀರಂ॑ ಯನ್ತಿ
ವ್ರ॒ತಪಾ॑ಮದಾಭ್ಯ ॥ ೧೦ ॥

|| ಪದಪಾಠಃ ||

ತ್ವಂ । ಅ॒ಗ್ನೇ॒ । ಪ್ರಽಮ॑ತಿಃ । ತ್ವಂ । ಪಿ॒ತಾ । ಅ॒ಸಿ॒ । ನ॒ಃ । ತ್ವಂ । ವ॒ಯ॒ಃಽಕೃತ್ ।
ತವ॑ । ಜಾ॒ಮಯ॑ಃ । ವ॒ಯಂ ।
ಸಂ । ತ್ವಾ॒ । ರಾಯ॑ಃ । ಶ॒ತಿನ॑ಃ । ಸಂ । ಸ॒ಹ॒ಸ್ರಿಣ॑ಃ । ಸು॒ಽವೀರ॑ಂ । ಯ॒ನ್ತಿ॒ ।
ವ್ರ॒ತ॒ಽಪಾಂ । ಅ॒ದಾ॒ಭ್ಯ॒ ॥ ೧೦ ॥

|| ಸಾಯಣ ಭಾಷ್ಯಂ ||

**ಹೇ ಅಗ್ನೇ ತ್ವಂ ಪ್ರಮತಿರಸ್ಮದನುಗ್ರಹರೂಪಪ್ರಕೃಷ್ಟಮತಿಯುಕ್ತೋಽಸಿ। ತಥಾ ತ್ವಂ ನೋಽಸ್ಮಾಕಂ ಪಿತಾ ಪಾಲಕೋಽಸಿ ತಥಾ ತ್ವಂ ವಯಸ್ಕೃತ್। ಆಯುಷ್ಯಪ್ರದೋಽಸಿ। ವಯಮನುಷ್ಠಾತಾರಸ್ತವ ಜಾಮಯೋ ಬಂಧವಃ। ಹೇ ಅದಾಭ್ಯ ಕೇನಾಪ್ಯಹಿಂಸನೀಯಾಗ್ನೇ ಸುವೀರಂ ಶೋಭನಪುರುಷಯುಕ್ತಂ ವ್ರತಪಾಂ ಕರ್ಮಣಃ ಪಾಲಕಂ ತ್ವಾಂ ಶತಿನಃ ಶತಸಂಖ್ಯಾಯುಕ್ತಾ ರಾಯೋ ಧನಾನಿ ಸಂ ಯಂತಿ। ಸಮ್ಯಕ್ ಪ್ರಾಪ್ನುವಂತಿ। ತಥಾ ಸಹಸ್ರಿಣಃ ಸಹಸ್ರಸಂಖ್ಯಾಕಾ ರಾಯಃ ಸಂ ಯಂತಿ॥ ಸುವೀರಂ। ಬಹುವ್ರೀಹೌ ನಞ್‌ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವೇ ಪ್ರಾಪ್ತೇ ವೀರವೀರ್ಯೌ ಚ। ಪಾ. ೬-೨-೧೨೦। ಇತ್ಯುತ್ತರಪದಾದ್ಯುದಾತ್ತತ್ವಂ। ಅದಾಭ್ಯ। ದಭಿಃ ಪ್ರಕೃತ್ಯಂತರಮಸ್ತೀತಿ ಕೇಚಿದಾಹುಃ। ದಭೇಶ್ಚೇತಿ ವಕ್ತವ್ಯಂ। ಪಾ. ೩-೧-೧೨೪-೩। ಇತಿ ಣ್ಯತ್ ॥ ೩೩ ॥**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ। **ತ್ವಂ**—ನೀನು। **ಪ್ರಮತಿಃ**—(ನಮ್ಮಲ್ಲಿ) ಅನುಗ್ರಹ ಬುದ್ಧಿಯುಳ್ಳವನಾಗಿರುವೆ। **ತ್ವಂ**—ನೀನು। **ನಃ**—ನಮಗೆ। **ಪಿತಾ**—ಪಾಲಕನಾಗಿ। **ಅಸಿ**—ಆಗಿದ್ದೀಯೆ। **ತ್ವಂ**—ನೀನು। **ವಯಸ್ಕೃತ್**—ಆಯುರ್ದಾತನಾಗಿದ್ದೀಯೆ। **ವಯಂ**—(ಯಜ್ಞಾನುಷ್ಠಾನಮಾಡುವ) ನಾವು। **ತವ**—ನಿನಗೆ। **ಜಾಮಯಃ**—ಬಂಧುಗಳು। **ಅದಾಭ್ಯ**—(ಯಾರಿಂದಲೂ) ಹಿಂಸಿಸಲ್ಪಡದೇ ಇರುವ ಅಗ್ನಿಯೇ। **ಸುವೀರಂ**—ಶ್ರೇಷ್ಠರಾದ ಪುರುಷರಿಂದೊಡಗೂಡಿದವನೂ। **ವ್ರತಪಾಂ**—ಕರ್ಮಗಳ ಪಾಲಕನೂ ಆದ ನಿನ್ನನ್ನು। **ಶತಿನಃ**—ಶತಸಂಖ್ಯಾಕಗಳಾದ। **ರಾಯಃ**—ಧನಗಳು। **ಸಂ ಯಂತಿ**—ಸಂಪೂರ್ಣವಾಗಿ ಸೇರುತ್ತವೆ। **ಸಹಸ್ರಿಣಃ**— ಸಹಸ್ರಸಂಖ್ಯಾಕಗಳಾದ ಧನಗಳೂ। **ಸಂ**—ಸಂಪೂರ್ಣವಾಗಿ ಸೇರಿರುತ್ತವೆ.

|| ಭಾವಾರ್ಥ ||

ಎಲೈ ಅಗ್ನಿಯೇ, ನೀನು ನಮ್ಮ ವಿಷಯದಲ್ಲಿ ಅನುಗ್ರಹ ಬುದ್ಧಿಯುಳ್ಳವನಾಗಿಯೂ, ಪಾಲಕನಾಗಿಯೂ, ಆಯುರ್ದಾತನಾಗಿಯೂ ಇರುವೆ. ಯಜ್ಞಾನುಷ್ಠಾನಮಾಡುವ ನಾವು ನಿನ್ನ ಬಂಧುಗಳು. ಯಾರಿಂದಲೂ ಹಿಂಸಿಸಲ್ಪಡದ ಅಗ್ನಿಯೇ, ಶ್ರೇಷ್ಠರಾದ ಪುರುಷರಿಂದೊಡಗೂಡಿದವನೂ, ಕರ್ಮಗಳ ಪಾಲಕನೂ ಆದ ನಿನ್ನನ್ನು ಶತಸಂಖ್ಯಾಕಗಳೂ, ಸಹಸ್ರಸಂಖ್ಯಾಕಗಳೂ ಆದ ಧನಗಳು ಸಂಪೂರ್ಣವಾಗಿ ಸೇರಿರುತ್ತವೆ. ಎಂದರೆ ನಿನ್ನಲ್ಲಿ ಬಹಳ ಧನವಿದೆ.

## English Translation.

Agni, you are well disposed to us, you are our protector, the giver of life to us; we are your kinsmen; uninjurable Agni, hundred and thousand of riches belong to you; you are the supporter of pious acts and you are surrounded by good men.

॥ ವಿಶೇಷವಿಷಯಗಳು ॥

**ಪ್ರಮತಿಃ—ಅಸ್ಮದನುಗ್ರಹರೂಪಪ್ರಕೃಷ್ಟಮತಿಯುಕ್ತಃ ।** ನಮ್ಮನ್ನು ಅನುಗ್ರಹಿಸುವುದಕ್ಕಾಗಿ ಒಳ್ಳೆಯ ಬುದ್ಧಿಯಿಂದ ಕೂಡಿರುವವನು.

**ಪಿತಾ—ಪಾಲಕಃ ।** ಸಂರಕ್ಷಕನು.

**ವಯಸ್ಕೃತ್—ಆಯುಷ್ಯಪ್ರದಃ ।** ಆಯುಸ್ಸನ್ನು ಕೊಡುವವನು, giver of long life.

**ಜಾಮಯಃ—ಬಂಧವಃ ।** ಬಂಧುಗಳು.

**ವ್ರತಪಾಂ—ಕರ್ಮಣಃ ಪಾಲಕಂ ।** ಯಜ್ಞಾದಿಕರ್ಮಗಳ ಪಾಲಕನು.

**ಅದಾಭ್ಯ—ಕೇನಾಪ್ಯಹಿಂಸನೀಯ ।** ಯಾರಿಂದಲೂ ಹಿಂಸಿಸಲ್ಪಡಲು ಸಾಧ್ಯನಲ್ಲದ.

॥ ವ್ಯಾಕರಣಪ್ರಕ್ರಿಯಾ ॥

**ವಯಸ್ಕೃತ್**—ವಯಃ ಕರೋತಿ ಇತಿ ವಯಸ್ಕೃತ್. **ಕ್ವಿಪ್ ಚ** ಎಂಬುದರಿಂದ ಕೃಞ್ ಧಾತುವಿಗೆ ಕ್ವಿಪ್. ಪಿತ್ ಪ್ರತ್ಯಯುಪರದಲ್ಲಿರುವಾಗ **'ಹ್ರಸ್ವಸ್ಯ ಪಿತಿಕೃತಿತುಕ್'** (ಪಾ. ಸೂ. ೬-೧-೭೧) ಸೂತ್ರದಿಂದ ಧಾತುವಿಗೆ ತುಗಾಗಮ. ವಯಸ್ ಶಬ್ದದ ಸಕಾರಕ್ಕೆ ರುತ್ವವಿಸರ್ಗ ಬಂದರೆ ವಯಃ ಎಂದಾಗುತ್ತದೆ. ಅಕಾರದ ಪರದಲ್ಲಿರುವ ವಿಸರ್ಗಕ್ಕೆ ಕೃಞ್ ಧಾತು ಪರದಲ್ಲಿರುವುದರಿಂದ **'ಅತಃ ಕೃಕಮಿಕಂಸ'** (ಪಾ. ಸೂ. ೮-೩-೪೬) ಎಂಬುದರಿಂದ ನಿತ್ಯವಾಗಿ ಸಕಾರ ಬರುವುದರಿಂದ ವಯಸ್ಕೃತ್ ಎಂದು ರೂಪವಾಗುತ್ತದೆ. **ಗತಿಕಾರ** ಸೂತ್ರದಿಂದ ಕೃದುತ್ತರ ಪದ ಪ್ರಕೃತಿಸ್ವರವು ಬರುತ್ತದೆ.

**ಸುವೀರಮ್**—ಶೋಭನಃ ವೀರಃ ಯಸ್ಯ ಸಃ ಸುವೀರಃ ಬಹುವ್ರೀಹಿಸಮಾಸ. ಬಹುವ್ರೀಹಿಯು ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾದರೆ ಅದಕ್ಕೆ **'ನಞ್ ಸುಭ್ಯಾಂ'** (ಪಾ. ಸೂ. ೬-೨-೧೭೨) ಎಂಬುದರಿಂದ ಸುಪೂರ್ವಪದವಾಗಿರುವುದರಿಂದ ಉತ್ತರಪದ ಅಂತೋದಾತ್ತಸ್ವರವು ಬಾಧಕವಾಗಿ ಪ್ರಾಪ್ತವಾಗುತ್ತದೆ. ಅದನ್ನು ಬಾಧಿಸಿ **'ವೀರವೀರ್ಯೌ ಚ'** (ಪಾ. ಸೂ. ೬-೨-೧೨೦) ಎಂಬುದರಿಂದ ವೀರಶಬ್ದ ಉತ್ತರಪದವಾಗಿರುವುದರಿಂದ ಉತ್ತರಪದ ಆದ್ಯುದಾತ್ತಸ್ವರವು ಬರುತ್ತದೆ.

**ಅದಾಭ್ಯ**—ಸಂಬುದ್ಧಿಯಲ್ಲಿ **ಏಙ್ ಹ್ರಸ್ವಾತ್ ಸಂಬುದ್ಧೇಃ** ಎಂಬುದರಿಂದ ಸುಲೋಪ. ದಭಿ ಎಂಬುದು ಪ್ರಕೃತಿವಿಶೇಷವೇ ಬೇರೆ ಇದೆ ಎಂದು ಕೆಲವರು ಹೇಳುತ್ತಾರೆ. ದಂಭು ಎಂಬ ಧಾತುವು ಸ್ವೀಕೃತವಾದರೆ ವೃದ್ಧಿ ನಲೋಪಗಳು ಬರಲಾರವು ಎಂದು ಅವರ ಅಭಿಪ್ರಾಯ. **'ದಭೇಶ್ಚೇತಿವಕ್ತವ್ಯಮ್'** (ಪಾ. ಸೂ. ೩-೧-೧೨೪-೩) ಎಂಬುದರಿಂದ ಣ್ಯತ್ ಪ್ರತ್ಯಯ ಬರುತ್ತದೆ. ಅಲ್ಲಿ ಯ ಉಳಿಯುತ್ತದೆ. ಣಿತ್ತಾದುದರಿಂದ **ಅತ ಉಪಧಾಯಾಃ** ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ದಾಭ್ಯ ಎಂದಾಗುತ್ತದೆ. ನದಾಭ್ಯಃ ಅದಾಭ್ಯಃ ಸಂಬುದ್ಧಿಯಲ್ಲಿ ಅದಾಭ್ಯ ಎಂದು ರೂಪವಾಗುತ್ತದೆ. **'ಆಮಂತ್ರಿತಸ್ಯ ಚ'** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ. ॥ ೧೦ ॥

॥ ಸಂಹಿತಾಪಾಠಃ ॥

ತ್ವಾಮಗ್ನೇ ಪ್ರಥಮಮಾಯುಮಾಯವೇ ದೇವಾ ಅಕೃಣ್ವನ್ನ-
ಹುಷಸ್ಯ ವಿಶ್ಪತಿಂ ।
ಇಳಾಮಕೃಣ್ವನ್ಮನುಷಸ್ಯ ಶಾಸನೀಂ ಪಿತುರ್ಯತ್ಪುತ್ರೋ ಮಮ-
ಕಸ್ಯ ಜಾಯತೇ ॥ ೧೧ ॥

॥ ಪದಪಾಠಃ ॥

ತ್ವಾಂ । ಅಗ್ನೇ । ಪ್ರಥಮಂ । ಆಯುಂ । ಆಯವೇ । ದೇವಾಃ । ಅಕೃಣ್ವನ್ ।
ನಹುಷಸ್ಯ । ವಿಶ್ಪತಿಂ ।
ಇಳಾಂ । ಅಕೃಣ್ವನ್ । ಮನುಷಸ್ಯ । ಶಾಸನೀಂ । ಪಿತುಃ । ಯತ್ । ಪುತ್ರಃ ।
ಮಮಕಸ್ಯ । ಜಾಯತೇ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾಂ ಪ್ರಥಮಂ ಪುರಾ ದೇವಾ ಆಯವ ಆಯೋರ್ಮನುಷ್ಯರೂಪಸ್ಯ ನಹುಷಸ್ಯೈ-ತನ್ನಾಮಕರಾಜವಿಶೇಷಸ್ಯಾಯುಂ ಮನುಷ್ಯರೂಪಂ ವಿಶ್ಪತಿಂ ಸೇನಾಪತಿಮಕೃಣ್ವನ್ । ಕೃತವಂತಃ । ತಥಾ ಮನುಷ್ಯಸ್ಯ ಮನೋರಿಳಾಮೇತನ್ನಾಮಧೇಯಾಂ ಪುತ್ರೀಂ ಶಾಸನೀಂ ಧರ್ಮೋಪದೇಶಕರ್ತ್ರೀ-ಮಕೃಣ್ವನ್ । ಕೃತವಂತಃ । ತಥಾ ಚ ತೈತ್ತಿರೀಯೈರಾಮ್ನಾಯತೇ । ಇಡಾ ವೈ ಮಾನವೀ ಯಜ್ಞಾನು ಕಾಶಿನ್ಯಾಸೀತ್ । ತೈ. ಬ್ರಾ. ೧-೧-೪-೪ । ಇತಿ । ವಾಜಸನೇಯಿನೋಽಪ್ಯೇವಮಾಮನಂತಿ । ಪ್ರಯಾಜಾ-ನುಯಾಜಾನಾಂ ಮಧ್ಯೇ ಮಾಮವಕಲ್ಪಯ ಮಯಾ ಸರ್ವಾನವಾಪ್ಸ್ಯಸಿ ಕಾಮಾನಿತಿ ಸಾ ಮನುಮನ್ವ-ಶಾದಿತಿ ಯತ್ ಶಾದಿತಿ । ಯದ್ಯದಾ ಮಮಕಸ್ಯ ಮದೀಯಸ್ಯ ಹಿರಣ್ಯಸ್ತೂಪಸಂಬಂಧಿನೋ ಯಃ ಪಿತಾಂಗಿರಾಸ್ತಸ್ಯ ಪಿತುಃ ಪುತ್ರೋ ಜಾಯತೇ । ತದಾನೀಂ ಹೇ ಅಗ್ನೇ ತ್ವಮೇವ ಪುತ್ರರೂಪ ಆಸೀರಿತಿ

ಶೇಷಃ ‖ ಆಯವೇ । ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ । ಮ. ೨-೩-೩೨-೧ । ಇತಿ ಚತುರ್ಥೀ । ನಹುಷಸ್ಯ ಣಹ ಬಂಧನೇ । ನಹಿಕಲಿಹನ್ಯರ್ತಿಲಸಿಭ್ಯ ಉಷಚ್ । ಉ. ೪-೭೫ । ವೃಷಾದಿತ್ವಾದಾದ್ಯುದಾತ್ತತ್ವಂ । ವಿಶ್ಪತಿಂ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಮನುಷಸ್ಯ । ಮನೋರ್ನಿದಿತ್ಯುಷಚ್ । ನಿತ್ವಾದಾದ್ಯುದಾತ್ತತ್ವಂ । ಶಾಸನೀಂ ಶಿಷ್ಯತೇಽನಯೇತಿ ಶಾಸನೀ । ಕರಣಾಧಿಕರಣಯೋಶ್ಚೇತಿ ಲ್ಯುಟ್ । ಟಿಡ್ಢಾಣಞಿತ್ಯಾದಿನಾ । ಪಾ. ೪-೧-೧೫ । ಙೀಪ್ । ಲಿತ್ಸ್ವರೇಣಾದ್ಯುದಾತ್ತತ್ವಂ । ಮಮಕಸ್ಯ । ಮಮೇದಮಿತ್ಯರ್ಥೇ ತಸ್ಯೇದಂ । ಪಾ. ೪-೩-೧೨೦ । ಇತ್ಯಣಿ ತವಕಮಮಕಾವೇಕವಚನೇ । ಪಾ. ೪-೩-೩। ಇತ್ಯಸ್ಮಚ್ಛಬ್ದಸ್ಯ ಮಮಕಾದೇಶಃ । ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ವೃದ್ಧ್ಯಭಾವಃ । ವ್ಯತ್ಯಯೇನಾದ್ಯುದಾತ್ತತ್ವಂ ‖

‖ ಪ್ರತಿಪದಾರ್ಥ ‖

**ಅಗ್ನೇ**—ಎಲೈ ಅಗ್ನಿಯೇ । **ತ್ವಾಂ**— ನಿನ್ನನ್ನು । **ಪ್ರಥಮಂ**—ಮೊದಲು । **ದೇವಾಃ**—ದೇವತೆಗಳು । **ಆಯವೇ**—ಮನುಷ್ಯರೂಪದ । **ನಹುಷಸ್ಯ**—ನಹುಷನೆಂಬ ರಾಜನಿಗೆ । **ಆಯುಂ**—ಮನುಷ್ಯರೂಪದ । **ವಿಶ್ಪತಿಂ**—ಸೇನಾಪತಿಯನ್ನಾಗಿ । **ಅಕೃಣ್ವನ್**—ಮಾಡಿದರು । **ಮನುಷಸ್ಯ**—ಮನುವಿನ ಪುತ್ರಿಯಾದ । **ಇಳಾಂ**—ಇಳಾದೇವಿಯನ್ನು । **ಶಾಸನೀಂ**—ಧರ್ಮೋಪದೇಶವನ್ನು ಮಾಡುವವಳನ್ನಾಗಿ । **ಅಕೃಣ್ವನ್**—ಮಾಡಿದರು । **ಯತ್**— ಯಾವಾಗ । **ಮಮಕಸ್ಯ**—ನನ್ನ । **ಪಿತುಃ**—ಅಂಗಿರೋರೂಪದಲ್ಲಿರುವ ತಂದೆಗೆ । **ಪುತ್ರಃ**—ಮಗನಾಗಿ । **ಜಾಯತೇ**—ಹುಟ್ಟುತ್ತೀಯೆ (ಆಗ ನೀನೇ ಪುತ್ರರೂಪದಲ್ಲಿದ್ದೀಯೆ).

‖ ಭಾವಾರ್ಥ ‖

ಎಲೈ, ಅಗ್ನಿಯೇ, ನಿನ್ನನ್ನು ಮೊದಲು ದೇವತೆಗಳು ಮಾನವರೂಪದ ನಹುಷನೆಂಬ ರಾಜನಿಗೆ ಮಾನವ ರೂಪದ ಸೇನಾಪತಿಯನ್ನಾಗಿಯೂ ಮತ್ತು ಮನುವಿನ ಮಗಳಾದ ಇಳಾ ಎಂಬ ಹೆಸರುಳ್ಳ ಪುತ್ರಿಯನ್ನು ಧರ್ಮೋಪ ದೇಶಕರ್ತ್ರಿಯನ್ನಾಗಿಯೂ ಮಾಡಿದರು. ಮತ್ತು ನೀನು ಅಂಗಿರೋರೂಪದಲ್ಲಿರುವ ನನ್ನ ತಂದೆಗೆ ಪುತ್ರರೂಪದಲ್ಲಿ ಹುಟ್ಟುತ್ತೀಯೆ.

## English Translation.

Agni, the gods formerly made you the living general of the King Nahusha; they made Ila, the daughter of Manu, the instructress in performing the sacrifices, when you were born as the son of my father.

‖ ವಿಶೇಷವಿಷಯಗಳು ‖

**ನಹುಷಸ್ಯ**—ನಹುಷನೆಂಬುವನು ಒಬ್ಬ ರಾಜನು. ಈ ರಾಜನ ಹೆಸರು ಋಗ್ವೇದದಲ್ಲಿ—

**ಅರಟ್ವೇ ಅಕ್ಷೇ ನಹುಷೇ ಸುಕೃತ್ವಾನಿ ಸುಕೃತ್ತರಾಯ ಸುಕ್ರತುಃ ।**

(ಋ. ಸಂ. ೮-೪೬-೨೭)

**ಅಗ್ನಿಂ ವಿಶ ಈಳತೇ ಮಾನುಷೀರ್ಯಾ ಅಗ್ನಿಂ ಮನುಷೋ ನಹುಷೋ ವಿಜಾತಾಃ |**
(ಋ. ಸಂ. ೧೦-೮೦-೬)

ಎಂಬ ಸ್ಥಳದಲ್ಲಿರುವುದು. ಈ ನಹುಷರಾಜನ ವಿಚಾರದಲ್ಲಿ ಸಾಕಾದಷ್ಟು ವಿಷಯಗಳು ನಮಗೆ ದೊರೆತಿಲ್ಲ. ಬಹುಶಃ ಇವನು ನಾಹುಷರೆಂಬ ಜನಾಂಗದ ರಾಜನಾಗಿದ್ದನೆಂದು ಕೆಳಗಿನ ಉದಾಹರಣೆಗಳಿಂದ ಊಹಿಸಬಹುದು.

**ಯಯಾ ದಾಸಾನ್ಯಾರ್ಯಾಣಿ ವೃತ್ರಾ ಕರೋ ವಜ್ರಿನ್ ಸುತುಕಾ ನಾಹುಷಾಣಿ |**
(ಋ. ಸಂ. ೬-೨೨-೧೦)

**ಯದಿಂದ್ರ ನಾಹುಷೀಷ್ವಾँ ಓಜೋ ನೃಮ್ಣಂ ಚ ಕೃಷ್ಟಿಷು ||**
(ಋ. ಸಂ. ೬-೪೬-೭)

ಈ ರಾಜನು ಸಿಂಧು ಅಥವಾ ಸರಸ್ವತೀನದಿಯ ತೀರದಲ್ಲಿದ್ದ ಪ್ರದೇಶಕ್ಕೆ ರಾಜನಾಗಿದ್ದನೆಂದು ಕೆಲವು ಋಕ್ಕುಗಳ ಆಧಾರದಿಂದ ಊಹಿಸಬಹುದು.

**ಇಳಾಮಕೃಣ್ವನ್ಮನುಷಸ್ಯ ಶಾಸನೀಂ**—ಮನುಪುತ್ರಿಯಾದ ಇಳಾದೇವಿಯನ್ನು ಉಪದೇಶಕರ್ತ್ರಿಯನ್ನು ಮಾಡಿದ ವಿಚಾರದಲ್ಲಿ ಭಾಷ್ಯಕಾರರು—

**ಇಡಾ ವೈ ಮಾನವೀ ಯಜ್ಞಾನುಕಾಶಿನ್ಯಾಸೀತ್ ||**
(ತೈ. ಬ್ರಾ. ೧-೧-೪-೪)

**ಪ್ರಯಾಜಾನೂಯಾಜಾನಾಂ ಮಧ್ಯೇ ಮಾಮವಕಲ್ಪಯ ಮಯಾ ಸರ್ವಾನವಾಪ್ಸ್ಯಸಿ ಕಾಮಾನಿತಿ ಸಾ ಮನಮನ್ವಶಾದಿತಿ ಯತ್ ಶಾದಿತಿ ||**

ಎಂಬ ಎರಡು ಶ್ರುತಿವಾಕ್ಯಗಳನ್ನು ಉದಾಹರಿಸಿರುವರು.

**ಪಿತುಃ ಯತ್ ಪುತ್ರಃ ಮಮಕಸ್ಯ ಜಾಯತೇ**—ಅಗ್ನಿಯಾದ ನೀನು ಅಂಗಿರಾಋಷಿಯ ವಂಶಸ್ಥನಾದ ನನ್ನ ತಂದೆಗೆ ಪುತ್ರನಾಗಿ ಉತ್ಪನ್ನನಾಗಿರುವೆ ಎಂದು ಋಷಿಯು ಹೇಳಿರುವನು. ಅಗ್ನಿಗೂ ಅಂಗಿರಾಋಷಿಗೂ ಇರುವ ಸಂಬಂಧವಿಚಾರವನ್ನು ನಾವು ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿಯೇ ಪ್ರಸ್ತಾಪಿಸಿದ್ದೇವೆ.

॥ ವ್ಯಾಕರಣಪ್ರಕ್ರಿಯಾ ॥

**ಆಯವೇ**—ಆಯೋಃ ಎಂಬರ್ಥದಲ್ಲಿ ಆಯವೇ ಎಂದಾಗಿದೆ. ಆಯು ಶಬ್ದದ ಚತುರ್ಥ್ಯಂತ ರೂಪ. **' ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ '** (ಪಾ. ಸೂ. ೨-೩-೬೨-೧) ಎಂಬುದರಿಂದ ಚತುರ್ಥೀ.

**ನಹುಷಸ್ಯ**—ಣಹ ಬಂಧನೇ ಧಾತು. **' ನಹಿಕಲಿಹನ್ಯರ್ತಿಲಸಿಭ್ಯ ಉಷಚ್ '** (ಉ. ಸೂ ೪-೫೧೫) ಎಂಬುದರಿಂದ ಉಷಚ್ ಪ್ರತ್ಯಯ. ಧಾತುವಿನ ಆದಿಗೆ **ಣೋ ನಃ** ಎಂಬುದರಿಂದ ನಕಾರಾದೇಶ. ನಹುಷ ಶಬ್ದವಾಗುತ್ತದೆ. ಷಷ್ಠೀ ಏಕವಚನದಲ್ಲಿ ನಹುಷಸ್ಯ ಎಂದು ರೂಪವಾಗುತ್ತದೆ. ಚಿತ್ ಪ್ರತ್ಯಯಾಂತವಾದುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ **' ವೃಷಾದೀನಾಂ ಚ '** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಶ್ಪತಿಮ್**—ವಿಶಾಂ ಪತಿಃ ವಿಶ್ಪತಿಃ ತಂ ವಿಶ್ಪತಿಮ್. **ಪಂಾದಿಶ್ಛಂದಸಿ ಬಹುಲಂ** ' (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರವು ಬರುತ್ತದೆ.

**ಮನುಷಸ್ಯ**—ಮನ ಜ್ಞಾನೇ ಧಾತು. **ಮನೇರ್ನಿತ್** ಮನ ಧಾತುವಿಗೆ ಉಷಚ್ ಪ್ರತ್ಯಯಃ. ಅದಕ್ಕೆ ನಿತ್ವವೂ ಬರುತ್ತದೆ. ಮನುಷ ಶಬ್ದವಾಗುತ್ತದೆ ನಿದಂತವಾದುದರಿಂದ **' ಞ್ನಿತ್ಯಾದಿರ್ನಿತ್ಯಂ '** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಶಾಸನೀಮ್**—ಶಾಸು ಅನುಶಿಷ್ಟೌ. ಧಾತು. ಶಿಷ್ಯತೇ ಅನಯಾ ಇತಿ ಶಾಸನೀ. **' ಕರಣಾಧಿಕರಣಯೋಶ್ಚ '** (ಪಾ. ಸೂ. ೩-೩-೧೧೭) ಎಂಬುದರಿಂದ ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಅಲ್ಲಿ ಯು ಉಳಿಯುತ್ತದೆ. **' ಯುವೋರನಾಕೌ '** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಶಾಸನ ಶಬ್ದವಾಗುತ್ತದೆ. ಸ್ತ್ರೀತ್ವದಲ್ಲಿ **' ಟಿಡ್ಢಾಣಞ್ '** (ಪಾ. ಸೂ. ೪-೧-೧೫) ಎಂಬುದರಿಂದ ಟಿತ್ ಪ್ರತ್ಯಯಾಂತವಾದುದರಿಂದ ಙೀಪ್ ಬರುತ್ತದೆ. ಶಾಸನೀ ಎಂದು ರೂಪವಾಗುತ್ತದೆ. ಲಿತ್ ಪ್ರತ್ಯಯಾಂತವಾದುದರಿಂದ **' ಲಿತಿ '** ಸೂತ್ರದಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಮಮಕಸ್ಯ**—ಮಮ ಇದಂ ಮಮಕಂ. **' ತಸ್ಯೇದಂ '** (ಪಾ. ಸೂ. ೪-೩-೧೨೦) ಸೂತ್ರದಿಂದ ಅಸ್ಮದ್ ಶಬ್ದಕ್ಕೆ ಅಣ್ ಪರದಲ್ಲಿರುವಾಗ **' ತವಕಮಮಕಾವೇಕವಚನೇ '** (ಪಾ. ಸೂ. ೪-೩-೩) ಎಂಬುದರಿಂದ ಅಸ್ಮಚ್ಛಬ್ದಕ್ಕೆ (ಏಕತ್ವ ವಿಶಿಷ್ಟಾರ್ಥ ಪ್ರತಿಪಾದಕವಾಗುವಾಗ) ಮಮಕ ಎಂಬ ಆದೇಶ ಬರುತ್ತದೆ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ವೃದ್ಧಿಯು ಪ್ರಾಪ್ತವಾದರೆ ಅದು ವೃದ್ಧಿ ಸಂಜ್ಞಾಪೂರ್ವಕವಿಧಿಯಾದುದರಿಂದ **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬುದರಿಂದ ಇಲ್ಲಿ ವೃದ್ಧಿಯು ಬರುವುದಿಲ್ಲ. **ಯಸ್ಯೇತಿಚ** ಎಂಬುದರಿಂದ ಅಕಾರಲೋಪವಾದರೆ ಮಮಕ ಎಂಬ ಶಬ್ದವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರವು ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜಾಯತೇ**—ಜನೀ ಪ್ರಾದುರ್ಭಾವೇ ಧಾತು. ದಿವಾದಿ. **' ಜ್ಞಾ ಜನೋರ್ಜಾ '** (ಪಾ. ಸೂ. ೭-೩-೭೯) ಎಂಬುದರಿಂದ ಪ್ರಕೃತಿಗೆ ಜಾ ಆದೇಶ. **' ದಿವಾದಿಭ್ಯಃ ಶ್ಯನ್ '** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **' ಟಿತ ಆತ್ಮನೇ ಪದಾನಾಂ '** (ಪಾ. ಸೂ. ೩-೪-೭೯) ಎಂಬುದರಿಂದ ಲಿಟ್ಟಿನ ತ ವಿಭಕ್ತಿಗೆ ಏತ್ವ. ಜಾಯತೇ ಎಂದು ರೂಪವಾಗುತ್ತದೆ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ತಿಙಂತನಿಘಾತ ಪ್ರತಿಷೇಧ ಬರುವುದರಿಂದ ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ‖ ೧೧ ‖

॥ ಸಂಹಿತಾಪಾಠಃ ॥

ತ್ವಂ ನೋ ಅಗ್ನೇ ತವ ದೇವ ಪಾಯುಭಿರ್ಮಘೋನೋ ರಕ್ಷ ತನ್ವಶ್ಚ ವನ್ದ್ಯ ।
ತ್ರಾತಾ ತೋಕಸ್ಯ ತನಯೇ ಗವಾಮಸ್ಯನಿಮೇಷಂ ರಕ್ಷಮಾಣಸ್ತವ ವ್ರತೇ ॥ ೧೨ ॥

॥ ಪದಪಾಠಃ ॥

ತ್ವಂ । ನಃ । ಅಗ್ನೇ । ತವ । ದೇವ । ಪಾಯುಽಭಿಃ । ಮಘೋನಃ । ರಕ್ಷ । ತನ್ವಃ । ಚ । ವಂದ್ಯ ।
ತ್ರಾತಾ । ತೋಕಸ್ಯ । ತನಯೇ । ಗವಾಂ । ಅಸಿ । ಅನಿಽಮೇಷಂ । ರಕ್ಷಮಾಣಃ । ತವ । ವ್ರತೇ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ವಂದ್ಯ ವಂದನೀಯಾಗ್ನೇ ದೇವ ತ್ವಂ ತವ ಪಾಯುಭಿಸ್ತ್ವದೀಯೈಃ ಪಾಲನೈರ್ಮಘೋನೋ ಧನಯುಕ್ತಾನ್ನೋಽಸ್ಮಾನ್ ರಕ್ಷ । ತಥಾ ತನ್ವಶ್ಚ । ತನೂಃ ಪುತ್ರದೇಹಾನಪಿ ರಕ್ಷ । ತೋಕಸ್ಯಾಸ್ಮದೀಯಸ್ಯ ಪುತ್ರಸ್ಯ ಯಸ್ತನಯೋಽಸ್ಮತ್ಪೌತ್ರಾದಿಸ್ತವ ವ್ರತೇ ತ್ವದೀಯೇ ಕರ್ಮಣ್ಯನಿಮೇಷಂ ನಿರಂತರಂ ರಕ್ಷಮಾಣಃ ಸಾವಧಾನೋ ವರ್ತತೇ ತಸ್ಮಿನ್ಯಾ ಗಾವಃ ಸಂತಿ ತಾಸಾಂ ಗವಾಂ ತ್ರಾತಾ ರಕ್ಷಕೋಽಸಿ । ಈದೃಶಸ್ಯ ತವಾಸ್ಮದ್ರಕ್ಷಣೇ ಕಿಮು ವಕ್ತವ್ಯಮಿತ್ಯರ್ಥಃ ॥ ಮಘೋನಃ । ಶಸಿ ಶ್ವಯುವಮಘೋನಾಮತದ್ಧಿತೇ । ಪಾ. ೬-೪-೧೩೩ । ಇತಿ ಸಂಪ್ರಸಾರಣಂ । ತನ್ವಃ । ಸುಪಾಂ ಸುಪೋ ಭವಂತೀತಿ ಶಸೋ ಜಸಾದೇಶಃ । ಪೂರ್ವಸವರ್ಣದೀರ್ಘಸ್ಯ ದೀರ್ಘಾಜ್ಜಸಿ ಚೇತಿ ಪ್ರತಿಷೇಧಃ । ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ । ಶಸಿ ಹ್ಯುದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತ್ಯುದಾತ್ತತ್ವಂ ಸ್ಯಾತ್ ॥

‖ ಪ್ರತಿಪದಾರ್ಥ ‖

**ವಂದ್ಯ**—ಪೂಜ್ಯನೂ । **ದೇವ**—ದೇವತಾತ್ಮನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ತವ**—ನಿನ್ನ । **ಪಾಯುಭಿಃ**—ರಕ್ಷಣೆಗಳಿಂದ । **ಮಘೋನಃ**—ಧನಯುಕ್ತರಾದ । **ನಃ**—ನಮ್ಮನ್ನು । **ರಕ್ಷ**—ಕಾಪಾಡು । **ತನ್ವಶ್ಚ**—(ನಮ್ಮ ಪುತ್ರರ) ದೇಹಗಳನ್ನು (ರಕ್ಷಿಸು) । **ತವ**—ನಿನ್ನನ್ನು ಉದ್ದೇಶಿಸಿದ । **ವ್ರತೇ**—ಕರ್ಮದಲ್ಲಿ । **ಅನಿಮೇಷಂ**—ಅವಿಚ್ಛಿನ್ನವಾಗಿ । **ರಕ್ಷಮಾಣಃ**—ಸಾವಧಾನವಾಗಿರುವ । **ತೋಕಸ್ಯ-ತನಯೇ**—(ನನ್ನ) ಪುತ್ರನ ಪುತ್ರನಲ್ಲಿ (ರುವ) । **ಗವಾಂ**—ಗೋವುಗಳ । **ತ್ರಾತಾ**—ರಕ್ಷಕನಾಗಿ । **ಅಸಿ**—ಆಗಿದ್ದೀಯೆ.

‖ ಭಾವಾರ್ಥ ‖

ಪೂಜ್ಯನೂ ದೇವತಾತ್ಮನೂ ಆದ ಎಲೈ ಅಗ್ನಿಯೇ, ನಿನ್ನ ರಕ್ಷಣಾ ಸಹಾಯದಿಂದ ಧನಯುಕ್ತರಾದ ನಮ್ಮನ್ನು ಕಾಪಾಡು. ಮತ್ತು ನಮ್ಮ ಪುತ್ರಪ್ರಪೌತ್ರರ ದೇಹಗಳನ್ನು ರಕ್ಷಿಸು. ನಿನ್ನನ್ನು ಉದ್ದೇಶಿಸಿ ನೆರವೇರಿಸುವ ಕರ್ಮದಲ್ಲಿ ಅವಿಚ್ಛಿನ್ನವಾಗಿ ಶ್ರದ್ಧೆ ಸಾವಧಾನಗಳಿಂದಿರುವ ನಮ್ಮ ಮತ್ತು ನಮ್ಮ ಗೋವುಗಳ ರಕ್ಷಕನೂ ಆಗಿದ್ದೀಯೆ.

## English Translation.

Agni who deserves to be praised, preserve us and also our sons and grandsons; you are the protector of our cattle and you keep your worshippers in the performance of your rite.

‖ ವಿಶೇಷವಿಷಯಗಳು ‖

**ತೋಕಸ್ಯ ತನಯೇ**—**ತೋಕಸ್ಯ ಎಂದರೆ ಪುತ್ರನ** । ತೋಕಸ್ಯ ತನಯೇ ಎಂದರೆ ಪುತ್ರನ ಪುತ್ರನ ಅಥವಾ ಪ್ರಪೌತ್ರನ, ಮೊಮ್ಮಗನ ಎಂದರ್ಥವು.

**ಅನಿಮೇಷಂ**—**ನಿರಂತರಂ** । ಯಾವಾಗಲೂ.

**ತವ ವ್ರತೇ**—ನಿನ್ನ ಸಂಬಂಧವಾದ ಕರ್ಮಾನುಷ್ಠಾನದಲ್ಲಿ ಎಂದರೆ ನಿನ್ನ ಸಹಾಯದಿಂದ ಮಾಡುವ ಯಜ್ಞಾನುಷ್ಠಾನಕರ್ಮಗಳಲ್ಲಿ ಎಂದಭಿಪ್ರಾಯವು.

‖ ವ್ಯಾಕರಣಪ್ರಕ್ರಿಯಾ ‖

**ಮಘೋನಃ**—ಮಘವನ್ ಶಬ್ದ. ತೃತೀಯಾ ಬಹುವಚನ ಶಸ್ ಪರದಲ್ಲಿರುವಾಗ '**ಶ್ವಯುವಮಘೋನಾಮತದ್ಧಿತೇ**' (ಪಾ. ಸೂ. ೬-೪-೧೩೩) ಎಂಬುದರಿಂದ ಸಂಪ್ರಸಾರಣ. **ಇಗ್ಯಣಃ ಸಂಪ್ರಸಾರಣಂ** ಎಂದುದರಿಂದ ಇಲ್ಲಿ ವಕಾರಕ್ಕೆ ಉಕಾರರೂಪ ಸಂಪ್ರಸಾರಣವು ಬರುತ್ತದೆ. ಮಘ+ಉ+ಅನ್+ಅಸ್ ಎಂದಿರುವಾಗ '**ಸಂಪ್ರಸಾರಣಾಚ್ಚ**' ಸೂತ್ರದಿಂದ ಸಂಪ್ರಸಾರಣದ ಪರದ ಅಚ್ಚಿಗೆ ಪೂರ್ವರೂಪವು ಬರುತ್ತದೆ. ಅಕಾರಕ್ಕೆ ಉಕಾರ ಪರದಲ್ಲಿರುವುದರಿಂದ '**ಆದ್ಗುಣಃ**' ಸೂತ್ರದಿಂದ ಗುಣ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ಮಘೋನಃ ಎಂದು ರೂಪವಾಗುತ್ತದೆ.

**ತನ್ವಃ**—ತನೂ+ಶಸ್ ಎಂದಿರುವಾಗ '**ಸುಪಾಂ ಸುಪೋ ಭವಂತಿ**' ಎಂಬ ವಚನದಿಂದ ಶಸ್ಸಿಗೆ ಜಸಾದೇಶ ಬರುತ್ತದೆ. ತನೂ+ಅಸ್ ಎಂದಿರುವಾಗ '**ಪ್ರಥಮಯೋಃ ಪೂರ್ವಸವರ್ಣಃ**' ಎಂಬುದರಿಂದ ಪೂರ್ವಸವರ್ಣ ದೀರ್ಘವು ಪ್ರಾಪ್ತವಾದರೆ '**ದೀರ್ಘಾಜ್ಜಸಿ ಚ**' (ಪಾ. ಸೂ. ೬-೧-೧೦೫) ಎಂಬುದರಿಂದ ದೀರ್ಘದ ಪರದಲ್ಲಿ ಜಸ್ಸಿರುವುದರಿಂದ ನಿಷೇಧ ಬರುತ್ತದೆ. '**ಇಕೋ ಯಣಚಿ**' ಎಂಬುದರಿಂದ ಯಣಾದೇಶ. ತನ್ವಃ ಎಂದು ರೂಪ ವಾಗುತ್ತದೆ. '**ಉದಾತ್ತಸ್ವರಿತಯೋರ್ಯಣಃ**' ಎಂಬುದರಿಂದ ಉದಾತ್ತಸ್ಥಾನದಲ್ಲಿ ಯಣ್ ಬಂದುದರಿಂದ ಸ್ವರಿತ ಸ್ವರ ಬರುತ್ತದೆ. ಯದ್ಯಪಿ ಶಸ್ ಪರದಲ್ಲಿದ್ದರೂ ಹಿಂದಿನಂತೆಯೇ ರೂಪವಾಗುತ್ತದೆ. ಆದರೆ ಸ್ವರದಲ್ಲಿ ವ್ಯತ್ಯಾಸ ವಾಗುತ್ತದೆ. '**ಉದಾತ್ತಯಣೋ ಹಲ್ ಪೂರ್ವಾತ್**' (ಪಾ. ಸೂ. ೬-೧-೧೭೪) ಹಲ್ ಪೂರ್ವದಲ್ಲಿದ್ದು ಉದಾತ್ತಸ್ಥಾನಕ್ಕೆ ಬಂದಿರುವ ಯಣಿನಪರದಲ್ಲಿರುವ ಶಸಾದಿ ವಿಭಕ್ತಿಯು ಉದಾತ್ತವಾಗುತ್ತದೆ; ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರವು ಬರಬೇಕಾಗುವುದು. ಆದುದರಿಂದ ವ್ಯತ್ಯಯದಿಂದ ವಿಭಕ್ತಿ ವ್ಯತ್ಯಾಸವಾಗಿದೆ.

**ರಕ್ಷ**—ರಕ್ಷ ಪಾಲನೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷ ಏಕವಚನ. ಸಿಪ್ಪಿನ ಹಿ ಆದೇಶಕ್ಕೆ '**ಅತೋಹೇಃ**' ಎಂಬುದರಿಂದ ಲುಕ್. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ವಂದ್ಯ**—ವಂದಯಿತುಂ ಯೋಗ್ಯಃ ವಂದ್ಯಃ. ವದಿ. ಅಭಿವಾದನಸ್ತುತ್ಯೋಃ ಧಾತು. '**ಋಹಲೋರ್ಣ್ಯತ್**' ಸೂತ್ರದಿಂದ ಣ್ಯತ್. ಪ್ರತ್ಯಯ ಇದಿತ್ತಾದುದರಿಂದ ಧಾತುವಿಗೆ ನುಮಾಗಮ. ವಂದ್ಯ ಎಂದು ರೂಪವಾಗುತ್ತದೆ. ಸಂಬುದ್ಧಿಯ ರೂಪವಾದುದರಿಂದ '**ಆಮಂತ್ರಿತಸ್ಯ ಚ**' ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ತ್ವಮಗ್ನೇ ಯಜ್ಯವೇ ಪಾಯುರನ್ತರೋಽನಿಷಙ್ಗಾಯ ಚತು-
ರಕ್ಷ ಇಧ್ಯಸೇ ।
ಯೋ ರಾತಹವ್ಯೋಽವೃಕಾಯ ಧಾಯಸೇ ಕೀರೇಶ್ಚಿನ್ಮನ್ತ್ರಂ
ಮನಸಾ ವನೋಷಿ ತಂ ॥ ೧೩ ॥

॥ ಪದಪಾಠಃ ॥

ತ್ವಂ । ಅಗ್ನೇ । ಯಜ್ಯವೇ । ಪಾಯುಃ । ಅನ್ತರಃ । ಅನಿಷಙ್ಗಾಯ । ಚತುಃ-ಽಅಕ್ಷಃ । ಇಧ್ಯಸೇ ।

ಯಃ । ರಾತಽಹವ್ಯಃ । ಅವೃಕಾಯ । ಧಾಯಸೇ । ಕೀರೇಃ । ಚಿತ್ । ಮಂತ್ರಂ । ಮನಸಾ । ವನೋಷಿ । ತಂ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಯಜ್ಯವೇ ಯಷ್ಟುರ್ಯಜಮಾನಸ್ಯ ಪಾಯುಃ ಪಾಲಕಃ । ಅಂತರಃ ಸಮೀಪವರ್ತೀ ಸನ್ ಅನಿಷಂಗಾಯ ರಕ್ಷೋಭಿರಸಂಬದ್ಧಾಯ ಯಜ್ಞಾಯ ಚತುರಕ್ಷೋ ದಿಕ್ಚತುಷ್ಟಯೇಽಪೀಂದ್ರಿಯಸ್ಥಾನೀಯಜ್ವಾಲಾಯುಕ್ತ ಇಧ್ಯಸೇ । ದೀಪ್ಯಸೇ । ಅವೃಕಾಯಾಹಿಂಸಕಾಯ ಧಾಯಸೇ ಪೋಷಕಾಯ ತುಭ್ಯಂ ರಾತಹವ್ಯೋ ದತ್ತಹವಿಷ್ಕೋ ಯೋ ಯಜಮಾನೋಽಸ್ತಿ ಕೀರೇಶ್ಚಿತ್ಸ್ತೋತುರೇವ ಸತಸ್ತಸ್ಯ ಸಂಬಂಧಿನಂ ಮಂತ್ರಂ ತ್ವದೀಯಸ್ತೋತ್ರರೂಪಂ ಮನಸಾ ತ್ವದೀಯೇನ ಚಿತ್ತೇನ ವನೋಷಿ । ಯಾಚಸಿ ॥ ಯಜ್ಯವೇ । ಯಜಿಮನಿಶುಂಧೀತ್ಯಾದಿನಾ । ಉ. ೩-೨೦ । ಯಜತೇರ್ಯುಪ್ರತ್ಯಯಃ । ಪಾಯುಃ । ಕೃವಾಪಾಜೀತ್ಯಾದಿನಾ ಉಣ್ । ಆತೋ ಯುಕ್ ಚಿಣ್ಕೃತೋಃ । ಪಾ. ೭-೩-೩೩ । ಇತಿ ಯುಗಾಗಮಃ । ಅನಿಷಂಗಾಯ । ಷಸ್ಜ ಸಂಗೇ । ನ ವಿದ್ಯತೇ ನಿಷಂಗೋಽಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಚತುರಕ್ಷಃ । ಚತ್ವಾರ್ಯಕ್ಷೀಣಿ ಜ್ವಾಲಾರೂಪಾಣಿ ಯಸ್ಯಾಸೌ ಚತುರಕ್ಷಃ । ಬಹುವ್ರೀಹೌ ಸಕ್ಥ್ಯಕ್ಷ್ಣೋಃ । ಪಾ. ೫-೪-೧೧೩ । ಇತಿ ಸಮಾಸಾಂತಃ ಷಚ್ಪ್ರತ್ಯಯಃ । ಚಿತ ಇತ್ಯಂತೋದಾತ್ತತ್ವಂ । ಧಾಯಸೇ । ವಹಿಹಾಧಾಞ್ಭ್ಯಶ್ಛಂದಸೀತ್ಯಸುನ್ । ಣಿದಿತ್ಯನುವೃತ್ತೇರಾತೋ ಯುಕ್ ಚಿಣ್ಕೃತೋರಿತಿ ಯುಗಾಗಮಃ । ಕೀರೇಃ । ಕೄತ ಸಂಶಬ್ದನೇ । ಅಸ್ಮಾಣ್ಯಂತಾದಚ ಇರಿತೀಪ್ರತ್ಯಯೇ ಣಿಲೋಪೇ ಧಾತೋರಂತ್ಯಲೋಪಶ್ಛಾಂದಸಃ । ಮಂತ್ರಂ । ಮತ್ರಿ ಗುಪ್ತಭಾಷಣೇ । ಪಚಾದ್ಯಚಿ ವೃಷಾದಿಷು ಪಾಠಾದಾದ್ಯುದಾತ್ತತ್ವಂ । ವನೋಷಿ । ವನು ಯಾಚನೇ । ತನಾದಿಕೃಞ್ಭ್ಯ ಉಃ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಯಜ್ಯವೇ**—ಯಜ್ಞಕರ್ತನಾದ ಯಜಮಾನನಿಗೆ । **ಪಾಯುಃ**—ಪಾಲಕನಾಗಿಯೂ । **ಅಂತರಃ**—ಅತ್ಯಂತ ಸಮೀಪದಲ್ಲಿದ್ದುಕೊಂಡು । **ಅನಿಷಂಗಾಯ**—(ನಿನ್ನ ರಕ್ಷಣೆಯಿಂದ) ವಿಘ್ನವಿಲ್ಲದೇ ನೆರವೇರುವ ಯಜ್ಞಕ್ಕೆ । **ಚತುರಕ್ಷಃ**—(ನಾಲ್ಕು ದಿಕ್ಕುಗಳಲ್ಲಿಯೂ) ನಾಲ್ಕು ಕಣ್ಣುಗಳ

ರೂಪದಿಂದ ಬೆಳಗುವ ಜ್ವಾಲೆಯಿಂದ ಕೂಡಿ । **ಇಧ್ಯಸೇ**—ಪ್ರಕಾಶಿಸುತ್ತೀಯೆ । **ಅವೃಕಾಯ**—ಅಹಿಂಸಕ ನಾಗಿಯೂ । **ಧಾಯಸೇ**—ಉಪಕಾರಕನಾಗಿಯೂ ಇರುವ ನಿನಗೆ । **ರಾತಹವ್ಯಃ**—ಹವಿಸ್ಸನ್ನು ಅರ್ಪಿಸಿದ । **ಯಃ**—ಯಾವ ಯಜಮಾನನಿರುವನೋ । **ಕೀರೇಶ್ಚಿತ್**—(ನಿನ್ನನ್ನು) ಸ್ತೋತ್ರಮಾಡುವ ಆ ಯಜಮಾನನ । **ಮಂತ್ರಂ**—ಮಂತ್ರರೂಪವಾದ ಸ್ತೋತ್ರವನ್ನು । **ಮನಸಾ**—ನಿನ್ನ ಮನಸ್ಸಿನಲ್ಲಿಯೇ । **ವನೋಷಿ**—ಆದರ ದಿಂದ ಚಿಂತಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಯಜ್ಞಕರ್ತನಾದ ಯಜಮಾನನಿಗೆ ಪಾಲಕನಾಗಿಯೂ ಮತ್ತು ಅವನ ಅತ್ಯಂತ ಸಮೀಪದಲ್ಲಿದ್ದುಕೊಂಡು ನಿನ್ನ ರಕ್ಷಣೆಯಿಂದ ವಿಘ್ನವಿಲ್ಲದೇ ನೆರವೇರುವ ಯಜ್ಞಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಕಣ್ಣುಗಳ ರೂಪದಲ್ಲಿರುವ ಜ್ವಾಲೆಯಿಂದ ಕೂಡಿಯೂ ಪ್ರಕಾಶಿಸುತ್ತೀಯೆ. ಅಹಿಂಸಕನಾಗಿಯೂ, ಉಪಕಾರಕನಾಗಿಯೂ ಇರುವ ನಿನಗೆ ಹವಿಸ್ಸನ್ನು ಅರ್ಪಿಸಿದ ಯಜಮಾನನ ಮಂತ್ರರೂಪವಾದ ಸ್ತೋತ್ರವನ್ನು ಆದರದಿಂದ ಸ್ವೀಕರಿಸಿ ಅದನ್ನು ನಿನ್ನ ಮನಸ್ಸಿನಲ್ಲಿ ಚಿಂತಿಸುತ್ತೀಯೆ.

## English Translation.

Agni, you are four-eyed and shine with brightness (or blaze) as the protector of the worshipper; you are at hand to support the praiser in the uninterrupted rite; you cherish in your mind the prayer of your adorer who offers oblations to you, the harmless and the benevolent.

॥ ವಿಶೇಷವಿಷಯಗಳು ॥

**ಅನಿಷಂಗಾಯ—ಷಜ್ಞ ಸಂಗೇ । ನ ವಿದ್ಯತೇ ನಿಷಂಗೋಽಸ್ಯೇತಿ ।** ವಿಘ್ನರಹಿತವಾದ, ಯಾವ ತಡೆಯೂ ಇಲ್ಲದೆ ನಡೆಯುವ.

**ಚತುರಕ್ಷಃ—ಚತ್ವಾರ್ಯಕ್ಷೀಣಿ ಜ್ವಾಲಾರೂಪಾಣಿ ಯಸ್ಯಾಸೌ ಚತುರಕ್ಷಃ ।** ನಾಲ್ಕು ಕಣ್ಣುಗಳುಳ್ಳ. ಇಲ್ಲಿ ಕಣ್ಣುಗಳೆಂದರೆ ದಿಕ್ಕುಗಳೆಂದರ್ಥವು. **ಅಕ್ಷಿಭಿಶ್ಚಾತ್ರ ಮುಖಾನಿ ಲಕ್ಷ್ಯಂತೇ । ದಿಕ್ಚತುಷ್ಟಯಾಭಿಮುಖೋ ದೀಪ್ಯಸೇ** ನಾಲ್ಕು ದಿಕ್ಕುಗಳಿಗೆ ಅಭಿಮುಖನಾಗಿ ಎಂದರೆ ಯಜ್ಞವೇದಿಯ ನಾಲ್ಕು ದಿಕ್ಕುಗಳಲ್ಲಿಯೂ ಬೆಳಗುತ್ತೀಯೆ ಎಂದಭಿಪ್ರಾಯವು.

**ರಾತಹವ್ಯಃ—ದತ್ತಹವ್ಯಃ ।** ಹವಿಸ್ಸನ್ನು ಅರ್ಪಿಸಿರುವ.

**ಅವೃಕಾಯ—ಅಹಿಂಸಕಾಯ ।** ಹಿಂಸಾರಹಿತನಾದ.

**ಕೀರೇಶ್ಚಿತ್—ಕೄತ ಸಂಶಬ್ದನೇ । ಸ್ತೋತುರೇವ ।** ಸ್ತೋತ್ರಮಾಡುವವನ.

**ಯಜ್ಯವೇ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಭ್ವಾದಿ. **' ಯಜಿಮನಿಶುಂಧಿ-'** (ಉ. ಸೂ. ೩-೩೦೦) ಎಂಬುದರಿಂದ ಇದಕ್ಕೆ ಯು ಪ್ರತ್ಯಯ. ಯಜ್ಯು ಶಬ್ದವಾಗುತ್ತದೆ. ಚತುರ್ಥೀ ಏಕವಚನ ದಲ್ಲಿ ಘಿ ಸಂಜ್ಞಾ ಇರುವುದರಿಂದ **'ಘೇರ್ಙಿತಿ'** ಎಂಬುದರಿಂದ ಗುಣ ಅವಾದೇಶ ಬಂದರೆ ಯಜ್ಯವೇ ಎಂದು ರೂಪವಾಗುತ್ತದೆ.

**ಪಾಯುಃ**—ಪಾ ರಕ್ಷಣೇ ಧಾತು. ಅದಾದಿ. **' ಕೃವಾಪಾಜಿಮಿಸ್ವದಿ-'** (ಉ. ಸೂ. ೧-೧) ಸೂತ್ರದಿಂದ ಉಣ್. ಕ್ತ+ಉ. ಎಂದಿರುವಾಗ **' ಆತೋ ಯುಕ್ ಚಿಣ್ ಕೃತೋಃ '** (ಪಾ. ಸೂ. ೭-೩-೩೩) ಎಂಬುದರಿಂದ ಆದಂತವಾದ ಧಾತುವಾದುದರಿಂದ ಧಾತುವಿಗೆ ಯುಕಾಗಮ. ಪಾಯುಃ ಎಂದು ರೂಪವಾಗುತ್ತದೆ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅನಿಷಙ್ಗಾಯ**—ಷಞ್ಜ ಸಂಗೇ. ಧಾತು. ನಿಪೂರ್ವಕವಾದ ಈ ಧಾತುವಿಗೆ ಘಞ್ ಪ್ರತ್ಯಯ. ನಿಷಙ್ಗ ಎಂದಾಗುತ್ತದೆ. ನ ವಿದ್ಯತೇ ನಿಷಙ್ಗಃ ಅಸ್ಯ ಅನಿಷಙ್ಗಃ. ಬಹುವ್ರೀಹಿಸಮಾಸ. ಚತುರ್ಥೀ ಏಕವಚನರೂಪ. **'ನಞ್ಸುಭ್ಯಾಂ'** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರವು ಬರುತ್ತದೆ.

**ಚತುರಕ್ಷಃ**—ಚತ್ವಾರಿ ಅಕ್ಷೀಣಿ ಜ್ವಾಲಾರೂಪಾಣಿ ಯಸ್ಯ ಸಃ ಚತುರಕ್ಷಃ ಬಹುವ್ರೀಹಿಸಮಾಸ. **'ಬಹು ವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಂಗಾತ್ ಷಚ್'** ( ಪಾ. ಸೂ. ೫-೪-೧೧೩) ಎಂಬುದರಿಂದ ಅಕ್ಷಿ ಶಬ್ದಕ್ಕೆ ಸಮಾ- ಸಾಂತವಾಗಿ ಷಚ್ ಪ್ರತ್ಯಯ ಬರುತ್ತದೆ. ಷಚ್ ಚಿತ್ತಾದುದರಿಂದ **' ಚಿತಃ '** ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ.

**ಇಧ್ಯಸೇ**—ಞಿಇಂಧೀ ದೀಪ್ತೌ ಧಾತು. ಕರ್ಮಣಿ ಲಟ್. **' ಸಾರ್ವಧಾತುಕೇಯಕ್ '** ಎಂಬುದರಿಂದ ಯಕ್ ಬರುತ್ತದೆ. ಯಕ್‌ಪರದಲ್ಲಿರುವಾಗ **' ಅನಿದಿತಾಂಹಲ '** ಸೂತ್ರದಿಂದ ನಲೋಪ. ಥಾಸಿಗೆ ಸೇ ಆದೇಶ. ಇಧ್ಯಸೇ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಧಾಯಸೇ**—ಡುಧಾಞ್ ಧಾರಣಪೋಷಣಯೋಃ ಧಾತು. **' ವಹಿಹಾಧಾಞ್‌ಭ್ಯಶ್ಛಂದಸಿ '** (ಉ ಸೂ. ೪-೬೬೦) ಎಂಬುದರಿಂದ ಅಸುನ್. **' ವಸೇರ್ಣಿತ್ '** ಎಂಬುದರಿಂದ ಣಿತ್ ಅನುವೃತ್ತವಾಗುತ್ತದೆ. ಆದುದರಿಂದ **' ಆತೋಯುಕ್‌ಚಿಣ್‌ಕೃತೋಃ '** ಎಂಬುದರಿಂದ ಆದಂತಧಾತುವಾದುದರಿಂದ ಯುಕಾಗಮ ಬರುತ್ತದೆ. ಧಾಯಸ್ ಶಬ್ದವಾಗುತ್ತದೆ. ಚತುರ್ಥೀಏಕವಚನದಲ್ಲಿ ಧಾಯಸೇ ಎಂದು ರೂಪವಾಗುತ್ತದೆ. ನಿತ್‌ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕೀರೇಃ**—ಕೄತ ಸಂಶಬ್ದನೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **' ಹೇತುಮತಿಚ '** ಎಂಬುದರಿಂದ ಣಿಚ್. **' ಸನಾದ್ಯಂತಾಧಾತವಃ '** ಎಂಬುದರಿಂದ ಣಿಜಂತಕ್ಕೆ ಧಾತುಸಂಜ್ಞಾ ಅಜಂತಧಾತುವಾದು ದರಿಂದ **' ಅಚ ಇಃ '** (ಉ. ಸೂ ೪-೫೭೮) ಎಂಬುದರಿಂದ ಇ ಪ್ರತ್ಯಯ. ಇಪ್ರತ್ಯಯ ಪರದಲ್ಲಿರುವಾಗ **'ಣೇರನಿಟಿ** ಎಂಬುದರಿಂದ ಣಿಲೋಪ. ಧಾತುವಿನ ಅಂತ್ಯ ತಕಾರಕ್ಕೆ ಛಾಂದಸವಾದ ಲೋಪ. ಆಗ **' ಋತ ಇದ್ಧಾತೋಃ '** ಎಂಬುದರಿಂದ ಋಕಾರಕ್ಕೆ ಇತ್ವ. **' ಉರಣ್‌ರಪರಃ '** ಎಂಬುದರಿಂದ ರಪರವಾಗಿ ಬರುವುದರಿಂದ ಇರ್ ಬರುತ್ತದೆ.

ಉಪಧಾದೀರ್ಘ. ಕೀರಿ ಎಂದು ಶಬ್ದ. ಷಷ್ಠೀಏಕವಚನದಲ್ಲಿ ಕೀರೇಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮಂತ್ರಮ್**—ಮತ್ರಿ ಗುಪ್ತಪರಿಭಾಷಣೆ ಧಾತು. ಇದಿತ್ತಾದುದರಿಂದ ನುಮಾಗಮ ಪಚಾದಿಯಲ್ಲಿ ಸೇರಿರುವುದರಿಂದ "**ನಂದಿಗ್ರಹ**" ಸೂತ್ರದಿಂದ ಅಚ್. ಮಂತ್ರ ಎಂದು ರೂಪವಾಗುತ್ತದೆ. "**ಚಿತಃ**" ಎಂಬುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ ಇದು ವೃಷಾದಿಯಲ್ಲಿ ಸೇರಿರುವುದರಿಂದ "**ವೃಷಾದೀನಾಂ ಚ**" (ಪಾ. ಸೂ.-೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

"**ವನೋಷಿ**"—ವನು ಯಾಚನೇ, ಧಾತು, ತನಾದಿ, ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. '**ತನಾದಿಕೃಞ್ಭ್ಯ ಉಃ**' (ಪಾ. ಸೂ. ೩-೧-೭೯) ಎಂಬುದರಿಂದ ಉ. ವಿಕರಣ. ವನು+ಸಿ ಎಂದಿರುವಾಗ ಸಿಪ್. ನಿಮಿತ್ತಕವಾಗಿ ಉಕಾರಕ್ಕೆ ಗುಣ. ಇಣ್ಣಿನ ಪರದಲ್ಲಿರುವುದರಿಂದ '**ಆದೇಶಪ್ರತ್ಯಯಯೋಃ**' ಸೂತ್ರದಿಂದ ಸಿಪ್ಪಿನ ಸಕಾರಕ್ಕೆ ಷತ್ವ. ವನೋಷಿ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ವನೋಷಿ ಎಂಬುದು ಮಧ್ಯೋದಾತ್ತವಾದ ಶಬ್ದವಾಗುತ್ತದೆ. ॥ ೧೩ ॥

॥ ಸಂಹಿತಾಪಾಠಃ ॥

ತ್ವಮಗ್ನ ಉರುಶಂಸಾಯ ವಾಘತೇ ಸ್ಪಾರ್ಹಂ ಯದ್ರೇಕ್ಣಃ
ಪರಮಂ ವನೋಷಿ ತತ್ ।
ಆಧ್ರಸ್ಯ ಚಿತ್ಪ್ರಮತಿರುಚ್ಯಸೇ ಪಿತಾ ಪ್ರ ಪಾಕಂ ಶಾಸ್ಸಿ
ಪ್ರ ದಿಶೋ ವಿದುಷ್ಟರಃ ॥ ೧೪ ॥

॥ ಪದಪಾಠಃ ॥

ತ್ವಂ । ಅಗ್ನೇ । ಉರುಽಶಂಸಾಯ । ವಾಘತೇ । ಸ್ಪಾರ್ಹಂ । ಯತ್ । ರೇಕ್ಣಃ ।
ಪರಮಂ । ವನೋಷಿ । ತತ್ ।

ಆಧ್ರಸ್ಯ । ಚಿತ್ । ಪ್ರऽಮತಿಃ । ಉಚ್ಯಸೇ । ಪಿತಾ । ಪ್ರ । ಪಾಕಂ । ಶಾಸ್ಸಿ । ಪ್ರ । ದಿಶಃ । ವಿದುಃऽತರಃ ॥ ೧೪ ॥

॥ ಸಾಯಣ ಭಾಷ್ಯಂ ॥

ಹೇ ಅಗ್ನೇ ತ್ವಮುರುಶಂಸಾಯ ಬಹುಭಿಃ ಸ್ತೋತವ್ಯಾಯ ವಾಘತೇ ಋತ್ವಿಜೇ ತದುಪಕಾರಾರ್ಥಂ ಸ್ಪಾರ್ಹಂ ಸ್ಪೃಹಣೀಯಂ ಪರಮುತ್ತಮಂ ಯದ್ರೇಕ್ಣೋ ಧನಮಸ್ತಿ ತದ್ಧನಂ ವನೋಷಿ । ಅನುಷ್ಠಾತಾ ಲಭತಾಮಿತಿ ಕಾಮಯಸೇ । ತಥಾ ತ್ವಮಾಧ್ರಸ್ಯ ಚಿತ್ ಸರ್ವತೋ ಧಾರಣೀಯಸ್ಯ ಪೋಷಣೀಯಸ್ಯ ದುರ್ಬಲಸ್ಯ ಯಜಮಾನಸ್ಯಾಪಿ ಪ್ರಮತಿಃ ಪ್ರಕೃಷ್ಟಬುದ್ಧಿಯುಕ್ತಃ ಪಿತಾ ಪಾಲಕ ಇತ್ಯಭಿಜ್ಞೈರುಚ್ಯಸೇ । ತಥಾ ವಿದುಷ್ಟರೋऽತಿಶಯೇನಾಭಿಜ್ಞಸ್ತ್ವಂ ಪಾಕಂ ಶಿಶುಂ । ಪೋತಃ ಪಾಕೋऽರ್ಭಕೋ ಡಿಂಭಃ । ಅಮ. ೨-೫-೩೮ । ಇತ್ಯಭಿಧಾನಾತ್ । ಯಾಸ್ಕೋऽಪ್ಯೇವಮಾಹ । ಪಾಕಃ ಪಕ್ತವ್ಯೋ ಭವತಿ । ನಿ. ೩-೧೨ । ತಥಾವಿಧಂ ಯಜಮಾನಂ ಪ್ರ ಶಾಸ್ಸಿ । ಪ್ರಕರ್ಷೇಣಾನುಶಿಷ್ಟಂ ಕರೋಷಿ । ತಥಾ ದಿಶಃ ಪ್ರಾಚ್ಯಾದಿಕಾಃ ಪ್ರ ಶಾಸ್ಸಿ । ತ್ವದೀಯಶಾಸನಾಭಾವೇऽನುಷ್ಠಾತೄಣಾಂ ವಿಭ್ರಮಃ ಸ್ಯಾತ್ । ತಥಾ ಚ ಶ್ರೂಯತೇ । ದೇವಾ ವೈ ದೇವಯಜನಮಧ್ಯವಸಾಯ ದಿಶೋ ನ ಪ್ರಜಾನನ್ । ತೈ. ಸಂ. ೬ ೧-೫-೧ । ಇತಿ । ಸ ಭ್ರಮೋ ದಕ್ಷಿಣಾದಿಗ್ಗತೋऽಗ್ನಿನಾ ನಿವರ್ತತೇ । ತದಪಿ ತತ್ರೈವಾಮ್ನಾತಂ । ಪಥ್ಯಾಂ ಸ್ವಸ್ತಿಮಯಜನ್ ಪ್ರಾಚೀಮೇವ ತಥಾ ದಿಶಂ ಪ್ರಾಜಾನನ್ನಗ್ನಿನಾ ದಕ್ಷಿಣೇತಿ । ಐತರೇಯಿಣಾಪಿ ತಥೈವಾಮ್ನಾತಂ । ಅಥೋ ಏತಂ ವರಮವೃಣೀತ ಮಯ್ಯೈವ ಪ್ರಾಚೀಂ ದಿಶಂ ಪ್ರಜಾನಾಥಾಗ್ನಿನಾ ದಕ್ಷಿಣಾಂ । ಐ. ಬ್ರಾ. ೧-೭ । ಇತಿ ॥ ಉರುಶಂಸಾಯ । ಶನ್ಸು ಸ್ತುತೌ । ಶಸ್ಯತ ಇತಿ ಶಂಸಃ । ಕರ್ಮಣಿ ಘಞ್ । ಞಿತ್ಸ್ವರೇಣಾದ್ಯುದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಸ್ಪಾರ್ಹಂ । ಸ್ಪೃಹಾಸಂಬಂಧಿ । ತಸ್ಯೇದಮಿತ್ಯಣ್ । ರೇಕ್ಣಃ । ರಿಚಿರ್ ವಿರೇಚನೇ । ರಿಚೇರ್ಧನೇ । ಉ. ೪-೧೯೮ । ಇತ್ಯಸುನ್ । ಚಕಾರಾನ್ನುಡಾಗಮಃ । ಚಜೋಃ ಕು ಘಿಣ್ಯತೋಃ । ಪಾ. ೭-೩-೫೨ । ಇತಿ ಕುತ್ವಂ । ಆಧ್ರಸ್ಯ । ಧ್ರೈ ತೃಪ್ತೌ । ಆದೇಚ ಉಪದೇಶೇऽಶಿತೀತ್ಯಾತ್ವಂ । ಆತಶ್ಚೋಪಸರ್ಗೇ । ಪಾ. ೩-೧-೧೩೬ । ಇತಿ ಕಪ್ರತ್ಯಯಃ । ಶಾಸ್ಸಿ । ಶಾಸು ಅನುಶಿಷ್ಟೌ । ಅದಾದಿತ್ವಾಚ್ಛಪೋ ಲುಕ್ । ಸಿಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಪಾಕಂ ಚ ಪ್ರಶಾಸ್ಸಿ ದಿಶಶ್ಚ ಪ್ರಶಾಸ್ಸೀತ್ಯತ್ರ ಚಾರ್ಥೋ ಗಮ್ಯತೇ । ಅತಶ್ಚಾದಿ ಲೋಪೇ ವಿಭಾಷೇತಿ ಪ್ರಥಮಾ ತಿಙ್ವಿಭಕ್ತಿರ್ನ ನಿಹನ್ಯತೇ । ವಿದುಷ್ಟರಃ । ವಿದ್ವಚ್ಛಬ್ದಾತ್ತರಪ್ಯಯಸ್ಮಯಾದೀನಿ ಛಂದಸಿ । ಪಾ. ೧-೪-೨೦ । ಇತಿ ಭಸಂಜ್ಞಾಯಾಂ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ ಪರಪೂರ್ವತ್ವಂ । ಶಾಸಿವಸೀತಿ ಷತ್ವಂ । ತರಪಃ ಪಿತ್ತ್ವಾದನುದಾತ್ತತ್ವೇ ವಸೋಃ ಸ್ವರೇಣೋಕಾರ ಉದಾತ್ತಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಉರುಶಂಸಾಯ**—ಅನೇಕರಿಂದ ಹೊಗಳಲ್ಪಡುವ । **ವಾಘತೇ**—ಋತ್ವಿಕ್ಕಿಗೆ । **ಸ್ಪಾರ್ಹಂ**—ಇಷ್ಟವಾದುದೂ । **ಪರಮಂ**—ಶ್ರೇಷ್ಠವಾದುದೂ ಆದ । **ಯದ್ರೇಕ್ಣಃ**—ಯಾವ ಧನವುಂಟೋ । **ತತ್**—ಆ ಧನವನ್ನು । **ವನೋಷಿ**—(ಯಜ್ಞಕರ್ತನು ಹೊಂದಲಿ ಎಂದು) ಆಶಿಸುತ್ತೀಯೆ (ಹಾಗೆಯೇ) । **ಆಧ್ರಸ್ಯ ಚಿತ್**—(ರಕ್ಷಣೆಗೆ ಅರ್ಹನಾದ) ದುರ್ಬಲನಾದ ಯಜಮಾನನಿಗೂ ಕೂಡ । **ಪ್ರಮತಿಃ**—ಅನುಗ್ರಹಬುದ್ಧಿಯುಳ್ಳವನಾಗಿಯೂ । **ಪಿತಾ**—ಪಾಲಕನಾಗಿಯೂ (ಇರುವೆ ಎಂದು) । **ಉಚ್ಯಸೇ**—(ತಿಳಿದವರಿಂದ) ಹೇಳಿಸಿಕೊಳ್ಳುತ್ತೀಯೆ । **ವಿದುಷ್ಟರಃ**—ಅತ್ಯಂತ ಪ್ರಾಜ್ಞನಾದ ನೀನು । **ಪಾಕಂ**—ಶಿಶುವಿನಂತೆ ತಿಳಿಯದ ಯಜಮಾನನನ್ನು । **ಪ್ರಶಾಸ್ಸಿ**—ಶಿಕ್ಷಣದಿಂದ ತಿಳಿಯುವವನನ್ನಾಗಿ ಮಾಡುತ್ತೀಯೆ । **ದಿಶಃ**—ಪ್ರಾಚ್ಯಾದಿ ದಿಕ್ಕುಗಳನ್ನು । **ಪ್ರ (ಶಾಸ್ಸಿ)**—ವಿವರಿಸಿ ತೋರಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಅನೇಕರಿಂದ ಹೊಗಳಲ್ಪಡುವ ಋತ್ವಿಕ್ಕಿಗೆ ಇಷ್ಟವಾದುದೂ ಶ್ರೇಷ್ಠವಾದುದೂ ಆದ ಧನವನ್ನು ಯಜ್ಞಕರ್ತನೂ ಹೊಂದಲಿ ಎಂದು ಆಶಿಸುತ್ತೀಯೆ. ರಕ್ಷಣೆಗೆ ಅರ್ಹನಾದ ಯಜಮಾನನು ದುರ್ಬಲನಾಗಿದ್ದರೂ ಅವನಿಗೆ ಅನುಗ್ರಹ ಬುದ್ಧಿಯುಳ್ಳವನಾಗಿಯೂ ಅವನ ಪಾಲಕನಾಗಿಯೂ ಇರುವೆ ಎಂದು ತಿಳಿದವರು ಹೇಳುತ್ತಾರೆ. ಅತ್ಯಂತ ಪ್ರಾಜ್ಞನಾದ ನೀನು ಶಿಶುವಿನಂತೆ ತಿಳಿಯದ ಯಜಮಾನನನ್ನೂ ನಿನ್ನ ಶಿಕ್ಷಣದಿಂದ ತಿಳಿಯುವವನನ್ನಾಗಿ ಮಾಡುತ್ತೀಯೆ. ಮತ್ತು ಅವನಿಗೆ ಅನುಕೂಲವಾಗುವಂತೆ ಪ್ರಾಚ್ಯಾದಿ ದಿಕ್ಕುಗಳನ್ನೂ ವಿವರಿಸಿ ತೋರಿಸುತ್ತೀಯೆ.

## English Translation.

Agni, you desire that excellent wealth which is required for the priest ; you are called protector of the worshipper who ever needs protection ; you are all-wise, instructs the disciple and teaches the ignorant, the four points of the horizon.

॥ ವಿಶೇಷವಿಷಯಗಳು ॥

**ಸ್ಪಾರ್ಹಂ—ಸ್ಪೃಹಣೀಯಂ** । ಸರ್ವರಿಂದಲೂ ಅಪೇಕ್ಷಿಸಲ್ಪಡುವ, ಎಲ್ಲರಿಗೂ ಬೇಕಾದ.

**ರೇಕ್ಣಃ—ಧನಂ** । ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ರೇಕ್ಣಶಬ್ದವು ಪಠಿತವಾಗಿರುವುದರಿಂದ ರೇಕ್ಣಃ ಎಂದರೆ ಧನವು (ನಿ. ೩–೯).

**ಆಧ್ರಸ್ಯ—ಧ್ರೈ ತೃಪ್ತೌ** । ರಕ್ಷಣೆಯಿಲ್ಲದಿರುವ ಅಶಕ್ತನಾದ ಯಜಮಾನನಿಗೆ.

**ಪಿತಾ—ಪಾಲಕಃ** । ಸಂರಕ್ಷನು.

**ಪಾಕಂ—ಶಿಶುಂ** । ಶಿಶುವಿನಂತೆ ಏನೂ ತಿಳಿಯದವನನ್ನು.

**ವಿದುಷ್ಟರಃ**— **ಅತಿಶಯೇನ ವಿದ್ವಾನ್ । ಅತಿಶಯೇನಾಭಿಜ್ಞಃ ।** ಅತ್ಯಂತ ಪ್ರಾಜ್ಞನಾದವನು.

**ದಿಶಃ**— ಪೂರ್ವಾದಿದಿಕ್ಕುಗಳು. ಯಜ್ಞಮಾಡುವಾಗ ದೇವತೆಗಳಿಗೆ ಪ್ರಾಚ್ಯಾದಿದಿಕ್ಕುಗಳು ತಿಳಿಯದೇ ಹೋದದ್ದರಿಂದ ದಿಕ್ಕುಗಳನ್ನು ಅದರಲ್ಲಿಯೂ ದಕ್ಷಿಣದಿಕ್ಕನ್ನು ಅಗ್ನಿಯಿಂದ ತಿಳಿದುಕೊಂಡರೆಂದು ವೇದದ ಅನೇಕ ಕಡೆಗಳಲ್ಲಿ ಹೇಳಿರುವುದು. ಆ ಶ್ರುತಿವಾಕ್ಯಗಳನ್ನು ಭಾಷ್ಯಕಾರರು ಇಲ್ಲಿ ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**' ಉರುಶಂಸಾಯ '**— ಶಂಸು ಸ್ತುತೌ ಧಾತು. ಶಸ್ಯತೇ ಇತಿ ಶಂಸಃ ಕರ್ಮಾರ್ಥದಲ್ಲಿ ಘಞ್ ಪ್ರತ್ಯಯ ಬರುತ್ತದೆ. ಶಂಸ ಎಂಬ ಶಬ್ದವಾಗುತ್ತದೆ. ಘಞ್ ಞಿತ್ತಾದುದರಿಂದ **' ಞ್ನಿತ್ಯಾದಿರ್ನಿತ್ಯಂ '** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಉರು ಎಂಬ ಗತಿಸಂಜ್ಞೆಯುಳ್ಳ ಪದದೊಡನೆ ಸಮಾಸ ವಾದಾಗ **' ಗತಿಕಾರಕೋಪಪದಾತ್ ಕೃತ್ '** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಸ್ಪಾರ್ಹಮ್**— ಸ್ಪೃಹಾಯಾ ಇದಂ ಸ್ಪಾರ್ಹಂ **' ತಸ್ಯೇದಮ್ '** ಸೂತ್ರದಿಂದ ಅಣ್ ಪ್ರತ್ಯಯ **' ಯಸ್ಯೇತಿಃ ಚ '** ಎಂಬುದರಿಂದ ಆಕಾರಲೋಪ **' ತದ್ಧಿತೇಷ್ವಚಾಮಾದೇಃ '** ಎಂಬುದರಿಂದ ಆದಿವೃದ್ಧಿ ಸ್ಪಾರ್ಹಂ ಎಂದು ರೂಪವಾಗುತ್ತದೆ.

**ರೇಕ್ಣಃ**— ರಿಚಿರ್ ವಿರೇಚನೇ ಧಾತು ಇರಿತ್. **' ರಿಚೇರ್ಧನೇ ಘಿಚ್ಚ '** (ಉ. ಸೂ. ೪-೬೩೮) ಎಂಬುದ ರಿಂದ ಅಸುನ್. ಅದಕ್ಕೆ ಘಿದ್ವದ್ಭಾವ. ಚಕಾರದಿಂದ ನುಡಾಗಮವೂ ಬರುತ್ತದೆ. ಅಸುನ್ ಪರದಲ್ಲಿರುವಾಗ ಧಾತುವಿನ ಲಘೂಪಧೆಗೆ ಗುಣ. ರೇಚ್ನಸ್ ಎಂದಿರುವಾಗ **' ಚಜೋಃ ಕು ಘಿಣ್ಣ್ಯತೋಃ '** (ಪಾ. ಸೂ. ೭-೩-೫೨) ಎಂಬುದ ರಿಂದ ಚಕಾರಕ್ಕೆ ಕುತ್ವ. ಕುತ್ವ ಬಂದಮೇಲೆ ಕಕಾರ ಮಧ್ಯದಲ್ಲಿರುವುದರಿಂದ **' ಅಟ್ ಕು-'** ಸೂತ್ರದಿಂದ ನಕಾರಕ್ಕೆ ಣತ್ವ ಬಂದರೆ ರೇಕ್ಣಃ ಎಂದು ರೂಪವಾಗುತ್ತದೆ.

**ಆಧ್ರಸ್ಯ**— ಧ್ರೈ ತೃಪ್ತೌ, ಧಾತು, ಆಙ್ ಉಪಸರ್ಗ. **' ಆದೇಚ ಉಪದೇಶೇಽಶಿತಿ '** (ಪಾ. ಸೂ. ೬-೧-೪೫) ಉಪದೇಶಕಾಲದಲ್ಲಿ ಏಜಂತವಾದ ಧಾತುವಿಗೆ ಶಿತ್‌ಪರದಲ್ಲಿಲ್ಲದೇ ಇರುವಾಗ ಆತ್ವ ಬರುತ್ತದೆ. ಎಂಬುದ ರಿಂದ ಇಲ್ಲಿ ಆತ್ವ ಬರುತ್ತದೆ. ಆದಂತವಾದಮೇಲೆ **'ಆತಶ್ಚೋಪಸರ್ಗೇ '** (ಪಾ. ಸೂ. ೩-೧-೧೩೬) ಎಂಬುದರಿಂದ ಕ ಪ್ರತ್ಯಯ. ಆಧ್ರಾ+ಅ, ಎಂದಿರುವಾಗ **'ಆತೋ ಲೋಪ ಇಟಿ ಚ '** ಎಂಬುದರಿಂದ ಆಕಾರ ಲೋಪವಾಗುತ್ತದೆ. ಆಧ್ರ ಶಬ್ದವಾಗುತ್ತದೆ. ಷಷ್ಠೀ ಏಕವಚನದ ರೂಪ.

**ಶಾಸ್ಸಿ**— ಶಾಸು ಅನುಶಿಷ್ಟೌ ಧಾತು. ಅದಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **'ಅದಿಪ್ರಭೃತಿಭ್ಯಃ ಶಪಃ '** ಎಂಬುದರಿಂದ ಶಪ್ಪಿಗೆ ಲುಕ್. ಶಾಸ್ಸಿ ಎಂದು ರೂಪವಾಗುತ್ತದೆ. ಸಿಪ್ ಪಿತ್ತಾದುದರಿಂದ ಅನುದಾತ್ತಸ್ವರವನ್ನು ಹೊಂದುವುದರಿಂದ **'ಧಾತೋಃ'** ಎಂಬುದರಿಂದ ಬಂದಿರುವ ಧಾತುವಿನ ಅಂತೋದಾತ್ತ ಸ್ವರವೇ ಉಳಿಯುತ್ತದೆ. ಪಾಕಂ ಚ ಪ್ರಶಾಸ್ಸಿ, ದಿಶಶ್ಚ ಪ್ರಶಾಸ್ಸಿ ಎಂದು ಅನ್ವಯವಿರುವುದರಿಂದ ಚಾರ್ಥವು ಇಲ್ಲಿ ತೋರುತ್ತದೆ. ಆದುದರಿಂದ **'ಚಾದಿ ಲೋಪೇ ವಿಭಾಷಾ '** (ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ವಿದುಷ್ಟರಃ**—ವಿದ್ವಸ್ ಶಬ್ದ. ಅತಿಶಯಾರ್ಥದಲ್ಲಿ **'ದ್ವಿವಚನವಿಭ-'** ಸೂತ್ರದಿಂದ ತರಪ್. **'ಅಯಸ್ಮಯಾದೀನಿ ಛಂದಸಿ'** (ಪಾ. ಸೂ. ೧-೪-೨೦) ಎಂಬುದರಿಂದ ಇಲ್ಲಿ ಭಸಂಜ್ಞಾ ಬರುತ್ತದೆ. ಭಸಂಜ್ಞಾ ಇರುವುದರಿಂದ **'ವಸೋಃ ಸಂಪ್ರಸಾರಣಮ್'** (ಪಾ. ಸೂ. ೬-೪-೧೩೧) ಎಂಬುದರಿಂದ ವಿದ್ವಸಿನ ವಕಾರಕ್ಕೆ ಸಂಪ್ರಸಾರಣ ಬರುತ್ತದೆ. **'ಸಂಪ್ರಸಾರಣಾಚ್ಚ'** ಎಂಬುದರಿಂದ ಪೂರ್ವರೂಪ. ವಿದುಸ್ತರ ಎಂದಿರುವಾಗ **'ಶಾಸಿವಸಿಘಸೀನಾಂ ಚ'** (ಪಾ. ಸೂ. ೮-೩-೬೦) ಎಂಬುದರಿಂದ ಪ್ರತ್ಯಯಾವಯವ ಆಗದಿದ್ದರೂ ಷತ್ವ ಬರುತ್ತದೆ. ವಿದುಷ್ಟರ ಎಂದು ರೂಪವಾಗುತ್ತದೆ. ತರಪ್ ಪಿತ್ತಾದುದರಿಂದ ಅನುದಾತ್ತ, ವಸುವಿನ ಸ್ವರವು ಸತಿಶಿಷ್ಟವಾಗುವುದರಿಂದ ಉಕಾರವು ಉದಾತ್ತವಾಗುತ್ತದೆ. ॥ ೧೪ ॥

॥ ಸಂಹಿತಾಪಾಠಃ ॥

ತ್ವಮ॑ಗ್ನೇ ಪ್ರ॒ಯತ॑ದಕ್ಷಿಣಂ॒ ನರಂ॒ ವರ್ಮೇ॑ವ ಸ್ಯೂ॒ತಂ ಪರಿ॑

ಪಾಸಿ ವಿ॒ಶ್ವತಃ॑ ।

ಸ್ವಾ॒ದು॒ಕ್ಷದ್ಮಾ॒ ಯೋ ವ॑ಸ॒ತೌ ಸ್ಯೋ॑ನ॒ಕೃಜ್ಜೀ॑ವಯಾ॒ಜಂ ಯಜ॑-

ತೇ॒ ಸೋ॑ಪ॒ಮಾ ದಿ॒ವಃ ॥ ೧೫ ॥

॥ ಪದಪಾಠಃ ॥

ತ್ವಂ । ಅ॒ಗ್ನೇ॒ । ಪ್ರ॒ಯತ॑ಽದಕ್ಷಿಣಂ॒ । ನರಂ॒ । ವರ್ಮ॑ಽಇವ । ಸ್ಯೂ॒ತಂ । ಪರಿ॑ ।

ಪಾ॒ಸಿ॒ । ವಿ॒ಶ್ವತಃ॑ ।

ಸ್ವಾ॒ದು॒ಽಕ್ಷದ್ಮಾ॑ । ಯಃ । ವ॒ಸ॒ತೌ । ಸ್ಯೋ॒ನ॒ಽಕೃತ್ । ಜೀ॒ವ॒ಽಯಾ॒ಜಂ । ಯಜ॑ತೇ ।

ಸಃ । ಉ॒ಪ॒ಽಮಾ । ದಿ॒ವಃ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಪ್ರಯತದಕ್ಷಿಣಂ ಯೇನ ಯಜಮಾನೇನ ಋತ್ವಿಗ್ಭ್ಯೋ ದಕ್ಷಿಣಾ ದತ್ತಾ ತಾದೃಶಂ ನರಂ ಪುರುಷಂ ಯಜಮಾನಂ ವಿಶ್ವತಃ ಸರ್ವತಃ ಪರಿ ಪಾಸಿ । ಸಮ್ಯಕ್ ಪಾಲಯಸಿ । ತತ್ರ ದೃಷ್ಟಾಂತಃ । ಸ್ಯೂತಂ : ನಿಷ್ಛಿದ್ರತ್ವೇನ ಸೂಚೀಭಿಃ ಸಮ್ಯಕ್ ನಿಷ್ಪಾದಿತಂ ವರ್ಮೇವ । ಯಥಾ ಕವಚಂ ಯುದ್ಧೇ ಪಾಲಯತಿ ತದ್ವತ್ । ಸ್ವಾದುಕ್ಷದ್ಮಾ ಸ್ವಾದ್ವನ್ನೋ ವಸತೌ ನಿವಾಸಭೂತೇ ಸ್ವಗೃಹೇ ಸ್ಯೋನಕೃತ್ ಅತಿಥೀನಾಂ ಸುಖಕಾರೀ ಯೋ ಯಜಮಾನೋ ಜೀವಯಾಜಂ ಜೀವಯಜನಸಹಿತಂ ಯಜ್ಞಂ ಯದ್ವಾ ಜೀವನಿಷ್ಪಾದ್ಯಂ ಯಜತೇ ಅನುತಿಷ್ಠತಿ ಸ ಯಜಮಾನೋ ದಿವಃ ಸ್ವರ್ಗಸ್ಯೋಪಮಾ ದೃಷ್ಟಾಂತೋ ಭವತಿ । ಯಥಾ ಸ್ವರ್ಗೋಽನುಷ್ಠಾತೄನ್ಸುಖಯತಿ ತಥಾ ತ್ವಮೃತ್ವಿಗಾದೀನಿತ್ಯರ್ಥಃ ॥ ಸ್ಯೂತಂ । ಷಿವು ತಂತುಸಂತಾನೇ । ನಿಷ್ಠೇತಿ ಕ್ತಃ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಚ್ಛ್ವೋಃ ಶೂಡನುನಾಸಿಕೇ ಚ । ಪಾ. ೬-೪-೧೯ । ಇತಿ ವಕಾರಸ್ಯೋಠಾದೇಶಃ । ಸ್ವಾದೂನ್ಕ್ಷದತೀತಿ ಸ್ವಾದುಕ್ಷದ್ಮಾ । ಕ್ಷದತಿರತ್ತಿ- ಕರ್ಮಾ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ನಿತ್ತ್ವಾದಾದ್ಯುದಾತ್ತತ್ವೇ ಕೃದುತ್ತರಪದಪ್ರಕೃತಿ- ಸ್ವರತ್ವಂ ಬಹುವ್ರೀಹೌ ತು ವ್ಯತ್ಯಯೇನ । ಜೀವಯಾಜಂ । ಜೀವಾ ಋತ್ವಿಜ ಇಜ್ಯಂತೇ ದಕ್ಷಿಣಾಭಿಃ ಪೂಜ್ಯಂತೇಽಚೇತ್ಯಧಿಕರಣೇ ಘಞ್ । ಕುತ್ವಾಭಾವಶ್ಛಾಂದಸಃ । ಯದ್ವಾ । ಜೀವೈಃ ಪಶುಭಿರ್ಯಾಜನಂ ಜೀವಯಾಜಃ । ಯಾಜಯತೇರ್ಘಞ್ । ಣೇರನಿಟೀತಿ ಣಿಲೋಪಸ್ಯಾಚಃ ಪರಸ್ಮಿನ್ನಿತಿ ಸ್ಥಾನಿವದ್ಭಾವಾ- ಚ್ಚಜೋಃ ಕು ಘಿಣ್ಯತೋರಿತಿ ಕುತ್ವಾಭಾವಃ । ಥಾಥಾದಿಸ್ವರೇಣೋತ್ತರಪದಾಂತೋದಾತ್ತತ್ವಂ । ಸೋಪಮಾ । ಸೋಽಚಿ ಲೋಪೇ ಚೇತ್ಪಾದಪೂರಣಮಿತಿ ಸಂಹಿತಾಯಾಂ ಸೋರ್ಲೋಪಃ । ದಿವಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ ॥ ೩೪ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಪ್ರಯತದಕ್ಷಿಣಂ**—(ಋತ್ವಿಕ್ಕುಗಳಿಗೆ ಪ್ರಭೂತವಾಗಿ) ದಕ್ಷಿಣೆಯನ್ನು ಕೊಟ್ಟ । **ನರಂ**—ಯಜಮಾನನನ್ನು । **ವಿಶ್ವತಃ**—ಸುತ್ತಲೂ । **ಸ್ಯೂತಂ**—(ಕೊಂಚವೂ ತೂತಿಲ್ಲದೇ) ಚೆನ್ನಾಗಿ ಹೊಲಿದ । **ವರ್ಮೇವ**—(ಯುದ್ಧ) ಕವಚದಂತೆ । **ಪರಿ ಪಾಸಿ**—ಚೆನ್ನಾಗಿ ರಕ್ಷಣಮಾಡುತ್ತೀಯೆ । **ಸ್ವಾದುಕ್ಷದ್ಮಾ**—ಮಧುರವಾದ ಅನ್ನವನ್ನು ಹೊಂದಿದ । **ವಸತೌ**—(ತನ್ನ) ಗೃಹದಲ್ಲಿ । **ಸ್ಯೋನ- ಕೃತ್**—(ಅತಿಥಿಗಳ ಸತ್ಕಾರದಿಂದ) ಸುಖಕಾರಿಯಾಗಿ । **ಯಃ**—ಯಾವ ಯಜಮಾನನು । **ಜೀವಯಾಜಂ**— ಜೀವಯಜ್ಞವನ್ನು ಅಥವಾ ಜೀವಸಂಪಾದಕವಾದ ಯಜ್ಞವನ್ನು । **ಯಜತೇ**—ನೆರವೇರಿಸುತ್ತಾನೋ । **ಸಃ**— ಆ ಯಜಮಾನನು । **ದಿವಃ**—ಸ್ವರ್ಗಕ್ಕೆ । **ಉಪಮಾ**—ಸದೃಶನಾಗಿ ಆಗುತ್ತಾನೆ (ಎಂದರೆ ಸ್ವರ್ಗಕ್ಕೆ ಹೋಗುತ್ತಾನೆ).

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಋತ್ವಿಕ್ಕುಗಳಿಗೆ ಪ್ರಭೂತವಾಗಿ ದಕ್ಷಿಣೆಯನ್ನು ಕೊಟ್ಟ ಯಜಮಾನನನ್ನು ತೂತಿಲ್ಲದೇ ಚೆನ್ನಾಗಿ ಹೊಲಿದ ಯುದ್ಧಕವಚವು ಯೋಧನನ್ನು ರಕ್ಷಿಸುವಂತೆ ಚೆನ್ನಾಗಿ ಕಾಪಾಡುತ್ತೀಯೆ. ಯಾವ ಯಜಮಾನನು

ತನ್ನ ಮನೆಯಲ್ಲಿ ಅತಿಥಿಗಳಿಗೆ ಮಧುರವಾದ ಅನ್ನವನ್ನು ಕೊಟ್ಟು ಅವರನ್ನು ಸುಖಪಡಿಸಿ ಆ ಮೂಲಕ ಜೀವ ಯಜ್ಞವನ್ನು ಮಾಡುತ್ತಾನೆಯೋ ಆ ಯಜಮಾನನು ಸ್ವರ್ಗಕ್ಕೆ ಸಮಾನವಾದ ಸುಖದಾತನಾಗುತ್ತಾನೆ

## English Translation.

Agni, you protect the man who gives presents to the priest on every side like well-stiched armour ; the man who keeps good food in his dwellings and with them entertains his guest, and performs the animal sacrifice, approaches the heaven.

॥ ವಿಶೇಷವಿಷಯಗಳು ॥

ಯಜ್ಞಯಾಗಾದಿಗಳನ್ನು ಮಾಡದಿರುವ ಅನಾಹಿತಾಗ್ನಿಯು ತಾನು ಮತ್ತೊಬ್ಬರು ಮಾಡುವ ಯಜ್ಞದಲ್ಲಿ ಭಾಗವಹಿಸಿದರೆ ಎಂದರೆ ಋತ್ವಿಜನ ಕರ್ತವ್ಯವನ್ನು ಮಾಡಿದರೆ **ಇಮಾಮಗ್ನೇ** ಎಂಬ ಋಕ್ಕಿನಿಂದ ಅಗ್ನಿಯಲ್ಲಿ ಹೋಮಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ **ಋತ್ವಿಜೋ ವೃಣೀತ** ಎಂಬ ಖಂಡದಲ್ಲಿ **ಏವಮನಾಹಿತಾಗ್ನಿರ್ಗೃಹ್ಯ ಇಮಾಮಗ್ನೇ ಶರಣಿಂ ಮೀಮೃಷೋ ನಃ** ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿರುವುದು, (ಆ. ಗೃ. ೧-೨೩-೨೩).

**ಪ್ರಯತದಕ್ಷಿಣಂ**—ಯಜ್ಞದಲ್ಲಿ ಭಾಗವಹಿಸಿದ ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು ಕೊಟ್ಟಿರುವ.

**ವರ್ಮೇವ ಸ್ಯೂತಂ**—ಚೆನ್ನಾಗಿ ಹೊಲಿದಿರುವ ಕವಚವು ಯುದ್ಧದಲ್ಲಿ ಶರೀರವನ್ನು ಹೇಗೆ ಕಾಪಾಡುವುದೋ ಅದರಂತೆ; ಯುದ್ಧಮಾಡುವಾಗ ಕವಚವನ್ನು (armour) ತೊಟ್ಟಿದ್ದರೆ ಶತ್ರುವಿನ ಬಾಣಗಳು ಶರೀರಕ್ಕೆ ತಾಕುವುದಿಲ್ಲ. ಆದುದರಿಂದ ಕವಚವು ಶರೀರವನ್ನು ಕಾಪಾಡುವಂತೆ ಅಗ್ನಿಯು ಯಜಮಾನನನ್ನು ಕಾಪಾಡುವನೆಂದಭಿಪ್ರಾಯವು.

**ಸ್ವಾದುಕ್ಷದ್ಮಾ**—ಸ್ವಾದು ಎಂದರೆ ಸಿಹಿಯಾದ, ರುಚಿಕರವಾದ, ಕ್ಷದ್ಮ ಎಂದರೆ ಅನ್ನವು (ನಿ. ೩-೯) ಆದುದರಿಂದ ಸಿಹಿಯಾದ ಅನ್ನವು ಅಥವಾ ಆಹಾರವು.

**ಸ್ಯೋನಕೃತ್**—ಸ್ಯೋನವೆಂದರೆ ಸುಖವು (ನಿ. ೩-೧೩) ಸುಖವನ್ನುಂಟುಮಾಡುವ.

**ಜೀವಯಾಜಂ—ಜೀವಯಜನಸಹಿತಂ ಯಜ್ಞಂ ।** ಜೀವವುಳ್ಳ ಪ್ರಾಣಿಯನ್ನು ಅರ್ಪಿಸುವ ಯಜ್ಞವನ್ನು—ಯಜ್ಞದಲ್ಲಿ ಜೀವವುಳ್ಳ ಪಶುವನ್ನು ವಿಧ್ಯುಕ್ತವಾಗಿ ದೇವತೆಗಳಿಗೆ ಅರ್ಪಿಸಿ ಹೋಮಮಾಡುವರು. ಆದುದರಿಂದ ಅಂತಹ ಪಶುಯಜ್ಞವೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸ್ಯೂತಮ್—**ಷಿವು ತಂತುಸಂತಾನೇ ಧಾತು. ಕರ್ಮಾರ್ಥದಲ್ಲಿ **'ನಿಷ್ಠಾ'** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **'ಯಸ್ಯವಿಭಾಷಾ'** (ಪಾ. ಸೂ. ೭-೨-೧೫) ಎಂಬುದರಿಂದ ಇಣ್ನಿಷೇಧ. **'ಚ್ಛ್ವೋಃ ಶೂಡನುನಾಸಿಕೇ ಚ'** (ಪಾ. ಸೂ. ೬-೪-೧೯) ಎಂಬುದರಿಂದ ಕಿತ್ತಾದ ಪ್ರತ್ಯಯು ಪರದಲ್ಲಿರುವುದರಿಂದ ವಕಾರಕ್ಕೆ

ಊಠ್ ಆದೇಶ. ಧಾತ್ವಾದಿಗೆ ಸಕಾರಾದೇಶ. ಸ್+ಊ+ತ ಎಂದಿರುವಾಗ ಯಣಾದೇಶ. ಸ್ಯೂತ ಎಂದು ರೂಪ ವಾಗುತ್ತದೆ.

**ಪಾಸಿ**—ಪಾ ರಕ್ಷಣೇ ಧಾತು. ಅದಾದಿ. ಲಟ್ ಮಧ್ಯಮಪುರುಷ ಏಕವಚನರೂಪ. ತಿಙಂತ ನಿಘಾತ ಸ್ವರ ಬರುತ್ತದೆ.

**ಸ್ವಾದುಕ್ಷದ್ಮಾ**—ಸ್ವಾದೂನ್ ಕ್ಷದತಿ ಇತಿ ಸ್ವಾದುಕ್ಷದ್ಮಾ. ಕ್ಷದ ಭಕ್ಷಣೇ ಧಾತು. '**ಅನ್ಯೇಭ್ಯೋಽಪಿ ದೃಶ್ಯಂತೇ**' (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ ಬರುತ್ತದೆ. ಸ್ವಾದುಕ್ಷದ್ಮನ್ ಶಬ್ದವಾಗು ತ್ತದೆ. ಸು ಪರದಲ್ಲಿರುವಾಗ '**ಸರ್ವನಾಮಸ್ಥಾನೇಽಚಾಸಂಬುದ್ಧೌ**' ಎಂಬುದರಿಂದ ಉಪಧಾದೀರ್ಘ. ಹಲಙ್ಯಾದಿ ನಾಸುಲೋಪ. '**ನಲೋಪಃ**-' ಸೂತ್ರದಿಂದ ನಲೋಪ. ಸ್ವಾದುಕ್ಷದ್ಮಾ ಎಂದು ರೂಪವಾಗುತ್ತದೆ. ಮನಿನ್ ನಿತ್ತಾದುದರಿಂದ '**ಞ್ನಿತ್ಯಾದಿರ್ನಿತ್ಯಂ**' ಎಂಬುದರಿಂದ ಕ್ಷದ್ಮನ್ ಎಂಬುದು ಆದ್ಯುದಾತ್ತವಾಗುತ್ತದೆ. ಕಾರಕ ಪೂರ್ವಪದವಾಗಿ ಸಮಾಸವಾದುದರಿಂದ '**ಗತಿಕಾರಕೋಪಪದಾತ್ ಕೃತ್**' ಎಂಬುದರಿಂದ ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ. ಬಹುವ್ರೀಹಿಸಮಾಸ ಮಾಡಿದರೆ '**ವ್ಯತ್ಯಯೋ ಬಹುಲಂ**' ಎಂಬುದರಿಂದ ಉತ್ತರಪದಾದ್ಯುದಾ ತ್ತಸ್ವರವನ್ನು ಹೇಳಬೇಕು.

**ಜೀವಯಾಜಮ್**—ಜೀವಾಃ ಋತ್ವಿಜಃ ಇಜ್ಯಂತೇ ದಕ್ಷಿಣಾಭಿಃ ಪೂಜ್ಯಂತೇ ಅತ್ರ ಇತಿ. ಜೀವಯಾಜಮ್. ಯಜ ಧಾತುವಿಗೆ ಅಧಿಕರಣಾರ್ಥದಲ್ಲಿ ಘಞ್ ಪ್ರತ್ಯಯ. ಞಿತ್ತಾದುದರಿಂದ '**ಅತ ಉಪಧಾಯಾಃ**' ಎಂಬುದ ರಿಂದ ಧಾತುವಿನ ಅಕಾರಕ್ಕೆ ವೃದ್ಧಿ. '**ಚಜೋಃ ಕುಘಿಣ್ಯತೋಃ**' ಎಂಬುದರಿಂದ ಪ್ರಾಪ್ತವಾಗುವ ಕುತ್ವವು '**ವ್ಯತ್ಯಯೋ ಬಹುಲಂ**' ಎಂಬುದರಿಂದ ಬರುವುದಿಲ್ಲ. ಜೀವಯಾಜ ಎಂದು ರೂಪವಾಗುತ್ತದೆ. ಅಥವಾ ಜೀವೈಃ ಪಶುಭಿಃ ಯಾಜನಂ ಜೀವಯಾಜಃ. ಯಜ ಧಾತುವಿಗೆ ಣಿಚ್. ಣಿಜಂತದಮೇಲೆ ಘಞ್ '**ಣೇರನಿಟಿ**' ಎಂಬುದರಿಂದ ಣಿ ಲೋಪ. '**ಅಚಃ ಪರಸ್ಮಿನ್ ಪೂರ್ವವಿಧೌ**' ಎಂಬುದರಿಂದ ಣಿ ಲೋಪಕ್ಕೆ ಸ್ಥಾನಿವದ್ಭಾವ ಬರುವುದರಿಂದ ಘಞಿನ ಪೂರ್ವದಲ್ಲಿರುವ ಜಕಾರಕ್ಕೆ '**ಚಜೋಃ ಕು ಘಿಣ್ಯತೋಃ**' ಎಂಬುದರಿಂದ ಕುತ್ವ ಬರುವುದಿಲ್ಲ. '**ಥಾಥ ಘಞ್ಕ್ತಾಜ**-' (ಪಾ. ಸೂ. ೬-೨-೧೧೪) ಎಂಬುದರಿಂದ ಘಞಂತವಾದುದರಿಂದ ಸಮಾಸದಲ್ಲಿ ಉತ್ತರಪದಾಂತೋ ದಾತ್ತಸ್ವರವು ಬರುತ್ತದೆ.

**ಸೋಪಮಾಸಃ**—ಸಃ ಉಪಮಾ ಎಂದು ಛೇದ. '**ಸೋಽಚಿಲೋಪೇ ಚೇತ್ ಪಾದಪೂರಣಂ**' (ಪಾ. ಸೂ. ೬-೧-೧೩೪) ಎಂಬುದರಿಂದ ಪಾದಪೂರಣವಾಗುವುದಕ್ಕೆ ತಚ್ಛಬ್ದದ ಸುವಿಗೆ ಲೋಪ ಬರುತ್ತದೆ. ಲೋಪ ವಾದಮೇಲೆ ಗುಣ ಬಂದು ಸೋಪಮಾ ಎಂದು ರೂಪವಾಗುತ್ತದೆ.

**ದಿವಃ**—'**ಊಡಿದಂಪದಾದಿ**-' (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೫ ॥

॥ ಸಂಹಿತಾಪಾಠಃ ॥

ಇಮಾಮಗ್ನೇ ಶರಣಿಂ ಮೀಮೃಷೋ ನ ಇಮಮಧ್ವಾನಂ
ಯಮಗಾಮ ದೂರಾತ್ ।
ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃ-
ನ್ಮರ್ತ್ಯಾನಾಂ ॥ ೧೬ ॥

॥ ಪದಪಾಠಃ ॥

ಇಮಾಂ । ಅಗ್ನೇ । ಶರಣಿಂ । ಮೀಮೃಷಃ । ನಃ । ಇಮಂ । ಅಧ್ವಾನಂ । ಯಂ ।
ಅಗಾಮ । ದೂರಾತ್ ।
ಆಪಿಃ । ಪಿತಾ । ಪ್ರऽಮತಿಃ । ಸೋಮ್ಯಾನಾಂ । ಭೃಮಿಃ । ಅಸಿ । ಋಷಿऽಕೃತ್ ।
ಮರ್ತ್ಯಾನಾಂ ॥ ೧೬ ॥

॥ ಸಾಯಣಭಾಷ್ಯಂ ॥

ಇಮಾಮಗ್ನ ಇತ್ಯನಯಾನಾಹಿತಾಗ್ನಿರಾರ್ತ್ವಿಜ್ಯಂ ಕೃತ್ವಾ ಸ್ವಾಗ್ನಾವಾಹುತಿಂ ಜುಹುಯಾತ್ । ಋತ್ವಿಜೋ ವೃಣೀತ ಇತಿ ಖಂಡ ಏವಮನಾಹಿತಾಗ್ನಿರ್ಗೃಹ್ಯ ಇಮಾಮಗ್ನೇ ಶರಣಿಂ ಮೀಮೃಷೋ ನಃ । ಆ. ಗೃ. ೧-೨೩-೨೩ । ಇತಿ ಸೂತ್ರಿತಂ ॥

ಹೇ ಅಗ್ನೇ ತ್ವಂ ನೋಽಸ್ಮತ್ಸಂಬಂಧಿನೀಮಿಮಾಮಿದಾನೀಂ ಸಂಪಾದಿತಾಂ ಶರಣಿಂ ಹಿಂಸಾಂ ವ್ರತಲೋಪರೂಪಾಂ ಮೀಮೃಷಃ । ಕ್ಷಮಸ್ವ । ತಥಾ ತ್ವದೀಯಸೇವಾಮಗ್ನಿಹೋತ್ರಾದಿರೂಪಾಂ ಪರಿತ್ಯಜ್ಯ ದೂರಾದ್ದೂರದೇಶಂ ಯಮಿಮಮಧ್ವಾನಮಗಾಮ ವಯಂ ಗತವಂತಃ । ತಮಪಿ ಕ್ಷಮಸ್ವೇತಿ ಶೇಷಃ । ಸೋಮ್ಯಾನಾಂ ಸೋಮಾರ್ಹಾಣಾಮನುಷ್ಠಾತೄಣಾಂ ಮರ್ತ್ಯಾನಾಂ ತ್ವಮಾಪ್ಯಾದಿಗುಣಯುಕ್ತೋಽಸಿ । ಆಪಿಃ ಪ್ರಾಪಣೀಯಃ ಪಿತಾ ಪಾಲಕಃ ಪ್ರಮತಿಃ ಪ್ರಕೃಷ್ಟಮನನಯುಕ್ತೋ ಭೃಮಿರ್ಭ್ರಾ-

ಮಕಃ । ಕರ್ಮನಿರ್ವಾಹಕ ಇತ್ಯರ್ಥಃ । ಋಷಿಕೃತ್ ದರ್ಶನಕಾರೀ । ಅನುಚಿಕಿತ್ಸ್ಯಯಾ ಪ್ರತ್ಯಕ್ಷೋ ಭವಸೀತ್ಯರ್ಥಃ ॥ ಶರಣಂ । ಶೄ ಹಿಂಸಾಯಾಮಿತ್ಯಸ್ಮಾದೌಣಾದಿಕೋಽನಿಪ್ರತ್ಯಯಃ । ಮಿಮೃಷಃ । ಮೃಷ ತಿತಿಕ್ಷಾಯಾಂ । ಅಸ್ಮಾಣ್ಣೌ ಚಙಿ ಗುಣೇ ಪ್ರಾಪ್ತೇ ನಿತ್ಯಂ ಛಂದಸಿ । ಪಾ. ೭-೪-೮ । ಇತ್ಯುಪಧ-ರ್ಕಾರಸ್ಯ ಋಕಾರಾದೇಶಃ । ಣಿಲೋಪದ್ವಿರ್ಭಾವಹಲಾದಿಶೇಷೋರದತ್ವಸನ್ವದ್ಭಾವೇತ್ವದೀರ್ಘತ್ವಾನಿ । ತಿಙ್ಙತಿಙ ಇತಿ ನಿಘಾತಃ । ಅಗಾಮ । ಇಣ್ ಗತೌ । ಇಣೋ ಗಾ ಲುಙಿ । ಪಾ ೨-೪-೪೫ । ಇತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲುಕ್ । ಅಡಾಗಮ ಉದಾತ್ತಃ । ಭೃಮಿಃ । ಭ್ರಮು ಅನವಸ್ಥಾನೇ । ಭ್ರಮೇಃ ಸಂಪ್ರಸಾರಣಂ ಚ । ಉ. ೪-೧೨೦ । ಇತೀನ್ಪ್ರತ್ಯಯಃ । ಸಂಪ್ರಸಾರಣೇ ಪರಪೂರ್ವತ್ವಂ । ಇಗುಪಧಾತ್ಕಿದಿತ್ಯನುವೃತ್ತೇಃ ಕಿತ್ತ್ವಾದ್ಗುಣಪ್ರತಿಷೇಧಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇಃ**—ಎಲೈ ಅಗ್ನಿಯೇ । **ನಃ**—ನಮ್ಮ (ನಮ್ಮಿಂದ ಸಂಭವಿಸಿದ) । **ಇಮಾಂ ಶರಣಿಂ**—(ವ್ರತಾದಿ ಲೋಪಗಳಿಂದಾದ) ಈ ತೊಂದರೆಯನ್ನು । **ಮಿಮೃಷಃ**—ಕ್ಷಮಿಸು (ಹಾಗೆಯೇ) । **ದೂರಾತ್**—(ಅಗ್ನಿಹೋತ್ರಾದಿಗಳನ್ನು ತ್ಯಜಿಸಿ) ದೂರವಾದ । **ಯಂ ಇಮಂ ಅಧ್ವಾನಂ**—ಯಾವ ಈ ಅಸನ್ಮಾರ್ಗವನ್ನು ಕುರಿತು । **ಅಗಾಮ** —ಬಂದಿರುವೆವೋ (ಅದನ್ನು ಕ್ಷಮಿಸು) । **ಸೋಮ್ಯಾನಾಂ**—ಸೋಮರಸಾರ್ಪಣೆಯಿಂದ ಯಜ್ಞಾನುಷ್ಠಾನ ಮಾಡುವ । **ಮರ್ತ್ಯಾನಾಂ**—ಮಾನವರಾದ ಯಜ್ಞಕರ್ತರಿಗೆ । **ಆಪಿಃ**—ಆಪ್ತನಾಗಿಯೂ । **ಪಿತಾ**—ಪಾಲಕನಾಗಿಯೂ । **ಪ್ರಮತಿಃ**—ಅನುಗ್ರಹ ಬುದ್ಧಿಯುಳ್ಳವನಾಗಿಯೂ । **ಭೃಮಿಃ**—ಕರ್ಮನಿರ್ವಾಹಕನಾಗಿಯೂ **ಋಷಿಕೃತ್**—ದರ್ಶನವನ್ನು ಕೊಡುವವನಾಗಿಯೂ । **ಅಸಿ**—ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮ ವ್ರತಲೋಪಗಳಿಂದ ನಿನಗೆ ಸಂಭವಿಸಿದ ಈ ತೊಂದರೆಯನ್ನು ಕ್ಷಮಿಸು. ಹಾಗೆಯೇ ಅಗ್ನಿಹೋತ್ರಾದಿಗಳನ್ನು ತ್ಯಜಿಸಿ ಅವುಗಳಿಗೆ ಬಹಳ ದೂರವಾದ ಈ ಅಸನ್ಮಾರ್ಗವನ್ನು ಅನುಸರಿಸಿರುವುದನ್ನೂ ಕ್ಷಮಿಸು। ನೀನು ಸೋಮರಸಾರ್ಪಣೆಯಿಂದ ಯಜ್ಞಾನುಷ್ಠಾನಮಾಡುವವರಿಗೆ ಆಪ್ತನಾಗಿಯೂ, ಪಾಲಕನಾಗಿಯೂ, ಅನುಗ್ರಹ ಬುದ್ಧಿಯುಳ್ಳವನಾಗಿಯೂ, ಕರ್ಮನಿರ್ವಾಹಕನಾಗಿಯೂ ಮತ್ತು ಮಾನವರಿಗೆ ದರ್ಶನವನ್ನು ಕೊಡತಕ್ಕವನಾಗಿಯೂ ಆಗಿದ್ದೀಯೆ.

## English Translation.

Agni, forgive us our negligence, this path in which we have gone astray ; you will be sought as the protector and encourager of those who offer suitable libations ; you are the conductor of the sacrifice and make yourself visible to all men.

|| ವಿಶೇಷವಿಷಯಗಳು ||

**ಶರಣಿಂ**—**ಶ್ರೃ ಹಿಂಸಾಯಾಂ |** ಹಿಂಸೆಯನ್ನು ಎಂದರೆ ಯಜ್ಞದಲ್ಲಿ ನಾವು ಮಾಡಿರಬಹುದಾದ ಲೋಪ ದೋಷಗಳನ್ನು ಅಥವಾ ನ್ಯೂನತೆಯನ್ನು.

**ಮೀಮೃಷಃ—ಮೃಷ ತಿತಿಕ್ಷಾಯಾಂ |** ಕ್ಷಮಿಸು.

**ಇಮಂ ಅಧ್ವಾನಂ ಯಂ ಅಗಾಮ ದೂರಾತ್**—ಈ ಯಜ್ಞವನ್ನು ಮಾಡುವುದರಲ್ಲಿ ನಾವು ಮಾರ್ಗವನ್ನು ಎಂದರೆ ಉಕ್ತವಿಧಿನಿಯಮಗಳನ್ನು ಅತಿಕ್ರಮಿಸಿದ್ದರೆ ಅದನ್ನು ಕ್ಷಮಿಸೆಂದರ್ಥವು.

**ಆಪಿಃ ಪಿತಾ—ಪ್ರಾಪಣೀಯ ಪಾಲಕಃ |** ನಿನ್ನನ್ನು ಪಾಲಕನೆಂದು ಭಾವಿಸಿ ನಿನ್ನನ್ನೇ ಹೊಂದಿರುವೆವು ಎಂದರೆ ನೀನೇ ರಕ್ಷಕನೆಂದು ನಿನ್ನ ಬಳಿಗೆ ಬಂದಿರುವೆವು ಎಂದರ್ಥವು.

**ಸೋಮ್ಯಾನಾಂ—ಸೋಮಾರ್ಹಾಣಾಂ ಅನುಷ್ಠಾತೃಣಾಂ |** ಯಜ್ಞದಲ್ಲಿ ಸೋಮಪಾನಮಾಡುವ ಋತ್ವಿಗಾದಿಜನರ.

**ಭೃಮಿಃ—ಭ್ರಮು ಅನವಸ್ಥಾನೇ ಭ್ರಾಮಕಃ |** ಯಜ್ಞನಿರ್ವಾಹಕನು.

**ಋಷಿಕೃತ್—ದರ್ಶನಕೃತ್ ಸಮ್ಯಕ್ ಜ್ಞಾನಕರಶ್ಚ |** ದರ್ಶನವನ್ನು ಕೊಡತಕ್ಕವನು ಎಂದರೆ ಪ್ರತ್ಯಕ್ಷನಾಗುವವನು ಅಥವಾ ಜ್ಞಾನಪ್ರದನು.

|| ವ್ಯಾಕರಣಪ್ರಕ್ರಿಯಾ ||

**ಶರಣಿಮ್**—ಶೄ ಹಿಂಸಾಯಾಂ ಧಾತು. ಕ್ರ್ಯಾದಿ. ಇದಕ್ಕೆ ಉಣಾದಿಸಿದ್ಧವಾದ ಅನಿಪ್ರತ್ಯಯ ಅನಿಪರ ದಲ್ಲಿರುವಾಗ **'ಸಾರ್ವಧಾತುಕಾರ್ಧಧಾತುಕಯೋಃ'** ಎಂಬುದರಿಂದ ಧಾತುವಿಗೆ ಗುಣ. **'ಅಟ್‌ಕು ಪ್ವಾಙ್–'** ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. ಶರಣಿ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಮೀಮೃಷಃ**—ಮೃಷ ತಿತಿಕ್ಷಾಯಾಂ ಧಾತು. ಹೇತುವ್ಯಾಪಾರ ತೋರುವಾಗ ಣಿಚ್. ಅದಕ್ಕೆ **'ಸನಾದ್ಯಂತಾಧಾತವಃ'** ಎಂಬುದರಿಂದ ಧಾತು ಸಂಜ್ಞಾ. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ಣಿಜಂತದ ಮೇಲೆ ಲುಙ್ ಬಂದುದರಿಂದ **'ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್'** ಎಂಬುದರಿಂದ ಚ್ಲಿಗೆ ಚಙಾದೇಶ. ಮೃ+ಷ್+ಇ+ಅ+ಸ್ ಎಂದಿರುವಾಗ **'ಪುಗಂತಲಘೂಪಧಸ್ಯಚ'** ಎಂಬುದರಿಂದ ಲಘೂಪಧಗುಣವು ಪ್ರಾಪ್ತವಾದರೆ **'ನಿತ್ಯಂ ಛಂದಸಿ'** (ಪಾ. ಸೂ. ೭-೪-೮) ಎಂಬುದರಿಂದ ಉಪಧಾ ಯಕಾರಕ್ಕೆ ಋಕಾರ ಆದೇಶವು ಬರುತ್ತದೆ. ಗುಣಕ್ಕೆ ಅಪವಾದವೆಂದು ತಾತ್ಪರ್ಯ. **'ಣೇರನಿಟಿ'** ಎಂಬುದರಿಂದ ಚಙ್‌ಪರದಲ್ಲಿರುವಾಗ ಣಿಲೋಪ. **'ಚಙಿ'** ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿ ಶೇಷವು ಬಂದಮೇಲೆ **'ಉರತ್'** ಎಂಬುದರಿಂದ ಅತ್ವ. ರಪರವಾಗಿ ಬರುತ್ತದೆ. **'ಸನ್ವಲ್ಲಘುನಿ ಚಙ್‌ಪರೇಽನ-ಗ್ಲೋಪೇ'** (ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ. **'ಸನ್ಯತಃ'** (ಪಾ. ಸೂ. ೭-೪-೭೯) ಎಂಬುದ ರಿಂದ ಅಭ್ಯಾಸ ಅಕಾರಕ್ಕೆ ಇತ್ವ. **ದೀರ್ಘೋ ಲಘೋಃ** ಎಂಬುದರಿಂದ ಸನ್ವದ್ಭಾವ ಇರುವುದರಿಂದ ಬಂದಿರುವ ಇಕಾರಕ್ಕೆ ದೀರ್ಘ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. ಮೀಮೃಷಃ ಎಂದು ರೂಪವಾಗುತ್ತದೆ. **ತಿಙ್ಙತಿಙ** ಎಂಬುದ ರಿಂದ ತಿಙಂತನಿಘಾತಸ್ವರ ಬರುತ್ತದೆ.

**ಅಗಾಮ**—ಇಣ್ ಗತೌ ಧಾತು. ಅದಾದಿ. ಲುಙಿನಲ್ಲಿ '**ಇಣೋಗಾಲುಙಿ**' (ಪಾ. ಸೂ ೨-೪-೪೫) ಎಂಬುದರಿಂದ ಧಾತುವಿಗೆ ಗಾ ಆದೇಶ. ಉತ್ತಮಪುರುಷ ಬಹುವಚನದಲ್ಲಿ ಮಸ್‌ಪ್ರತ್ಯಯ. **ನಿತ್ಯಂಙಿತಃ** ಎಂಬುದರಿಂದ ಅದರ ಸಕಾರಕ್ಕೆ ಲೋಪ. **ಚ್ಲಿ ಲುಙಿ** ಎಂಬುದರಿಂದ ಪ್ರಾಪ್ತವಾದ ಚ್ಲಿಗೆ **ಚ್ಲೇಃಸಿಚ್** ಎಂಬುದರಿಂದ ಸಿಚಾದೇಶ ಬರುತ್ತದೆ. ಅದಕ್ಕೆ '**ಗಾತಿಸ್ಥಾಘುಪಾ**' (ಪಾ. ಸೂ. ೨-೪-೭೭) ಎಂಬುದರಿಂದ ಲುಕ್. ಲುಙ್ ನಿಮಿತ್ತಕವಾಗಿ ಅಂಗಕ್ಕೆ ಅಡಾಗಮ. ಅಗಾಮ ಎಂದು ರೂಪವಾಗುತ್ತದೆ. ಅಡುದಾತ್ತವೆಂದುದರಿಂದ ಆದ್ಯುದಾತ್ತವಾಗುತ್ತದೆ.

**ಭೃಮಿಃ**—ಭ್ರಮು ಅನವಸ್ಥಾನೇ ಧಾತು. **ಭ್ರಮೇಃ ಸಂಪ್ರಸಾರಣಂ ಚ**' (ಉ. ಸೂ. ೪-೫೬೦) ಎಂಬುದರಿಂದ ಇನ್ ಪ್ರತ್ಯಯ. ಧಾತುವಿಗೆ ಸಂಪ್ರಸಾರಣ. ರೇಫಕ್ಕೆ ಋಕಾರರೂಪ ಸಂಪ್ರಸಾರಣ ಬರುತ್ತದೆ. '**ಸಂಪ್ರಸಾರಣಾಚ್ಚ**' ಎಂಬುದರಿಂದ ಪೂರ್ವರೂಪ ಬಂದರೆ ಭೃಮಿ ಎಂದು ರೂಪವಾಗುತ್ತದೆ. ಇಲ್ಲಿ '**ಇಗುಪಧಾತ್ ಕಿತ್**' ಎಂಬುದರಿಂದ ಕಿತ್ ಎಂದು ಅನುವೃತ್ತಿಮಾಡಿಕೊಂಡಿರುವುದರಿಂದ ಇ ಪ್ರತ್ಯಯವು ಕಿದ್ವದ್ಭಾವವನ್ನು ಹೊಂದುವುದರಿಂದ ಲಘೂಪಧಗುಣವು ಬರುವುದಿಲ್ಲ. ಇನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ**' ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ. ॥ ೧೬ ॥

॥ ಸಂಹಿತಾಪಾಠಃ ॥

ಮನುಷ್ವದಗ್ನೇ ಅಙ್ಗಿರಸ್ವದಙ್ಗಿರೋ ಯಯಾತಿವತ್ಸದನೇ
ಪೂರ್ವವಚ್ಛುಚೇ ।
ಅಚ್ಛ ಯಾಹ್ಯಾ ವಹಾ ದೈವ್ಯಂ ಜನಮಾ ಸಾದಯ ಬರ್ಹಿಷಿ
ಯಕ್ಷಿ ಚ ಪ್ರಿಯಂ ॥ ೧೭ ॥

॥ ಪದಪಾಠಃ ॥

**ಮನುಷ್ವತ್ । ಅಗ್ನೇ । ಅಙ್ಗಿರಸ್ವತ್ । ಅಙ್ಗಿರಃ । ಯಯಾತಿಽವತ್ । ಸದನೇ ।
ಪೂರ್ವಽವತ್ । ಶುಚೇ ।
ಅಚ್ಛ । ಯಾಹಿ । ಆ । ವಹ । ದೈವ್ಯಂ । ಜನಂ । ಆ । ಸಾದಯ । ಬರ್ಹಿಷಿ ।
ಯಕ್ಷಿ । ಚ । ಪ್ರಿಯಂ ॥ ೧೭ ॥**

॥ ಸಾಯಣಭಾಷ್ಯಂ ॥

ಹೇ ಶುಚೇ ಶುದ್ಧಿಯುಕ್ತಾಂಗಿರೋಽಂಗನಶೀಲ ಹವಿರಾದಾನಾಯ ತತ್ರ ತತ್ರ ಗಮನಶೀಲಾಗ್ನೇ ಅಚ್ಛಾಭಿಮುಖ್ಯೇನ ಸದನೇ ದೇವಯಜನದೇಶೇ ಯಾಹಿ । ಗಚ್ಛ । ತತ್ರ ಚತ್ವಾರೋ ದೃಷ್ಟಾಂತಾಃ । ಮನುಷ್ವತ್ ಯಥಾ ಮನುರನುಷ್ಠಾನದೇಶೇ ಗಚ್ಛತಿ । ಅಂಗಿರಸ್ವತ್ ಯಥಾ ಚಾಂಗಿರಾ ಗಚ್ಛತಿ । ಯಯಾತಿವತ್ ಯಥಾ ಯಯಾತಿರ್ನಾಮ ರಾಜಾ ಗಚ್ಛತಿ । ಪೂರ್ವವತ್ ಅನ್ಯೇ ಚ ಪೂರ್ವಪುರುಷಾ ಯಥಾ ಗಚ್ಛಂತಿ । ಯಥಾ ಮನ್ವಾದಯೋ ಯಜ್ಞೇ ಗಚ್ಛಂತಿ ತದ್ವತ್। ಅಥವಾ ಮನ್ವಾದೀನಾಂ ಯಜ್ಞೇ ಯಥಾ ತ್ವಂ ಗಚ್ಛಸಿ ತದ್ವತ್ । ಗತ್ವಾ ಚ ದೈವ್ಯಂ ದೇವತಾಸಮೂಹರೂಪಂ ಜನಮಾ ವಹ । ಅಸ್ಮಿನ್ಕರ್ಮಣ್ಯಾನಯ । ಆನೀಯ ಚ ಬರ್ಹಿಷ್ಯಾಸ್ತೀರ್ಣೇ ದರ್ಭ ಆ ಸಾದಯ । ತಾನ್ದೇವಾನುಪವೇಶಯ । ಉಪವೇಶ್ಯ ಚ ಪ್ರಿಯಮಭೀಷ್ಟಂ ಹವಿರ್ಯಕ್ಷಿ ಚ । ದೇಹಿ ॥ ಮನುಷ್ವತ್ । ತೇನ ತುಲ್ಯಮಿತಿ ಪ್ರಥಮಾರ್ಥೇ ವಾ ತತ್ರ ತಸ್ಯೇವೇತಿ ಷಷ್ಠ್ಯರ್ಥೇ ವಾ ವತಿಃ । ಪಾ. ೫-೧-೧೧೫-೧೧೬ । ಅಯಸ್ಮಯಾದಿತ್ವೇನ ಭತ್ವಾದ್ರುತ್ವಾದ್ಯಭಾವಃ । ಪ್ರತ್ಯಯಸ್ವರಃ । ಏವಮಂಗಿರಸ್ವದಿತ್ಯಾದಿಷು । ವಹ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ ।ಯಕ್ಷಿ । ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಸೇರ್ಹ್ಯಪಿಚ್ಚೇತಿ ಹೇರಭಾವಶ್ಛಾಂದಸಃ । ಷತ್ವ ಕತ್ವೇ ॥

॥ ಪ್ರತಿಪದಾರ್ಥ ॥

**ಶುಚೇ**—ಶುದ್ಧನೂ । **ಅಂಗಿರಃ**—(ಹವಿಸ್ಸನ್ನು ಸ್ವೀಕರಿಸಲು) ನಾನಾಕಡೆ ಸಂಚರಿಸುವವನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಅಚ್ಛ**—(ಯಜ್ಞಕ್ಕೆ) ಅಭಿಮುಖವಾಗಿ । **ಸದನೇ**—ದೇವಯಜ್ಞಪ್ರದೇಶಕ್ಕೆ । **ಮನುಷ್ವತ್**—ಮನುವಿನಂತೆಯೂ । **ಅಂಗಿರಷ್ವತ್**—ಅಂಗಿರಸ್ಸಿನಂತೆಯೂ । **ಯಯಾತಿವತ್**—ಯಯಾತಿಯಂತೆಯೂ । **ಪೂರ್ವವತ್**—ಇತರ ಪೂರ್ವಪುರುಷರಂತೆಯೂ ಅಥವಾ ನೀನು ಮನ್ವಾದಿಗಳ ಯಜ್ಞ ಭೂಮಿಗೆ ಅನುಗ್ರಹಿಸಿ ಹೋದಂತೆ । **ಯಾಹಿ**—ಹೋಗಿಸೇರು । **ದೈವ್ಯಂ**—ದೇವತಾಸಮೂಹರೂಪವಾದ । **ಜನಂ**—ಜನವನ್ನು । **ಆ ವಹ**—ಈ ಕರ್ಮಕ್ಕೆ ಕರೆದುಕೊಂಡು ಬಾ । **ಬರ್ಹಿಷಿ**—ಹರಡಿರುವ ದರ್ಭೆಯ ಮೇಲೆ । **ಆ ಸಾದಯ**—(ಅವರನ್ನು) ಕುಳ್ಳಿರಿಸು । **ಪ್ರಿಯಂ**—(ಅವರಿಗೆ) ಇಷ್ಟವಾದ ಹವಿಸ್ಸನ್ನು । **ಯಕ್ಷಿ ಚ**—ಅರ್ಪಿಸು.

॥ ಭಾವಾರ್ಥ ॥

ಶುದ್ಧನೂ, ಹವಿಸ್ಸನ್ನು ಸ್ವೀಕರಿಸಲು ನಾನಾಕಡೆ ಸಂಚರಿಸುವವನೂ ಆದ ಎಲೈ ಅಗ್ನಿಯೇ, ನೀನು ಯಜ್ಞಕ್ಕೆ ಅಭಿಮುಖವಾಗಿ ಈ ದೇವಯಜನ ಪ್ರದೇಶಕ್ಕೆ ಮನುವಿನಂತೆಯೂ, ಅಂಗಿರಸ್ಸಿನಂತೆಯೂ, ಯಯಾತಿಯಂತೆಯೂ ಮತ್ತು ಇತರ ಪೂರ್ವಪುರುಷರಂತೆಯೂ ಹೋಗಿಸೇರು. ದೇವತಾಜನರನ್ನು ಈ ಕರ್ಮಕ್ಕೆ ಕರೆದುಕೊಂಡು ಬಾ. ಅವರನ್ನು ಶ್ರೇಷ್ಠವಾದ ದರ್ಭಾಸನಗಳ ಮೇಲೆ ಕುಳ್ಳಿರಿಸು. ಮತ್ತು ಅವರಿಗೆ ಇಷ್ಟವಾದ ಹವಿಸ್ಸನ್ನು ಅರ್ಪಿಸು.

ಅಥವಾ

ಎಲೈ ಶುದ್ಧನಾದ ಅಗ್ನಿಯೇ, ನೀನು ಹವಿಸ್ಸನ್ನು ಸ್ವೀಕರಿಸಲು ಮನು, ಅಂಗಿರಾಋಷಿ, ಯಯಾತಿ ಮತ್ತು ಇತರ ಪೂರ್ವಜರು ಇವರುಗಳ ಯಜ್ಞಕ್ಕೆ ಹೋದಂತೆ ಈ ನಮ್ಮ ಯಜ್ಞಕ್ಕೆ ಅಭಿಮುಖನಾಗಿ ಬಾ. ಬಂದು ದೇವತೆ

ಗಳನ್ನು ಕರೆದುಕೊಂಡು ಬಂದು ಬರ್ಹಿಸ್ತರಣವೆಂಬ ದರ್ಭಾಸನದ ಮೇಲೆ ಕುಳ್ಳಿರಿಸಿ ಅವರಿಗೆ ಪ್ರಿಯವಾದ ಹವಿಸ್ಸನ್ನು ಸಮರ್ಪಿಸು.

## English Translation.

Pure Agni, in the same way as you went to the sacrifices of Manu, Angiras, Yayati and other ancestors to receive the oblations, you bring hither the divine personages, seat them on the sacred grass and offer them sacrificial oblation.

॥ ವಿಶೇಷವಿಷಯಗಳು ॥

**ಯಯಾತಿವತ್**—ಯಯಾತಿ ಎಂಬುವನು ಒಬ್ಬ ರಾಜನು. ಇವನ ಹೆಸರು ಋಗ್ವೇದದಲ್ಲಿ ಈ ಋಕ್ಕಿನಲ್ಲಿಯೂ,

**ಯಯಾತೇರ್ಯೋ ನಹುಷ್ಯಸ್ಯ ಬರ್ಹಿಷಿ ದೇವಾ ಆಸತೇ ತೇ ಅಧಿ ಬ್ರುವಂತು ನಃ ॥**

(ಋ. ಸಂ. ೧೦-೬೩-೧)

ಎಂಬ ಋಕ್ಕಿನಲ್ಲಿಯೂ ಸೂಚಿತವಾಗಿದೆ. ಬೇರೆಲ್ಲಿಯೂ ಇಲ್ಲ. ಉದಾಹರಣೆಗಾಗಿ ಕೊಟ್ಟಿರುವ ಮೇಲಿನ ಋಕ್ಕಿನಲ್ಲಿ ಯಯಾತಿಯು ನಹುಷನ ಅಥವಾ ನಹುಷ ಜನಾಂಗದ ಸಂಬಂಧಿಯೆಂದು ಹೇಳಿರುವುದರಿಂದ ಈ ರಾಜನು ನಹುಷ ಜನಾಂಗಕ್ಕೆ ರಾಜನಾಗಿದ್ದನೆಂದು ಹೇಳಬಹುದು. ಅಥವಾ ಈ ರಾಜನು ನಹುಷನ ವಂಶಸ್ಥನಾಗಿದ್ದಿರಬಹುದು. ಪುರಾಣಾದಿಗಳಲ್ಲಿ ಹೇಳಿರುವ ನಹುಷ, ಯಯಾತಿ ಎಂಬ ರಾಜರಿಗೂ ಋಗ್ವೇದದಲ್ಲಿ ಹೇಳಿರುವ ಈ ಹೆಸರಿನ ರಾಜರಿಗೂ ಯಾವ ಸಂಬಂಧವೂ ಇಲ್ಲ.

**ದೈವ್ಯಂ ಜನಂ**—ದೇವತಾಸಂಬಂಧಿಯಾದ ಜನರನ್ನು ಎಂದರೆ ದೇವತೆಗಳನ್ನು.

॥ ವ್ಯಾಕರಣಪ್ರಕ್ರಿಯಾ ॥

**ಮನುಷ್ವತ್**—**'ತೇನತುಲ್ಯಂ ಕ್ರಿಯಾಚೇತ್ ವತಿಃ'** (ಪಾ. ಸೂ. ೫-೧-೧೧೫) ಅವನಿಂದ ಸಮಾನವಾದ ಕ್ರಿಯೆ ಉಳ್ಳವನು ಎಂಬರ್ಥದಲ್ಲಿ ಪ್ರಥಮಾಂತದಮೇಲೆ ವತಿ ಪ್ರತ್ಯಯ ಬರುತ್ತದೆ. ಇದರಿಂದಾಗಲೀ ಅಥವಾ **'ತತ್ರ ತಸ್ಯೇವ'** (ಪಾ. ಸೂ. ೫-೧-೧೧೬) ಎಂಬ ಸೂತ್ರದಿಂದ ಷಷ್ಠ್ಯರ್ಥದಲ್ಲಿ ವತಿ ಪ್ರತ್ಯಯ ವಿಧಾನಮಾಡಿರುವುದರಿಂದ ಅದರಿಂದಾಗಲೀ ವತಿ ಪ್ರತ್ಯಯ ಬರುತ್ತದೆ. ಅಯಸ್ಮಯಾದಿಯಲ್ಲಿ ಸೇರಿರುವುದರಿಂದ **'ಅಯಸ್ಮಯಾದೀನಿ ಛಂದಸಿ'** ಎಂಬುದರಿಂದ ಭ ಸಂಜ್ಞೆ ಇರುವುದರಿಂದ ಪದಸಂಜ್ಞೆ ಇಲ್ಲದಿರುವುದರಿಂದ ಸಕಾರಕ್ಕೆ ರುತ್ವ ವಿಸರ್ಗಗಳು ಬರುವುದಿಲ್ಲ. **'ಆದೇಶಪ್ರತ್ಯಯಯೋಃ'** ಎಂಬುದರಿಂದ ಷತ್ವ ಬಂದರೆ ಮನುಷ್ವತ್ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ವಕಾರೋತ್ತರಾಕಾರವು ಉದಾತ್ತವಾಗುತ್ತದೆ.

ಅಂಗಿರಸ್ವತ್, ಯಯಾತಿವತ್, ಪೂರ್ವವತ್, ಈ ಮೂರು ಶಬ್ದಗಳಿಗೂ ಹಿಂದಿನಂತೆಯೇ ಪ್ರಥಮಾರ್ಥದಲ್ಲಿ ಯಾಗಲೀ, ಷಷ್ಠ್ಯರ್ಥದಲ್ಲಿಯಾಗಲೀ ವತಿ ಪ್ರತ್ಯಯ ಬರುತ್ತದೆ. ಪ್ರಕ್ರಿಯಾ ಪೂರ್ವದಂತೆಯೇ.

**ವಹ**—ವಹ ಪ್ರಾಪಣೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷದ ಸಿಪಿಗೆ ಹಿ ಆದೇಶ. **'ಕರ್ತರಿ ಶಪ್'** ಎಂಬುದರಿಂದ ಶಪ್ ವಿಕರಣ. **'ಅತೋಹೇಃ'** ಎಂಬುದರಿಂದ ಹಿಲುಕ್. ವಹ ಎಂದು ರೂಪವಾಗುತ್ತದೆ. **'ದ್ವ್ಯಚೋಽತಸ್ತಿಙಃ'** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾಪಾಠದಲ್ಲಿ ದೀರ್ಘ ಬರುತ್ತದೆ.

**ಯಕ್ಷಿ**—ಯಜ ದೇವಪೂಜಾ ಸಂಗತಿಕರಣದಾನೇಷು ಧಾತು. ಭ್ವಾದಿ ಲೋಟ್ ಮಧ್ಯಮಪುರುಷದಲ್ಲಿ ಸಿಪ್. **'ವ್ಯತ್ಯಯೋ ಬಹುಲಂ'** ಎಂಬುದರಿಂದ ಅದಕ್ಕೆ ಹಿ ಆದೇಶ ಬರುವುದಿಲ್ಲ **'ಬಹುಲಂ ಛಂದಸಿ'** ಎಂಬುದರಿಂದ ಶಪಿಗೆ ಲುಕ್. ಯಜ್+ಸಿ, ಎಂದಿರುವಾಗ **'ವ್ರಶ್ಚಭ್ರಸ್ಜ-'** ಸೂತ್ರದಿಂದ ಜಕಾರಕ್ಕೆ ಷಕಾರಾದೇಶ. ಷಕಾರಕ್ಕೆ ಸಕಾರ ಪರದಲ್ಲಿರುವುದರಿಂದ **'ಷಢೋಃ ಕಃ ಸಿ'** ಸೂತ್ರದಿಂದ ಕಕಾರಾದೇಶ ಬರುತ್ತದೆ. ಕಕಾರದ ಪರದಲ್ಲಿ ಸಕಾರ ಬಂದುದರಿಂದ **'ಆದೇಶಪ್ರತ್ಯಯಯೋಃ'** ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಯಕ್ಷಿ ಎಂದು ರೂಪವಾಗುತ್ತದೆ. ॥ ೧೭ ॥

॥ ಸಂಹಿತಾಪಾಠಃ ॥

ಏತೇನಾಗ್ನೇ ಬ್ರಹ್ಮಣಾ ವಾವೃಧಸ್ವ ಶಕ್ತೀ ವಾ ಯತ್ತೇಚಕೃಮಾ
ವಿದಾ ವಾ ।
ಉತ ಪ್ರ ಣೇಷ್ಯಭಿ ವಸ್ಯೋ ಅಸ್ಮಾನ್ತ್ಸಂ ನಃ ಸೃಜಸುಮತ್ಯಾ
ವಾಜವತ್ಯಾ ॥ ೧೮ ॥

॥ ಪದಪಾಠಃ ॥

ಏತೇನ । ಅಗ್ನೇ । ಬ್ರಹ್ಮಣಾ । ವವೃಧಸ್ವ । ಶಕ್ತೀ । ವಾ । ಯತ್ । ತೇ ।
ಚಕೃಮ । ವಿದಾ । ವಾ ।
ಉತ । ಪ್ರ । ನೇಷಿ । ಅಭಿ । ವಸ್ಯಃ । ಅಸ್ಮಾನ್ । ಸಮ್ । ನಃ । ಸೃಜ ।
ಸುಽಮತ್ಯಾ । ವಾಜಽವತ್ಯಾ ॥ ೧೮ ॥

|| ಸಾಯಣಭಾಷ್ಯಂ ||

ಸಾಗ್ನಿಚಿಯನೇ ಕ್ರತಾವುಖಾಸಂಭರಣೀಯಾಯಾಮಿಷ್ಟಾವಗ್ನೇರ್ಬ್ರಹ್ಮಣ್ವತಃ ಪುರೋನು-ವಾಕ್ಯೈತೇನಾಗ್ನ ಇತ್ಯೇಷಾ । ದರ್ಶಪೂರ್ಣಮಾಸಾಭ್ಯಾಮಿಷ್ಟ್ವೇತಿ ಖಂಡ ಏತೇನಾಗ್ನೇ ಬ್ರಹ್ಮಣಾ ವಾವೃಧಸ್ವ ಬ್ರಹ್ಮ ಚ ತೇ ಜಾತವೇದೋ ನಮಶ್ಚ । ಆ. ೪-೧ । ಇತಿ ಸೂತ್ರಿತಂ ||

ಹೇ ಅಗ್ನೇ ಏತೇನಾಸ್ಮತ್ಪ್ರಯುಕ್ತೇನ ಬ್ರಹ್ಮಣಾ ಮಂತ್ರೇಣ ವವೃಧಸ್ವ । ಅಭಿವೃದ್ಧೋ ಭವ । ಶಕ್ತೀ ವಾ ವಿದಾ ವಾ ಅಸ್ಮದೀಯಶಕ್ತ್ಯಾ ಚಾಸ್ಮದೀಯಜ್ಞಾನೇನ ಚ ತೇ ತವ ಯತ್ಸ್ತೋತ್ರಂ ಚಕೃಮ ವಯಂ ಕೃತವಂತಃ । ಏತೇನ ಬ್ರಹ್ಮಣೇತಿ ಪೂರ್ವತ್ರಾನ್ವಯಃ । ಉತಾಪಿ ಚಾಸ್ಮಾನನುಷ್ಠಾತ್ಯನ್ ವಸ್ಯೋ ವಸುಮತ್ತರತ್ವಲಕ್ಷಣಂ ಶ್ರೇಯಃ ಪ್ರ ಣೇಷಿ । ಪ್ರಕರ್ಷೇಣ ಪ್ರಾಪಯ । ನೋಽಸ್ಮಾನ್ವಾಜವತ್ಯಾ ಪ್ರಭೂತಾನ್ನಯುಕ್ತಯಾ ಸುಮತ್ಯಾನುಷ್ಠಾನವಿಷಯಯಾ ಶೋಭನಬುದ್ಧ್ಯಾ ಸಂ ಸೃಜ । ಸಂಯೋಜಯ || ವವೃಧಸ್ವ । ವೃಧು ವೃದ್ಧೌ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ದ್ವಿರ್ಭಾವಹಲಾದಿ-ಶೇಷೋರದತ್ವಾನಿ । ಅಭ್ಯಾಸಸ್ಯ ಸಂಹಿತಾಯಾಂ ದೀರ್ಘಶ್ಛಾಂದಸಃ । ಶಕ್ತೀ । ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘತ್ವಂ । ಕ್ತಿನೋ ನಿತ್ತ್ವಾದಾದ್ಯುದಾತ್ತತ್ವಂ । ವಿದಾ । ಸಾವೇಕಾಚ ಇತಿ ತೃತೀಯಾಯಾ ಉದಾತ್ತತ್ವಂ । ನೇಷಿ । ಣೀಞ್ ಪ್ರಾಪಣೇ । ಬಹುಲಂ ಛಂದಸೀತಿ ಶಪೋ ಲುಕ್ । ಉಪಸರ್ಗಾದಸಮಾಸ ಇತಿ ಣತ್ವಂ । ಸುಮತ್ಯಾ । ಮನ್‌ಕ್ತಿನ್ನಿತ್ಯಾದಿನೋತ್ತರಪದಾಂತೋದಾತ್ತತ್ವಂ ಪ್ರಥಮಾಧ್ಯಾಯೇ ಪ್ರಪಂಚಿತಂ । ಋಗ್ವೇ. ೧-೭-೭ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರು-ದಾತ್ತತ್ವಂ || ೩೫ ||

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ಶಕ್ತೀ ವಾ**—(ನಮ್ಮ) ಶಕ್ತಿಗೆ ತಕ್ಕಂತೆಯಾಗಲಿ । **ವಿದಾ ವಾ**—ಜ್ಞಾನಕ್ಕೆ ತಕ್ಕಂತೆಯಾಗಲಿ । **ತೇ**—ನಿನ್ನ । **ಯತ್**—ಯಾವ ಸ್ತೋತ್ರವನ್ನು । **ಚಕೃಮ**—ಮಾಡುತ್ತೇವೆಯೋ । **ಏತೇನ ಬ್ರಹ್ಮಣಾ**—(ನಮ್ಮಿಂದ ಪ್ರಯುಕ್ತವಾದ) ಈ ಮಂತ್ರದಿಂದ । **ವವೃಧಸ್ವ**—ಅಭಿವೃದ್ಧಿಯನ್ನು ಹೊಂದು । **ಉತ**—ಮತ್ತು । **ಅಸ್ಮಾನ್**—(ಅನುಷ್ಠಾತೃಗಳಾದ) ನಮ್ಮನ್ನು । **ವಸ್ಯಃ**—ಶ್ರೇಯಸ್ಸಿನೊಡನೆ । **ಪ್ರಣೇಷಿ**—ಚೆನ್ನಾಗಿ ಸೇರಿಸು । **ನಃ**—ನಮ್ಮನ್ನು । **ವಾಜವತ್ಯಾ**—(ಪ್ರಭೂತವಾದ) ಅನ್ನದೊಂದಿಗೂ । **ಸುಮತ್ಯಾ**—(ಯಜ್ಞಾನುಷ್ಠಾನವಿಷಯವಾದ) ಒಳ್ಳೆಯ ಬುದ್ಧಿಯೊಂದಿಗೂ । **ಸಂಸೃಜ**—ಚೆನ್ನಾಗಿ ಸೇರಿಸು.

|| ಭಾವಾರ್ಥ ||

ಎಲೈ ಅಗ್ನಿಯೇ, ನಮ್ಮ ಶಕ್ತಿಗೆ ತಕ್ಕಂತೆಯೂ ಮತ್ತು ಜ್ಞಾನಕ್ಕೆ ತಕ್ಕಂತೆಯೂ ಯಾವ ನಿನ್ನ ಸ್ತೋತ್ರವನ್ನು ಮಾಡುತ್ತೇವೆಯೋ, ನಮ್ಮಿಂದ ಪ್ರಯುಕ್ತವಾದ ಆ ಮಂತ್ರದಿಂದ ನೀನು ಅಭಿವೃದ್ಧಿಯನ್ನು ಹೊಂದು. ಯಜ್ಞಾನುಷ್ಠಾನವನ್ನು ಮಾಡುವ ನಮಗೆ ಶ್ರೇಯಸ್ಸನ್ನು ದಯಪಾಲಿಸು. ನಮಗೆ ಪ್ರಭೂತವಾದ ಅನ್ನವನ್ನೂ ಯಜ್ಞಾನುಷ್ಠಾನಕ್ಕೆ ತಕ್ಕ ಸದ್ಬುದ್ಧಿಯನ್ನೂ ಚೆನ್ನಾಗಿ ಕೊಡು.

## English Translation.

Agni, allow yourself to be pleased with this hymn, which we have composed according to our ability, according to our knowledge ; therefore lead us towards the highest good and endow as with right understanding together with abundant food.

॥ ವಿಶೇಷವಿಷಯಗಳು ॥

ಅಗ್ನಿ ಚಯನದ ಉಖಾಸಂಭರಣವೆಂಬ ಇಷ್ಟಿಯಲ್ಲಿ ಬ್ರಹ್ಮಣ್ವತನಾಮಧೇಯಾಗ್ನಿಯನ್ನುದ್ದೇಶಿಸಿ ಹೋಮ ಮಾಡುವಾಗ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ದರ್ಶಪೂರ್ಣಮಾಸಾಭ್ಯಾಮಿಷ್ಟ್ವಾ** ಎಂಬ ಖಂಡದಲ್ಲಿ **ಏತೇನಾಗ್ನೇ ಬ್ರಹ್ಮಣಾ ವಾವೃಧಸ್ವ** (ಋ. ಸಂ. ೧-೩೧-೧೮) **ಬ್ರಹ್ಮ ಚ ತೇ ಜಾತವೇದೋ ನಮಶ್ಚ** (ಋ. ಸಂ. ೧೦-೪-೭). ಎಂಬ ಸೂತ್ರದಿಂದ ವಿವೃತ ವಾಗಿರುವುದು.

**ಬ್ರಹ್ಮಣಾ—ಸ್ತೋತ್ರೇಣ** । ಸ್ತೋತ್ರದಿಂದ.

**ವಾವೃಧಸ್ವ—ವೃಧು ವೃದ್ಧೌ । ಅಭಿವೃದ್ಧೋ ಭವ** । ಪ್ರೀತನಾಗು, ತೃಪ್ತನಾಗು.

**ಶಕ್ತೀ ವಿದಾ**—ನಮ್ಮ ಶಕ್ತಿಯಿರುವಷ್ಟು ಮಟ್ಟಿಗೆ, ನಮ್ಮ ತಿಳುವಳಿಕೆ ಇರುವಷ್ಟು ಮಟ್ಟಿಗೆ.

**ಸಂ ನಃ ಸೃಜ ಸುಮತ್ಯಾ ವಾಜವತ್ಯಾ**— ಒಳ್ಳೆಯ ಬುದ್ಧಿಯಿಂದಲೂ ಅನ್ನಾದ್ಯಾಹಾರಗಳಿಂದಲೂ ನಮ್ಮನ್ನು ಸೇರಿಸು ಎಂದರೆ ನಮಗೆ ಅವುಗಳನ್ನು ಕೊಟ್ಟು ಅನುಕೂಲವಾಗುವಂತೆ ಮಾಡು.

॥ ವ್ಯಾಕರಣಪ್ರಕ್ರಿಯಾ ॥

**ವವೃಧಸ್ವ**—ವೃಧು ವೃದ್ಧೌ ಧಾತು. ಭ್ವಾದಿ. ಲೇಟ್ ಮಧ್ಯಮಪುರುಷದಲ್ಲಿ ಥಾಸ್ ಪ್ರತ್ಯಯ ಬರುತ್ತದೆ. **'ಲೇಟೋಡಾಟ್'** ಎಂಬುದರಿಂದ ಅದಕ್ಕೆ ಅಡಾಗಮ. **'ಬಹುಲಂ ಛಂದಸಿ'** ಎಂಬುದರಿಂದ ಶಪಿನ ಸ್ಥಾನದಲ್ಲಿ ಶ್ಲು ವಿಕರಣ. **'ಶ್ಲೌ'** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ವೃ ಎಂದು ಉಳಿದಿರುವಾಗ **'ಉರತ್'** ಎಂಬುದರಿಂದ ಋಕಾರಕ್ಕೆ ಅತ್ವ. ರ ಪರವಾಗಿ ಬಂದರೆ ಪುನಃ ಹಲಾದಿಶೇಷದಿಂದ ರೇಫನಿವೃತ್ತಿ. **ಸವಾಭ್ಯಾಂ ವಾಮೌ'** (ಪಾ. ಸೂ. ೩-೪-೯೧) ಎಂಬುದರಿಂದ ಥಾಸಿನ ಸೇಕಾರಾದೇಶಕ್ಕೆ ವತ್ವ. ವವೃಧಸ್ವ ಎಂದು ರೂಪವಾಗುತ್ತದೆ. ಸಂಹಿತಾಪಾಠದಲ್ಲಿ ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಅತಿಙಂತದ ಪರದಲ್ಲಿರು ವುದರಿಂದ ತಿಙಂತ ನಿಘಾತಸ್ವರ ಬರುತ್ತದೆ.

**ಶಕ್ತೀ**—ಶಕ್ತಿ ಶಬ್ದದ ಮೇಲೆ ತೃತೀಯಾ ಏಕವಚನವಿರುವಾಗ **'ಸುಪಾಂಸುಲುಕ್-'** (ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವ ಸವರ್ಣದೀರ್ಘ ಬರುತ್ತದೆ. ಶಕ್ಲೃ ಶಕ್ತೌ ಧಾತುವಿಗೆ ಕ್ತಿನ್ ಪ್ರತ್ಯಯದಿಂದ ಶಕ್ತಿ ಶಬ್ದವಾಗುತ್ತದೆ. ಕ್ತಿನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿದಾ**—ವಿದ್ ಧಾತುವಿಗೆ ಕ್ವಿಪ್. ತೃತೀಯಾ ಏಕವಚನದಲ್ಲಿ ವಿದಾ ಎಂದು ರೂಪವಾಗುತ್ತದೆ. **'ಸಾವೇಕಾಚಸ್ತೃತೀಯಾದಿಃ'** (ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚ್ ಶಬ್ದದ ಪರದಲ್ಲಿರುವುದರಿಂದ ತೃತೀಯಾ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನೇಷಿ**--ಣೀಞ್ ಪ್ರಾಪಣೇ ಧಾತು. ಭ್ವಾದಿ. ಲಟ್. ಸಿಪ್ ಪರದಲ್ಲಿರುವಾಗ **'ಬಹುಲಂ ಛಂದಸಿ'** ಎಂಬುದರಿಂದ ಶಪಿಗೆ ಲುಕ್. ಧಾತ್ವಾದಿಯ ಣಕಾರಕ್ಕೆ ನಕಾರಾದೇಶ. ಸಾರ್ವಧಾತುಕನಿಮಿತ್ತಕವಾಗಿ ಧಾತುವಿಗೆ ಗುಣ. ಇಣಿನ ಪರದಲ್ಲಿರುವುದರಿಂದ **'ಆದೇಶಪ್ರತ್ಯಯಯೋಃ'** ಎಂಬುದರಿಂದ ಪ್ರತ್ಯಯಕ್ಕೆ ಷತ್ವ ನೇಷಿ ಎಂದು ರೂಪವಾಗುತ್ತದೆ. ಪ್ರ+ನೇಷಿ, ಎಂದಿರುವಾಗ **'ಉಪಸರ್ಗಾದಸಮಾಸೇಽಪಿಣೋಪದೇಶಸ್ಯ'** (ಪಾ ಸೂ. ೮-೪-೧೪) ಎಂಬುದರಿಂದ ಧಾತುವಿನ ನಕಾರಕ್ಕೆ ಣತ್ವ ಬರುತ್ತದೆ ಪ್ರಣೇಷಿ ಎಂದಾಗುತ್ತದೆ

**ಸುಮತ್ಯಾ**—ಶೋಭನಾ ಚಾಸೌ ಮತಿಶ್ಚ ಸುಮತಿಃ ತಯಾ. ಇಲ್ಲಿ ಉತ್ತರಪದ ಅಂತೋದಾತ್ತಸ್ವರ ಬರುವುದು ಎಂದು **'ಮನ್ಕ್ತಿನ್-'** ಎಂಬುದನ್ನು ಆರಂಭಿಸಿ ವಿಸ್ತೃತವಾಗಿ ಪ್ರಥಮಾಧ್ಯಾಯದಲ್ಲಿ (ಋ. ಸಂ. ೧-೭-೭) ವಿವರಿಸಲ್ಪಟ್ಟಿದೆ. ತೃತೀಯಾ ಏಕವಚನದಲ್ಲಿ ಯಣಾದೇಶ ಬಂದಿದೆ. **'ಉದಾತ್ತಯಣೋ ಹಲ್ಪೂರ್ವಾತ್'** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೮ ॥

ಮೂವತ್ತೊಂದನೇ ಸೂಕ್ತವು ಸಮಾಪ್ತವಾಗಿದೆ.

# ಮೂವತ್ತೆರಡನೆಯ ಸೂಕ್ತವು

**ಇಂದ್ರಸ್ಯ ನು ವೀರ್ಯಾಣೀತಿ ಪಂಚದಶರ್ಚಂ ದ್ವಿತೀಯಂ ಸೂಕ್ತಂ । ಆಂಗಿರಸೋ ಹಿರಣ್ಯಸ್ತೂಪ ಋಷಿಃ । ತ್ರಿಷ್ಟುಪ್ ಛಂದಃ । ಇಂದ್ರೋ ದೇವತಾ । ಇಂದ್ರಸ್ಯ ಪಂಚೋನೇತ್ಯನುಕ್ರಮಣಿಕಾ । ಅಗ್ನಿಷ್ಟೋಮೇ ಮಾಧ್ಯಂದಿನೇ ಸವನೇ ನಿಷ್ಕೇವಲ್ಯಶಸ್ತ್ರ ಇಂದ್ರಸ್ಯ ನು ವೀರ್ಯಾಣೀತಿ ನಿವಿದ್ಧಾನೀಯಂ ಸೂಕ್ತಂ । ನಿಷ್ಕೇವಲ್ಯಸ್ಯೇತಿ ಖಂಡ ಇಂದ್ರಸ್ಯ ನು ವೀರ್ಯಾಣೀತ್ಯೇತಸ್ಮಿನ್ನೈಂದ್ರೀಂ ನಿವಿದಂ ದಧ್ಯಾತ್ । ಆ. ೫-೧೫ । ಇತಿ ॥ ವಿಷುವತ್ಯಪಿ ತಸ್ಮಿನ್ ಶಸ್ತ್ರ ಏತದ್ವಿನಿಯುಕ್ತಂ । ವಿಷುವಾನ್ದಿವಾ ಕೀರ್ತ್ಯ ಇತಿ ಖಂಡೇ ಸೂತ್ರಿತಂ । ಇಂದ್ರಸ್ಯ ನು ವೀರ್ಯಾಣೀತ್ಯೇತಸ್ಮಿನ್ನೈಂದ್ರೀಂ ನಿವಿದಂ ಶಸ್ತ್ವಾ । ಆ. ೮-೬ । ಇತಿ ॥ ಮಹಾವ್ರತೇ ನಿಷ್ಕೇವಲ್ಯೇಽಪ್ಯೇತದೇವ ವಿನಿಯುಕ್ತಂ । ರಾಥಂತರೋ ದಕ್ಷಿಣಃ ಪಕ್ಷ ಇತಿ ಖಂಡೇ ಚತಸ್ರಃ ಸತೀಃ ಷಡ್ ಬೃಹತೀಃ ಕರೋತೀಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ । ಐ. ಬ್ರಾ. ೫-೨-೨ । ಇತಿ ॥**

ಅನುವಾದವು—**ಇಂದ್ರಸ್ಯ ನು ವೀರ್ಯಾಣಿ** ಎಂಬುವುದು ಏಳನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ **ಹಿರಣ್ಯಸ್ತೂಪ ಆಂಗಿರಸಃ** ಎಂಬುವನು ಋಷಿಯು. ತ್ರಿಷ್ಟುಪ್ ಛಂದಸ್ಸು. ಇಂದ್ರನು ದೇವತೆಯು. **ಇಂದ್ರಸ್ಯ ಪಂಚೋನಾ** ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ಮಾಧ್ಯಂದಿನಸವನಕಾಲದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಮಾಡುವಾಗ **ಇಂದ್ರಸ್ಯ ನು ವೀರ್ಯಾಣಿ** ಎಂಬ ಸೂಕ್ತವನ್ನು ನಿವಿದ್ಧಾನೀಯ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ನಿಷ್ಕೇವಲ್ಯಸ್ಯ** ಎಂಬ ಖಂಡದಲ್ಲಿ **ಇಂದ್ರಸ್ಯ ನು ವೀರ್ಯಾಣೀತ್ಯೇತಸ್ಮಿನ್ನೈಂದ್ರೀಂ ನಿವಿದಂ ದಧ್ಯಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫–೧೫) ವಿಷುವತಿಯಲ್ಲಿಯೂ ಸಹ ಈ ಸೂಕ್ತವು ಶಸ್ತ್ರಮಂತ್ರಪಠನಕ್ಕಾಗಿ ವಿನಿಯೋಗಿಸಲ್ಪಡುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ವಿಷುವಾನ್ದಿವಾಕೀರ್ತ್ಯ** ಎಂಬ ಖಂಡದಲ್ಲಿ **ಇಂದ್ರಸ್ಯ ನು ವೀರ್ಯಾಣೀತ್ಯೇತಸ್ಮಿನ್ನೈಂದ್ರೀಂ ನಿವಿದಂ ಶಸ್ತ್ವಾ** ಎಂಬ ಸೂತ್ರದಿಂದ ನಿರೂಪಿಸಲ್ಪಟ್ಟಿರುವುದು. (ಆ ೮–೬) ಮಹಾವ್ರತದಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದು. ಈ ವಿಷಯವನ್ನು ಐತರೇಯ ಆರಣ್ಯಕದ **ರಾಥಂತರೋ ದಕ್ಷಿಣಃ ಪಕ್ಷಃ** ಎಂಬ ಖಂಡದಲ್ಲಿ **ಚತಸ್ರಃ ಸತೀಃ ಷಡ್ಬೃಹತೀಃ ಕರೋತೀಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ** ಎಂಬ ವಾಕ್ಯವು ವಿವರಿಸುವುದು (ಐ. ಆ. ೫–೨–೨).

## ಸೂಕ್ತ—೩೨

॥ ಮಂಡಲ—೧ ॥ ಅನುವಾಕ—೭ ॥ ಸೂಕ್ತ—೩೨ ॥

॥ ಅಷ್ಟಕ—೧ ॥ ಅಧ್ಯಾಯ—೨ ॥ ವರ್ಗ—೩೬, ೩೭, ೩೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

॥ ಋಷಿಃ—ಹಿರಣ್ಯಸ್ತೂಪ ಆಂಗಿರಸಃ ॥

॥ ದೇವತಾ—ಇಂದ್ರಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇನ್ದ್ರಸ್ಯ ನು ವೀರ್ಯಾಣಿ ಪ್ರ ವೋಚಂ ಯಾನಿ ಚಕಾರ ಪ್ರಥಮಾನಿ ವಜ್ರೀ ।

ಅಹನ್ನಹಿಮನ್ವಪಸ್ತತರ್ದ ಪ್ರ ವಕ್ಷಣಾ ಅಭಿನತ್ಪರ್ವತಾನಾಂ ॥

॥ ಪದಪಾಠಃ ॥

ಇನ್ದ್ರಸ್ಯ । ನು । ವೀರ್ಯಾಣಿ । ಪ್ರ । ವೋಚಂ । ಯಾನಿ । ಚಕಾರ । ಪ್ರಥಮಾನಿ । ವಜ್ರೀ ।

ಅಹನ್ । ಅಹಿಂ । ಅನು । ಅಪಃ । ತತರ್ದ । ಪ್ರ । ವಕ್ಷಣಾಃ । ಅಭಿನತ್ । ಪರ್ವತಾನಾಂ ॥ ೧ ॥

॥ ಸಾಯಣಭಾಷ್ಯಂ ॥

ವಜ್ರೀ ವಜ್ರಯುಕ್ತ ಇಂದ್ರಃ ಪ್ರಥಮಾನಿ ಪೂರ್ವಸಿದ್ಧಾನಿ ಮುಖ್ಯಾನಿ ವಾ ಯಾನಿ ವೀರ್ಯಾಣಿ ಪರಾಕ್ರಮಯುಕ್ತಾನಿ ಕರ್ಮಾಣಿ ಚಕಾರ ತಸ್ಯೇಂದ್ರಸ್ಯ ತಾನಿ ವೀರ್ಯಾಣಿ ನು ಕ್ಷಿಪ್ರಂ ಪ್ರಬ್ರವೀಮಿ । ಕಾನಿ ವೀರ್ಯಾಣೀತಿ ತದುಚ್ಯತೇ । ಅಹಿಂ ಮೇಘಮಹನ್ । ಹತವಾನ್ । ತದೇತದೇಕಂ ವೀರ್ಯಂ । ಅನು ಪಶ್ಚಾದಪೋ ಜಲಾನಿ ತತರ್ದ । ಹಿಂಸಿತವಾನ್ । ಭೂಮೌ ಪಾತಿತವಾನಿತ್ಯರ್ಥಃ । ಇದಂ ದ್ವಿತೀಯಂ ವೀರ್ಯಂ । ಪರ್ವತಾನಾಂ ಸಂಬಂಧಿನೀರ್ವಕ್ಷಣಾಃ ಪ್ರವಹಣಶೀಲಾ ನದೀಃ ಪ್ರಾಭಿನತ್ । ಭಿನ್ನವಾನ್ । ಕೂಲದ್ವಯಕರ್ಷಣೇನ ಪ್ರವಾಹಿತವಾನಿತ್ಯರ್ಥಃ । ಇದಂ ತೃತೀಯಂ ವೀರ್ಯಂ । ಏವಮುತ್ತರತ್ರಾಪಿ ದ್ರಷ್ಟವ್ಯಂ ॥ ವೀರ್ಯಾಣಿ । ಶೂರ ವೀರ ವಿಕ್ರಾಂತೌ । ಣ್ಯಂತಾದಚೋ ಯದಿತಿ ಯತ್ । ಣೇರನಿಟೀತಿ ಣಿಲೋಪಃ । ತಿತ್ಸ್ವರಿತಮಿತಿ ಸ್ವರಿತತ್ವಂ । ಯತೋಽನಾವ ಇತ್ಯಾದ್ಯುದಾತ್ತತ್ವಂ ನ ಭವತಿ । ಆದ್ಯುದಾತ್ತತ್ವೇ ಹಿ ಸುಶಬ್ದೇನ ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯನೇನೈವೋತ್ತರಪದಾದ್ಯುದಾತ್ತತ್ವಸ್ಯ ಸಿದ್ಧತ್ವಾದ್ವೀರವೀರ್ಯೌ ಚೇತಿ ಪುನಸ್ತದ್ವಿಧಾನಮನರ್ಥಕಂ ಸ್ಯಾತ್ । ಅತೋಽವಗಮ್ಯತೇ ಯತೋಽನಾವ ಇತ್ಯಾದ್ಯುದಾತ್ತತ್ವಂ ವೀರಶಬ್ದೇ ನ ಪ್ರವರ್ತತ ಇತಿ । ಅತಃ ಪರಿಶೇಷಾತ್ತಿತ್ಸ್ವರಿತಮಿತಿ ಪ್ರತ್ಯಯಸ್ಯ ಸ್ವರಿತತ್ವಮೇವ । ವೋಚಂ । ಅಸ್ಯತಿವಕ್ತಿಖ್ಯಾತಿಭ್ಯೋಽಙಿತಿ ಚ್ಲೇರಙಾದೇಶಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಚಕಾರ । ಣಲಿ ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ । ಅಹನ್ । ಲಙೀತಶ್ಚೇತೀಕಾರಲೋಪೇ ಹಲ್ಙ್ಯಾಬ್ಭ್ಯ ಇತಿ ತಕಾರಲೋಪಃ । ಅಹಿಂ । ಆಙ್ಪೂರ್ವಾದ್ಧಂತೇರಾಙಿ ಶ್ರಿಹನಿಭ್ಯಾಂ ಹ್ರಸ್ವಶ್ಚ । ಉ. ೪-೧೩೭ । ಇತೀಪ್ರತ್ಯಯಃ । ಆಙೋ ಹ್ರಸ್ವತ್ವಂ ಚ । ಚಶಬ್ದೇನ ವೇಞೋ ಡಿತ್ ಸಮಾನೇ ಖ್ಯಶ್ಚೋದಾತ್ತ ಇತಿ ಡಿತ್ವಂ ಪೂರ್ವಪದೋದಾತ್ತತ್ವಂ ಚಾನುಕೃಷ್ಯತೇ । ತತಷ್ಟಿಲೋಪೇ ಪೂರ್ವಪದಸ್ಯೋದಾತ್ತತ್ವಂ । ತತರ್ದ । ಉತೃದಿರ್ ಹಿಂಸಾನಾದರಯೋಃ । ತಿಙ್ಙತಿಙ ಇತಿ ನಿಘಾತಃ । ವಕ್ಷಣಾಃ । ವಕ್ಷ ರೋಷೇ । ಕೃಪೃವೃಜಿಮಂದಿನಿಧಾಞ್ಭ್ಯಃ ಕ್ಯುರಿತಿ ಬಹುಲವಚನಾತ್ । ... ಪಾ. ೩-೨-೧೫೧ । ಇತಿ ಯುಚ್ । ಚಿತ್ಸ್ವರಂ ಬಾಧಿತ್ವಾ ವ್ಯತ್ಯಯೇನ ಪ್ರತ್ಯಯಸ್ವರಃ ॥

|| ಪ್ರತಿಪದಾರ್ಥ ||

**ವಜ್ರೀ**—ವಜ್ರಾಯುಧಯುಕ್ತನಾದ ಇಂದ್ರನು । **ಪ್ರಥಮಾನಿ**—ಹಿಂದೆ ಸಾಧಿಸಿದ । **ಯಾನಿ ವೀರ್ಯಾಣಿ**—ಯಾವ ಪರಾಕ್ರಮದ ಕಾರ್ಯಗಳನ್ನು । **ಚಕಾರ**—ಮಾಡಿದನೋ । **ಇಂದ್ರಸ್ಯ**—ಇಂದ್ರನ । **ವೀರ್ಯಾಣಿ**—ಆ ಪರಾಕ್ರಮದ ಕಾರ್ಯಗಳನ್ನು । **ನು**—ಒಡನೆಯೇ । **ಪ್ರ ವೋಚಂ**—ವರ್ಣಿಸಿ ಹೇಳುತ್ತೇನೆ । (**ಇಂದ್ರಃ**—ಇಂದ್ರನು) । **ಅಹಿಂ**—ಮೇಘವನ್ನು । **ಅಹನ್**—ಸೀಳಿದನು । **ಅನು**—ಅನಂತರ । **ಅಪಃ**—ನೀರುಗಳನ್ನು । **ತತರ್ದ**—ಹಿಂಸಿಸಿದನು (ಭೂಮಿಯ ಮೇಲೆ ಬೀಳುವಂತೆ ಮಾಡಿದನು) । **ಪರ್ವತಾನಾಂ**—ಪರ್ವತಗಳಲ್ಲಿ । **ವಕ್ಷಣಾಃ**—ಪ್ರವಹಿಸುವ ನದಿಗಳನ್ನು । **ಪ್ರ ಅಭಿನತ್**—(ದಡಗಳನ್ನು) ಕೊರೆದು ಹರಿಯುವಂತೆ ಮಾಡಿದನು.

|| ಭಾವಾರ್ಥ ||

ವಜ್ರಾಯುಧಯುಕ್ತನಾದ ಇಂದ್ರನು ಹಿಂದೆ ಯಾವ ಯಾವ ಪರಾಕ್ರಮದ ಕಾರ್ಯಗಳನ್ನು ಸಾಧಿಸಿದನೋ ಆ ಪರಾಕ್ರಮದ ಕಾರ್ಯಗಳನ್ನೆಲ್ಲಾ ಒಂದೊಂದಾಗಿ ವರ್ಣಿಸಿ ಒಡನೆಯೇ ಹೇಳುತ್ತೇನೆ. ಉದಾಹರಣೆಗಾಗಿ ಇಂದ್ರನು ಮೇಘವನ್ನು ಸೀಳಿದನು. ಅನಂತರ ನೀರುಗಳನ್ನು ಭೂಮಿಯ ಮೇಲೆ ಬೀಳುವಂತೆ ಮಾಡಿದನು. ಮತ್ತು ಪರ್ವತಗಳಲ್ಲಿ ಹರಿಯುವ ನದಿಗಳಿಗೆ ಎರಡು ಕಡೆಗಳಲ್ಲಿಯೂ ದಡವನ್ನು ಮಾಡಿ ಅವುಗಳಿಗೆ ಹರಿಯುವ ದಾರಿಯನ್ನು ಮಾಡಿದನು.

English Translation.

I will now ennumerate the valorous deeds of Indra, the weilder of the thunderbolt has achieved ; he clove the cloud, he sent down the waters, he broke open a way for the torrents of the mountain.

|| ವಿಶೇಷವಿಷಯಗಳು ||

ಈ ಸೂಕ್ತದ ಋಷಿಯಾದ ಹಿರಣ್ಯಸ್ತೂಪ ಋಷಿಯು ಈ ಸೂಕ್ತದಿಂದಲೂ ಮುಂದಿನ ಸೂಕ್ತದಿಂದಲೂ ಇಂದ್ರನನ್ನು ಸ್ತೋತ್ರಮಾಡುವುದಕ್ಕೆ ಪ್ರಾರಂಭಿಸಿ ಇಂದ್ರನ ಸಾಹಸಕೃತ್ಯಗಳನ್ನು ಒಂದೊಂದಾಗಿ ವರ್ಣಿಸುವೆನೆಂದು ಹೇಳಿರುವನು. ಅವುಗಳಲ್ಲಿ ಇಂದ್ರನು ಮೇಘರೂಪದಿಂದಿರುವ ವೃತ್ರನನ್ನು ವಜ್ರಾಯುಧದಿಂದ ಪ್ರಹರಿಸಿದ್ದು ಮೊದಲನೆಯ ಸಾಹಸಕೃತ್ಯವೆಂದೂ, ಆ ಮೇಘದಿಂದ ಮಳೆಯು ಭೂಮಿಯ ಮೇಲೆ ಬೀಳುವಂತೆ ಮಾಡಿರುವ ಕಾರ್ಯವು ಎರಡನೆಯದೆಂದೂ, ಭೂಮಿಯ ಮೇಲೆ ಬಿದ್ದ ನೀರು ಪ್ರವಾಹರೂಪದಿಂದ ನದಿಯಾಗಿ ಪರ್ವತಗಳನ್ನು ಭೇದಿಸಿಕೊಡು ಹರಿಯುವುದೆಂದು ಮೂರನೆಯ ಕೆಲಸವನ್ನೂ ವರ್ಣಿಸಲಾಗಿರುವುದೆಂದೂ ಭಾಷ್ಯಕಾರರು ಹೇಳಿರುವರು.

**ವೀರ್ಯಾಣಿ**—ಪರಾಕ್ರಮಗಳು, ಎಂದರೆ ಪರಾಕ್ರಮದಿಂದ ಕೂಡಿದ ಸಾಹಸಕೃತ್ಯಗಳು.

**ಪ್ರ ವೋಚಂ**—ಹೇಳುವೆನು. ಒಂದೊಂದಾಗಿ ವರ್ಣಿಸುವೆನು.

**ಯಾನಿ ಪ್ರಥಮಾನಿ**—ಮೊದಲು ಮಾಡಿದ ಸಾಹಸಕೃತ್ಯಗಳು, ಅಥವಾ **ಪ್ರಥಮಾನಿ** ಎಂಬ ಶಬ್ದಕ್ಕೆ ಮುಖ್ಯವಾದ ಎಂಬರ್ಥವನ್ನು ಹೇಳಬಹುದು. ಮುಖ್ಯವಾದ ಸಾಹಸಕೃತ್ಯಗಳು ಎಂದಭಿಪ್ರಾಯವು.

**ವಜ್ರೀ—ವಜ್ರಯುಕ್ತಃ** । ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನು.

**ಅಹಿಂ**—ಮೇಘವನ್ನು ; ಅದ್ರಿಃ ಗ್ರಾವಾ ಮೊದಲಾದ ಮೂವತ್ತು ಮೇಘನಾಮಗಳ ಮಧ್ಯದಲ್ಲಿ ಅಹಿಃ ಎಂಬ ಶಬ್ದವು ಪಠಿತವಾಗಿರುವುದರಿಂದ ಅಹಿಂ ಎಂದರೆ ಮೇಘವನ್ನು ಎಂದರ್ಥವು (ನಿ. ೨-೨೧). ಅಹಿ ಎಂದರೆ ಉದಕವೆಂದೂ ಅರ್ಥವು (ನಿ. ೨-೨೪). ಆಧುನಿಕಸಂಸ್ಕೃತದಲ್ಲಿ ಅಹಿ ಎಂದರೆ ಸರ್ಪವು.

**ವಕ್ಷಣಾಃ— ಅವನಯಃ ಯಹ್ವ್ಯಃ** ಮೊದಲಾದ ಮೂವತ್ತೇಳು ನದೀನಾಮಗಳ ಮಧ್ಯದಲ್ಲಿ ವಕ್ಷಣಾಃ ಎಂಬ ಶಬ್ದವು ಪಠಿತವಾಗಿರುವುದರಿಂದ ವಕ್ಷಣಾಃ ಎಂದರೆ ನದಿಗಳು ಎಂದರ್ಥವು ಮೇಘವು ಸುರಿಸಿದ ಮಳೆಯು ಪರ್ವತಗಳ ಮೇಲೆ ಬಿದ್ದು ಅಲ್ಲಿಂದ ನದಿಯಾಗಿ ಹರಿದು ಹೋಗುವುದು. ಅದನ್ನೇ ಇಲ್ಲಿ ವರ್ಣಿಸಿರುವುದು.

**ಪ್ರ ಅಭಿನತ್ ಪರ್ವತಾನಾಂ**—ಪರ್ವತಗಳಿಂದ ಹೊರಟ ನದಿಗಳು ಪರ್ವತವನ್ನೂ ಭೂಮಿಯನ್ನೂ ಕೊರೆದು ಹರಿಯುವುದಕ್ಕೆ ದಾರಿಮಾಡಿಕೊಂಡು ಹೋಗುವವು ಎಂದಭಿಪ್ರಾಯವು.

ಋಗ್ವೇದಸಂಹಿತಾ ಭಾಗ ೨. ಪೇಜು, 123-124 ರಲ್ಲಿ ವೃತ್ರಾಸುರನ ವಿಷಯವಾದ ವರ್ಣನೆಯನ್ನು ನೋಡಿ.

॥ ವ್ಯಾಕರಣಪ್ರಕ್ರಿಯಾ ॥

**ವೀರ್ಯಾಣಿ**--ಶೂರ ವೀರ ವಿಕ್ರಾಂತೌ ಧಾತು. ಇದಕ್ಕೆ ಣಿಚ್. ಣಿಜಂತದ ಮೇಲೆ **'ಅಚೋಯತ್'** ಎಂಬುದರಿಂದ ಯತ್. ಯತ್ ಪರದಲ್ಲಿರುವಾಗ **'ಣೇರನಿಟಿ'** ಎಂಬುದರಿಂದ ಣಿಚಿಗೆ ಲೋಪ. ವೀರ್ಯ ಎಂದು ಶಬ್ದವಾಗುತ್ತದೆ. ವೀರ್ಯಾಣಿ ದ್ವಿತೀಯಾ ಬಹುವಚನರೂಪ. **'ತಿತ್ ಸ್ವರಿತಮ್'** ಎಂಬುದರಿಂದ ಯತ್ತಿಗೆ ಸ್ವರಿತ ಸ್ವರ ಬರುತ್ತದೆ. ಇಲ್ಲಿ **'ಯತೋಽನಾವಃ'** ಎಂಬುದರಿಂದ ಯದಂತವಾದುದರಿಂದ ಆದ್ಯುದಾತ್ತಸ್ವರವು ಬರ ಬೇಕಷ್ಟೆ ಎಂಬ ಪೂರ್ವಪಕ್ಷವು ಉಂಟಾಗುತ್ತದೆ. ಆದರೆ ಇಲ್ಲಿ ಆದ್ಯುದಾತ್ತಸ್ವರ ಬರುವುದಿಲ್ಲ. ಒಂದುವೇಳೆ ಹಾಗೆ **'ಯತೋಽನಾವಃ'** ಎಂಬುದರಿಂದ ಸ್ವೀಕರಿಸುವುದಾದರೆ ಸು ಶಬ್ದದೊಡನೆ ಬಹುವ್ರೀಹಿಸಮಾಸ ಮಾಡಿದಾಗ (ಶೋಭನಂ ವೀರ್ಯಂ ಯಸ್ಯ ಸಃ) **'ಆದ್ಯುದಾತ್ತಂ ದ್ವ್ಯಚ್ಛಂದಸಿ'** ಎಂಬುದರಿಂದಲೇ ಉತ್ತರಪದ ಆದ್ಯುದಾತ್ತಸ್ವರವು ಸಿದ್ಧವಾಗುವಾಗ **'ವೀರವೀರ್ಯೌ ಚ'** ಎಂಬುದರಿಂದ ಪುನಃ ವಿಶೇಷವಾಗಿ ಉತ್ತರಪದ ಆದ್ಯುದಾತ್ತಸ್ವರವನ್ನು ವಿಧಾನಮಾಡಿದುದು ವ್ಯರ್ಥವಾಗುತ್ತದೆ. ಆದುದರಿಂದ ಪುನಃ ಸೂತ್ರಾರಂಭ ಮಾಡಿರುವುದರಿಂದ ವೀರಶಬ್ದಕ್ಕೆ ಮಾತ್ರ ಯದಂತವಾದರೂ **'ಯತೋಽನಾವಃ'** ಸೂತ್ರದಿಂದ ಆದ್ಯುದಾತ್ತಸ್ವರವು ಬರುವುದಿಲ್ಲ ಎಂದು ಜ್ಞಾಪಿತವಾಗುತ್ತದೆ. ಇದರಿಂದ ಹಿಂದೆ ಹೇಳಿದ ಸ್ವರಿತಕ್ಕೆ ಯಾವ ಬಾಧಕವೂ ಇಲ್ಲ.

**ವೋಚಮ್**—ವಚ ಪರಿಭಾಷಣೇ ಧಾತು. ಅಥವಾ ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಇದಕ್ಕೆ ಲುಙಿನಲ್ಲಿ ವಚಾದೇಶ. ಉತ್ತಮಪುರುಷ ಏಕವಚನದಲ್ಲಿ ಮಿಪ್. ಅದಕ್ಕೆ **'ತಸ್‌ಥಸ್‌ಥ-'** ಸೂತ್ರದಿಂದ ಅಮಾದೇಶ. **'ಅಸ್ಯತಿವಕ್ತಿಖ್ಯಾತಿಭ್ಯೋಽಙ್'** ಎಂಬುದರಿಂದ ಚ್ಲಿಗೆ ಅಙಾದೇಶ. **'ವಚ ಉಮ್'** ಎಂಬುದರಿಂದ

ಧಾತುವಿಗೆ ಉಮಾಗಮ. ಅಂತ್ಯಾಚಿನ ಪರಕ್ಕೆ ಬಂದಾಗ ಗುಣ. **'ಬಹುಲಂಛಂದಸ್ಯಮಾಙ್ಯೋಗೇಽಪಿ'** ಎಂಬುದರಿಂದ ಅಟ್ ಅಂಗಕ್ಕೆ ಬರುವುದಿಲ್ಲ. ವೋಚಂ ಎಂದು ರೂಪವಾಗುತ್ತದೆ.

**ಚಕಾರ**—ಡುಕೃಞ್ ಕರಣೇ ಧಾತು. ಲಿಟಿನ ತಿಪಿಗೆ **'ಪರಸ್ಮೈ ಪದಾನಾಂ–'** ಸೂತ್ರದಿಂದ ಣಲಾದೇಶ. ಧಾತುವಿಗೆ ದ್ವಿತ್ವ, ಉರದತ್ವ, ಹಲಾದಿಶೇಷ ಚುತ್ವ ಕಾರ್ಯಗಳು ಬರುತ್ತವೆ. ಣಲ್ ಪರದಲ್ಲಿರುವಾಗ ಋಕಾರಕ್ಕೆ ವೃದ್ಧಿ. ಚಕಾರ ಎಂದು ರೂಪವಾಗುತ್ತದೆ. ಣಲ್ ಲಿತ್ತಾದುದರಿಂದ **'ಲಿತಿ'** ಸೂತ್ರದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಯಚ್ಛಬ್ದದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಅಹನ್**—ಹನ ಹಿಂಸಾಗತ್ಯೋಃ ಧಾತು. ಅದಾದಿ. ಲಙಿನ ತಿಪಿಗೆ **'ಇತಶ್ಚ'** ಎಂಬುದರಿಂದ ಅಂತ್ಯಲೋಪ ಬರುತ್ತದೆ. **'ಅದಿಪ್ರಭೃತಿಭ್ಯಃ ಶಪಃ'** ಎಂಬುದರಿಂದ ಶಪಿಗೆ ಲುಕ್. ಹಲ್ಲಿನ ಪರದಲ್ಲಿರುವ ತಿಪಿನ ತಕಾರಕ್ಕೆ **'ಹಲ್ಙ್ಯಾಭ್ಯೋ ದೀರ್ಘಾತ್–'** ಸೂತ್ರದಿಂದ ಲೋಪ. ಲಙ್ ನಿಮಿತ್ತವಾಗಿ ಧಾತುವಿಗೆ ಅಡಾಗಮ. ಅಹನ್ ಎಂದು ರೂಪವಾಗುತ್ತದೆ. ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಟ್ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಹಿಮ್**—ಹನ ಹಿಂಸಾಗತ್ಯೋಃ ಧಾತು. **'ಆಙಿ ಶ್ರಿಹನಿಭ್ಯಾಂ ಹ್ರಸ್ವಶ್ಚ'** (ಉ. ಸೂ. ೪–೫೭೭) ಎಂಬುದರಿಂದ ಇ ಪ್ರತ್ಯಯ. ಆಙಿಗೆ ಹ್ರಸ್ವವೂ ಬರುತ್ತದೆ. ಸೂತ್ರದಲ್ಲಿರುವ ಚ ಶಬ್ದದಿಂದ **'ವೇಞೋಡಿತ್'** ಎಂಬುದರಿಂದ ಡಿತ್ ಎಂಬುದೂ, **'ಸಮಾನೇ ಖ್ಯಃಶ್ಚೋದಾತ್ತಃ'** ಎಂಬುದರಿಂದ ಪೂರ್ವಪದೋದಾತ್ತವೂ ಅನುವೃತ್ತವಾಗುತ್ತವೆ. ಇದರಿಂದ ಇ ಪ್ರತ್ಯಯವು ಡಿತ್ ಭಾವವನ್ನು ಹೊಂದುತ್ತದೆ. ಆಗ ಭಸಂಜ್ಞಾ ಇಲ್ಲದಿದ್ದರೂ ಟಿ ಲೋಪವಾಗುತ್ತದೆ. ಆಙಿಗೆ ಹ್ರಸ್ವ ಬಂದರೆ ಅಹಿ ಶಬ್ದವಾಗುತ್ತದೆ. ಪೂರ್ವಪದ ಉದಾತ್ತವೆಂದುದರಿಂದ ಅಕಾರವು ಉದಾತ್ತವಾಗುತ್ತದೆ.

**ತತರ್ದ**—ಉ ತೃದಿರ್ ಹಿಂಸಾನಾದರಯೋಃ ಧಾತು. ಉಕಾರಕ್ಕೆ ಇತ್ಸಂಜ್ಞಾಪ್ರಯುಕ್ತ ಲೋಪ. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಉಕ್ತರೂಪವಾಗುತ್ತದೆ. **'ತಿಙ್ಙತಿಙಃ'** ಎಂಬುದರಿಂದ ನಿಘಾತಸ್ವರ ಬರುತ್ತದೆ

**ವಕ್ಷಣಾಃ**—ವಕ್ಷ ರೋಷೇ ಧಾತು. **'ಕ್ರುಧಮಂಡಾರ್ಥೇಭ್ಯಶ್ಚ'** (ಪಾ. ಸೂ ೩–೨–೧೫೧) ಎಂಬುದರಿಂದ ಯುಚ್ ಪ್ರತ್ಯಯ ಬರುತ್ತದೆ. ಅದಕ್ಕೆ **'ಯುವೋರನಾಕೌ'** ಎಂಬುದರಿಂದ ಅನಾದೇಶ. ಷಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ವಕ್ಷಣ ಶಬ್ದವಾಗುತ್ತದೆ. ಪ್ರಥಮಾ ಬಹುವಚನದರೂಪ. **'ಚಿತಃ'** ಎಂಬುದರಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ **'ವ್ಯತ್ಯಯೋ ಬಹುಲಂ'** ಎಂಬುದರಿಂದ ಪ್ರತ್ಯಯ ಸ್ವರವು ಬರುತ್ತದೆ. ಮಧ್ಯೋದಾತ್ತಪದವಾಗುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ
ಸ್ವರ್ಯಂ ತತಕ್ಷ ।
ವಾಶ್ರಾಇವ ಧೇನವಃ ಸ್ಯನ್ದಮಾನಾ ಅಞ್ಜಃ ಸಮುದ್ರಮವ
ಜಗ್ಮುರಾಪಃ ॥ ೧ ॥

॥ ಪದಪಾಠಃ ॥

ಅಹನ್ । ಅಹಿಂ । ಪರ್ವತೇ । ಶಿಶ್ರಿಯಾಣಂ । ತ್ವಷ್ಟಾ । ಅಸ್ಮೈ । ವಜ್ರಂ ।
ಸ್ವರ್ಯಂ । ತತಕ್ಷ ।
ವಾಶ್ರಾಃಽಇವ । ಧೇನವಃ । ಸ್ಯನ್ದಮಾನಾಃ । ಅಞ್ಜಃ । ಸಮುದ್ರಂ । ಅವ ।
ಜಗ್ಮುಃ । ಆಪಃ ॥ ೧ ॥

॥ ಸಾಯಣಭಾಷ್ಯಂ ॥

ಪರ್ವತೇ ಶಿಶ್ರಿಯಾಣಮಾಶ್ರಿತಮಹಿಂ ಮೇಘಮಹನ್ । ಹತವಾನ್ । ಅಸ್ಮಾ ಇಂದ್ರಾಯ ಸ್ವರ್ಯಂ ಸುಷ್ಠು ಪ್ರೇರಣೀಯಂ ಯದ್ವಾ ಶಬ್ದನೀಯಂ ಸ್ತುತ್ಯಂ ತ್ವಷ್ಟಾ ವಿಶ್ವಕರ್ಮಾ ವಜ್ರಂ ತತಕ್ಷ । ತನೂಕೃತವಾನ್ । ತೇನ ವಜ್ರೇಣ ಮೇಘೇ ಭಿನ್ನೇ ಸತಿ ಸ್ಯಂದಮಾನಾಃ ಪ್ರಸ್ರವಣಯುಕ್ತಾ ಆಪಃ ಸಮುದ್ರಮಂಜಃ ಸಮ್ಯಗವಜಗ್ಮುಃ । ಪ್ರಾಪ್ತಾಃ । ತತ್ರ ದೃಷ್ಟಾಂತಃ । ವಾಶ್ರಾ ವತ್ಸಾನ್ಪ್ರತಿ ಹಂಭಾರವೋಪೇತಾ ಧೇನವ ಇವ । ಯಥಾ ಧೇನವಃ ಸಹಸಾ ವತ್ಸಗೃಹೇ ಗಚ್ಛಂತಿ ತದ್ವತ್ ॥ ಶಿಶ್ರಿಯಾಣಂ । ಶ್ರಿಞ್ ಸೇವಾಯಾಂ । ಲಿಟಃ ಕಾನಚ್ । ದ್ವಿರ್ಭಾವಹಲಾದಿಶೇಷೇಯಙಾದೇಶಾಃ । ಚಿತ ಇತ್ಯಂತೋದಾತ್ತತ್ವಂ । ಸ್ವರ್ಯಂ । ಋ ಗತೌ । ಅಸ್ಮಾತ್ಸುಪೂರ್ವಾದೃಹಲೋರ್ಣ್ಯದಿತಿ ಣ್ಯತ್ । ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ವೃದ್ಧ್ಯಭಾವಃ । ಯದ್ವಾ । ಸ್ವೃ ಶಬ್ದೋಪತಾಪಯೋರಿತ್ಯಸ್ಮಾತ್ ಣ್ಯತಿ ಪೂರ್ವವದ್ವೃದ್ಧ್ಯಭಾವಃ । ತಿತ್ಸ್ವರಿತಮಿತಿ ಸ್ವರಿತತ್ವಂ । ವಾಶ್ಯಂತ ಇತಿ ವಾಶ್ರಾಃ । ವಾಶೃ ಶಬ್ದೇ । ಸ್ಫಾಯಿತಂಚೀತ್ಯಾದಿನಾ ರಕ್ । ಜಗ್ಮುಃ । ಉಸಿ ಗಮಹನೇತ್ಯುಪಧಾಲೋಪಃ ॥

॥ ಪ್ರತಿಪದಾರ್ಥ ॥

**ಪರ್ವತೇ**—ಪರ್ವತದಲ್ಲಿ । **ಶಿಶ್ರಿಯಾಣಂ**—ಆಶ್ರಯುವನ್ನು ಪಡೆದ । **ಅಹಿಂ**—ಮೇಘವನ್ನು । **ಅಹನ್**—ಸೀಳಿದನು । **ಅಸ್ಮೈ**—ಈ ಇಂದ್ರನಿಗೆ । **ಸ್ವರ್ಯಂ**—ವೇಗವಾಗಿ ಹೋಗತಕ್ಕ ಅಥವಾ ಶಬ್ದಮಾಡತಕ್ಕ । **ವಜ್ರಂ**—ವಜ್ರಾಯುಧವನ್ನು । **ತ್ವಷ್ಟಾ**—ತ್ವಷ್ಟೃವು (ವಿಶ್ವಕರ್ಮನು) । **ತತಕ್ಷ**—ಮಾಡಿಕೊಟ್ಟನು (ಆ ವಜ್ರಾಯುಧದಿಂದ ಮೇಘವನ್ನು ಸೀಳಿದ ಮೇಲೆ) । **ಸ್ಯಂದಮಾನಾಃ**—ಪ್ರವಹಿಸತಕ್ಕ । **ಆಪಃ**—(ನದಿಗಳ) ನೀರುಗಳು । **ವಾಶ್ರಾ ಇವ**—ಶಬ್ದಮಾಡಿ ಕರುಗಳನ್ನು ಕೂಗಿಕೊಂಡು । **ಧೇನವಃ**—ಹಸುಗಳು (ಕರುಗಳನ್ನು ಆದರದಿಂದ ಜಾಗ್ರತೆಯಾಗಿ) ಹೋಗಿ ಸೇರುವಂತೆ । **ಸಮುದ್ರಂ**—ಸಮುದ್ರವನ್ನು । **ಅಂಜಃ**—ಜಾಗ್ರತೆಯಾಗಿ । **ಅವ ಜಗ್ಮುಃ**—ಹೋಗಿ ಸೇರಿದವು.

॥ ಭಾವಾರ್ಥ ॥

ತ್ವಷ್ಟೃಪ್ರಜಾಪತಿಯು ವೇಗವಾದ ಗಮನವುಳ್ಳ ಅಥವಾ ಘಟ್ಟಿಯಾಗಿ ಶಬ್ದವನ್ನು ಮಾಡುತ್ತಿರುವ ವಜ್ರಾಯುಧವನ್ನು ಇಂದ್ರನಿಗಾಗಿ ಮಾಡಿಕೊಟ್ಟನು. ಇಂದ್ರನು ಆ ವಜ್ರಾಯುಧದಿಂದ ಪರ್ವತದಲ್ಲಿ ಆಶ್ರಯುವನ್ನು ಪಡೆದ ಮೇಘವನ್ನು ಸೀಳಿದನು. ಅನಂತರ ನೀರುಗಳು ಪ್ರವಾಹರೂಪದಿಂದ ಹರಿಯುತ್ತಾ, ಹಸುಗಳು ಆದರದಿಂದ ತಮ್ಮ ಕರುಗಳನ್ನು ಕೂಗಿಕೊಂಡು ವೇಗವಾಗಿ ಹೋಗಿ ಅವನ್ನು ಸೇರುವಂತೆ, ಸಮುದ್ರವನ್ನು ಜಾಗ್ರತೆಯಾಗಿ ಹೋಗಿ ಸೇರಿಕೊಂಡವು.

## English Translation.

He clove the cloud which had taken shelter on the mountain; on that occasion Twasta fashioned for him the rumbling thunderbolt; the flowing waters quickly hastened to the ocean like lowing cows hastening to their calves.

|| ವಿಶೇಷವಿಷಯಗಳು ||

ಹಿಂದಿನ ಋಕ್ಕಿನಲ್ಲಿ ಹೇಳಿದ ವಿಷಯವನ್ನೇ ಈ ಋಕ್ಕಿನಲ್ಲಿ ವಿಶದವಾಗಿ ವಿವರಿಸಲಾಗುವುದು.

**ಪರ್ವತೇ ಶಿಶ್ರಿಯಾಣಂ**—ಪರ್ವತದ ಮೇಲೆ ಮೋಡಗಳು ಸಾಧಾರಣವಾಗಿ ಕವಿದಿರುವುದರಿಂದ ಮೇಘಗಳು ಪರ್ವತದ ಮೇಲೆ ಆಶ್ರಯುವನ್ನು ಪಡೆದಿರುವುದೆಂದು ಋಷಿಯು ವರ್ಣಿಸಿರುವನು.

**ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ**—ದೇವಶಿಲ್ಪಿಯಾದ ತ್ವಷ್ಟೃವು ಇಂದ್ರನಿಗೆ ವಜ್ರಾಯುಧವನ್ನು ಮಾಡಿಕೊಟ್ಟನು. ವೃತ್ರಾಸುರನ ವಧಾರ್ಥವಾಗಿ ತ್ವಷ್ಟೃವು ಕಬ್ಬಿಣದಿಂದ ಹರಿತವಾದ ವಜ್ರಾಯುಧವನ್ನು ಮಾಡಿಕೊಟ್ಟನೆಂದು ಋಗ್ವೇದದಲ್ಲಿ ಅನೇಕಕಡೆ ಹೇಳಲ್ಪಟ್ಟಿದೆ—

**ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ ಮಯಿ ದೇವಾಸೋಽವೃಜನ್ನಪಿ ಕ್ರತುಂ ॥**

(ಋ. ಸಂ. ೧೦-೪೮-೩)

ಈ ಋಕ್ಕಿನಲ್ಲಿ ತ್ವಷ್ಟೃವು ಕಬ್ಬಿಣದಿಂದ ವಜ್ರಾಯುಧವನ್ನು ತನಗೆ ಮಾಡಿಕೊಟ್ಟನೆಂದು ಇಂದ್ರನೇ ಹೇಳಿರುವನು.

**ವಾಶ್ರಾ ಇವ ಧೇನವಃ**—ಹಸುಗಳು ಕೂಗುತ್ತಾ ತಮ್ಮ ಕರುಗಳ ಬಳಿಗೆ ಹೋಗುವಂತೆ ನದಿಗಳು ಪರ್ವತ ಪ್ರದೇಶದಿಂದ ಧುಮುಕುವಾಗ ಶಬ್ದಮಾಡುತ್ತಾ ಸಮುದ್ರವನ್ನು ಸೇರುವವು ಎಂದು ಉಪಮಾರ್ಥವು.

|| ವ್ಯಾಕರಣಪ್ರಕ್ರಿಯಾ ||

**ಶಿಶ್ರಿಯಾಣಮ್**—ಶ್ರಿಞ್ ಸೇವಾಯಾಮ್ ಧಾತು. ಭ್ವಾದಿ. ಛಂದಸ್ಸಿನಲ್ಲಿ ಬಂದಿರುವ ಲಿಟಿಗೆ **'ಲಿಟಃ ಕಾನಜ್ವಾ'** ಎಂಬುದರಿಂದ ಕಾನಚ್. ಕಾನಚ್ ಪರದಲ್ಲಿರುವಾಗ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಶಿಶ್ರಿ+ಆನ ಎಂದಿರುವಾಗ **'ಅಚಿಶ್ನುಧಾತುಭ್ರುವಾ-'** ಸೂತ್ರದಿಂದ ಇಯಙಾದೇಶ. **'ಅಟ್ ಕುಪ್ವಾಙ್-'** ಎಂಬುದರಿಂದ ನಕಾರಕ್ಕೆ ಣತ್ವ. ಶಿಶ್ರಿಯಾಣ ಎಂದು ರೂಪವಾಗುತ್ತದೆ. **'ಚಿತಃ'** ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ.

**ಸ್ವರ್ಯಮ್**—ಋ ಗತೌ ಧಾತು. ಸು ಉಪಸರ್ಗ ಪೂರ್ವದಲ್ಲಿರುವಾಗ **'ಋಹಲೋರ್ಣ್ಯತ್'** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್. ಣಿತ್ತಾದುದರಿಂದ **'ಅಚೋಞ್ಣಿತಿ'** ಸೂತ್ರದಿಂದ ವೃದ್ಧಿಯು ಪ್ರಾಪ್ತವಾದರೆ **'ಸಂಜ್ಞಾಪೂರ್ವಕೋ ವಿಧಿರನಿತ್ಯಃ'** ಎಂಬ ವಚನದಿಂದ ಇಲ್ಲಿ ಬರುವುದಿಲ್ಲ. **'ಸಾರ್ವಧಾತುಕಾರ್ಧಧಾತುಕಯೋಃ'** ಎಂಬುದರಿಂದ ಗುಣ. **'ಉರಣ್‌ರಪರಃ'** ಎಂಬುದರಿಂದ ರ ಪರವಾಗಿ ಬರುತ್ತದೆ. ಸು+ಅರ್+ಯ ಎಂದಿರುವಾಗ ಉಕಾರಕ್ಕೆ ಯಣಾದೇಶ ಬಂದರೆ ಸ್ವರ್ಯ ಎಂಬ ಶಬ್ದವಾಗುತ್ತದೆ. ಣ್ಯತ್ ಪ್ರತ್ಯಯವು ತಿತ್ತಾದುದರಿಂದ **'ತಿತ್‌ಸ್ವರಿತಮ್'** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತವು ಬರುತ್ತದೆ. ಸ್ವರಿತಾಂತವಾದ ಪದವಾಗುತ್ತದೆ,

**ವಾಶ್ರಾಃ**—ವಾಶ್ಯಂತೇ ಇತಿ ವಾಶ್ರಾಃ. ವಾಶೃ ಶಬ್ದೇ. ಧಾತು. **'ಸ್ಫಾಯಿತಞ್ಚಿವಞ್ಚಿಶಕಿ-'** (ಉ. ಸೂ. ೨-೧೨೦) ಎಂಬುದರಿಂದ ರಕ್. ವಾಶ್ರ ಶಬ್ದವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತ. ಬಹುವಚನರೂಪ.

**ಸ್ಯಂದಮಾನಾಃ**—ಸ್ಯಂದೂ ಪ್ರಸ್ರವಣೇ ಧಾತು. ಆತ್ಮನೇಪದಿ. ಲಡರ್ಥದಲ್ಲಿ ಶಾನಚ್. ಶಾನಚ್ ಪರದಲ್ಲಿರುವಾಗ ಧಾತುವಿಗೆ ಶಪ್ ವಿಕರಣ. **'ಆನೇ ಮುಕ್'** ಎಂಬುದರಿಂದ ಮುಕಾಗಮ. ಸ್ಯಂದಮಾನ ಶಬ್ದವಾಗುತ್ತದೆ ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿ ಶಾನಚ್‌ರೂಪಲ ಸಾರ್ವಧಾತುಕವಿರುವುದರಿಂದ **'ತಾಸ್ಯನುದಾತ್ತೇತ್-'** ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರವು ಸತಿಶಿಷ್ಟವಾಗುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಜಗ್ಮುಃ**—ಗಮ್ಲೃ ಗತೌ ಧಾತು. ಲಿಟ್ ಪ್ರಥಮಪುರುಷ ಬಹುವಚನದ ಝಿಗೆ **'ಪರಸ್ಮೈಪದಾನಾಂ-'** ಸೂತ್ರದಿಂದ ಉಸಾದೇಶ. **'ಅಸಂಯೋಗಾತ್ ಲಿಟ್ ಕಿತ್'** ಸೂತ್ರದಿಂದ ಇದು ಕಿತ್ತಾಗುತ್ತದೆ. ಆದುದರಿಂದ **'ಗಮಹನ ಜನ ಖನ-'** (ಪಾ. ಸೂ. ೬-೪-೯೮) ಸೂತ್ರದಿಂದ ಧಾತುವಿನ ಉಪಧೆಗೆ ಲೋಪ ಬರುತ್ತದೆ. ದ್ವಿತ್ವ, ಹಲಾದಿಶೇಷ, ಚುತ್ವ, ಕಾರ್ಯಗಳು ಬಂದರೆ ಜಗ್ಮುಃ ಎಂದು ರೂಪವಾಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ. || ೨ ||

॥ ಸಂಹಿತಾಪಾಠಃ ॥

ವೃಷಾಯಮಾಣೋಽವೃಣೀತ ಸೋಮಂ ತ್ರಿಕದ್ರುಕೇಷ್ವಪಿಬತ್ಸುತಸ್ಯ ।
ಆ ಸಾಯಕಂ ಮಘವಾದತ್ತ ವಜ್ರಮಹನ್ನೇನಂ ಪ್ರಥಮಜಾಮಹೀನಾಂ ॥ ೩ ॥

॥ ಪದಪಾಠಃ ॥

ವೃಷಽಯಮಾಣಃ । ಅವೃಣೀತ । ಸೋಮಂ । ತ್ರಿಽಕದ್ರುಕೇಷು । ಅಪಿಬತ್ । ಸುತಸ್ಯ ।
ಆ । ಸಾಯಕಂ । ಮಘಽವಾ । ಅದತ್ತ । ವಜ್ರಂ । ಅಹನ್ । ಏನಂ । ಪ್ರಥಮಽಜಾಂ । ಅಹೀನಾಂ ॥ ೩ ॥

॥ ಸಾಯಣಭಾಷ್ಯಂ ॥

ವೃಷಾಯಮಾಣೋ ವೃಷ ಇವಾಚರನ್ನಿಂದ್ರಃ ಸೋಮಮವೃಣೀತ । ವೃತವಾನ್ । ತ್ರಿಕದ್ರುಕೇಷು । ಜ್ಯೋತಿರ್ಗೌರಾಯುರಿತ್ಯೇತನ್ನಾಮಕಾಸ್ತ್ರಯೋ ಯಾಗಾಸ್ತ್ರಿಕದ್ರುಕಾ ಉಚ್ಯಂತೇ । ತೇಷು ಸುತಸ್ಯಾಭಿಷುತಸ್ಯ ಸೋಮಸ್ಯಾಂಶಮಪಿಬತ್ । ಪೀತವಾನ್ । ಮಘವಾ ಧನವಾನಿಂದ್ರಃ ಸಾಯಕಂ ಬಂಧಕಂ ವಜ್ರಮಾದತ್ತ । ಸ್ವೀಕೃತವಾನ್ । ತೇನ ಚ ವಜ್ರೇಣಾಹೀನಾಂ ಮೇಘಾನಾಂ ಮಧ್ಯೇ ಪ್ರಥಮಜಾಂ ಪ್ರಥಮೋತ್ಪನ್ನಂ ಮೇಘಮಹನ್ । ಹತವಾನ್ ॥ ವೃಷಾಯಮಾಣಃ । ವೃಷ ಇವಾಚರನ್ । ಕರ್ತುಃ ಕ್ಯಙ್ ಸಲೋಪಶ್ಚ । ಪಾ. ೩-೧-೧೧ । ಇತಿ ಕ್ಯಙ್ । ಅಕೃತ್ಸಾರ್ವಧಾತುಕಯೋರಿತಿ ದೀರ್ಘಃ । ಅದುಪದೇಶಾದ್ಧಾತೋರಂತೋದಾತ್ತತ್ವೇ ಕ್ಯಙಂತಾದ್ಧಾತೋರಂತೋದಾತ್ತತ್ವಂ । ಸಾಯಕಂ । ಷಿಞ್ ಬಂಧನೇ । ಸಿನೋತೀತಿ ಸಾಯಕಃ । ಣ್ವುಲ್ । ಲಿತ್ಸ್ವರೇಣಾದ್ಯುದಾತ್ತತ್ವಂ । ಪ್ರಥಮಜಾಂ । ಪ್ರಥಮಂ ಜಾಯತ ಇತಿ ಪ್ರಥಮಜಾಃ । ಜನಸನಖನಕ್ರಮಗಮೋ ವಿಟ್ । ವಿಡ್ವನೋರಿತ್ಯಾತ್ವಂ ॥

॥ ಪ್ರತಿಪದಾರ್ಥ ॥

**ವೃಷಾಯಮಾಣಃ**—ಗೂಳಿಯಂತೆ (ಅವಸರದಿಂದ) ಇಂದ್ರನು । **ಸೋಮಂ**—ಸೋಮರಸವನ್ನು । **ಅವೃಣೀತ**—ಗುಟಕಿಸಿದನು । **ತ್ರಿಕದ್ರುಕೇಷು**—ಜ್ಯೋತಿ, ಗೌ ಮತ್ತು ಆಯು ಎಂಬ ಮೂರು ವಿಧವಾದ ಯಾಗಗಳಲ್ಲಿಯೂ । **ಸುತಸ್ಯ**—ಹಿಂಡಿದ ಸೋಮರಸದ (ಭಾಗವನ್ನು) । **ಅಪಿಬತ್**—ಕುಡಿದನು । **ಮಘವಾ**—ಧನವಂತನಾದ ಇಂದ್ರನು । **ಸಾಯಕಂ**—ವಜ್ರಾಯುಧವನ್ನು । **ಆ ಅದತ್ತ**—ಎತ್ತಿಕೊಂಡನು (ಅದರಿಂದ) । **ಅಹೀನಾಂ**—ಮೇಘಗಳ (ಮಧ್ಯೆ) । **ಪ್ರಥಮಜಾಂ**—ಮೊದಲು ಹುಟ್ಟಿದ । **ಏನಂ**—ಮೇಘವನ್ನು । **ಅಹನ್**—ಸೀಳಿದನು.

॥ ಭಾವಾರ್ಥ ॥

ಇಂದ್ರನು ಗೂಳಿಯಂತೆ ಅವಸರದಿಂದ ಸೋಮರಸವನ್ನು ಗುಟಕಿಸಿದನು. ಜ್ಯೋತಿ, ಗೌ ಮತ್ತು ಆಯು ಎಂಬ ಮೂರು ವಿಧವಾದ ಯಾಗಗಳಲ್ಲಿಯೂ ಹಿಂಡಿದ ಸೋಮರಸವನ್ನು ಕುಡಿದನು. ಧನವಂತನಾದ ಇಂದ್ರನು ವಜ್ರಾಯುಧವನ್ನು ಕೈಗೆ ಎತ್ತಿಕೊಂಡು ಅದರಿಂದ ಮೇಘಗಳ ಮಧ್ಯೆ ಮೊದಲು ಹುಟ್ಟಿದ ಮೇಘವನ್ನು ಸೀಳಿದನು.

## English Translation.

Impetuous (or mighty) as a bull, Indra desired Soma ; he drank of the extracted Soma-juice in the three-fold sacrifice ; Indra, lord of riches took his deadly thunderbolt and with it struck the first-born of the clouds.

॥ ವಿಶೇಷವಿಷಯಗಳು ॥

**ವೃಷಾಯಮಾಣಃ**—**ವೃಷ ಇವಾಚರನ್** । ವೃಷಭದಂತೆ ಅಥವಾ ಬಲವುಳ್ಳ ಹೋರಿಯಂತೆ ಶಕ್ತಿಯನ್ನು ಪ್ರದರ್ಶಿಸುತ್ತಿರುವ ಎಂದರೆ ಅತ್ಯಂತ ಬಲಶಾಲಿಯಾದ ಎಂದಭಿಪ್ರಾಯವು.

**ತ್ರಿಕದ್ರುಕೇಷು**—ಈ ಶಬ್ದಕ್ಕೆ ಭಾಷ್ಯಕಾರರು **ಜ್ಯೋತಿಃ ಗೌಃ ಆಯುಃ** ಎಂಬ ಮೂರು ವಿಧವಾದ ಯಾಗಗಳೆಂದು ಹೇಳಿರುವರು. ಈ ಶಬ್ದಕ್ಕೆ ಸೋಮರಸವನ್ನು ಇಡುವ ಮೂರು ಮರದ ಪಾತ್ರೆಗಳು ಎಂದೂ ಅರ್ಥವಿರುವುದು. ಈ ಅರ್ಥವಿರುವ ಕೆಲವು ಋಕ್ಕುಗಳನ್ನು ಉದಾಹರಣೆಯಾಗಿ ಕೊಡುತ್ತೇವೆ—

**ಉಗ್ರೇಷ್ವಿನ್ನು ಶೂರ ಮಂದಸಾನಸ್ತ್ರಿಕದ್ರುಕೇಷು ಪಾಹಿ ಸೋಮಮಿಂದ್ರ ॥**

(ಋ. ಸಂ. ೨-೧೧-೧೭)

**ತ್ರಿಕದ್ರುಕೇಷ್ವಪಿಬತ್ಸುತಸ್ಯಾಸ್ಯ ಮದೇ ಅಹಿಮಿಂದ್ರೋ ಜಘಾನ ॥**

(ಋ. ಸಂ. ೨-೧೫-೧)

**ತ್ರಿಕದ್ರುಕೇಷು ಮಹಿಷೋ ಯವಾಶಿರಂ ತುವಿಶುಷ್ಮಸ್ತೃಪತ್ಸೋಮಮಪಿಬದ್ವಿಷ್ಣುನಾ ಸುತಂ ಯಥಾವಶತ್ ॥**

(ಋ. ಸಂ. ೨-೨೨-೧)

**ತ್ರಿಕದ್ರುಕೇಷು ಚೇತನಂ ದೇವಾಸೋ ಯಜ್ಞಮತ್ನತ ॥**

(ಋ. ಸಂ. ೮-೧೩-೧೮)

**ತ್ರಿಕದ್ರುಕೇಷ ಚೇತನಂ ದೇವಾಸೋ ಯಜ್ಞಮತ್ನತ ॥**

(ಋ. ಸಂ. ೮-೯೨-೨೧)

**ತ್ರಿಕದ್ರುಕೇಭಿಃ ಪತತಿ ಷಳುರ್ವೀರೇಕಮಿದ್ಬೃಹತ್ ॥**

(ಋ. ಸಂ ೧೦-೧೪-೧೬)

ಈ ಶಬ್ದವು ಯಾವಾಗಲೂ ಬಹುವಚನದಲ್ಲಿಯೇ ಉಪಯೋಗಿಸಲ್ಪಡುವುದು ಮತ್ತು ಯಾವಾಗಲೂ ಸೋಮಪಾನ ಮಾಡುವ ಸಂದರ್ಭಗಳಲ್ಲಿಯೇ ಇದರ ಪ್ರಯೋಗವಿರುವುದು.

**ಪ್ರಥಮಜಾಂ ಅಹೀನಾಂ—ಮೇಘಾನಾಂ ಮಧ್ಯೇ ಪ್ರಥಮೋತ್ಪನ್ನಂ ಮೇಘಂ ।** ಮೇಘಗಳು ಆಕಾಶದಲ್ಲಿ ಗುಂಪುಗುಂಪಾಗಿ ಸೇರುವಾಗ ಅವುಗಳಲ್ಲಿ ಮೊದಲು ಉತ್ಪನ್ನವಾದ ಮೇಘವೆಂದು ಹೆಸರು. ಮುಂಗಾರು ಮಳೆಯಲ್ಲಿ ಮಳೆಯು ಹುಯ್ಯುವುದಕ್ಕೆ ಮೊದಲೇ ಸಿಡಿಲು ಮಿಂಚುಗಳ ಆರ್ಭಟವಿರುವುದರಿಂದ ಮೊದಲು ಉತ್ಪನ್ನವಾದ ಮೇಘವನ್ನೇ ಪ್ರಹರಿಸಿದನೆಂದು ಇಲ್ಲಿ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ವೃಷಾಯಮಾಣಃ**—ವೃಷ ಇವ ಆಚರನ್ ವೃಷಾಯಮಾಣಃ **' ಕರ್ತುಃ ಕ್ಯಙ್ ಸಲೋಪಶ್ಚ '** (ಪಾ. ಸೂ. ೩-೧-೧೧) ಉಪಮಾನವಾಚಕವಾದ ಕರ್ತೃವಾಚಕ ಸುಬಂತಕ್ಕೆ ಆಚಾರಾರ್ಥದಲ್ಲಿ ಕ್ಯಙ್‌ಪ್ರತ್ಯಯವೂ, ಸಾಂತವಾದ ಕರ್ತೃವಾಚಕ ಸುಬಂತಕ್ಕೆ (ಅಂತ್ಯಕ್ಕೆ) ಲೋಪವು ವಿಕಲ್ಪವಾಗಿ ಬರುತ್ತದೆ ಎಂಬುದರಿಂದ ಇಲ್ಲಿ ಕ್ಯಙ್. ವೃಷ+ಯ ಎಂದಿರುವಾಗ **' ಅಕೃತ್ಸಾರ್ವಧಾತುಕಯೋರ್ದೀರ್ಘಃ '** ಎಂಬುದರಿಂದ ಅಜಂತಾಂಗಕ್ಕೆ ದೀರ್ಘ. **' ಸನಾದ್ಯಂತಾಧಾತವಃ '** ಎಂಬುದರಿಂದ ವೃಷಾಯ ಎಂಬ ಕ್ಯಙಂತಕ್ಕೆ ಧಾತುಸಂಜ್ಞಾ. ಇದರ ಮೇಲೆ ಲಡರ್ಥದಲ್ಲಿ ಆತ್ಮನೇಪದಿಯಾದುದರಿಂದ ಶಾನಚ್. ಶಾನಚ್ ಪರದಲ್ಲಿರುವಾಗ **' ಆನೇಮುಕ್ '** ಎಂಬುದರಿಂದ ಅಂಗಕ್ಕೆ ಮುಕಾಗಮ. ಷಕಾರದ ಪರದಲ್ಲಿರುವುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ವೃಷಾಯಮಾಣ ಎಂದು ರೂಪವಾಗುತ್ತದೆ. ಇಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವಿರುವುದರಿಂದ **' ತಾಸ್ಯನುದಾತ್ತೇತ್-'** ಸೂತ್ರದಿಂದ ಅದು ಅನುದಾತ್ತವಾಗುತ್ತದೆ. ಕ್ಯಙಂತಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ. ಯಕಾರೋತ್ತರಾಕಾರವು ಉದಾತ್ತವಾಗುತ್ತದೆ.

**ಅವೃಣೀತ**—ವೃ ಞ್ ವರಣೇ ಧಾತು. ಕ್ರ್ಯಾದಿ. ಲಙ್‌ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ ಪರದಲ್ಲಿರುವಾಗ ಧಾತುವಿಗೆ ಶ್ನಾ ವಿಕರಣ. **' ಈ ಹಲ್ಯಘೋಃ '** ಎಂಬುದರಿಂದ ವಿಕರಣಕ್ಕೆ ಈತ್ವ. ಯಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಅಂಗಕ್ಕೆ ಅಡಾಗಮ. ಶ್ನಾ ಙಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಅವೃಣೀತ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ

**ಅಪಿಬತ್**— ಪಾ ಪಾನೇ ಧಾತು. ಲಙ್ ಪ್ರಥಮಪುರುಷ ಏಕವಚನ ತಿಪ್ ಪರದಲ್ಲಿರುವಾಗ ಶಪ್ ವಿಕರಣ ಬರುತ್ತದೆ. ಶಪ್ ಪರದಲ್ಲಿರುವಾಗ ಧಾತುವಿಗೆ **' ಪಾಘ್ರಾಧ್ಮಾ-'** ಸೂತ್ರದಿಂದ ಪಿಬಾದೇಶ. **' ಇತಶ್ಚ '**

ಎಂಬುದರಿಂದ ಪ್ರತ್ಯಯಇಕಾರಕ್ಕೆ ಲೋಪ. ಪಿಬಾದೇಶ ಅದಂತವಾದುದರಿಂದ ಲಘೂಪಧಗುಣಬರುವುದಿಲ್ಲ. ಅಂಗಕ್ಕೆ ಅಡಾಗಮ ಬಂದರೆ ಅಪಿಬತ್ ಎಂದು ರೂಪವಾಗುತ್ತದೆ. '**ತಿಙ್ಙತಿಙಃ**' ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಾಯಕಮ್**—ಷಿಞ್ ಬಂಧನೇ ಧಾತು. ಸಿನೋತಿ ಇತಿ ಸಾಯಕಃ ಕರ್ತ್ರರ್ಥದಲ್ಲಿ ಣ್ವುಲ್. '**ಯುವೋರನಾಕೌ**' ಎಂಬುದರಿಂದ ಅದಕ್ಕೆ ಅಕಾದೇಶ. ಣಿತ್ತಾದುದರಿಂದ ಧಾತುವಿನ ಇಕಾರಕ್ಕೆ '**ಅಚೋಞ್ಣಿತಿ**' ಸೂತ್ರದಿಂದ ವೃದ್ಧಿ. '**ಏಚೋಽಯವಾಯಾವಃ**' ಎಂಬುದರಿಂದ ಅದಕ್ಕೆ ಆಯಾದೇಶ. ಸಾಯಕಶಬ್ದವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ. ಲಿತ್ತಾದುದರಿಂದ '**ಲಿತಿ**' ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅದತ್ತ**—ಡುದಾಞ್ ದಾನೇ. ಧಾತು. ಜುಹೋತ್ಯಾದಿ. ಲಙ್ನಲ್ಲಿ ತಪ್ರತ್ಯಯ. ಶ್ಲುವಿಕರಣ. '**ಶ್ಲೌ**' ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. **ಶ್ನಾಭ್ಯಸ್ತಯೋರಾತಃ** ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಖರಿಚ** ಎಂಬುದರಿಂದ ತಪರದಲ್ಲಿರುವುದರಿಂದ ಚರ್ತ್ವ. ಅಂಗಕ್ಕೆ ಅಡಾಗಮ. ಅದತ್ತ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಪ್ರಥಮಜಾಂ—ಪ್ರಥಮಂ ಜಾಯತೇ ಇತಿ ಪ್ರಥಮಜಾಃ** । ಜನೀ ಪ್ರಾದುರ್ಭಾವೇ ಧಾತು. '**ಜನಸನಖನಕ್ರಮ ಗಮೋಽವಿಟ್**' (ಪಾ. ಸೂ. ೩-೨-೬೭) ಎಂಬುದರಿಂದ ವಿಟ್. **ವಿಡ್ವನೋರನುನಾಸಿಕಸ್ಯಾತ್**' (ಪಾ. ಸೂ. ೬-೪-೪೧) ಎಂಬುದರಿಂದ ನಕಾರಕ್ಕೆ ಆತ್ವ. ಪ್ರಥಮಜಾ ಶಬ್ದವಾಗುತ್ತದೆ. ದ್ವಿತೀಯಾ ಏಕವಚನ ರೂಪ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೩ ॥

---

॥ ಸಂಹಿತಾಪಾಠಃ ॥

ಯದಿಂದ್ರಾಹನ್ಪ್ರಥಮಜಾಮಹೀನಾಮಾನ್ಮಾಯಿನಾಮಮಿನಾಃ ಪ್ರೋತ ಮಾಯಾಃ ।

ಆತ್ಸೂರ್ಯಂ ಜನಯನ್ದ್ಯಾಮುಷಾಸಂ ತಾದೀತ್ನಾ ಶತ್ರುಂ ನ ಕಿಲಾ ವಿವಿತ್ಸೇ ॥ ೪ ॥

॥ ಪದಪಾಠಃ ॥

ಯತ್ । ಇನ್ದ್ರ । ಅಹನ್ । ಪ್ರಥಮಽಜಾಂ । ಅಹೀನಾಂ । ಆತ್ । ಮಾಯಿ-
ನಾಂ । ಅಮಿನಾಃ । ಪ್ರ । ಉತ । ಮಾಯಾಃ ।

ಆತ್ । ಸೂರ್ಯಂ । ಜನಯನ್ । ದ್ಯಾಂ । ಉಷಸಂ । ತಾದೀತ್ನಾ । ಶತ್ರುಂ ।
ನ । ಕಿಲ । ವಿವಿತ್ಸೇ ॥ ೪ ॥

॥ ಸಾಯಣ ಭಾಷ್ಯಂ ॥

ಉತಾಪಿ ಚ ಹೇ ಇಂದ್ರ ಯದ್ಯದಾಹೀನಾಂ ಮೇಘಾನಾಂ ಮಧ್ಯೇ ಪ್ರಥಮಜಾಂ ಪ್ರಥಮೋ-ತ್ಪನ್ನಂ ಮೇಘಮಹನ್ ಹತವಾನಸಿ ಆತ್ ತದನಂತರಂ ಮಾಯಿನಾಂ ಮಾಯೋಪೇತಾನಾಮಸುರಾಣಾಂ ಸಂಬಂಧಿನೀರ್ಮಾಯಾಃ ಪ್ರಾಮಿನಾಃ । ಪ್ರಕರ್ಷೇಣ ನಾಶಿತವಾನಸಿ । ಅನಂತರಂ ಸೂರ್ಯಮುಷ-ಸಮುಷಃಕಾಲಂ ದ್ಯಾಮಾಕಾಶಂ ಚ ಜನಯನ್ ಉತ್ಪಾದಯನ್ನಾವರಕಮೇಘನಿವಾರಣೇನ ಪ್ರಕಾಶ-ಯನ್ ವರ್ತಸೇ । ತಾದೀತ್ನಾ ತದಾನೀಮಾವರಕಾಂಧಕಾರಾಭಾವಾಚ್ಛತ್ರುಂ ಘಾತಕಂ ವೈರಿಣಂ ನ ವಿವಿತ್ಸೇ ಕಿಲ । ತ್ವಂ ನ ಲಬ್ಧವಾನ್ಖಲು ॥ ಅಹನ್ । ಹಂತೇರ್ಲಙಿ ಹಲ್ಙ್ಯಾಬ್ಭ್ಯ ಇತಿ ಸಿಲೋಪಃ । ಅಡಾಗಮ ಉದಾತ್ತಃ । ಯದ್ವೃತ್ತಯೋಗಾದನಿಘಾತಃ । ಮಾಯಿನಾಂ । ಮಾಯಾಶಬ್ದಸ್ಯ ವ್ರೀಹ್ಯಾದಿಷು ಪಾಠಾ-ದ್ವ್ರೀಹ್ಯಾದಿಭ್ಯಶ್ಚ । ಪಾ. ೫-೨-೧೧೬ । ಇತಿ ಮತ್ವರ್ಥೀಯ ಇನಿಃ । ಅಮಿನಾಃ । ಮೀಞ್ ಹಿಂಸಾ-ಯಾಂ । ಕ್ರ್ಯಾದಿಕಃ । ಮೀನಾತೇರ್ನಿಗಮೇ । ಪಾ. ೭-೩-೮೧ । ಇತಿ ಹ್ರಸ್ವತ್ವಂ । ತಾದೀತ್ನಾ । ತದಾ-ನೀಮಿತ್ಯಸ್ಯ ಪೃಷೋದರಾದಿತ್ವಾದ್ವರ್ಣವಿಪರ್ಯಯಃ । ಕಿಲ । ನಿಪಾತಸ್ಯೇತಿ ದೀರ್ಘತ್ವಂ । ವಿವಿತ್ಸೇ । ವಿದ್ಲೃ ಲಾಭೇ । ಕ್ರಾದಿನಿಯಮಾತ್ಪ್ರಾಪ್ತ ಇಟ್ ವ್ಯತ್ಯಯೇನ ನ ಭವತಿ ॥

॥ ಪ್ರತಿಪದಾರ್ಥ ॥

**ಉತ**—ಇನ್ನೂ ಅಧಿಕವಾಗಿ । **ಇಂದ್ರ**—ಎಲೈ ಇಂದ್ರನೇ । **ಯತ್**—ಯಾವಾಗ । **ಅಹೀನಾಂ**—ಮೇಘಗಳ(ಮಧ್ಯೆ) । **ಪ್ರಥಮಜಾಂ**—ಮೊದಲು ಹುಟ್ಟಿದ ಮೇಘವನ್ನು । **ಅಹನ್**—ಕೊಂದೆಯೋ । **ಆತ್**—ಅನಂತರ । **ಮಾಯಿನಾಂ**—ವಂಚಕರಾದ ರಾಕ್ಷಸರ । **ಮಾಯಾಃ**—ಮೋಸಗಳನ್ನು । **ಪ್ರ ಅಮಿನಾಃ**—ಸಂಪೂರ್ಣವಾಗಿ ನಾಶಮಾಡಿದೆಯೋ (ಅನಂತರ ಯಾವಾಗ) । **ಸೂರ್ಯಂ**—ಸೂರ್ಯನನ್ನೂ । **ಉಷಸಂ**—ಉಷಃ ಕಾಲವನ್ನೂ । **ದ್ಯಾಂ**—ಗಗನವನ್ನೂ । **ಜನಯನ್**—ಸೃಷ್ಟಿಸುತ್ತಾ (ಪ್ರಕಾಶಿಸುವಂತೆ ಮಾಡುತ್ತಾ ಇರುವೆಯೋ) । **ತಾದೀತ್ನಾ**—ಆಗ । **ಶತ್ರುಂ**—ಹಿಂಸಕನಾದ ಶತ್ರುವನ್ನು । **ನ ವಿವಿತ್ಸೇ ಕಿಲ**—ನೀನು ಹೊಂದುವುದೇ ಇಲ್ಲ (ನಿನ್ನನ್ನು ವಿರೋಧಿಸುವ ಶತ್ರುವೇ ಇರುವುದಿಲ್ಲ)

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದೆ ವರ್ಣಿತವಾದ ಕಾರ್ಯಗಳಲ್ಲದೇ, ನೀನು ಯಾವಾಗ ಮೇಘಗಳ ಮಧ್ಯೆ ಮೊದಲು ಹುಟ್ಟಿದ ಮೇಘವನ್ನು ಕೊಂದೆಯೋ, ಅನಂತರ ಯಾವಾಗ ವಂಚಕರಾದ ರಾಕ್ಷಸರ ಮೋಸಗಳನ್ನು ನಾಶಮಾಡಿದೆಯೋ, ಅಲ್ಲದೆ ಯಾವಾಗ ಸೂರ್ಯನನ್ನೂ, ಉಷಃಕಾಲವನ್ನೂ, ಗಗನವನ್ನೂ ಸೃಷ್ಟಿಸಿ (ಚೆನ್ನಾಗಿ ಕಾಣಿಸುವಂತೆ ಮಾಡಿ) ಪ್ರಕಾಶಿಸುತ್ತಿರುವೆಯೋ ಆಗ ನಿನ್ನನ್ನು ವಿರೋಧಿಸಿ ಲೋಕಕ್ಕೆ ಕತ್ತಲನ್ನುಂಟುಮಾಡಿ ಹಿಂಸಿಸುವ ಶತ್ರುವೇ ನಿನಗೆ ಇರುವುದಿಲ್ಲ.

## English Translation

Indra, after you have destroyed the first-born of the clouds, you have destroyed machinations of the deluders and then making the sun, the dawn and the firmament bright and clear, you have not left an enemy to oppose you.

॥ ವಿಶೇಷವಿಷಯಗಳು ॥

**ಮಾಯಿನಾಂ, ಮಾಯಾಃ—ಮಾಯೋಪೇತಾನಾಮಸುರಾಣಾಂ ಸಂಬಂಧಿನೀರ್ಮಾಯಾಃ ।** ಮಾಯಾ ಎಂದರೆ ಕಪಟ, ತಂತ್ರ, ಉಪಾಯ wile, stratagem &c. ಇಲ್ಲಿ **ಮಾಯಿನಾಂ ಮಾಯಾಃ** ಎಂದರೆ ಕಪಟತಂತ್ರಗಳಿಂದ ಯುಕ್ತರಾದ ಅಸುರರ ಕುತಂತ್ರಗಳು ಎಂದಭಿಪ್ರಾಯವು. ಈ ಶಬ್ದಗಳ ವಿಶೇಷಾರ್ಥವಿವರಣೆಗಾಗಿ ಋಗ್ವೇದಸಂಹಿತಾ ಭಾಗ ೨. ಪೇಜು, 476–477 ನೋಡಿ.

**ಪ್ರ ಅಮಿನಾಃ—ಮೀಙ್ ಹಿಂಸಾಯಾಂ ।** ಹಿಂಸಿಸುವಿ.

**ಆತ್ ಸೂರ್ಯಂ ಜನಯನ್ ದ್ಯಾಂ ಉಷಸಂ**—ಸೂರ್ಯನನ್ನು ಆವರಿಸಿರುವ ಮೇಘಜಾಲವನ್ನು ಸಂಪೂರ್ಣವಾಗಿ ನಿವಾರಣೆಮಾಡಿ ಸೂರ್ಯನೂ ಅಂತರಿಕ್ಷವೂ, ಉಷಃಕಾಲವೂ ಸ್ವಚ್ಛವಾಗಿಯೂ ಪ್ರಕಾಶಮಾನವಾಗಿಯೂ ಬೆಳಗುವಂತೆ ಮಾಡಿರುವೆ ಎಂದಭಿಪ್ರಾಯವು.

**ತಾದೀತ್ನಾ—ತದಾನೀಂ ।** ಆಗ ಮೇಘನಿವಾರಣಾನಂತರದಲ್ಲಿ.

॥ ವ್ಯಾಕರಣಪ್ರಕ್ರಿಯಾ ॥

**ಅಹನ್**—ಹನ ಹಿಂಸಾಗತ್ಯೋಃ ಧಾತು. ಅದಾದಿ. ಲಙ್ ಪ್ರಥಮಪುರುಷ ಏಕವಚನದ ತಿಪ್ಪಿಗೆ **ಇತಶ್ಚ** ಎಂಬುದರಿಂದ ಅಂತ್ಯಲೋಪ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. ಹಲಂತದ ಪರದಲ್ಲಿರುವುದರಿಂದ **ಹಲ್ ಙ್ಯಾಭ್ಯೋ ದೀರ್ಘಾತ್** ಸೂತ್ರದಿಂದ ತಿಪ್ಪಿಗೆ ಲೋಪ. ಲಙ್‌ನಿಮಿತ್ತಕವಾಗಿ ಅಂಗಕ್ಕೆ ಅಡಾಗಮ. ಅಹನ್ ಎಂದು ರೂಪವಾಗುತ್ತದೆ. ಅಡಾಗಮ ಉದಾತ್ತವೆಂಬುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ಮಾಯಿನಾಮ್**—ಮಾಯಾ ಅಸ್ಯ ಅಸ್ತೀತಿ ಮಾಯೀ. ಮಾಯಾಶಬ್ದವು ವ್ರೀಹ್ಯಾದಿಯಲ್ಲಿ ಪಠಿತವಾದುದರಿಂದ '**ವ್ರೀಹ್ಯಾದಿಭ್ಯಶ್ಚ**' (ಪಾ. ಸೂ. ೫-೨-೧೧೬) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯವು ಬರುತ್ತದೆ. **ಯಸ್ಯೇತಿ ಚ** ಎಂಬುದರಿಂದ ಇನಿ ಪರದಲ್ಲಿರುವಾಗ ಆಕಾರಲೋಪ. ಮಾಯಿ ಶಬ್ದವಾಗುತ್ತದೆ. ಷಷ್ಠೀ ಬಹುವಚನರೂಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಅಮಿನಾಃ**—ಮೀಞ್ ಹಿಂಸಾಯಾಂ ಧಾತು. ಕ್ರ್ಯಾದಿ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. ನಾ ಉಳಿಯುತ್ತದೆ. ಲಙ್ ನಿಮಿತ್ತವಾಗಿ ಅಂಗಕ್ಕೆ ಅಡಾಗಮ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಅಮೀನಾಃ ಎಂದಾಗುತ್ತದೆ. '**ಮೀನಾತೇರ್ನಿಗಮೇ**' (ಪಾ. ಸೂ ೭-೩-೮೧) ಎಂಬುದರಿಂದ ಛಂದಸ್ಸಿನಲ್ಲಿ ಧಾತುವಿಗೆ ಹ್ರಸ್ವ ಬರುತ್ತದೆ. ಅಮಿನಾಃ ಎಂದು ರೂಪವಾಗುತ್ತದೆ. **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತ ಪ್ರತಿಷೇಧ ಇರುವುದರಿಂದ ಅಡುದಾತ್ತಸ್ವರವು ಸತಿಶಿಷ್ಟವಾಗುತ್ತದೆ.

**ತಾದೀತ್ನಾ**—ತದಾನೀಂ ಎಂಬಲ್ಲಿ ತಾದೀತ್ನಾ ಎಂದು ರೂಪವಾಗುತ್ತದೆ. **ಪೃಷೋದರಾದೀನಿ ಯಥೋಪದಿಷ್ಟಂ** ಎಂಬುದರಿಂದ ಇದು ಪೃಷೋದರಾದಿಯಲ್ಲಿ ಸೇರಿರುವುದರಿಂದ. ವರ್ಣವಿಪರ್ಯಯ, ಆಗಮಾದಿಗಳು ಬಂದಿರುತ್ತವೆ.

**ಕಿಲ**—**ಚಾದಯೋಽಸತ್ವೇ** ಎಂಬುದರಿಂದ ನಿಪಾತಸಂಜ್ಞೆಯನ್ನು ಹೊಂದುತ್ತದೆ. '**ನಿಪಾತಸ್ಯ ಚ**' (ಪಾ. ಸೂ. ೬-೩-೧೩೬) ಎಂಬುದರಿಂದ ದೀರ್ಘವು ಸಂಹಿತಾಪಾಠದಲ್ಲಿ ಬರುತ್ತದೆ. ಕಿಲಾ ಎಂದಾಗುತ್ತದೆ.

**ವಿವಿತ್ಸೇ**—ವಿದ್ಲೃ ಲಾಭೇ ಧಾತು. ತುದಾದಿ. ಲಿಟ್ ಮಧ್ಯಮಪುರುಷದ ಥಾಸಿಗೆ **ಥಾಸಃ ಸೇ** ಸೂತ್ರದಿಂದ ಸೇ ಆದೇಶ. **ಲಿಟಿಧಾತೋಃ** ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ವಿವಿದ್+ಸೇ ಎಂದಿರುವಾಗ **ಖರಿಚ** ಎಂಬುದರಿಂದ ಚರ್ತ್ವ. ವಿವಿತ್ಸೇ ಎಂದು ರೂಪವಾಗುತ್ತದೆ. **ಕೃಸೃಭೃ** ಸೂತ್ರದಲ್ಲಿ ಲಿಟಿನಲ್ಲಿ ಇಣ್ನಿಷೇಧ ಬರುವುದಾದರೆ ಕ್ರ್ಯಾದಿಗಳಿಗೆ ಮಾತ್ರ ಎಂದು ನಿಯಮಮಾಡಿರುವುದರಿಂದ ಇಲ್ಲಿ ತದ್ಭಿನ್ನವಾದುದರಿಂದ ಸೇ ಎಂಬುದಕ್ಕೆ ಇಟ್ ಪ್ರಾಪ್ತವಾಗುತ್ತದೆ. ಆದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಇಲ್ಲಿ ಇಟ್ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಅಹನ್ವೃತ್ರಂ ವೃತ್ರತರಂ ವ್ಯಂಸಮಿನ್ದ್ರೋ ವಜ್ರೇಣ ಮಹತಾ ವಧೇನ ।
ಸ್ಕನ್ಧಾಂಸೀವ ಕುಲಿಶೇನಾ ವಿವೃಕ್ಣಾಹಿಃ ಶಯತ ಉಪಪೃಕ್ಪೃಥಿವ್ಯಾಃ ॥ ೫ ॥

॥ ಪದಪಾಠಃ ॥

ಅಹನ್ । ವೃತ್ರಂ । ವೃತ್ರಽತರಂ । ವಿಽಅಂಸಂ । ಇನ್ದ್ರಃ । ವಜ್ರೇಣ । ಮಹತಾ । ವಧೇನ ।
ಸ್ಕಂಧಾಂಸಿಽಇವ । ಕುಲಿಶೇನ । ವಿಽವೃಕ್ಣಾ । ಅಹಿಃ । ಶಯತೇ । ಉಪಽಪೃಕ್ । ಪೃಥಿವ್ಯಾಃ ॥ ೫ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ವಜ್ರೇಣ ಸಂಪಾದಿತೋ ಯೋ ಮಹಾನ್ವಧಸ್ತೇನ ವಜ್ರೇಣ ವೃತ್ರತರಮತಿಶಯೇನ ಲೋಕಾನಾಮಾವರಕಮಂಧಕಾರರೂಪಂ । ಯದ್ವಾ । ವೃತ್ರೈರಾವರಣೈಃ ಸರ್ವಾಂಛತ್ರೂಂಸ್ತರತಿ ತಂ । ವೃತ್ರಮೇತನ್ನಾಮಕಮಸುರಂ ವ್ಯಂಸಂ ವಿಗತಾಂಸಂ ಛಿನ್ನಬಾಹುರ್ಯಥಾ ಭವತಿ ತಥಾಹನ್ । ಹತವಾನ್ । ಅಂಸಚ್ಛೇದೇ ದೃಷ್ಟಾಂತಃ । ಕುಲಿಶೇನ ಕುಠಾರೇಣ ವಿವೃಕ್ಣಾ ವಿಶೇಷತಶ್ಛಿನ್ನಾನಿ ಸ್ಕಂಧಾಂಸೀವ । ಯಥಾ ವೃಕ್ಷಸ್ಕಂಧಾಶ್ಛಿನ್ನಾ ಭವಂತಿ ತದ್ವತ್ । ತಥಾ ಸತ್ಯಹಿರ್ವೃತ್ರಃ ಪೃಥಿವ್ಯಾ ಉಪರ್ಯುಪಪೃಕ್ ಸಾಮೀಪ್ಯೇನ ಸಂಪೃಕ್ತಃ ಶಯತೇ । ಶಯನಂ ಕರೋತಿ । ಛಿನ್ನಕಾಷ್ಠವದ್ಭೂಮೌ ಪತತೀತ್ಯರ್ಥಃ ॥ ವೃತ್ರತರಂ । ವೃತು ವರ್ತನೇ । ಸ್ಫಾಯಿತಂಚೀತ್ಯಾದಿನಾ ಭಾವೇ ರಕ್ಪ್ರತ್ಯಯಾಂತೋ ವೃತ್ರಶಬ್ದಃ । ವೃತ್ರೇಣಾವರಣೇನ ಸರ್ವಂ ತರತೀತಿ ವೃತ್ರತರಃ । ತರತೇಃ ಪಚಾದ್ಯಚ್ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ತರಪಿ ತು ವ್ಯತ್ಯಯೇನ । ವ್ಯಂಸಂ । ಬಹುವ್ರೀಹೌ ಪೂರ್ವ-

ಪದಪ್ರಕೃತಿಸ್ವರತ್ವೆ ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ। ವಧೇನ। ಹನಶ್ಚ ವಧ ಇತಿ ಭಾವೇಽಪ್। ತತ್ಸಂನಿಯೋಗೇನ ಧಾತೋರ್ವಧಾದೇಶಃ । ಸ ಚಾಂತೋದಾತ್ತಃ । ಅಂತ್ಯಸ್ಯಾಕಾರಸ್ಯಾತೋ ಲೋಪ ಇತಿ ಲೋಪ ಉದಾತ್ತನಿವೃತ್ತಿಸ್ವರೇಣ ಪ್ರತ್ಯಯಸ್ಯೋದಾತ್ತತ್ವಂ । ವಿವೃಕ್ಣಾ । ಓವ್ರಶ್ಚೂ ಛೇದನೇ । ಕರ್ಮಣಿ ನಿಷ್ಠಾ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಓದಿತಶ್ಚ । ಪಾ. ೮-೨-೪೫ । ಇತಿ ಪರತ್ವಾನ್ನಿಷ್ಠಾನತ್ವಂ । ತತೋ ವ್ರಶ್ಚಭ್ರಶ್ಚೇತಿ ಷತ್ವೇ ಪ್ರಾಪ್ತೇ ನಿಷ್ಠಾದೇಶಃ ಷತ್ವಸ್ವರಪ್ರತ್ಯಯೇಡ್ವಿಧಿಷು ಸಿದ್ಧೋ ವಕ್ತವ್ಯಃ । ಪಾ. ೮-೨-೬-೭ । ಇತಿ ನತ್ವಸ್ಯ ಸಿದ್ಧತ್ವೇನ ಝಲ್ಪರತ್ವಾಭಾವಾತ್ ಷತ್ವಂ ನ ಭವತಿ । ಕುತ್ವೇ ತು ಕರ್ತವ್ಯೇ ತದಸಿದ್ಧಮೇವ । ಪಾ. ೮-೨-೧ । ಇತಿ ಚೋಃ ಕುರಿತಿ ಕುತ್ವಂ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಶಯತೇ । ಬಹುಲಂ ಛಂದಸೀತಿ ಶಪೋ ಲುಗಭಾವಃ । ಪೃಥಿವ್ಯಾಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ ॥ ೩೬ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । **ವಜ್ರೇಣ**—ವಜ್ರಾಯುಧದಿಂದ । **ವೃತ್ರತರಂ**—ಅತ್ಯಂತ ಅಂಧಕಾರರೂಪದಲ್ಲಿ (ಲೋಕವನ್ನು) ಆವರಿಸಿದ ಅಥವಾ ಎಲ್ಲಾ ಶತ್ರುಗಳಿಗಿಂತಲೂ ಅತ್ಯಧಿಕವಾಗಿ (ಲೋಕವನ್ನು) ಆವರಿಸತಕ್ಕ । **ವೃತ್ರಂ**—ವೃತ್ರಾಸುರನನ್ನು । **ಕುಲಿಶೇನ**—ಕೊಡಲಿಯಿಂದ । **ವಿವೃಕ್ಣಾ**—ಸಂಪೂರ್ಣವಾಗಿ ಕತ್ತರಿಸಿದ । **ಸ್ಕಂಧಾಂಸೀವ**—ಕೊಂಬೆಗಳಂತೆ । **ವ್ಯಂಸಂ**—ತೋಳನ್ನು ಕತ್ತರಿಸಿ । **ಅಹನ್**—ಕೊಂದನು (ಹಾಗಾದ ಮೇಲೆ) । **ಅಹಿಃ**—ವೃತ್ರನು । **ಪೃಥಿವ್ಯಾಃ**—ಭೂಮಿಯ (ಮೇಲೆ) । **ಉಪಪೃಕ್**—ಚೆನ್ನಾಗಿ ಅಪ್ಪಿಕೊಂಡು । **ಶಯತೇ**—(ಕತ್ತರಿಸಿದ ಕೊಂಬೆಯಂತೆ ನಿರ್ಜೀವನಾಗಿ) ಮಲಗುತ್ತಾನೆ (ಮಲಗಿದ್ದಾನೆ).

॥ ಭಾವಾರ್ಥ ॥

ಕೊಡಲಿಯಿಂದ ಮರದ ಕೊಂಬೆಗಳನ್ನು ಕತ್ತರಿಸಿ ಕೆಳಕ್ಕೆ ಬೀಳಿಸುವಂತೆ ಇಂದ್ರನು, ತನ್ನ ಮಹಾ ವಜ್ರಾಯುಧದಿಂದ ಅತ್ಯಂತ ಅಂಧಕಾರರೂಪದಲ್ಲಿ ಲೋಕವನ್ನು ಆವರಿಸಿದ ವೃತ್ರಾಸುರನನ್ನು ಅವನ ತೋಳನ್ನು ಕತ್ತರಿಸಿ ಕೊಂದನು. ಅನಂತರ ವೃತ್ರನು ಕತ್ತರಿಸಿದ ಕೊಂಬೆಯಂತೆ ನಿರ್ಜೀವನಾಗಿ ಭೂಮಿಯನ್ನು ಚೆನ್ನಾಗಿ ಅಪ್ಪಿಕೊಂಡು ಮಲಗಿದ್ದಾನೆ.

## English Translation.

Indra struck the enemy (Vritra) more hostile than other enemies, with his destroying thunderbolt ; as the trunks of trees are felled by the axe, so Vritra deprived of his arms lies prostrate on the earth.

॥ ವಿಶೇಷವಿಷಯಗಳು ॥

**ವೃತ್ರತರಂ**—ಶತ್ರುಗಳಲ್ಲಿಯೂ ಹೆಚ್ಚಾದ ಶತ್ರುವಾದ ಅಥವಾ ಲೋಕವೆಲ್ಲವನ್ನೂ ಅಂಧಕಾರದಿಂದ (ಕತ್ತಲೆಯಿಂದ) ಆವರಿಸಿರುವ.

**ವ್ಯಂಸಂ—ವಿಗತಾಂಸಂ** । ಬಾಹುರಹಿತನನ್ನಾಗಿ ಎಂದರೆ ವಜ್ರಾಯುಧದಿಂದ ವೃತ್ರನ ಬಾಹುಗಳನ್ನು ಛೇದಿಸಿದನೆಂದಭಿಪ್ರಾಯವು.

**ವಧೇನ**—ವಧ ಎಂದರೆ ಸಂಹಾರಕರ್ಮದಲ್ಲಿ ಸಾಧನಭೂತವಾದ.

**ಸ್ಕಂಧಾಂಸೀವ ಕುಲಿಶೇನ**—ವೃಕ್ಷದ ಸ್ಕಂಧಗಳನ್ನು ಕೊಡಲಿಯಿಂದ ಕತ್ತರಿಸುವಂತೆ ವೃತ್ರಾಸುರನ ಬಾಹುಗಳನ್ನು ಅಥವಾ ವೃತ್ರಾಸುರನನ್ನು ಕತ್ತರಿಸಿದನೆಂದರ್ಥವು.

**ಅಹಿಃ ಶಯತ ಉಪಪೃಕ್ಪೃಥಿವ್ಯಾಃ**—ಇಂದ್ರನು ವಜ್ರಾಯುಧದಿಂದ ವೃತ್ರನನ್ನು ಹೊಡೆದ ಮೇಲೆ ಆ ವೃತ್ರನು ಕೊಡಲಿಯಿಂದ ಕಡಿಯಲ್ಪಟ್ಟ ವೃಕ್ಷದಂತೆ ನೆಲದ ಮೇಲೆ ಬಿದ್ದಿದ್ದನು. ಮೇಘರೂಪದಿಂದಿರುವ ವೃತ್ರನನ್ನು ಇಂದ್ರನು ವಜ್ರಾಯುಧದಿಂದ ಪ್ರಹರಿಸಿದ ಮೇಲೆ ಕತ್ತರಿಸಿದ ಬಾಹುವು (ಅಥವಾ ವೃಕ್ಷವು) ನೆಲದ ಮೇಲೆ ಬೀಳುವಂತೆ ಮೇಘದಲ್ಲಿದ್ದ ನೀರು ಭೂಮಿಯ ಮೇಲೆ ಬಿದ್ದಿತು ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ವೃತ್ರತರಮ್**—ವೃತು ವರ್ತನೇ ಧಾತು. ಭ್ವಾದಿ. ಭಾವಾರ್ಥದಲ್ಲಿ **'ಸ್ಫಾಯಿತಞ್ಚಿ ವಞ್ಚಿಶಕಿ'** (ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ ಬರುತ್ತದೆ. ವೃತ್ರ ಎಂದು ರೂಪವಾಗುತ್ತದೆ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ವೃತ್ರೇಣ ಆವರಣೇನ ಸರ್ವಂ ತರತಿ ಇತಿ ವೃತ್ರತರಃ. ತೄ ಪ್ಲವನತರಣಯೋಃ ಧಾತು. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ** ಸೂತ್ರದಿಂದ ಅಚ್. ಅಚ್ ಪರದಲ್ಲಿರುವಾಗ ಆರ್ಧಧಾತುಕನಿಬಂಧನವಾಗಿ ಧಾತುವಿಗೆ ಗುಣ. ವೃತ್ರತರ ಶಬ್ದವಾಗುತ್ತದೆ. ದ್ವಿತೀಯಾ ಏಕವಚನರೂಪ. **ಗತಿಕಾರಕ** ಸೂತ್ರದಿಂದ ಅಂತೋದಾತ್ತವು ಪ್ರಾಪ್ತವಾದರೆ **'ಪರಾದಿಶ್ಛಂದಸಿ ಬಹುಲಂ'** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದದ ಆದ್ಯುದಾತ್ತಸ್ವರವು ಬರುತ್ತದೆ. ತರಪ್ ಪ್ರತ್ಯಯಮಾಡಿ ವೃತ್ರತರ ಶಬ್ದವನ್ನು ತರಬಂತವಾಗಿ ಸ್ವೀಕರಿಸುವುದಾದರೆ ವ್ಯತ್ಯಯದಿಂದ ತರಪಿಗೆ ಆದ್ಯುದಾತ್ತಸ್ವರವನ್ನು ಹೇಳಬೇಕು.

**ವ್ಯಂಸಮ್**—ವಿಗತೌ ಅಂಸೌ ಯಸ್ಮಾತ್ ಸಃ ವ್ಯಂಸಃ ತಂ ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಬಂದಾಗ ವಿ ಎಂಬುದು ಉದಾತ್ತವಾಗುತ್ತದೆ. ಉದಾತ್ತಕ್ಕೆ ಯಣಾದೇಶ ಬಂದುದರಿಂದ **'ಉದಾತ್ತಸ್ವರಿತಯೋರ್ಯಣಃ'** (ಪಾ. ಸೂ ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ವಧೇನ—'ಹನಶ್ಚ ವಧಃ'** (ಪಾ. ಸೂ. ೩-೩-೭೬) ಎಂಬುದರಿಂದ ಹನ್ ಧಾತುವಿಗೆ ಭಾವಾರ್ಥದಲ್ಲಿ ಅಪ್ ಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿಗೆ ವಧಾದೇಶ ಅದು ಅಂತೋದಾತ್ತವಾಗುತ್ತದೆ. ವಧ+ಅ ಎಂದಿರುವಾಗ **ಅತೋಲೋಪಃ** ಎಂಬುದರಿಂದ ವಧ ಎಂಬಲ್ಲಿರುವ ಅಂತ್ಯಾಕಾರಕ್ಕೆ ಲೋಪ. ವಧ ಶಬ್ದವಾಗುತ್ತದೆ. ಅಪ್ ಪಿತ್ತಾದುದರಿಂದ ಅನುದಾತ್ತ. ಅದು ಪರದಲ್ಲಿರುವಾಗ ಉದಾತ್ತಾಕಾರ ಲೋಪವಾದುದರಿಂದ **ಅನುದಾತ್ತಸ್ಯ ಯತ್ರೋದಾತ್ತಲೋಪಃ** ಸೂತ್ರದಿಂದ ಪ್ರತ್ಯಯಕ್ಕೆ ಉದಾತ್ತಸ್ವರ ಬರುತ್ತದೆ.

**ವಿವೃಕ್ಣಾ**—ಓವ್ರಶ್ಚೂ ಛೇದನೇ. ಧಾತು ಕರ್ಮಾರ್ಥದಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ಸ್ಕೋಃ ಸಂಯೋಗಾದ್ಯೋರಂತೇ ಚ** ಎಂಬುದರಿಂದ ಸಕಾರಕ್ಕೆ ಲೋಪ. ವೃಚ್+ತ ಎಂದಿರುವಾಗ ವಲಾದಿಯಲ್ಲಿ ವಿಕಲ್ಪವಾಗಿ ಇಟ್ ಹೊಂದುವುದರಿಂದ **ಯಸ್ಯ ವಿಭಾಷಾ** ಎಂಬುದರಿಂದ ಕ್ತ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. ಧಾತುವು ಓದಿತ್ತಾದುದರಿಂದ '**ಓದಿತಶ್ಚ**' (ಪಾ. ಸೂ. ೮-೨-೪೫) ಸೂತ್ರದಿಂದ ಪರವಾದುದರಿಂದ ಮೊದಲು ನಿಷ್ಠಾತಕಾರಕ್ಕೆ ನತ್ವ ಬರುತ್ತದೆ. **ಓದಿತಶ್ಚ** ಎಂಬುದು ಅಸಿದ್ಧಕಾಂಡದಲ್ಲಿ ಹೇಳಿರುವುದರಿಂದ **ಪೂರ್ವತ್ರಾಸಿದ್ಧಂ** ಎಂಬುದರಿಂದ ಸಪಾದಸಪ್ತಾಧ್ಯಾಯಿಯನ್ನು ಕುರಿತು ಅಸಿದ್ಧವಾದುದರಿಂದ ಝಲ್‌ಪರದಲ್ಲಿದೆ **ವ್ರಶ್ಚಭ್ರಸ್ಜ** ಸೂತ್ರದಿಂದ ಇಲ್ಲಿ ಚಕಾರಕ್ಕೆ ಷತ್ವವು ಪ್ರಾಪ್ತವಾಗುತ್ತದೆ. ಆದರೆ '**ನಿಷ್ಠಾದೇಶಃ ಷತ್ವಸ್ವರ ಪ್ರತ್ಯಯೇಡ್ವಿಧಿಷು ಸಿದ್ಧೋವಕ್ತವ್ಯಃ**' (ಪಾ. ಸೂ. ೮-೨-೬. ೭) ಎಂಬ ವಚನಾಂತರದಿಂದ ಷತ್ವಮಾಡುವಾಗ ಅಸಿದ್ಧತ್ವವಿಲ್ಲವೆಂದುದರಿಂದ ನಕಾರವಿದ್ದಂತೆ ಆಗುತ್ತದೆ. ಆಗ ಝಲ್ ಪರದಲ್ಲಿ ಇಲ್ಲದಿರುವುದರಿಂದ ಹಿಂದಿನ ಸೂತ್ರದಿಂದ ಷತ್ವವು ಬರುವುದಿಲ್ಲ. '**ಕುತ್ವೇತು ಕರ್ತವ್ಯೇ ತದಸಿದ್ಧಮೇವ**' (ಪಾ. ಸೂ. ೮-೨-೧) ಎಂಬುದರಿಂದ ಕುತ್ವವಿಧಿಯಲ್ಲಿ ಮಾತ್ರ ನತ್ವವು ಅಸಿದ್ಧವಾಗುತ್ತದೆ. ಆಗ ತಕಾರವು ಪರದಲ್ಲಿರುವುದರಿಂದ **ಚೋಃ ಕುಃ** ಎಂಬುದರಿಂದ ಚಕಾರಕ್ಕೆ ಕುತ್ವದಿಂದ ತಕಾರ ಬರುತ್ತದೆ. ಋಕಾರದ ಪರದಲ್ಲಿ ಬಂದುದರಿಂದ ಮಧ್ಯೆ ಅಟ್‌ಕವರ್ಗದ ವ್ಯವಧಾನವಿರುವುದರಿಂದ ನಕಾರಕ್ಕೆ ಣತ್ವ ಬರುತ್ತದೆ. ವೃಕ್ಣ ಎಂದು ರೂಪವಾಗುತ್ತದೆ. ವಿ ಎಂಬ ಗತಿಸಂಬಂಧವಿರುವಾಗ **ಗತಿರನಂತರಃ** ಎಂಬುದರಿಂದ ಗತಿಗೆ ಪ್ರಕೃತಿಸ್ವರವು ಬರುತ್ತದೆ. ಆದ್ಯುದಾತ್ತವಾಗುತ್ತದೆ. ನಪುಂಸಕ ಬಹುವಚನದಲ್ಲಿ ಜಸ್ಸಿಗೆ **ಜಶ್ಶಸೋಃ ಶಿಃ** ಎಂಬುದರಿಂದ ಶಿ ಆದೇಶ ಬರುತ್ತದೆ. **ನಪುಂಸಕಸ್ಯ ಝಲಚಃ** ಎಂಬುದರಿಂದ ಶಿ ಪರದಲ್ಲಿರುವಾಗ ಅಂಗಕ್ಕೆ ನುಮಾಗಮ. **ಸರ್ವನಾಮಸ್ಥಾನೇ** ಎಂಬುದರಿಂದ ಉಪಧಾದೀರ್ಘ. '**ಶೇಶ್ಛಂದಸಿ ಬಹುಲಂ**' (ಪಾ ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ವಿವೃಕ್ಣಾನ್ ಎಂದಿರುವಾಗ **ನಲೋಪಃ ಪ್ರಾತಿ**—ಸೂತ್ರದಿಂದ ನಲೋಪ. ವಿವೃಕ್ಣಾ ಎಂದು ರೂಪವಾಗುತ್ತದೆ.

**ಶಯುತೇ**—ಶೀಙ್ ಸ್ವಪ್ನೇ ಧಾತು. ಅದಾದಿ. ಲಟ್ ಪ್ರಥಮಪುರುಷ ತಪ್ರತ್ಯಯಕ್ಕೆ **ಟಿತಆತ್ಮನೇಪದಾನಾಂ** ಸೂತ್ರದಿಂದ ಏತ್ವ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್ ಪ್ರಾಪ್ತವಾದರೆ **ಬಹುಲಂ ಛಂದಸಿ** ಎಂಬುದರಿಂದ ಲುಕ್ ಬರುವುದಿಲ್ಲ. **ಏಚೋ**—ಸೂತ್ರದಿಂದ ಅಯಾದೇಶ ಬಂದರೆ ಶಯುತೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪೃಥಿವ್ಯಾಃ**—ಪೃಥಿವೀ ಶಬ್ದದ ಷಷ್ಠೀ ಏಕವಚನದ ರೂಪ. ಉದಾತ್ತಸ್ಥಾನದಲ್ಲಿ ಯಣ್ ಬಂದುದರಿಂದ '**ಉದಾತ್ತಯಣೋಹಲ್**' (ಪಾ. ಸೂ ೬-೧-೧೭೪) ಎಂಬುದರಿಂದ ವಿಭಕ್ತಿಗೆ ಅನುದಾತ್ತಸ್ವರವು ಬಾಧಿಸಲ್ಪಟ್ಟು ಉದಾತ್ತಸ್ವರ ಬರುತ್ತದೆ ॥ ೫ ॥

॥ ಸಂಹಿತಾಪಾಠಃ ॥

ಅಯೋದ್ಧೇವ ದುರ್ಮದ ಆ ಹಿ ಜುಹ್ವೇ ಮಹಾವೀರಂ
ತುವಿಬಾಧಮೃಜೀಷಂ ।
ನಾತಾರೀದಸ್ಯ ಸಮೃತಿಂ ವಧಾನಾಂ ಸಂ ರುಜಾನಾಃ ಪಿಪಿಷ
ಇನ್ದ್ರಶತ್ರುಃ ॥ ೬ ॥

॥ ಪದಪಾಠಃ ॥

ಅಯೋದ್ಧಾಽಇವ । ದುಃಽಮದಃ । ಆ । ಹಿ । ಜುಹ್ವೇ । ಮಹಾಽವೀರಂ ।
ತುವಿಽಬಾಧಂ । ಋಜೀಷಂ ।
ನ । ಅತಾರೀತ್ । ಅಸ್ಯ । ಸಂಽಋತಿಂ । ವಧಾನಾಂ । ಸಂ । ರುಜಾನಾಃ ।
ಪಿಪಿಷೇ । ಇನ್ದ್ರಽಶತ್ರುಃ ॥ ೬ ॥

॥ ಸಾಯಣಭಾಷ್ಯಂ ॥

ದುರ್ಮದೋ ದುಷ್ಟಮದೋಪೇತೋ ದರ್ಪಯುಕ್ತೋ ವೃತ್ರೋಽಯೋದ್ಧೇವ ಯೋದ್ಧೃರಹಿತ ಇವೇಂದ್ರಮಾ ಜುಹ್ವೇ ಹಿ । ಆಹೂತವಾನ್ಖಲು । ಕೀದೃಶಮಿಂದ್ರಂ । ಮಹಾವೀರಂ ಗುಣೈರ್ಮಹಾನ್ಭೂತ್ವಾ ಶೌರ್ಯೋಪೇತಂ ತುವಿಬಾಧಂ ಬಹೂನಾಂ ಬಾಧಕಂ ಋಜೀಷಂ ಶತ್ರೂಣಾಮಪಾರ್ಜಕಂ । ಅಸ್ಯೇದೃಶಸ್ಯೇಂದ್ರಸ್ಯ ಸಂಬಂಧಿನೋ ಯೇ ಶತ್ರುವಧಾಃ ಸಂತಿ ತೇಷಾಂ ವಧಾನಾಂ ಸಮೃತಿಂ ಸಂಗಮಂ ನಾತಾರೀತ್ । ಪೂರ್ವೋಕ್ತೋ ದುರ್ಮದಸ್ತರೀತುಂ ನಾಶಕ್ನೋತ್ । ಇಂದ್ರಶತ್ರುರಿಂದ್ರಃ ಶತ್ರುರ್ಘಾತಕೋ ಯಸ್ಯ ವೃತ್ರಸ್ಯ ತಾದೃಶೋ ವೃತ್ರ ಇಂದ್ರೇಣ ಹತೋ ನದೀಷು ಪತಿತಃ ಸನ್ ರುಜಾನಾ ನದೀಃ ಸಂ ಪಿಪಿಷೇ । ಸಮ್ಯಕ್ ಪಿಷ್ಟವಾನ್ । ಸರ್ವಾನ್ಲೋಕಾನಾವೃಣ್ವತೋ ವೃತ್ರದೇಹಸ್ಯ ಪಾತೇನ ನದೀನಾಂ ಕೂಲಾನಿ ತತ್ರತ್ಯಪಾಷಾಣಾದಿಕಂ ಚ ಚೂರ್ಣೀಭೂತಮಿತ್ಯರ್ಥಃ ॥ ಅಯೋದ್ಧಾ ಇವ । ನ ವಿದ್ಯತೇ ಯೋದ್ಧಾಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸಮಾಸಾಂತವಿಧೇರನಿತ್ಯತ್ವಾತ್ । ಪರಿ. ೮೪ । ನದ್ಯೃತಶ್ಚ । ಪಾ. ೫-೪-೧೫೩ । ಇತಿ ಕಬಭಾವಃ । ಜುಹ್ವೇ । ಹ್ವೇಞ್

ಸ್ಪರ್ಧಾಯಾಂ ಶಬ್ದೇ ಚ । ಅಭ್ಯಸ್ತಸ್ಯ ಚ । ಪಾ. ೬-೧-೩೩ । ಇತಿ ಸಂಪ್ರಸಾರಣಂ । ಉವಙಾದೇಶಾಭಾವಶ್ಛಾಂದಸಃ । ಯದ್ವಾ । ಛಂದಸ್ಯುಭಯಥೇತಿ ಸಾರ್ವಧಾತುಕಸಂಜ್ಞಾಯಾಂ ಹುಶ್ನುವೋಃ ಸಾರ್ವಧಾತುಕೇ । ಪಾ. ೬-೪-೮೭ । ಇತಿ ಯಣಾದೇಶಃ । ಅತ್ರ ಲಕ್ಷಣಪ್ರತಿಪದೋಕ್ತಪರಿಭಾಷಾ । ಪರಿ. ೧೦೫। ಲಕ್ಷ್ಯಾನುರೋಧಾನ್ನಾಶ್ರೀಯತೇ । ಇತರಥಾ ಹ್ಯಾಜುಹ್ವಾನ ಇತ್ಯಾದಿಷು ಯಣಾದೇಶೋ ನ ಸ್ಯಾತ್ । ನ ಚೈವಂ ಸತಿ ಸಾತಯೇ ಹುವೇ ವಾಂ । ಋಗ್ವೇ ೬-೬೦-೧೩ । ಇತ್ಯಾದಾವಪಿ ತಥಾ ಸ್ಯಾದಿತಿ ವಾಚ್ಯಂ । ಅನೇಕಾಚ್‌ತ್ವಾಭಾವಾತ್ । ಅನೇಕಾಚ ಇತಿ ಹಿ ತತ್ರಾನುವರ್ತತೇ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಹಿ ಚೇತಿ ನಿಘಾತಪ್ರತಿಷೇಧಃ । ಮಹಾವೀರಂ । ಮಹಾಂಶ್ಚಾಸೌ ವೀರಶ್ಚ ಮಹಾವೀರಃ । ಆನ್ಮಹತಃ । ಪಾ. ೬-೩-೪೬ । ಇತ್ಯಾತ್ವಂ । ತುವಿಬಾಧಂ । ಬಾಧೃ ವಿಲೋಡನೇ ತುವೀನ್ಬಹೂನ್ ಶತ್ರೂನ್ಬಾಧತ ಇತಿ ತುವಿಬಾಧಃ । ಪಚಾದ್ಯಚ್ । ಕೃದುತ್ತರಪದಪ್ರಕೃತಿಸ್ವರತ್ವಂ । ಸಮೃತಿಂ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ರುಜಾನಾಃ । ರುಜೋ ಭಂಗೇ । ರುಜಂತಿ ಕೂಲಾನೀತಿ ರುಜಾನಾ ನದ್ಯಃ । ರುಜಾನಾ ನದ್ಯೋ ಭವಂತಿ ರುಜಂತಿ ಕೂಲಾನಿ । ನಿ. ೬-೪ । ಇತಿ ಯಾಸ್ಕಃ । ವ್ಯತ್ಯಯೇನ ಶಾನಚ್ । ತುದಾದಿಭ್ಯಃ ಶಃ । ನುಮಭಾವಶ್ಛಾಂದಸಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರಃ । ಪಿಪಿಷೇ । ಪಿಸ್ಲೃ ಸಂಚೂರ್ಣನೇ । ವ್ಯತ್ಯಯೇನ ಲಿಟ್ । ಇಂದ್ರಶತ್ರುಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ದುರ್ಮದಃ**—ದುರಭಿಮಾನದಿಂದ ಕೂಡಿದ ವೃತ್ರನು । **ಅಯೋದ್ಧೇವ**—(ತನಗೆ ಪ್ರತಿಕಕ್ಷಿಯಾದ) ಯೋಧನೇ ಇಲ್ಲವೆಂಬ ಅಹಂಕಾರದಿಂದ । **ಮಹಾವೀರಂ**—ಶ್ರೇಷ್ಠನೂ ಶೌರ್ಯಯುಕ್ತನೂ । **ತುವಿಬಾಧಂ**—ಅನೇಕ ಶತ್ರುಗಳನ್ನು ಹಿಂಸಿಸಿದವನೂ । **ಋಜೀಷಂ**—ಶತ್ರುಗಳನ್ನು (ದೂರಕ್ಕೆ) ಓಡಿಸುವವನೂ ಆದ ಇಂದ್ರನನ್ನು । **ಆ ಜುಹ್ವೇ ಹಿ**—(ಯುದ್ಧಕ್ಕಾಗಿ) ಕರೆದನಷ್ಟೆ (ಆಗ) । **ಅಸ್ಯ**—ಈ ಇಂದ್ರನ (ಕೈಯಿಂದ ಯಾವ ಯಾವ ಶತ್ರುವಧಗಳಾದವೋ) । **ತೇಷಾಂ ವಧಾನಾಂ**—ಆ ವಧಗಳ । **ಸಮೃತಿಂ**—ಸಂಪರ್ಕವನ್ನು । **ನಾತಾರೀತ್**—(ವೃತ್ರನು) ತಪ್ಪಿಸಿಕೊಳ್ಳಲಾಗಲಿಲ್ಲ । **ಇಂದ್ರ ಶತ್ರುಃ**—ಇಂದ್ರನಿಂದ ಹತನಾದ ಶತ್ರುವು (ವೃತ್ರನು ಯಾವಾಗ ನದಿಯಲ್ಲಿ ಬಿದ್ದನೋ ಆಗ ಅವನ ಭಾರದಿಂದ) । **ರುಜಾನಾಃ**—ನದಿಗಳ (ದಡಗಳ) ನ್ನು । **ಸಂ ಪಿಪಿಷೇ**—ಚೆನ್ನಾಗಿ ಪುಡಿಮಾಡಿದನು.

॥ ಭಾವಾರ್ಥ ॥

ದುರಭಿಮಾನದಿಂದ ಕೂಡಿದ ವೃತ್ರನು ತನಗೆ ಪ್ರತಿಕಕ್ಷಿಯಾದ ಯೋಧನೇ ಇಲ್ಲವೆಂಬ ಅಹಂಕಾರದಿಂದ ಶ್ರೇಷ್ಠನೂ ಶೌರ್ಯಯುಕ್ತನೂ ಅನೇಕ ಶತ್ರುಗಳನ್ನು ಹಿಂಸಿಸಿದವನೂ ಮತ್ತು ಶತ್ರುಗಳನ್ನು ದೂರಕ್ಕೆ ಓಡಿಸುವವನೂ ಆದ ಇಂದ್ರನನ್ನು ಯುದ್ಧಕ್ಕಾಗಿ ಕರೆದನಷ್ಟೆ. ಆಗ ಇಂದ್ರನಿಂದ ಯಾವ ರೀತಿ ಇತರ ಶತ್ರುಗಳು ಹತರಾದರೋ ಆ ವಧವನ್ನು ವೃತ್ರನು ತಪ್ಪಿಸಿಕೊಳ್ಳಲಾಗಲಿಲ್ಲ. ಇಂದ್ರನಿಂದ ಹತನಾದ ವೃತ್ರನು ನದಿಯಲ್ಲಿ ಬಿದ್ದಾಗ ಆ ರಭಸಕ್ಕೆ ದಡದ ಮೇಲಿನ ಕಲ್ಲು ಮತ್ತು ಮರಗಳನ್ನೆಲ್ಲಾ ಪುಡಿಪುಡಿಮಾಡಿದನು. ಎಂದರೆ ಕೆಳಗೆ ಬಿದ್ದ ಅವನ ಶರೀರಭಾರದಿಂದ ನದಿಗಳ ದಡಗಳಲ್ಲಿದ್ದ ವೃಕ್ಷಪಾಷಾಣಾದಿಗಳೆಲ್ಲವೂ ಪುಡಿಪುಡಿಯಾದವು.

## English Translation.

The arrogant Vritra, as if unequalled, challenged Indra, the mighty hero, the destroyer of many and the scatterer of foes; but he did not escape the fate of Indra's enemies; the enemy of Indra was dashed against the banks of the rivers.

॥ ವಿಶೇಷವಿಷಯಗಳು ॥

**ಅಯೋದ್ಧೇವ—ಯೋದ್ಧೃರಹಿತ ಇವ, ನಿಶ್ಶತ್ರುರಿವ ಸಗರ್ವಃ ।** ತನಗೆ ಸಮಾನರಾದ ಎಂದರೆ ತನ್ನೊಡನೆ ಯುದ್ಧಮಾಡಲು ಸಮರ್ಥರಾದ ಯುದ್ಧಭಟರಿಲ್ಲವೆಂಬ ಅಹಂಕಾರದಿಂದ ಮತ್ತನಾಗಿ.

**ದುರ್ಮದಃ**—ದುರಹಂಕಾರದಿಂದ ಕೂಡಿದ ವೃತ್ರನು.

**ಮಹಾವೀರಂ**—ಗುಣಗಳಲ್ಲಿಯೂ ಪರಾಕ್ರಮದಲ್ಲಿಯೂ ಅಪ್ರತಿಮಶೌರ್ಯಸಾಹಸಯುಕ್ತನಾದ.

**ತುವಿಬಾಧಂ**—ತುವಿ ಎಂದರೆ ಬಹು. ಬಹುಜನ ಶತ್ರುಗಳನ್ನು ಯುದ್ಧದಲ್ಲಿ ಹಿಂಸಿಸುವ.

**ಋಜೀಷಂ**—ಗೆಲ್ಲಲಸಾಧ್ಯನಾದ, ಶಕ್ತಿಯುತನಾದ.

**ನ ಅತಾರೀತ್**—ಸಹಿಸಲು ಶಕ್ತನಾಗಲಿಲ್ಲ.

**ಸಮೃತಿಂ—ಸಂಗಮಂ ।** ಯುದ್ಧದಲ್ಲಿ ಪರಸ್ಪರ ಮಿಳನವು, encounter.

**ವಧಾನಾಂ**—ಇಂದ್ರನ ಶತ್ರುಗಳಾದವರ ಸಂಹಾರವಿಷಯದಲ್ಲಿ ಅವರಿಗುಂಟಾಗುವ ಗತಿಯನ್ನು.

**ರುಜಾನಾಃ—ನದೀಃ ।** ನದಿಗಳನ್ನು ಅಥವಾ ನದಿಯ ದಡಗಳನ್ನು.

**ಪಿಪಿಷೇ**—ತಾನು ಬಿದ್ದ ರಭಸಕ್ಕೆ ನದಿಯ ದಡಗಳನ್ನು ಪುಡಿಪುಡಿಮಾಡಿದನು. ಎಂದರೆ ವೃತ್ರನ ದೊಡ್ಡ ಶರೀರವು ನದಿಯ ಮೇಲೆ ಬಿದ್ದುದರಿಂದ ದಡದಲ್ಲಿದ್ದ ವೃಕ್ಷಾದಿಗಳೂ, ಕಲ್ಲುಬಂಡೆಗಳೂ ಎಲ್ಲವೂ ಪುಡಿಪುಡಿಯಾಯಿತೆಂದಭಿಪ್ರಾಯವು.

**ಇಂದ್ರಶತ್ರುಃ**—ಇಂದ್ರನಿಗೆ ಶತ್ರುವಾದ ವೃತ್ರನು. ಮೇಘಪರವಾದ ಅರ್ಥವನ್ನು ಹೇಳುವುದಾದರೆ—ಅಂತರಿಕ್ಷದಲ್ಲಿ ಕಪ್ಪಾದ ಮೋಡಗಳು ಗುಂಪುಕಟ್ಟಿಕೊಂಡು ತಮಗೆದುರಿಲ್ಲವೆಂಬ ಅಹಂಕಾರದಿಂದ ಇಂದ್ರನನ್ನು ಯುದ್ಧಕ್ಕೆ ಕರೆಯುವಂತೆ ಕಂಡುಬಂದವು. ಆದರೆ ಇಂದ್ರನ ಶತ್ರುಗಳಿಗೆ ಯುದ್ಧದಲ್ಲಿ ಯಾವ ಗತಿಯುಂಟಾಗುವುದೋ ಆ ಗತಿಯನ್ನು ತಪ್ಪಿಸಿಕೊಳ್ಳಲಾಗಲಿಲ್ಲ ಎಂದರೆ ಇಂದ್ರನಿಂದ ಪ್ರಹರಿಸಲ್ಪಟ್ಟು, ಭೂಮಿಯ ಮೇಲೆ ನೀರಿನ ರೂಪದಿಂದ ಬಿದ್ದು ನದಿಯಲ್ಲಿ ಹರಿಯುವಾಗ ವಿಶೇಷವಾದ ಪ್ರವಾಹದಿಂದ ಉಕ್ಕುತ್ತಾ ನದಿಯ ದಡಗಳನ್ನು ಅತಿಕ್ರಮಿಸಿ ಪಕ್ಕದಲ್ಲಿದ್ದ ವೃಕ್ಷಾದಿಗಳನ್ನು ಕೆಡವಿ ಪ್ರವಾಹದಲ್ಲಿ ಕೊಚ್ಚಿಹೋಗುವಂತೆ ಮಾಡಿದವು ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ಅಯೋದ್ಧಾ ಇವ**—ನ ವಿದ್ಯತೇ ಯೋದ್ಧಾ ಅಸ್ಯ ಇತಿ ಅಯೋದ್ಧಾ. ಬಹುವ್ರೀಹಿಸಮಾಸ. ನಞ್ ಪೂರ್ವಪದವಾದುದರಿಂದ ಪೂರ್ವಪದ ಪ್ರಕೃತಿಸ್ವರವು ಬಾಧಿತವಾಗಿ **ನಞ್ಸುಭ್ಯಾಂ** ಎಂಬುದರಿಂದ ಉತ್ತರ ಪದಾಂತೋದಾತ್ತಸ್ವರ ಬರುತ್ತದೆ. '**ಸಮಾಸಾಂತವಿಧಿರನಿತ್ಯಃ**' (ಪರಿಭಾ. ೮೪) ಎಂಬುದರಿಂದ ಸಮಾಸಾಂತವು ಅನಿತ್ಯವಾದುದರಿಂದ '**ನದ್ಯೃತಶ್ಚ**' (ಪಾ. ಸೂ. ೫-೪-೧೫೩) ಎಂಬುದರಿಂದ ಋದಂತವಾದರೂ ಕಪ್ ಬರುವುದಿಲ್ಲ.

**ಜುಹ್ವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಿಟ್ ಪ್ರಥಮಪುರುಷ ಏಕವಚನದ ತಪ್ರತ್ಯ ಯಕ್ಕೆ **ಲಿಟಸ್ತಝಯೋರೇಶಿರೇಚ್** ಸೂತ್ರದಿಂದ ಏಕಾದೇಶ. '**ಅಭ್ಯಸ್ತಸ್ಯ ಚ**' (ಪಾ. ಸೂ. ೬-೧-೩೩) ಎಂಬುದರಿಂದ ಮುಂದೆ ಅಭ್ಯಸ್ತಸಂಜ್ಞೆಯನ್ನು ಹೊಂದುವುದರಿಂದ ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ ಬಂದರೆ ಹು ಎಂದಾಗುತ್ತದೆ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಚುತ್ವ. ಜುಹು+ಎ **ಹುಶ್ನುವೋಃ ಸಾ**-ಸೂತ್ರದಿಂದ ಉವಙಾದೇಶವು ಪ್ರಾಪ್ತವಾದರೂ ಛಾಂದಸವಾಗಿ ಬರುವುದಿಲ್ಲವೆಂದು ಸ್ವೀಕರಿಸ ಬೇಕು. ಅಥವಾ. **ಛಂದಸ್ಯುಭಯಥಾ** ಎಂದುದರಿಂದ ಲಿಡಾದೇಶವಾದರೂ ಸಾರ್ವಧಾತುಕ ಸಂಜ್ಞೆಯು ಬರುವುದ ರಿಂದ '**ಹುಶ್ನುವೋಃ ಸಾರ್ವಧಾತುಕೇ**' (ಪಾ. ಸೂ. ೬-೪-೮೭) ಎಂಬುದರಿಂದ ಯಣಾದೇಶವು ಉವಙನ್ನು ಬಾಧಿಸಿ ಬರುತ್ತದೆ. ಇಲ್ಲಿ ಒಂದು ಆಶಂಕೆ ಬರುತ್ತದೆ. **ಹುಶ್ನುವೋಃ** ಸೂತ್ರದಲ್ಲಿ ಹುಪದದಿಂದ ಸಾಕ್ಷಾದುಪದಿಷ್ಟ ವಾದ ಹುದಾನಾದನಯೋಃ ಎಂಬ ಹು ಧಾತುವು ಗೃಹೀತವಾಗಿರುವಾಗ ಸೂತ್ರದಿಂದ ನಿಷ್ಪನ್ನವಾದ ಹುರೂಪವುಳ್ಳ ಹ್ವೇಞ್ ಧಾತುವನ್ನು ಹೇಗೆ ಸ್ವೀಕರಿಸುವುದು? '**ಲಕ್ಷಣಪ್ರತಿಪದೋಕ್ತಯೋಃ ಪ್ರತಿಪದೋಕ್ತಸ್ಯೈವ ಗ್ರಹಣಂ**' (ಪರಿಭಾ. ೧೦೫) ಎಂಬ ಪರಿಭಾಷೆಯು ಇದೇ ಅರ್ಥವನ್ನು ತಿಳಿಸುತ್ತದೆ. ಆದುದರಿಂದ ಲಾಕ್ಷಣಿಕವಾದ ಹು ಎಂಬುದಕ್ಕೆ ಗ್ರಹಣವಿಲ್ಲದಿರುವಾಗ ಪುನಃ ಯಣಾದೇಶವು ದುರ್ಲಭವಷ್ಟೆ ಎಂದರೆ ಲಕ್ಷ್ಯಾನುರೋಧದಿಂದ ಆ ಪರಿ ಭಾಷೆಯನ್ನು ಇಲ್ಲಿ ಸ್ವೀಕರಿಸುವುದಿಲ್ಲ. ಆದುದರಿಂದ ಯಣಾದೇಶ ಬರಲು ಅಭ್ಯಂತರವಿಲ್ಲ. ಎಲ್ಲಾ ಕಡೆಯಲ್ಲಿಯೂ ಪರಿಭಾಷಾ ಸಂಚಾರ ಹೇಳಲೇಬೇಕೆಂದು ನಿಯಮಿಸಿದರೆ **ಆಜುಹ್ವಾನಃ** ಇತ್ಯಾದಿ ರೂಪಗಳು ಸಿದ್ಧಿಯಾಗಲಾರವು. ಅಲ್ಲಿಯೂ ಲಾಕ್ಷಣಿಕವಾದ ಹುಧಾತುವೇ ಗೃಹೀತವಾಗಿದೆ. ಹಾಗಾದರೆ '**ಸಾತಯೇ ಹುವೇ ವಾಮ್**' (ಋ. ಸಂ. ೬-೧೦-೧೩) ಇತ್ಯಾದಿ ಪ್ರಯೋಗಗಳಲ್ಲಿಯೂ ಯಣಾದೇಶ ಬರಬೇಕಾಗುತ್ತದೆ. ಪರಿಭಾಷಾಸಂಚಾರ ನಿತ್ಯವಲ್ಲವಷ್ಟೆ. ಅಲ್ಲಿ ಉವಙಾದೇಶ ಬಂದಿದೆ. ಅದನ್ನು ಬಾಧಿಸಿ ಯಣ್ ಬರಲಿ ಎಂದು ಆಶಂಕೆ ಇದರ ಮೇಲೆ ಬರುತ್ತದೆ. ಅಲ್ಲಿ ವಿಚಾರಮಾಡದೆ ಹೇಳಿದ ಮಾತು. ಏಕೆಂದರೆ ಯಣ್ ವಿಧಾಯಕ ಶಾಸ್ತ್ರದಲ್ಲಿ **ಏರನೇಕಾಚಃ** ಸೂತ್ರದಿಂದ ಅನೇಕಾಚಃ ಎಂಬುದು ಅನುವೃತ್ತವಾಗುವುದರಿಂದ ಅನೇಕಾಚ್ಕವಾದ ಅಂಗಕ್ಕೇ ಯಣಾದೇಶ ಬರುತ್ತದೆ. ಹುವೇ ಇತ್ಯಾದಿ ಸ್ಥಳದಲ್ಲಿ ಅನೇಕಾಚಾಗಿಲ್ಲವಾದುದರಿಂದ ಯಣ್ ಬರುವುದಿಲ್ಲ. ಪ್ರಕೃತ ಅನೇಕಾಜಾದುದರಿಂದ ಪರಿಭಾಷಾ ಸಂಚಾರವಿಲ್ಲದಿರುವುದರಿಂದ ಯಣ್ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಜುಹ್ವೇ ಎಂಬುದು ಅಂತೋ ದಾತ್ತವಾಗುತ್ತದೆ.

**ಮಹಾವೀರಮ್**—ಮಹಾಂಶ್ಚಾಸೌ ವೀರಶ್ಚ ಮಹಾವೀರಃ '**ಅನ್ಮಹತಃ ಸಮಾ**' (ಪಾ. ಸೂ. ೬-೩-೪೬)

ಎಂಬುದರಿಂದ ಏಕಾರ್ಥವಾಚಕವಾದ ಪದವು ಪರದಲ್ಲಿರುವುದರಿಂದ ಮಹಚ್ಛಬ್ದಕ್ಕೆ ಆತ್ವವು ಬರುತ್ತದೆ. **ಸಮಾಸಸ್ಯ** ಎಂಬುದರಿಂದ ಅಂತೋದಾತ್ತಸ್ವರವು ಬರುತ್ತದೆ.

**ತುವಿಬಾಧಮ್**—ಬಾಧೃ ವಿಲೋಡನೇ ಧಾತು. ತುವೀನ್ ಪ್ರಭೂತಾನ್ ಬಾಧತೇ ಇತಿ ತುವಿಬಾಧಃ || **'ನಂದಿಗ್ರಹಪಚಾದಿಭ್ಯಃ'** (ಪಾ. ಸೂ. ೩-೧-೧೩೪) ಸೂತ್ರದಿಂದ ಅಚ್. ಇದು ಪಚಾದಿಯಲ್ಲಿ ಸೇರಿರುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸಮ್ಮೃತಿಮ್**—**ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. ಸಮ್ ಎಂಬುದಕ್ಕೆ **ಗತಿಶ್ಚ** ಎಂಬುದರಿಂದ ಗತಿಸಂಜ್ಞಾ. **'ತಾದೌ ಚ ನಿತಿ ಕೃತ್ಯತೌ'** (ಪಾ. ಸೂ. ೬-೨-೫೦) ಎಂಬುದರಿಂದ ತಕಾರಾದಿಯಾಗಿ ನಿದಂತವಾಗಿರುವ ಪ್ರತ್ಯಯಾಂತವು ಪರದಲ್ಲಿರುವುದರಿಂದ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತದೆ.

**ರುಜಾನಾಃ**—ರುಜೋ ಭಙ್ಗೇ ಧಾತು. ರುಜಂತಿ ಕೂಲಾನೀತಿ ರುಜಾನಾ ನದ್ಯಃ ಪರಸ್ಮೈಪದಿಯಾದರೂ **ವ್ಯತ್ಯಯೋ ಬಹುಲಂ** ಎಂಬುದರಿಂದ ಲಡರ್ಥದಲ್ಲಿ ಶಾನಚ್. **ತುದಾದಿಭ್ಯಃ ಶಃ** ಎಂಬುದರಿಂದ ಶವಿಕರಣ. ಛಾಂದಸವಾಗಿ ನುಮ್ ಬರುವುದಿಲ್ಲ. ರುಜಾನಾ ಎಂದು ರೂಪವಾಗುತ್ತದೆ. **'ರುಜಾನಾ ನದ್ಯೋ ಭವಂತಿ ರುಜಂತಿ ಕೂಲಾನಿ'** (ನಿರು ೬-೪) ಎಂಬುದಾಗಿ ರುಜಾನ ಶಬ್ದಕ್ಕೆ ನದಿಯೆಂದರ್ಥವೆಂದು ಯಾಸ್ಕರು ಹೇಳಿರುತ್ತಾರೆ. ಅದುಪದೇಶದ ಪರದಲ್ಲಿರುವುದರಿಂದ ಶಾನಚ್ ಅನುದಾತ್ತವಾಗುತ್ತದೆ. ಆಗ ವಿಕರಣಸ್ವರವು ಸತಿಶಿಷ್ಟವಾಗುತ್ತದೆ.

**ಪಿಪಿಷೇ**—ಪಿಷ್ಲೃ ಸಂಚೂರ್ಣನೇ ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಿಟ್. ಪ್ರಥಮಪುರುಷ ಏಕವಚನಕ್ಕೆ ಏಶ್ ಆದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಪಿಪಿಷೇ ಎಂದಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಇಂದ್ರಶತ್ರುಃ**—ಇಂದ್ರಃ ಶತ್ರುಃ ಯಸ್ಯ ಸಃ ಇಂದ್ರಶತ್ರುಃ ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ** ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. || ೬ ||

|| ಸಂಹಿತಾಪಾಠಃ ||

ಅಪಾದಹಸ್ತೋ ಅಪೃತನ್ಯದಿನ್ದ್ರಮಾಸ್ಯ ವಜ್ರಮಧಿ ಸಾನೌ ಜಘಾನ ।
ವೃಷ್ಣೋ ವಧ್ರಿಃ ಪ್ರತಿಮಾನಂ ಬುಭೂಷನ್ಪುರುತ್ರಾ ವೃತ್ರೋ ಅಶಯದ್ವ್ಯಸ್ತಃ || ೭ ||

॥ ಪದಪಾಠಃ ॥

ಅಪಾತ್ । ಅಹಸ್ತಃ । ಅಪೃತನ್ಯತ್ । ಇನ್ದ್ರಂ । ಆ । ಅಸ್ಯ । ವಜ್ರಂ । ಅಧಿ ।
ಸಾನೌ । ಜಘಾನ ।

ವೃಷ್ಣಃ । ವಧ್ರಿಃ । ಪ್ರತಿಽಮಾನಂ । ಬುಭೂಷನ್ । ಪುರುಽತ್ರಾ । ವೃತ್ರಃ ।
ಅಶಯತ್ । ವಿಽಅಸ್ತಃ ॥ ೭ ॥

॥ ಸಾಯಣಭಾಷ್ಯಂ ॥

ಅಪಾದ್ವಜ್ರೇಣ ಛಿನ್ನತ್ವಾತ್ಪಾದರಹಿತಃ ಅಹಸ್ತೋ ಹಸ್ತರಹಿತೋ ವೃತ್ರ ಇಂದ್ರಮುದ್ದಿಶ್ಯಾಪೃತನ್ಯತ್ । ಪೃತನಾಂ ಯುದ್ಧಮೈಚ್ಛತ್ । ದ್ವೇಷಾಧಿಕ್ಯೇನ ಬಹುಧಾ ವಿದ್ಧೋಽಪಿ ಯುದ್ಧಂ ನ ಪರಿತ್ಯಕ್ತವಾನಿತ್ಯರ್ಥಃ । ಅಸ್ಯ ಹಸ್ತಪಾದಹೀನಸ್ಯ ವೃತ್ರಸ್ಯ ಸಾನೌ ಪರ್ವತಸಾನುಸದೃಶೇ ಪ್ರೌಢಸ್ಕಂಧೇಽಧ್ಯುಪರಿ ವಜ್ರಮಾ ಜಘಾನ । ಇಂದ್ರ ಅಭಿಮುಖ್ಯೇನ ಪ್ರಕ್ಷಿಪ್ತವಾನ್ । ಅಶಕ್ತಸ್ಯಾಪಿ ಯುದ್ಧೇಚ್ಛಾಯಾಂ ದೃಷ್ಟಾಂತಃ । ವಧ್ರಿಶ್ಛಿನ್ನಮುಷ್ಕಃ ಪುರುಷೋ ವೃಷ್ಣೋ ರೇತಃಸೇಚನಸಮರ್ಥಸ್ಯ ಪುರುಷಾಂತರಸ್ಯ ಪ್ರತಿಮಾನಂ ಸಾದೃಶ್ಯಂ ಬುಭೂಷನ್ ಪ್ರಾಪ್ತುಮಿಚ್ಛನ್ ಯಥಾ ನ ಶಕ್ನೋತಿ ತದ್ವದಯಮಿತಿ ಶೇಷಃ । ಸ ವೃತ್ರಃ ಪುರತ್ರಾ ಬಹುಷ್ವವಯವೇಷು ವ್ಯಸ್ತೋ ವಿವಿಧಂ ಕ್ಷಿಪ್ತಸ್ತಾಡಿತಃ ಸನ್ ಅಶಯತ್ । ಭೂಮೌ ಪತಿತವಾನ್ ॥ ಅಪಾತ್ । ಬಹುವ್ರೀಹೌ ಪಾದಶಬ್ದಸ್ಯಾಂತ್ಯಲೋಪಶ್ಛಾಂದಸಃ । ಅಹಸ್ತಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಅಪೃತನ್ಯತ್ । ಸುಪ ಆತ್ಮನಃ ಕ್ಯಚ್ । ಕವ್ಯಧ್ವರಪೃತನಸ್ಯೇತ್ಯಂತ್ಯಲೋಪಃ । ಬುಭೂಷನ್ । ಸನಿ ಗ್ರಹಗುಹೋಶ್ಚ । ಪಾ. ೭-೨-೧೨ । ಇತೀಟ್ ಪ್ರತಿಷೇಧಃ । ಪುರುತ್ರಾ । ದೇವಮನುಷ್ಯಪುರುಷಪುರುಮರ್ತ್ಯೇಭ್ಯೋ ದ್ವಿತೀಯಾಸಪ್ತಮ್ಯೋರ್ಬಹುಲಂ । ಪಾ. ೫-೪-೫೬ । ಇತಿ ಸಪ್ತಮ್ಯರ್ಥೇ ತ್ರಾಪ್ರತ್ಯಯಃ । ಅಶಯತ್ । ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ಶಪೋ ಲುಗಭಾವಃ । ವ್ಯಸ್ತಃ । ಅಸು ಕ್ಷೇಪಣ ಇತ್ಯಸ್ಮಾತ್ಕರ್ಮಣಿ ಕ್ತಃ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸಂಹಿತಾಯಾಮುದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ ।

॥ ಪ್ರತಿಪದಾರ್ಥ ॥

**ಅಪಾತ್**– (ವಜ್ರಾಯುಧದಿಂದ ಕತ್ತರಿಸೋಣದರಿಂದ) ಕಾಲಿಲ್ಲದೆಯೂ । **ಅಹಸ್ತಃ**—ಕೈಯಿಲ್ಲದೆಯೂ ಇರುವ ವೃತ್ರನು । **ಇಂದ್ರಂ**—ಇಂದ್ರನನ್ನು (ಎದುರಿಸಿ ಅವನ ಮೇಲೆ) । **ಅಪೃತನ್ಯತ್**—ಯುದ್ಧಮಾಡಲಿಚ್ಛಿಸಿದನು । **ಅಸ್ಯ**—(ಕೈಕಾಲುಗಳಿಲ್ಲದ) ಇಂತಹ ವೃತ್ರನ । **ಸಾನೌ ಅಧಿ**—ಪರ್ವತದ ಶಿಖರದಂತಿರುವ ಕತ್ತಿನ

ಮೇಲೆ। **ವಜ್ರಂ**—ವಜ್ರಾಯುಧವನ್ನು । ಆ **ಜಘಾನ**—ಬೀಸಿ ಹೊಡೆದನು । **ವಧ್ರಿಃ**—ವೀರ್ಯವಿಲ್ಲದ ಪುರುಷನು । **ವೃಷ್ಣಃ**—ವೀರ್ಯಸೇಚನಸಾಮರ್ಥ್ಯವಿರುವವನ । **ಪ್ರತಿಮಾನಂ**—ಸಾದೃಶ್ಯವನ್ನು । **ಬುಭೂರ್ಷ**—ಹೊಂದ ಲಿಚ್ಛಿಸಿ (ಆ ಯೋಗ್ಯತೆ ಮಾತ್ರವಿಲ್ಲದಿರುವಂತೆ) । **ವೃತ್ರಃ**—ವೃತ್ರನೂ ಕೂಡ । **ಪುರುತ್ರಾ**—ಅನೇಕ ಅವಯವಗಳಲ್ಲಿ । **ವ್ಯಸ್ತಃ**—ಕತ್ತರಿಸುವಂತೆ ಹೊಡೆಯಲ್ಪಟ್ಟು । **ಅಶಯತ್**—(ಭೂಮಿಯ ಮೇಲೆ) ಬಿದ್ದು ಮಲಗಿದನು.

॥ ಭಾವಾರ್ಥ ॥

ವಜ್ರಾಯುಧದಿಂದ ಅವನ ಕೈಕಾಲುಗಳನ್ನು ಕತ್ತರಿಸಿದ ಮೇಲೂ ಸಹ ವೃತ್ರನು ಇಂದ್ರನನ್ನೆದುರಿಸಿ ಅವನ ಮೇಲೆ ಯುದ್ಧಮಾಡಲಿಚ್ಛಿಸಿದನು. ಕೈಕಾಲುಗಳಿಲ್ಲದ ಇಂತಹ ವೃತ್ರನ ಉನ್ನತವಾದ ಮತ್ತು ಪರ್ವತ ಶಿಖರದಂತಿರುವ ಕತ್ತಿನ ಮೇಲೆ ಇಂದ್ರನು ವಜ್ರಾಯುಧವನ್ನು ಬೀಸಿ ಹೊಡೆದನು. ವೀರ್ಯವಿಲ್ಲದ ಪುರುಷನು ವೀರ್ಯಸೇಚನಸಾಮರ್ಥ್ಯ ವಿರುವವನಂತೆ ವ್ಯವಹರಿಸಲು ಆಸೆಪಟ್ಟು ಆ ಯೋಗ್ಯತೆ ಮಾತ್ರ ಇಲ್ಲದಿರುವಂತೆ, ವೃತ್ರನೂ ಕೂಡ ಹಾಗೆಯೇ ಆಸೆಪಟ್ಟು ಇಂದ್ರನನ್ನೆದುರಿಸಲು ಶಕ್ತಿಯಿಲ್ಲದೆ, ಅನೇಕ ಅವಯವಗಳನ್ನು ಸೀಳಿಸಿಕೊಂಡು ಭೂಮಿಯ ಮೇಲೆ ಬಿದ್ದು ಮಲಗಿದನು.

## English Translation.

Footless and armless he (Vritra) still defied Indra who struck him with the thunderbolt upon his mountain-like shoulder; desirous of encountering Indra like one emasculated who pretends to virility, Vritra mutilated of many organs, fell down and remained motionless.

॥ ವಿಶೇಷವಿಷಯಗಳು ॥

**ಅಪಾತ್ ಅಹಸ್ತಃ ಅಪೃತನ್ಯದಿಂದ್ರಂ**—ಯುದ್ಧದಲ್ಲಿ ಕೈಕಾಲುಗಳು ಕತ್ತರಿಸಲ್ಪಟ್ಟಿದ್ದರೂ ವೃತ್ರನು ಅದೊಂದನ್ನೂ ಲಕ್ಷ್ಯಮಾಡದೆ ಇಂದ್ರನ ಮೇಲೆ ನುಗ್ಗಿಬಂದನು ಎಂದಭಿಪ್ರಾಯವು.

**ಸಾನೌ**—ಪರ್ವತದ ತಪ್ಪಲಿನಂತೆ ಬಹುಗಾತ್ರವೂ ವಿಸ್ತಾರವೂ ಆದ ಆ ವೃತ್ರನ ಭುಜದ ಮೇಲೆ.

**ವೃಷ್ಣೋ ವಧ್ರಿಃ ಪ್ರತಿಮಾನಂ ಬುಭೂಷನ್**—ಅಶಕ್ತನಾದ ಪುರುಷನು ವೀರನೊಡನೆ ಯುದ್ಧಮಾಡಿ ಗೆಲ್ಲುತ್ತೇನೆಂದು ಬಯಸಿದಂತೆ ಎಂದಭಿಪ್ರಾಯವು. **ವೃಷ್ಣಃ** ಎಂದರೆ ವೀರ್ಯಸೇಚನಸಮರ್ಥನಾದ ಎಂದರೆ ವೀರ್ಯ ಶೌರ್ಯೋಪೇತನಾದ ಪರಾಕ್ರಮಿಯು. **ವಧ್ರಿಃ** ಎಂದರೆ ಶಕ್ತಿಹೀನನಾದ ಪುರುಷನು, ನಪುಂಸಕನು, ಹೇಡಿಯು.

**ಪುರುತ್ರಾ—ಬಹ್ವವಯವೇಷು** । ಶರೀರದ ಅನೇಕ ಅವಯವಗಳಲ್ಲಿ.

**ವ್ಯಸ್ತಃ—ತಾಡಿತಃ** । ಘಾಯಗೊಳಿಸಲ್ಪಟ್ಟವನಾಗಿ, ಅಂಗಗಳೆಲ್ಲಾ ಛಿದ್ರಛಿದ್ರವಾಗಲಾಗಿ.

**ಅಶಯತ್**—ಮಲಗಿದನು ಎಂದರೆ ಭೂಮಿಯಲ್ಲಿ ಬಿದ್ದನು.

॥ ವ್ಯಾಕರಣಪ್ರಕ್ರಿಯಾ ॥

**ಅಪಾತ್**—ನ ವಿದ್ಯೇತೇ ಪಾದೌ ಯಸ್ಯ ಸಃ ಅಪಾತ್. ಬಹುವ್ರೀಹಿಯಲ್ಲಿ ಪಾದ ಶಬ್ದದ ಅಂತ್ಯಲೋಪವು ಛಾಂದಸವಾಗಿ ಬರುತ್ತದೆ.

**ಅಹಸ್ತಃ**—ನ ವಿದ್ಯೇತೇ ಹಸ್ತೌ ಯಸ್ಯ ಸಃ ಅಹಸ್ತಃ. ನಞ್‌ಪೂರ್ವಪದ ಬಹುವ್ರೀಹಿಸಮಾಸ **'ನಞ್‌ಸುಭ್ಯಾಂ'** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರವು ಬರುತ್ತದೆ.

**ಅಪೃತನ್ಯತ್**—ಪೃತನಾಂ (ಯುದ್ಧಂ) ಆತ್ಮನಃ ಇಚ್ಛತಿ ಎಂಬರ್ಥದಲ್ಲಿ ಪೃತನಾ ಶಬ್ದವಮೇಲೆ **'ಸುಪ ಆತ್ಮನಃ ಕ್ಯಚ್'** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. ಪೃತನಾ+ಯ ಎಂದಿರುವಾಗ **'ಕವ್ಯಧ್ವರಪೃತನ'** (ಪಾ. ಸೂ. ೭-೪-೩೯) ಎಂಬುದರಿಂದ ಛಂದಸ್ಸಿನಲ್ಲಿ ಪೃತನಾ ಶಬ್ದದ ಅಂತ್ಯಕ್ಕೆ ಲೋಪ. **ಸನಾದ್ಯಂತಾ ಧಾತವಃ** ಎಂಬುದರಿಂದ ಪೃತನ್ಯ ಎಂಬ ಕ್ಯಜಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಲಙ್ ಪ್ರಥಮಪುರುಷ ಏಕವಚನದಲ್ಲಿ ಅಪೃತನ್ಯತ್ ಎಂದು ರೂಪವಾಗುತ್ತದೆ.

**ಬುಭೂಷನ್**—ಭವಿತುಂ ಇಚ್ಛನ್ ಬುಭೂಷನ್. ಇಚ್ಛಾರ್ಥದಲ್ಲಿ ಸನ್. **ಸನ್ಯಙೋಃ** ಎಂಬುದರಿಂದ ಸನಂತದ ಏಕಾಚಿಗೆ ದ್ವಿತ್ವ. ಅಭ್ಯಾಸಕ್ಕೆ **ಹ್ರಸ್ವಃ** ಎಂಬುದರಿಂದ ಹ್ರಸ್ವ. **ಅಭ್ಯಾಸೇ ಚರ್ಚ** ಎಂಬುದರಿಂದ ಜಸ್ತ್ವ. **'ಸನಿಗ್ರಹಗುಹೋಶ್ಚ'** (ಪಾ. ಸೂ. ೭-೨-೧೨) ಎಂಬುದರಿಂದ ಸನ್ನಿಗೆ ಇಣ್ನಿಷೇಧ. ಬುಭೂಷ ಎಂಬುದು **ಸನಾದ್ಯಂತಾಧಾತವಃ** ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಆಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಪ್ರಥಮಾ ಏಕವಚನದಲ್ಲಿ ಬುಭೂಷನ್ ಎಂದು ರೂಪವಾಗುತ್ತದೆ.

**ಪುರುತ್ರಾ—ದೇವಮನುಷ್ಯಪುರುಷಪುರುಮರ್ತ್ಯೇಭ್ಯೋ ದ್ವಿತೀಯಾಸಪ್ತಮ್ಯೋರ್ಬಹುಲಂ** (ಪಾ. ಸೂ. ೫-೪-೫೬) ಎಂಬುದರಿಂದ ಪುರುಶಬ್ದಕ್ಕೆ ಸಪ್ತಮ್ಯರ್ಥದಲ್ಲಿ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಶಯತ್**—ಶೀಙ್ ಸ್ವಪ್ನೇ ಧಾತು. ಅದಾದಿ. **'ವ್ಯತ್ಯಯೋ ಬಹುಲಂ'** ಎಂಬುದರಿಂದ ಲಙನಲ್ಲಿ ಪರಸ್ಮೈಪದದ ತಿಪ್ ಪ್ರತ್ಯಯ ಬರುತ್ತದೆ. **'ಇತಶ್ಚ'** ಸೂತ್ರದಿಂದ ತಿಪ್ಪಿನ ಇಕಾರಕ್ಕೆ ಲೋಪ. **'ಬಹುಲಂ ಛಂದಸಿ'** ಎಂಬುದರಿಂದ ಶಪ್ಪಿಗೆ ಲುಕ್ ಬರುವುದಿಲ್ಲ. ಧಾತುವಿಗೆ ಗುಣ ಅಯಾದೇಶ. ಅಂಗಕ್ಕೆ ಲಙನಿಮಿತ್ತವಾಗಿ ಅಡಾಗಮ. ಅಶಯತ್ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವ್ಯಸ್ತಃ**—ಅಸು ಕ್ಷೇಪಣೇ ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. **'ಯಸ್ಯ ವಿಭಾಷಾ'** ಸೂತ್ರದಿಂದ ಅದಕ್ಕೆ ಇಣ್ನಿಷೇಧ. ವಿ+ಅಸ್ತಃ ಎಂದಿರುವಾಗ ಯಣಾದೇಶ. ವ್ಯಸ್ತಃ ಎಂದು ರೂಪವಾಗುತ್ತದೆ. **'ಗತಿರನಂತರಃ'** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುವುದರಿಂದ ಉದಾತ್ತವಾಗುತ್ತದೆ. ಸಂಹಿತಾದಲ್ಲಿ ಯಣಾದೇಶ ಬಂದಾಗ **'ಉದಾತ್ತಸ್ವರಿತಯೋಃ ಯಣಃ'** (ಪಾ. ಸೂ. ೮-೨-೪) ಎಂಬುದರಿಂದ ಪರದ ಅನುದಾತ್ತಕ್ಕೆ ಸ್ವರಿತಸ್ವರವು ಬರುತ್ತದೆ. ॥ ೭ ॥

॥ ಸಂಹಿತಾಪಾಠಃ ॥

ನದಂ ನ ಭಿನ್ನಮಮುಯಾ ಶಯಾನಂ ಮನೋ ರುಹಾಣಾ ಅತಿ ಯನ್ತ್ಯಾಪಃ ।
ಯಾಶ್ಚಿದ್ವೃತ್ರೋ ಮಹಿನಾ ಪರ್ಯತಿಷ್ಠತ್ತಾಸಾಮಹಿಃ ಪತ್ಸುತಃಶೀರ್ಬಭೂವ ॥ ೮ ॥

॥ ಪದಪಾಠಃ ॥

ನದಂ । ನ । ಭಿನ್ನಂ । ಅಮುಯಾ । ಶಯಾನಂ । ಮನಃ । ರುಹಾಣಾಃ । ಅತಿ । ಯನ್ತಿ । ಆಪಃ ।
ಯಾಃ । ಚಿತ್ । ವೃತ್ರಃ । ಮಹಿನಾ । ಪರಿಽಅತಿಷ್ಠತ್ । ತಾಸಾಂ । ಅಹಿಃ । ಪತ್ಸುತಃಽಶೀಃ । ಬಭೂವ ॥ ೮ ॥

॥ ಸಾಯಣಭಾಷ್ಯಂ ॥

ಅಮುಯಾಮುಷ್ಯಾಂ ಪೃಥಿವ್ಯಾಂ ಶಯಾನಂ ಪತಿತಂ ಮೃತಂ ವೃತ್ರಮಾಪೋ ಜಲಾನ್ಯತಿ ಯಂತಿ । ಅತಿಕ್ರಮ್ಯ ಗಚ್ಛಂತಿ । ತತ್ರ ದೃಷ್ಟಾಂತಃ । ಭಿನ್ನಂ ಬಹುಧಾಭಿನ್ನಕೂಲಂ ನದಂ ನ ಸಿಂಧುಮಿವ। ಯಥಾ ವೃಷ್ಟಿಕಾಲೇ ಪ್ರಭೂತಾ ಆಪೋ ನದ್ಯಾಃ ಕೂಲಂ ಭಿತ್ವಾತಿಕ್ರಮ್ಯ ಗಚ್ಛಂತಿ ತದ್ವತ್ । ಕೀದೃಶಃ ಆಪಃ । ಮನೋ ರುಹಾಣಾಃ । ನೃಣಾಂ ಚಿತ್ತಮಾರೋಹಂತ್ಯಃ । ಪುರಾ ವೃತ್ರೇ ಜೀವತಿ ಸತಿ ತೇನ ನಿರುದ್ಧಾ ಮೇಘಸ್ಥಿತಾ ಆಪೋ ಭೂಮೌ ವೃಷ್ಟಾ ನ ಭವಂತಿ । ತದಾನೀಂ ನೃಣಾಂ ಮನಃ ಖಿದ್ಯತೇ । ಮೃತೇ ತು ವೃತ್ರೇ ನಿರೋಧರಹಿತಾ ಆಪೋ ವೃತ್ರಶರೀರಮುಲ್ಲಂಘ್ಯ ಪ್ರವಹಂತಿ । ತದಾ ವೃಷ್ಟಿಲಾಭೇನ ತು ಮನುಷ್ಯಾಸ್ತುಷ್ಯಂತೀತ್ಯರ್ಥಃ । ತದೇತದುತ್ತರಾರ್ಧೇನ ಸ್ಪಷ್ಟೀಕ್ರಿಯತೇ । ವೃತ್ರೋ ಜೀವನದಶಾಯಾಂ ಮಹಿನಾ ಸ್ವಕೀಯೇನ ಮಹಿಮ್ನಾ ಯಾಶ್ಚಿದ್ಯಾ ಏವ ಮೇಘಗತಾ ಅಪಃ ಪರ್ಯತಿಷ್ಠತ್ ಪರಿವೃತ್ಯ ಸ್ಥಿತವಾನ್ ಅಹಿರ್ವೃತ್ರೋ ಮೇಘಸ್ತಾಸಾಮಪಾಂ ಪತ್ಸುತಃಶೀಃ ಪಾದಸ್ಯಾಧಃಶಯಾನೋ

ಬಭೂವ । ಯದ್ಯಪ್ಯಸಾಂ ಪಾದೋ ನಾಸ್ತಿ ತಥಾಪ್ಯದ್ಭಿರ್ವೃತ್ರಸ್ಯಾಭಿಲಂಘಿತತ್ವಾತ್ಪಾದಸ್ಯಾಧಃಶಯನ-ಮುಪಪದ್ಯತೇ ॥ ಭಿನ್ನಂ । ರದಾಭ್ಯಾಂ ನಿಷ್ಠಾತೋ ನಃ । ಪಾ. ೮-೨-೪೨ । ಇತಿ ನತ್ವಂ । ಅಮುಯಾ । ಸುಪಾಂ ಸುಲುಗಿತಿ ಸಪ್ತಮ್ಯಾ ಯಾಜಾದೇಶಃ । ಶಯಾನಂ । ಶೀಙಃ ಸಾರ್ವಧಾತುಕೇ ಗುಣಃ । ಪಾ. ೭-೪-೨೧ । ಧಾತೋರ್ಙಿತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ರುಹಾಣಾಃ । ರುಹ ಬೀಜ-ಜನ್ಮನಿ ಪ್ರಾದುರ್ಭಾವೇ । ವ್ಯತ್ಯಯೇನ ಶಾನಚ್ । ಕರ್ತರಿ ಶಪಿ ಪ್ರಾಪ್ತೇ ವ್ಯತ್ಯಯೇನ ಶಃ । ಅನಿತ್ಯ-ಮಾಗಮಶಾಸನಮಿತಿ ವಚನಾನ್ಮುಗಭಾವಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರೇ ಪ್ರಾಪ್ತೇ ವ್ಯತ್ಯಯೇನ ಧಾತುಸ್ವರಃ । ಮಹಿನಾ । ಮಹ ಪೂಜಾಯಾಂ । ಇನ್ಸರ್ವಧಾತುಭ್ಯಃ । ಉ. ೪-೧೧೭ । ಇತೀನ್ಪ್ರತ್ಯಯಃ । ವ್ಯತ್ಯಯೇನ ವಿಭಕ್ತೇರುದಾತ್ತತ್ವಂ । ಯದ್ವಾ । ಮಹಿನಾ ಮಹಿಮ್ನಾ । ಮಹಚ್ಛಬ್ದಸ್ಯ ಪೃಥ್ವಾದಿಷು ಪಾಠಾತ್ತಸ್ಯ ಭಾವ ಇತ್ಯೇತಸ್ಮಿನ್ನರ್ಥೇ ಪೃಥ್ವಾದಿಭ್ಯ ಇಮನಿಜ್ವಾ । ಪಾ. ೫-೧-೧೨೨ । ಇತೀಮನಿಚ್‌ಪ್ರತ್ಯಯಃ । ಟೇರಿತಿ ಟಿಲೋಪಃ । ಚಿತ ಇತ್ಯಂತೋದಾತ್ತತ್ವಂ । ತೃತೀ-ಯೈಕವಚನೇಽಲ್ಲೋಪೇ ಸತ್ಯುದಾತ್ತನಿವೃತ್ತಿಸ್ವರೇಣ ತಸ್ಯೋದಾತ್ತತ್ವಂ । ಮಕಾರಲೋಪಶ್ಛಾಂದಸಃ । ಪತ್ಸುತಃಶೀಃ । ಪಾದಸ್ಯಾಧಃ ಶೇತ ಇತಿ ಪತ್ಸುತಃಶೀಃ । ಕ್ವಿಪ್ಚೇತಿ ಕ್ವಿಪ್ । ತಸಿ ಪದ್ದನ್ನಿತ್ಯಾದಿನಾ ಪಾದ-ಶಬ್ದಸ್ಯ ಪದಾದೇಶಃ । ಶಸ್ಪ್ರಭೃತಿಷ್ವಿತಿ ಪ್ರಭೃತಿಶಬ್ದಃ ಪ್ರಕಾರವಚನ ಇತಿ ಶಲಾ ದೋಷಣೇತ್ಯತ್ರಾಪಿ ದೋಷನ್ನಾದೇಶೋ ಭವತಿ । ಕಾ. ೬-೧-೬೩ । ಇತ್ಯುಕ್ತತ್ವಾತ್ । ಮಧ್ಯೇ ಸು ಇತಿ ಶಬ್ದೋಪಜನ-ಶ್ಛಾಂದಸಃ । ಯದ್ವಾ । ಪಾದಶಬ್ದಸ್ಯ ಸಪ್ತಮೀಬಹುವಚನೇ ಪದಾದೇಶೇ ಕೃತೇ ಇತರಾಭ್ಯೋಽಪಿ ದೃಶ್ಯಂತೇ । ಪಾ. ೫-೩-೧೪ । ಇತಿ ಸಪ್ತಮ್ಯರ್ಥೇ ತಸಿಲ್ । ಲುಗಭಾವಶ್ಛಾಂದಸಃ ॥

॥ ಪ್ರತಿಪದಾರ್ಥ ॥

**ಅಮುಯಾ**—ಈ ಭೂಮಿಯ ಮೇಲೆ । **ಶಯಾನಂ**—ಸತ್ತುಮಲಗಿದ ವೃತ್ರನನ್ನು । **ಮನೋರು-ಹಾಣಾಃ**—ಮನಸ್ಸಿಗೆ ಆಕರ್ಷಕಗಳಾದ । **ಆಪಃ**—ನೀರುಗಳು । **ಭಿನ್ನಂ**—(ನಾನಾಕಡೆ) ಒಡೆದುಹೋದ ದಡ ವುಳ್ಳ । **ನದಂ ನ**—ನದಿಯಂತೆ । **ಅತಿ ಯಂತಿ**—ಮೇಲೆ ಹಾದುಹೋಗುತ್ತವೆ । **ವೃತ್ರಃ**—(ಬದುಕಿರುವಾಗ) ವೃತ್ರನು । **ಮಹಿನಾ**—(ತನ್ನ) ಪರಾಕ್ರಮದಿಂದ । **ಯಾಶ್ಚಿತ್**—ಯಾವ ಮೋಡಗಳ ನೀರುಗಳನ್ನು । **ಪರ್ಯತಿಷ್ಠತ್**—ಸುತ್ತಲೂ ತಡೆದು ನಿಂತಿದ್ದನೋ । **ಅಹಿಃ**—ಮೇಘರೂಪದ ಆ ವೃತ್ರನು । **ತಾಸಾಂ ಅಪಾಂ**—ಅದೇ ನೀರುಗಳ । **ಪತ್ಸುತಃಶೀಃ**—ಕಾಲುಗಳ ಅಡಿಯಲ್ಲಿ ಮಲಗಿಕೊಂಡವನಾಗಿ । **ಬಭೂವ**—ಆದನು.

॥ ಭಾವಾರ್ಥ ॥

ವೃತ್ರನು ಭೂಮಿಯ ಮೇಲೆ ಸತ್ತು ಮಲಗಿದ್ದಾನೆ. ಮಾನವರ ಮನಸ್ಸನ್ನು ಆಕರ್ಷಿಸತಕ್ಕ ನೀರುಗಳು ನಾನಾಕಡೆ ಒಡೆದುಹೋದ ದಡವುಳ್ಳ ನದಿಯಂತೆ ಸ್ವೇಚ್ಛೆಯಾಗಿಯೂ, ಪ್ರಭೂತವಾಗಿಯೂ ಅವನ ಮೇಲೆ ಹಾದು ಹೋಗುತ್ತಿವೆ. ವೃತ್ರನು ಬದುಕಿರುವಾಗ ತನ್ನ ಶಕ್ತಿಯಿಂದ ಮೋಡಗಳನ್ನು ತಡೆದು ನೀರನ್ನು ಕೆಳಕ್ಕೆ ಭೂಮಿಯ ಮೇಲೆ ಬೀಳದಿರುವಂತೆ ಮಾಡಿದ್ದನು. ಈಗ ಅದೇ ನೀರಿನ ಅಡಿಯಲ್ಲಿ ಸತ್ತುಬಿದ್ದಿದ್ದಾನೆ.

## English Translation.

The waters that delight the minds of men flow over him as a river bursts forth its broken banks; Ahi (Vritra) has been prostrated beneath the feet of the waters which he had obstructed by his strength.

॥ ವಿಶೇಷವಿಷಯಗಳು ॥

**ಅಮುಯಾ ಶಯಾನಂ ಅತಿ ಯಂತಿ**—ಈ ಭೂಮಿಯ ಮೇಲೆ ಸತ್ತು ಬಿದ್ದಿರುವ ವೃತ್ರನನ್ನತಿಕ್ರಮಿಸಿ ಮುಂದಕ್ಕೆ ಹರಿದುಹೋಗುತ್ತಿವೆ.

**ಮನೋ ರುಹಾಣಾಃ**—ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತಾ; ವೃತ್ರನು ಮೇಘಗಳನ್ನು ತಡೆದಿದ್ದರಿಂದ ಮಳೆಯಿಲ್ಲದೆ ಜನರು ಖಿನ್ನಮನಸ್ಕರಾಗಿದ್ದರು. ವೃತ್ರವಧಾನಂತರ ಅವನು ತಡೆಗಟ್ಟಿದ್ದ ನೀರು ಹರಿಯತೊಡಗಿ ಸತ್ತುಬಿದ್ದಿರುವ ವೃತ್ರನನ್ನು ಲಕ್ಷ್ಯಮಾಡದೆ ದಡಗಳನ್ನು ಕೆಡವಿ ಕೊಚ್ಚಿ ಹರಿಯುತ್ತಿರುವ ನೀರು ಮನುಷ್ಯರ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿರುವುದೆಂದು **ಮನೋ ರುಹಾಣಾಃ** ಎಂಬ ಶಬ್ದಗಳಿಗೆ ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು.

**ಮಹಿನಾ ಪರ್ಯತಿಷ್ಠತ್**—ವೃತ್ರನು ತನ್ನ ಅತಿಶಯವಾದ ಶಕ್ತಿಯಿಂದ ತಡೆಗಟ್ಟಿದ್ದ.

**ಪತ್ಸುತಃಶೀಃ—ಪಾದಸ್ಯಾಧಃ ಶೇತೇ ।** ನೀರಿನ ಪಾದಪ್ರದೇಶದಲ್ಲಿ ಮಲಗಿರುವನು ಅಥವಾ ಬಿದ್ದಿರುವನು. ಇಲ್ಲಿ ನೀರಿಗೆ ಪಾದಗಳು ಇರುವುದೆಂದರೆ, ನೀರು ಇವನ ಮೇಲೆ ಹರಿದು ಹೋಗುತ್ತಿರುವುದರಿಂದ ಇವನು ನೀರಿನ ಕೆಳಗೆ ಬಿದ್ದಿರುವನು ಎಂದು ಹೇಳಬೇಕಾದ ಅಭಿಪ್ರಾಯವನ್ನು ನೀರಿನ ಪಾದಪ್ರದೇಶದಲ್ಲಿ (ಕೆಳಭಾಗದಲ್ಲಿ) ಎಂದು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಭಿನ್ನಮ್**—ಭಿದಿರ್ ವಿದಾರಣೇ ಧಾತು. ಕ್ತ ಪ್ರತ್ಯಯ. ಭಿದ್+ತ ಎಂದಿರುವಾಗ **'ರದಾಭ್ಯಾಂ-ನಿಷ್ಠಾತೋ ನಃ ಪೂರ್ವಸ್ಯ ಚ ದಃ'** (ಪಾ. ಸೂ. ೮-೨-೪೨) ಎಂಬುದರಿಂದ ದಕಾರದ ಪರದಲ್ಲಿರುವುದರಿಂದ ನಿಷ್ಠಾತಕಾರಕ್ಕೆ ನತ್ವ ಭಿನ್ನ ಎಂದು ರೂಪವಾಗುತ್ತದೆ.

**ಅಮುಯಾ**—ಅದಸ್ ಶಬ್ದಕ್ಕೆ ಸಪ್ತಮೀ ಏಕವಚನ ಪರದಲ್ಲಿರುವಾಗ **'ಸುಪಾಂ ಸುಲುಕ್'** ಸೂತ್ರ-ದಿಂದ ವಿಭಕ್ತಿಗೆ ಯಾಜಾದೇಶ. **'ತ್ಯದಾದೀನಾಮಃ'** ಎಂಬುದರಿಂದ ಅತ್ವ. **'ಅತೋ ಗುಣೇ'** ಸೂತ್ರದಿಂದ ಪರರೂಪ. **'ಅದಸೋಽಸೇರ್ದಾದುದೋಮಃ'** ಎಂಬುದರಿಂದ ದಕಾರಕ್ಕೆ ಮತ್ವ, ದಕಾರದ ಪರದಲ್ಲಿರುವ ಅಕಾರಕ್ಕೆ ಉತ್ವ. ಅಮುಯಾ ಎಂದು ರೂಪವಾಗುತ್ತದೆ.

**ಶಯಾನಮ್**-ಶೀಙ್ ಸ್ವಪ್ನೇ ಧಾತು ಲಡರ್ಥದಲ್ಲಿ ಶಾನಚ್. ಅಪಿತ್ತಾದ ಙಿತ್ತಾದುದರಿಂದ ಗುಣನಿಷೇಧ ಬಂದರೆ **'ಶೀಙಃ ಸಾರ್ವಧಾತುಕೇ ಗುಣಃ'** (ಪಾ. ಸೂ. ೭-೪-೨೧) ಎಂಬುದರಿಂದ ಪುನಃ ಗುಣಬರುತ್ತದೆ.

**‘ ಏಚೋಽಯವಾಯಾವಃ ’** ಸೂತ್ರದಿಂದ ಅಯಾದೇಶ ಬಂದರೆ ಶಯಾನಶಬ್ದವಾಗುತ್ತದೆ. ಙಿತ್ತಾದ ಧಾತುವಿನ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **‘ ತಾಸ್ಯನುದಾತ್ತೇತ್ ’** ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ.

**ರುಹಾಣಾಃ—**ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ. ಧಾತು. ಪರಸ್ಮೈಪದಿಯಾದರೂ ವ್ಯತ್ಯಯದಿಂದ ಲಡರ್ಥದಲ್ಲಿ ಶಾನಚ್. ಶಾನಚ್ ಪರದಲ್ಲಿರುವಾಗ **‘ ಕರ್ತರಿ ಶಪ್ ’** ಎಂಬುದರಿಂದ ಶಪ್ ಪ್ರಾಪ್ತವಾದರೆ ವ್ಯತ್ಯಯದಿಂದ ಶ ವಿಕರಣ ಬರುತ್ತದೆ. ಆದುದರಿಂದ ಲಘೂಪಧಗುಣಬರುವುದಿಲ್ಲ. **‘ ಆನೇಮುಕ್ ’** ಎಂಬುದರಿಂದ ಬರುವ ಮುಕ್ ಆಗಮವಾದುದರಿಂದ **‘ ಆಗಮಶಾಸ್ತ್ರಮನಿತ್ಯಂ ’** ಎಂಬುದರಿಂದ ಇಲ್ಲಿ ಬರುವುದಿಲ್ಲ. **‘ ಅಟ್‌ಕುಪ್ವಾಙ್ ’** ಸೂತ್ರದಿಂದ ನಕಾರಕ್ಕೆ ಣತ್ವ. ರುಹಾಣ ಎಂಬ ಶಬ್ದವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವಿರುವುದರಿಂದ ಅನುದಾತ್ತವಾಗುತ್ತದೆ ಆಗ ವಿಕರಣಸ್ವರವು ಪ್ರಾಪ್ತವಾದರೆ ವ್ಯತ್ಯಯದಿಂದ ಧಾತುಸ್ವರವು ಬರುತ್ತದೆ.

**ಮಹಿನಾ**—ಮಹ ಪೂಜಾಯಾಂ ಧಾತು. **ಇನ್‌ಸರ್ವಧಾತುಭ್ಯಃ** ಎಂಬುದರಿಂದ ಇನ್. ಮಹಿನ್ ಶಬ್ದವಾಗುತ್ತದೆ. ತೃತೀಯಾ ಏಕವಚನರೂಪ. ವ್ಯತ್ಯಯದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಥವಾ ಮಹಿನಾ ಮಹಿಮ್ನಾ. ಮಹತ್ ಶಬ್ದವು ಪೃಥ್ವಾದಿಯಲ್ಲಿ ಪಠಿತವಾದುದರಿಂದ, **ತಸ್ಯ ಭಾವಃ** ಎಂಬರ್ಥದಲ್ಲಿ **‘ ಪೃಥ್ವಾದಿಭ್ಯ ಇಮನಿಜ್ವಾ’** (ಪಾ. ಸೂ. ೫-೧-೧೨೨) ಎಂಬ ಸೂತ್ರದಿಂದ ಇಮನಿಚ್ ಪ್ರತ್ಯಯ ಬರುತ್ತದೆ. ಇಮನಿಚ್ ಪರದಲ್ಲಿರುವಾಗ **ಟೇಃ** ಎಂಬುದರಿಂದ ಮಹಚ್ಛಬ್ದದ ಟಿಗೆ ಲೋಪ ಮಹಿಮನ್ ಎಂದಿರುವಾಗ ಛಾಂದಸವಾಗಿ ಮಕಾರ ಲೋಪ ಬರುತ್ತದೆ ಮಹಿ ಅನ್ ಶಬ್ದವಾಗುತ್ತದೆ. **ಚಿತಃ** ಎಂಬುದರಿಂದ ಚಿತ್‌ಪ್ರತ್ಯಯಾಂತವಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನದಲ್ಲಿ **ಅಲ್ಲೋಪೋಽನಃ** ಎಂಬುದರಿಂದ ಅನ್ನಿನ ಅಕಾರಕ್ಕೆ ಲೋಪ. **ಅನುದಾತ್ತಸ್ಯ ಯತ್ರೋದಾತ್ತಲೋಪಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪತ್ಸುತಃ ಶೀಃ**—ಪಾದಸ್ಯ ಅಧಃ ಶೇತೇ ಇತಿ ಪತ್ಸುತಃಶೀಃ. ಶೀಙ್ ಸ್ವಪ್ನೇ ಧಾತು. **ಕ್ವಿಪ್ ಚ** ಸೂತ್ರದಿಂದ ಕ್ವಿಪ್. ಕ್ವಿಪ್ಪಿನಲ್ಲಿ ಸರ್ವಲೋಪ. ಪಾದ ಶಬ್ದಕ್ಕೆ ಶಸ್ ಪರದಲ್ಲಿರುವಾಗ **ಪದ್ದನ್ನೋಮಾಸ್** ಸೂತ್ರದಿಂದ ಪಾದಶಬ್ದಕ್ಕೆ ಪದಾದೇಶ ಬರುತ್ತದೆ. ಸೂತ್ರದಲ್ಲಿ ಶಸ್‌ಪ್ರಭೃತಿಷು ಎಂಬಲ್ಲಿ ಪ್ರಭೃತಿಶಬ್ದವು ಪ್ರಕಾರ (ಸಾದೃಶ್ಯ) ವಚನವೆಂದು ಶಲಾ ದೋಷಿಣೀ ಎಂದು ದೋಷನ್ನಾದೇಶವನ್ನು ಹೇಳುವುದರ ಮೂಲಕ ಭಾಷ್ಯಾದಿಗಳಲ್ಲಿ ವಿವರಿಸಿರುತ್ತಾರೆ (ಕಾ. ೬-೧-೬೩). ಆದುದರಿಂದ ಇಲ್ಲಿ ಶಸಾದಿಗಳಿಗೆ ಸದೃಶವಾದ ಶಸ್ ಪ್ರತ್ಯಯವು ಪರದಲ್ಲಿರುವುದರಿಂದ ಆದೇಶ ಬರುತ್ತದೆ. ಮಧ್ಯದಲ್ಲಿ ಸು ಎಂಬ ಆಗಮವು ಛಾಂದಸವಾಗಿ ಬರುತ್ತದೆ. ಅಥವಾ ಪಾದ ಶಬ್ದಕ್ಕೆ ಸಪ್ತಮೀ ಬಹುವಚನದಲ್ಲಿ ಪದಾದೇಶವನ್ನು ಮಾಡಿದರೆ ಪತ್ಸು ಎಂದಾಗುತ್ತದೆ. ಅದರ ಮೇಲೆ **‘ ಇತರಾಭ್ಯೋಽಪಿ ದೃಶ್ಯಂತೇ ’** (ಪಾ. ಸೂ. ೫-೩-೧೪) ಎಂಬುದರಿಂದ ಸಪ್ತಮ್ಯರ್ಥದಲ್ಲಿ ತಸಿಲ್ ಬರುತ್ತದೆ. ತಸಿಲ್ ಪರದಲ್ಲಿರುವಾಗ ವಿಭಕ್ತಿಗೆ (ಸಪ್ತಮಿಗೆ) ಛಾಂದಸವಾಗಿ ಲುಕ್ ಬರುವುದಿಲ್ಲವೆನ್ನಬೇಕು. ಪತ್ಸುತಃಶೀಃ ಎಂದು ರೂಪವಾಗುತ್ತದೆ. ॥ ೮ ॥

|| ಸಂಹಿತಾಪಾಠಃ ||

ನೀಚಾವಯಾ ಅಭವದ್ವೃತ್ರಪುತ್ರೇನ್ದ್ರೋ ಅಸ್ಯಾ ಅವ
ವಧರ್ಜಭಾರ ।
ಉತ್ತರಾ ಸೂರಧರಃ ಪುತ್ರ ಆಸೀದ್ದಾನುಃ ಶಯೇ ಸಹವತ್ಸಾ ನ
ಧೇನುಃ ॥ ೯ ॥

|| ಪದಪಾಠಃ ||

ನೀಚಾऽವಯಾಃ । ಅಭವತ್ । ವೃತ್ರಽಪುತ್ರಾ । ಇನ್ದ್ರಃ । ಅಸ್ಯಾಃ । ಅವ ।
ವಧಃ । ಜಭಾರ ।
ಉತ್ಽತರಾ । ಸೂಃ । ಅಧರಃ । ಪುತ್ರಃ । ಆಸೀತ್ । ದಾನುಃ । ಶಯೇ ।
ಸಹಽವತ್ಸಾ । ನ । ಧೇನುಃ ॥ ೯ ॥

|| ಸಾಯಣಭಾಷ್ಯಂ ||

ವೃತ್ರಪುತ್ರಾ ವೃತ್ರಃ ಪುತ್ರೋ ಯಸ್ಯಾ ಮಾತುಃ ಸೇಯಂ ಮಾತಾ ವೃತ್ರಪುತ್ರಾ ನೀಚಾವಯಾ ನ್ಯಗ್ಭಾವಂ ಪ್ರಾಪ್ತಾ ಹತಾಭವತ್ । ಪುತ್ರಂ ಪ್ರಹಾರಾದ್ರಕ್ಷಿತುಂ ಪುತ್ರದೇಹಸ್ಯೋಪರಿ ತಿರಶ್ಚೀ ಪತಿತವತೀತ್ಯರ್ಥಃ । ತದಾನೀಮಯಮಿಂದ್ರೋಽಸ್ಯಾ ಮಾತುರವಾಧೋಭಾಗೇ ವೃತ್ರಸ್ಯೋಪರಿ ವಧೋ ಹನನಸಾಧನಮಾಯುಧಂ ಜಭಾರ । ಪ್ರಹೃತವಾನ್ । ತದಾನೀಂ ಸೂರ್ಮಾತೋತ್ತರೋಪರಿಸ್ಥಿತಾಸೀತ್ । ಪುತ್ರಸ್ತ್ವಧೋಭಾಗಸ್ಥಿತ ಆಸೀತ್ । ಸಾ ಚ ದಾನುರ್ದಾನವೀ ವೃತ್ರಮಾತಾ ಶಯೇ । ಮೃತಾ ಶಯನಂ ಕೃತವತೀ । ತತ್ರ ದೃಷ್ಟಾಂತಃ । ಧೇನುರ್ಲೋಕಪ್ರಸಿದ್ಧಾ ಗೌಃ ಸಹವತ್ಸಾ ನ । ಯಥಾ ವತ್ಸಸಹಿತಾ ಶಯನಂ ಕರೋತಿ ತದ್ವತ್ ॥ ನೀಚಾವಯಾಃ । ವೇತಿ ಖಾದತೀತಿ ವಯೋ ಬಾಹುಃ । ಔಣಾದಿಕೋಽಸಿಪ್ರತ್ಯಯಃ । ನ್ಯಂಚೌ ವಯಸೌ ಯಸ್ಯಾಃ ಸಾ ನೀಚಾವಯಾಃ । ನ್ಯಚ್‌ಶಬ್ದಾದುತ್ತರಸ್ಯಾ ವಿಭಕ್ತೇಃ ಸುಪಾಂ ಸುಲುಕ್ ಭವಂತೀತಿ ತೃತೀಯೈಕವಚನಾದೇಶಃ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ ।

ಅಂಚೇಶ್ಛಂದಸ್ಯಸರ್ವನಾಮಸ್ಥಾನಂ । ಪಾ ೬-೧-೧೭೦ । ಇತಿ ತಸ್ಯೋದಾತ್ತತ್ವಂ । ಸಮಾಸೇ ಲುಗಭಾವಶ್ಛಾಂದಸಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಯದ್ವಾ । ನೀಚೌ ನಿಕೃಷ್ಟೌ ವಯಸೌ ಯಸ್ಯಾಃ ಸಾ । ಪೂರ್ವಪದಸ್ಯ ದೀರ್ಘಶ್ಛಾಂದಸಃ । ವಧಃ । ಹನ್ಯತೇಽನೇನೇತಿ ವಧಃ । ಅಸುನಿ ಹಂತೇರ್ವಧಾದೇಶಃ ।ನಿತ್ತ್ವಾದಾದ್ಯುದಾತ್ತತ್ವಂ । ಜಭಾರ । ಹೃಗ್ರಹೋರ್ಭ ಇತಿ ಭತ್ವಂ । ಸೂಃ । ಷೂಙ್ ಪ್ರಾಣಿಗರ್ಭವಿಮೋಚನೇ । ಸೂತೇ ಗರ್ಭಂ ವಿಮುಂಚತೀತಿ ಸೂರ್ಮಾತಾ । ಕ್ವಿಷ್ಚೇತಿ ಕ್ವಿಪ್ । ದಾನುಃ । ದೋ ಅವಖಂಡನೇ । ದಾಭಾಭ್ಯಾಂ ನುಃ । ಉ. ೩-೩೨ । ಶಯೇ । ಲಟಿ ಲೋಪಸ್ತ ಆತ್ಮನೇಪದೇಷು । ಪಾ. ೭-೧-೪೧ । ಇತಿ ತಲೋಪಃ । ಶೀಙಃ ಸಾರ್ವಧಾತುಕ ಇತಿ ಗುಣೇಽಯಾದೇಶಃ ॥

॥ ಪ್ರತಿಪದಾರ್ಥ ॥

**ವೃತ್ರಪುತ್ರಾ**—ವೃತ್ರನನ್ನು ಮಗನನ್ನಾಗಿ ಹಡೆದ ಅವನ ತಾಯಿಯು । **ನೀಚಾವಯಾಃ**—ಶಕ್ತಿ ಕುಗ್ಗಿಸಲ್ಪಟ್ಟವಳಾಗಿ । **ಅಭವತ್**—ಆದಳು (ಹತವಾಗಿ ಬಿದ್ದಳು ಆಗ) । **ಇಂದ್ರಃ**—ಇಂದ್ರನು । **ಅಸ್ಯಾಃ**—ಈ ತಾಯಿಯ । **ಅವ**—ಕೆಳಭಾಗದಲ್ಲಿ । **ವಧಃ**—ವಧಸಾಧನವಾದ ಆಯುಧವನ್ನು । **ಜಭಾರ**—ಹೊಡೆದನು । **ಸೂಃ**—ತಾಯಿಯು । **ಉತ್ತರಾ**—ಮೇಲುಭಾಗಕ್ಕಾದಳು । **ಪುತ್ರಃ**—ಮಗನಾದರೋ । **ಆಸೀತ್**—(ಕೆಳಭಾಗಕ್ಕೆ ಸಿಕ್ಕಿ ಬಿದ್ದವನಾಗಿ) ಆದನು । **ಧೇನುಃ**—ಹಸುವು । **ಸಹ ವತ್ಸಾ ನ**—ಕರುವಿನೊಡನೆ ಸೇರಿ ಮಲಗುವಂತೆ । **ದಾನುಃ**—ವೃತ್ರ ಮಾತೆಯಾದ ದಾನವಿಯು । **ಶಯೇ**—(ಸತ್ತುಬಿದ್ದು) ಮಲಗಿದಳು.

॥ ಭಾವಾರ್ಥ ॥

ವೃತ್ರಾಸುರನ ವಧಕಾಲದಲ್ಲಿ ಅವನನ್ನು ರಕ್ಷಿಸಲು ಅವನ ತಾಯಿಯು ವಜ್ರಾಯುಧದ ಏಟಿನಿಂದ ಮಗನನ್ನು ರಕ್ಷಿಸುವುದಕ್ಕೆ ಬಂದಳು. ಆಗ ಇಂದ್ರನು ಅವಳ ಶಕ್ತಿಯನ್ನು ಕುಗ್ಗಿಸಿ ಅವಳ ದೇಹದ ಕೆಳಭಾಗದಲ್ಲಿ ಬಲವಾಗಿ ಹೊಡೆದನು. ವಜ್ರಾಯುಧದಿಂದ ಅವಳನ್ನು ಹೊಡೆದ ಮೇಲೆ ತಾಯಿ ಮೇಲುಭಾಗಕ್ಕಾದಳು. ಮಗನು ಕೆಳಭಾಗಕ್ಕೆ ಸಿಕ್ಕಿ ಬಿದ್ದು ಮಲಗಿದನು. ಹಸುವು ಕರುವಿನೊಡನೆ ಸೇರಿ ಮಲಗುವಂತೆ ತಾಯಿಯಾದ ದಾನವಿಯು ಮಗನಾದ ವೃತ್ರನೊಡನೆ ಸೇರಿಕೊಂಡು ಸತ್ತುಬಿದ್ದು ಮಲಗಿದಳು.

## English Translation.

The mother of Vritra was bending over her son when Indra struck her lower part with his thunderbolt ; so the mother was above and the son underneath and the demoness (Vritra's mother) with her son slept (or lay dead) like a cow with its calf.

॥ ವಿಶೇಷವಿಷಯಗಳು ॥

**ನೀಚಾವಯಾಃ—ವೇತಿ ಖಾದತೀತಿ ವಯೋ ಬಾಹುಃ । ನ್ಯಂಚೌ ವಯಸೌ ಯಸ್ಯಾಃ ಸಾ ನೀಚಾವಯಾಃ । ಪ್ರಲಂಬಬಾಹುಃ । ಪುತ್ರಂ ಪ್ರಹಾರಾದ್ರಕ್ಷಿತುಂ ಪುತ್ರದೇಹಸ್ಯೋಪರಿ ತಿರಶ್ಚೀ ಪತಿತ-**

**ವತೀತ್ಯರ್ಥಃ** । ವೃತ್ರನ ಮಾತೆಯು ತನ್ನ ಉದ್ದವಾದ ಬಾಹುಗಳನ್ನು ನೀಡಿ ತನ್ನ ಮಗನ ಶರೀರದ ಮೇಲೆ ಅಡ್ಡಲಾಗಿ ನಿಂತು ಅವನನ್ನು ರಕ್ಷಿಸುವುದಕ್ಕೆ ಪ್ರಯತ್ನಿಸಿದಳು ಎಂದಭಿಪ್ರಾಯವು.

**ವೃತ್ರಪುತ್ರಾ**—ವೃತ್ರನೇ ಮಗನಾಗಿವುಳ್ಳ ಸ್ತ್ರೀಯು ಎಂದರೆ ವೃತ್ರನ ತಾಯಿಯು.

**ವಧರ್ಜಭಾರ—ಹನನಸಾಧನಮಾಯುಧಂ ಪ್ರಹೃತವಾನ್** । ಸಂಹರಿಸುವುದಕ್ಕಾಗಿ ಆಯುಧವನ್ನು ಪ್ರಯೋಗಿಸಿದನು.

**ಉತ್ತರಾ ಸೂಃ—ಷೂಙ್ ಪ್ರಾಣಿಗರ್ಭವಿಮೋಚನೇ** । ಸೂಃ ಎಂದರೆ ವೃತ್ರನನ್ನು ಹೆತ್ತ ತಾಯಿಯು. ಇವಳು ತನ್ನ ಶರೀರವನ್ನು ಅಡ್ಡಲಾಗಿ ವೃತ್ರನ ಮೇಲೆ ಒಡ್ಡಿ ನಿಂತಳು.

**ಅಧರಃ ಪುತ್ರ ಆಸೀತ್**—ಮಗನಾದ ವೃತ್ರನು ಕೆಳಗೆ ಇದ್ದನು. ಎಂದರೆ ಕೆಳಗೆ ಸತ್ತುಬಿದ್ದಿದ್ದನು ಎಂದಭಿಪ್ರಾಯವು.

**ದಾನುಃ**—ದನುವಿನ ಮಗಳು. ಕಶ್ಯಪಋಷಿಗೆ ದನು ಎಂಬ ಪತ್ನಿಯಲ್ಲಿ ಹುಟ್ಟಿದ ರಾಕ್ಷಸಜಾತಿಗೆ ಸೇರಿದ ಸಂತತಿಗೆ ದಾನವರೆಂದು ಹೆಸರು. ವೃತ್ರನ ತಾಯಿಯು ಆ ದಾನವಜಾತಿಗೆ ಸೇರಿದವಳೆಂದು ಇಲ್ಲಿ ಅವಳನ್ನು ದಾನು ಶಬ್ದದಿಂದ ಕರೆಯಲಾಗಿದೆ.

**ಶಯೇ**—ಮಲಗಿದ್ದಳು ಎಂದರೆ ಸತ್ತುಬಿದ್ದಿದ್ದಳು.

**ಸಹವತ್ಸಾ ನ ಧೇನುಃ**—ಹಸುವು ತನ್ನ ಕರುವಿನ ಸಮೀಪದಲ್ಲಿ ಮಲಗಿಕೊಳ್ಳುವಂತೆ ವೃತ್ರನ ತಾಯಿಯು ತನ್ನ ಮಗನಾದ ವೃತ್ರಾಸುರನ ಸಮೀಪದಲ್ಲಿ ಮಲಗಿದ್ದಳೆಂದು ಉಪಮಾರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ನೀಚಾವಯಾಃ**—ನ್ಯಚ್ ಶಬ್ದದ ಮುಂದಿರುವ ವಿಭಕ್ತಿಗೆ **ಸುಪಾಂಸುಪೋ ಭವಂತಿ** ಎಂಬ ವಚನದಿಂದ ತೃತೀಯಾ ಏಕವಚನವು ಆದೇಶವಾಗಿ ಬರುತ್ತದೆ. **ಅಚಃ** ಎಂಬುದರಿಂದ ಅಕಾರಕ್ಕೆ ಲೋಪ. ನಿಚ್ ಎಂದಿರುವಾಗ **ಚೌ** ಎಂಬುದರಿಂದ ಪೂರ್ವಕ್ಕೆ ದೀರ್ಘ. ನೀಚಾವಯಾಃ ಎಂದು ರೂಪವಾಗುತ್ತದೆ. **'ಅಂಚೇಶ್ಛಂದಸ್ಯಸರ್ವನಾಮಸ್ಥಾನಮ್'** (ಪಾ. ಸೂ. ೬-೧-೧೭೦) ಅಂಚುಧಾತುವಿನ ಪರದಲ್ಲಿರುವ ವಿಭಕ್ತಿಯು ಉದಾತ್ತವಾಗುತ್ತದೆ ಎಂಬುದರಿಂದ ತೃತೀಯಾದ ಟಾ ವಿಭಕ್ತಿಯು ಉದಾತ್ತವಾಗುತ್ತದೆ. ಸಮಾಸ ಮಾಡಿದಾಗ **ಸುಪೋಧಾತುಪ್ರಾತಿಪದಿಕಯೋಃ** ಎಂಬುದರಿಂದ ಲುಕ್ ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಲುಕ್ ಬರುವುದಿಲ್ಲ. ಬಹುವ್ರೀಹಿಸಮಾಸವಾದುದರಿಂದ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಸೂತ್ರದಿಂದ ಪೂರ್ವಪದ ಪ್ರಕೃತಿ ಸ್ವರವು ಬರುತ್ತದೆ. ಅಥವಾ ನೀಚೌ ನಿಕೃಷ್ಟೌ ವಯುಸೌ ಯಸ್ಯಾಃ ಸಾ ನೀಚಾವಯಾಃ ಪೂರ್ವಪದಕ್ಕೆ ದೀರ್ಘವು ಛಾಂದಸವಾಗಿ ಬರುತ್ತದೆ. ನಿಪಾತಕ್ಕೆ ಅಂತೋದಾತ್ತಸ್ವರವಿರುವುದರಿಂದ ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿ ಸ್ವರದಿಂದ ಹಿಂದಿನಂತೆಯೇ ರೂಪವಾಗುತ್ತದೆ.

**ವಧಃ**—ಹನ್ಯತೇ ಅನೇನ ಇತಿ ವಧಃ **ಸರ್ವಧಾತುಭ್ಯೋಽಸುನ್** ಎಂಬುದರಿಂದ ಅಸುನ್. ಪ್ರಕೃತಿಗೆ ವಧಾದೇಶ. ವಧಾದೇಶವು ಅದಂತ. **ಅತೋ ಲೋಪಃ** ಎಂಬುದರಿಂದ ಅದರ ಅಕಾರಕ್ಕೆ ಲೋಪ. ವಧಸ್ ಶಬ್ದ ವಾಗುತ್ತದೆ. ಅಸುನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜಭಾರ**—ಹೃಞ್ ಹರಣೇ ಧಾತು. ಲಟ್ ಪ್ರಥಮಪುರುಷ ಏಕವಚನಕ್ಕೆ ಣಲಾದೇಶ. ಧಾತುವಿಗೆ ಲಿಣ್ಣಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಉರದತ್ವ, ಹಲಾದಿಶೇಷ, ಚುತ್ವ ಕಾರ್ಯಗಳು ಬರುತ್ತವೆ. ಣಿತ್ತಾದುದರಿಂದ ಣಲ್ ಪರದಲ್ಲಿರುವಾಗ ಧಾತುವಿನ ಋಕಾರಕ್ಕೆ ವೃದ್ಧಿ. **ಉರಣ್ರಪರಃ** ಎಂಬುದರಿಂದ ಆರ್ ಬರುತ್ತದೆ. ಜಹಾರ ಎಂದಿರುವಾಗ **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ಜಭಾರ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಸೂಃ**—ಷೂಙ್ ಪ್ರಾಣಿಗರ್ಭ ವಿಮೋಚನೇ, ಧಾತು. ಸೂತೇ ಗರ್ಭಂ ವಿಮುಂಚತಿ ಇತಿ ಸೂಃ ಮಾತಾ. ಪ್ರಸವಿಸುವವಳು ತಾಯಿ ಎಂದರ್ಥ. **'ಕ್ವಿಪ್ ಚ'** (ಪಾ. ಸೂ ೩-೨-೭೬) ಸೂತ್ರದಿಂದ ಕೇವಲವಾಗಿದ್ದರೂ ಧಾತುವಿಗೆ ಕ್ವಿಪ್. ಕ್ವಿಪ್ ಸರ್ವವೂ ಲುಪ್ತವಾಗುತ್ತದೆ. **ಕೃತ್ತದ್ಧಿತಸಮಾಸಾಶ್ಚ** ಎಂಬುದರಿಂದ ಪ್ರಾತಿಪದಿಕ ಸಂಜ್ಞಾ. ಪ್ರಥಮಾ ವಿಭಕ್ತಿ ಏಕವಚನದರೂಪ. ಧಾತುಸ್ವರದಿಂದ ಅಂತೋದಾತ್ತ.

**ದಾನುಃ**—ದೋ ಅವಖಂಡನೇ ಧಾತು. **ಆದೇಚ ಉಪದೇಶೇಽಶಿತಿ** ಎಂಬುದರಿಂದ ಆತ್ವ. **'ದಾಭಾಭ್ಯಾಂ ನುಃ'** (ಉ. ಸೂ. ೩-೩೧೨) ಎಂಬುದರಿಂದ ದಾರೂಪವಾದುದರಿಂದ ನುಪ್ರತ್ಯಯ ಬರುತ್ತದೆ. ದಾನುಃ ಎಂದು ರೂಪವಾಗುತ್ತದೆ.

**ಶಯೇ**—ಶೀಙ್ ಸ್ವಪ್ನೇ ಧಾತು. ಲಟ್‌ಪ್ರಥಮಪುರುಷ ಏಕವಚನದ ತವಿಭಕ್ತಿಗೆ **ಟಿತ ಆತ್ಮನೇಪದಾನಾಂ** ಸೂತ್ರದಿಂದ ಏತ್ವ ಬಂದಾಗ, **'ಲೋಪಸ್ತ ಆತ್ಮನೇಪದೇಷು'** (ಪಾ. ಸೂ. ೭-೧-೪೧) ಎಂಬುದರಿಂದ ಛಂದಸ್ಸಿನಲ್ಲಿ ತಕಾರಕ್ಕೆ ಲೋಪ ಬರುತ್ತದೆ. ಆಗ ಏ ಉಳಿಯುತ್ತದೆ. **'ಶೀಙಃ ಸಾರ್ವಧಾತುಕೇ ಗುಣಃ'** (ಪಾ. ಸೂ. ೭-೪-೨೧) ಸೂತ್ರದಿಂದ ಧಾತುವಿಗೆ ಗುಣ. ಗುಣದ ಏಕಾರಕ್ಕೆ ಅಚ್‌ಪರದಲ್ಲಿರುವುದರಿಂದ **ಏಚೋಯವಾಯಾವಃ** ಸೂತ್ರದಿಂದ ಅಯಾದೇಶ. ಶಯೇ ಎಂದು ರೂಪವಾಗುತ್ತದೆ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಹವತ್ಸಾ**—ಬಹುವ್ರೀಹಿಸಮಾಸ. **ಬಹುವ್ರೀಹೌ** ಸೂತ್ರದಿಂದ ಸಮಾಸಸ್ವರವು ಬಾಧಿತವಾಗಿ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ॥ ೯ ॥

॥ ಸಂಹಿತಾಪಾಠಃ ॥

ಅತಿಷ್ಠನ್ತೀನಾಮನಿವೇಶನಾನಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ ।
ವೃತ್ರಸ್ಯ ನಿಣ್ಯಂ ವಿ ಚರನ್ತ್ಯಾಪೋ ದೀರ್ಘಂ ತಮ ಆಶಯದಿಂದ್ರಶತ್ರುಃ ॥ ೧೦ ॥

॥ ಪದಪಾಠಃ ॥

ಅತಿಷ್ಠನ್ತೀನಾಂ । ಅನಿಽವೇಶನಾನಾಂ । ಕಾಷ್ಠಾನಾಂ । ಮಧ್ಯೇ । ನಿಽಹಿತಂ । ಶರೀರಂ ।
ವೃತ್ರಸ್ಯ । ನಿಣ್ಯಂ । ವಿ । ಚರನ್ತಿ । ಆಪಃ । ದೀರ್ಘಂ । ತಮಃ । ಆ । ಅಶಯತ್ । ಇನ್ದ್ರಽಶತ್ರುಃ ॥ ೧೦ ॥

॥ ಸಾಯಣಭಾಷ್ಯಂ ॥

ವೃತ್ರಸ್ಯ ಶರೀರಮಾಪೋ ವಿ ಚರಂತಿ । ವಿಶೇಷೇಣೋಪರ್ಯಾಕ್ರಮ್ಯ ಪ್ರವಹಂತಿ । ಕೀದೃಶಂ ಶರೀರಂ । ನಿಣ್ಯಂ ನಿರ್ನಾಮಧೇಯಂ । ಅಪ್ಸು ಮಗ್ನತ್ವೇನ ಗೂಢತ್ವಾತ್ತದೀಯಂ ನಾಮ ನ ಕೇನಾಪಿ ಜ್ಞಾಯತೇ । ಏತದೇವ ಸ್ಪಷ್ಟೀಕ್ರಿಯತೇ । ಕಾಷ್ಠಾನಾಮಪಾಂ ಮಧ್ಯೇ ನಿಹಿತಂ ನಿಕ್ಷಿಪ್ತಂ । ಕೀದೃಶಾನಾಂ ಕಾಷ್ಠಾನಾಂ । ಅತಿಷ್ಠಂತೀನಾಂ ಸ್ಥಿತಿರಹಿತಾನಾಂ ಅನಿವೇಶನಾನಾಮುಪವೇಶನರಹಿತಾನಾಂ । ಪ್ರವಹಣಸ್ವಭಾವತ್ವಾದೇತಾಸಾಂ ಮನುಷ್ಯವನ್ನ ಕ್ವಾಪಿ ಸ್ಥಿತಿಃ ಸಂಭವತಿ । ಇಂದ್ರಶತ್ರುರ್ವೃತ್ರೋ ಜಲಮಧ್ಯೇ ಶರೀರೇ ಪ್ರಕ್ಷಿಪ್ತೇ ಸತಿ ದೀರ್ಘಂ ತಮೋ ದೀರ್ಘಂ ನಿದ್ರಾತ್ಮಕಂ ಮರಣಂ ಯಥಾ ಭವತಿ ತಥಾ ಆಶಯತ್ । ಸರ್ವತಃ ಪತಿತವಾನ್ ॥ ಅತಿಷ್ಠಂತೀನಾಂ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅನಿವೇಶನಾನಾಂ । ನಿವಿಶಂತೇಽಸ್ಮಿನ್ನಿತಿ ನಿವೇಶನಂ ಸ್ಥಾನಂ । ಕರಣಾಧಿಕರಣಯೋಶ್ಚೇತ್ಯಧಿಕರಣೇ ಲ್ಯುಟ್ । ತದ್ರಹಿತಾನಾಂ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಕ್ರಾಂತ್ವಾ ಸ್ಥಿತಾಃ ಕಾಷ್ಠಾಃ । ಪೃಷೋದರಾದಿ । ನಿಹಿತಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಅತ್ರ ಯಾಸ್ಕಃ ।

**ಅತಿಷ್ಠ.................ಮಾನಾನಾಮಿತ್ಯಸ್ಥಾವರಾಣಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ ಮೇಘಃ । ಶರೀರಂ ಶೃಣಾತೇಃ ಶಮ್ನಾತೇರ್ವಾ । ವೃತ್ರಸ್ಯ ನಿಣ್ಯಂ ನಿರ್ಣಾಮಮಂ ವಿಚರಂತಿ ವಿಜಾನಂತ್ಯಾಪ ಇತಿ ದೀರ್ಘಂ ದ್ರಾಘತೇಸ್ತಮಸ್ತನೋತೇರಾಶಯದಾಶೇತೇರಿಂದ್ರಶತ್ರುರಿಂದ್ರೋಽಸ್ಯ ಶಮಯಿತಾ ವಾ ಶಾತಯಿತಾ ವಾ ತಸ್ಮಾದಿಂದ್ರಶತ್ರುಃ । ತತ್ಕೋ ವೃತ್ರೋ ಮೇಘ ಇತಿ ನೈರುಕ್ತಾಸ್ತ್ವಾಷ್ಟ್ರೋಽಸುರ ಇತ್ಯೈತಿಹಾಸಿಕಾಃ ॥ ನಿ. ೨. ೧೬ । ಇತಿ ॥ ॥ ೩೭ ॥**

॥ ಪ್ರತಿಪದಾರ್ಥ ॥

**ವೃತ್ರಸ್ಯ**—ವೃತ್ರಾಸುರನ । **ನಿಣ್ಯಂ**—(ನೀರಿನಲ್ಲಿ ಮುಳುಗಿಹೋದುದರಿಂದ ಯಾರಿಗೂ ಅವನ) ಹೆಸರೇ ಗೊತ್ತಿಲ್ಲದಿರುವಂತಹ । **ಶರೀರಂ**—ಶರೀರವನ್ನು । **ಆಪಃ**—ನೀರುಗಳು । **ವಿಚರಂತಿ**—ಮೇಲೆ ಹಾದು ಹೋಗುತ್ತವೆ । **ಅತಿಷ್ಠಂತೀನಾಂ**—(ಕೊಂಚವೂ) ನಿಲ್ಲದೆಯೂ । **ಅನಿವೇಶನಾನಾಂ**—ವಿಶ್ರಾಂತಿಯಿಲ್ಲದೆಯೂ ಇರುವ (ಸರ್ವದಾ ಪ್ರವಹಿಸುತ್ತಿರುವ) । **ಕಾಷ್ಠಾನಾಂ**—ನೀರುಗಳ । **ಮಧ್ಯೇ**—ನಡುವೆ । **ನಿಹಿತಂ**—(ವೃತ್ರನ ಶರೀರವು ಜಲ ಮಧ್ಯದಲ್ಲಿ) ಎಸೆಯಲ್ಪಟ್ಟಿತು । **ಇಂದ್ರಶತ್ರುಃ**—ಇಂದ್ರಶತ್ರುವಾದ ವೃತ್ರನು । **ದೀರ್ಘಂ ತಮಃ**—ಮರಣಾತ್ಮಕವಾದ ದೀರ್ಘನಿದ್ರೆಯನ್ನು । **ಆಶಯತ್**—ಹೊಂದಿದನು.

॥ ಭಾವಾರ್ಥ ॥

ವೃತ್ರಾಸುರನು ನೀರಿನಲ್ಲಿ ಮುಳುಗಿಹೋದುದರಿಂದ ಅವನ ನಾಮಧೇಯವೇ ಯಾರಿಗೂ ಗೊತ್ತಿಲ್ಲದಿರುವಂತೆ ಅವನ ಶರೀರದ ಮೇಲೆ ನೀರುಗಳು ಹಾದುಹೋಗುತ್ತವೆ. ಒಂದು ಕಡೆಯೂ ನಿಲ್ಲದೆ ಮತ್ತು ವಿಶ್ರಾಂತಿರಹಿತವಾಗಿ ಸರ್ವದಾ ಪ್ರವಹಿಸುತ್ತಿರುವ ನೀರುಗಳ ನಡುವೆ ಅವನ ದೇಹವು ಎಸೆಯಲ್ಪಟ್ಟಾಗ ಇಂದ್ರಶತ್ರುವಾದ ವೃತ್ರನು ಮರಣಾತ್ಮಕವಾಗಿಯೂ ಕತ್ತಲು ರೂಪದಲ್ಲಿಯೂ ಇರುವ ದೀರ್ಘನಿದ್ರೆಯನ್ನು ಹೊಂದಿದನು

## English Translation.

The waters flow over the nameless body of Vritra placed in the midst of the never stopping, never-resting currents ; the enemy of Indra has slept (lay dead) an endless darkness.

॥ ವಿಶೇಷವಿಷಯಗಳು ॥

**ಅತಿಷ್ಠಂತೀನಾಂ**—ಒಂದು ಸ್ಥಳದಲ್ಲಿ ಸ್ಥಿರವಾಗಿ ನಿಲ್ಲದೆ ಇರುವ ಎಂದರೆ ಹರಿಯುತ್ತಿರುವ.

**ಅನಿವೇಶನಾನಾಂ--ಸತತಂ ಗಚ್ಛಂತೀನಾಂ ।** ಯಾವಾಗಲೂ ಮುಂದಕ್ಕೆ ಹೋಗುತ್ತಿರುವ. **ಅತಿಷ್ಠಂತೀನಾಂ** ಮತ್ತು **ಅನಿವೇಶನಾನಾಂ** ಎಂಬ ಎರಡು ಶಬ್ದಗಳೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ವಿಧವಾದ ಅರ್ಥವನ್ನು ಸೂಚಿಸುವವು.

**ಕಾಷ್ಠಾನಾಂ ಮಧ್ಯೇ—ಆಪೋsಪಿ ಕಾಷ್ಠಾ ಉಚ್ಯಂತೇ** (ನಿ. ೨-೧೬) ಕಾಷ್ಠಾ ಎಂದರೆ ನೀರು, ಹರಿಯುವ ನೀರು. ಕಾಷ್ಠಾನಾಂ ಮಧ್ಯೇ ಎಂದರೆ ನೀರಿನ ಪ್ರವಾಹಮಧ್ಯದಲ್ಲಿ ಎಂದರ್ಥವು.

**ನಿಣ್ಯಂ—ನಿರ್ಣಾಮಂ** (ನಿ. ೨-೧೬); **ನಿಣ್ಯಂ ಸುಸ್ವಃ** ಮೊದಲಾದ ಆರು ನಿರ್ಣೀತಾಂತರ್ಹಿತನಾಮಗಳ ಮಧ್ಯದಲ್ಲಿ **ನಿಣ್ಯಂ** ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೯) ನಿಣ್ಯಂ ಎಂದರೆ ಅಂತರ್ಹಿತ ಅಥವಾ ಮರೆಯಾಗಿರುವ, ಕಾಣಿಸದಿರುವ, ಒಳಗಡೆ ಇಡಲ್ಪಟ್ಟಿರುವ ಎಂದರ್ಥವು. ವೃತ್ರನ ಶರೀರವು ನೀರಿನೊಳಗೆ ಇರುವುದರಿಂದ ಯಾರಿಗೂ ಕಾಣಿಸದೆ ಅಂತರ್ಹಿತವಾಗಿರುವುದೆಂದರ್ಥವು.

**ವಿ ಚರಂತ್ಯಾಪಃ**—ನೀರು ಪ್ರವಾಹರೂಪದಿಂದ ಹರಿದುಹೋಗುತ್ತಿರುವುದು.

**ದೀರ್ಘಂ ತಮ ಆ ಅಶಯತ್ ಇಂದ್ರಶತ್ರುಃ**—ಇಂದ್ರನ ಶತ್ರುವಾದ ವೃತ್ರನು ದೀರ್ಘವಾದ ಎಂದರೆ ಕೊನೆಯಿಲ್ಲದ ಅಂಧಕಾರದಲ್ಲಿ ಮಲಗಿದನು. ಎಂದರೆ ಅಂಧಕಾರರೂಪವಾದ ಮರಣವನ್ನು ಹೊಂದಿದನು, ಮೃತನಾಗಿ ಬಿದ್ದಿದ್ದನು ಎಂದಭಿಪ್ರಾಯವು

ಯಾಸ್ಕಮಹರ್ಷಿಗಳು ಈ ಋಕ್ಕಿಗೆ ನಿರ್ವಚನವನ್ನು ಹೀಗೆ ಹೇಳಿರುವರು—

> **ಅತಿಷ್ಠಂತೀನಾಮನಿವೇಶಮಾನಾನಾಮಿತ್ಯಸ್ಥಾವರಾಣಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ ಮೇಘಃ । ಶರೀರಂ ಶೃಣಾತೇಃ ಶಮ್ನಾತೇರ್ವಾ । ವೃತ್ರಸ್ಯ ನಿಣ್ಯಂ ನಿರ್ಣಾಮಂ । ವಿಚರಂತಿ ವಿಜಾನಂತ್ಯಾಪ ಇತಿ ॥ ದೀರ್ಘಂ ದ್ರಾಘತೇಃ । ತಮಸ್ತನೋತೇಃ । ಆಶಯದಾಶೇತೇಃ । ಇಂದ್ರಶತ್ರುರಿಂದ್ರೋsಸ್ಯ ಶಮಯಿತಾ ವಾ ಶಾತಯಿತಾ ವಾ ತಸ್ಮಾದಿಂದ್ರಶತ್ರುಃ ॥**

ಎಂದರೆ—**ಅತಿಷ್ಠಂತೀನಾಂ** ಮತ್ತು **ಅನಿವೇಶನಾನಾಂ** ಎಂಬ ಶಬ್ದಗಳಿಗೆ **ಅಸ್ಥಾವರಾಣಾಂ**—ಒಂದು ಕಡೆ ನಿಲ್ಲದಿರುವ, ಸದಾ ಚಲಿಸುತ್ತಿರುವ ಎಂದರ್ಥವು; **ಕಾಷ್ಠಾನಾಂ ಮಧ್ಯೆ ನಿಹಿತಂ ಶರೀರಂ**—ಉದಕಗಳ ಮಧ್ಯೆ ಇರುವ ವೃತ್ರನ ಶರೀರವೆಂದರೆ ಉದಕರೂಪದಲ್ಲಿರುವ ಮೇಘವು; ಮೇಘವು ಅಂತರಿಕ್ಷದಲ್ಲಿ ಗಾಳಿಯ ಹೊಡೆತದಿಂದ ಸದಾ ಚಲಿಸುತ್ತಿರುವುದರಿಂದ **ಅತಿಷ್ಠಂತೀನಾಂ, ಅನಿವೇಶನಾನಾಂ** ಎಂಬ ವಿಶೇಷಣಪದಗಳನ್ನು ಉಪಯೋಗಿಸಲಾಗಿದೆ. **ಶರೀರಂ**—ಇದು ಹಿಂಸಿಸಲ್ಪಡುವುದರಿಂದ ಇದಕ್ಕೆ ಶರೀರವೆಂದು ಹೆಸರು. (ಮೇಘವು ಗಾಳಿಯಿಂದ ಹಿಂಸಿಸಲ್ಪಡುವುದು ಅಥವಾ ಚದುರಿಸಲ್ಪಡುವುದು) **ವೃತ್ರಸ್ಯ ನಿಣ್ಯಂ—ನಿರ್ಣಾಮಂ ಯೇನಾಸೌ ನೀಚೈರ್ನಮತಿ ತಂ ಪ್ರದೇಶಂ ವಿಜಾನಂತಿ ಇವ** । ನಿಮ್ನ ಪ್ರದೇಶಕ್ಕೆ ಸರಿಯುವ ಮೇಘಗಳು ಗೂಢವಾಗಿ ಇರುವ ವೃತ್ರನ ಶರೀರವನ್ನು ತಿಳಿದುಕೊಳ್ಳುವಂತೆ ಮುಂದೆ ಮುಂದೆ ಹೋಗುತ್ತಿರುವವು. **ದೀರ್ಘಂ—ದ್ರಾಘತೇಃ ವೃಧ್ಯರ್ಥಸ್ಯ** । ವೃದ್ಧಿಯಾಗುತ್ತಿರುವ, ಬಹಳಕಾಲವಾಗುವ. **ತಮಃ—ತನೋತೇಃ ತೇನ ಹಿ ಸರ್ವಮೇವ ತತಂ ಭವತಿ** । ಅಂಧಕಾರವು ಎಲ್ಲವನ್ನು ವ್ಯಾಪಿಸುವ ಸ್ವಭಾವವುಳ್ಳದ್ದರಿಂದ **ತಮಃ** ಎಂದು ಕತ್ತಲೆಗೆ ಹೆಸರು. **ಆಶಯತ್— ಆಙ್ ಪೂರ್ವಸ್ಯ ಶೇತೇಃ** ಮಲಗಿದನು ಎಂದರೆ ಮೃತನಾದನು. ಅಥವಾ ಕೆಳಗೆ ಬಿದ್ದಿದ್ದನು. **ಇಂದ್ರಶತ್ರುಃ**—ಇಂದ್ರನು ಇವನನ್ನು ನಿಗ್ರಹ ಮಾಡಿದ್ದರಿಂದ ಅಥವಾ ಸಂಹಾರಮಾಡಿದ್ದರಿಂದ ವೃತ್ರನಿಗೆ ಇಂದ್ರಶತ್ರುವೆಂದು ಹೆಸರು.

॥ ವ್ಯಾಕರಣಪ್ರಕ್ರಿಯಾ ॥

**ಅತಿಷ್ಠಂತೀನಾಂ**---ನಞ್ ತತ್ಪುರುಷಸಮಾಸ. **'ತತ್ಪುರುಷೇ ತುಲ್ಯಾರ್ಥ'** (ಪಾ. ಸೂ. ೬-೨-೨) ಸೂತ್ರದಿಂದ ಅವ್ಯಯಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಆದಿಯ ಅಕಾರವು ಉದಾತ್ತವಾಗುತ್ತದೆ

**ಅನಿವೇಶನಾನಾಂ**---ನಿವಿಶಂತೇ ಅಸ್ಮಿನ್ ಇತಿ ನಿವೇಶನಂ ಸ್ಥಾನಮ್. ವಿಶ ಪ್ರವೇಶನೇ ಧಾತು. **'ಕರಣಾಧಿಕರಣಯೋಶ್ಚ'** (ಪಾ. ಸೂ. ೩-೩-೧೧೭) ಸೂತ್ರದಿಂದ ಅಧಿಕರಣಾರ್ಥದಲ್ಲಿ ಲ್ಯುಟ್. **ಯುವೋರ-ನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. ತನ್ನಿಮಿತ್ತಕವಾಗಿ ಧಾತುವಿನ ಲಘೂಪಧೆಗೆ ಗುಣ. ನಿವೇಶನಂ ಎಂದಾಗುತ್ತದೆ. ನ ವಿದ್ಯತೇ ನಿವೇಶನಂ ಯೇಷಾಂ ತಾನಿ ಅನಿವೇಶನಾನಿ ತೇಷಾಂ. ಬಹುವ್ರೀಹಿಸಮಾಸ· **'ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರವು ಬರುತ್ತದೆ.

**ಕಾಷ್ಠಾನಾಂ**—ಷಷ್ಠೀ ಬಹುವಚನರೂಪ. ಕ್ರಾಂತ್ವಾ ಸ್ಥಿತಾಃ ಕಾಷ್ಠಾಃ **'ಪೃಷೋದರಾದೀನಿ ಯಥೋಪದಿಷ್ಟಂ'** (ಪಾ. ಸೂ· ೬-೩-೧೦೯) ಎಂಬುದರಿಂದ ಸಿದ್ಧವಾಗುತ್ತದೆ. ಶಾಸ್ತ್ರಾಂತರದಿಂದ ಬಾರದ ಕಾರ್ಯಗಳು ಅಲ್ಲಿ ನಿಪಾತದಿಂದ ಸಿದ್ಧವಾಗುತ್ತವೆ.

**ನಿಹಿತಂ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. ತಪರದಲ್ಲಿರುವಾಗ **'ದಧಾತೇರ್ಹಿಃ'** (ಪಾ. ಸೂ ೭-೪-೪೨) ಸೂತ್ರದಿಂದ ಪ್ರಕೃತಿಗೆ ಹಿ ಆದೇಶ. ಹಿತ ಎಂದಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗಿದ್ದು ಗತಿಯೊಡನೆ ಸಮಾಸವಾದಾಗ **ಗತಿರನಂತರಃ** ಎಂಬುದರಿಂದ (ನಿ) ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

ಯಾಸ್ಕರು ಇಲ್ಲಿ ಬೇರೆ ವಿಧವಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಅತಿಷ್ಠಂತೀನಾಂ ಅನಿವಿಶಮಾನಾನಾಂ ಎಂಬ ಎರಡು ವಿಶೇಷಣಗಳು ಸ್ಥಾವರ ಪದಾರ್ಥಗಳಲ್ಲವೆಂದು ತಿಳಿಸುತ್ತವೆ. ಸ್ಥಾವರಗಳಿಗೆ ಒಂದು ಸ್ಥಿತಿ, ಪ್ರವೇಶ ನಿಯತವಾಗಿರುತ್ತವೆ. ಆದುದರಿಂದ ಅಸ್ಥಾವರಗಳಾದ ಕಾಷ್ಠಗಳ ಮಧ್ಯದಲ್ಲಿ ಇಡಲ್ಪಟ್ಟ ಶರೀರಂ ಅಂದರೆ ಮೇಘವೆಂದರ್ಥ ಅಲ್ಲಿ ಪದಗಳಿಗೆ ಈರೀತಿ ಪ್ರಕ್ರಿಯಾ ಹೇಳಿರುತ್ತಾರೆ.

**ಶರೀರಂ**—ಶ್ಯಾ ಹಿಂಸಾಯಾಂ, ಧಾತು. ಇದಕ್ಕೆ ಉಣಾದಿ ಪ್ರತ್ಯಯದಿಂದ ಉಕ್ತರೂಪಸಿದ್ಧಿಯಾಗುವುದು. ಹಿಂಸಿಸಲ್ಪಡುವುದು ಅಥವಾ ನಾಶಹೊಂದುವುದು ಎಂದರ್ಥ. ವೃತ್ರಸ್ಯ ನಿಣ್ಯಂ=ನಿರ್ಣಾಮಂ, ವಿಚರಂತಿ=ವಿಜಾನಂತಿ. ಗತ್ಯರ್ಥಕವಾದ ಧಾತುಗಳಿಗೆ ಜ್ಞಾನಾರ್ಥಕತ್ವವೂ ಇರುತ್ತದೆ. ದ್ರಾಘೃ ಸಾಮರ್ಥ್ಯೇ, ಈ ಧಾತುವಿನಿಂದ **ದೀರ್ಘ** ಶಬ್ದವೂ, ತನು ವಿಸ್ತಾರೇ, ಈ ಧಾತುವಿನಿಂದ **ತಮಃ** ಶಬ್ದವೂ, ಶೀಙ್ ಸ್ವಪ್ನೇ, ಈ ಧಾತುವಿನಿಂದ **ಅಶಯತ್** ಎಂಬ ರೂಪವೂ ಆಗುತ್ತವೆ. **ಇಂದ್ರಶತ್ರುಃ** ಇಂದ್ರಃ ಅಸ್ಯ ಶಮಯಿತಾ ವಾ ಶಾತಯಿತಾ, ವಾ, ತಸ್ಮಾತ್ ಇಂದ್ರಶತ್ರುಃ ಇಂದ್ರನು ಇವನ ಅಂತಕಾರಕನು, ಅಥವಾ ಸಂಪೂರ್ಣವಾಗಿ ಚೂರುಮಾಡುವವನು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ ಎಂದರ್ಥ. ತತ್ಕೋ ವೃತ್ರಃ ಮೇಘಃ ಎಂದು ಪರ್ಯಾಯವಾಗಿ ನಿರುಕ್ತಕಾರರು ಹೇಳುತ್ತಾರೆ. ಇತಿಹಾಸಕಾರರು ತ್ವಷ್ಟೃಪುತ್ರನಾದ ರಾಕ್ಷಸನು ವೃತ್ರನೆಂದು ಹೇಳುತ್ತಾರೆ. (ನಿರು. ೨-೧೬) ॥ ೧೦ ॥

॥ ಸಂಹಿತಾಪಾಠಃ ॥

ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ ಗಾವಃ ।
ಅಪಾಂ ಬಿಲಮಪಿಹಿತಂ ಯದಾಸೀದ್ವೃತ್ರಂ ಜಘನ್ವಾ ಅಪ ತದ್ವವಾರ ॥ ೧೧ ॥

॥ ಪದಪಾಠಃ ॥

ದಾಸಽಪತ್ನೀಃ । ಅಹಿಽಗೋಪಾಃ । ಅತಿಷ್ಠನ್ । ನಿಽರುದ್ಧಾಃ । ಆಪಃ । ಪಣಿನಾಽಇವ । ಗಾವಃ ।
ಅಪಾಂ । ಬಿಲಂ । ಅಪಿಽಹಿತಂ । ಯತ್ । ಆಸೀತ್ । ವೃತ್ರಂ । ಜಘನ್ವಾನ್ । ಅಪ । ತತ್ । ವವಾರ ॥ ೧೧ ॥

॥ ಸಾಯಣಭಾಷ್ಯಂ ॥

ದಾಸಪತ್ನೀಃ । ದಾಸೋ ವಿಶ್ವೋಪಕ್ಷಪಣಹೇತುರ್ವೃತ್ರಃ ಪತಿಃ ಸ್ವಾಮೀ ಯಾಸಾಮಪಾಂ ತಾ ದಾಸಪತ್ನೀಃ । ಅತ ಏವಾಹಿಗೋಪಾಃ । ಅಹಿರ್ವೃತ್ರೋ ಗೋಪಾ ರಕ್ಷಕೋ ಯಾಸಾಂ ತಾಃ । ಗೋಪನಂ ನಾಮ ಸ್ವಚ್ಛಂದೇನ ಯಥಾ ನ ಪ್ರವಹಂತಿ ತಥಾ ನಿರೋಧನಂ । ಏತದೇವ ಸ್ಪಷ್ಟೀಕ್ರಿಯತೇ । ಆಪೋ ನಿರುದ್ಧಾ ಅತಿಷ್ಠನ್ನಿತಿ । ತತ್ರ ದೃಷ್ಟಾಂತಃ । ಪಣಿನೇವ ಗಾವಃ । ಪಣಿನಾಮಕೋಽಸುರೋ ಗಾ ಅಪಹೃತ್ಯ ಬಿಲೇ ಸ್ಥಾಪಯಿತ್ವಾ ಬಿಲದ್ವಾರಮಾಚ್ಛಾದ್ಯ ಯಥಾ ನಿರುದ್ಧವಾಂಸ್ತಥೇತ್ಯರ್ಥಃ । ಅಪಾಂ ಯದ್ಬಿಲಂ ಪ್ರವಹಣದ್ವಾರಮಪಿಹಿತಂ ವೃತ್ರೇಣ :ನಿರುದ್ಧಮಾಸೀತ್ ತದ್ಬಿಲಂ ಪ್ರವಹಣದ್ವಾರಂ ವೃತ್ರಂ ಜಘನ್ವಾನ್ಹತವಾನಿಂದ್ರೋಽಪ ವವಾರ । ಅಪವೃತಮಕರೋತ್ । ವೃತ್ರಕೃತಮಪಾಂ ನಿರೋಧಂ ಪರಿಹೃತವಾನ್ । ಅತ್ರ ಯಾಸ್ಕಃ । ದಾಸಪತ್ನೀರ್ದಾಸಾಧಿಪತ್ನ್ಯೋ ದಾಸೋ ದಸ್ಯತೇರುಪದಾಸಯತಿ ಕರ್ಮಾಣ್ಯಹಿಗೋಪಾ ಅತಿಷ್ಠನ್ನಹಿನಾ ಗುಪ್ತಾಃ । ಅಹಿರಯನಾದೇತ್ಯಂತರಿಕ್ಷೇಽಯಮಪೀತರೋಽಹಿರೇತಸ್ಮಾದೇವ ನಿರ್ಹ್ರಸಿತೋಪಸರ್ಗ ಆಹಂತೀತಿ । ನಿರುದ್ಧಾ ಆಪಃ ಪಣಿನೇವ ಗಾವಃ । ಪಣಿರ್ವಣಿಗ್ಭವತಿ ಪಣಿಃ

ಪಣಿನಾದ್ವಣಿಕ್ ಪಣ್ಯಂ ನೇನೇಕ್ತಿ । ಅಪಾಂ ಬಿಲಮಪಿಹಿತಂ ಯದಾಸೀತ್ । ಬಿಲಂ ಭರಂ ಭವತಿ ಬಿಭರ್ತೇರ್ವೃತ್ರಂ ಜಘ್ನಿವಾನಪವವಾರ ತದ್ವೃತ್ರೋ ವೃಣೋತೇರ್ವಾ ವರ್ತತೇರ್ವಾ ವರ್ಧತೇರ್ವಾ ಯದವೃಣೋತ್ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ । ಯದವರ್ತತ ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ । ಯದವರ್ಧತ ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ । ನಿ ೨. ೧೭ । ಇತಿ ॥ ದಾಸಪತ್ನೀಃ । ದಸು ಉಪಕ್ಷಯೇ । ದಾಸಯತೀತಿ ದಾಸೋ ವೃತ್ರಃ । ಪಚಾದ್ಯಚ್ । ಚಿತ ಇತ್ಯಂತೋದಾತ್ತತ್ವಂ । ದಾಸಃ ಪತಿರ್ಯಾಸಾಂ ವಿಭಾಷಾ ಸಪೂರ್ವಸ್ಯ । ಪಾ. ೪. ೧. ೩೪ । ಇತಿ ಙೀಪ್ । ತತ್ಸಂನಿಯೋಗೇನೇಕಾರಸ್ಯ ನಕಾರಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಯದ್ವಾ । ದಾಸಸ್ಯ ಪಾಲಯಿತ್ರ್ಯಃ । ಪತ್ಯಾವೈಶ್ವರ್ಯೇ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಅಹಿಗೋಪಾಃ । ಗುಪೂ ರಕ್ಷಣೇ । ಗೋಪಾಯತೀತಿ ಗೋಪಾಃ । ಆಯಾದಯ ಆರ್ಧಧಾತುಕೇ ವಾ । ಪಾ. ೩. ೧. ೩೧ । ಇತ್ಯಾಯಪ್ರತ್ಯಯಃ । ತತಃ ಕ್ವಿಪ್ । ಅತೋ ಲೋಪಃ । ವೇರಪೃಕ್ತಲೋಪಾದ್ವಲಿ ಲೋಪೋ ಬಲೀಯಾನಿತಿ ಪೂರ್ವಂ ಯಕಾರಲೋಪಃ । ಪಾ. ೬. ೧. ೬೬-೬೭ । ನ ಚಾಚಃ ಪರಸ್ಮಿನ್ನಿತ್ಯತೋ ಲೋಪಸ್ಯ ಸ್ಥಾನಿವತ್ತ್ವಂ । ನ ಪದಾಂತದ್ವಿರ್ವಚನೇತಿ ಪ್ರತಿಷೇಧಾತ್ । ಅಹಿಗೋಪಾ ಯಾಸಾಂ । ಪೂರ್ವವತ್ಸ್ವರಃ । ನಿರುದ್ಧಾಃ । ರುಧಿರ್ ಆವರಣೇ । ಝಷಸ್ತಥೋರ್ಧೋಽಧಃ । ಪಾ. ೮. ೨. ೪೦ । ಇತಿ ನಿಷ್ಠಾತಕಾರಸ್ಯ ಧಕಾರಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಜಘನ್ವಾನ್ । ಹಂತೇರ್ಲಿಟಃ ಕ್ವಸುಃ । ಅಭ್ಯಾಸಾಚ್ಚ । ಪಾ. ೭. ೩. ೫೫ । ಇತ್ಯಭ್ಯಾಸಾದುತ್ತರಸ್ಯ ಹಕಾರಸ್ಯ ಕುತ್ವಂ । ಕ್ರಾದಿನಿಯಮಪ್ರಾಪ್ತಸ್ಯೇಟೋ ವಿಭಾಷಾ ಗಮಹನೇತ್ಯಾದಿನಾ । ಪಾ. ೭. ೨. ೬೮ । ವಿಕಲ್ಪವಿಧಾನಾದಭಾವಃ । ಸಂಹಿತಾಯಾಂ ನಕಾರಸ್ಯ ರುತ್ವಾನುನಾಸಿಕಾವುಕ್ತೌ ॥

॥ ಪ್ರತಿಪದಾರ್ಥ ॥

**ದಾಸಪತ್ನೀಃ**—(ಲೋಕ) ಹಿಂಸಕನಾದ ವೃತ್ರನನ್ನು ಪತಿಯಾಗಿ ಉಳ್ಳವೂ । **ಅಹಿಗೋಪಾಃ**—ವೃತ್ರನನ್ನು (ಪ್ರತಿಬಂಧಕರೂಪವಾದ) ರಕ್ಷಕನನ್ನಾಗಿ ಉಳ್ಳವೂ ಆದ । **ಆಪಃ**—ನೀರುಗಳು । **ಪಣಿನಾ**—ಪಣಿಯೆಂಬ ರಾಕ್ಷಸನಿಂದ । **ಗಾವ ಇವ**—ಹಸುಗಳು ತಡೆಯಲ್ಪಟ್ಟಂತೆ । **ನಿರುದ್ಧಾಃ**—ತಡೆಯಲ್ಪಟ್ಟು । **ಅತಿಷ್ಠನ್**—ನಿಂತುಕೊಂಡವು । **ಅಪಾಂ**—ನೀರುಗಳ । **ಯತ್ ಬಿಲಂ**—ಯಾವ ಪ್ರವಾಹದ್ವಾರವಾದ ಬಿಲವು । **ಅಪಹಿತಂ ಆಸೀತ್**—(ವೃತ್ರನಿಂದ) ತಡೆಯಲ್ಪಟ್ಟಿತೋ । **ತತ್**—ಆ ಬಿಲವನ್ನು । **ವೃತ್ರಂ ಜಘನ್ವಾನ್**—ವೃತ್ರನನ್ನು ಕೊಂದ ಇಂದ್ರನು । **ಅಪ ವವಾರ**—ಬಿಡಿಸಿ ಪ್ರವಾಹಕ್ಕೆ ತಡೆಯಿಲ್ಲದಂತೆ ಮಾಡಿದನು.

॥ ಭಾವಾರ್ಥ ॥

ಲೋಕಹಿಂಸಕನಾದ ವೃತ್ರನ ಪತ್ನಿಯರ ರೂಪದಲ್ಲಿದ್ದವೂ ಮತ್ತು ತಮ್ಮ ಪ್ರವಾಹಕ್ಕೆ ಪ್ರತಿಬಂಧಕರೂಪನಾದ ವೃತ್ರನ ರಕ್ಷಣೆಯಲ್ಲಿದ್ದವೂ ಆದ ನೀರುಗಳು ಪಣಿಯೆಂಬ ರಾಕ್ಷಸನಿಂದ ಹಸುಗಳು ತಡೆಯಲ್ಪಟ್ಟಂತೆ ಬಂಧಿತವಾಗಿ ನಿಂತುಕೊಂಡವು. ನೀರುಗಳ ಪ್ರವಾಹದ್ವಾರವಾದ ಬಿಲವನ್ನು ವೃತ್ರನು ಮುಚ್ಚಿದಾಗ ಇಂದ್ರನು ಅವನನ್ನು ಕೊಂದು ಆ ದ್ವಾರವನ್ನು ಬಿಡಿಸಿ ಪ್ರವಾಹಕ್ಕೆ ತಡೆಯಿಲ್ಲದಂತೆ ಮಾಡಿದನು.

## English Translation.

The waters, the wives of the destroyer (Vritra) gaurded by Ahi had stood confined like cows confined by Panin (robber); by slaying Vritra, Indra threw open the gate of the water that had stood closed.

॥ ವಿಶೇಷವಿಷಯಗಳು ॥

ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿರುವರು--

**ದಾಸಪತ್ನೀರ್ದಾಸಾಧಿಪತ್ನ್ಯಃ । ದಾಸೋ ದಸ್ಯತೇರುಪದಾಸಯತಿ ಕರ್ಮಾಣಿ ॥ ಅಹಿಗೋಪಾ ಅತಿಷ್ಠನ್ ಅಹಿನಾ ಗುಪ್ತಾಃ । ಅಹಿರಯದೇತ್ಯಂತರಿಕ್ಷೇ । ಅಯಮಪೀತರೋಽಹಿರೇತಸ್ಮಾ-ದೇವ ನಿರ್ಹ್ರಸಿತೋಪಸರ್ಗ ಆಹಂತೀತಿ ॥ ನಿರುದ್ಧಾ ಆಪಃ ಪಣಿನೇವ ಗಾವಃ । ಪಣಿರ್ವಣಿ-ಗ್ಭವತಿ । ಪಣಿಃ ಪಣನಾತ್ । ವಣಿಕ್ ಪಣ್ಯಂ ನೇನೇಕ್ತಿ ॥ ಅಪಾಂ ಬಿಲಮಪಿಹಿತಂ ಯದಾಸೀತ್ । ಬಿಲಂ ಭರಂ ಭವತಿ ಬಿಭರ್ತೇಃ । ವೃತ್ರಂ ಜಘ್ನಿವಾನಪವವಾರ ತತ್ । ವೃತ್ರೋ ವೃಣೋತೇರ್ವಾ ವರ್ತತೇರ್ವಾ ವರ್ಧತೇರ್ವಾ । ಯದವೃಣೋತ್ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ । ಯದವರ್ತತ ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ ॥ ಯದವರ್ಧತ ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ ॥** (ನಿ. ೨-೧೭).

ಅನುವಾದವು--ದಾಸ ಎಂದರೆ ಕರ್ಮಕರಃ ಕೆಲಸಮಾಡುವವನು. ಅಂತಹ ಕೆಲಸಗಾರರನ್ನು **ಅಧಿಷ್ಠಾಯ ಪಾಂತಿ** ಎಂದರೆ ರಕ್ಷಿಸುವುದರಿಂದ ಉದಕಗಳಿಗೆ **ಅಧಿಪತ್ನ್ಯಃ** ಎಂದು ಹೆಸರು ಕೆಲಸಗಾರನು ಕೆಲಸಮಾಡಿದ್ದರಿಂದ ಬಳಲಿ ನೀರನ್ನು ಕುಡಿದು ವಿಶ್ರಾಂತಿಯನ್ನು ಪಡೆದು ಸುಖವಾಗಿರುವುದರಿಂದ ಈ ಉದಕಗಳು ಅವನಿಗೆ ರಕ್ಷಣೆಯನ್ನು ಕೊಡುವವು ಎಂದು ಹೇಳಲಾಗುವುದು. ಆದುದರಿಂದ **ದಾಸಪತ್ನೀಃ** ಎಂಬ ಶಬ್ದಕ್ಕೆ ಕೆಲಸಗಾರನನ್ನು ಆಪ್ಯಾಯನಗೊಳಿಸುವ ಉದಕಗಳು ಎಂದು ಹೇಳಬೇಕು. ದಾಸಶಬ್ದಕ್ಕೆ—**ದಸ್ಯತೇಃ ಉಪದಾಸಯತಿ ಕರ್ಮಾಣಿ**—ಕೃಷ್ಯಾದಿಕರ್ಮಗಳನ್ನು ಮಾಡುವವನಿಗೆ ದಾಸನೆಂದು ಹೇಳಬೇಕು ಎಂದು ರೂಪನಿಷ್ಪತ್ತಿಯಿರುವುದು. **ಅಹಿಗೋಪಾಃ—ಅಹಿನಾ ಗುಪ್ತಾಃ,** ಅಹಿಯಿಂದ (ವೃತ್ರ) ರಹಸ್ಯಪ್ರದೇಶದಲ್ಲಿಡಲ್ಪಟ್ಟ, ಬಚ್ಚಿಡಲ್ಪಟ್ಟ ಎಂದರ್ಥವು. ಅಹಿ ಎಂದರೆ **ಅಯನಾತ್ ಏತಿ ಅಂತರಿಕ್ಷೇ**—ಅಂತರಿಕ್ಷದಲ್ಲಿ ಸಂಚಾರಮಾಡುವುದರಿಂದ ಅಹಿ ಎಂದು ಹೆಸರು. ಅಥವಾ ಜನರನ್ನು ಕೊಲ್ಲುವುದರಿಂದ (ಆಙ್ಪೂರ್ವಸ್ಯ ಹಂತೇಃ) ಅಹಿ ಎಂದರೆ ಸರ್ಪವೆಂದೂ ಅರ್ಥವು. ಆಹಂತಿಶಬ್ದದ ಉಪಸರ್ಗವಾದ ಆ ಎಂಬುದನ್ನು ಹ್ರಸ್ವಮಾಡಿರುವುದರಿಂದ ಅಹಿ ಎಂದಾಗುವುದು. **ಪಣಿರ್ವಣಿಗ್ಭವತಿ** ಪಣಿ ಎಂದರೆ ವರ್ತಕನು. **ಪಣಿಃ ಪಣನಾತ್**—ಇವನು ಕ್ರಯವಿಕ್ರಯಾದಿವ್ಯವಹಾರವನ್ನು ಮಾಡುವವನಾದ್ದರಿಂದ ಇವನಿಗೆ ಪಣಿ ಎಂದು ಹೆಸರು. **ವಣಿಕ್ ಪಣ್ಯಂ ನೇನೇಕ್ತಿ**—ವರ್ತಕನು ದ್ರವ್ಯವನ್ನು (ಪಣ್ಯಂ) ಎಂದರೆ ಕ್ರಯಕ್ಕಾಗಿ ಸಿದ್ಧಮಾಡಿರುವ ವಸ್ತುಗಳನ್ನು ಮೂಲ್ಯಾರ್ಹವಾಗುವಂತೆ, ಎಂದರೆ ಬೆಲೆಬಾಳುವಂತೆ ನಿತ್ಯವೂ ಶುಚಿಗೊಳಿಸುವುದರಿಂದ ಅಂತಹ ದ್ರವ್ಯಕ್ಕೆ **ಪಣ್ಯಂ** ಎಂದರ್ಥವು. **ಬಿಲಂ ಭರಂ ಭವತಿ**—ಉದಕಾದಿಗಳಿಂದ ತುಂಬುವುದರಿಂದ ಬಿಲವೆಂದರೆ ಭರವು. ಎಂದರೆ ದ್ವಾರವು. **ವೃತ್ರೋ ವೃಣೋತೇರ್ವಾ । ಯದವೃಣೋತ್ತದ್ವೃತ್ರಸ್ಯ ವೃತ್ರತ್ವಂ**—ಆವರಿಸು ಆಚ್ಛಾದನೆಮಾಡು ಎಂಬ

ಅರ್ಥವುಳ್ಳ ವೃಣೋತಿಧಾತುವಿನಿಂದ ವೃತ್ರಶಬ್ದನಿಷ್ಪತ್ತಿಯಾಗಿರುವುದರಿಂದ ವೃತ್ರನೆಂದು ಹೆಸರು ಬರಲು ಆದೇ ಕಾರಣವು. ಅಥವಾ **ವರ್ತತೇ**—ಇರು ಎಂಬ ಅರ್ಥವುಳ್ಳ ವರ್ತತೇ ಎಂಬ ಧಾತುವಿನಿಂದಲೂ ವೃದ್ಧಿಯಾಗು ಎಂಬರ್ಥವುಳ್ಳ **ವರ್ಧತೇ** ಎಂಬ ಧಾತುವಿನಿಂದಲೂ ಈ ಶಬ್ದದ ಉತ್ಪತ್ತಿ ಇರುವುದರಿಂದ ವೃತ್ರ ಎಂಬ ಶಬ್ದವು ಉಂಟಾಗಲು ಕಾರಣವು. ಇದು ಯಾಸ್ಕರು ವಿವರಿಸಿರುವ ಅವಯವಾರ್ಥವು.

**ದಾಸಪತ್ನೀಃ**—ವೃತ್ರನು ಯಾವ ಉದಕಗಳಿಗೆ ಪತಿಯೋ ಅಥವಾ ಸ್ವಾಮಿಯೋ ಅಂತಹ ಉದಕಗಳು. ವೃತ್ರನು ಮೇಘರೂಪದಿಂದಿರುವುದರಿಂದ ಇವನು ಮೇಘದಲ್ಲಿರುವ ಉದಕಗಳಿಗೆ ಸ್ವಾಮಿಯೆಂದು ಹೇಳಲ್ಪಡುವನು. ಇವನ ಅಧಿಕಾರಕ್ಕೊಳಲ್ಪಟ್ಟ ಎಂದರೆ ಇವನ ಅಧೀನದಲ್ಲಿರುವ ಉದಕಗಳು ಎಂದಭಿಪ್ರಾಯವು.

**ಅಹಿಗೋಪಾಃ**—ವೃತ್ರಾಸುರನಿಂದ ರಕ್ಷಿಸಲ್ಪಟ್ಟ ಎಂದರೆ ಭೂಮಿಯ ಮೇಲೆ ಬೀಳದಂತೆ ಗೋಪ್ಯಸ್ಥಳದಲ್ಲಿ ಭದ್ರವಾಗಿ ಇಡಲ್ಪಟ್ಟ.

**ಪಣಿನೇವ ಗಾವಃ**—ಪಣಿ ಎಂಬುವನು ಬಚ್ಚಿಟ್ಟಿದ್ದ ಗೋವುಗಳಂತೆ. ಋಗ್ವೇದದಲ್ಲಿ ಪಣಿ ಶಬ್ದಕ್ಕೆ ವ್ಯಾಪಾರಾದಿಗಳನ್ನು ಮಾಡುವ ಧನಿಕನೆಂದು ಅರ್ಥವಿದ್ದರೂ ಅವನು ಯಜ್ಞಾದಿಗಳನ್ನು ಮಾಡದೆ ಮತ್ತು ದಕ್ಷಿಣೆ ದಾನಾದಿಗಳನ್ನು ಕೊಡದಿರುವ ಮನುಷ್ಯನೆಂದೂ ಅರ್ಥವಿರುವುದರಿಂದ ಅವನನ್ನು ನಿಕೃಷ್ಟಭಾವನೆಯಿಂದ ನೋಡುವು ದಲ್ಲದೆ ಅವನು ಗೌರವಾರ್ಹನಲ್ಲದವನೆಂದೂ, ನೀಚಮನುಷ್ಯನೆಂದೂ ಋಷಿಗಳು ಭಾವಿಸಿದ್ದಂತೆ ತೋರುವುದು. ಕೆಲವು ಕಡೆ ಪಣಿ ಎಂಬುವನು ಒಬ್ಬ ಪ್ರತ್ಯೇಕವ್ಯಕ್ತಿಯಾಗಿ ಕಂಡು ಬರುವುದಾದರೂ ಈ ಶಬ್ದದ ಬಹುವಚನ ಪ್ರಯೋಗವು ವಿಶೇಷವಾಗಿರುವುದರಿಂದ ಪಣಿ ಎಂದು ಒಂದು ವರ್ಗದ ಜನರನ್ನು ಸೂಚಿಸುವುದಾಗಿರುವುದೆಂದು ತಿಳಿಯಬೇಕು.

ಪಣಿ ಎಂಬುವರ ವಿಷಯದಲ್ಲಿ ಒಂದು ಉಪಾಖ್ಯಾನವನ್ನು ಭಾಷ್ಯಕಾರರು ಉದಹರಿಸಿರುವರು. ಪಣಿ ಎಂಬ ರಾಕ್ಷಸರು ದೇವಲೋಕದಲ್ಲಿದ್ದ ಹಸುಗಳನ್ನು ಅಪಹರಿಸಿ ಅವುಗಳನ್ನು ಒಂದು ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದರು. ಇದನ್ನು ಹುಡುಕುವುದಕ್ಕಾಗಿ ಇಂದ್ರನು ಸರಮಾ ಎಂಬ ದೇವಶುನಿ (ದೇವಲೋಕದ ಹೆಣ್ಣುನಾಯಿ) ಯನ್ನು ಕಳುಹಿಸಿದನು. ಆ ಶುನಿಯು ಪಣಿಗಳ ಬಳಿಗೆ ಹೋಗಿ ಅವರನ್ನು ಒಳ್ಳೆಯ ಮಾತುಗಳಿಂದ ಮಿತ್ರರನ್ನಾಗಿ ಮಾಡಿ ಹಸುಗಳನ್ನು ತರುವುದಕ್ಕೆ ಸಹಾಯಮಾಡಿತು. ಮರುತ್ತುಗಳ ಸಹಾಯದಿಂದ ಇಂದ್ರನು ಆ ಪರ್ವತಗುಹೆಯನ್ನು ನಾಶಪಡಿಸಿ ಅಲ್ಲಿದ್ದ ಹಸುಗಳನ್ನು ತಂದನೆಂದು ಈ ಉಪಾಖ್ಯಾನದಲ್ಲಿ ಹೇಳಿದೆ. ಋಗ್ವೇದಸಂಹಿತೆಯ ಹತ್ತನೆಯ ಮಂಡಲದ ೧೦೮ ನೆಯ ಸೂಕ್ತದಲ್ಲಿ ಈ ವಿಚಾರವಾಗಿ ಸರಮಾ ಎಂಬ ದೇವಶುನಿಗೂ ಪಣಿಗಳೆಂಬ ರಾಕ್ಷಸರಿಗೂ ನಡೆದ ಸಂಭಾಷಣೆಯು ವಿಸ್ತಾರವಾಗಿ ಇರುವುದು.

ಈ ಪಣಿಗಳೆಂಬುವರು ಈ ದೇಶದ ಪೂರ್ವನಿವಾಸಿಗಳೆಂದೂ ಇವರು ವ್ಯಾಪಾರಾದಿಗಳಲ್ಲಿ ತೊಡಗಿದ್ದರೆಂದೂ ಕೆಲವರ ಅಭಿಮತವು. ಇವರು ಯಜ್ಞಾದಿಗಳನ್ನು ಮಾಡದೆ ಯಾವ ಸತ್ಕರ್ಮಾನುಷ್ಠಾನದಲ್ಲಿಯೂ ಆಸಕ್ತಿಯಿಲ್ಲದೆ ನ್ಯಾಯ ಅಥವಾ ಅನ್ಯಾಯಮಾರ್ಗದಿಂದ ಕೇವಲ ದ್ರವ್ಯಸಂಪಾದನೆಯೇ ಮುಖ್ಯವೆಂದು ಪರಿಗಣಿಸಿ ಅದರಂತೆ ನಡೆಯು ತ್ತಿದ್ದುದರಿಂದ ಇವರನ್ನು ಆರ್ಯರು ದಸ್ಯುಗಳೆಂತಲೂ, ನೀಚವೃತ್ತಿಯ ಮನುಷ್ಯರೆಂತಲೂ ಭಾವಿಸಿ ಆ ವಿಧವಾದ

ಅಭಿಪ್ರಾಯಗಳನ್ನು ಮಂತ್ರಾದಿಗಳಲ್ಲಿ ಹೊರಗೆಡವಿದ್ದಾರೆ. ಅಂತೂ ಋಗ್ವೇದದಲ್ಲಿ ಈ ಪಣಿಗಳೆಂಬುವರನ್ನು ನಿಕೃಷ್ಟ ಭಾವನೆಯಿಂದ ನೋಡಲಾಗಿದೆ. ಪಣಿಗಳ ವಿಷಯವಾಗಿ ಋಗ್ವೇದದಲ್ಲಿ ಅನೇಕ ಋಕ್ಕುಗಳಿರುವವು. ಅವುಗಳಲ್ಲಿ—

**ಪಣಯಃ**—ಎಂಬ ಶಬ್ದವು—ಋ. ಸಂ. ೧–೧೩೪–೧೦; ೧–೧೫೧–೯; ೪–೫೧–೩; ೬–೨೦–೪; ೧೦–೧೦೮–೭; ೧೦–೧೦೮–೮; ೧೦–೧೦೮–೨; ೧೦–೧೦೮–೪; ೧೦–೧೦೮–೬; ೧೦–೧೦೮–೧೦; ೧೦–೧೦೮–೧೧ ಎಂಬ ಋಕ್ಕುಗಳಲ್ಲಿಯೂ

**ಪಣಿಃ**—ಋ. ಸಂ. ೧–೩೩–೩; ೧–೧೮೦–೭; ೫–೬೧–೮;

**ಪಣಿನಾ**—ಋ. ಸಂ. ೪–೨೫–೭;

**ಪಣಿನಾಇವ**—ಋ. ಸಂ. ೧–೩೨–೧೧;

**ಪಣಿಽಭಿಃ**—ಋ. ಸಂ. ೪–೫೮–೪;

**ಪಣಿಭ್ಯಃ**—ಋ. ಸಂ. ೯–೨೨–೭;

**ಪಣಿಂ**—ಋ. ಸಂ. ೧–೯೩–೪; ೬–೪೪–೨೨; ೬–೫೧–೧೪; ೬–೬೧–೧; ೮–೪೫–೧೪; ೮–೭೫–೭; ೧೦–೬೭–೬; ೧೦–೧೫೬–೩;

**ಪಣೀನ್**—ಋ. ಸಂ. ೧–೧೮೪–೨; ೬–೩೩–೨; ೬–೩೯–೨; ೭–೬–೩; ೭–೧೯–೯; ೮–೨೬–೧೦; ೮–೬೪–೨; ೮–೬೬–೧೦; ೧೦–೬೦–೬;

**ಪಣೀನಾಂ**—ಋ. ಸಂ. ೨–೨೪–೬; ೬–೪೫–೩೧; ೬–೫೩–೫; ೬–೫೩–೭; ೭–೯–೨; ೯–೩–೨;

**ಪಣೇಃ**—ಋ. ಸಂ. ೧–೮೩–೪; ೧–೧೮೨–೩; ೩–೫೮–೨; ೫–೩೪–೭; ೬–೧೩–೩; ೬–೫೩–೩; ೬–೫೩–೬; ೧೦–೯೨–೩;

**ಪಣೌ**—ಋ. ಸಂ. ೮–೯೭–೨.

ಎಂಬ ಋಕ್ಕುಗಳಲ್ಲಿ ಪಠಿತವಾಗಿವೆ. ಈ ಪಣಿಗಳೆಂಬುವರು ವಲನೆಂಬ ಅಸುರನ ಸೈನಿಕರೆಂದು ಹೇಳುವ ರೂಢಿಯಿದೆ. ಇವರು ಗೋವುಗಳನ್ನು ಕದ್ದು ಗುಹೆಗಳಲ್ಲಿ ಬಚ್ಚಿಟ್ಟಿದ್ದರೆಂಬ ವಿಷಯವು ಅನೇಕ ಋಕ್ಕುಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು. ಈ ವಿಷಯವಾಗಿ ನಾವು ಹಿಂದೆ ಬರೆದಿರುವುದನ್ನು ಋಗ್ವೇದಸಂಹಿತಾ ಭಾಗ ೨ ಪೇಜು ೨೨೮, ೪೬೫-೪೬೬ ಗಳನ್ನು ನೋಡಿ.

**ಬಿಲಂ**—ದ್ವಾರ, ಬಾಗಿಲು.

॥ ವ್ಯಾಕರಣಪ್ರಕ್ರಿಯಾ ॥

**ದಾಸಪತ್ನೀಃ**—ದಸು ಉಪಕ್ಷಯೇ ಧಾತು. ದಾಸಯತಿ ಇತಿ ದಾಸಃ=ವೃತ್ರಃ ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ** ಸೂತ್ರದಿಂದ ಅಚ್. ದಾಸ ಎಂದಾಗುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ. ದಾಸಃ ಪತಿಃ ಯಾಸಾಂ ತಾಃ ದಾಸಪತ್ನೀಃ **'ವಿಭಾಷಾ ಸಪೂರ್ವಸ್ಯ'** (ಪಾ. ಸೂ. ೪–೧–೩೪)

ಎಂಬುದರಿಂದ ಪೂರ್ವದಲ್ಲಿ ಪದವಿರುವುದರಿಂದ ಪತಿಶಬ್ದಕ್ಕೆ ಙೀಪ್. ತತ್ಸಂನಿಯೋಗದಿಂದ ಇಕಾರಕ್ಕೆ ನಕಾರಾದೇಶವೂ ಬರುತ್ತದೆ. ಪತ್ನೀ ಎಂದಾಗುತ್ತದೆ. ಬಹುವ್ರೀಹಿಸಮಾಸವಾದುದರಿಂದ **ಬಹುವ್ರೀಹೌ ಪ್ರಕೃತ್ಯಾ** ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ. ಅಥವಾ ದಾಸಸ್ಯ ಪಾಲಯಿತ್ರ್ಯಃ ಷಷ್ಠೀತತ್ಪುರುಷ ಸಮಾಸ. **'ಪತ್ಯಾವೈಶ್ವರ್ಯೇ'** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ.

**ಅಹಿಗೋಪಾಃ**—ಗುಪೂ ರಕ್ಷಣೇ ಧಾತು ಗೋಪಾಯತಿ ಇತಿ ಗೋಪಾಃ **'ಆಯಾದಯ ಆರ್ಧಧಾತುಕೇ ವಾ'** (ಪಾ. ಸೂ. ೩-೧-೩೧) ಎಂಬುದರಿಂದ ಸ್ವಾರ್ಥದಲ್ಲಿ ಆಯ ಪ್ರತ್ಯಯ. **ಸನಾದ್ಯಂತಾ ಧಾತವಃ** ಎಂಬುದರಿಂದ ಆಯ ಪ್ರತ್ಯಯಾಂತವಾದುದಕ್ಕೆ ಧಾತುಸಂಜ್ಞಾ ಇರುವಾಗ **ಕ್ವಿಪ್ ಚ** ಎಂಬುದರಿಂದ ಅದಕ್ಕೆ ಕ್ವಿಪ್. ಕ್ವಿಪ್ ಪರದಲ್ಲಿರುವಾಗ **ಅತೋ ಲೋಪಃ** ಎಂಬುದರಿಂದ ಪೂರ್ವದ ಆಕಾರಕ್ಕೆ ಲೋಪ. ಕ್ವಿಪ್ಪಿನಲ್ಲಿ ವಕಾರ ಉಳಿದಿರುವಾಗ **ವೇರಪೃಕ್ತಸ್ಯ** ಎಂಬುದರಿಂದ ಆದಕ್ಕೆ ಲೋಪವೂ, ಅದನ್ನು ನಿಮಿತ್ತೀಕರಿಸಿಕೊಂಡು **ಲೋಪೋವ್ಯೋರ್ವಲಿ** ಎಂಬುದರಿಂದ ಪೂರ್ವದ ಯಕಾರ ಲೋಪವೂ ಪ್ರಾಪ್ತವಾದರೆ **ವೇರಪೃಕ್ತಲೋಪಾದ್ವಲಿ ಲೋಪೋ ಬಲೀಯಾನ್** ಎಂಬ ವಚನದಿಂದ ಮೊದಲು ವಕಾರವನ್ನು ನಿಮಿತ್ತೀಕರಿಸಿ ಯಲೋಪ ಬರುತ್ತದೆ. ಯಲೋಪ ಮಾಡುವಾಗ **ಅಚಃ ಪರಸ್ಮಿನ್ ಪೂರ್ವವಿಧೌ** ಎಂಬುದರಿಂದ ಅಲೋಪಕ್ಕೆ ಸ್ಥಾನಿವದ್ಭಾವವು ಬರಬೇಕಾಗುತ್ತದಷ್ಟೆ ಎಂದು ಪೂರ್ವಪಕ್ಷವು ಉತ್ಥಿತವಾಗುತ್ತದೆ. ಕ್ವಿಪ್ ನಿಮಿತ್ತಕವಾಗಿ **ಅತೋ ಲೋಪಃ** ಎಂಬುದರಿಂದ ಅಕಾರಲೋಪವು ಬಂದಿರುವುದರಿಂದ ಪರನಿಮಿತ್ತಕವಾದ ಅಜಾದೇಶವಾಯಿತು. ಅದರ ಪೂರ್ವಕ್ಕೆ ಈಗ ಕಾರ್ಯಮಾಡಬೇಕೆಂದು ಪ್ರಸಕ್ತವಾಗಿದೆ; ಎಂದರೆ, ಅದಕ್ಕೆ **'ನಪದಾಂತದ್ವಿರ್ವಚನ ಯಲೋಪ'** (ಪಾ. ಸೂ. ೧-೧-೫೮) ಸೂತ್ರದಲ್ಲಿ ಯಲೋಪ ವಿಷಯದಲ್ಲಿ ಸ್ಥಾನಿವದ್ಭಾವನಿಷೇಧ ಹೇಳಿರುವುದರಿಂದ ಅಲೋಪಕ್ಕೆ ಸ್ಥಾನಿವದ್ಭಾವ ಬರುವುದಿಲ್ಲ. ಯಲೋಪ ಬಂದ ಮೇಲೆ **ವೇರಪೃಕ್ತಸ್ಯ** ಸೂತ್ರದಿಂದ ಕ್ವಿಪಿನ ವಕಾರಕ್ಕೆ ಲೋಪ ಬರುತ್ತದೆ. ಅಹಿಗೋಪಾ ಶಬ್ದವಾಗುತ್ತದೆ. ಅಹಿಗೋಪಾ ಯಾಸಾಂ ತಾಃ ಅಹಿಗೋಪಾಃ ಬಹುವ್ರೀಹಿಸಮಾಸವಾದುದರಿಂದ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

**ನಿರುದ್ಧಾಃ**—ರುಧಿರ್ ಆವರಣೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ರುಧ್+ತ ಎಂದಿರುವಾಗ **'ಝಷಸ್ತಥೋರ್ಧೋಽಧಃ'** (ಪಾ. ಸೂ. ೮-೨-೪೦) ಎಂಬುದರಿಂದ ನಿಷ್ಠಾ ತಕಾರಕ್ಕೆ ಧಕಾರಾದೇಶ. ರುದ್ಧ ಎಂದು ರೂಪವಾಗುತ್ತದೆ. ನಿ ಎಂಬುದರೊಡನೆ ಸಮಾಸವಾದಾಗ **ಗತಿರನಂತರ** ಸೂತ್ರದಿಂದ ಗತಿಗೆ (ನಿ) ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

**ಜಘನ್ವಾನ್**—ಹನ ಹಿಂಸಾಗತ್ಯೋಃ ಧಾತು. ಲಿಟ್ಟಿನ ಸ್ಥಾನದಲ್ಲಿ **'ಕ್ವಸುಶ್ಚ'** (ಪಾ. ಸೂ. ೩-೨-೧೦೭ ಸೂತ್ರದಿಂದ ಕ್ವಸು ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಚುತ್ವ. ಜಹನ್+ವಸ್ ಎಂದಿರುವಾಗ **'ಅಭ್ಯಾಸಾಚ್ಚ'** (ಪಾ. ಸೂ. ೭-೩-೫೫) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಹನ್ನಿನ ಹಕಾರಕ್ಕೆ ಕುತ್ವದಿಂದ ಘಕಾರವು ಆಂತರತಮ್ಯದಿಂದ ಬರುತ್ತದೆ. ವಸ್ ವಲಾದಿಯಾದುದರಿಂದ ಕ್ರ್ಯಾದಿ ನಿಯಮದಿಂದ ಇಟ್ ಪ್ರಾಪ್ತವಾದರೆ **'ವಿಭಾಷಾ ಗಮಹನ-'** (ಪಾ. ಸೂ.೭-೨-೬೮) ಸೂತ್ರದಿಂದ ವಿಕಲ್ಪವಾಗಿ ಇಟ್ ವಿಧಾನಮಾಡಿರುವುದರಿಂದ ಇಲ್ಲಿ ಇಟ್ ಬರುವುದಿಲ್ಲ. ಜಘನ್ವಸ್ ಎಂದು ಸಾಂತವಾದ ಶಬ್ದವಾಗುತ್ತದೆ.

ಪ್ರಥಮಾ ಸು ಪರದಲ್ಲಿರುವಾಗ ಉಗಿತ್ತಾದುದರಿಂದ **ಉಗಿದಚಾಂ ಸರ್ವನಾಮ** ಸೂತ್ರದಿಂದ ಪ್ರಾತಿಪದಿಕಕ್ಕೆ ನುಮಾಗಮ. ಮೊದಲು **ಅತ್ವಸಂತಸ್ಯ** ಸೂತ್ರದಿಂದ ಉಪಧಾದೀರ್ಘ. **ಹಲ್‌ಙ್ಯಾದಿ** ಸೂತ್ರದಿಂದ ಸುಲೋಪ. **ಸಂಯೋಗಾಂತ ಸೂತ್ರ**ದಿಂದ ಅಂತ್ಯಸಕಾರಲೋಪ. ಅದು ಅಸಿದ್ಧವಾದುದರಿಂದ ಪುನಃ **ನಲೋಪಃ ಸೂತ್ರ**ದಿಂದ ನಲೋಪ ಬರುವುದಿಲ್ಲ. ಜಘನ್ವಾನ್ ಎಂದು ರೂಪವಾಗುತ್ತದೆ. ಸಂಹಿತಾದಲ್ಲಿ ಮುಂದೆ ಆಕಾರವಿರುವುದರಿಂದ **ದೀರ್ಘಾದಟಿ ಸಮಾನಪಾದೇ** ಎಂಬುದರಿಂದ ನಕಾರಕ್ಕೆ ರುತ್ವವೂ, **ಆತೋ ಟಿ ನಿತ್ಯಂ** ಸೂತ್ರದಿಂದ ಪೂರ್ವಕ್ಕೆ ಅನುನಾಸಿಕವೂ ಬರುತ್ತದೆ. ‖ ೧೧ ‖

॥ ಸಂಹಿತಾಪಾಠಃ ॥

ಅಶ್ವ್ಯೋ ವಾರೋ ಅಭವಸ್ತದಿಂದ್ರ ಸೃಕೇ ಯತ್ವಾ ಪ್ರತ್ಯಹನ್ದೇವ ಏಕಃ ।
ಅಜಯೋ ಗಾ ಅಜಯಃ ಶೂರ ಸೋಮಮವಾಸೃಜಃ ಸರ್ತವೇ ಸಪ್ತ ಸಿಂಧೂನ್ ‖ ೧೨ ‖

॥ ಪದಪಾಠಃ ॥

**ಅಶ್ವ್ಯಃ । ವಾರಃ । ಅಭವಃ । ತತ್ । ಇನ್ದ್ರ । ಸೃಕೇ । ಯತ್ । ತ್ವಾ । ಪ್ರತಿಽಅಹನ್ । ದೇವಃ । ಏಕಃ ।**
**ಅಜಯಃ । ಗಾಃ । ಅಜಯಃ । ಶೂರ । ಸೋಮಂ । ಅವ । ಅಸೃಜಃ । ಸರ್ತವೇ । ಸಪ್ತ । ಸಿಂಧೂನ್ ‖ ೧೨ ‖**

॥ ಸಾಯಣಭಾಷ್ಯಂ ॥

ಸೃಕೇ ವಜ್ರೇ । ಸೃಕೋ ವೃಕ ಇತಿ ವಜ್ರನಾಮಸು ಪಠಿತತ್ವಾತ್ । ದೇವೋ ದೀಪ್ಯಮಾನಃ ಸರ್ವಾಯುಧಕುಶಲ ಏಕೋಽದ್ವಿತೀಯೋ ವೃತ್ರೋ ಯದ್ಯದಾ ತ್ವಾ ತ್ವಾಂ ಪ್ರತ್ಯಹನ್ ಪ್ರತಿಕೂಲತ್ವೇನ ಪ್ರಹೃತವಾನ್ ತತ್ತದಾನೀಂ ತ್ವಮಶ್ವ್ಯಃ ವಾರೋಽಶ್ವಸಂಬಂಧೀ ವಾಲೋಽಭವಃ । ಯಥಾಶ್ವಸ್ಯ ವಾಲೋಽನಾಯಾಸೇನ ಮಕ್ಷಿಕಾದೀನ್ನಿವಾರಯತಿ ತದ್ವದ್ವೃತ್ರಮಗಣಯಿತ್ವಾ ನಿರಾಕೃತವಾನಿತ್ಯರ್ಥಃ । ಕಿಂಚ ಗಾಃ ಪಣಿನಾಪಹೃತಾಸ್ತ್ವಮಜಯಃ । ಜಿತವಾನ್ । ಹೇ ಶೂರ ಶೌರ್ಯಯುಕ್ತೇಂದ್ರ ಸೋಮಮಜಯಃ । ಜಿತವಾನ್ । ತಥಾ ಚ ತೈತ್ತಿರೀಯಾಃ ತ್ವಷ್ಟಾ ಹತಪುತ್ರ ಇತ್ಯಸ್ಮಿನ್ನುಪಾಖ್ಯಾನೇ ಸಮಾಮನಂತಿ । ಸ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್ । ತೈ. ಸಂ. ೨-೪-೧೨-೧ । ಇತಿ । ಸಪ್ತ ಸಿಂಧೂನ್ ಇಮಂ ಮೇ ಗಂಗೇ । ಋಗ್ವೇ. ೧೦-೭೫-೫ । ಇತ್ಯಸ್ಯಾಮೃಚ್ಯಾಮ್ನಾತಾ ಗಂಗಾದ್ಯಾಃ ಸಪ್ತಸಂಖ್ಯಾಕಾ ನದೀಃ ಸರ್ತವೇ ಸರ್ತುಂ ಪ್ರವಾಹರೂಪೇಣ ಗಂತುಮವಾಸೃಜಃ । ತ್ಯಕ್ತವಾನ್ । ವೃತ್ರಕೃತಂ ಪ್ರವಾಹನಿರೋಧಂ ನಿರಾಕೃತವಾನಿತ್ಯರ್ಥಃ ॥ ಅಶ್ವ್ಯಃ । ಅಶ್ವೇ ಭವಃ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ವಾರಯತಿ ದಂಶಮಶಕಾನಿತಿ ವಾರಃ । ಪಚಾದ್ಯಚ್ । ಕಪಿಲಕಾದಿತ್ವಾಲ್ಲತ್ವವಿಕಲ್ಪಃ । ಪಾ. ೮-೨-೧೮ । ವೃಷಾದಿತ್ವಾದಾದ್ಯುದಾತ್ತತ್ವಂ । ಪ್ರತ್ಯಹನ್ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ । ತಿಙಿ ಚೋದಾತ್ತವತೀತಿ ಗತೇರನುದಾತ್ತತ್ವಂ। ಅಜಯಃ । ಗಾ ಇತ್ಯಸ್ಯ ವಾಕ್ಯಾಂತರಗತತ್ವಾತ್ತದಪೇಕ್ಷಯಾಸ್ಯ ತಿಙ್ಙತಿಙ ಇತಿ ನಿಘಾತೋ ನ ಭವತಿ । ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾಃ । ಪಾ. ೧-೧-೧೮-೫ । ಇತಿ ವಚನಾತ್ । ಸರ್ತವೇ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಸೃಕೇ**—ಎಲೈ ವಜ್ರಿಯೇ, (ಇಂದ್ರನೇ) । **ದೇವಃ**—ಪ್ರಕಾಶಮಾನನೂ । **ಏಕಃ**—ಅದ್ವಿತೀಯನೂ ಆದ ವೃತ್ರನು । **ಯತ್**—ಯಾವಾಗ । **ತ್ವಾ**—ನಿನ್ನನ್ನು । **ಪ್ರತ್ಯಹನ್**—ಎದುರಿಸಿ ಹೊಡೆದನೋ । **ತತ್**—ಆಗ (ನೀನು) । **ಅಶ್ವ್ಯಃ**—ಕುದುರೆಯ । **ವಾರಃ**—ಬಾಲವಾಗಿ (ಕುದುರೆಯ ಬಾಲವು ಅನಾಯಾಸವಾಗಿ ಸೊಳ್ಳೆಯನ್ನು ಓಡಿಸುವಂತೆ ನೀನೂ ಸುಲಭವಾಗಿ ಶತ್ರುನಾಶಕನಾಗಿ) । **ಅಭವಃ**—ಆದೆ (ಮತ್ತು) । **ಗಾಃ**—(ಪಣಿಯಿಂದ ಅಪಹೃತಗಳಾದ) ಹಸುಗಳನ್ನು । **ಅಜಯಃ**—ಗೆದ್ದುಕೊಂಡೆ । **ಶೂರ**—ಪರಾಕ್ರಮಿಯಾದ । **ಇಂದ್ರ**—ಇಂದ್ರನೇ । **ಸೋಮಂ**—ಸೋಮರಸವನ್ನು । **ಅಜಯಃ**—ಸಂಪಾದಿಸಿಕೊಂಡೆ । **ಸಪ್ತ ಸಿಂಧೂನ್**—ಗಂಗಾದಿ ಸಪ್ತನದಿಗಳನ್ನು । **ಸರ್ತವೇ**—(ಪ್ರವಾಹರೂಪದಲ್ಲಿ) ಹರಿಯಲು । **ಅವಾಸೃಜಃ**—(ಸ್ವತಂತ್ರವಾಗಿ) ಬಿಟ್ಟೆ.

॥ ಭಾವಾರ್ಥ ॥

ವಜ್ರಾಯುಧವನ್ನು ಹಿಡಿದ ಎಲೈ ಇಂದ್ರನೇ, ಪ್ರಕಾಶಮಾನನೂ, ಅದ್ವಿತೀಯನೂ ಆದ ವೃತ್ರನು ಯಾವಾಗ ನಿನ್ನನ್ನು ಎದುರಿಸಿ ಹೊಡೆದನೋ ಆಗ ನೀನು ಅವನನ್ನು, ಕುದುರೆಯು ಬಾಲದಿಂದ ಅನಾಯಾಸವಾಗಿ ಸೊಳ್ಳೆಯನ್ನು ಓಡಿಸುವಂತೆ ಸುಲಭವಾಗಿ ನಾಶಮಾಡಿದೆ. ಎಲೈ ಇಂದ್ರನೇ, ನೀನು ಪಣಿಯಿಂದ ಅಪಹೃತವಾದ ಗೋವುಗಳನ್ನು

ಗೆದ್ದುಕೊಂಡೆ. ಸೋಮರಸವನ್ನು ಸಂಪಾದಿಸಿದೆ. ಮತ್ತು ಗಂಗಾದಿ ಸಪ್ತನದಿಗಳನ್ನು ಪ್ರವಾಹರೂಪದಲ್ಲಿ ಹರಿಯಲು ಸ್ವತಂತ್ರವಾಗಿ ಬಿಟ್ಟೆ.

## English Translation.

When the mighty Vritra, though single, struct you in return, O weilder of the thunderbolt, you became furious like a horse's tail (which easily sweeps flies); you have rescued the stolen cows; O hero, you have won the Soma-juice; you have let loose the seven rivers to flow without obstruction.

॥ ವಿಶೇಷವಿಷಯಗಳು ॥

**ಅಶ್ವ್ಯೋ ವಾರೋ ಅಭವಃ**— ಇಲ್ಲಿ ಇಂದ್ರನನ್ನು ಕುದುರೆಯ ಬಾಲಕ್ಕೆ ಹೋಲಿಸಿರುವುದು. ಕುದುರೆಯು ತನ್ನ ಬಾಲವನ್ನು ಬೀಸುವುದರಿಂದ ಸೊಳ್ಳೆಗಳನ್ನು ನೊಣಗಳನ್ನು ಯಾವರೀತಿ ಅನಾಯಾಸವಾಗಿ ನಾಶಮಾಡುವುದೋ ಅದರಂತೆ ಇಂದ್ರನಾದ ನೀನು ಶತ್ರುಗಳನ್ನು ನಾಶಮಾಡುವ ವಿಷಯದಲ್ಲಿ ಕುದುರೆಯ ಬಾಲದಂತೆ ಆಗಿರುವೆ ಎಂದು ಋಷಿಯು ಇಲ್ಲಿ ಉಪಮಾನವನ್ನು ಕೊಟ್ಟಿರುವನು.

**ಸೃಕೇ—ವಜ್ರೇ,** ವಜ್ರಾಯುಧಧರನೇ, ದಿದ್ಯುತ್ ನೇಮಿಃ ಮೊದಲಾದ ಹದಿನೆಂಟು ವಜ್ರನಾಮಗಳ ಮಧ್ಯದಲ್ಲಿ ಸೃಕಃ ಎಂಬ ಶಬ್ದವು ಪಠಿತವಾಗಿರುವುದರಿಂದ ಸೃಕಃ ಎಂದರೆ ವಜ್ರಾಯುಧವು. **ಸೃಕಃ ಅಸ್ಯಾಸ್ತೀತಿ ಸೃಕೀ ತಸ್ಯಸಂಬುದ್ಧಿಃ ಸೃಕೇ ।** ಸೃಕೇ ಎಂಬುದು ಸೃಕಿಶಬ್ದದ ಸಂಬೋಧನಸ್ಪೃಥವ್ಯೈಕವಚನವು.

**ಪ್ರತ್ಯಹನ್**— ತಿರುಗಿ ಹೊಡೆದನು. ಏಟಿಗೆ ಪ್ರತಿ ಏಟು.

**ಸರ್ತವೇ—**ಸರಿಯುವುದಕ್ಕೆ, ಪ್ರವಾಹರೂಪದಿಂದ ಹರಿಯುವುದಕ್ಕೆ.

**ಸಪ್ತ ಸಿಂಧೂನ್**—ಏಳು ನದಿಗಳನ್ನು ಎಂದರೆ **ಇಮಂ ಮೇ ಗಂಗೆ** ಎಂಬ ಋಕ್ಕಿನಲ್ಲಿ ಹೇಳಿರುವ ಗಂಗಾ, ಯಮುನಾ, ಸರಸ್ವತಿ, ಶುತದ್ರಿ, ಪರುಷ್ಣಿ, ಅಸಿಕ್ನಿ, ಮರುದ್ವೃಧಾ ಎಂಬ ಏಳು ನದಿಗಳು.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವ್ಯಃ**—ಅಶ್ವೇ ಭವಃ ಅಶ್ವ್ಯಃ '**ಭವೇ ಛಂದಸಿ**' (ಪಾ. ಸೂ. ೪-೪-೧೧೦) ಎಂಬುದರಿಂದ ಯತ್. '**ಯತೋಽನಾವಃ**' (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಾರಃ**—ವಾರಯತಿ ದಂಶಮಶಕಾನ್ ಇತಿ ವಾರಃ. ಪ್ರೇರಣಾರ್ಥದಲ್ಲಿ ಣಿಚ್. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ** ಸೂತ್ರದಿಂದ ಅಚ್. ಣಿಚ್ ನಿಮಿತ್ತಕವಾಗಿ ಧಾತುವಿಗೆ ವೃದ್ಧಿ. ಅಚ್ ನಿಮಿತ್ತಕವಾಗಿ **ಣೇರನಿಟಿ** ಎಂಬುದರಿಂದ ಣಿಲೋಪ. ಕಪಿಲಕಾದಿಯಲ್ಲಿ ಸೇರಿರುವುದರಿಂದ (ಪಾ. ಸೂ. ಮ. ೮-೨-೧೮) ಲತ್ವವು ವಿಕಲ್ಪವಾದುದರಿಂದ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವು ಪ್ರಾಪ್ತವಾದರೆ ವೃಷಾದಿಯಲ್ಲಿ ಸೇರಿರುವುದರಿಂದ '**ವೃಷಾದೀನಾಂ ಚ**' (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರವು ಬರುತ್ತದೆ.

**ಪ್ರತ್ಯಹನ್**—ಪ್ರತಿ ಉಪಸರ್ಗ. ಹನ ಹಿಂಸಾಗತ್ಯೋಃ ಧಾತು. ಅದಾದಿ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. **ಹಲ್ಙ್ಯಾದಿ** ಸೂತ್ರದಿಂದ ತಿಪ್ಪಿಗೆ ಲೋಪ. ನಿಘಾತಸ್ವರವು ಪ್ರಾಪ್ತವಾದರೆ ಹಿಂದೆ ಯತ್ ಶಬ್ದದ ಸಂಬಂಧವಿರುವುದರಿಂದ '**ಯದ್ವೃತ್ತಾನ್ನಿತ್ಯಂ**' (ಪಾ. ಸೂ ೮-೧-೬೬) ಎಂಬುದರಿಂದ ನಿಘಾತ ಪ್ರತಿಷೇಧ ಬರುತ್ತದೆ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ. '**ತಿಙಿ ಚೋದಾತ್ತವತಿ**' (ಪಾ. ಸೂ. ೮-೧-೭೧) ಸೂತ್ರದಿಂದ ಗತಿಗೆ (ಪ್ರತಿ) ಅನುದಾತ್ತಸ್ವರ ಬರುತ್ತದೆ.

**ಅಜಯಃ**—ಜಿ ಜಯೇ ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಅಜಯಃ ಎಂದು ರೂಪವಾಗುತ್ತದೆ. ಮೊದಲನೇ ಅಜಯಃ ಎಂಬುದಕ್ಕೆ ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಎರಡನೇದು ಯದ್ಯಪಿ ಗಾಃ ಎಂಬ ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತವನ್ನು ಹೊಂದಲು ಯೋಗ್ಯವಾಗಿದೆ ಆದರೆ '**ಸಮಾನವಾಕ್ಯೇ ನಿಘಾತ ಯುಷ್ಮದಸ್ಮದಾದೇಶಾ ವಕ್ತವ್ಯಾಃ**' (ಪಾ. ಸೂ. ೮-೧-೧೮-೫) ಎಂಬ ವಚನವಿರುವುದರಿಂದ ಗಾಃ ಎಂಬುದು ಹಿಂದಿನ ಕ್ರಿಯಾಪದದೊಡನೆ ಅನ್ವಯಿಸುವುದರಿಂದ ವಾಕ್ಯಾಂತರವಾಗುತ್ತದೆ. ಆಗ ಎರಡನೇದು ಪಾದಾದಿಯಲ್ಲೇ ಬಂದಂತಾಗುವುದರಿಂದ ಹಿಂದೆ ಹೇಳಿದ ಸೂತ್ರದಿಂದ ನಿಘಾತ ಬರುವುದಿಲ್ಲ.

**ಸರ್ತವೇ**—ಸೃ ಗತೌ ಧಾತು. ತುಮುನರ್ಥ ತೋರುವಾಗ '**ತುಮರ್ಥೇ ಸೇಸೇನಸೇ-**' (ಪಾ. ಸೂ. ೩-೪-೯) ಸೂತ್ರದಿಂದ ತವೇನ್ ಪ್ರತ್ಯಯ ಬರುತ್ತದೆ. ಪ್ರತ್ಯಯಪರದಲ್ಲಿರುವಾಗ ಆರ್ಧಧಾತುಕನಿಮಿತ್ತಕವಾಗಿ ಧಾತುವಿನ ಋಕಾರಕ್ಕೆ ಗುಣ ಬಂದರೆ ಸರ್ತವೇ ಎಂದು ರೂಪವಾಗುತ್ತದೆ. ತವೇನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಸೂತ್ರದಿಂದ ಆದ್ಯುದಾತ್ತವಾಗುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ನಾಸ್ಮೈ᳚ ವಿದ್ಯುನ್ನ ತ᳚ನ್ಯತುಃ ಸಿಷೇಧ ನ ಯಾಂ ಮಿಹಮಕಿರ-
ದ್ಧ್ರಾದುನಿಂ ಚ।
ಇನ್ದ್ರ᳚ಶ್ಚ ಯದ್ಯುಯುಧಾತೇ ಅಹಿ᳚ಶ್ಚೋತಾಪರೀಭ್ಯೋ ಮಘ-
ವಾ ವಿ ಜಿಗ್ಯೇ ॥ ೧೩ ॥

॥ ಪದಪಾಠಃ ॥

ನ । ಅಸ್ಮೈ । ವಿಽದ್ಯುತ್ । ನ । ತನ್ಯತುಃ । ಸಿಸೇಧ । ನ । ಯಾಂ । ಮಿಹಂ । ಅಕಿರತ್ । ಹ್ರಾದುನಿಂ । ಚ ।

ಇನ್ದ್ರಃ । ಚ । ಯತ್ । ಯುಯುಧಾತೇ ಇತಿ । ಅಹಿಃ । ಚ । ಉತ । ಅಪರೀಭ್ಯಃ । ಮಘಽವಾ । ವಿ । ಜಿಗ್ಯೇ ॥ ೧೩ ॥

॥ ಸಾಯಣಭಾಷ್ಯಂ ॥

ಇಂದ್ರಂ ನಿಷೇದ್ಧುಂ ವೃತ್ರೋ ಯಾನ್ವಿದ್ಯುದಾದೀನ್ಮಾಯಯಾ ನಿರ್ಮಿತವಾನ್ ತೇ ಸರ್ವೇಽಪ್ಯೇನಂ ನಿಷೇದ್ಧುಮಶಕ್ತಾಃ । ಸೋಽಯಮರ್ಥೋಽನೇನ ಮಂತ್ರೇಣೋಚ್ಯತೇ । ಅಸ್ಮೈ ಇಂದ್ರಾರ್ಥಂ ನಿರ್ಮಿತಾ ವಿದ್ಯುನ್ನ ಸಿಸೇಧ । ಇಂದ್ರಂ ನ ಪ್ರಾಪ್ನೋತ್ । ತಥಾ ತನ್ಯತುರ್ಗರ್ಜನಂ ಯಾಂ ಮಿಹಂ ಸೇಚನಂ ಯಾಂ ವೃಷ್ಟಿಮಕಿರತ್ ವೃತ್ರೋ ವಿಕ್ಷಿಪ್ತವಾನ್ ಸಾಪಿ ವೃಷ್ಟಿರ್ನ ಸಿಸೇಧ । ಹ್ರಾದುನಿಂ ಚಾಶನಿಮಪಿ ಯಾಂ ವೃತ್ರಃ ಪ್ರಯುಕ್ತವಾನ್ ಸಾಪಿ ನ ಸಿಷೇಧ । ಇಂದ್ರಶ್ಚಾಹಿಶ್ಚೇಂದ್ರವೃತ್ರಾವುಭಾವಪಿ ಯದ್ಯದಾ ಯುಯುಧಾತೇ ಯುದ್ಧಂ ಕೃತವಂತೌ । ತದಾನೀಂ ವಿದ್ಯುದಾದಯೋ ನ ಪ್ರಾಪ್ತಾ ಇತಿ ಪೂರ್ವತ್ರಾನ್ವಯಃ । ಉತಾಪಿ ಚ ಮಘವಾ ಧನವಾನಿಂದ್ರೋಽಪರೀಭ್ಯೋಽಪರಾಭ್ಯೋಽನ್ಯಾಸಾಮಪಿ ವೃತ್ರನಿರ್ಮಿತಾನಾಂ ಮಾಯಾನಾಂ ಸಕಾಶಾದ್ವಿ ಜಿಗ್ಯೇ । ವಿಶೇಷೇಣ ಜಿತವಾನ್ ॥ ಸಿಷೇಧ । ಷಿಧು ಗತ್ಯಾಂ । ಮಿಹಂ । ಮಿಹ ಸೇಚನೇ । ಮೇಹತಿ ಸಿಂಚತೀತಿ ಮಿಟ್ ವೃಷ್ಟಿಃ । ಕ್ವಿಪ್ಚೇತಿ ಕ್ವಿಪ್ । ಅಕಿರತ್ । ಕೄ ವಿಕ್ಷೇಪೇ । ತುದಾದಿಭ್ಯಃ ಶಃ । ಋತ ಇದ್ಧಾತೋರಿತೀತ್ವಂ । ಅಡಾಗಮ ಉದಾತ್ತಃ । ಯದ್ವೃತ್ತಯೋಗಾದನಿಘಾತಃ । ಯುಯುಧಾತೇ । ಯುಧಿ ಸಂಪ್ರಹಾರೇ । ಲಿಟಿ ಪ್ರತ್ಯಯಸ್ವರಃ । ಜಿಗ್ಯೇ । ಸನ್‌ಲಿಟೋರ್ಜೇಃ । ಪಾ. ೭-೩-೫೭ । ಇತ್ಯಭ್ಯಾಸಾದುತ್ತರಸ್ಯ ಜಕಾರಸ್ಯ ಕುತ್ವಂ ॥

॥ ಪ್ರತಿಪದಾರ್ಥ ॥

**ಇಂದ್ರಶ್ಚ**—ಇಂದ್ರನೂ । **ಅಹಿಶ್ಚ**—ವೃತ್ರನೂ । **ಯತ್**—ಯಾವಾಗ । **ಯುಯುಧಾತೇ**—ಯುದ್ಧಮಾಡಿದರೋ (ಆಗ) । **ಅಸ್ಮೈ**—ಈ ಇಂದ್ರನ ವಧಕ್ಕಾಗಿ । **ವಿದ್ಯುತ್**—(ವೃತ್ರನಿಂದ ನಿರ್ಮಿತವಾದ) ಮಿಂಚು । **ನ ಸಿಷೇಧ**—(ಇಂದ್ರನನ್ನು) ಸಮೀಪಿಸಲಿಲ್ಲ (ಹಾಗೆಯೇ) । **ತನ್ಯತುಃ**—ಮೇಘಗರ್ಜನವೂ (ಸಮೀಪಿಸಲಿಲ್ಲ) । **ಯಾಂ ಮಿಹಂ**—ಯಾವ ವೃಷ್ಟಿಯನ್ನು । **ಅಕಿರತ್**—(ವೃತ್ರನು) ಸುರಿಸಿದನೋ । **ನ**—(ಅದೂ ಸಹ) ಸಮೀಪಿಸಲಿಲ್ಲ । **ಹ್ರಾದುನಿಂ ಚ**—(ಯಾವ) ಸಿಡಿಲನ್ನು ಸೃಷ್ಟಿಸಿದನೋ (ಅದೂ ಸಮೀಪಿಸಲಿಲ್ಲ) ।

**ಉತ**—ಅದೂ ಅಲ್ಲದೆ । **ಮಘವಾ**— ಇಂದ್ರನು । **ಅಪರೀಭ್ಯಃ**—(ವೃತ್ರನ) ಇತರ ಆಯುಧಗಳೊಡನೆಯೂ । **ವಿಜಿಗ್ಯೇ**—(ಹೋರಾಡಿ) ಸಂಪೂರ್ಣವಾಗಿ ಜಯಿಸಿದನು.

॥ ಭಾವಾರ್ಥ ॥

ಇಂದ್ರನಿಗೂ ವೃತ್ರನಿಗೂ ಹೋರಾಟವಾದಾಗ ವೃತ್ರನು ಇಂದ್ರನನ್ನು ಕೊಲ್ಲುವುದಕ್ಕಾಗಿ ಮಿಂಚನ್ನುಂಟು ಮಾಡಿದನು. ಮಳೆಯನ್ನು ಸುರಿಸಿದನು. ಮೇಘಗರ್ಜನವನ್ನು ಮಾಡಿಸಿದನು. ಮತ್ತು ಸಿಡಿಲನ್ನು ಸೃಷ್ಟಿಸಿದನು. ಆದರೆ ಇವು ಯಾವುವೂ ಇಂದ್ರನನ್ನು ಸಮೀಪಿಸಲಾಗಲಿಲ್ಲ. ಯಾವುದರಿಂದಲೂ ಅವನಿಗೆ ತೊಂದರೆಯಾಗಲಿಲ್ಲ. ಅಷ್ಟೇ ಅಲ್ಲದೆ ವೃತ್ರನ ಇತರ ಆಯುಧಗಳೊಡನೆಯೂ ಇಂದ್ರನು ಹೋರಾಡಿ ಸಂಪೂರ್ಣವಾಗಿ ಜಯಶಾಲಿಯಾದನು.

## English Translation.

When Ahi (Vritra) and Indra both fought together, neither the lightning nor the thunder (discharged by Vritra) nor the rain which he showered, nor the thunderbolt harmed Indra and afterwards Indra alone was victorious.

॥ ವಿಶೇಷವಿಷಯಗಳು ॥

**ತನ್ಯತುಃ**—ಗರ್ಜನೆ, ಸಿಡಿಲು, ಗುಡುಗು ಇತ್ಯಾದಿ.

**ಮಿಹಂ—ಮಿಹ ಸೇಚನೇ** । ಸೇಚನೆ, ಮಳೆ.

**ಹ್ರಾದುನಿಂ**—ವಜ್ರಾಯುಧ.

**ಅಪರೀಭ್ಯಃ—ಅನ್ಯಾಸಾಮಪಿ ವೃತ್ರನಿರ್ಮಿತಾನಾಂ ಮಾಯಾನಾಂ ಸಕಾಶಾತ್** । ವೃತ್ರಾಸುರನು ತನ್ನ ಮಾಯೆಯಿಂದ ನಿರ್ಮಿಸಿದ ಇತರ ತಂತ್ರಗಳನ್ನೂ ಇಂದ್ರನು ವಿಫಲಗೊಳಿಸಿದನೆಂದು ತಾತ್ಪರ್ಯವು.

॥ ವ್ಯಾಕರಣಪ್ರಕ್ರಿಯಾ ॥

**ಸಿಷೇಧ**—ಷಿಧು ಗತ್ಯಾಂ ಧಾತು. ಭ್ವಾದಿ. ಧಾತ್ವಾದಿಗೆ **ಧಾತ್ವಾದೇಃ ಷಃ ಸಃ** ಸೂತ್ರದಿಂದ ಸಕಾರಾದೇಶ. ಲಿಟ್ಟಿನ ತಿಪ್ಪಿಗೆ **ಪರಸ್ಮೈಪದಾನಾಂ** ಸೂತ್ರದಿಂದ ಣಲಾದೇಶ. ಣಲ್ ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಧಾತುವಿಗೆ ಲಘೂಪಧಗುಣ. ಅಭ್ಯಾಸ ಇಕಾರದ ಪರದಲ್ಲಿರುವುದರಿಂದ ಸಕಾರಕ್ಕೆ ಷತ್ವ. ಸಿಷೇಧ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಿಹಮ್**—ಮಿಹ ಸೇಚನೇ ಧಾತು. ಮೇಹತಿ ಸಿಂಚತಿ ಇತಿ ಮಿಟ್=ವೃಷ್ಟಿಃ (ಮಳೆ) **'ಕ್ವಿಪ್ ಚ'** (ಪಾ. ಸೂ. ೩-೨-೭೬) ಸೂತ್ರದಿಂದ ಕ್ವಿಪ್. ದ್ವಿತೀಯಾ ಏಕವಚನರೂಪ.

**ಅಕಿರತ್**—ಕೄ ವಿಕ್ಷೇಪೇ ಧಾತು. ತುದಾದಿ. ಲಙ್ ಪ್ರಥಮಪುರುಷ ಏಕವಚನದ ತಿಪ್ಪಿನ ಇಕಾರಕ್ಕೆ **ಇತಶ್ಚ** ಎಂಬುದರಿಂದ ಲೋಪ. **ತುದಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ. ಅಪಿತ್ತಾದುದರಿಂದ ಅದು ಙಿತ್ತಾ

ಗುತ್ತದೆ. ಆದುದರಿಂದ ಗುಣ ಬರುವುದಿಲ್ಲ. **ಋೂತ ಇದ್ಧಾತೋಃ** ಸೂತ್ರದಿಂದ ಋೂಕಾರಕ್ಕೆ ಇತ್ವ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಲಙ್ ನಿಮಿತ್ತಕವಾಗಿ ಅಡಾಗಮ. ಅಕಿರತ್ ಎಂದು ರೂಪವಾಗುತ್ತದೆ. ಯಾಂ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಯೋಗಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಯುಯುಧಾತೇ**—ಯುಧ ಸಂಪ್ರಹಾರೇ ಧಾತು. ದಿವಾದಿ. ಲಿಟ್ಟಿನ ಪ್ರಥಮಪುರುಷ ದ್ವಿವಚನ ಆತಾಂ ಪ್ರತ್ಯಯಕ್ಕೆ **ಟಿತ ಆತ್ಮನೇಪದಾನಾಂ** ಸೂತ್ರದಿಂದ ಏತ್ವ. ಧಾತುವಿಗೆ ಲಿಣ್ಣಿಮಿತ್ತಕವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಅಪಿತ್ತಾದ ಲಿಟ್ಟಿಗೆ **ಅಸಂಯೋಗಾತ್** ಸೂತ್ರದಿಂದ ಕಿತ್ವವನ್ನು ಹೇಳಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಯುಯುಧಾತೇ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಧಕಾರೋತ್ತರಾಕಾರವು ಉದಾತ್ತವಾಗುತ್ತದೆ.

**ಜಿಗ್ಯೇ**—ಜಿ ಜಯೇ ಧಾತು. ಲಿಟ್ಟಿನ ಪ್ರಥಮಪುರುಷ ಏಕವಚನಕ್ಕೆ **ಲಿಟಸ್ತಝಯೋರೇಶಿರೇಚ್** ಸೂತ್ರದಿಂದ ಏಶ್ ಆದೇಶ. ಧಾತುವಿಗೆ ದ್ವಿತ್ವ. ಜಿಜಿ+ಏ ಎಂದಿರುವಾಗ '**ಸನ್‌ಲಿಟೋರ್ಜೇಃ**' (ಪಾ. ಸೂ. ೭-೩-೫೭) ಸೂತ್ರದಿಂದ ಲಿಟ್‌ಪರದಲ್ಲಿರುವುದರಿಂದ ಅಭ್ಯಾಸದ ಪರದಲ್ಲಿರುವ ಜಿ ಧಾತುವಿನ ಜಕಾರಕ್ಕೆ ಕುತ್ವ. ಆಂತರತಮ್ಯದಿಂದ ಗಕಾರ ಬಂದರೆ ಜಿಗ್ಯೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ. ॥ ೧೩ ॥

॥ ಸಂಹಿತಾಪಾಠಃ ॥

ಅಹೇರ್ಯಾತಾರಂ ಕಮಪಶ್ಯ ಇಂದ್ರ ಹೃದಿ ಯತ್ತೇ ಜಘ್ನುಷೋ ಭೀರಗಚ್ಛತ್ ।
ನವ ಚ ಯನ್ನವತಿಂ ಚ ಸ್ರವನ್ತೀಃ ಶ್ಯೇನೋ ನ ಭೀತೋ ಅತರೋ ರಜಾಂಸಿ ॥ ೧೪ ॥

॥ ಪದಪಾಠಃ ॥

ಅಹೇಃ । ಯಾತಾರಂ । ಕಂ । ಅಪಶ್ಯಃ । ಇಂದ್ರ । ಹೃದಿ । ಯತ್ । ತೇ । ಜಘ್ನು- ಷಃ । ಭೀಃ । ಅಗಚ್ಛತ್ ।

ನವ । ಚ । ಯತ್ । ನವತಿಂ । ಚ । ಸ್ರವಂತೀಃ । ಶ್ಯೇನಃ । ನ । ಭೀತಃ । ಅತರಃ । ರಜಾಂಸಿ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಜಘ್ನುಷೋ ವೃತ್ರಂ ಹತವತಸ್ತವ ಹೃದಿ ಚಿತ್ತೇ ಯದ್ಯದಿ ಭೀರಗಚ್ಛತ್ ನ ಹತ- ವಾನಸ್ಮೀತಿ ಬುದ್ಧ್ಯಾ ಭಯಂ ಪ್ರಾಪ್ನುಯಾತ್ ತರ್ಹ್ಯಹೇರ್ವೃತ್ರಸ್ಯ ಯಾತಾರಂ ಹಂತಾರಂ ಕಮಪಶ್ಯಃ । ತ್ವತ್ತೋಽನ್ಯಂ ಕಂ ಪುರುಷಂ ದೃಷ್ಟವಾನಸಿ । ತಾದೃಶಸ್ಯ ಪುರುಷಾಂತರಸ್ಯಾಭಾವಾನ್ಮಾ ಭೂತ್ತವ ಭಯಮಿತ್ಯರ್ಥಃ । ಯದ್ಯಸ್ಮಾತ್ಕಾರಣಾತ್ತ್ವಂ ನವ ಚ ನವತಿಂ ಚ ಸ್ರವಂತೀರೇಕೋನಶತಸಂಖ್ಯಾಕಾಃ ಪ್ರವಹಂತೀರ್ನದೀಃ ಪ್ರಾಪ್ಯ ರಜಾಂಸಿ ತತ್ರತ್ಯಾನ್ಯುದಕಾನ್ಯತಿರಃ । ತೀರ್ಣವಾನಸಿ । ತತ್ರ ದೃಷ್ಟಾಂತಃ । ಶ್ಯೇನೋ ನ । ಶ್ಯೇನನಾಮಕೋ ಬಲವಾನ್ಪಕ್ಷೀವ ದೂರಗಮನಾತ್ತವ ಭಯಮಾಸೀದಿತಿ ಗಮ್ಯತೇ । ತದ್ಭಯಂ ಮಾ ಭೂದಿತ್ಯಭಿಪ್ರಾಯಃ । ತಚ್ಚ ದೂರಗಮನಂ ಬ್ರಾಹ್ಮಣೇ ಸಮಾಮ್ನಾತಂ । ಇಂದ್ರೋ ವೈ ವೃತ್ರಂ ಹತ್ವಾ ನಾಸ್ತೃಷೀತಿ ಮನ್ಯಮಾನಃ ಪರಾಃ ಪರಾವತೋಽಗಚ್ಛತ್ । ಐ. ಬ್ರಾ. ೩-೧೫ । ಇತಿ । ತೈತ್ತಿರೀಯಾಶ್ಚಾಮನಂತಿ । ಇಂದ್ರೋ ವೃತ್ರಂ ಹತ್ವಾ ಪರಾಂ ಪರಾವತಮಗಚ್ಛದಪರಾಧಮಿತಿ ಮನ್ಯ- ಮಾನಃ । ತೈ. ಬ್ರಾ. ೧-೬-೭-೪ । ಇತಿ ॥ ಹೃದಿ । ಪದ್ವನ್ನಿತ್ಯಾದಿನಾ ಹೃದಯಶಬ್ದಸ್ಯ ಹೃದಾದೇಶಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಜಘ್ನುಷಃ । ಹಂತೇರ್ಲಿಟಃ ಕ್ವಸುಃ । ಷಷ್ಠ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಪರಪೂರ್ವತ್ವೇ । ಶಾಸಿವಸಿಘಸೀನಾಂ ಚೇತಿ ಷತ್ವಂ । ನ ಚ ಷತ್ವತುಕೋರಸಿದ್ಧಃ । ಪಾ. ೬-೧-೮೬ । ಇತ್ಯೇಕಾದೇಶಸ್ಯಾಸಿದ್ಧತ್ವಾತ್ ಷತ್ವಂ ನ ಪ್ರಾಪ್ನುಯಾದಿತಿ ವಾಚ್ಯಂ ಸಂಪ್ರಸಾರಣಜೀಟ್ಸು ಪ್ರತಿಷೇಧೋ ವಕ್ತವ್ಯಃ । ಕಾ. ೬-೧-೮೬-೧ । ಇತ್ಯಸಿದ್ಧವದ್ಭಾವಸ್ಯ ಪ್ರತಿಷಿದ್ಧತ್ವಾತ್ । ಗಮಹನೇತ್ಯಾದಿನೋಪಧಾಲೋಪಃ । ನ ಚಾಸಿದ್ಧವದತ್ರಾ ಭಾದಿತಿ ಸಂಪ್ರಸಾರಣಸ್ಯಾ- ಸಿದ್ಧವದ್ಭಾವಃ । ಭಿನ್ನಾಶ್ರಯತ್ವಾತ್ । ಸಂಪ್ರಸಾರಣಂ ಹಿ ಷಷ್ಠ್ಯೇಕವಚನೇ ಉಪಧಾಲೋಪಸ್ತು ವಸಾವಿತಿ ಭಿನ್ನಾಶ್ರಯತ್ವಂ । ಸ್ರವಂತೀಃ । ಸ್ರು ಗತೌ । ಶಪ್ಯನೋರ್ನಿತ್ಯಂ । ಪಾ. ೭-೧-೮೧ । ಇತಿ ನುಮಾಗಮಃ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣಾದ್ಯುದಾತ್ತತ್ವಂ । ಅತರಃ । ಯದ್ವೃತ್ತಯೋಗಾದನಿಘಾತಃ ॥

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ। **ಜಘ್ನುಷಃ**—ವೃತ್ರನನ್ನು ಕೊಲ್ಲತಕ್ಕ ನಿನ್ನ। **ಹೃದಿ**—(ಮನಸ್ಸಿನಲ್ಲಿ) ಹೃದಯದಲ್ಲಿ। **ಯತ್**—ಯಾವಾಗ। **ಭೀಃ**—ಭಯವು। **ಅಗಚ್ಛತ್**—ಸೇರಿಕೊಂಡಿತೋ(ಆಗ)। **ಅಹೇಃ**—ವೃತ್ರನ। **ಯಾತಾರಂ**—ಹಂತಕನಾದ। **ಕಂ**—(ನೀನಲ್ಲದೆ ಇತರ) ಯಾರನ್ನು। **ಅಪಶ್ಯಃ**—ನೋಡಿದೆ (ಯೋಚಿಸಿದೆ)। **ಯತ್**—ಯಾವ ಕಾರಣದಿಂದ(ನೀನು)। **ಭೀತಃ**—ಭಯಗೊಂಡು। **ನವ ಚ ನವತಿಂ ಚ**—ತೊಂಭತ್ತೊಂಭತ್ತು। **ಸ್ರವಂತೀಃ**—ಪ್ರವಾಹ ನದಿಗಳನ್ನು (ಸೇರಿ)। **ರಜಾಂಸಿ**—(ಆ) ನೀರುಗಳನ್ನು। **ಶ್ಯೇನಃ ನ**—ಶ್ಯೇನವೆಂಬ ಪಕ್ಷಿಯಂತೆ (ವೇಗವಾಗಿ)। **ಅತರಃ**—ದಾಟಿದೆ.

|| ಭಾವಾರ್ಥ ||

ಎಲೈ ಇಂದ್ರನೇ, ವೃತ್ರನನ್ನು ಕೊಲ್ಲಲು ಪ್ರಯತ್ನಿಸಿದ ನಿನ್ನ ಹೃದಯದಲ್ಲಿ ಭಯವುಂಟಾದಾಗ, ನೀನಲ್ಲದೇ ಇತರ ಯಾವನನ್ನು ತಾನೇ ವೃತ್ರಹಂತಕನಾಗಬಹುದೆಂದೆಣಿಸಿದೆ ? ಯಾವ ಕಾರಣದಿಂದ ನೀನು ತೊಂಭತ್ತೊಂಭತ್ತು ಪ್ರವಾಹನದಿಗಳನ್ನು ಶ್ಯೇನಪಕ್ಷಿಯಂತೆ ವೇಗವಾಗಿ ಹೋಗಿ ಆ ನೀರುಗಳನ್ನು ದಾಟಿದೆ ?

## English Translation.

O Indra, when you killed Vritra, what fear did enter your heart ? what persuer did you see on behalf of Vritra ? what was that which, frightened as you were, made you flee and traverse ninety-nine streams like a swift hawk ?

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಅರ್ಥವು ಸ್ವಲ್ಪ ತೊಡಕಾಗಿರುವುದು. ಇಂದ್ರನು ವೃತ್ರಾಸುರನ ಸಂಹಾರಕಾಲದಲ್ಲಿ ಮನಸ್ಸಿನಲ್ಲಿ ತಾನು ವೃತ್ರನನ್ನು ಜಯಿಸುವೆನೇ ಎಂದು ಭಯಪಟ್ಟನೆಂದೂ ಅಂತಹ ಬಲಶಾಲಿಯಾದ ವೃತ್ರನನ್ನು ಸಂಹಾರ ಮಾಡುವವನು ಬೇರೊಬ್ಬನಿರುವನೇ ಎಂದು ಶಂಕಿಸಿದನೆಂದು ಇದರಿಂದ ಹೆದರಿ ಶ್ಯೇನಪಕ್ಷಿಯಂತೆ ವೇಗವಾಗಿ ಓಡಿಹೋಗಿ ತೊಂಭತ್ತೊಂಭತ್ತು ಹರಿಯುವ ನದಿಗಳನ್ನು ದಾಟಿದನೆಂದೂ ಭಾಷ್ಯಕಾರರು ಅರ್ಥವಿವರಣೆಮಾಡಿರುವರು ಈ ಅರ್ಥ ವಿವರಣೆಯನ್ನು ಸ್ವಲ್ಪ ವ್ಯತ್ಯಾಸಮಾಡುವುದಾದರೆ ಅರ್ಥವು ಸರಿಯಾಗಿ ಹೊಂದುವುದು—ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದ ಮೇಲೆ ವೃತ್ರನ ಕಡೆಯವರು ಯಾರಾದರೂ ತನ್ನನ್ನು ಬೆನ್ನಟ್ಟಿ ಬರುವರೋ ಎಂಬ ಭಯದಿಂದ ಶ್ಯೇನಪಕ್ಷಿಯಂತೆ ಬೇಗಬೇಗನೆ ಓಡುತ್ತಾ ದಾರಿಯಲ್ಲಿ ಸಿಕ್ಕಿದ ತೊಂಭತ್ತೊಂಭತ್ತು ನದಿಗಳನ್ನು ದಾಟಿ ಸುರಕ್ಷಿತ ಪ್ರದೇಶಕ್ಕೆ ಬಂದು ಸೇರಿದನೆಂದು ಅರ್ಥವಿವರಣೆಮಾಡಬಹುದು. ಪುರಾಣಾದಿಗಳಲ್ಲಿ ಈ ವಿಧವಾದ ಅಭಿಪ್ರಾಯಕ್ಕೆ ಸಮರ್ಥನೆ ಇರುವುದು. ಆದರೆ ಅಲ್ಲಿ ಇಂದ್ರನು ಶತ್ರುವು ಬೆನ್ನಟ್ಟಿ ಬರುವನೆಂಬ ಶಂಕೆಗೆ ಒಳಗಾಗದೆ ಬ್ರಾಹ್ಮಣನಾದ ವೃತ್ರನನ್ನು ಕೊಂದದ್ದರಿಂದ ತಾನು ಮಹಾಪರಾಧಮಾಡಿದೆನೆಂದೂ ತನಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾಯಿ ತೆಂದೂ ಹೆದರಿ ದೂರಪ್ರದೇಶಕ್ಕೆ ಓಡಿಹೋಗಿ ಯಾರಿಗೂ ಕಾಣಿಸದಂತೆ ಒಂದು ಸರೋವರದಲ್ಲಿ ಬಹುಕಾಲ

ಅಡಗಿದ್ದನೆಂಬ ವರ್ಣನೆ ಇರುವುದು. ವೃತ್ರಾಸುರನು ದೇವತೆಗಳ ಶಿಲ್ಪಿಯಾದ ತ್ವಷ್ಟೃವಿನ ಮಗನು. ಇವನು ಬ್ರಾಹ್ಮಣನಾದುದರಿಂದ ಇವನ ಸಂಹಾರದಿಂದ ತಾನು ಮಹಾಪರಾಧಮಾಡಿದನೆಂದು ತಿಳಿದು ಇಂದ್ರನು ದೂರ ದೇಶಕ್ಕೆ ಹೊರಟುಹೋದನೆಂಬ ವಿಷಯವು—

**(೧) ಇಂದ್ರೋ ವೈ ವೃತ್ರಂ ಹತ್ವಾ ನಾಸ್ತೃಷೀತಿ ಮನ್ಯಮಾನಃ ಪರಾಃ ಪರಾವತೋಽಗಚ್ಛತ್ ||**

(ಐ. ಬ್ರಾ. ೩-೧೫)

**(೨) ಇಂದ್ರೋ ವೃತ್ರಗ್ಂ ಹತ್ವಾ । ಪರಾಂ ಪರಾವತಮಗಚ್ಛತ್। ಅಪಾರಾಧಮಿತಿ ಮನ್ಯಮಾನಃ ||**

(ತೈ. ಬ್ರಾ. ೧-೬-೭-೪)

ಭಾಷ್ಯಕಾರರು ಉದಹರಿಸಿರುವ ಮೇಲಿನ ಶ್ರುತಿವಾಕ್ಯಗಳಿಂದ ಸ್ಥಿರಪಟ್ಟಿರುವುದು. ಈ ಶ್ರುತಿವಾಕ್ಯಗಳ ಆಧಾರದ ಮೇಲೆಯೇ ಪುರಾಣಾದಿಗಳಲ್ಲಿ ಈ ವಿಷಯವು ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವುದೆಂದು ಧಾರಾಳವಾಗಿ ಹೇಳಬಹುದು.

**ಅಹೇರ್ಯಾತಾರಂ**—ವೃತ್ರಾಸುರನ ಕಡೆಯಿಂದ ತನ್ನನ್ನು ಕೊಲ್ಲುವುದಕ್ಕಾಗಿ ಬರುವ ಪುರುಷನನ್ನು.

**ನವ ಚ ನವತಿಂ ಚ**—ತೊಂಭತ್ತೊಂಭತ್ತು ಎಂದರೆ ಅನೇಕ ನದಿಗಳನ್ನು. ಬಹುದೂರದೇಶ ಹೋಗುವಾಗ ದಾರಿಯಲ್ಲಿ ಅನೇಕ ನದಿಗಳು ಸಿಕ್ಕುವವು. ಅವುಗಳನ್ನೆಲ್ಲಾ ದಾಟಿ ಬಹುದೂರ ಹೋದನೆಂದಭಿಪ್ರಾಯವು.

**ಸ್ರವಂತೀಃ—ಸ್ರು ಗತೌ ।** ಪ್ರವಾಹರೂಪದಲ್ಲಿ ಹರಿಯುತ್ತಿರುವ ನದಿಗಳು.

**ಶ್ಯೇನೋ ನ**—ಶ್ಯೇನವೆಂಬ ಪಕ್ಷಿಯು, ಗಿಡುಗನು. ಇದು ಬಹುದೂರ ವೇಗವಾಗಿ ಹಾರಬಲ್ಲದೆಂದು ಪ್ರಸಿದ್ಧಿಯು. ಈ ಪಕ್ಷಿಯಂತೆ ಎಂದು ಋಷಿಯು ಉಪಮಾನವನ್ನು ಹೇಳಿರುವನು

**ರಜಾಂಸಿ**—ಉದಕಗಳನ್ನು ಎಂದರೆ ಹರಿಯುವ ನೀರಿನ ಪ್ರವಾಹಗಳನ್ನು **ಉದಕಂ ರಜ ಉಚ್ಯತೇ** ಎಂದು ಯಾಸ್ಕರ ವಚನವಿರುವುದು (ನಿ. ೪-೧೯).

|| ವ್ಯಾಕರಣಪ್ರಕ್ರಿಯಾ ||

**ಹೃದಿ**—ಹೃದಯ ಶಬ್ದಕ್ಕೆ ಸಪ್ತಮಿ ಏಕವಚನ ಪರದಲ್ಲಿರುವಾಗ '**ಪದ್ದನ್ನೋಮಾಸ್ ಹೃದ್-**' (ಪಾ. ಸೂ. ೬-೧-೬೩) ಸೂತ್ರದಿಂದ ಹೃದಾದೇಶ. ಹೃದಿ ಎಂದು ರೂಪವಾಗುತ್ತದೆ. '**ಊಡಿದಂಪದಾದಿ**' (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜಘ್ನುಷಃ**—ಹನ ಹಿಂಸಾಗತ್ಯೋಃ ಧಾತು. ಲಿಟ್ಟಿಗೆ **ಕ್ವಸುಶ್ಚ** ಸೂತ್ರದಿಂದ ಕ್ವಸು ಆದೇಶ. ಕ್ವಸು ಪರದಲ್ಲಿರುವಾಗ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ, ಚುತ್ವ. **ಅಭ್ಯಾಸಾಚ್ಚ** ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಹನ್ನಿನ ಹಕಾರಕ್ಕೆ ಕುತ್ವದಿಂದ ಘಕಾರ. ಜಘ್ನಿವ್ವಸ್ ಶಬ್ದವಾಗುತ್ತದೆ. ಷಷ್ಠೀ ಏಕವಚನ ಪರದಲ್ಲಿರುವಾಗ '**ವಸೋಃ ಸಂಪ್ರಸಾರಣಂ**' (ಪಾ. ಸೂ. ೬-೪-೧೩೧) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣದಿಂದ

ಉಕಾರ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. ಅಜಾದಿ ಪ್ರತ್ಯಯಪರದಲ್ಲಿರುವುದರಿಂದ '**ಗಮಹನಜನ**' (ಪಾ. ಸೂ. ೬-೪-೯೮) ಎಂಬುದರಿಂದ ಹನ್ನಿನ ಉಪಧಾ ಅಕಾರಕ್ಕೆ ಲೋಪ. ಜಘ್ನ್ ಸ್+ಅಸ್ ಎಂದಿರುವಾಗ **ಶಾಸಿವಸಿ ಘಸೀನಾಂ ಚ** ಎಂಬುದರಿಂದ ಸಕಾರಕ್ಕೆ ಷತ್ವ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಜಘ್ನುಷಃ ಎಂದು ರೂಪವಾಗುತ್ತದೆ. ಇಲ್ಲಿ '**ಷತ್ವತುಕೋರಸಿದ್ಧಃ**' (ಪಾ. ಸೂ. ೬-೧-೮೬) ಷತ್ವ, ಮತ್ತು ತುಕಾಗಮ ಮಾಡುವಾಗ ಏಕಾದೇಶ ಶಾಸ್ತ್ರವು ಅಸಿದ್ಧವಾಗುತ್ತದೆ, ಎಂಬುದರಿಂದ **ಸಂಪ್ರಸಾರಣಾಚ್ಚ** ಎಂಬುದರಿಂದ ಬಂದಿರುವ ಪೂರ್ವರೂಪವು ಯದ್ಯಪಿ ಅಸಿದ್ಧವಾಗುತ್ತದೆ. ಆಗ ನಿಮಿತ್ತವಿಲ್ಲದಿರುವುದರಿಂದ ಷತ್ವ ಬಾರದೇ ಹೋಗಬೇಕಾಗುತ್ತೆ. ಆದರೆ '**ಸಂಪ್ರಸಾರಣ ಙೀಟ್ಸು ಪ್ರತಿಷೇಧೋ ವಕ್ತವ್ಯಃ**' (ಕಾ. ೬-೧-೮೬-೧) ಎಂಬ ವಾರ್ತಿಕದಿಂದ ಅಸಿದ್ಧವದ್ಭಾವಕ್ಕೆ ಪ್ರತಿಷೇಧ ಹೇಳಿರುವುದರಿಂದ ಅಸಿದ್ಧವಾಗುವುದಿಲ್ಲ. ಇದರಿಂದ ಅಸಿದ್ಧವಾಗದಿದ್ದರೂ, '**ಅಸಿದ್ಧವದತ್ರಾ ಭಾತ್**' (ಪಾ. ಸೂ. ೬-೪-೨೨) ಎಂಬುದರಿಂದ ಸಂಪ್ರಸಾರಣಕ್ಕೆ ಅಸಿದ್ಧವದ್ಭಾವವು ಬರುವುದರಿಂದ, ಅದರಿಂದ ಅಜಾದಿಪ್ರತ್ಯಯಪರದಲ್ಲಿರದಿದ್ದುದರಿಂದ ಉಪಧಾಲೋಪ ಬಾರದೇ ಹೋಗಲಿ ಎಂದು ಅದರಮೇಲೆ ಶಂಕೆ ಬರುತ್ತದೆ. ಆದರೆ ಅಲ್ಲಿಯೂ ಅಸಿದ್ಧವದ್ಭಾವವನ್ನು ಹೇಳಲು ಸಮಾನಾಶ್ರಯತ್ವವು (ನಿಮಿತ್ತಕತ್ವ) ಇರಬೇಕೆಂದು ನಿಯಮಿಸಿರುವುದರಿಂದ, ಉಕ್ತದೋಷ ಬರುವುದಿಲ್ಲ. ಸಂಪ್ರಸಾರಣವು ಷಷ್ಠ್ಯೇಕವಚನವನ್ನು ನಿಮಿತ್ತೀಕರಿಸಿ ಬರುತ್ತದೆ. ಆದುದರಿಂದ ಸಮಾನಾಶ್ರಯತ್ವವು ಇರುವುದಿಲ್ಲ.

**ಸ್ರವಂತೀಃ**—ಸ್ರು ಗತೌ ಧಾತು. ಭ್ವಾದಿ. ಲಡರ್ಥದಲ್ಲಿ **ಲಟಃ ಶತೃಶಾನಚೌ** ಸೂತ್ರದಿಂದ ಶತೃ ಪ್ರತ್ಯಯ. **ಕರ್ತರಿ ಶಪ್** ಎಂಬುದರಿಂದ ಶಪ್ ವಿಕರಣ. ಶಪ್ ನಿಮಿತ್ತಕವಾಗಿ ಧಾತುವಿಗೆ ಗುಣ. ಅವಾದೇಶ. ಸ್ರವತ್ ಶಬ್ದವಾಗುತ್ತದೆ. ಸ್ತ್ರೀತ್ವದಲ್ಲಿ **ಉಗಿತಶ್ಚ** ಸೂತ್ರದಿಂದ ಙೀಪ್. '**ಶ್ಯಪ್ಶ್ಯನೋರ್ನಿತ್ಯಂ**' (ಪಾ ಸೂ. ೭-೧-೮೧) ಎಂಬುದರಿಂದ ಶಪ್ಪಿನ ಅಕಾರದ ಪರದಲ್ಲಿರುವ ಶತೃವಿಗೆ ನದೀ ಪರದಲ್ಲಿರುವುದರಿಂದ ನಿತ್ಯವಾಗಿ ನುಮಾಗಮ ಬರುತ್ತದೆ. ಸ್ರವಂತೀ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತತೆ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುತ್ತದೆ ಧಾತು ಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಅತರಃ**—ತೃ ಪ್ಲವನತರಣಯೋಃ ಧಾತು. ಭ್ವಾದಿ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಅತರಃ ಎಂದು ರೂಪವಾಗುತ್ತದೆ. ಯನ್ನವತಿಂ ಎಂದು ಹಿಂದೆ ಯಚ್ಛಬ್ದದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧವು ಬರುತ್ತದೆ. **ಅಡಾಗಮವು** ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ॥ ೧೪ ॥

॥ ಸಂಹಿತಾಪಾಠಃ ॥

ಇಂದ್ರೋ॑ ಯಾ॒ತೋಽವ॑ಸಿತಸ್ಯ॒ ರಾಜಾ॒ ಶಮ॑ಸ್ಯ ಚ ಶೃ॒ಙ್ಗಿಣೋ॒ ವಜ್ರ॑ಬಾಹುಃ ।
ಸೇದು॒ ರಾಜಾ॑ ಕ್ಷಯತಿ ಚರ್ಷಣೀ॒ನಾಮ॒ರಾನ್ನ ನೇ॒ಮಿಃ ಪರಿ॒ ತಾ ಬ॑ಭೂವ ॥ ೧೫ ॥

॥ ಪದಪಾಠಃ ॥

ಇಂದ್ರಃ॑ । ಯಾ॒ತಃ । ಅವ॑ಽಸಿತಸ್ಯ । ರಾಜಾ॑ । ಶಮ॑ಸ್ಯ । ಚ॒ । ಶೃ॒ಙ್ಗಿಣಃ॑ । ವಜ್ರ॑ಽಬಾಹುಃ ।
ಸಃ । ಇತ್ । ಊಂ ಇತಿ॑ । ರಾಜಾ॑ । ಕ್ಷ॒ಯ॒ತಿ॒ । ಚ॒ರ್ಷ॒ಣೀ॒ನಾಮ್ । ಅ॒ರಾನ್ । ನ । ನೇ॒ಮಿಃ । ಪರಿ॑ । ತಾ । ಬ॒ಭೂ॒ವ॒ ॥ ೧೫ ॥

॥ ಸಾಯಣಭಾಷ್ಯಂ ॥

ವಜ್ರಬಾಹುರಿಂದ್ರಃ ಶತ್ರೌ ಹತೇ ಸತಿ ನಿಃಸಪತ್ನೋ ಭೂತ್ವಾ ಯಾತೋ ಗಚ್ಛತೋ ಜಂಗಮಸ್ಯಾವಸಿತಸ್ಯೈಕತ್ರೈವ ಸ್ಥಿತಸ್ಯ ಸ್ಥಾವರಸ್ಯ ಶಮಸ್ಯ ಶಾಂತಸ್ಯ ಶೃಂಗರಾಹಿತ್ಯೇನ ಪ್ರಹರಣಾದಾವಪ್ರವೃತ್ತಸ್ಯಾಶ್ವಗರ್ದಭಾದೇಃ ಶೃಂಗಿಣಃ ಶೃಂಗೋಪೇತಸ್ಯೋಗ್ರಸ್ಯ ಮಹಿಷಬಲೀವರ್ದಾದೇಶ್ಚ ರಾಜಾಭೂತ್ । ಸೇದು ಸ ಏವೇಂದ್ರಶ್ಚರ್ಷಣೀನಾಂ ಮನುಷ್ಯಾಣಾಂ ರಾಜಾ ಭೂತ್ವಾ ಕ್ಷಯತಿ । ನಿವಸತಿ । ತಾ ತಾನಿ ಪೂರ್ವೋಕ್ತಾನಿ ಜಂಗಮಾದೀನಿ ಸರ್ವಾಣಿ ಪರಿ ಬಭೂವ । ವ್ಯಾಪ್ತವಾನ್ । ತತ್ರ ದೃಷ್ಟಾಂತಃ । ಅರಾನ್ನ ನೇಮಿಃ । ಯಥಾ ರಥಚಕ್ರಸ್ಯ ಪರಿತೋ ವರ್ತಮಾನಾ ನೇಮಿರರಾನ್ನಾಭೌ ಕೀಲಿತಾನ್ಕಾಷ್ಠವಿಶೇಷಾನ್ವ್ಯಾಪ್ನೋತಿ ತದ್ವತ್ ॥ ಯಾತಃ । ಯಾ ಪ್ರಾಪಣೇ । ಯಾತಿ ಗಚ್ಛತೀತಿ ಯಾತ್ । ಲಟಃ ಶತೃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಸಃ । ಸೋಽಚಿ ಲೋಪೇ ಚೇದಿತಿ ಸಂಹಿತಾಯಾಂ ಸೋಲೋಪಃ । ತಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಬಭೂವ । ಭವತೇರ್ಲಿಟೋ ಣಲಿ ಭವತೇರಃ ।

ಪಾ. ೭-೪-೭೩ । ಇತ್ಯಭ್ಯಾಸಸ್ಯಾತ್ವಂ । ಕೃತಾಕೃತಪ್ರಸಂಗಿತಯಾ ವುಗಾಗಮಸ್ಯ ನಿತ್ಯತ್ವಾದ್ವೃದ್ಧೇಃ ಪೂರ್ವಂ ವುಗಾಗಮಃ । ಯದ್ವಾ । ಇಂಧಿಭವತಿಭ್ಯಾಂ ಚ । ಪಾ. ೧-೨-೬ । ಇತಿ ಲಿಟ ಕಿತ್ತ್ವಾದ್ವೃದ್ಧ್ಯಭಾವಃ । ನ ಚಾಸಿದ್ಧವದತ್ರಾ ಭಾದಿತಿ ತಸ್ಯಾಸಿದ್ಧತ್ವಾದುವಙಾದೇಶಃ ಶಂಕನೀಯಃ । ವುಗ್ಯುಟಾವುಙ್ಯಣೋಃ ಸಿದ್ಧೌ ಭವತಃ । ಪಾ. ೬-೪-೨೨-೧೪ । ಇತಿ ತಸ್ಯ ಸಿದ್ಧತ್ವಾತ್ । ತಿಙ್ಙತಿಙ ಇತಿ ನಿಘಾತಃ ॥ ೩೮ ॥

॥ ಪ್ರತಿಪದಾರ್ಥ ॥

**ವಜ್ರಬಾಹುಃ**—ವಜ್ರಬಾಹುವಾದ । **ಇಂದ್ರಃ**—ಇಂದ್ರನು (ಶತ್ರುನಾಶವಾದ ನಂತರ) । **ಯಾತಃ**—ಜಂಗಮವಾದುದೂ । **ಅವಸಿತಸ್ಯ**—ಸ್ಥಾವರವಾದುದೂ । **ಶಮಸ್ಯ**—ಕೊಂಬುಗಳಿಲ್ಲದೆ ಸಾಧುವಾದುದೂ । **ಶೃಂಗಿಣಃ ಚ**—ಕೊಂಬುಳ್ಳದೂ ಆದ ಪ್ರಾಣಿಗಳಿಂದ ಕೂಡಿದ ಸಮಸ್ತ ಲೋಕಕ್ಕೆಲ್ಲಾ । **ರಾಜಾ**—ದೊರೆ (ಯಾದನು) । **ಸೇದು**—ಅದೇ ಇಂದ್ರನು । **ಚರ್ಷಣೀನಾಂ**—ಮಾನವರಿಗೂ । **ರಾಜಾ**—ದೊರೆಯಾಗಿ । **ಕ್ಷಯತಿ**—ವಾಸಮಾಡುತ್ತಾನೆ (ನೆಲೆಸಿದ್ದಾನೆ) । **ತಾ**—ಇಂತಹ ಸಕಲ ಜಗತ್ತನ್ನೂ । **ನೇಮಿಃ**—ಚಕ್ರದ ಪರಿಧಿಯು । **ಅರಾನ್ ನ**—ಅರಗಳನ್ನು ಸುತ್ತುವರಿದಿರುವಂತೆ । **ಪರಿ ಬಭೂವ**—ಸುತ್ತುವರಿದು ನಿಂತು ಕೊಂಡನು ॥

॥ ಭಾವಾರ್ಥ ॥

ವಜ್ರಬಾಹುವಾದ ಇಂದ್ರನು ಶತ್ರುನಾಶವಾದ ನಂತರ ಜಂಗಮವಾದುದೂ ಸ್ಥಾವರವಾದುದೂ, ಕೊಂಬುಗಳಿಲ್ಲದೆ ಸಾಧುವಾದುದೂ, ಕೊಂಬುಳ್ಳದೂ ಆದ ಪ್ರಾಣಿಗಳಿಂದ ಕೂಡಿದ ಸಕಲ ಲೋಕಕ್ಕೂ ಅಧಿಪತಿಯಾದನು. ಅದೇ ಇಂದ್ರನು ಮಾನವರಿಗೂ ದೊರೆಯಾಗಿದ್ದಾನೆ. ಚಕ್ರದ ಪರಿಧಿಯು ಚಕ್ರದ ಸಮಸ್ತ ಅರಗಳನ್ನೂ ಸುತ್ತುವರಿದಿರುವಂತೆ ಇಂದ್ರನೂ ಸಹ ಸಕಲ ಜಗತ್ತನ್ನೂ ಸುತ್ತುವರಿದು ನಿಂತಿದ್ದಾನೆ.

## English Translation.

Then Indra, the weilder of thunderbolt became the sovereign ruler of all that is movable and immovable, of hornless and horned cattle; and as he resides as the monarch of men he surrounds all these with his protection as dces the felly surrounds the spokes (of a wheel).

॥ ವಿಶೇಷವಿಷಯಗಳು ॥

**ಯಾತಃ—ಗಚ್ಛತಃ ।** ಚಲಿಸುವ ವಸ್ತುಗಳು ಎಂದರೆ ಸಂಚಾರಮಾಡಲು ಸಮರ್ಥವಾದ ಜೀವಜಂತು ಪ್ರಾಣಿಗಳು, ಜಂಗಮವಾದ ಜಗತ್ತು movables-

**ಅವಸಿತಸ್ಯ—ಏಕತ್ರೈವ ಸ್ಥಿತಸ್ಯ ।** ಒಂದೇಕಡೆಯಲ್ಲಿರುವ ಎಂದರೆ ಚಲಿಸಲಸಮರ್ಥವಾದ ಸ್ಥಾವರ ಜಗತ್ತು. ಪರ್ವತಾದಿಗಳು, ವೃಕ್ಷಗಳು ಇತ್ಯಾದಿ; immovables.

**ಶಮಸ್ಯ—ಶಾಂತಸ್ಯ** । ಶಾಂತವಾದ ಎಂದರೆ ಸಾಧುವಾದ ಪ್ರಾಣಿಗಳು, ಇತರರಿಗೆ ಹಿಂಸೆಯನ್ನುಂಟು ಮಾಡುವ ಕೊಂಬು ಮೊದಲಾದವುಗಳಿಲ್ಲದ, ಕುದುರೆ ಕತ್ತೆ ಮೊದಲಾದ ಪ್ರಾಣಿಗಳು.

**ಶೃಂಗಿಣಃ**—ಕೊಂಬುಗಳಿರುವ ಗೋವುಗಳು, ಎಮ್ಮೆಗಳು ಮೊದಲಾದ ಪ್ರಾಣಿಗಳು.

**ಸೇದು ರಾಜಾ ಕ್ಷಯತಿ**—ಆ ಇಂದ್ರನೇ ಈ ಸ್ಥಾವರ ಜಂಗಮಾದಿಗಳಿಗೂ ಸಾಧು ಅಸಾಧು ಪ್ರಾಣಿಗಳಿಗೂ ಮನುಷ್ಯರಿಗೂ ಏಕೈಕ ರಾಜನಾಗಿ (ಅಧಿಪತಿ, ಸ್ವಾಮಿ) ಶಾಸನಮಾಡುವನು ಎಂದರೆ ಮೆರೆಯುವನು.

**ಅರಾನ್ನ ನೇಮಿಃ ಪರಿ ತಾ ಬಭೂವ**—ಚಕ್ರದ ನೇಮಿಯೆಂಬ ಸುತ್ತುಮರವು ಅರಗಳನ್ನು ಸುತ್ತುಕಟ್ಟಿ ಎಲ್ಲವನ್ನೂ ತನ್ನೊಳಗೊಂಡಿರುವಂತೆ ಇಂದ್ರನು ಮೇಲೆ ಹೇಳಿದ ಸ್ಥಾವರ ಜಂಗಮವಾದ ಜಗತ್ತನ್ನೂ, ಮನುಷ್ಯರನ್ನೂ ಪಾಲಿಸುತ್ತಾ ಅವರನ್ನೆಲ್ಲಾ ತನ್ನ ಆಳ್ವಿಕೆಯಲ್ಲಿ ಸೇರಿಸಿಕೊಂಡು ಮೆರೆಯುತ್ತಿರುವನು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಯಾತಃ**—ಯಾ ಪ್ರಾಪಣೇ ಧಾತು. ಅದಾದಿ. ಯಾತಿ ಗಚ್ಛತಿ ಇತಿ ಯಾತ್. **ಲಟಃ ಶತೃಶಾನಚೌ** ಎಂಬುದರಿಂದ ಶತೃ. ಷಷ್ಠೀ ಏಕವಚನದಲ್ಲಿ ಯಾತಃ ಎಂದು ರೂಪವಾಗುತ್ತದೆ. '**ಸಾವೇಕಾಚಃ**' (ಪಾ. ಸೂ. ೬-೧-೧೬೮) ಸೂತ್ರದಿಂದ ಏಕಾಚ್ಚಿನ ಪರದಲ್ಲಿರುವುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಃ**—ಸಃ ಇತ್ ಎಂದಿರುವಾಗ '**ಸೋಽಚಿಲೋಪೇ ಚೇತ್ ಪಾದಪೂರಣಮ್**' (ಪಾ. ಸೂ ೬-೧-೧೩೪) ಎಂಬುದರಿಂದ ಪಾದಪೂರ್ತಿಯಾಗುವುದಕ್ಕೋಸ್ಕರ ಸಂಹಿತಾದಲ್ಲಿ ತಚ್ಛಬ್ದದ ಪರದಲ್ಲಿರುವ ಸುವಿಗೆ ಲೋಪಬರುತ್ತದೆ. ಸ+ಇತ್ ಎಂದಿರುವಾಗ ಗುಣ.

**ತಾ**—ತಚ್ಛಬ್ದದ ದ್ವಿತೀಯಾ ಬಹುವಚನದ ಶಸ್ಸಿಗೆ **ಜಶ್ಶಸೋಃ ಶಿಃ** ಎಂಬುದರಿಂದ ಶಿ ಆದೇಶ. **ಶಿ ಸರ್ವನಾಮಸ್ಥಾನಮ್** ಎಂಬುದರಿಂದ ಅದಕ್ಕೆ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ **ನಪುಂಸಕಸ್ಯ ಝಲಚಃ** ಸೂತ್ರದಿಂದ, ತ್ಯದಾದ್ಯತ್ವ ಬಂದಾಗ ನುಮಾಗಮ. **ಸರ್ವನಾಮಸ್ಥಾನೇ**—ಸೂತ್ರದಿಂದ ಉಪಧಾದೀರ್ಘ. ತಾನಿ ಎಂದಿರುವಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ. **ನಲೋಪಃ ಪ್ರಾತಿ**-ಸೂತ್ರದಿಂದ ನಲೋಪ, ತಾ ಎಂದು ರೂಪವಾಗುತ್ತದೆ.

**ಬಭೂವ**—ಭೂ ಸತ್ತಾಯಾಂ ಧಾತು. ಲಿಟ್ಟಿನಲ್ಲಿ ಣಲಾದೇಶ. **ಭುವೋ ವುಕ್‌ಲುಙ್‌ಲಿಟೋಃ** ಎಂಬುದರಿಂದ ವುಕಾಗಮ. ಲಿಣ್ಣಿಮಿತ್ತಕವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. '**ಭವತೇರಃ**' (ಪಾ ಸೂ. ೭-೪-೭೩) ಎಂಬುದರಿಂದ ಅದರ ಉಕಾರಕ್ಕೆ ಅಕಾರಾದೇಶ. **ಅಭ್ಯಾಸೇ ಚರ್ಚ** ಎಂಬುದರಿಂದ ಭಕಾರಕ್ಕೆ ಬಕಾರಾದೇಶ. ಬಭೂವ ಎಂದು ರೂಪವಾಗುತ್ತದೆ ಇಲ್ಲಿ ವುಕಾಗಮ ಬರಬೇಕಾದರೆ ಮೊದಲು ಣಿತ್ ಪ್ರತ್ಯಯ ಪರದಲ್ಲಿರುವುದರಿಂದ **ಅಚೋ ಞ್ಣಿತಿ** ಎಂಬುದರಿಂದ ವೃದ್ಧಿಯು ಪ್ರಾಪ್ತವಾದರೂ ವುಕಾಗಮವು ನಿತ್ಯವಾದುದರಿಂದ ಅದನ್ನು ಬಾಧಿಸಿ ಬರುತ್ತದೆ. **ಕೃತಾಕೃತಪ್ರಸಂಗೀ ಯಃ ಸಃ ನಿತ್ಯಃ** ಎಂದುದರಿಂದ ವೃದ್ಧಿಬಂದರೂ ಬಾರದಿದ್ದರೂ ವುಕಾಗಮ ಬರುವುದರಿಂದ ಅದು ನಿತ್ಯಸೂತ್ರವಾಗುತ್ತದೆ. ಅಥವಾ '**ಇಂಧಿಭವತಿಭ್ಯಾಂ ಚ**' (ಪಾ. ಸೂ. ೧-೨-೬) ಸೂತ್ರ

ದಿಂದ ಭೂ ಧಾತುವಿನ ಪರದಲ್ಲಿರುವ ಲಿಟಕ್ಕೆ ಕಿತ್ವವು ವಿಹಿತವಾದುದರಿಂದ **ಕ್ಙಿತಿಚ** ಎಂಬುದರಿಂದ ವೃದ್ಧಿನಿಷೇಧ ಬರುತ್ತದೆ. **ಅಸಿದ್ಧವದತ್ರಾಭಾತ್** ಸೂತ್ರದಿಂದ ಉಕಾಗಮವು ಅಸಿದ್ಧವಾಗುವುದರಿಂದ ಇಲ್ಲಿ **ಅಚಿಶ್ನುಧಾತು-ಭ್ರುವಾಂ** ಸೂತ್ರದಿಂದ ಉವಙಾದೇಶವು ಬರಬೇಕಾಗುತ್ತದೆ. ಇಲ್ಲಿ ಅಜಾದಿ ಪ್ರತ್ಯಯವು ಎರಡು ಸೂತ್ರಕ್ಕೂ ನಿಮಿತ್ತವಾದುದರಿಂದ ಸಮಾನಾಶ್ರಯತ್ವವು ಇದೆ. ಆದರೆ '**ವುಗ್ಯುಟಾವುಙ್ಯಣೋಃ ಸಿದ್ಧೌ ಭವತಃ**' (ವಾ. ಸೂ. ೬-೪-೨೨-೧೪) ಎಂಬ ವಾರ್ತಿಕದಿಂದ ಉವಙ್ ವಿಷಯದಲ್ಲಿ ವುಕಾಗಮು ಸಿದ್ಧವೇ ಆಗುವುದರಿಂದ ಉವರ್ಣಾಂತತ್ವ ಇಲ್ಲದಿರುವುದರಿಂದ ಉವಙಾದೇಶ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತ ಸ್ವರವು ಬರುತ್ತದೆ. || ೧೫ ||

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ |**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ||**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀ ವೀರಬುಕ್ಕಭೂಪಾಲ-**
**ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ**
**ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ**
**ದ್ವಿತೀಯೋಽಧ್ಯಾಯಃ ಸಮಾಪ್ತಃ.**

|| ಓಂ ತತ್ಸತ್ ||

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಎರಡನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ |
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ||

|| ಶುಭಂ ಭೂಯಾತ್ ||

|| ಮಂಗಳಂ ||

